ಬಿ. ಎಮ್. ಶ್ರೀ ಪ್ರತಿಷ್ಠಾನಕ್ಕೆ

ಅತ್ಯಾದರಪೂರ್ವಕವಾಗಿ

ಜ್ಯೋತ್ಸ್ನ ಕಾಮತ್

11. 1. 2004

# ಕಮ್ಮಟಿಗ

(ಡಾ. ಕೃಷ್ಣಾನಂದ ಕಾಮತ ಸಂಸ್ಮರಣ ಸಂಪುಟ)



ಸಂಪಾದಕರು

**ಡಾ. ಕೆ. ಆರ್. ಗಣೇಶ**

**ಡಾ. ಆರ್. ಶೇಷಶಾಸ್ತ್ರಿ**

**ಕೃಷ್ಣಾನಂದ ಕಾಮತ ಪ್ರತಿಷ್ಠಾನ**

ಕಾಮತ ಕುಟೀರ, ಲಕ್ಷ್ಮೀನಾರಾಯಣ ನಗರ

ಹೊನ್ನಾವರ - 581334

ಉತ್ತರ ಕನ್ನಡ ಜಿಲ್ಲೆ

**"KAMMATIGA"**: a commemoration volume in honour of Dr. Krishnananda Kamat, published by Krishnananda Kamat Pratishthana, Reg. No. KWR1007/dt. 30-10-2003. Kamat Kuteera, Lakshminarayana Nagara, Honnavara - 581334, Uttara Kannada District, Edited by Dr. K.R. Ganesha and Dr. R Seshasastry

First Edition : 2004



Cover Page Design : VIKAS KAMAT

Pages : viii + viii + 280



Price : **200=00**

Authorised Dealers : **KAMADHENU**
No. 6, Nagappa Street,
Sheshadripuram, Bangalore-560 020

ಸಂಪಾದಕ ಮಂಡಳಿ : ಡಾ. ದೇವರಕೊಂಡಾರೆಡ್ಡಿ
ಡಾ. ಪಿ. ವಿ. ಕೃಷ್ಣಮೂರ್ತಿ

ಸಂಚಾಲಕರು : ಶ್ರೀ ಎಸ್. ಮನೋಹರ್
ಶ್ರೀ ವಿ. ಸಂಜಯ್

Printed at :
**SATHYASRI PRINTERS PVT. LTD.,**
164, 5th Main Road, Chamarajpet
Bangalore - 560 018
Phone : **6525736**

# ಸಂಪಾದಕೀಯ

ನಮ್ಮ ಹಿರಿಯ ತಲೆಮಾರಿನ ವ್ಯಕ್ತಿಗಳಲ್ಲಿ ಡಾ. ಕೃಷ್ಣಾನಂದ ಕಾಮತರದು ಒಂದು ವಿಶಿಷ್ಟ ವ್ಯಕ್ತಿತ್ವ. ಅವರು ತಮ್ಮ ಬದುಕಿನ ಪ್ರತಿಯೊಂದು ದಿನವನ್ನೂ ಸಾರ್ಥಕ ಮಾಡಿಕೊಂಡವರು. ಹಾಗೆಯೇ ತಮ್ಮ ಬದುಕಿನ ಚಟುವಟಿಕೆಯ ಪ್ರತಿಯೊಂದು ಅಂಶವೂ ತಮ್ಮ ಸುತ್ತಲಿನ ಸಮಾಜಕ್ಕೆ ಉಪಯೋಗವಾಗುವಂತೆ ನಡೆದುಕೊಂಡವರು. ಸಾವಿನ ನಂತರ ತಮ್ಮ ನೇತ್ರದಾನ ಮಾಡಿ ಬೇರೆಯವರಿಗೆ ದೃಷ್ಟಿಯನ್ನಿತ್ತವರು.

ತಮ್ಮ ಬದುಕಿನ ಹತ್ತು ಹಲವಾರು ಅನುಭವಗಳನ್ನು ಸಮಾಜದೊಂದಿಗೆ ಹಂಚಿಕೊಳ್ಳಲು ಅವರು ಬಯಸಿದ್ದು ಆಶ್ರಯಿಸಿದ್ದು ಪ್ರವಾಸ ಸಾಹಿತ್ಯವನ್ನು; ಕನ್ನಡದಲ್ಲಿ ಪ್ರವಾಸ ಸಾಹಿತ್ಯಕ್ಕೆ, ಒಂದು ಘನತೆಯನ್ನು, ಹಲವಾರು ಆಯಾಮಗಳನ್ನು ನೀಡಿದವರು ಡಾ. ಕೃಷ್ಣಾನಂದ ಕಾಮತ್. ಕಾಮತರು ಮೂಲತಃ ಜೀವವಿಜ್ಞಾನಿ, ಕೀಟಶಾಸ್ತ್ರಜ್ಞ, ಕೀಟಶಾಸ್ತ್ರದ ಬಗ್ಗೆ ಅಮೆರಿಕಾದಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದು, ಭಾರತಕ್ಕೆ ಹಿಂದಿರುಗಿದ ಕಾಮತರಿಗೆ ನಮ್ಮ ದೇಶ ಅವಕಾಶಗಳನ್ನು ನೀಡಲಿಲ್ಲ. ಅದರಿಂದ ಅವರು ಎದೆಗುಂದಲಿಲ್ಲ. ಕರ್ನಾಟಕದಲ್ಲಿ ಮೊದಲ ಬಾರಿಗೆ ವೈಜ್ಞಾನಿಕ ಛಾಯಾಗ್ರಹಣವನ್ನು ಪ್ರಾರಂಭಿಸಿದರು. ಲಾಭಗಳಿಕೆಗಾಗಿ ಅದನ್ನು ಬಳಸಿಕೊಳ್ಳದೇ, ತಮ್ಮ ವೈಜ್ಞಾನಿಕ ಅರಿವನ್ನು ಉಳಿಸಿಕೊಳ್ಳಲು ಬೆಳೆಸಿಕೊಳ್ಳಲು ಬಯಸಿದರು. ಕೊನೆಯವರೆಗೆ ಕನಿಷ್ಟ ಆದಾಯದಲ್ಲಿಯೇ ಆ ಕಾರ್ಯದಲ್ಲಿ ಮಗ್ನರಾಗಿದ್ದರು.

ಕೀಟಗಳನ್ನು ಅಧ್ಯಯನ ಮಾಡುವ ಕಲೆಯನ್ನು ಕರಗತ ಮಾಡಿಕೊಂಡ ಕಾಮತರಿಗೆ 'ನರಕೀಟ'ಗಳನ್ನು ಅಧ್ಯಯನ ಮಾಡುವ ಗೀಳು ಪ್ರಾರಂಭವಾದಾಗ, ಮಾನವನ ಎಲ್ಲ ಚಟುವಟಿಕೆಗಳನ್ನು ಶ್ರದ್ಧೆಯಿಂದ ಅಭ್ಯಾಸ ಮಾಡತೊಡಗಿದರು. ಅದಕ್ಕಾಗಿ ದೇಶವನ್ನೆಲ್ಲಾ ತಿರುಗಾಡಿದರು. ತಮ್ಮ ಸುತ್ತಮುತ್ತ ಪರಿಸರವನ್ನು ವಿಶ್ಲೇಷಿಸತೊಡಗಿದರು. ಆ ವಿಶ್ಲೇಷಣೆಯ ಅಭಿವ್ಯಕ್ತಿ ರೂಪವೇ ಅವರ ಬರವಣಿಗೆ. ಕೇವಲ ಲೇಖನಿಯೊಂದೇ ಅವರ ಅಭಿವ್ಯಕ್ತಿಯ ಮಾಧ್ಯಮವಾಗಲಿಲ್ಲ. ಅವರ ಕ್ಯಾಮರಾ ಕೂಡ ಅವರ ಅಭಿವ್ಯಕ್ತಿಯ ಇನ್ನೊಂದು ರೂಪವಾಯಿತು. ಅವರ ಅಭಿರುಚಿಗಳು ಹತ್ತು-ಹಲವಾರು ಆದರೂ ಅವುಗಳೆಲ್ಲದರಲ್ಲಿಯೂ ಮನುಷ್ಯ ಜೀವನದ ಅಧ್ಯಯನ-ವಿಶ್ಲೇಷಣೆ ಎಂಬ ಏಕಸೂತ್ರತೆ ಕಂಡು ಬರುತ್ತದೆ.

ಡಾ. ಕೃಷ್ಣಾನಂದ ಕಾಮತರು ಕೇವಲ ತಮ್ಮ ಬರವಣಿಗೆಯಿಂದ ಮಾತ್ರವೇ ಅಲ್ಲದೆ ನೇರವಾಗಿ ಅನೇಕ ಮಂದಿ ಯುವಕರಲ್ಲಿ ಉತ್ಸಾಹವನ್ನು ತುಂಬಿದ್ದಾರೆ. ಅಧ್ಯಯನಕ್ಕೆ ಮಾರ್ಗದರ್ಶಕರಾಗಿದ್ದಾರೆ, ಸಹಾಯ ನೀಡಿದ್ದಾರೆ, ತಮ್ಮ ಆಲೋಚನೆಗಳನ್ನು ಹಂಚಿಕೊಂಡಿದ್ದಾರೆ. ಡಾ. ಕಾಮತರ ವೈಜ್ಞಾನಿಕ ಪರಿಜ್ಞಾನದ ನೆರವನ್ನು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನ ಅನೇಕ ಮಂದಿ ಯುವವಿಜ್ಞಾನಿಗಳು ಪಡೆದಿದ್ದಾರೆ.

ಇಂಥ ವಿಶಿಷ್ಟ ವ್ಯಕ್ತಿತ್ವದ ಕಾಮತರು ಎರಡು ವರ್ಷಗಳ ಹಿಂದೆ ತಮ್ಮ 'ಮರುಪಯಣ'ವನ್ನು ಬೆಳೆಸಿದರು. ಆಗ ಬೆಂಗಳೂರಿನ ಮಿಥಿಕ್ ಸೊಸೈಟಿಯವರು ಅಗಲಿದ ಡಾ. ಕಾಮತರಿಗೆ ಒಂದು ಸಂತಾಪ ಸಭೆಯನ್ನು ನಡೆಸಿದರು. ಸಂತಾಪ ಸಭೆಯ ನಂತರ ಆತ್ಮೀಯರೆಲ್ಲ ಸೇರಿ, ಕಾಮತರ ನೆನಪಿನ ಸಂಪುಟವೊಂದನ್ನು ತರುವ ಯೋಚನೆಯನ್ನು ಮಾಡಿದೆವು. ಅಂದಿನ ಆ ಯೋಚನೆ, ಕೆಲವು ದಿವಸಗಳ ನಂತರ ಒಂದು ನಿಶ್ಚಿತ ರೂಪವನ್ನು ತಳೆಯಿತು. ಡಾ. ಕಾಮತರ ಹಿರಿಯ ಕಿರಿಯ ಮಿತ್ರರೆಲ್ಲ ನಮ್ಮ ಪ್ರಯತ್ನಕ್ಕೆ ಒತ್ತಾಸೆಯನ್ನು ನೀಡಿದರು. ಅಷ್ಟೇ ಅಲ್ಲ, ಡಾ. ಜ್ಯೋತ್ಸ್ನಾ ಕಾಮತ್ ಮತ್ತು ವಿಕಾಸ್ ಕಾಮತ್ ಅವರು ನಮ್ಮ ಯೋಜನೆಗೆ ಸಂಪೂರ್ಣ ಬೆಂಬಲ ನೀಡುವ ಭರವಸೆ ನೀಡಿದರು.

ಡಾ. ಕೃಷ್ಣಾನಂದ ಕಾಮತರ ಸಾಹಿತ್ಯ ಮತ್ತು ವೈಜ್ಞಾನಿಕ ದೃಷ್ಟಿಕೋನವನ್ನು ಉಳಿಸುವ – ಬೆಳೆಸುವ ಉದ್ದೇಶದಿಂದ ಆರಂಭವಾದ ಹೊನ್ನಾವರದ ಕೃಷ್ಣಾನಂದ ಕಾಮತ ಪ್ರತಿಷ್ಠಾನ, ಪುಸ್ತಕವನ್ನು ಪ್ರಕಾಶಿಸಲು ಮುಂದೆ ಬಂದಿತು. ಆ ಪ್ರತಿಷ್ಠಾನದ ಮೊದಲ ಪ್ರಕಟಣೆಯಾಗಿ ಬರುತ್ತಿರುವ ಈ ಸಂಸ್ಮರಣ ಸಂಪುಟದಿಂದ ಶುಭಾರಂಭವಾಗಿದೆ ಎಂದು ನಾವು ಭಾವಿಸಿದ್ದೇವೆ.

ಈ ಸಂಸ್ಮರಣ ಸಂಪುಟವನ್ನು ಒಂದು ವರ್ಷದ ಅವಧಿಯಲ್ಲಿಯೇ ಹೊರತರಬೇಕೆಂದು ಸಂಕಲ್ಪಿಸಿದ್ದೆವು. ಲೇಖನಗಳನ್ನು ಬರೆದು ಕೊಡುತ್ತೇವೆಂದು ಒಪ್ಪಿಗೆ ನೀಡಿದ ಎಲ್ಲರೂ ಸಹಕರಿಸಿದರು. ಆದರೆ ಹಲವಾರು ವೈಯಕ್ತಿಕ ಅಡಚಣೆಗಳಿಂದಾಗಿ ಒಂದು ವರ್ಷದೊಳಗೆ ಆ ಕೆಲಸ ಸಾಧ್ಯವಾಗಲಿಲ್ಲ. ಅದಕ್ಕಾಗಿ, ಎಲ್ಲ ಲೇಖಕರ ಕ್ಷಮೆಯನ್ನು ಕೋರುತ್ತೇವೆ. ತಡವಾದದ್ದಕ್ಕೆ ನಮ್ಮ ಅನನುಭವವೇ ಕಾರಣ ಹೊರತು ಶ್ರದ್ಧೆಯ ಕೊರತೆಯಲ್ಲ ಎಂಬುದನ್ನು ಸೂಚಿಸಬಯಸುತ್ತೇವೆ. ನಮ್ಮ ಕೋರಿಕೆಯನ್ನು ಮನ್ನಿಸಿ, ಸಂಪುಟಕ್ಕಾಗಿ ತಮ್ಮ ಲೇಖನಗಳನ್ನು ಕಳುಹಿಸಿಕೊಟ್ಟ ಎಲ್ಲ ಮಾನ್ಯ ಲೇಖಕರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಈ ಸಂಪುಟಕ್ಕೆ ಕಾಮತರ ಹಿರಿಯ ಮತ್ತು ಕಿರಿಯ ತಲೆಮಾರಿನವರೂ, ಅವರ ಓರಗೆಯ ತಲೆಮಾರಿನವರೂ ಲೇಖನಗಳನ್ನು ಬರೆದುಕೊಟ್ಟಿದ್ದಾರೆ. ಅವರ ಹತ್ತಿರದ ಸಂಬಂಧಿಗಳಿಂದಲೂ ಲೇಖನಗಳು ಬಂದಿವೆ. ಎಲ್ಲರಿಗೂ ಕಾಮತರ ಬರಹ ಮತ್ತು ಬದುಕು ಅರ್ಥಪೂರ್ಣವಾದುದು, ಸಾರ್ಥಕ ಎಂದು ಕಂಡಿದೆ.

ಇದೇನು ಕಾಮತರ ಪತ್ನಿ ಡಾ. ಜ್ಯೋತ್ಸ್ನಾ ಕಾಮತರ ಲೇಖನವೇ ಇಲ್ಲವಲ್ಲ ಎಂದು ಅನ್ನಿಸಬಹುದು. ಕಾಮತರಿಗೆ ಸಂಬಂಧಿಸಿದ ಅನೇಕ ವಿಚಾರಗಳನ್ನು ಒಂದೆಡೆಗೆ ಸಂಗ್ರಹ ಮಾಡಿ, ಜೋಡಿಸಿಕೊಟ್ಟವರೇ ಡಾ. ಜ್ಯೋತ್ಸ್ನಾ ಕಾಮತ್. ಅವರು ತಮ್ಮ ಲಲಿತ ಪ್ರಬಂಧಗಳಲ್ಲಿ ಡಾ. ಕಾಮತರ ಹಲವಾರು ಮುಖಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಅವರಿಂದ ಡಾ. ಕಾಮತರ ಬಗ್ಗೆ ಒಂದು ಸಮಗ್ರವಾದ ಹೊತ್ತಗೆಯನ್ನು ಬರೆಸಿ ಹೊರತರುವ ಉದ್ದೇಶ ನಮಗಿದೆ. ಆದ್ದರಿಂದ ಈ ಸಂಪುಟಕ್ಕೆ ಅವರಿಂದ ಲೇಖನವನ್ನು ಕೋರಲಿಲ್ಲ.

ಈ ಸಂಪುಟಕ್ಕೆ ಲೇಖನಗಳನ್ನು ನೀಡಿ ನಮ್ಮ ಪ್ರಯತ್ನವನ್ನು ಮೆಚ್ಚಿದ ನಮ್ಮನ್ನು ಹರಸಿದ ಇಬ್ಬರು ಹಿರಿಯರನ್ನು ಸ್ಮರಿಸದೇ ಹೋದರೆ ಕರ್ತವ್ಯಲೋಪವಾದೀತು. ನಾಡಿನ ಹಿರಿಯ ವಿಮರ್ಶಕರೂ, ಚಿಂತಕರೂ ಆದ ಡಾ. ಗೌರೀಶ ಕಾಯ್ಕಿಣಿಯವರು, ಲೇಖನ ಬರೆಯುವುದಾಗಿ ಮರುಟಪಾಲಿಗೇ ಅಂಗೀಕಾರ ನೀಡಿದರು. ತಾವು ಬರೆಯುವ ಸ್ಥಿತಿಯಲ್ಲಿ ಇಲ್ಲದೆ ಹೋದರೂ, ತಾವು ಹೇಳಿ ಬೇರೆಯವರಿಂದ ಬರೆಯಿಸಿ, ಲೇಖನವನ್ನು ಕಳುಹಿಸಿಕೊಟ್ಟರು. ಕಾಮತರ ಬರವಣಿಗೆಯ ಮಹತ್ವವನ್ನು ಗುರುತಿಸಿದ ಮೊದಲಿಗರಲ್ಲಿ ಶ್ರೀ ಕೀರ್ತಿನಾಥ ಕುರ್ತಕೋಟಿ ಅವರು ಮುಖ್ಯರು. ನಮ್ಮ ಕೋರಿಕೆ ತಲುಪಿದ ಕೂಡಲೇ ಅವರು ಲೇಖನವನ್ನು ಸಿದ್ಧಪಡಿಸಿದ್ದರು. ಅವರನ್ನು ಮುಖತಃ ನೋಡಿ ನೆನಪಿಸಲು, ಧಾರವಾಡದ ಮನೋಹರ ಗ್ರಂಥಮಾಲೆಯ ಕಛೇರಿಯಲ್ಲಿ ಭೇಟಿಯಾದಾಗ, ತಮ್ಮ ಚೀಲದಿಂದ ಲೇಖನವನ್ನು ತೆಗೆದುಕೊಟ್ಟು, 'ಈಗ ನಿಮಗೆ ಕೊರಿಯರ್ ಮಾಡಲಿದ್ದೆ' ಎಂದು ತಿಳಿಸಿದರು. ಈ ಇಬ್ಬರು ಹಿರಿಯರು ಈ ಸಂಪುಟದ ಪ್ರಕಾಶನವನ್ನು ನೋಡಲು ವಿಧಿ ಅವಕಾಶ ಮಾಡಿಕೊಟ್ಟಿಲ್ಲ. ಅದನ್ನು ನೆನೆಸಿಕೊಂಡರೆ, ನಮ್ಮ ಮನಸ್ಸು ಅಳುಕಿನಿಂದ 'ಕಳಕ್' ಎನ್ನುತ್ತದೆ.

ಈ ಸಂಪುಟದ ಮೊದಲ ಭಾಗದಲ್ಲಿ ಡಾ. ಕೃಷ್ಣಾನಂದ ಕಾಮತರ ವ್ಯಕ್ತಿತ್ವವನ್ನು ಕುರಿತು ಬರೆದ ಆಹ್ವಾನಿತ ಲೇಖನಗಳನ್ನು ನೀಡಲಾಗಿದೆ. ಎರಡನೆಯ ಭಾಗದಲ್ಲಿ ಕಾಮತರ ಕೃತಿಗಳನ್ನು ಕುರಿತು ಬರೆದ ಆಹ್ವಾನಿತ ಲೇಖನಗಳನ್ನು ನೀಡಲಾಗಿದೆ. ಮೂರನೆಯ ಭಾಗದಲ್ಲಿ ಕಾಮತರ ಕೃತಿ, ವ್ಯಕ್ತಿತ್ವಗಳನ್ನು ಕುರಿತು, ಬೇರೆ ಬೇರೆ ಪತ್ರಿಕೆಗಳಲ್ಲಿ ಈ ಹಿಂದೆ ಪ್ರಕಟವಾದ ಮೌಲಿಕವಾದ ವಿಮರ್ಶೆಗಳಲ್ಲಿ ಕೆಲವನ್ನು ಸಂಗ್ರಹಿಸಿ ನೀಡಲಾಗಿದೆ. ಇವು ಕಾಮತರ ಬರಹಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಆಕರಗಳಾಗುತ್ತವೆ ಎಂದು ಭಾವಿಸಿದ್ದೇವೆ. ಡಾ. ಕಾಮತರು ಕನ್ನಡ ಪತ್ರಸಾಹಿತ್ಯಕ್ಕೆ ನೀಡಿದ ಕೊಡುಗೆ ಮಹತ್ವದ್ದು. ಅವರು ತಮಗೆ ಬಂದ ಪತ್ರಗಳನ್ನು ಸಂಗ್ರಹಿಸಿ ಇಡುತ್ತಿದ್ದುದಲ್ಲದೇ, ತಾವು ಬೇರೆಯವರಿಗೆ ಬರೆಯುತ್ತಿದ್ದ ಪತ್ರಗಳನ್ನು ಪ್ರತಿಮಾಡಿ ಇಟ್ಟುಕೊಳ್ಳುತ್ತಿದ್ದರು. ನಾಲ್ಕನೆಯ ಭಾಗದಲ್ಲಿ ಕಾಮತರು ಬರೆದ ಕೆಲವು ಪತ್ರಗಳನ್ನು ನೀಡಲಾಗಿದೆ. 'ಸದಾಸಿದ್ಧ' ಎಂಬ ಶೀರ್ಷಿಕೆಯ ಪತ್ರ, ಕಾಮತರ 'ಸ್ಥಿತಪ್ರಜ್ಞೆ'ಯನ್ನು ತೋರಿಸುತ್ತದೆ. ಇದೇ ವಿಭಾಗದಲ್ಲಿರುವ ಕಾಮತರ ಎರಡು ಇಂಗ್ಲಿಷ್ ಪತ್ರಗಳು ಅವರ ದೇಶಾಭಿಮಾನವನ್ನೂ ಶ್ರದ್ಧೆಯಿಂದ ಕೂಡಿದ ಯುವ ವಿಜ್ಞಾನಿಯೊಬ್ಬನ ಕಳಕಳಿಯನ್ನೂ ವ್ಯಕ್ತಪಡಿಸುತ್ತದೆ. ಇದೇ ವಿಭಾಗದಲ್ಲಿ ಕಾಮತರ ಕೆಲವು ಅಪ್ರಕಟಿತ ಪ್ರಬಂಧ ಬರಹಗಳನ್ನೂ ಅಪರೂಪದ ವಿಷಯಗಳನ್ನು ಒಳಗೊಂಡ, ಕೆಲವು ಪ್ರಕಟಿತ ಲೇಖನಗಳನ್ನೂ ನೀಡಲಾಗಿದೆ.

ಡಾ. ಕೃಷ್ಣಾನಂದ ಕಾಮತರು ಎಂದೂ ಸಾರ್ವಜನಿಕ ಸಮಾರಂಭಗಳಲ್ಲಿ ಭಾಗವಹಿಸಲು ಇಚ್ಛಿಸಿದವರಲ್ಲ. ತಮ್ಮ ತಾಯ್ನೆಲದ ಬಗೆಗಿನ ಅಭಿಮಾನದಿಂದ ಹೊನ್ನಾವರದಲ್ಲಿ ನಡೆದ ಉತ್ತರ ಕನ್ನಡ ಜಿಲ್ಲೆಯ ಒಂಭತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ಒಪ್ಪಿಕೊಂಡು, ಎಂದಿನ ತಮ್ಮ ಶಿಸ್ತಿನಂತೆ ಅಧ್ಯಕ್ಷ ಭಾಷಣವನ್ನು ಬರೆದು ಸಿದ್ಧಪಡಿಸಿಕೊಂಡು ಹೋಗಿದ್ದರು. ಸಭೆಯ ಕಲಾಪದ ವಿಸ್ತರಣೆ ಕಾರಣದಿಂದ ಅವರಿಗೆ ಅದನ್ನು ಓದಲು ಸಾಧ್ಯವಾಗಲೇ ಇಲ್ಲ. ತಮ್ಮ ಅಧ್ಯಕ್ಷ ಭಾಷಣದ ಲೇಖನದಲ್ಲಿ ತುಂಬಾ ಮಹತ್ವದ ಮಾತುಗಳನ್ನು ಹೇಳಲು ಬಯಸಿದ್ದರು. ಅದನ್ನು ಈ ಸಂಪುಟದಲ್ಲಿ ಸಂಪೂರ್ಣವಾಗಿ ಕೊಟ್ಟಿದ್ದೇವೆ.

ಹರೆಯದಲ್ಲಿ ಕವಿತೆ ಬರೆಯದ ಸಾಹಿತಿ ಯಾರು? ಕವಿಯಾಗಲು, ಇಣಕಿ ಹಾಕಿದ, ಕಾಮತರ ಒಂದು ಕವನವನ್ನು ಕುತೂಹಲಕ್ಕಾಗಿ ಇಲ್ಲಿ ಕೊಟ್ಟಿದ್ದೇವೆ. ಕಾಮತರ ವಿಮರ್ಶಾ ಪ್ರಜ್ಞೆಯ ಸಂಕೇತವಾಗಿ, ಅವರು ವಿಶ್ವಕೋಶವನ್ನು ಕುರಿತು ಬರೆದ ವಿಮರ್ಶೆಯನ್ನು ಇಲ್ಲಿ ನೀಡಿದ್ದೇವೆ. ಈ ರೀತಿಯ ವಿಮರ್ಶೆಯನ್ನು ಅವರು ಸ್ವಲ್ಪ ಮುಂದುವರಿಸಿದ್ದರೆ ನಾಡು ನುಡಿಗಳಿಗೆ ಮಹದುಪಕಾರವಾಗುತ್ತಿತ್ತು. 'ಇರುವೆಯ ಮದುವೆ' ಬಾನುಲಿ ರೂಪದ ಒಂದು ಅಪರೂಪದ ಕೃತಿ. ಕೀಟವಿಜ್ಞಾನಿಯೊಬ್ಬರ ಸಾಹಿತ್ಯ ರಚನೆಯ ಸೊಗಸು ಅದರಲ್ಲಿ ಕಾಣುತ್ತದೆ.

ಡಾ. ಕೃಷ್ಣಾನಂದ ಕಾಮತರು ತೆಗೆದ ಫೋಟೋಗಳು ಸಾವಿರಾರು. ಆದರೆ ಅವರೇ ಇರುವ ಛಾಯಾಚಿತ್ರಗಳು ಬಲುಕಡಿಮೆ. ಹೀಗಾಗಿ ಅವರ ಮನೆ 'ಶಶಿಕಿರಣ'ದಲ್ಲಿ ಹುಡುಕಾಡಿ, ಕಾಮತರ ದೈನಂದಿನ ಚಟುವಟಿಕೆಗಳನ್ನು ಸೆರೆಹಿಡಿದಿರುವ ಕೆಲವಾರು ಛಾಯಾಚಿತ್ರಗಳನ್ನು ಸಂಗ್ರಹಿಸಿ, ಈ ಸಂಪುಟದಲ್ಲಿ ನೀಡಲಾಗಿದೆ. ಅವರು ಅಮೇರಿಕಾದಲ್ಲಿದ್ದಾಗ ರವಿಶಂಕರರ ಸಿತಾರ್ ವಾದನವನ್ನು ಕೇಳಿ ಅವರೊಂದಿಗೆ ತೆಗೆಸಿಕೊಂಡಿದ್ದ ಛಾಯಾಚಿತ್ರ ಅವರಿಗೆ ತುಂಬಾ ಪ್ರಿಯವಾಗಿತ್ತು. ಬಹುಶಃ ಅದೊಂದೇ ಅವರು ತಾವಾಗಿ ಬಯಸಿ ಹೆಮ್ಮೆಯಿಂದ ತೆಗೆಸಿಕೊಂಡ ಫೋಟೋ. ಅದನ್ನು ಇಲ್ಲಿ ನೀಡಿದ್ದೇವೆ. ಕಾಮತರು ತೆಗೆದ ಕೆಲವು ಅಪರೂಪದ ಛಾಯಾಚಿತ್ರಗಳನ್ನೂ ಇಲ್ಲಿ ಕೊಟ್ಟಿದ್ದೇವೆ. ಕಾಮತರು ಚಿತ್ರಕಲೆಯಲ್ಲಿಯೂ ಸಿದ್ಧಹಸ್ತರು. ಅವರು ರಚಿಸಿದ ಹಲವಾರು ರೇಖಾಚಿತ್ರಗಳನ್ನು ಈ ಸಂಪುಟದಲ್ಲಿ ಅಲ್ಲಲ್ಲಿ  ಹಾಗೂ ಕೊನೆಯ ಪುಟಗಳಲ್ಲಿ ಸೇರಿಸಿದ್ದೇವೆ.

ಡಾ. ಕೃಷ್ಣಾನಂದ ಕಾಮತರ ಈ ಸಂಸ್ಮರಣ ಸಂಪುಟಕ್ಕೆ **'ಕಮ್ಮಟಿಗ'** ಎಂದು ಕರೆಯಲು ವಿಶೇಷ ಕಾರಣವಿದೆ. ಈ ಹೆಸರನ್ನು ಸೂಚಿಸಿದವರು ವಿಕಾಸ್ ಕಾಮತ. ಉದ್ಯೋಗ, ವ್ಯಾಪಾರಗಳಲ್ಲಿ ಹೆಸರು ಮಾಡಿದ ಗೌಡಸಾರಸ್ವತ ಜನರಲ್ಲಿ ಕೃಷಿಯನ್ನು ಅವಲಂಬಿಸಿದವರನ್ನು 'ಕಮ್ಮತ್ತಿಗ' ಅಥವಾ 'ಕಮ್ತಿ' ಎಂದು ಕರೆಯುವುದು ರೂಢಿಯಲ್ಲಿದೆ. ಈ 'ಕಮ್ಮತ' ದಿಂದಲೇ 'ಕಾಮತ್' ಶಬ್ದ ಬಂದಿರುವುದು. ಕೃಷ್ಣಾನಂದರ ಪೂರ್ವಜರು 'ಕಮ್ಮತ್ತಿಗ'ರಾಗಿದ್ದರು. ಆದರೆ ಕೃಷ್ಣಾನಂದ ಕಾಮತರು ತಮ್ಮ ಪೂರ್ವಜರಂತೆ 'ಕಮ್ಮತ್ತಿಗ'ರಾಗದೆ 'ಕಮ್ಮಟಿಗ'ರಾಗಿದ್ದರು. ಸಾಹಿತ್ಯ ಕೃಷಿಯ ಜೊತೆಯಲ್ಲಿ ಕ್ಯಾಮರಾ ಮತ್ತು ಕುಂಚ ಬಳಸುವುದರಲ್ಲಿ, ಮಣ್ಣಿನ ಕೆಲಸ, ನೇಯ್ಗೆ, ಹೊಲಿಗೆ, ತೋಟಗಾರಿಕೆ ಮೊದಲಾದವುಗಳಲ್ಲೂ ಕುಶಲಿಯಾಗಿದ್ದರು; ಕೆಟ್ಟು ನಿಂತು ಹೋದ ಗೃಹೋಪಕರಣಗಳನ್ನು ತಾವೇ ಸರಿಪಡಿಸಿಕೊಳ್ಳುತ್ತಿದ್ದರು. ಅಡಿಗೆ ಮಾಡುವುದರಲ್ಲೂ 'ಸೈ' ಎನಿಸಿದ್ದ ಕಾಮತರು ಹಲವು ಬಗೆಯ ಉಪ್ಪಿನಕಾಯಿಗಳನ್ನು ತಯಾರಿಸುವುದರಲ್ಲಿ ಸಿದ್ಧಹಸ್ತರಾಗಿದ್ದರು. ಸದಾ ಕಾರ್ಯನಿರತರಾಗಿರುತ್ತಿದ್ದ ಡಾ. ಕಾಮತರಿಗೆ ಅದು ಅವರ ವೈಜ್ಞಾನಿಕ ಛಾಯಾಗ್ರಹಣದ ಪ್ರಯೋಗಶಾಲೆಯಾಗಲಿ, ಮನೆಯಾಗಲಿ, ಒಂದು ರೀತಿಯ 'ಕಮ್ಮಟ'ವಾಗಿತ್ತು. ಸ್ವಂತ ಕಾಯಕದಲ್ಲಿ ಗೌರವ ಇರಿಸಿದ ಕೃಷ್ಣಾನಂದರು ಬರಹಗಾರರಾದದ್ದು ಕೇವಲ ಆಕಸ್ಮಿಕ. ಆದ್ದರಿಂದಲೇ ಸುಮಾರು ಮೂವತ್ತು ವರ್ಷಗಳ ಕಾಲ, ಏಕಾಂಗಿಯಾಗಿಯೇ ಹಲವು ಆಯಾಮಗಳಲ್ಲಿ ಕೆಲಸ ಮಾಡಿದ ಅವರ ಈ ಸಂಸ್ಮರಣ ಗ್ರಂಥಕ್ಕೆ 'ಕಮ್ಮಟಿಗ' ಎಂದು ಕರೆದಿರುವುದು. ಈ ಪದ ಡಾ. ಕೃಷ್ಣಾನಂದ ಕಾಮತರ ಅಪರೂಪ ವ್ಯಕ್ತಿತ್ವವನ್ನು ಧ್ವನಿಸುತ್ತದೆ ಎಂಬ ನಂಬಿಕೆ ನಮಗೆ ಇದೆ.

ಈ ಸಂಪುಟದಲ್ಲಿ ನಾವು ಬಳಸಿಕೊಂಡಿರುವ ಲೇಖನಗಳನ್ನು ಈ ಮೊದಲೇ ಪ್ರಕಟಿಸಿದ ಪತ್ರಿಕೆಗಳನ್ನೂ, ಅವುಗಳನ್ನು ಬರೆದ ಲೇಖಕ, ವಿಮರ್ಶಕರನ್ನೂ, ನಾವು ಇಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇವೆ. ಮುಖಪುಟಕ್ಕೆ ಡಾ. ಕೆ. ಸೋಮಶೇಖರ್ ಮತ್ತು ಒಳಪುಟಕ್ಕೆ ಶ್ರೀ ಕೆ. ಜಿ. ಸೋಮಶೇಖರ್ ಅವರು ತೆಗೆದ ಕಾಮತರ ಛಾಯಾಚಿತ್ರಗಳನ್ನು ಬಳಸಿಕೊಂಡಿದ್ದೇವೆ. ಅವರಿಗೆ ನಮ್ಮ ಕೃತಜ್ಞತೆಗಳು.

ಈ ಸಂಪುಟವನ್ನು ಹೊರತರುವುದರಲ್ಲಿ ನಮ್ಮೊಂದಿಗೆ ಸಹಕರಿಸಿದ ಶ್ರೀ ಟಿ. ಆರ್. ಅನಂತರಾಮು, ಶ್ರೀ ಜಯಂತ ಕಾಯ್ಕಿಣಿ, ಶ್ರೀ ವೇ. ಬು. ಸೋಮಶೇಖರ್, ಡಾ. ಅ. ಲ. ನರಸಿಂಹನ್ ಮೊದಲಾದವರಿಗೆ  ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಈ ಪುಸ್ತಕದ ಮಾರಾಟದ ಹೊಣೆಯನ್ನು ಪ್ರೀತಿಯಿಂದ ಅಂಗೀಕರಿಸಿರುವ ಕಾಮಧೇನು ಪುಸ್ತಕ ಭವನದ ಪ್ರೊ. ಡಿ. ಕೆ. ಶ್ಯಾಮಸುಂದರರಾವ್ ಮತ್ತು ಶ್ರೀ ಎಸ್ ಎಂ. ದೀಪಕ್ ಅವರಿಗೆ ನಮ್ಮ ವಂದನೆಗಳು.

ಈ ಸಂಪುಟವನ್ನು ಅಂದವಾಗಿ ಮುದ್ರಿಸಿ ಕೊಟ್ಟಿರುವ ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿ. ನ ಶ್ರೀ ಲಿಂಗಪ್ಪ ಅವರಿಗೂ, ಅಚ್ಚುಕಟ್ಟಾಗಿ ಬೆರಳಚ್ಚು ಮಾಡಿದ ಶ್ರೀ ಜಿ. ರಮೇಶ್ ಅವರಿಗೂ, ಮುಖಪುಟ ವಿನ್ಯಾಸ ಹಾಗೂ ಛಾಯಾಚಿತ್ರಗಳನ್ನು ಜೋಡಿಸುವ ಕೆಲಸ ಮಾಡಿದ ಶ್ರೀಮತಿ ಮಂಜುಳ ಅವರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಡಾ. ಕೃಷ್ಣಾನಂದ ಕಾಮತರು ತಮ್ಮ ಬರಹ-ಕಲೆಗಳಿಂದಾಗಿಯೇ ಶಾಶ್ವತರಾಗುತ್ತಾರೆ, ಈ ಸ್ಮಾರಕ ಸಂಪುಟದಿಂದ ಅಲ್ಲ ಎಂಬ ವಾಸ್ತವ ಸಂಗತಿಯ ಅರಿವು ನಮಗೆ ಇದೆ. ಆದರೆ ಈ ಸಂಪುಟ ಆ ಶಾಶ್ವತ ನಿಷ್ಣಾತ ವಿಜ್ಞಾನಿಯ, ಬರಹಗಾರನ, ಕಲೆಗಾರನ ಬದುಕನ್ನು ಅರ್ಥಮಾಡಿಕೊಳ್ಳುವುದಕ್ಕೆ ಅಲ್ಲವಾದರೂ ಪರಿಚಯಮಾಡಿಕೊಡುವಂತಾದರೆ ನಮ್ಮ ಶ್ರಮ ಸಾರ್ಥಕವಾದಂತಾಗುತ್ತದೆ. ನಮ್ಮ ಬಗ್ಗೆ ಕಾಮತರು ಇರಿಸಿಕೊಂಡಿದ್ದ ಅಪಾರವಾದ ಅಭಿಮಾನ ಅವರ ಹಿರಿತನದ ಪ್ರತೀಕವಾಗಿತ್ತು. ಆ ಹಿರಿಯ ಚೇತನಕ್ಕೆ ಈ ಸಂಪುಟ ಕೇವಲ ಪರೋಕ್ಷವಿನಯ ಅಷ್ಟೇ.

**ಕೆ. ಆರ್. ಗಣೇಶ,  ಆರ್. ಶೇಷಶಾಸ್ತ್ರಿ**

ಸಂಪಾದಕರು

# ಪ್ರಕಾಶಕರ ನುಡಿ

ವಿಜ್ಞಾನಿ, ಸಾಹಿತಿ, ಛಾಯಾಚಿತ್ರಕಾರ, ಪರಿಸರಪ್ರೇಮಿ ಹೀಗೆ ಹಲವು ಮುಖಗಳಿಂದ ಅರ್ಥಪೂರ್ಣ ಬದುಕನ್ನು ನಡೆಸಿದ ಡಾ. ಕೃಷ್ಣಾನಂದ ಕಾಮತರು (1934–2002) ನಮ್ಮನ್ನು ಅಗಲಿ ಒಂದು ವರ್ಷ ಕಳೆದಿತ್ತು. ಕಾಮತರು ರೂಢಿಸಿಕೊಂಡಿದ್ದ ಹಲವಾರು ಕಲಾ ಪ್ರಕಾರಗಳಿಗೆ ಸಂಘಟಿತ ರೂಪವನ್ನು ಕೊಟ್ಟು ಅವುಗಳನ್ನು ಒಂದು ಕಡೆ ಕಾಯ್ದಿರಿಸಬೇಕೆಂದು ಪ್ರಯತ್ನ ನಡೆಯಿತು. ಆ ಪ್ರಯತ್ನದ ಫಲವಾಗಿಯೇ, ಕಾಮತರ ಹುಟ್ಟೂರಾದ ಹೊನ್ನಾವರದಲ್ಲಿ ಕೃಷ್ಣಾನಂದ ಕಾಮತ ಪ್ರತಿಷ್ಠಾನದ ಸ್ಥಾಪನೆಯಾಯಿತು.

ಕಾಮತರ ಜೀವನದ ಆಸಕ್ತಿಗಳಿಗೆ ಸಮೀಪವಾಗುವ ಕೆಲವು ವಿಚಾರಗಳಿಗೆ ಮೂರ್ತರೂಪವನ್ನು ಕೊಡುವ ಉದ್ದೇಶ ಈ ಪ್ರತಿಷ್ಠಾನಕ್ಕೆ ಇದೆ. ಕಾಮತರ ಬರಹಗಳ ಪ್ರಕಟಣೆ, ಕಿರಿಯರಿಗೆ ಪ್ರವಾಸ, ಚಾರಣ, ಫೋಟೋಗ್ರಫಿಗಳಲ್ಲಿ ತರಬೇತಿ, ಕಾಮತರು ತೆಗೆದ, ರಚಿಸಿದ ಚಿತ್ರಗಳ ಪ್ರದರ್ಶನ, ಅವರ ಹೆಸರಿನ ಸಮುದಾಯಭವನ, ಉಚಿತ ವಾಚನಾಲಯಗಳ ನಿರ್ಮಾಣ ಮೊದಲಾದ ಕನಸುಗಳನ್ನು ಈ ಪ್ರತಿಷ್ಠಾನ ಇಟ್ಟುಕೊಂಡಿದೆ. ನಮ್ಮ ಕನಸುಗಳ ನನಸಿನ ಮೊದಲ ಹೆಜ್ಜೆಯಾಗಿ, ಪ್ರಸ್ತುತ 'ಕಮ್ಮಟಿಗ' ಗ್ರಂಥವನ್ನು ಹೊರತರುತ್ತಿದ್ದೇವೆ. ಶ್ರಮವಹಿಸಿ ಸಂಪುಟದ ಸಂಪಾದನೆಯನ್ನು ಮಾಡಿಕೊಟ್ಟ ಡಾ. ಕೆ. ಆರ್. ಗಣೇಶ ಮತ್ತು ಡಾ. ಆರ್. ಶೇಷಶಾಸ್ತ್ರಿ ಅವರಿಗೂ ಹಾಗೂ ಅವರ ಸಂಪಾದಕ ಮಂಡಳಿಯ ಮಿತ್ರರಿಗೂ ಪ್ರತಿಷ್ಠಾನವು ಆಭಾರಿಯಾಗಿದೆ.

ಕೃಷ್ಣಾನಂದ ಕಾಮತ ಪ್ರತಿಷ್ಠಾನದ ಈ ಚೊಚ್ಚಲ ಕೃತಿಯನ್ನು ಸಹೃದಯರು ಸ್ವಾಗತಿಸುವರೆಂದು ನಂಬಿದ್ದೇವೆ.

**ಪ್ರಕಾಶಕರು**

# ಪರಿವಿಡಿ

## ಕೃಷ್ಣಾನಂದ ಕಾಮತರ ಕೃತಿಗಳನ್ನು ಕುರಿತು

# ಕೃಷ್ಣಾನಂದ ಕಾಮತರ ತಂದೆ ತಾಯಿ

ಶ್ರೀ ಲಕ್ಷ್ಮಣ ವಾಸುದೇವ ಕಾಮತ ಮತ್ತು ಶ್ರೀಮತಿ ರಮಾಬಾಯಿ









ಸೋದರಿ ಸುಮಿತ್ರಾ ಶಾನಭೋಗರ ಜೊತೆ



ಸೋದರರು - ತಾಯಿಯ ಜೊತೆ





ಪಂಡಿತ್ ರವಿಶಂಕರ್ ಅವರೊಂದಿಗೆ











# ಕೃಷ್ಣಾನಂದ ಕಾಮತರ ಛಾಯಾಗ್ರಹಣ ಕಲೆ....








ಸುಂದರ ಕರಾವಳಿ


ಮಾರಿಯಾ


ಪ್ರೊ. ಎಂ.ವಿ.ಸೀ.




ಅಪರೂಪದ ಜೋಡಿ .......



ಅಡಿಗೆ ಮನೆಯಲ್ಲಿ



ಮಗನೊಂದಿಗೆ



ಮಗ-ಸೊಸೆಯೊಂದಿಗೆ



ಬಂಧುಗಳೊಂದಿಗೆ

## ಕಾಮತರ ಕಾಯಕದ ಚಿತ್ರಗಳು....







## ಕೃಷ್ಣಾನಂದ ಕಾಮತರು ತೆಗೆದ ಚಿತ್ರಗಳು











# ಡಾ|| ಕೃಷ್ಣಾನಂದ ಕಾಮತರ ವರ್ಣಮಯ ವ್ಯಕ್ತಿತ್ವ

**ಡಾ|| ಜಿ. ಎಸ್. ದೀಕ್ಷಿತ್**

## ಕೃಷ್ಣಾನಂದರ ಪರಿಚಯ

ಡಾ|| ಜ್ಯೋತ್ಸ್ನಾ ಮತ್ತು ಡಾ|| ಕೃಷ್ಣಾನಂದ ಕಾಮತರ ಬೆಂಗಳೂರಿನ ಮಲ್ಲೇಶ್ವರದಲ್ಲಿರುವ ನಿವಾಸ 'ಶಶಿಕಿರಣ'ಕ್ಕೆ, ನಾನು ಅನೇಕ ಸಲ ಹೋಗಿದ್ದೇನೆ. ಇತ್ತೀಚೆಗೆ, ಕೊನೆಯ ಸಲ, ೨೦೦೦ದ ಮೇ ತಿಂಗಳಲ್ಲಿ ಹೋಗಿದ್ದನ್ನು ನಾನು ಮರೆಯುವ ಹಾಗಿಲ್ಲ. ಯಾಕೆಂದರೆ ಅದು ನನ್ನ ಮತ್ತು ಈ ದಂಪತಿಗಳ ಭೇಟಿ, ಬಹಳ ದಿನಗಳಾದ ಮೇಲೆ ಆದ ಭೇಟಿ. ಈ ಭೇಟಿಯಲ್ಲಿ ಅವರಿಬ್ಬರೂ ನನ್ನನ್ನು ಯಾವಾಗಲೂ ಸ್ವಾಗತಿಸುವದಕ್ಕಿಂತ ಹೆಚ್ಚಿನ ಆದರ, ಪ್ರೀತಿಗಳಿಂದ ಬರಮಾಡಿಕೊಂಡರು. ಆಗ ಅವರು ಹೇಳಿದ್ದನ್ನು ಕೇಳಿ ನನಗೆ ಅವರ ಬಗ್ಗೆ ಹಿಂದೆ ಇರದ ಮತ್ತು ಮುಂದೆ ಮರೆಯಲಾರದ ಹೆಚ್ಚಿನ ಆತ್ಮೀಯತೆ ಹುಟ್ಟಿತು. ಅವರಿಬ್ಬರೂ ಏಕಕಾಲಕ್ಕೆ ಏನು ಹೇಳಿದರೆಂದರೆ "ನಮ್ಮ ಬಾಬಾರ ನಂತರದ ಆತ್ಮೀಯರು!". ಇವು, ಅವರು ಯಥಾವತ್ ಉಪಯೋಗಿಸಿದ ಶಬ್ದಗಳಿರದೇ ಇರಬಹುದು. ಆದರೆ ಆ ಶಬ್ದಗಳ ಭಾವ ಹಾಗಿತ್ತು. ಬಾಬಾ, ಅಂದರೆ ಜ್ಯೋತ್ಸ್ನಾಳ ತಂದೆ. ದಿವಂಗತ ಶ್ರೀ ಗಣೇಶಬುರ್ಡೆ ಅವರು. ಇವರನ್ನು ಕೃಷ್ಣಾನಂದರೂ ತಮ್ಮ ತಂದೆಯ ಸಮನಾಗಿ ನೋಡಿಕೊಳ್ಳುತ್ತಿದ್ದರು. ಮೊನ್ನೆ ಮೊನ್ನೆ ಬಾಬಾ ಅವರು ಹಣ್ಣು ಹಣ್ಣು ಮುದುಕರಾಗಿ, ವಯಸ್ಸಿನಲ್ಲಿ ನೂರರ ಸಮೀಪಕ್ಕೆ ಬಂದು ಕಣ್ಣುಮುಚ್ಚಿದರು. ಅದಕ್ಕೆ ಕೆಲವೇ ತಿಂಗಳ ಮೊದಲು ಕೃಷ್ಣಾನಂದರು ೬೭ನೇ ವಯಸ್ಸಿನಲ್ಲಿ ಅಕಾಲ ಮರಣವನ್ನು ಅಪ್ಪಿದರು. ಇವರಿಬ್ಬರೂ ಜ್ಯೋತ್ಸ್ನಾ ಅವರ ಎಲ್ಲಾ ತರದ ಬೆಳವಣಿಗೆಗೆ ನೆರವಾಗಿದ್ದರು. ಷೇಕ್ಸ್‌ಪಿಯರನ 'ಜ್ಯೂಲಿಯಸ್ ಸೀಝರ್' ನಾಟಕದಲ್ಲಿ ಸೀಝರ್‌ನ ಹೆಂಡತಿ ಕಲ್ಪೂರ್ನಿಯಾಳ ಜೀವನದಲ್ಲಿಯ ಸೌಭಾಗ್ಯವನ್ನು ವರ್ಣಿಸುವಾಗ, ಆ ಸೌಭಾಗ್ಯಕ್ಕೆ, ಅವಳ ತಂದೆ ಮತ್ತು ಅವಳ ಯಜಮಾನರು ಕಾರಣರೆಂದು ಕವಿ, ಅವಳನ್ನು Thus father and thus husband ಎಂದು ವರ್ಣಿಸುತ್ತಾನೆ. ಜ್ಯೋತ್ಸ್ನಾ ಅವರ ಸೌಭಾಗ್ಯವೂ ಅದೇ ತೆರನಾದದ್ದು. ಇಂತಹ ಅಪೂರ್ವ ವ್ಯಕ್ತಿಗಳ ಪರಿಚಯ ನನಗಾದದ್ದು ಜ್ಯೋತ್ಸ್ನಾ ಅವರ ಮೂಲಕವೇ!

ಜ್ಯೋತ್ಸ್ನಾ, ಎಂ.ಎ. ವಿದ್ಯಾರ್ಥಿನಿಯಾಗಿದ್ದಾಗ ನಾನು ೧೯೬೧ರಲ್ಲಿ ಅಮೇರಿಕೆಗೆ ಹೊರಟಿದ್ದೆ. ಯಾರಾದರೂ ಊರಿಗೆ ಹೊರಟಿದ್ದರೆ, "ಆ ಊರಿನಲ್ಲಿ ನನ್ನ ಪರಿಚಯದ ಇಂಥವರು ಇದ್ದಾರೆ, ಅವರನ್ನು ನೋಡಿಕೊಂಡು ಬನ್ನಿ" ಎಂದು ಹೇಳುವದು ರೂಢಿ. ಜ್ಯೋತ್ಸ್ನಾ ನನಗೆ ಹೇಳಿದ್ದು – "ಸಿರೆಕ್ಯೂಸ್ ವಿಶ್ವವಿದ್ಯಾಲಯದಲ್ಲಿ ನನ್ನ ಪರಿಚಯದವರು ಇದ್ದಾರೆ. ನೀವು ಆ ಕಡೆ ಹೋದರೆ ಆ ವಿಶ್ವವಿದ್ಯಾಲಯ ನೋಡಿಕೊಂಡು ಬನ್ನಿ". ನಾನು ಸಿರೆಕ್ಯೂಸಿಗೆ ಹೋಗುವ ಅವಕಾಶ ತಾನಾಗಿ ಸಿಕ್ಕಿತು. ಹೋದಾಗ ಅಲ್ಲಿಯ ವಿಶ್ವವಿದ್ಯಾಲಯದ ಕ್ಯಾಂಪಸ್ ನೋಡಿಕೊಂಡು ಬಂದೆ. ಅಲ್ಲಿ ಸಂಶೋಧನೆ ಮಾಡುತ್ತಿದ್ದ ಜ್ಯೋತ್ಸ್ನಾಳ ಪರಿಚಯಸ್ಥರು ಡಾ|| ಕೃಷ್ಣಾನಂದ ಕಾಮತರೆಂದು ನನಗೆ ನಂತರ ತಿಳಿಯಿತು. ಕೃಷ್ಣಾನಂದರು ತಮ್ಮ 'ನಾನೂ ಅಮೇರಿಕೆಗೆ ಹೋಗಿದ್ದೆ' ಪುಸ್ತಕದಲ್ಲಿ, ಸಿರೆಕ್ಯೂಸಿನಲ್ಲಿ ನಡೆದ ಘಟನೆಗಳನ್ನೆಲ್ಲಾ ಬಹಳ ಸ್ವಾರಸ್ಯಕರವಾಗಿ ವರ್ಣಿಸಿದ್ದಾರೆ. ಮೊದಲೇ ಅವರಿಬ್ಬರ ಪರಿಚಯ ಇತ್ತು ಎಂದು ಕಾಣುತ್ತದೆ! ಮುಂದೆ ಅವರ ಮದುವೆ ಆಯಿತು. ಅದೇ ಸುಮಾರಿಗೆ ಕೃಷ್ಣಾನಂದರಿಗೆ ರಾಜಸ್ಥಾನದ ಉದಯಪುರ ಕೃಷಿ ವಿಶ್ವವಿದ್ಯಾಲಯಕ್ಕೆ ಸೇರಿದ ಜೋಬನೇರ ಕೇಂದ್ರದಲ್ಲಿ ಕೆಲಸ ಸಿಕ್ಕಿತ್ತು. ಈ ಊರು ಜಯಪುರಕ್ಕೆ ಹತ್ತಿರವಿದ್ದುದರಿಂದ ಜ್ಯೋತ್ಸ್ನಾ ಧಾರವಾಡ ಆಕಾಶವಾಣಿಯಿಂದ ಅಲ್ಲಿಗೆ ವರ್ಗಾ ಮಾಡಿಸಿಕೊಂಡರು. ಕೃಷ್ಣಾನಂದರಿಗೆ ಉದಯಪುರ ವಿಶ್ವವಿದ್ಯಾಲಯದಲ್ಲಿ ಕಾಯಂ ಕೆಲಸ ಸಿಗಲಿಲ್ಲ. ಅವರ ಜೋಬನೇರ ವಾಸದ ಫಲಶ್ರುತಿಯೆಂದರೆ ಇನ್ನೊಂದು ಪ್ರವಾಸ ಕಥನ 'ನಾ ರಾಜಸ್ಥಾನದಲ್ಲಿ'. ಈ ಗ್ರಂಥ ಬಹಳ ಸ್ವಾರಸ್ಯವಾಗಿದೆ. ಇದರಲ್ಲಿ ಅವರು ತಮ್ಮ ಸಹೋದ್ಯೋಗಿಗಳು ಹಾಗೂ ಆ ವಿಶ್ವವಿದ್ಯಾಲಯದ ಆಗುಹೋಗುಗಳನ್ನು ಯಥಾವತ್ತಾಗಿ ವರ್ಣಿಸಿದ್ದಾರೆ. ನನ್ನ ನೆಂಟರೊಬ್ಬರು, ಕೇಂದ್ರ ಕೃಷಿ ಇಲಾಖೆಯಲ್ಲಿ ಕೆಲಸ ಮಾಡಿದವರು ಮತ್ತು ಉದಯಪುರ ವಿಶ್ವವಿದ್ಯಾಲಯದ ವಿದ್ಯಮಾನಗಳನ್ನು ಮತ್ತು ಅಲ್ಲಿ ಕೆಲಸ ಮಾಡುತ್ತಿದ್ದ ಪ್ರಾಧ್ಯಾಪಕರನ್ನು ಚೆನ್ನಾಗಿ ಬಲ್ಲವರು, ಕೃಷ್ಣಾನಂದರ ಈ ಬರಹವನ್ನು ಬಹುವಾಗಿ ಮೆಚ್ಚಿಕೊಂಡರು.

ಅಲ್ಲಿಂದ ಕೃಷ್ಣಾನಂದರು, ಇತಿಹಾಸ ಪ್ರಸಿದ್ಧ ಪ್ಲಾಸಿಯಲ್ಲಿ ಕಾಮನ್‌ವೆಲ್ತ್ ಸಂಸ್ಥೆ ನಡೆಸುತ್ತಿದ್ದ ಸಂಶೋಧನಾ ಕೇಂದ್ರದಲ್ಲಿ ಕೆಲಕಾಲ ದುಡಿದರು. ಅದರ ಫಲವಾಗಿ ಬಂಗಾಲಿಗಳನ್ನು ಕುರಿತು ಇನ್ನೊಂದು ಪ್ರವಾಸ ಕಥನ 'ವಂಗದರ್ಶನ' ಹೊರಬಂದಿತು. ಮುಂದೆ ಅವರ

ಬೆಂಗಳೂರನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು, ತಮ್ಮ ಹವ್ಯಾಸವಾದ ಛಾಯಾಚಿತ್ರಕಲೆಯನ್ನೇ ವೃತ್ತಿಯನ್ನಾಗಿ ಮಾಡಿಕೊಳ್ಳಬೇಕಾಯಿತು. ವೈಜ್ಞಾನಿಕ ಸಂಶೋಧಕರಿಗೆ ಅವಶ್ಯವಾದ ಛಾಯಾಚಿತ್ರಗಳ ಲ್ಯಾಬೊರೇಟರಿಯನ್ನು ಮಲ್ಲೇಶ್ವರದ ಸಂಪಿಗೆ ರಸ್ತೆಯಲ್ಲಿ ಪ್ರಾರಂಭಿಸಿದರು. ಅದು ಚೆನ್ನಾಗಿ ನಡೆಯಿತು ಎನ್ನುವುದನ್ನು ನಾನು ಅನೇಕ ಸಲ ಅಲ್ಲಿ ಹೋದಾಗ ನೋಡಿದ್ದೇನೆ. ಅವರು ಮಲ್ಲೇಶ್ವರದ 'ದತ್ತಪ್ರಸಾದ'ದಲ್ಲಿ ಕೆಲ ವರ್ಷವಿದ್ದು ಕೊನೆಗೆ ೧೯೮೩ರಲ್ಲಿ ತಮ್ಮ ಸ್ವಂತ ನಿವಾಸವಾದ 'ಶಶಿಕಿರಣ'ದ ೧೧೦ನೇ ನಂಬರಿನ ತಮ್ಮ ಫ್ಲ್ಯಾಟಿನಲ್ಲಿ ಇರಲಾರಂಭಿಸಿದರು. ಅವರು ಎಲ್ಲಿಯೇ ಇದ್ದೂ ತಮ್ಮ ಲ್ಯಾಬಿಗೆ ಪ್ರತಿದಿನವೂ ಕಾಲುನಡಿಗೆಯಿಂದ ಹೋಗಿಬರುತ್ತಿದ್ದರು. ಈ ನಡಿಗೆಯಿಂದ ಅವರ ಆರೋಗ್ಯ ಅತ್ಯುತ್ತಮವಾಗಿತ್ತು.

## ಅವರ ಸಂಕೋಚ ಸ್ವಭಾವ

ಕೃಷ್ಣಾನಂದರು ಬಹಳ ಸಂಕೋಚ ಸ್ವಭಾವದವರು. ಪಾರ್ಟಿಗಳನ್ನು ಕೊಡುವುದು ಮತ್ತು ಇತರರ ಪಾರ್ಟಿಗಳಿಗೆ ಹೋಗುವುದು ಅವರಿಗೆ ರುಚಿಸುತ್ತಿರಲಿಲ್ಲ. ಜ್ಯೋತ್ಸ್ನಾಗೆ ಪಿಹೆಚ್.ಡಿ. ಪದವಿ ಬಂದಾಗ "ನೀವು ಒಂದು ಪಾರ್ಟಿಕೊಡಿ. ಮತ್ತು ಕೃಷ್ಣಾನಂದರನ್ನು ಇತರರಿಗೆ ಪರಿಚಯಿಸಿ" ಎಂದು ನಾನು ಹೇಳಿದಾಗ "ಅವರಿಗೂ ಪಾರ್ಟಿಗೂ ಬಹಳ ದೂರ ಸರ್!" ಎಂದು ಜ್ಯೋತ್ಸ್ನಾ ಉದ್ಗರಿಸಿದ್ದು ನೆನಪಾಗುತ್ತದೆ. ಅವರು ಸಭೆ ಸಮ್ಮೇಳನಗಳಿಗೆ ಹೋಗಲೂ ಇಷ್ಟಪಡುತ್ತಿರಲಿಲ್ಲ. ನನಗೆ ಗೊತ್ತಿರುವ ಹಾಗೆ ಅವರು ಹೋದ ಮೊದಲಿನ ಸಮ್ಮೇಳನ, ಅವರೇ ಅಧ್ಯಕ್ಷರಾಗಿದ್ದ ಉತ್ತರಕನ್ನಡ ಜಿಲ್ಲೆಯ ಸಾಹಿತ್ಯ ಸಮ್ಮೇಳನ! ಅದಾದ ನಂತರ ಜ್ಯೋತ್ಸ್ನಾ ಜೊತೆಗೆ ಎರಡು ಸಲ ಧಾರವಾಡದ ಸಭೆಗಳಿಗೆ ಬಂದದ್ದು ನಮ್ಮನ್ನು ಭೇಟಿಯಾಗಿದ್ದು ಚಿರಸ್ಮರಣೀಯ. ಮೊದಲ ಬಾರಿ ೧೯೯೯ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಜಾನಪದ ವಿಭಾಗ-ನಿಯೋಜಿತ ಸಮ್ಮೇಳನಕ್ಕೆ ಕೃಷ್ಣಾನಂದರನ್ನು ಕರೆದಿದ್ದರು. ಆಗ ದಂಪತಿಗಳು ಬಂದಿದ್ದರು. ಕೃಷ್ಣಾನಂದರು ಧಾರವಾಡಕ್ಕೆ ಬರದೇ ೨೫ ವರ್ಷಗಳು ಕಳೆದಿದ್ದವು. ತಾನು ಓದಿದ ಕಾಲೇಜು, ವಿಶ್ವವಿದ್ಯಾಲಯಗಳನ್ನು ನೋಡಿದ್ದು, ಅನೇಕ ಪರಿಚಿತರನ್ನು ಭೇಟಿಮಾಡಿದ್ದು, ಅವರಿಗೆ ಬಹಳ ಸಂತೋಷವನ್ನುಂಟುಮಾಡಿರಲು ಸಾಕು. ನಮ್ಮ ಮನೆಗೆ ಬಂದಾಗ ನನ್ನ ಶ್ರೀಮತಿಯ ಹಾಗೂ ಮನೆಯ ಛಾಯಾಚಿತ್ರಗಳನ್ನು ತೆಗೆದರು. ನನ್ನ ಛಾಯಾಚಿತ್ರಗಳನ್ನು ಎಷ್ಟು ತೆಗೆದಿದ್ದಾರೋ ಅದರ ಲೆಕ್ಕವೇ ಇಲ್ಲ! ಪ್ರತಿಸಲ ತೆಗೆದಾಗಲೂ ಪ್ರತಿಗಳನ್ನು ಕೊಡುವುದು ಅವರ ಪದ್ಧತಿಯಾಗಿತ್ತು. ಜೀವನದ ಅನೇಕ ರಂಗಗಳಲ್ಲಿ ಮಿತವ್ಯಯವನ್ನು ಅನುಸರಿಸುತ್ತಿದ್ದ ಕೃಷ್ಣಾನಂದರು, ಛಾಯಾಚಿತ್ರ ಕ್ಷೇತ್ರದಲ್ಲಿ ಮಾಡುತ್ತಿದ್ದ ಖರ್ಚನ್ನು 'ದುಂದು' ಎಂದು ಯಾರಾದರೂ ಹೇಳಬಹುದು. ಆದರೆ ಈಚೆಗೆ ಅವರ ಮಗನು ಪ್ರಾರಂಭಿಸಿದ Internet website ದಿಂದಾಗಿ ಅವರ ಕಮ್ಮಟದಲ್ಲಿ ಅನಾಥವಾಗಿದ್ದ ಸಹಸ್ರಾರು ನೆಗೆಟಿವ್‌ಗಳು ಪಾಸಿಟಿವ್ ರೂಪ ಪಡೆದು ಜಗತ್ತಿನ ಮೂಲೆ ಮೂಲೆಗೂ ತಲುಪುವಂತೆ ಆಯಿತು.

ಈ ಭೇಟಿಯಲ್ಲಿ ನಡೆದ ಸಣ್ಣ ವಿಷಯದಿಂದ, ನನಗೂ ಕೃಷ್ಣಾನಂದರಿಗೂ ಇದ್ದ ಸಂಬಂಧವನ್ನು ತಿಳಿದುಕೊಳ್ಳಬಹುದು. ವಯಸ್ಸಿನ ಕಾರಣದಿಂದ ಪೇಟೆಗೆ ಹೋಗಿ ನನಗೆ ಅವಶ್ಯವಿದ್ದ ಸಾಮಾನನ್ನು ಕೊಂಡು ತರುವ ಸ್ಥಿತಿಯಲ್ಲಿ ನಾನಿರಲಿಲ್ಲ. ಕೃಷ್ಣಾನಂದರಿಂದ ಒಂದು ಒಳ್ಳೆಯ ಪೆನ್ನಿನ ಪರಿಚಯ ನನಗೆ ಆಗಿತ್ತು. ಅದು ಜೈನಾ ಪೆನ್ನು ಎಂದು ಕಾಣುತ್ತದೆ. ಹಿಂದೆ ಅವರೇ ನನಗೆ ಈ ಪೆನ್ ಕೊಟ್ಟಿದ್ದರು. ಈ ಭೇಟಿಯಲ್ಲಿ ಅವರ ಜೇಬಿನಲ್ಲಿ ಜೈನಾಪೆನ್ ಇದ್ದುದನ್ನು ನೋಡಿ ಯಾರನ್ನೂ ಏನನ್ನೂ ಕೇಳದವನು, "ಆ ಪೆನ್ನನ್ನು ನನಗೆ ಕೊಡಿ! ಎಂದು ಕೇಳಿದ ಕೂಡಲೇ ಅವರು ಸಂತೋಷದಿಂದ ಕೊಟ್ಟರು. ನನ್ನ ಈ ನಡತೆ ನನ್ನ ಶ್ರೀಮತಿಯವರಿಗೆ ಸುತರಾಂ ಹಿಡಿಸಲಿಲ್ಲ! ಅದನ್ನವರು ಆ ಬಳಿಕ ವ್ಯಕ್ತಪಡಿಸಿದರು. ಆದರೆ ನನಗೆ ಪೆನ್ ಬೇಕಿತ್ತು. ಅವರು ಅದನ್ನು ನನಗೆ ಬಹಳ ಪ್ರೀತಿಯಿಂದ ಕೊಡುತ್ತಾರೆಂದೂ ಗೊತ್ತಿತ್ತು. ಯಾಕೆಂದರೆ ಹಿಂದಿನದನ್ನೂ ತುಂಬ ಖುಷಿಯಿಂದ ತಾವಾಗಿ ತಂದುಕೊಟ್ಟಿದ್ದರು. ಹೀಗಿರುವಾಗ ನಾನಾಗಿ ಈ ಬಾರಿ ಕೇಳಿದರೆ ಏನು ತಪ್ಪು? ಎಂದು ನನ್ನಷ್ಟಕ್ಕೆ ಸಮಾಧಾನ ಮಾಡಿಕೊಂಡೆ. ನಾನು ತಿಳಿದುಕೊಂಡದ್ದು ಅಷ್ಟು ತಪ್ಪಲ್ಲವೆಂದು, ಜ್ಯೋತ್ಸ್ನಾ ತಾನಾಗಿ ಬರೆದ ಪತ್ರದಿಂದ ತಿಳಿಯಿತು. "ಕಾಮತರಿಂದ ನೀವಾಗಿ ಪೆನ್ ಕೇಳಿ ಪಡೆದದ್ದು ಅವರಿಗೆ ಹೆಚ್ಚಿನ ಸಂತೋಷಕೊಟ್ಟಿದೆ. ಅವರ ಬಳಿ ಇರುವುದಕ್ಕಿಂತ ನಿಮ್ಮ ಬಳಿ ಇದ್ದರೆ ಅದು ಹೆಚ್ಚು ಕೆಲಸಮಾಡುತ್ತದೆ ಎಂಬುದು ಅವರ ಸ್ಪಷ್ಟ ಅಭಿಪ್ರಾಯ! ನಿಮಗೆ ಅಂಥ ಇನ್ನೂ ಒಂದೆರಡು ಪೆನ್‌ಗಳನ್ನು ಒದಗಿಸಲು ಸಿದ್ಧನಿದ್ದೇನೆಂದು ಬರಿ! ಎಂದು ಹೇಳಿದ್ದಾರೆ". ಆ ಪೆನ್ನಿನ ಅದೃಷ್ಟ! ಸೋಮದೇವ ಸೂರಿಯ **ನೀತಿವಾಕ್ಯಾಮೃತ** (ನಾನಾಗ ಈ ಗ್ರಂಥದ ಸಂಪಾದನಾ ಕಾರ್ಯದಲ್ಲಿ ನಿರತನಾಗಿದ್ದೆ) ದ ಕರಡು ತಿದ್ದಲು ಅದು ದುಡಿಯಿತು.

ಎರಡನೇ ಬಾರಿ ಅವರು ಬಂದದ್ದು ಅವರ ಪುಸ್ತಕ 'ಮರುಪಯಣ'ದ ಬಿಡುಗಡೆ ಸಮಾರಂಭಕ್ಕೆ. ಆಗ ಮೊದಲನೇ ಸಲ ಅದ ಅನುಭವದ ಪುನರಾವೃತ್ತಿ ಆಯಿತು. ಇನ್ನು ಕೃಷ್ಣಾನಂದರು ಸಭೆಗಳಿಗೆ ಹೋಗಲು ಹಿಂಜರಿಯಲಾರರೆಂದು ತಿಳಿದೆವು. ಜ್ಯೋತ್ಸ್ನಾ, ೨೦೦೧ನೇ ವರ್ಷದ ಉಡುಪಿಯ ಕರ್ನಾಟಕ ಇತಿಹಾಸ ಅಕಾಡೆಮಿ ಸಮ್ಮೇಳನದ ಅಧ್ಯಕ್ಷರಾದಾಗ ಅವರ ಜೊತೆಗೆ ಉಡುಪಿಗೆ ಹೋಗಲು ಹಿಂದೆಮುಂದೆ ನೋಡಿದರು. ಡಾ॥ ಸೂರ್ಯನಾಥ ಕಾಮತರೂ, ಜ್ಯೋತ್ಸ್ನಾ ತಿಳಿಸಿದಂತೆ ಮುಖ್ಯವಾಗಿ ನನ್ನ ಒತ್ತಾಯದಿಂದ ಅವರೂ ಹೋದರು. ಯಥಾಪ್ರಕಾರ, ಅವರ ಕ್ಯಾಮರಾಕ್ಕೆ ಬಿಡುವಿಲ್ಲದ ಕೆಲಸವಾಯ್ತು. ನಮ್ಮೆಲ್ಲರ ಛಾಯಾಚಿತ್ರಗಳನ್ನು ತೆಗೆದರು.

## ಬಿ.ಜಿ.ಎಲ್. ಸ್ವಾಮಿ ಹಾಗೂ ಕೃಷ್ಣಾನಂದ ಕಾಮತ

'ಮರುಪಯಣ' ಅವರ ಕೊನೆಯಕೃತಿ. ಅದನ್ನು ಕೆಲವರು ಬಿ.ಜಿ.ಎಲ್. ಸ್ವಾಮಿಯವರ 'ಹಸಿರು ಹೊನ್ನು' ಕೃತಿಗೆ ಹೋಲಿಸುತ್ತಾರೆ. ಎರಡೂ ಕೃತಿಗಳು ಆಯಾ ಲೇಖಕರ ಹೆಸರುಗಳನ್ನು ಕನ್ನಡ ಸಾಹಿತ್ಯದಲ್ಲಿ ಶಾಶ್ವತವಾಗಿ ಉಳಿಯುವ ಹಾಗೆ ಮಾಡುವದರಲ್ಲಿ ಸಂದೇಹವಿಲ್ಲ. ಕೃಷ್ಣಾನಂದರೂ ಸ್ವಾಮಿಯರೂ ಶ್ರೇಷ್ಠ ವಿಜ್ಞಾನಿಗಳಾಗಿ, ಶ್ರೇಷ್ಠ ಕನ್ನಡ ಲೇಖಕರಾಗಿದ್ದುದು ಕನ್ನಡ ನಾಡಿನ ಪುಣ್ಯ. ಡಾ॥ ಸ್ವಾಮಿಯವರಿಗೆ ಇದ್ದ ಕೆಲ ಅನುಕೂಲಗಳು ಕೃಷ್ಣಾನಂದರಿಗೆ ಇರಲಿಲ್ಲ. ಸ್ವಾಮಿಯವರು ಕನ್ನಡ ಸಾಹಿತ್ಯ ಪ್ರಪಂಚದ ದಿಗ್ಗಜರಾಗಿದ್ದ ಡಿ.ವಿ. ಗುಂಡಪ್ಪನವರ ಮಕ್ಕಳು. ಕೃಷ್ಣಾನಂದರು ಹೊನ್ನಾವರದ ಒಂದು ವ್ಯಾಪಾರಿ ಮನೆತನದವರು. ಸ್ವಾಮಿಯವರು ಮದ್ರಾಸಿನ ಪ್ರಖ್ಯಾತ ಪ್ರೆಸಿಡೆನ್ಸಿ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಸಸ್ಯಶಾಸ್ತ್ರದಲ್ಲಿ ಸಂಶೋಧಕರೆಂದು ಅಂತಾರಾಷ್ಟ್ರೀಯ ಖ್ಯಾತಿಯ ವಿಜ್ಞಾನಿಗಳಾಗಿದ್ದರು. ಕೃಷ್ಣಾನಂದರು ನ್ಯೂಯಾರ್ಕ್ ವಿಶ್ವವಿದ್ಯಾಲಯದ ಶಿಷ್ಯವೇತನ ಪಡೆದು ಕೀಟಶಾಸ್ತ್ರದಲ್ಲಿ ಪಿಹೆಚ್.ಡಿ. ಪದವಿಯನ್ನು ಪಡೆದರು. ಆದರೆ ಭಾರತದ ಯಾವ ವಿಶ್ವವಿದ್ಯಾಲಯದಲ್ಲೂ ಅವರಿಗೆ ನೌಕರಿ ಸಿಗಲಿಲ್ಲ. ಕೊನೆಗೆ ಹಿಂದೆ ಹೇಳಿದಂತೆ, ಅವರ ಹವ್ಯಾಸವಾಗಿದ್ದ ಛಾಯಾಚಿತ್ರಕಲೆಯಿಂದ ಉಪಜೀವನ ನಡೆಸಬೇಕಾಯಿತು.

ಸ್ವಾಮಿ ಮತ್ತು ಕೃಷ್ಣಾನಂದರು ಕನ್ನಡದಲ್ಲಿ ನುರಿತ ಲೇಖಕರಾಗಿದ್ದರೂ ಅವರ ಮಾತೃಭಾಷೆ ಕನ್ನಡವಾಗಿರಲಿಲ್ಲ. ಸ್ವಾಮಿಯವರ ಮನೆ ಮಾತು ತಮಿಳು. ಕೃಷ್ಣಾನಂದರದು ಕೊಂಕಣಿ. ಸ್ವಾಮಿಯವರು ತಮ್ಮ ವೃತ್ತಿಜೀವನವನ್ನು ತಮಿಳುನಾಡಿನಲ್ಲಿಯೇ ಕಳೆದರು. ಅವರು ತಮಿಳಿನಲ್ಲಿ ಬರೆಯಲಿಲ್ಲ. ತಮಿಳುನಾಡಿನ ಬಗ್ಗೆ ಬರೆದಿದ್ದಾರೆ. 'ತಮಿಳು ತಲೆಗಳ ನಡುವೆ' ಮತ್ತು 'ಕಾಲೇಜುರಂಗ' ಈ ಎರಡೂ ಪುಸ್ತಕಗಳು, ತಮಿಳು ಶಿಕ್ಷಣ ಕ್ಷೇತ್ರದಲ್ಲಿಯ ರಾಜಕಾರಣಿಗಳನ್ನು ಅಪಹಾಸ್ಯಕ್ಕೆ ಗುರಿಮಾಡಿದ ಕೃತಿಗಳು. ತಮಿಳು ನಾಡಿನ ಶೈವ ಆಚಾರ್ಯರ ಬಗೆಗಿನ ಇವರ ಬರೆಹ, ಇತಿಹಾಸ ಸಂಶೋಧನೆಯಲ್ಲಿ ಗಣ್ಯಸ್ಥಾನವನ್ನು ದೊರಕಿಸಿಕೊಟ್ಟಿದೆ. ಕೃಷ್ಣಾನಂದರಿಗೆ ಕೊಂಕಣಿ ಭಾಷೆ ಮತ್ತು ಕೊಂಕಣಿಗರ ಬಗ್ಗೆ ಸಹಜಾಭಿಮಾನವಿತ್ತು. ಆ ಭಾಷೆಯ ಉಗಮ ಮತ್ತು ಇತಿಹಾಸಗಳ ಬಗೆಗೆ ಸಾರ್ವಜನಿಕರು ತಿಳಿದುಕೊಳ್ಳಬೇಕಾದುದನ್ನು 'ಅಕ್ಷತ' ಎನ್ನುವ ಅವರ ಪುಸ್ತಕದಲ್ಲಿ ಬರೆದಿದ್ದಾರೆ. ಕಾವಿಕಲೆಯ ಬಗ್ಗೆ ಕೊಂಕಣಿಯಲ್ಲಿ ಬರೆಯುವ ಸಂದರ್ಭ ಒದಗಿದಾಗ ದಂಪತಿಗಳು ಸೇರಿಯೇ ಆ ಕೆಲಸ ಮುಗಿಸಿದರು.

ಸ್ವಾಮಿ ಮತ್ತು ಕೃಷ್ಣಾನಂದರಲ್ಲಿ ಇನ್ನೂ ಒಂದು ಸಾಮ್ಯ. ಇಬ್ಬರೂ ಉದಯಯೋನ್ಮುಖ ಸಂಶೋಧಕರಿಗೆ, ಲೇಖಕರಿಗೆ ಉತ್ತೇಜನ ನೀಡುತ್ತಿದ್ದರು. ಇಬ್ಬರೂ ಡಾ॥ ಆರ್. ಶೇಷಶಾಸ್ತ್ರಿಗಳಿಗೆ ಪ್ರತ್ಯೇಕವಾಗಿಯೇ ಆ ಉತ್ತೇಜನವನ್ನು ನೀಡಿದ್ದು ಒಂದು ವಿಶೇಷ!.

## ಕಲೆಯ ಆರಾಧಕರು

ಕೃಷ್ಣಾನಂದರಿಗೆ ವಿಜ್ಞಾನ ಮತ್ತು ಸಾಹಿತ್ಯಕ್ಷೇತ್ರದಲ್ಲಿ ಇದ್ದಷ್ಟೇ ಕಲೆಯಲ್ಲಿಯೂ ವಿಶೇಷ ಆಸಕ್ತಿ ಇತ್ತು. ಕಾವಿಕಲೆಯನ್ನು ಒಂದು ಶಿಷ್ಟ ಹಾಗೂ ಜಾನಪದ ಕಲೆಯ ಪ್ರಕಾರವೆಂದು ಗುರುತಿಸಿ, ಅದಕ್ಕೆ ಯೋಗ್ಯಸ್ಥಾನವನ್ನು ದೊರಕಿಸಿದ್ದು ಅವರ ಪ್ರಾಮುಖ್ಯತೆ. ಕನ್ನಡದಲ್ಲಿ ಹಾಗೂ ಕೊಂಕಣಿಯಲ್ಲಿ ಈ ಕಲೆಯ ಬಗ್ಗೆ ಅಧಿಕೃತವಾಗಿ ಬರೆದಿದ್ದಾರೆ. ಸೀಬಿಯ ಚಿತ್ರಗಳು ಹಾಗೂ ಲೇಪಾಕ್ಷಿಯ ಚಿತ್ರಗಳ ಬಗೆಗೂ ಬರೆದಿದ್ದಾರೆ. ಛಾಯಾಚಿತ್ರಕಲೆಯಂತೆ ಚಿತ್ರಕಲೆಯಲ್ಲೂ ಸಹ ಸ್ವಂತ ಪರಿಶ್ರಮದಿಂದ ಪರಿಣತಿಯನ್ನು ಪಡೆದಿದ್ದರು. ಇವೆರಡೂ ಪ್ರಕಾರಗಳು ಒಂದಕ್ಕೊಂದು ಪೂರಕವಾಗಿದೆ ಎಂಬುದನ್ನು ಚೆನ್ನಾಗಿ ಅರಿತಿದ್ದರು. ಅವರ ಪ್ರಕಾರ ಚಿತ್ರಕಾರನು ತನ್ನ ಕಲಾಕೃತಿಯನ್ನು ಛಾಯಾಚಿತ್ರದೊಂದಿಗೆ ಸ್ಪರ್ಧಿಸಬೇಕೆಂದು ಸಕಲ ಪ್ರಯತ್ನ ಮಾಡುವಂತೆ, ಛಾಯಾಚಿತ್ರಕಾರನೂ ಕ್ಯಾಮರಾ ಸೆರೆಹಿಡಿದುದು ವಾಸ್ತವಿಕ ಚಿತ್ರದಷ್ಟು ಸುಂದರ ಕಲಾಕೃತಿಯನ್ನಾಗಿಸಬೇಕೆಂದು ಕನಸು ಕಾಣುತ್ತಿರುತ್ತಾನೆ. ಇದನ್ನು ಸಾಧಿಸುವದಕ್ಕಾಗಿ ಲಭ್ಯವಿರುವ ಸಾಧನಗಳು

ಅಸಂಖ್ಯಾತ. ಆದರೆ ಅವುಗಳಿಗಿಂತ ಕ್ಯಾಮರಾ ಹೊತ್ತವರ ಕಲಾಭಿರುಚಿ, ಪರಿಶ್ರಮ, ಅನುಭವ, ಮತ್ತು ಶಿಸ್ತುಗಳು ಮಾತ್ರ ಅತ್ಯುತ್ತಮ ಛಾಯಾಚಿತ್ರಗಳನ್ನು ಕೊಡಬಲ್ಲವು. ಇಂತಹ ಛಾಯಾಚಿತ್ರಗಳು ನೆಳಲು-ಬೆಳಕುಗಳ ಚಮತ್ಕಾರವನ್ನು ಒಳಗೊಂಡು, ಪ್ರೇಕ್ಷಕನ ಅಂತರಾಳವನ್ನು ತಟ್ಟುತ್ತವೆ ಎಂಬುದು ಇವರ ಅಭಿಪ್ರಾಯ. ಎರಡೂ ಮಾಧ್ಯಮಗಳಲ್ಲಿ ಲೇಖಕರಿಗೆ ಪರಿಶ್ರಮವಿದ್ದುದರಿಂದ ಈ ಅಭಿಪ್ರಾಯ ಮಹತ್ವದ್ದಾಗಿದೆ.

ಕೃಷ್ಣಾನಂದರ ಛಾಯಾಚಿತ್ರ ಕಲೆ ಮತ್ತ ರೇಖಾಚಿತ್ರ ಪ್ರಾವೀಣ್ಯವನ್ನು ಜ್ಯೋತ್ಸ್ನಾರ ಸಂಶೋಧನಾ ಲೇಖನಗಳಲ್ಲಿಯೂ ಕೃತಿಗಳಲ್ಲಿಯೂ ಕಾಣಬಹುದು. ಅವುಗಳಿಂದ ಅವರ ಬರಹಕ್ಕೆ ಎಲ್ಲಿಲ್ಲದ ಮೆರುಗು ಬಂದಿದೆ. ನಮ್ಮ ಪ್ರಾಚೀನ ಶಿಲ್ಪಗಳಲ್ಲಿ ಅಂದಿನವರ ಸಾಮಾಜಿಕ ಜೀವನದ ಚಿತ್ರಗಳು ದೊರಕುತ್ತವೆ, ಎಂಬುವನ್ನು ಪತ್ತೆ ಹಚ್ಚುವಲ್ಲಿ ಇಬ್ಬರೂ ನಿಸ್ಸೀಮರು! ಭಟ್ಕಳದಲ್ಲಿಯ ದೇವಸ್ಥಾನದ ಶಿಲ್ಪಗಳಲ್ಲಿ ಆ ಕಾಲದ ಜನಜೀವನ ಅತ್ಯಂತ ವಾಸ್ತವಿಕವಾಗಿ ಚಿತ್ರಿತವಾಗಿದೆಯೆಂದು ಇವರು ಪತ್ತೆ ಮಾಡಿರುವದು ಒಂದು ವಿಶೇಷ.

ಕೃಷ್ಣಾನಂದರ ಛಾಯಾಚಿತ್ರಗಳ ಸಂಗ್ರಹ ಒಂದು ಮಹಾ ಸಾಗರ: ಅದರ ಲಾಭವನ್ನು ಅನೇಕರು ಪಡೆದಿದ್ದಾರೆ. ಅವನ್ನು ಒದಗಿಸುವಾಗ ಅವರಿಗಾದ ಶ್ರಮ ಅವರಿಗೇ ಗೊತ್ತು! ಇವರ ಲ್ಯಾಬ್ ಸಣ್ಣದಾಗಿತ್ತು. ಅದರ ಹಿಂದಿನ ಅರ್ಧಭಾಗ ಇವರ ಕತ್ತಲೆ ಕೋಣೆಯಾಗಿತ್ತು. ಗ್ರಾಹಕರಿಗೆ, ಸ್ನೇಹಿತರಿಗೆ, ಸ್ವಂತಕ್ಕೆ, ಭಾವಚಿತ್ರಗಳನ್ನು ತಯಾರಿಸುವಾಗ ಗಾಳಿಬೆಳಕುಗಳಿಲ್ಲದೇ ಇದ್ದ dark room ನಲ್ಲಿ ಕೆಲಸ ಮಾಡದೆ, ವಿಧಿಯೇ ಇರುತ್ತಿರಲಿಲ್ಲ. ಈ ಅನುಭವಕ್ಕೆ ವ್ಯತಿರಿಕ್ತವಾದ ಅವರ ತೀವ್ರ ಆಸಕ್ತಿ, ಚಿತ್ರಗಳನ್ನು ಕ್ಲಿಕ್ಕಿಸಲು ನಾಡು, ದೇಶವಿದೇ ಸುತ್ತಾಡುವದು. ಇಂತಹ ತಿರುಗಾಟದಲ್ಲಿ ಇವರ ಜಿಲ್ಲೆಯಾದ ಉತ್ತರ ಕನ್ನಡದಲ್ಲಿ ೧೯೮೩ರಲ್ಲಿ ಇವರು ತಿರುಗಾಡಿದ್ದು ವಿಶೇಷವಾದುದು. ಆ ವರ್ಷ ಡಾ॥ ಸೂರ್ಯನಾಥ ಕಾಮತರು, ಕೃಷ್ಣಾನಂದರನ್ನು ಆ ಜಿಲ್ಲೆಯ ಗೆಝೆಟಿಯರಿಗೆ ಅವಶ್ಯವಾದ ಛಾಯಾಚಿತ್ರಗಳನ್ನು ತೆಗೆಯಲು ಕರೆದುಕೊಂಡುಹೋಗಿದ್ದರು. ಈ ಕೆಲಸದಿಂದ ಅವರಿಗೆ ಬಹಳ ಸಮಾಧಾನವಾಗಿರಬೇಕು. ತನ್ನ ಜಿಲ್ಲೆಯ ಬೇರೆಬೇರೆ ಜನಾಂಗಗಳ ಆಳವಾದ ಅಭ್ಯಾಸ ಸಾಧ್ಯವಾಯಿತು. 'ಅಕ್ಷತ' ಎನ್ನುವ ಇವರ ಪ್ರಬಂಧ ಸಂಕಲನದಲ್ಲಿ ಉತ್ತರಕನ್ನಡದ ಗೌಳಿಗಳು, ಮಾವಿಳ್ಳೆಯರು, ಹಾಲಕ್ಕಿಗೌಡರು, ಸಾರಸ್ವತರು, ಖಾರ್ವಿಯರು, ಸಿದ್ದಿ, ನವಾಯತರು ಹಾಗೂ ಕ್ರೈಸ್ತರ ರೀತಿ-ರಿವಾಜುಗಳನ್ನು ಜನಸಾಮಾನ್ಯರ ಮನ ಮುಟ್ಟುವಂತೆ ವಿವರಿಸಿದ್ದಾರೆ

## ಆದಿವಾಸಿಗಳ ಅಧ್ಯಯನ

೧೯೭೭ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕೃಷ್ಣಾನಂದರಿಗೆ ಶಿಷ್ಯವೇತನವನ್ನು ಕೊಟ್ಟು ಮಧ್ಯಪ್ರದೇಶದಲ್ಲಿ ಪ್ರವಾಸ ಮಾಡುವ ಅವಕಾಶವನ್ನು ಕಲ್ಪಿಸಿತು. ಈ ಪ್ರವಾಸದ ಪರಿಣಾಮವನ್ನು ಕೃಷ್ಣಾನಂದರ ೩ ಪುಸ್ತಕಗಳಲ್ಲಿ ನೋಡಬಹುದು. ಮೊದಲನೆಯದು ೧೯೮೨ರಲ್ಲಿ ಧಾರವಾಡದ ಮನೋಹರ ಗ್ರಂಥಮಾಲೆಯಿಂದ ಹೊರಬಂದ 'ಕಾಲರಂಗ', ಎರಡನೆಯದು ಬೆಂಗಳೂರು ಪುಸ್ತಕಾಲಯದವರು ಪ್ರಕಟಿಸಿದ ೧೯೯೧ರ 'ಬಸ್ತರ ಪ್ರವಾಸ'. ಮೂರನೆಯದು ೧೯೯೩ರಲ್ಲಿ ಹೊರಬಂದ 'ಮಧ್ಯಪ್ರದೇಶದ ಮಡಿಲಲ್ಲಿ'.

'ಬಸ್ತರ ಪ್ರವಾಸ'ದಲ್ಲಿ ಕೃಷ್ಣಾನಂದರು ಮಾಡಿರುವ ಆದಿವಾಸಿಗಳ ಜೀವನವರ್ಣನೆ ಅನನ್ಯವಾದದ್ದು, ವೆರಿಯರ್ ಎಲ್ವಿನ್ ಎನ್ನುವ ಇಂಗ್ಲಿಷ್ ಲೇಖಕ ಹಾಗೂ ಪಾದ್ರಿ, ಇವರಿಗೆ ಅಚ್ಚುಮೆಚ್ಚು. ಈ ಪುಸ್ತಕದಲ್ಲಿ ಆತನಿಗೇ ಒಂದು ಅಧ್ಯಾಯ ಮೀಸಲಿಟ್ಟಿದ್ದಾರೆ. ಎಲ್ವಿನ್ನನು ಆದಿವಾಸಿಗಳ ಜೀವನಕ್ಕೆ ಮಾರುಹೋದ ಹಾಗೆ ಇವರೂ ಮಾರುಹೋಗಿದ್ದರು. ಆದಿವಾಸಿಗಳನ್ನು ಕ್ರೈಸ್ತಮತಕ್ಕೆ ಧರ್ಮಾಂತರ ಮಾಡಲೆಂದು ನೇಮಿಸಲ್ಪಟ್ಟ ಎಲ್ವಿನ್ನನು ತಾನೇ ಇಲ್ಲಿಯವರ ಮತವನ್ನು ಸ್ವೀಕರಿಸಿದನು! ಆದಿವಾಸಿ ತರುಣಿಯನ್ನು ಮದುವೆಯಾಗಿ ಮಕ್ಕಳನ್ನು ಪಡೆದನು. ಆದಿವಾಸಿಗಳ ಕಲ್ಯಾಣಕ್ಕಾಗಿ ತನ್ನನ್ನು ಸಂಪೂರ್ಣವಾಗಿ ವಿನಿಯೋಗಿಸಿಕೊಂಡನು. ಭಾರತ ಸರ್ಕಾರಕ್ಕೆ ಆದಿವಾಸಿ ಕಲ್ಯಾಣದ ಸಲಹಾಕಾರನಾಗಿಯೂ ಇದ್ದ. ಆದರೆ ಆ ಸಲಹೆಗಳನ್ನು ಕಾರ್ಯರೂಪಕ್ಕೆ ತರುವ ವಿಕೃತ ವಿಧಾನದಿಂದಾಗಿ ಆದಿವಾಸಿಗಳಿಗೆ ಒಳಿತು ಆಗುವ ಬದಲು ಘೋರ ಅನ್ಯಾಯವಾಗಿದೆ. ಅದಕ್ಕೆ ಕೃಷ್ಣಾನಂದರು ಈ ರೀತಿ ತಮ್ಮ ಅಸಂತೋಷವನ್ನು ವ್ಯಕ್ತಪಡಿಸುತ್ತಾರೆ. "ಸ್ವಾತಂತ್ರ್ಯ ಬಂದು ನಲವತ್ತಾರು ವರ್ಷಗಳು ಜಾರಿಕೊಂಡ ಬಳಿಕವೂ ನಾವು ನಮ್ಮ ಈ ದುರ್ದೈವಿ ಬಾಂಧವರನ್ನು ನಡೆಸಿಕೊಳ್ಳುವ ಕ್ರೂರ ರೀತಿಯನ್ನು ಕಂಡರೆ, ಎಲ್ವಿನ್ನನ ಆತ್ಮ ನೋವಿನಿಂದ ನರಳುತ್ತಿರಬೇಕು".

ಬಸ್ತಾರದ ಆದಿವಾಸಿಗಳೂ ಇತರ ಎಲ್ಲ ಆದಿವಾಸಿಗಳಂತೆ ಪರಕೀಯರನ್ನು ದೂರ ಇಟ್ಟಿರುತ್ತಾರೆ. ಅವರ ವಿಶ್ವಾಸವನ್ನು ಗಳಿಸಿದವರಿಗೆ ಮಾತ್ರ ತಮ್ಮ ಜೀವನ ಪದ್ಧತಿಯನ್ನು ಅಭ್ಯಸಿಸಲು ಅವಕಾಶವನ್ನು ಕೊಡುತ್ತಾರೆ. ಕೃಷ್ಣಾನಂದರು ಈ ವಿಶ್ವಾಸವನ್ನು ಸಂಪೂರ್ಣವಾಗಿ ಗಳಿಸಿದರು. ಆದ್ದರಿಂದ ಈ ಆದಿವಾಸಿಗಳ ಜೀವನ ವಿಧಾನವನ್ನು ತೀರ ನಿಕಟವಾಗಿ ತಿಳಿದು ಕೊಳ್ಳಲು ಸಹಾಯವಾಯಿತು. ಆದಿವಾಸಿಗಳ ಜೀವನ ಎಷ್ಟು ಪರಿಪೂರ್ಣವಾಗಿತ್ತು, ಎನ್ನುವುದಕ್ಕೆ ಕೃಷ್ಣಾನಂದರು ಹೀಗೆ ಉದ್ಗರಿಸುತ್ತಾರೆ. "ಆದಿವಾಸಿ ತನಗೆ ಬೇಕಾದ ಮನೆಕಟ್ಟುತ್ತಿದ್ದ, ಕೃಷಿಮಾಡುತ್ತಿದ್ದ. ಬೇಟೆಯಾಡುತ್ತಿದ್ದ, ಮೀನು ಹಿಡಿಯುತ್ತಿದ್ದ. ಮರ ಹತ್ತುತ್ತಿದ್ದ, ಬಾವಿಯಲ್ಲಿ ಇಳಿಯುತ್ತಿದ್ದ. ವೈದ್ಯ, ಬಡಗಿ, ಕಮ್ಮಾರ, ನಾಯಿಂದರ ಕೆಲಸಗಳೆಲ್ಲ ಅವನಿಗೆ ಬರುತ್ತಿದ್ದವು. ಪೋಲಿಸರು ಅವನಿಗೆ ಬೇಕಿರಲಿಲ್ಲ. ಅವನಿಗೆ ಸುಳ್ಳು ಹೇಳುವದು ಗೊತ್ತಿರಲಿಲ್ಲ. ಮೊನ್ನೆ ಮೊನ್ನೆಯವರೆಗೂ ಇಂಥ ಪ್ರಜೆಗಳು ನಮ್ಮ ದೇಶದಲ್ಲಿ ಇದ್ದರೆಂಬುದು ನಂಬುವದು ಕಷ್ಟ!". ಮಹಾತ್ಮಾ ಗಾಂಧಿಯವರ, ಪ್ರತಿಯೊಬ್ಬ ವ್ಯಕ್ತಿಯೂ, ಪ್ರತಿ ಹಳ್ಳಿಯೂ ಸರ್ವತಂತ್ರ ಸ್ವತಂತ್ರವಾಗಬೇಕನ್ನುವ ಕನಸನ್ನು ಆದಿವಾಸಿಯು ನನಸುಮಾಡಿದ್ದ. ಅಂಥವನನ್ನು ನಾವು ನಿರ್ಗತಿಕನನ್ನಾಗಿ ಮಾಡಿದ್ದೇವೆ. ಅವನ ಕೆಲವು ಉತ್ತಮ ಸಂಪ್ರದಾಯಗಳು ಸುಶಿಕ್ಷಿತರೆನಿಸಿಕೊಳ್ಳುವ ನಮಗೆ ಮಾರ್ಗದರ್ಶಕವಾಗಬಲ್ಲುದು" ಎಂಬುದು ಕೃಷ್ಣಾನಂದರ ಮತ.

"ಪಟ್ಟಣದವರು ಬಳಸುವ ಯಾವ ಆಧುನಿಕ ಸಲಕರಣೆಗಳೂ ಈ ಆದಿವಾಸಿಗಳಿಗೆ ಲಭ್ಯವಿಲ್ಲ. ಆದರೆ ಅವರದೇ ಆದ ನೆಮ್ಮದಿಯ ಜೀವನ ನಡೆಸಲು ಏನೇನೂ ಕೊರತೆ ಇರಲಿಲ್ಲ. ಅಮೇರಿಕನ್ನರಂತೆ ಧನಸಂಪಾದನೆಯೇ ಸುಖದ ಹೆದ್ದಾರಿ, ಎಂಬ ಸೂತ್ರವನ್ನು ನೆಚ್ಚಿಕೊಳ್ಳುವದಕ್ಕಿಂತ ಹಣದ ಅವಶ್ಯಕತೆಯೇ ಇಲ್ಲದ ಈ ಆದಿವಾಸಿಗಳ ಆದರ್ಶವನ್ನು ನಾವು ಏಕೆ ಬಳಸಬಾರದು?" ಎಂದು ಪ್ರಶ್ನಿಸಿದ್ದಾರೆ, ಹಾಗೇನಾದರೂ ಸಾಧ್ಯವಾದಲ್ಲಿ ಆಧುನಿಕರ ಕೊನೆಯಿಲ್ಲದ ಅಸಂತೋಷಕ್ಕೆ ಆಸ್ಪದವೇ ಇರುತ್ತಿರಲಿಲ್ಲ.

ಅತ್ಯಾಧುನಿಕರು ಬಿಡಿಸಲು ಹೆಣಗುವ ಯುವ ಜನರ ಸಮಸ್ಯೆಗಳನ್ನು, 'ಮುರಿಯ'ರೆಂಬ ಆದಿವಾಸಿಗಳು ಯಾವಾಗಲೋ ಹೋಗಲಾಡಿಸಿದ್ದಾರೆ. ಇವರಲ್ಲಿ ಗಂಡು ಹೆಣ್ಣು ಎಂಬ ಅಂತರವಿಲ್ಲ. ಯುವಕ ಯುವತಿಯರು ಜತೆಜತೆಯಾಗಿ ಉಣ್ಣುತ್ತಾರೆ, ಉಡುತ್ತಾರೆ, ನದಿಯಲ್ಲಿ ಒಟ್ಟಾಗಿ ಬಟ್ಟೆಯಿಲ್ಲದೆ ಸ್ನಾನಮಾಡುತ್ತಾರೆ. ಒಂದೇ ಚಾಪೆಯ ಮೇಲೆ ಮಲಗುತ್ತಾರೆ. ಇವರೆಲ್ಲ ಸೇರಿ ಸಂತೆಗೆ, ಜಾತ್ರೆಗೆ, ನೃತ್ಯಕ್ಕೆ ಕೂಡಿ ಹೋಗುವುದನ್ನು ನೋಡಿ, ಕೃಷ್ಣಾನಂದರು ಪ್ರಶ್ನಿಸುತ್ತಾರೆ, 'ಸುಸಂಸ್ಕೃತರು ನಾವೋ? ಅವರೋ?' ಇವರ ಪ್ರತಿಯೊಂದು ಹಳ್ಳಿಗೂ ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಮತ್ತು ದೈನಂದಿನ ಜೀವನೋಪಯೋಗಿ ಕೆಲಸಕ್ಕಾಗಿ ಒಂದು ಕೇಂದ್ರ ಇರುತ್ತಿತ್ತು. ಇದರ ಹೆಸರು ಘೋಟುಲ್. ಇದೊಂದು ಜೀವಂತ ವಿದ್ಯಾಲಯ. ಇಲ್ಲಿ ದಿನವೂ ಬಾಳಿ ಬದುಕುವ ಬಗ್ಗೆ ವಿದ್ಯೆ ನೀಡಲಾಗುತ್ತದೆ. ಇದರ ನಿರ್ವಹಣೆಗೆ ಊರವರು ಹೊಲಗಳನ್ನು ಬಿಟ್ಟುಕೊಡುತ್ತಾರೆ. ಇದರ ಆವಾರದಲ್ಲಿ ಬೆಳೆಗಳನ್ನು, ಕಾಯಿಪಲ್ಲೆಗಳನ್ನು, ಎಲ್ಲರೂ ಸೇರಿ ಬೆಳೆಸುತ್ತಾರೆ. ಇದು ವಿದ್ಯಾಲಯವೂ ಹೌದು, ಕ್ಲಬ್ಬೂ ಹೌದು. ಮೇಲ್ನೋಟಕ್ಕೆ ಇಂತಹ ಸಂಸ್ಥೆ ಇರುವದು ಗೊತ್ತಾಗುವುದಿಲ್ಲ. ಅವರ ವಿಶ್ವಾಸಗಳಿಸಿದರೆ, ಈ ಕೇಂದ್ರದ ಚಟುವಟಿಕೆಗಳನ್ನು ಅಭ್ಯಸಿಸಬಹುದು. ಕೃಷ್ಣಾನಂದರ ಯಾವುದಾದರೂ ಪುಸ್ತಕವನ್ನು ಇಂಗ್ಲಿಷಿಗೆ ಅನುವಾದ ಮಾಡುವದಾದರೆ, ಅವರ ಬಸ್ತಾರ ಪ್ರವಾಸಕ್ಕೆ ಮೊದಲ ಸ್ಥಾನ ಕೊಡಬೇಕು. ಹಾಗೆ ಮಾಡಿದರೆ ವೆರಿಯರ್ ಎಲ್ವಿನ್‌ರಂತೆ ಅವರ ಹೆಸರಿಗೂ ಅಂತಾರಾಷ್ಟ್ರೀಯ ಖ್ಯಾತಿ ಬರುತ್ತದೆ.

## ಪರಿಸರ ಪ್ರಜ್ಞೆ

ಎರಡನೆಯ ಮಹಾಯುದ್ಧದ ಕೊನೆಯವರೆಗೂ ಆದಿವಾಸಿಗಳ ಜೀವನ ಮತ್ತು ನಮ್ಮ ಪೂರ್ವಜರ ಜೀವನ, ಒಂದು ವಿಧವಾದ ತೃಪ್ತಿ ನೆಮ್ಮದಿಗಳಿಂದ ಕೂಡಿತ್ತು. ನಿಸರ್ಗ, ಇವತ್ತು ಇರುವಂತೆ ಪೂರ್ಣನಾಶವಾಗಿರಲಿಲ್ಲ. ಪರಿಸರ ವಿಜ್ಞಾನದ ಅಧ್ಯಯನ ಹಾಗೂ ಸಂಶೋಧನೆಗಳ ಆಧಾರದ ಮೇಲೆ ಕೃಷ್ಣಾನಂದರು ನಿಸರ್ಗವನ್ನು ಕುರಿತು ಹೇಳುವದೇನೆಂದರೆ, "ನಿಸರ್ಗದ ಆಗು-ಹೋಗುಗಳನ್ನು ಸೂಕ್ಷ್ಮವಾಗಿ ಅರಿತು, ಅವುಗಳ ಸಮತೋಲನವನ್ನು ಕಾಯ್ದುಕೊಳ್ಳುವದು ಸರ್ವದೃಷ್ಟಿಯಿಂದಲೂ ಅಪೇಕ್ಷಣೀಯ. ಬಳಸಿದಷ್ಟೂ ಅರಣ್ಯ ಬೆಳೆಸಬೇಕು. ಮಳೆಬೀಳುವಷ್ಟು ನೀರನ್ನು ಬಳಸಬೇಕು. ಲಾಭಕ್ಕಾಗಿ ಸಹಜೀವಿಗಳ ಪಾಲನ್ನು ಕಸಿದುಕೊಳ್ಳಬಾರದು. ಪರಿಸರ ಸಂಹಾರಕನಾಗಿ ಪರಿಣಮಿಸಿದ ಮಾನವನು ಅದರ ಸಂರಕ್ಷಕನಾಗಬೇಕು. ಅಂದರೇ ನಿಸರ್ಗದ ಸಮತೋಲ ಕಾಯ್ದುಕೊಳ್ಳಲು ಸಾಧ್ಯ".

ಈ ಸಮತೋಲವನ್ನು ಕಾಯ್ದುಕೊಳ್ಳುವಲ್ಲಿ ಮಾನವನು ವಿಫಲನಾಗಿರುವದಕ್ಕೆ ಕಾರಣವನ್ನು ಕೃಷ್ಣಾನಂದರು ಹೀಗೆ ತೋರಿಸುತ್ತಾರೆ. "ತನ್ನ ಅಪ್ರತಿಮ ಬುದ್ಧಿಮತ್ತೆಯಿಂದ ಬಾಹ್ಯಾಕಾಶ ಉಡ್ಡಾಣ, ಕಂಪ್ಯೂಟರ್ ಬಳಕೆ, ಇಂಟರ್‌ನೆಟ್ ಪ್ರಸಾರ ಇತ್ಯಾದಿ ಕ್ಷೇತ್ರಗಳಲ್ಲಿ

ಮುಂದುವರಿದ ಪ್ರಾಣಿ ಮಾನವನು, ಸಂತಾನೋತ್ಪತ್ತಿ ನಿಯಂತ್ರಣದಲ್ಲಿ ಹಿಂದೆ ಬಿದ್ದಿದ್ದಾನೆ. ಇದರಿಂದ ಅವನು ಬೆಳೆಯುವ ಆಹಾರಕ್ಕಿಂತ ಹೆಚ್ಚಾಗಿ ಜನಸಂಖ್ಯೆ ಮಿತಿ ಮೀರಿದೆ. ಈ ಜನಸಂಖ್ಯೆಯ ಒತ್ತಡದಿಂದ ಮತ್ತು ಅದರ ಜೊತೆಗೆ ಮದ್ಯ, ಧೂಮ್ರಪಾನ, ಸ್ವಚ್ಛಂದ ಲೈಂಗಿಕ ಜೀವನ, ಏಡ್ಸ್ ಕಾಯಿಲೆ, ಕೊಲೆ, ಸುಲಿಗೆ, ದರೋಡೆ, ಅತ್ಯಾಚಾರಗಳಿಂದ ಪರಿಸರ ನಾಶ, ತಡೆಯಲಾಗದಷ್ಟು ಹೆಚ್ಚಿದೆ. ಇದನ್ನು ತಡೆಗಟ್ಟಬೇಕಾದರೆ, ವ್ಯಕ್ತಿ, ಸಮಾಜ ಮತ್ತು ಸರಕಾರಗಳು ಒಟ್ಟಾಗಿ ನಿವಾರಣೋಪಾಯಗಳನ್ನು ಕೈಕೊಳ್ಳಬೇಕು. ಇಲ್ಲವಿದ್ದರೆ ಎಡಬಿಡದೆ ನಡೆದಿರುವ ಪರಿಸರ ಸಂಪೂರ್ಣ ನಾಶವಾಗಿ ಮಾನವಕೋಟಿ ಘೋರವಾದ ಪ್ರಾಯಶ್ಚಿತ್ತವನ್ನು ಅನುಭವಿಸಬೇಕಾಗುತ್ತದೆ ಎಂದು ಕೃಷ್ಣಾನಂದರು ಎಚ್ಚರಿಸುತ್ತಾರೆ.

## ಇತಿಹಾಸ ಪ್ರಜ್ಞೆ

ಕೃಷ್ಣಾನಂದರ ಪರಿಸರ ಪ್ರಜ್ಞೆಯ ಹಾಗೆ, ಅವರ ಇತಿಹಾಸ ಪ್ರಜ್ಞೆಯ ಬಗೆಗೂ ಬರೆಯಬಹುದು. ಆದರೆ ಈ ಲೇಖ ನಾನು ತಿಳಿದುಕೊಂಡದ್ದಕ್ಕಿಂತ ದೊಡ್ಡದಾಗಿರುವದರಿಂದ ಅವರ ಇತಿಹಾಸ ಪ್ರಜ್ಞೆ, ಅವರ ಬರವಣಿಗೆಯಲ್ಲಿ ಎಲ್ಲೆಲ್ಲಿ ನೋಡಬಹುದೆಂದು ಹೇಳಲು ಮಾತ್ರ ಇಲ್ಲಿ ಸಾಧ್ಯ.

'ಅಕ್ಷತ' ಎನ್ನುವ ಇವರ ಪುಸ್ತಕದಲ್ಲಿ ಕೊಂಕಣಿ ಮತ್ತು ಕೊಂಕಣಿಗರ ಇತಿಹಾಸ, ಅದರಲ್ಲೂ ಹೊನ್ನಾವರದ ಮಲ್ಯ ಮನೆತನದ ಚರಿತ್ರೆ, 'ಮರುಪಯಣ'ದಲ್ಲಿ ಹೊನ್ನಾವರ ಗೆರಸೊಪ್ಪಗಳ ಇತಿಹಾಸ, ಬಸವರಾಜದುರ್ಗ, ಕರ್ನಲ್‌ಹಿಲ್, ಸೆಟ್ಟಿಕೆರೆಗಳ ಇತಿಹಾಸ ಮುಂತಾದವು ಇವರ ಬಲವಾದ ಇತಿಹಾಸ ಪ್ರಜ್ಞೆಗೆ ಜ್ವಲಂತ ನಿದರ್ಶನಗಳು. ಇದೇ ಪುಸ್ತಕದಲ್ಲಿ ಅತಿಮುಖ್ಯವಾದ ಸೂಚನೆಯೊಂದು ಭವಿಷ್ಯದ ಇತಿಹಾಸಕಾರರಿಗೆ ಇದೆ. ಹೊನ್ನಾವರ, ಹಿಂದೊಮ್ಮೆ ಸಾಗರಗಾಮಿ ಹಡಗುಗಳ ತಾಣವಾಗಿತ್ತು. ಅದರ ಬಳಿ ಹಲವಾರು ನೌಕಾಯುದ್ಧಗಳು ವಿಜಯನಗರ ಕಾಲದಲ್ಲಿ, ನಂತರದ ಶತಮಾನಗಳಲ್ಲಿ ನಡೆದಿವೆ. ಇಲ್ಲಿ ನದಿ ಮತ್ತು ಸಾಗರ ಶೋಧನೆ ಮಾಡಿದರೆ, ಆಗ ಮುಳುಗಿದ ಅದೆಷ್ಟೋ ಹಡಗುಗಳನ್ನು ಪತ್ತೆ ಮಾಡಬಹುದು, ಎನ್ನುವದು ಸಾಗರಶೋಧಕರಿಗೆ ಅತ್ಯಂತ ವ್ಯವಹಾರ್ಯ ಸೂಚನೆಯಾಗಿದೆ. ಕಾವಿಕಲೆಯ ಬಗ್ಗೆ, ಅದರ ಐತಿಹಾಸಿಕತೆ ಕಾದಿರಿಸುವಲ್ಲಿ ಅವರ ಶ್ರಮ ಆ ಪುಸ್ತಕದಲ್ಲಿ ಮೇಲಿಂದ ಮೇಲೆ ಕಂಡುಬರುತ್ತದೆ. ಲೇಪಾಕ್ಷಿ ಕಲೆಯ ವೈಶಿಷ್ಟ್ಯದ ಬಗೆಗಿನ ಅವರ ಅಧ್ಯಯನ ಹಾಗೂ ಅವರು ಸಂಗ್ರಹಿಸಿರುವ ಛಾಯಾಚಿತ್ರಗಳು ಮತ್ತು ವಿಶ್ಲೇಷಣೆ, ಅಲ್ಲಿಯ ಕಲೆಯ ಬಗೆಗಿನ ಅತ್ಯಾಧುನಿಕ ಮತ್ತು ಆಧಾರಯುತ ಗ್ರಂಥವಾಗಬಹುದು. ಇದೇ ರೀತಿಯಾಗಿ ಅವರ ಅಪ್ರಕಟಿತ ಲೇಖಗಳನ್ನೂ ಬರವಣಿಗೆಯನ್ನು ಪ್ರಕಟಿಸುವದು, ನಾವು ಕೃಷ್ಣಾನಂದರಿಗೆ ಸಲ್ಲಿಸಬಹುದಾದ ಯೋಗ್ಯ ಕಾಣಿಕೆಯಾಗಿದೆ.

❑



# ಡಾ। ಕೃಷ್ಣಾನಂದರ ಗುಜರಿ ಗುತ್ತಿಗೆ

ಡಾ॥ ಗೌರೀಶ ಕಾಯ್ಕಿಣಿ

ಡಾ॥ ಕೃಷ್ಣಾನಂದ ಕಾಮತರ ಕುರಿತು ನಮ್ಮ ಹಿರಿಯ ಕವಿ ಶ್ರೀ ವಿ.ಜಿ. ಭಟ್ಟರ "ಪ್ರಾರ್ಥನೆ" ಕವನ ಸಂಕಲನದಲ್ಲಿ (೧೯೯೨), ಒಂದು ಕವನವಿದೆ,

### ಗುಜರಿ ಗುತ್ತಿಗೆ

ಕೃಷ್ಣಾನಂದಗೆ ಗುಜರಿ ಗುತ್ತಿಗೆ
ಹೊತ್ತು ತರುವ ಹಳೆ ರದ್ದಿ
ಉಳುಕಿದರೂನೂ ಆತನ ಕುತ್ತಿಗೆ
ತಪ್ಪದೆ ಹೊರುವನು ಜಿದ್ದಿ

ಗೋಣಿಯ ಚೀಲದಿ ಮಂದಿ ಬಿಸಾಡಿದ
ಪುರಾಣ ಕಾಲದ ವಸ್ತು
ಮನೆಗೆ ಸೇರಿಸುವ ಒರಸಿ ಪೇರಿಸುವ
ಹರಕು ಮುರುಕಿಗೂ ಶಿಸ್ತು
ಗಂಡನ ಹುಚ್ಚಿಗೆ ಜ್ಯೋತ್ಸ್ನಾ ಮೆಚ್ಚಿಗೆ

* * * * * *

ಇಳಿಸಿ ತೋರಿಸಿದ ಭಾರದ ಗಂಟೆ
ಹರಿದ ತಾಳೆಗರಿ ಕಟ್ಟಿದ ಗ್ರಂಥ
ಕಂಡು ಬೆಚ್ಚಿದೆನು ಮಸಮಸಕಾಗಿಹ
ಮಹಾಕವಿ ಪಂಪನ ಸಹಿ! ಅದರಲಿ
ಮಹಾಕವಿ ಪಂಪನ ಸಹಿ

ಡಾ॥ ಕೃಷ್ಣಾನಂದರಿಗೆ ಇದೇ ಹುಚ್ಚು. ಗುಜರಿ ಗುತ್ತಿಗೆ ಇದ್ದಂತೆ ತಿಂಗಳು ವರುಷ ಹಳೆ ರದ್ದಿಯನ್ನು ಹೆಕ್ಕಿ ಹೊತ್ತು ತರುತ್ತಾರೆ. ಅದರ ಭಾರದಡಿ ತನ್ನ ಕುತ್ತಿಗೆ ಉಳುಕಿದರೂ ಪರಿವೆ ಇಲ್ಲ. ಆ ಭಾರಿ ಹರಕು ತಾಳೆಗರಿ ಕಟ್ಟಿ ತಂದ ಮೂಟೆಯಿಂದ ಅವರು ಕೊನೆಗೂ ಎತ್ತಿ ತೋರಿಸುವದು ಅವರಿಗೆ ಅಚ್ಚು ಮೆಚ್ಚಿಗೆ ಆದ ಪಂಪ ಮಹಾಕವಿಯ ಹಸ್ತಾಕ್ಷರವುಳ್ಳ ತಾಡೋಲೆಯ ಗ್ರಂಥ! ಈ ಭಾರದಡಿ ಅವರಿಗೆ ಕುತ್ತಿಗೆ ಉಳುಕಿ ಹೋದರೂ ಪರಿವೆಯೇ ಇಲ್ಲ. ಕೃಷ್ಣಾನಂದ ಕಾಮತರ ಹವ್ಯಾಸದ ಹುಚ್ಚಿಗೆ ಅವರ ಪ್ರಿಯತಮೆ ಜ್ಯೋತ್ಸ್ನಾ ಅವರ ಪೂರ್ತಿ ಮೆಚ್ಚುಗೆ ಇತ್ತು.

ಕವಿ ಭವಭೂತಿಯೇ ಹೇಳಿದ್ದಾನೆ "ಸತಾಂ ಸಿದ್ಧಿಃ ಸಂಗಃ ಕಥಮಪಿ ಹಿ ಪುಣ್ಯೇನ ಬಾಧತಿ". ಕೃಷ್ಣಾನಂದರ ಮತ್ತು ಜ್ಯೋತ್ಸ್ನಾ ಅವರ ಅನ್ಯೋನ್ಯ ಪ್ರೀತಿ ಅನುರಾಗ ಅಂತಹದೇ ಅನುರಾಗ ಮತ್ತು ಆಸಕ್ತಿಗಳ ಒಂದು ಉತ್ತಮ ಮಾದರಿಯಾಗಿತ್ತು. ಕಾಮತರ ಹುಚ್ಚಿಗೆ

ಜ್ಯೋತ್ಸ್ನಾ ಅವರ ಮೆಚ್ಚಿಗೆ-ಚಿನ್ನಕ್ಕೆ ಸುಗಂಧ ಕೂಡಿದಂತೆ! ಜ್ಯೋತ್ಸ್ನಾ ನಯನ ಮನೋಹರ ಗದ್ಯ ಲೇಖಿಕೆ. ಅವರದೇ ನೇರ ಪರಿಣಾಮವಾಗಿ ಕೃಷ್ಣಾನಂದರೂ ಉತ್ತಮ ಲೇಖಕರಾದರು. ಇಬ್ಬರೂ ಉನ್ನತ ಪದವೀಧರರು. ಕೃಷ್ಣಾನಂದರು ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎಸ್ಸಿ. ಪದವೀಧರರಾದರು. ಅಮೇರಿಕೆಯ ನ್ಯೂಯಾರ್ಕ್ ವಿಶ್ವವಿದ್ಯಾಲಯದಿಂದ ಪಿಹೆಚ್.ಡಿ. ಪಡೆದರು. ಅಲ್ಲಿ ಅವರು ಆಯ್ದುಕೊಂಡ ವಿಷಯವೂ ಕೂಡ ವಿಜ್ಞಾನವಾಗಿತ್ತು.

ಕೀಟಶಾಸ್ತ್ರದ ವಿಶೇಷ ವ್ಯಾಸಂಗದ ಫಲವಾಗಿ ಕೃಷ್ಣಾನಂದರು 'ನಾನೂ ಅಮೇರಿಕೆಗೆ ಹೋಗಿದ್ದೆ, (೧೯೬೯) ಎಂಬ ತನ್ನ ಅಮೇರಿಕೆಯ ಅನುಭವದ ಕುರಿತು ಒಂದು ಗ್ರಂಥವನ್ನು ಬರೆದರು. ಅನೇಕ ಪ್ರವಾಸಿಗಳ ಅಮೇರಿಕೆಯ ಪ್ರವಾಸದ ಕುರಿತು ಪುಸ್ತಕಗಳಿಂದ ಇದು ಆಶ್ಚರ್ಯಚಕಿತಗೊಳಿಸುವಷ್ಟು ಭಿನ್ನವಾಗಿದೆ. ಅಮೇರಿಕೆಯವರನ್ನು ನಿಜವಾಗಿಯೂ ಸಿರಿವಂತರೆಂದು ಹೇಳಬಹುದೇ ? ಎಂಬ ಸವಾಲನ್ನು ಈ ಪುಸ್ತಕವು ಕೇಳುತ್ತದೆ! ಸ್ವಾಭಿಮಾನಿ ಭಾರತೀಯನ ದೃಷ್ಟಿಯಿಂದ ಈ ಪ್ರಶ್ನೆಯನ್ನು ಕೃಷ್ಣಾನಂದರು ಚರ್ಚಿಸಿದ್ದಾರೆ. ಆ ಮಟ್ಟಿಗೆ ಅದೊಂದು ಅಪೂರ್ವ ಕೃತಿ.

ಇವರ ಹೊರತಾಗಿ ಅವರ ಗ್ರಂಥ ನಿರ್ಮಿತಿ ವಿಪುಲವಾಗಿದೆ. ಅವರ ಪ್ರವಾಸ ಕಥನಗಳದೇ ಆರು ಗ್ರಂಥಗಳಿವೆ. ಅವುಗಳಲ್ಲಿ ಮಹತ್ವದವು ನಾಲ್ಕೈದು ಧಾರವಾಡದ ಮನೋಹರ ಗ್ರಂಥಮಾಲೆಯಿಂದಲೇ ಪ್ರಕಟವಾದವು.

ನಾನೂ ಅಮೇರಿಕೆಗೆ ಹೋಗಿದ್ದೆ, ವಂಗದರ್ಶನ, ನಾ ರಾಜಸ್ಥಾನದಲ್ಲಿ, ಕಾಲರಂಗ, ಬಸ್ತರ ಪ್ರವಾಸ ಮತ್ತು ಮಧ್ಯಪ್ರದೇಶದ ಮಡಿಲಲ್ಲಿ, ಇವಲ್ಲದೆ ವೈಜ್ಞಾನಿಕ ಕೃತಿಗಳನ್ನೂ ಅವರು ಬರೆದಿದ್ದಾರೆ.

ಪ್ರಾಣಿ ಪರಿಸರ, ಕೀಟಜಗತ್ತು, ಪಶು ಪಕ್ಷಿ ಪ್ರಪಂಚ, ಸಸ್ಯ ಪ್ರಪಂಚ ಇವುಗಳೆಲ್ಲಾ 'ಪ್ರಪಂಚ', 'ಜಗತ್ತು' ಎಂದು ಹೆಸರುಳ್ಳ ಕೃತಿಗಳಾಗಿದ್ದು, ಹೆಚ್ಚು ಮಾರ್ಮಿಕ ಮತ್ತು ವ್ಯಾಪಕವಾಗಿವೆ. ಇವಲ್ಲದೆ ಇತರ ವೈವಿಧ್ಯವೂ ಇವರ ಬರವಣಿಗೆಯಲ್ಲಿ ಕಂಡುಬಂದಿದೆ. ಪ್ರೇಯಸಿಗೆ ಪತ್ರಗಳು, ಭಗ್ನಸ್ವಪ್ನ ಮತ್ತು ಕಾವಿಕಲೆ ಇದರಲ್ಲಿ ಉತ್ತರ ಕನ್ನಡದ ಗುಡಿಗಳ ಗೋಡೆಗಳ ಮೇಲೆ ಕಾವಿಬಣ್ಣದಿಂದ ಚಿತ್ರಿಸಿದ ವಿಶಿಷ್ಟ ಆಕೃತಿಗಳು ಸುಂದರವಾಗಿವೆ.

೧೯೭೨ರಲ್ಲಿ ಬೆಂಗಳೂರಿನ ಅಂತಾರಾಷ್ಟ್ರೀಯ ಸಂಶೋಧನ ಸಂಸ್ಥೆಯೊಂದರ ಪ್ಲಾಸೀ ಶಾಖೆಯ ಮೇಲ್ವಿಚಾರಕರಾಗಿ, ೨ ವರ್ಷ ಕೆಲಸ ಮಾಡಬೇಕಾಯಿತು. ಆಗ ಅನಿವಾರ್ಯವಾಗಿ ಬಂಗಾಲಿ ಭಾಷೆ ಕಲಿಯಬೇಕಾಯಿತು. ಆ ಕಾಲದ ಬಂಗಾಲದ ಪ್ರಕ್ಷುಬ್ಧ ರಾಜಕೀಯ ಸ್ಥಿತಿಯ ಚಿತ್ರಗಳನ್ನು 'ವಂಗದರ್ಶನವು ಒಳಗೊಂಡಿದೆ. ಇದರಲ್ಲಿ ಕೆಲವು ಅಧ್ಯಾಯಗಳು ಕಾದಂಬರಿಯಂತೆ ಚಿತ್ರಮಯವಾಗಿವೆ. ಹಾಗೆಯೇ ರಾಜಸ್ಥಾನದ ಉದಯಪುರ ವಿಶ್ವವಿದ್ಯಾಲಯದ ಕಾಲೇಜೊಂದರಲ್ಲಿ ಮೂರುವರ್ಷ ಕೃಷ್ಣಾನಂದರು ಅಧ್ಯಾಪಕರಾಗಿದ್ದರು. "ನಾ ರಾಜಸ್ಥಾನದಲ್ಲಿ" ಕೃತಿ ಒಳಗೊಂಡದ್ದು ಅಲ್ಲಿಯ ಅನುಭವಗಳು, ಪ್ರಾದೇಶಿಕ ಪರಿಚಯ, ಕೆಲವೊಂದು ಆತ್ಮಕಥೆ ಮತ್ತು ಪ್ರವಾಸದ ಪ್ರಸಂಗಗಳ ಚಿತ್ರಣ.

ಅವರು ೧೯೭೬ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಶಿಷ್ಯವೇತನ ಪಡೆದು ೧ ವರ್ಷ ಮಧ್ಯಪ್ರದೇಶದಲ್ಲಿ ಇದ್ದು ಬಂದರು. ಆಗಿನ ಅನುಭವಗಳು ೩ ಪುಸ್ತಕಗಳಾಗಿ ರೂಪುಗೊಂಡಿದ್ದು, ಆ ಪುಸ್ತಕಗಳೆಂದರೆ ಕಾಲರಂಗ (೧೯೮೨), ಬಸ್ತರ ಪ್ರವಾಸ (೧೯೯೧), ಮಧ್ಯಪ್ರದೇಶದ ಮಡಿಲಲ್ಲಿ (೧೯೯೩).

೧೯೬೯ರಲ್ಲಿ ಬೆಳಕು ಕಂಡ 'ನಾನೂ ಅಮೇರಿಕೆಗೆ ಹೋಗಿದ್ದೆ' ಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆಯಿತು. ಅಲ್ಲದೆ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳಲ್ಲಿ ಪಠ್ಯಪುಸ್ತಕ ಆಗಿ ೫ ಮುದ್ರಣ ಕಂಡಿತು.

ಇಷ್ಟೆಲ್ಲ ಪ್ರಸಿದ್ಧಿ ಪಡೆದರೂ ಡಾ॥ ಕೃಷ್ಣಾನಂದ ಕಾಮತರು ಡಾ॥ ಸೂರ್ಯನಾಥ ಕಾಮತರ ಅಭಿಪ್ರಾಯದಂತೆ ಬಹಳ ಕೀರ್ತಿ ಪರಾಙ್ಮುಖರು, ಸಂಕೋಚ ಪ್ರಕೃತಿಯವರು. ಅಜ್ಞಾತರಾಗಿಯೇ ಉಳಿಯಬಯಸುವವರು. ಉ.ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದ

ಅಧ್ಯಕ್ಷರಾದರು– ಮನಸ್ಸಿಲ್ಲದ ಮನಸ್ಸಿನಿಂದ. ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಈ ಜಿಲ್ಲೆಯ ಸಾಂಸ್ಕೃತಿಕ ಚರಿತ್ರೆ ಹಾಗೂ ಸದ್ಯದ ಸ್ಥಿತಿಗತಿಯನ್ನು ಕೂಲಂಕಶವಾಗಿ ಅವಲೋಕಿಸಿದರು. ಹೇಳುವದನ್ನೆಲ್ಲಾ ಪ್ರಾಂಜಲವಾಗಿ, ಪ್ರಾಮಾಣಿಕವಾಗಿ ಹೇಳುವವರಲ್ಲಿ ಅವರಿಗೆ ಯಾವ ಸಂಕೋಚವು ಇಲ್ಲ.

ಉ.ಕನ್ನಡ ಜಿಲ್ಲೆಯಲ್ಲಿ ವೃತ್ತಿಹಿಡಿಯಲು ಇವರು ಸೂಕ್ತ ಅವಕಾಶ ದೊರಕದೆ ರಾಜಸ್ತಾನ, ಮಧ್ಯಪ್ರದೇಶ, ಬಂಗಾಲದಲ್ಲಿ ವೃತ್ತಿ ನಿರ್ವಾಹ ಮುಗಿಸಿ ತಮ್ಮ ಹುಟ್ಟಿದೂರಿಗೆ ಮರುಪಯಣ ಮಾಡುವ ಕನಸು ಈ ಕಾಮತ ದಂಪತಿಗಳದು. ಆದರೆ ವಾಸ್ತವದಲ್ಲಿ ಈ ಕನಸು ಹಾಗೆ ನನಸಾಗಲಿಲ್ಲ. ಅದಾಗ್ಯೂ ಇವರ ಕೊನೆಯ ಕೃತಿ 'ಮರುಪಯಣ' ಎಂಬ ಶೀರ್ಷಿಕೆಯಿಂದಲೇ ಬಂದಿತು. ಸುದೀರ್ಘಕಾಲ ಉತ್ತರದಲ್ಲಿಯೇ ಬದುಕಿ ಈಗ ಊರಿಗೆ ಬಂದರೂ ಕೇರಿಗೆ ಬಂದಂತೆ ಆಗಲಿಲ್ಲ! ಆ ಕೇರಿಯೇ ಬದಲಾಗಿದೆ. ನಮ್ಮ ಇನ್ನೊಬ್ಬ ಜನಪ್ರಿಯ ಉ.ಕನ್ನಡದ ಮಹಾ ಸಾಹಿತಿ ಶ್ರಿ ಯಶವಂತ ಚಿತ್ತಾಲರಂತೆ, ಕಾಮತರಿಗೂ ತಮ್ಮ ಉ.ಕನ್ನಡ 'ಇದ್ದಾಗ, ಇದ್ದಾಂಗೆ' ಅನಿಸಲೇ ಇಲ್ಲ. ಕಾಮತರಿಗೆ ತಮ್ಮ ಹೊನ್ನಾವರದಲ್ಲೂ ಬದಲಾವಣೆಯಾದದ್ದು ಕಂಡಿತು. ಯಶವಂತ ಚಿತ್ತಾಲರು ಹನೇಹಳ್ಳಿಯನ್ನು ಬಿಟ್ಟು ಮುಂಬಯಿಯಲ್ಲಿ ಉಳಿದಂತೆ ಕಾಮತರೂ ಹೊನ್ನಾವರದಿಂದ ದೂರ ಬೆಂಗಳೂರಿನಲ್ಲಿ ನೆಲೆಸಿದರು. ಗಂಡ ಹೆಂಡತಿ ಇಬ್ಬರೂ ಲೇಖಕ ವೃತ್ತಿಯನ್ನು ಕೈಗೊಂಡು ಯಶಸ್ವಿಯಾದರು.

ಉತ್ತರಕನ್ನಡ ಹಾಗೂ ತಮ್ಮ ಸಂಬಂಧದ ಕುರಿತು ಹಿಂದೊಮ್ಮೆ ಕೃಷ್ಣಾನಂದರು ಹೇಳಿದ್ದರು. "ಇಷ್ಟೆಲ್ಲಾ ಅರಣ್ಯ ಸಂಪತ್ತು ಇದ್ದೂ ಅಮೇರಿಕೆಯ ಹೆಸರುವಾಸಿಯಾದ ಅರಣ್ಯಶಾಸ್ತ್ರದ ಕಾಲೇಜಿನಲ್ಲಿ ಉಚ್ಚ ತರಬೇತಿ ಮತ್ತು ಡಿಗ್ರಿಗಳನ್ನು ಪಡೆದ ಒಬ್ಬನನ್ನು ಸಾಕುವ ಮತ್ತು ಅವನ ವಿಶಿಷ್ಟ ತರಬೇತಿಯ ಲಾಭ ಪಡೆಯುವ ಅವಕಾಶ ಈ ಜಿಲ್ಲೆಗೆ ಇಲ್ಲದೇ ಹೋಯಿತು!".





# ಡಾ॥ ಕಾಮತರ ಮರುಪಯಣ

**ಕೀರ್ತಿನಾಥ ಕುರ್ತಕೋಟಿ**

ಡಾ. ಕೃಷ್ಣಾನಂದ ಕಾಮತರು ಮೂಲತ: ಹೊನ್ನಾವರದವರು. ಆದರೆ ಅವರು ಕಲಿತದ್ದು ಧಾರವಾಡದಲ್ಲಿ. ಬಹುಶಃ ನಾನು ಧಾರವಾಡವನ್ನು ಬಿಟ್ಟು ಹೋದ ಮೇಲೆ ಅವರು ಧಾರವಾಡಕ್ಕೆ ಬಂದಿರಬೇಕು. ಹೀಗಾಗಿ ಅವರ ವಿದ್ಯಾರ್ಥಿದೆಸೆಯಲ್ಲಿ ನನಗೆ ಅವರ ಸಂಪರ್ಕ ಬಂದಿರಲಿಲ್ಲ. ನಾನು ಅವರನ್ನು ಕಂಡಿದ್ದು ಅವರು ಅಮೇರಿಕೆಯಿಂದ, ಕೀಟಶಾಸ್ತ್ರ ಪ್ರವೀಣರಾಗಿ ಬಂದ ಮೇಲೆ. ಮನೋಹರ ಗ್ರಂಥಮಾಲೆಯ ಅಟ್ಟದಲ್ಲಿ ಜಿ.ಬಿ. ಜೋಶಿಯವರು ಅವರ ಪರಿಚಯ ಮಾಡಿಕೊಟ್ಟರು. ಅವರ ಮೊದಲ ಗ್ರಂಥ 'ನಾನೂ ಅಮೇರಿಕೆಗೆ ಹೋಗಿದ್ದೆ' ಪ್ರಕಟವಾಗುವದಿತ್ತು. ಆ ಹೊತ್ತಿಗಾಗಲೇ ದಿ। ಬಿ.ಜಿ.ಎಲ್ ಸ್ವಾಮಿಯವರ ಅಮೇರಿಕೆಯ ಪ್ರವಾಸ ಕಥನ ಪ್ರಕಟವಾಗಿ ಸಾಕಷ್ಟು ಜನಪ್ರಿಯತೆಯನ್ನು ಪಡೆದಿತ್ತು. ಕಾಮತರ ಗ್ರಂಥವೂ ಅದೇ ಮಾದರಿಯದಾಗಿದ್ದುದರಿಂದ ನನ್ನ ಕುತೂಹಲ ಮತ್ತು ಸಂದೇಹಗಳು ಕೂಡಿಯೇ ಜಾಗ್ರತವಾದವು. ಅಮೇರಿಕೆಗೆ ಹೋಗಿಬಂದವರೆಲ್ಲ ತಮ್ಮ ಅನುಭವಗಳನ್ನು ಹೀಗೆಯೇ ಪ್ರಕಟಿಸುತ್ತ ಹೋದರೆ ಗತಿ ಏನು ಎಂಬುದೇ ಈ ಸಂದೇಹಕ್ಕೆ ಕಾರಣ. ಆದರೆ ಕಾಮತರು ಅಮೇರಿಕೆಯ ಪರಿಸರದಲ್ಲಿ ಒಂದಾಗಿ, ಸ್ನೇಹಪರರಾಗಿ, ತಮ್ಮ ಸ್ವಂತಿಕೆಯನ್ನು ಕಳೆದುಕೊಳ್ಳದೆ, ಬರೆದ ಈ ಪ್ರವಾಸಕಥನ ನನ್ನನ್ನು ಆಕರ್ಷಿಸಿತು.

ಕಾಮತರದು ಅಲೆಮಾರಿ ಜೀವನ. ಅವರು ಅಮೇರಿಕೆಯಿಂದ ತಿರುಗಿ ಬಂದ ಮೇಲೆ ಭಾರತದ ಹಲವಾರು ಪ್ರದೇಶಗಳಿಗೆ ಹೋಗಿ ಬಂದು, ಕೊನೆಗೆ ಬೆಂಗಳೂರಿನಲ್ಲಿ ನೆಲಸಿದರು. ಬೆಂಗಳೂರಿನ ಅವರ ಮನೆಗೆ ಎರಡು ಮೂರು ಸಾರೆ ಹೋಗಿ ಅವರ ಆತಿಥ್ಯವನ್ನು ಪಡೆದು ಬಂದಿದ್ದೇನೆ. ಆದರೆ, ಅವರದು ಒಂದು ಬಗೆಯ ನಿಸ್ಸಂಗ ಜೀವನ. ರಾಜಸ್ಥಾನ, ಮಧ್ಯಪ್ರದೇಶ, ಪಶ್ಚಿಮ ಬಂಗಾಲ ಹೀಗೆ ಅನೇಕ ಕಡೆಗಳಲ್ಲಿ ಇದ್ದು ಅಲ್ಲಿಯ ಸಂಸ್ಕೃತಿಯನ್ನು ತಮ್ಮದಾಗಿಸಿಕೊಂಡರು. ಬಂಗಾಲದ ಮಧ್ಯಮವರ್ಗದ ಸಂಸ್ಕೃತಿ ಅವರಿಗೆ ಎಷ್ಟು ಪ್ರಿಯವೋ ಬಸ್ತರದ ಆದಿವಾಸಿಗಳ ಬದುಕಿನ ಶೈಲಿಯೂ ಅವರಿಗೆ ಅಷ್ಟೇ ಪ್ರಿಯ. ಈ ಜನರ ಊಟ ಉಡಿಗೆ, ಮದುವೆ, ಅಂತ್ಯಕ್ರಿಯೆ ಇವನ್ನೆಲ್ಲ ದೂರದಿಂದ ನೋಡಿ ಅಲ್ಲ, ಅವುಗಳಲ್ಲಿ ಪಾಲುಗೊಂಡು ಅವರು ಬಣ್ಣಿಸುತ್ತಾರೆ. ಸಾಮಾನ್ಯವಾಗಿ ನಾವೆಲ್ಲ ಎಲ್ಲಿ ಹೋದರೂ ನಮ್ಮ ಸಂಸ್ಕೃತಿಯನ್ನು ಬೆನ್ನಿಗೆ ಕಟ್ಟಿಕೊಂಡೇ ಹೊರಡುತ್ತೇವೆ. ಮುಂಬಯಿಯ ಮಾಟುಂಗಾ ಪ್ರದೇಶದಲ್ಲಿ ತಮಿಳರು ಒಂದು ಚಿಕ್ಕ ತಮಿಳುನಾಡನ್ನು ಸೃಷ್ಟಿಸಿದ್ದೇ ಇದರ ಮೊದಲ ಉದಾಹರಣೆ ಎಂದು ಹೇಳಬಹುದು. ಮನೆಯ ಟೆರೇಸಿನಲ್ಲಿ ಒಗೆದ ಬಟ್ಟೆಗಳನ್ನು ಯಾರಾದರೂ ಒಣ ಹಾಕಿದ್ದರೆ ಅವರು ಗುಜರಾತಿಗಳೆಂದು ತಟ್ಟನೆ ಹೇಳಿಬಿಡಬಹುದು. ಕಾಮತರು ಅಂಥವರಲ್ಲ. ಉತ್ತರಕನ್ನಡ ಜಿಲ್ಲೆಯನ್ನು ಬಿಟ್ಟು ಎಷ್ಟೋ ವರ್ಷಗಳಾದ ಮೇಲೆ, ಮಗ ಮತ್ತು ಸೊಸೆಯೊಂದಿಗೆ ಅವರು ಅಲ್ಲಿ ಹೋದರು. ಅದರ ಫಲವೆಂದರೆ ಅವರ ಕೊನೆಯ ಗ್ರಂಥ **ಮರುಪಯಣ!** ಉತ್ತರಕನ್ನಡದ ಸಂಸ್ಕಾರವಿಲ್ಲದೆ ಬದುಕುವುದು ಅಸಾಧ್ಯ ಎಂದವರಲ್ಲ. ಉತ್ತರಕನ್ನಡ ಜಿಲ್ಲೆಯಲ್ಲಿ ಅವರು ಇರಲಿಲ್ಲ, ಆದರೆ ಉತ್ತರಕನ್ನಡ ಜಿಲ್ಲೆ ಅವರಲ್ಲಿತ್ತು. ಆ ಭಾಷೆಯ ಒಂದು ಪಡೆನುಡಿಯನ್ನೂ ಅವರು ಮರೆತವರಲ್ಲ, ಅಲ್ಲಿಯ ಊಟ ಉಡಿಗೆಗಳನ್ನೂ ಮರೆತವರಲ್ಲ. ಅಂದರೆ ಸ್ವಂತಿಕೆಯನ್ನು ಕಳೆದುಕೊಳ್ಳದೆ ಪರಕೀಯವಾದದ್ದನ್ನು ಆತ್ಮೀಯವಾಗಿಸುವ ಕಲೆ ಅವರಲ್ಲಿ ಜನ್ಮಜಾತವಾಗಿತ್ತು.

ಈ ಬಗೆಯ ಕಲೆಯನ್ನು ಅವರು ಸಾಧಿಸಿದ್ದಾದರೂ ಹೇಗೆ ಎಂದು ನಾನು ಹಲವಾರು ಬಾರಿ ಯೋಚಿಸಿದ್ದೇನೆ. ಸಾಮಾನ್ಯವಾಗಿ ನಮಗೆ ನಮ್ಮದೆಂಬುದರ ಮೇಲೆ ಮೋಹ. ನಮಗೆ ಇತರವಾಗಿದ್ದರ ಬಗ್ಗೆ ತಿರಸ್ಕಾರ. ಕಾಮತರಿಗೆ ಇತರರ ಬಗ್ಗೆ ಅದನ್ನು ತಿಳಿದುಕೊಳ್ಳುವ ಕುತೂಹಲವಿತ್ತು. ನಾನು ನೋಡಿದಂತೆ ಅವರದು ಒಂಟಿ ಜೀವ, ಸ್ವಾವಲಂಬನೆಯನ್ನು ಅವರು ಕಲಿತಿರಲಿಲ್ಲ, ಅದು ಅವರ ಹುಟ್ಟುಗುಣವಾಗಿತ್ತು. ಇಂಥವರು ಸಹಜವಾಗಿಯೇ ಇತರರೊಂದಿಗೆ ಬೆರೆಯುವುದಿಲ್ಲ. ಕಾಮತರು ಮಾತ್ರ ಮೌನವಾಗಿಯೇ ಇತರರೊಂದಿಗೆ ಬೆರೆತರು. ತಮ್ಮ ಕ್ಯಾಮೆರಾ ಕಣ್ಣಿನಲ್ಲಿ ಜಗತ್ತನ್ನೇ ಸೆರೆಹಿಡಿದರು. ಅವರು ಜಗತ್ತನ್ನು ಎಷ್ಟು ಪ್ರೀತಿಸಿದರೆಂಬುದನ್ನು ಅವರು ಬರೆದ ಪುಸ್ತಕಗಳಿಂದ ಮತ್ತು ಅವರು ತೆಗೆದಿರುವ ಫೋಟೋಗಳಿಂದ ತಿಳಿಯಬೇಕು. ಈ ವಿಲಕ್ಷಣ ಸಂಗತಿ ನಡೆದಿರುವುದಕ್ಕೆ ಅವರ ನಿಸ್ವಾರ್ಥ ಮನೋಧರ್ಮ ಮತ್ತು ಅವರ ಮೋಹಕವಾದ ಹಾಸ್ಯಪ್ರಜ್ಞೆ ಇವೇ ಕಾರಣವೆಂದು ತೋರುತ್ತದೆ. ನಿಸ್ವಾರ್ಥತೆ ಮತ್ತು ಹಾಸ್ಯಪ್ರಜ್ಞೆ ಇವೆರಡೂ ಪರಸ್ಪರ ಸಂಬದ್ಧವಾದ ಗುಣಗಳಾಗಿವೆ. ಕಾಮತರು ತಾವೆಂದೂ ಸಾಹಿತಿಗಳೆಂದು ತಿಳಿದುಕೊಂಡವರೇ ಅಲ್ಲ. ಅವರು ಪ್ರಸಿದ್ಧಿಯಿಂದ ಯಾವಾಗಲೂ ಪರಾಙ್ಮುಖರಾಗಿಯೇ ಇರುತ್ತಿದ್ದರು.ಅವರ ಮತ್ತು ಜಗತ್ತಿನ ಸಂಬಂಧ ತಾತ್ಪೂರ್ತಿಕವಾಗಿತ್ತು.

ಒಳ್ಳೆಯ ಅರ್ಥವಲ್ಲಿ ಇದು ತಾತ್ಕಾಲಿಕ. ಜಗತ್ತಿನಲ್ಲಿ ಮನುಷ್ಯನ ಬಾಳ್ವೆ ಎಷ್ಟು ತಾತ್ಕಾಲಿಕವೋ ಅಷ್ಟೇ ಜಗತ್ತಿನ ಜೊತೆಗೆ ಸಂಬಂಧವೂ ತಾತ್ಕಾಲಿಕ. ಜಗತ್ತಿನ ಹಂಗಿಗೆ ಒಳಗಾಗದೇ, ಜಗತ್ತಿನ ಪ್ರಯೋಜನವನ್ನು, ಅದು ಎಷ್ಟೇ ಸ್ವಲ್ಪವಾಗಿರಲಿ, ಪಡೆದದ್ದಕ್ಕೆ ಕೃತಜ್ಞತೆಯನ್ನು ಮರೆಯದೆ ಅವರು ಬದುಕಿದ್ದರು. ತನ್ನ ಯೋಗ್ಯತೆಗೆ ತಕ್ಕ ಯಶಸ್ಸು ದೊರೆಯಲಿಲ್ಲವೆಂದು ಅವರು ಎಂದೂ ಚಿಂತಿಸಲಿಲ್ಲ. ಕಾರಣವೆಂದರೆ ಯಶಸ್ಸಿಗಾಗಿ ಅವರು ದುಡಿಯಲೇ ಇಲ್ಲ. ಅವರು ದುಡಿದದ್ದು ತಿಳುವಳಿಕೆಗಾಗಿ ಮತ್ತು ಮನಸ್ತೃಪ್ತಿಗಾಗಿ. ಅವರು ಸದಾ ಕರ್ಮನಿರತರು, ಆದರೆ ಅದೆಲ್ಲ ನಿಷ್ಕಾರಣವಾಗಿ. ಇಂಥವರಿಗೆ ಹಾಸ್ಯ ಒಲಿದುಬರುತ್ತದೆ. ಜಗತ್ತಿನ ಬಗ್ಗೆ ಅಸಹನೆಯಿಂದ ವರ್ತಿಸುವವರಿಗೆ ಹಾಸ್ಯಪ್ರಜ್ಞೆ ಇರಲಾರದು. ಜಗತ್ತಿನೊಡನೆ ಸಂಬಂಧ ತಾತ್ಕಾಲಿಕವೆಂದು ತಿಳಿದವರು ಸಹೃದಯತೆಯಿಂದಲೇ ವರ್ತಿಸುತ್ತಾರೆ. ಹಾಸ್ಯಪ್ರಜ್ಞೆ ಸ್ವಂತಕ್ಕೆ ಸುಖ ಕೊಡುವದಲ್ಲದೇ ಬೇರೆಯವರಿಗೂ ಅದು ಸಂತೋಷವನ್ನು ಕೊಡುತ್ತದೆ. ಸ್ವಂತ ಸ್ವಂತವಾದದ್ದರಿಂದ ಸುಸಂಬದ್ಧ, ಜಗತ್ತು ಅಂತರ್ವಿರೋಧಗಳಿಂದ ಅಸಂಬದ್ಧ.

೧೯೮೪ರಲ್ಲಿ ನನ್ನ ಹಿರಿಯ ಮಗನ ಮದುವೆ ಆದಾಗ ಆಮಂತ್ರಿತರಲ್ಲಿ ಕಾಮತರು ಒಬ್ಬರು. ಮದುವೆ ಬೆಂಗಳೂರಲ್ಲಿ ನಡೆದದ್ದರಿಂದ ಎಲ್ಲ ಸಾಹಿತಿಗಳೂ ಬಂದಿದ್ದರು. ಅದೊಂದು ಅಪೂರ್ವದ ಸಮಾವೇಶ. ಕಾಮತರು ಬಂದಿದ್ದರಿಂದ ಬಂದವರ ಫೋಟೋ ತೆಗೆಯಲು ಬಿನ್ನವಿಸಿಕೊಂಡೆ. ಕಾಮತರು ಒಪ್ಪಿಕೊಂಡರು. ಅವರಿಗೂ ಆ ಸಮಾವೇಶ ಅಪರೂಪದ್ದೆಂದು ಅನಿಸಿರಬೇಕು. ನಂತರ ಮದುವೆಯ ಗಡಿಬಿಡಿಯಲ್ಲಿ ತೊಡಗಿಕೊಂಡದ್ದರಿಂದ ನಾನು ಮರೆತುಬಿಟ್ಟೆ. ಮದುವೆ ಮುಗಿದು ನಾವೆಲ್ಲ ಆನಂದಕ್ಕೆ ತಿರುಗಿ ಹೋದೆವು. ಹತ್ತು ದಿನಗಳಾದ ಮೇಲೆ ನನಗೊಂದು ಪಾರ್ಸಲ್ ಬಂದಿತು. ಬಿಚ್ಚಿ ನೋಡಿದರೆ ಕಾಮತರೇ ಸ್ವಂತ ಕೈಯಿಂದ ತಯಾರಿಸಿದ ಸುಂದರವಾದ ಅಲ್ಬಂ! ದಪ್ಪಾದ ಕಪ್ಪು ಹಾಳೆಗಳ ಮೇಲೆ ಏರಿಸಿದ ಮದುವೆಯ ಫೋಟೋಗಳು. ಆಗ ಇನ್ನೂ ಬಣ್ಣದ ಫೋಟೋಗ್ರಾಫಿ ಬಂದಿರಲಿಲ್ಲ ಪುಣ್ಯಕ್ಕೆ. ಎಲ್ಲ ಕಪ್ಪು ಬಿಳುಪಿನ ಸುಂದರವಾದ ಫೋಟೋಗಳು. ಅವುಗಳ ಕೆಳಗೆ ಆರ್.ಕೆ. ಲಕ್ಷ್ಮಣರ ವ್ಯಂಗಚಿತ್ರಗಳ ಕೆಳಗೆ ಇರುವಂತೆ ಮಾರ್ಮಿಕವಾದ ಉಕ್ತಿಗಳು.

ಮದುವೆಯ ಆಲ್ಬಂ ಯಾರಿಗೆ ಗೊತ್ತಿಲ್ಲ? ಆದರೆ ಒಂದು ಫೋಟೋ ಕೂಡ ಜೀವಂತವಾಗಿರುವುದಿಲ್ಲ. ಫೋಟೋ ತೆಗೆಯುವ ಹೊತ್ತಿನ ಮಟ್ಟಿಗಾದರೂ ಮನುಷ್ಯ ಪ್ರಾಣವಿಲ್ಲದವರಂತೆ ನಿಂತಿರುತ್ತಾನೆ. ಫೋಟೋ ಪ್ರಜ್ಞೆಯ ಕ್ಷಣವೆಂದರೆ ಸಾವಿನ ಕ್ಷಣವೆಂದೇ ನನಗೆ ಮನವರಿಕೆಯಾಗಿಬಿಟ್ಟಿದೆ. ಸಭೆ ಸಮಾರಂಭಗಳಲ್ಲಿ, ಮದುವೆಯಲ್ಲಿ ತೆಗೆದ ಫೋಟೋಗಳೆಲ್ಲ ಸ್ಮಾರಕಗಳೇ ಹೊರತು ಅವುಗಳಲ್ಲಿ ಜೀವನದ ಲವಲವಿಕೆ ಇರುವುದಿಲ್ಲ. ಕಾಮತರು ಯಾರಿಗೂ ಗೊತ್ತಾಗದಂತೆ ಎಲ್ಲರ ಫೋಟೋ ತೆಗೆದಿದ್ದರು. ಎಲ್ಲ ಕಲಾಕೃತಿಗಳಂಥ ಮದುವೆಯ ಅಂತರಾರ್ಥವನ್ನು ಪ್ರಕಟಿಸುವ ಫೋಟೋಗಳು. ಈ ಆಲ್ಬಂ ಒಂದು ಕಲಾಕೃತಿಯಾಗಿ, ಅಮೂಲ್ಯವಾಗಿ ನನ್ನ ಹತ್ತಿರ ಇದೆ.

ಕಾಮತರ ಪುಸ್ತಕಗಳೂ ಕೂಡ ಇಂಥ ಫೋಟೋಗಳೇ. ಫೋಟೋಗ್ರಾಫಿ ಅವರಿಗೆ ಜೀವನದ ಅನುಕೃತಿ ಆಗಿರಲಿಲ್ಲ. ಕಲೆಯ ತತ್ವವನ್ನು ಅವರು ಜೀವನದಲ್ಲಿ ಹುಡುಕುತ್ತಿದ್ದರು. ಅವರದು ನಿರಂತರವಾದ ಹುಡುಕಾಟ, ಅನ್ವೇಷಣೆ. ಜಗತ್ತಿನ ವೈವಿಧ್ಯವನ್ನು, ಬದುಕಿನಲ್ಲಿಯ ಸೃಜನ ಶಕ್ತಿಯನ್ನು ಕಂಡು ಬೆರಗಾದ ಕಾಮತರ ಒಂಟಿಜೀವ ಜಗತ್ತಿನ ಫೋಟೋ ತೆಗೆದುಕೊಂಡು 'ಮರುಪಯಣ'ಕ್ಕೆ ನಿರ್ಗಮಿಸಿದೆ. ಅವರ ಬದುಕು ಯಾರಿಗೂ ಭಾರವಲ್ಲ. ಹೂವಿಗೆ ನೋವಾಗದಂತೆ ತುಂಬಿ ಹೂವಿನ ರಸವನ್ನು ಹೀರಿಕೊಂಡು ಹಾರಿ ಹೋಗುವಂತೆ ಅವರು ಕನಸಿನಲ್ಲಿ ಎಣಿಸದಂತೆ ಹೋಗಿಬಿಟ್ಟರು. ಅವರ ನೆನಪು, ಅವರ ಗ್ರಂಥ ಮತ್ತು ಫೋಟೋಗಳನ್ನು ಬಿಟ್ಟು ಹೋಗಿದ್ದಾರೆ.



# ಕೆ. ಎಲ್. ಕಾಮತ / ಕೃಷ್ಣಾನಂದ ಕಾಮತ

**ಡಾ|| ಜಿ.ಎಸ್. ಆಮೂರ**

ಕೆ.ಎಲ್. ಕಾಮತ, ಕೃಷ್ಣಾನಂದ ಕಾಮತರಾಗಿ ಪರಿವರ್ತನ ಹೊಂದಿದುದು ಕೋರೀಹುಳ ಪಾತರಗಿತ್ತಿಯಾಗಿ ಬದಲಾಗುವಷ್ಟು ಆಶ್ಚರ್ಯಕರವಾದರೂ ಅಷ್ಟೇ ಪ್ರಾಕೃತಿಕವಾದ ಘಟನೆ. ಕೆ.ಎಲ್. ಕಾಮತನನ್ನು ನಾನು ಬಹಳ ಸಮೀಪದಿಂದ ನೋಡಿದ್ದೇನೆ. ಕುಮಟೆಯ ಕೆನರಾ ಕಾಲೇಜಿನಲ್ಲಿ (ಈಗ ಅದೂ ಬದಲಾಗಿ ಎ.ವಿ. ಬಾಳಿಗಾ ಕಾಲೇಜ್ ಆಗಿದೆ) ನಾನು ಇಂಗ್ಲಿಷ್ ಅಧ್ಯಾಪಕನಾಗಿದ್ದಾಗ (೧೯೪೯-೧೯೫೮) ಕೆಲವು ವರ್ಷ ಕಾಲೇಜ್ ನಡೆಸುತ್ತಿದ್ದ ಹಾಸ್ಟೆಲ್ಲಿನ ರೆಕ್ಟರ್ ಎಂದೂ ಕೆಲಸ ಮಾಡಿದೆ. ರೆಕ್ಟರ್‌ಗಾಗಿ ಬೇರೆ ಮನೆ ಇರದ್ದರಿಂದ ಹಾಸ್ಟೆಲ್ಲಿನ ಮೂರು ಕೋಣೆಗಳೇ ನನ್ನ ಮನೆಯಾಗಿದ್ದವು. ನನ್ನ 'ಮನೆ'ಯೆದುರಿನ ಕೋಣೆಯಲ್ಲಿಯೇ ಕೆ.ಎಲ್. ಕಾಮತ, ಸ್ಯಾಮ್ಯುಎಲ್ ಜೇಕಬ್, ಆರ್. ಎಸ್. ಕಲ್ಯಾಣಪುರ – ಈ ಮೂವರು ವಿದ್ಯಾರ್ಥಿಗಳು ವಾಸಿಸುತ್ತಿದ್ದರು. ಜೇಕಬ್ ಒಬ್ಬ ಪ್ರತಿಭಾವಂತ ಅಥ್ಲೀಟ್ ಆಗಿದ್ದುದರಿಂದ ಅವನೇ ಈ ಗುಂಪಿನ ನಾಯಕನೂ ಆಗಿದ್ದ. ಮುಂದೆ ಅವನು ಸೈನ್ಯ ಸೇರಿ ದೊಡ್ಡ ಅಧಿಕಾರಿಯಾಗಿದ್ದ ಎಂದು ಕೇಳಿದ್ದೇನೆ. ಕಲ್ಯಾಣಪುರ್ ಸೌಮ್ಯ ಸ್ವಭಾವದವನಾದರೆ ಕಾಮತ್ ಅತಿಸೌಮ್ಯ ಸ್ವಭಾವದವನು. ಮಾತು ಕಡಿಮೆಯಾದರೂ ಬಹಳ ಸೋಷಿಯಲ್ ಸ್ವಭಾವ. ಮುಖದ ಮೇಲಿನ ಮುಗುಳುನಗೆ ಬಹುಶಃ ಮಲಗಿದ್ದಾಗಲೂ ಹಾಗೆಯೇ ಇರುತ್ತಿತ್ತೆಂದು ಕಾಣುತ್ತದೆ. (ಬಹುಶಃ ಜ್ಯೋತ್ಸ್ನಾ ಇದನ್ನು ಹೆಚ್ಚು ಅಧಿಕೃತವಾಗಿ ಹೇಳಬಲ್ಲರು. ಅವರೂ ನನ್ನ ವಿದ್ಯಾರ್ಥಿನಿಯೇ.) ನಮ್ಮ ಹಿರಿಯ ಮಗ ರವಿಗೆ ಆಗ ಎರಡು ಅಥವಾ ಮೂರು ವರ್ಷ. ಅವನು ದಿನದ ಬಹುಭಾಗವನ್ನು ಕಾಮತನ ಕೋಣೆಯಲ್ಲಿಯೋ ಅಥವಾ ನನಗೆ ಕಾಮತನಷ್ಟೇ ಪ್ರಿಯನಾಗಿದ್ದ ತಲಖಣಿ ಕೋಣೆಯಲ್ಲಿಯೋ ಕಳೆಯುತ್ತಿದ್ದ. ರವಿಯ ಮುದುವೆಯಲ್ಲಿ ಕಾಮತ ತಂದ ಉಡುಗೊರೆ ಅವನು ಆಗ ತೆಗೆದಿದ್ದ, ನಮಗೆಲ್ಲ ಮರೆತುಹೋಗಿದ್ದ, ಅವನ ಫೋಟೋಗಳು. ಬಹುಶಃ ಅವನನ್ನು ಬಿಟ್ಟು ಬೇರೆ ಯಾರಿಗೂ ಇಂಥ ಉಡುಗೊರೆಯ ವಿಚಾರವೇ ಹೊಳೆಯಲಾರದು!. ಇಂಟರ್ ಸೈನ್ಸ್ ಪಾಸಾದನಂತರ ಕಾಮತ ಪ್ರಾಣಿಶಾಸ್ತ್ರದ ಅಭ್ಯಾಸಕ್ಕಾಗಿ ಕರ್ನಾಟಕ ಕಾಲೇಜಿಗೆ ಹೊರಟುಹೋದ. ಆಗ ಅವನಿಗೆ ಸಹಾಯವಾಗಲೆಂದು ಪ್ರೊ. ವಿಲಿಯಮ್ ಭಾಸ್ಕರರಿಗೆ ಪತ್ರ ಬರೆದ ನೆನಪು. ಮುಂದೆ ಕೆಲವು ವರ್ಷ ಅವನ ಸಂಪರ್ಕ ತಪ್ಪಿಹೋಯಿತು. ಕಾಮತ್ ನ್ಯೂಯಾರ್ಕಿಗೆ ಹೋಗಿ ಪಿಹೆಚ್.ಡಿ. ಪಡೆದ. ಪ್ಲಾಸಿಯಲ್ಲಿ ಕೆಲವು ದಿನ ಎಂಟಮಾಲಜಿಸ್ಟ್ ಎಂದು ಕೆಲಸ ಮಾಡಿದ ಇತ್ಯಾದಿ. ನಂತರ ನಾನು ಅವನನ್ನು ನೋಡಿದ್ದು ಬೆಂಗಳೂರಲ್ಲಿ, ಆಗಲೇ ಅವನ ಮದುವೆಯಾಗಿತ್ತು. ಡಾ||! ತನ್ನದೇ ಆದ ಒಂದು ಸೈಂಟಿಫಿಕ್ ಲ್ಯಾಬೊರೇಟರಿ ತೆಗೆದಿದ್ದ. ಟಾಟಾ ಇನ್‌ಸ್ಟಿಟ್ಯೂಟ್‌ನಲ್ಲಿ ಆಗ ಪಿಹೆಚ್.ಡಿ ಮಾಡುತ್ತಿದ್ದ, ನನ್ನ ಮಗಳು ಶಶಿಯ ಮೂಲಕ ಅವನ ಕೆಲಸದ ವಿವರಗಳು ನನಗೆ ಆಗಾಗ ದೊರೆಯುತ್ತಿದ್ದವು. ನಂತರ ಒಂದೆರಡು ಸಲ ಮಲ್ಲೇಶ್ವರದ ಮನೆಗೂ ಹೋಗಿ ಬಂದೆ. ನಾವು ಅವನನ್ನು ಕೊನೆಯ ಸಲ ಕಂಡದ್ದು ಧಾರವಾಡದಲ್ಲಿ– ನಾನು ದಿನದಂತೆ ಆಶ್ರಮದ ದಿಕ್ಕಿನಲ್ಲಿ ವಾಕಿಂಗ್‌ಗೆ ಹೋಗಿದ್ದೆ. ವಾಕಿಂಗ್ ಡ್ರೆಸ್ ನಿಮಗೆ ಗೊತ್ತಲ್ಲ, ನಿಮ್ಮ ತೀರ ಪರಿಚಯದವರೂ ಕೂಡ ಆ ಮಾರುವೇಷದಲ್ಲಿ ನಿಮ್ಮನ್ನು ಗುರುತಿಸಲಾರರು. ಆದರೆ, ಯಾವುದೋ ಕಾರಣಕ್ಕಾಗಿ ಜ್ಯೋತ್ಸ್ನಾಳೊಡನೆ ಧಾರವಾಡಕ್ಕೆ ಬಂದು ಯುನಿವರ್ಸಿಟಿ ಗೆಸ್ಟ್‌ನಲ್ಲಿ ಉಳಿದು ಬೆಳಗ್ಗೆ ಹೊರಗೆ ಬಂದ ಕಾಮತ್ ನನ್ನನ್ನು ಅರ್ಧಫರ್ಲಾಂಗ್ ದೂರದಿಂದ ನನ್ನ ದನಿಯಿಂದಲೇ ಗುರುತು ಹಿಡಿದುಬಿಟ್ಟ, ನಂತರ ಇಬ್ಬರೂ ನಮ್ಮ ಮನೆಗೆ ಬಂದರು; ಹಾಲುಕುಡಿದರು. ಕಾಮತ್ ನನ್ನ ಮತ್ತು ನನ್ನ ಪತ್ನಿಯ ಫೋಟೋ ತೆಗೆದ. ಆಗಲೂ ಅವನ ಮುಖದ ಮೇಲೆ ೫೦ ವರ್ಷಗಳ ಹಿಂದೆ ನಾನು ನೋಡಿದ ನಗೆ ಇತ್ತು. ಜ್ಯೋತ್ಸ್ನಾಳ ಜೊತೆಗೆ ನನಗೆ ಇಂಥ ಸಲಿಗೆಯಿಲ್ಲ. ಕೆನರಾ ಕಾಲೇಜಿನಲ್ಲಿದ್ದಾಗ ನಾನು ಹುಡುಗಿಯರ (ಅದೂ ಸುಂದರ ಹುಡುಗಿಯರ) ಜೊತೆಗೆ ಮಾತನಾಡಿದ ನೆನಪೇ ಇಲ್ಲ. ಎಷ್ಟೋ ವರ್ಷಗಳ ನಂತರ ನಾನು ಧಾರವಾಡದ ಒಂದು ಬೀದಿಯಲ್ಲಿ ಜ್ಯೋತ್ಸ್ನಾರನ್ನು ಕಂಡಾಗ (ನನ್ನ ಜೊತೆಗಿದ್ದ ನನ್ನ ತಮ್ಮನಿಗೆ ಬೇಸರ ಬರುವಷ್ಟು) ಸಾಕಷ್ಟು ಮಾತಾಡಿದೆವು. ಜ್ಯೋತ್ಸ್ನಾರವರು ತಮಗಾದ ಆಶ್ಚರ್ಯವನ್ನು ಬಾಯಿಬಿಟ್ಟೇ ಹೇಳಿದರು. ಈ ಹೊತ್ತಿಗಂದರೆ ವಯಸ್ಸಾದ ನನಗೆ ನನ್ನಲ್ಲಿಯೇ ಹೆಚ್ಚು ವಿಶ್ವಾಸ ಹುಟ್ಟಿಕೊಂಡಿತ್ತು. ಕೆ.ಎಲ್. ಕಾಮತ ಹೋದನಂತರ ನಾನಿನ್ನೂ ಜ್ಯೋತ್ಸ್ನಾರನ್ನು ಕಂಡಿಲ್ಲ. ಅವರು ಧೈರ್ಯದ ಹೆಂಗಸು. ದೂರದ ಊರುಗಳಲ್ಲಿ ಒಬ್ಬರೇ ಕೆಲಸ ಮಾಡಿದವರು. ದೊಡ್ಡ ಹುದ್ದೆಗಳನ್ನು ನಿಭಾಯಿಸಿದವರು. ಅವರ ಧೈರ್ಯ ಮುಂದೂ ಅವರನ್ನು ಕಾಪಾಡುತ್ತದೆ ಎನ್ನುವ ವಿಶ್ವಾಸ ನನಗಿದೆ.

ಕೆ.ಎಲ್. ಕಾಮತ್ - ಕೃಷ್ಣಾನಂದ ಕಾಮತರಾಮುದರ ಹಿಂದೆ ಜ್ಯೋತ್ಸ್ನಾರ (ಸ್ಫೂರ್ತಿ?) ಕೈವಾಡವಿದೆಯೆಂದು ನನ್ನ ಊಹೆ. ವಿಜ್ಞಾನವನ್ನು ಅಭ್ಯಾಸಮಾಡಿದ, ಕೊಂಕಣೀ ಮಾತೃಭಾಷೆಯ, ಕಾಲೇಜಿನಲ್ಲಿದ್ದಾಗ ಕನ್ನಡದಲ್ಲಿ ಒಂದು ಲೇಖನವನ್ನೂ ಬರೆಯದ, ಕೆ.ಎಲ್. ಕಾಮತ, ಕೃಷ್ಣಾನಂದರಾಗಿ ೧೯೬೯ರಲ್ಲಿ **ನಾನೂ ಅಮೆರಿಕೆಗೆ ಹೋಗಿದ್ದೆ** ಅದೂ ಹೆಸರಾದ ಪ್ರಕಾಶನ ಸಂಘ ಮನೋಹರ ಗ್ರಂಥಮಾಲೆಯಲ್ಲಿ ಪ್ರಕಟಿಸಿದಾಗ ನನಗಾದ ಆಶ್ಚರ್ಯ, ಸಂತೋಷಗಳನ್ನು  ನೀವು ಊಹಿಸಲಾರಿರಿ. ನಾನು ಧಾರವಾಡದಲ್ಲಿ ಆಗಲೇ ಒಂದು ವರ್ಷ ಕಳೆದಿದ್ದೆ. ಹೀಗಾಗಿ ಈ ಪುಸ್ತಕದ ಬಗ್ಗೆ ಅವರಿಗೆ (ಬಹುವಚನದ ಪ್ರವೇಶವನ್ನು ಓದುಗರು ಗಮನಿಸಬೇಕು) ಬರೆಯಲಾಗಲಿಲ್ಲ. ನಂತರದ ವರ್ಷಗಳಲ್ಲಿ **ವಂಗದರ್ಶನ** (೧೯೭೨) **ಪ್ರಾಣಿ ಪರಿಸರ** ಮೊದಲಾದ ಹಲವಾರು ಗ್ರಂಥಗಳನ್ನು ಬರೆದು ಅವರು ನನಗಿಂತ ಮೊದಲೇ ಕನ್ನಡದ ಪ್ರಸಿದ್ಧ ಲೇಖಕರ ಸಾಲಿಗೆ ಸೇರಿಕೊಂಡರು. ಕೀಟಶಾಸ್ತ್ರದ ಅಭ್ಯಾಸದಿಂದ ದೊರಕಿಸಿದ ಸೂಕ್ಷ್ಮ ದೃಷ್ಟಿ, ಉತ್ತರಕನ್ನಡ ಜಿಲ್ಲೆಗೆ ವಿಶಿಷ್ಟವಾದ ಕುತೂಹಲ, (ಕೆಲವು ವರ್ಷ ಕಾರವಾರದಲ್ಲಿದ್ದ ನನ್ನ ಗುರುಗಳಾಗಿದ್ದ ಕೆ. ಆರ್. ಮಹಿಷಿಯವರು ನನ್ನನ್ನು ಈ ಬಗ್ಗೆ ಎಚ್ಚರಿಸಿದ್ದರು. ದಿನಾಲು ಒಂದೇ ದಿಕ್ಕಿಗೆ ವಾಕಿಂಗ್‌ಗೆ ಹೋದರೂ **ರೋಚ್ ಡೈಂ ಕೆಟ್ಟಾತ ಒಟ್ಟೋ** ಎಂದು ಸಂಶಯ ಪಡುವ ಜನ ಅವರು!) ಹಾಗೂ ಹಾಸ್ಯಗಳನ್ನು ಅವರ ಪ್ರವಾಸ ಗ್ರಂಥಗಳಲ್ಲಿ ನೋಡಬಹುದು. ನಾನೂ ೧೯೭೨ರಲ್ಲಿ ಅಮೆರಿಕೆಗೆ ಹೋಗಿ ಬಂದ ನಂತರ ಅವರ ಪುಸ್ತಕ ಮತ್ತಷ್ಟು ರುಚಿಕರವೆನಿಸಿತು. 'ಪಾಥೇರ್ ಪಾಂಚಾಲಿ', 'ಅಪುರ್ ಸಂಸಾರ್' ಮೊದಲಾದ ಬಂಗಾಲೀ ಚಿತ್ರಗಳನ್ನು ನೋಡಿದಾಗ ಅವರ ವಂಗದರ್ಶನದ ಹಲವಾರು ವಿವರಗಳು ನೆನಪಾದವು. ಇತ್ತೀಚೆಗೆ, ವಿಶ್ವಭಾರತಿಯ ಸಿಂಡಿಕೇಟ್ ಸದಸ್ಯನೆಂದು ಹಲವಾರು ಸಲ ಶಾಂತಿನಿಕೇತನಕ್ಕೆ ಹೋಗಿ ಬಂದಿದ್ದೇನೆ. ಆದರೆ ನಾನು ನೋಡಿದ ಆಕಡೆಮಿಕ್ ಜಗತ್ತೇ ಬೇರೇ - ಕಾಮತರು ಕಂಡ ಹಳ್ಳಿಗಾಡಿನ ಬಂಗಾಲವೇ ಬೇರೆ.

ಕಳೆದುಕೊಳ್ಳುವುದೂ ವಯಸ್ಸಾದವರ ಹಣೆಯ ಬರಹ. ನನ್ನ ಪ್ರೀತಿಯ ಗೆಳೆಯ ಶಾಂತಿನಾಥ ದೇಸಾಯಿಯವರನ್ನು ಕಳೆದುಕೊಂಡ ದುಃಖ ಶಾಂತವಾಗುತ್ತಿರುವಾಗಲೇ ಕೆ.ಎಲ್. ಕಾಮತರ  ಸಾವು ಬಂದು ಮತ್ತೆ ಅದನ್ನು ಮರುಕಳಿಸಿದೆ. ಕೆ.ಎಲ್. ಕಾಮತರಲ್ಲಿ ನಾನು ನನ್ನ ತಾರುಣ್ಯದ ನೆನಪುಗಳನ್ನೇ ಕಾಣುತ್ತಿದ್ದೆ. ಈಗ ಆ ನೆನಪುಗಳು ಮಸುಕಾಗುತ್ತಿವೆ.

❑



# ತಮಗೆ ತಾವೇ ಮಾದರಿ ಡಾ. ಕೃಷ್ಣಾನಂದ ಕಾಮತ

**ಶಾ. ಮಂ. ಕೃಷ್ಣರಾಯ**

ಪ್ರವಾಸ ಸಾಹಿತ್ಯಕ್ಕೆ ಹುಲುಸಾದ ಕಾಣಿಕೆ ನೀಡಿದ ಕೃಷ್ಣಾನಂದ ಕಾಮತರು ಬರೆವಣಿಗೆ ಆರಂಭಿಸಿದ ದಿನಗಳಲ್ಲಿ ಇವರಲ್ಲಿ ಬರೆಯುವ ಶಕ್ತಿಯಿದೆಯೆ? ಎಂದು ಅನುಮಾನ ಪಟ್ಟವರು ಇವರ ಮನೆಯಮಂದಿ. ನ್ಯೂಯಾರ್ಕಿನ ಸ್ಟೇಟ್ ಯೂನಿವರ್ಸಿಟಿಯಲ್ಲಿ ಅರಣ್ಯಶಾಸ್ತ್ರ ಪರಿಸರ ವಿಜ್ಞಾನ, ಕೀಟ ವಿಜ್ಞಾನವನ್ನು ಓದಿದ ಕೃಷ್ಣಾನಂದರು ಭಾರತಕ್ಕೆ ಬಂದ ಮೇಲೆ 'ನಾನೂ ಅಮೇರಿಕೆಗೆ ಹೋಗಿದ್ದೆ' ಎಂಬ ಗ್ರಂಥವನ್ನು ಬರೆದಾಗ ಅವರ ಮನೆಯವರೇ ನಂಬಲಿಲ್ಲವಂತೆ!

ಮೊದಲ ಪುಸ್ತಕದಲ್ಲೇ ಯಶಸ್ಸಿನ ಗೋಲ್ ಬಾರಿಸಿದ ಇವರು ಮುಂದೆ 'ವಂಗದರ್ಶನ', 'ನಾ ರಾಜಸ್ಥಾನದಲ್ಲಿ', 'ಬಸ್ತರ ಪ್ರವಾಸ', 'ಮಧ್ಯಪ್ರದೇಶದ ಮಡಿಲಲ್ಲಿ', 'ಮರುಪಯಣ' ದಂತಹ ಅಪೂರ್ವ ಕೃತಿಗಳನ್ನು ರಚಿಸಿ ಪ್ರವಾಸಿ ಸಾಹಿತ್ಯದ ಸೊಬಗು ಹೆಚ್ಚಿಸಿದರು. ಅವರು ಕಾದಂಬರಿ ಬರೆಯಲಿ, ಹೆಂಡತಿಗೆ ಪತ್ರ ಬರೆಯಲಿ, ಪ್ರಬಂಧ ಬರೆಯಲಿ ಅಲ್ಲೆಲ್ಲಾ ಅವರ ಪ್ರವಾಸಿಯ ಹೆಜ್ಜೆಯ ಗುರುತುಗಳನ್ನು ಕಾಣಬಹುದು. ಪ್ರವಾಸಿಗಳಲ್ಲಿರಬೇಕಾದ ಪ್ರಸಂಗಾವಧಾನ, ಪ್ರಯಾಸ ಪಡುವ ಪ್ರವೃತ್ತಿ, ಸೂಕ್ಷ್ಮ ನಿರೀಕ್ಷಣೆ, ಕಂಡದ್ದು ಕಲೆಯಾಗಿಸುವ ಅಂತರಂಗ, ಅಧ್ಯಯನದ ಹಿನ್ನೆಲೆ, ಸಾಮಾಜಿಕ ಕಾಳಜಿ, ತೌಲನಿಕ ದೃಷ್ಟಿಗಳು ಅವರಲ್ಲಿದ್ದವು. ಒಬ್ಬರು ಒಂದು ಪ್ಯಾರಾಗ್ರಾಫ್‌ನಲ್ಲಿ ಹೇಳುವುದನ್ನು ಒಂದೇ ವಾಕ್ಯದಲ್ಲಿ ತುಂಬುವ ಕಲೆಗಾರಿಕೆ ಅವರಿಗೆ ಸಾಧಿಸಿತ್ತು. ಜೀವನವನ್ನು ಹಗುರವಾಗಿ ಗ್ರಹಿಸದೆ, ಬರವಣಿಗೆಗೆ ತಿಳಿಹಾಸ್ಯ ಲೇಪನ ಮಾಡುವ ವಿನೋದ ವೃತ್ತಿ ಅವರಲ್ಲಿತ್ತು. ಅವರ ಬರೆವಣಿಗೆ ಹೃದ್ಯವಾಗಲು ಇದೇ ಕಾರಣ.

ಕೃಷ್ಣಾನಂದರು ನನಗೆ ಡಾ॥ ಜ್ಯೋತ್ಸ್ನಾಜೀಯವರಿಗಿಂತ ಮೊದಲು ಪರಿಚಿತರಾದರು. ಅವರು ನಮ್ಮ ಜಿಲ್ಲೆಯ ಹೊನ್ನಾವರದವರು. ಅವರು ಅಮೇರಿಕೆಗೆ ಹೋದರೂ ಹೊನ್ನಾವರ ಮತ್ತು ಅದರ ಪರಿಸರ ಮರೆತಿರಲಿಲ್ಲ. ಅವರ ಬರೆವಣಿಗೆಯಲ್ಲಿ ಹೊನ್ನಾವರದ ನೆನಪು ಅಲ್ಲಲ್ಲಿ ಹಣಿಕಿಕ್ಕುತ್ತದೆ. ಅವರು ತಮ್ಮ ತಾಯ್ನೆಲವನ್ನು ಎಷ್ಟು ಪ್ರೀತಿಸುತ್ತಿದ್ದರೆಂಬುದಕ್ಕೆ ಅವರ ಕೊನೆಯ ಕೃತಿ 'ಮರುಪಯಣ' ಸಾಕ್ಷಿ. ಹೊನ್ನಾವರದ ಗುಡ್ಡಬೆಟ್ಟಗಳು, ಸಮುದ್ರ, ದೋಣಿ ಮೀನುಗಾರರು, ಸಸ್ಯ, ಸಾಗರೋತ್ಪನ್ನಗಳು, ಹಳ್ಳಿಯ ಬದುಕು, ಕಸುಬು, ವೃತ್ತಿ-ಪ್ರವೃತ್ತಿಗಳು ಅವರನ್ನು ಕಾಡುತ್ತಿವೆ.

ನನ್ನ ವಿನಂತಿಯ ಮೇರೆಗೆ ಅವರು ಮತ್ತು ಜ್ಯೋತ್ಸ್ನಾಜೀ ನಮ್ಮ ಮನೆಗೆ ಬಂದರು. ನಾನಾಗ ಗೋವೆಯಲ್ಲಿದ್ದೆ. ಚಿಕ್ಕಮನೆ ದೊಡ್ಡಜನ! ಇವರನ್ನು ನಿಭಾಯಿಸುವುದು ಹೇಗೆ ಎಂದು ಚಿಂತೆಯಿತ್ತು. ಇಬ್ಬರೂ ಡಾಕ್ಟರರು. ಒಬ್ಬರು ವಿಜ್ಞಾನಿಯಾದರೆ ಮತ್ತೊಬ್ಬರು ಇತಿಹಾಸಕಾರರು. ಆದರೆ ಇಬ್ಬರೂ ಸಾಹಿತಿಗಳು. ಒಬ್ಬರು ವಿಜ್ಞಾನದ ಸತ್ಯವನ್ನು ಸಾಹಿತ್ಯದಲ್ಲಿ ಇಳಿಸಿದವರು. ಮತ್ತೊಬ್ಬರು ಇತಿಹಾಸದಲ್ಲಿದ್ದ ಸತ್ಯವನ್ನು ಹುಡುಕಿದವರು. ಆದರೆ ಒಂದು ಧೈರ್ಯವಿತ್ತು. ನಮ್ಮಲ್ಲಿ ಆತ್ಮೀಯತೆಯಿತ್ತು. ಸಲಿಗೆಯಿತ್ತು, ಆ ಧೈರ್ಯದಿಂದಲೇ ಅವರನ್ನು ಆಹ್ವಾನಿಸಿದ್ದೆ.

ರೈಲಿನಿಂದ ಇಳಿದ ಕೂಡಲೇ ಕೇಳಿದೆ, 'ಟ್ಯಾಕ್ಸಿ ತರಲೇ?' ಎಂದು. 'ಎಲ್ಲಿ ನಿಮ್ಮ ಮನೆ?' ಎಂದರು, ಅಲ್ಲಿಂದಲೇ ಕೈ ಮಾಡಿ ತೋರಿಸುತ್ತ, 'ಅಲ್ಲಿ ನೋಡಿ ಆ ಮನೆಗಳ ಅಂತಸ್ತಿನಲ್ಲಿದೆ' ಎಂದೆ. "ಇಷ್ಟು ಹತ್ತಿರವೇ ಬೇಡ ನಡದೇ ಹೋಗೋಣ" ಎಂದರು. ಮನೆಗಳೇನೋ ಹತ್ತಿರ ಇದ್ದಂತೆ ಕಾಣುತ್ತಿದ್ದವು. ಆದರೆ ರೈಲ್ವೇಯಾರ್ಡ್ ಸುತ್ತುವಾಕಿ ಹೋಗಬೇಕಾಗಿತ್ತು. ಆ ದಾರಿಯಲ್ಲಿ ಹೋದರೆ ಒಂದೂವರೆ ಮೈಲು ಹೋಗಬೇಕಾಗಿತ್ತು. ಮತ್ತೊಂದು ಕಡೆ ಸೇತುವೆಯಿತ್ತು. ಈ ದಾರಿಯಲ್ಲಿ ಹೋದರೆ ಒಂದು ಮೈಲಿ ನಡೆಯಬೇಕಾಗುತಿತ್ತು.

ಇದೀಗ ಗಂಟುಮೂಟೆಗಳೊಂದಿಗೆ ಬಂದಿಳಿದ ಇವರನ್ನು ನಡೆಸುವ ಇಷ್ಟ ನನಗಿರಲಿಲ್ಲ. ಕಣ್ಣೆದುರು ಮನೆಗಳು ಕಾಣುತ್ತಿದ್ದರೂ ಹತ್ತಿರವಲ್ಲಿಲ್ಲ ಎಂದು ನನಗೆ ಗೊತ್ತಿತ್ತು. ಟ್ಯಾಕ್ಸಿಯಲ್ಲಿಯೇ ಕರೆದೊಯ್ದೆ. ಸುಮಾರು ಹತ್ತು ದಿನ ಅವರು ನಮ್ಮಲ್ಲಿದ್ದರು. ಇಬ್ಬರೂ ನಮ್ಮೊಂದಿಗೆ ಅನ್ಯೋನ್ಯವಾಗಿ ಸೇರಿಕೊಂಡರು. ನಮ್ಮ ಮಕ್ಕಳೊಂದಿಗೆ ತಮಾಷೆ ಮಾಡುತ್ತಾ, ಅವರಿಗೆ ಕಥೆ ಹೇಳುತ್ತಾ, ನಗಿಸುತ್ತಾ ಆಟವಾಡುತ್ತಾ, ಕಾಗದದ ಬೇರೆ ಬೇರೆ ಆಕೃತಿಗಳನ್ನು ಮಾಡಿಕೊಡುತ್ತಾ, ರಂಜಿಸುತ್ತ ಇದ್ದ ಈ ಹಿರಿಯ ಜೀವಗಳು ಮನೆಗೆ ಹೊರಟು ನಿಂತಾಗ ಮಕ್ಕಳು 'ಹೋಗಬೇಡಿ ಅಂಕಲ್ ಇಲ್ಲೆ ಇರಿ' ಎಂದು ಹಠ ಮಾಡಿದರು.

ಅವರಿಗೆ ನಾಲಿಗೆ ರುಚಿ ಚೆನ್ನಾಗಿತ್ತು. ಅಡಿಗೆ ರುಚಿಕಟ್ಟಾಗಿ ಮಾಡುತ್ತಿದ್ದರು. ನಮ್ಮ ಮನೆಯಲ್ಲಿದ್ದಾಗಲೂ ಅಷ್ಟೆ. ನನ್ನ ಹೆಂಡತಿಗೆ ಅಡಿಗೆಗೆ ಅದು ಹಾಕಬೇಕು, ಇದು ಹಾಕಬೇಕು, ಹೀಗೆ ಹುರಿಯಬೇಕು, ಹಾಗೇ ಒಗ್ಗರಣೆ ಹಾಕಬೇಕು ಎಂದೆಲ್ಲಾ ಹೇಳಿಕೊಡುತ್ತಿದ್ದರು. ಊಟ ಮಾಡುವಾಗ  ಯಾವ ಕಾಮೆಂಟ್ಸ್ ಮಾಡುತ್ತಿರಲಿಲ್ಲ. ಉಪ್ಪು ಕಡಿಮೆಯಾಗಿ,  ಹುಳಿ ಹೆಚ್ಚಾಗಿರಲಿ, ತುಂಬ ಚೆನ್ನಾಗಿದೆ, ತುಂಬ ಚೆನ್ನಾಗಿದೆಯೆಂದು ಖುಷಿಯಿಂದ ಊಟ ಮಾಡುತ್ತಿದ್ದರು.

ಒಂದು ಮಾತು ನಿಜ. ಈ ದಂಪತಿಗಳಲ್ಲಿ ಒಣ ಆಡಂಬರ, ದೊಡ್ಡಸ್ತಿಕೆ, ಅಹಂಕಾರ ಎಳ್ಳಷ್ಟು ಇರಲಿಲ್ಲ. ಮಂಚವಿದ್ದೂ ನೆಲದ ಮೇಲೆ ಚಾಪೆ ಹಾಕಿಕೊಂಡು ಮಲಗುತ್ತಿದ್ದರು. ಖುರ್ಚಿಗಳಿದ್ದರೂ ನೆಲದ ಮೇಲೆ ಸೋಫಾಕ್ಕೆ ಒರಗಿ, ಗೋಡೆಗಾನಿಸಿಕೊಂಡು ಕೂಡುತ್ತಿದ್ದರು.

ಬೆಳಿಗ್ಗೆ ಎದ್ದು ಸ್ನಾನ ಮಾಡಿ, ತಿಂಡಿ ತಿಂದು ನಾವು ಗೋವಾ ಸುತ್ತಾಡಲು ಹೋಗುತ್ತಿದ್ದೆವು. ಅವರು ನನ್ನದೊಂದು ಪುಸ್ತಕಕ್ಕೆ ಚಿತ್ರಗಳನ್ನು ಒದಗಿಸುವುದಾಗಿ ಹೇಳಿದ್ದರು. ಅದರಂತೆ ಕತ್ತಿಗೊಂದು ಕ್ಯಾಮರಾ ತೂಗುಬಿಟ್ಟು, ಜೋಡಿಸುವ ಲೆನ್ಸ್, ಫಿಲ್ಮ್, ಬ್ಯಾಟರಿ ಇತ್ಯಾದಿ ಹೆಗಲ ಚೀಲದಲ್ಲಿ ಹಾಕಿಕೊಂಡು ಹೊರಡುತ್ತಿದ್ದರು. ದೇವಾಲಯಗಳಲ್ಲಿನ ಶಿಸ್ತು, ಸ್ವಚ್ಛತೆ, ಪೂಜಾರಿಗಳ ವಿನಯಪೂರ್ಣ ವರ್ತನೆ, ದುಡ್ಡಿನ ದಾಹವಿಲ್ಲದ ಗುಡಿಗಳು, ಕಟ್ಟಡದ ವೈವಿಧ್ಯಮಯ ಮಾದರಿಗಳು, ಸುತ್ತಲಿನ ಹಸಿರು ವಾತಾವರಣ, ಹೊಲ-ಗದ್ದೆಗಳು, ನದಿ-ತೊರೆಗಳು ಕಾಮತರನ್ನು ಮುದಗೊಳಿಸುತ್ತಿದ್ದುವು. ಅವರಿಗೆ ಒಂದು ಚಿತ್ರ ಬೇಕಾದರೆ ನಾಲ್ಕೈದು ಕೋನಗಳಲ್ಲಿ ನಾಲ್ಕೈದು ಚಿತ್ರಗಳನ್ನು ತೆಗೆಯುತ್ತಿದ್ದರು. ಪೋರ್ಚುಗೀಸರ ಕಾಲದಲ್ಲಿ ಗೋವೆಯಲ್ಲಿ ವೈವಿಧ್ಯಮಯ ವಾಸ್ತುಗಳು ತಲೆಯೆತ್ತಿದುವು. ಒಂದೊಂದು ಮನೆಯೂ ವಾಸ್ತು ಶೈಲಿಯ ಹೊಸತನ ತೋರುತ್ತದೆ.  ಕಾಮತರು ಇಂಥ ಅನೇಕ ಮನೆಗಳನ್ನು ಸೆರೆಹಿಡಿದರು. ಸಮುದ್ರ ದಂಡೆ, ನದಿಯ ಲಾಂಚ, ಮಾರುಕಟ್ಟೆ, ಕೂಲಿಕಾರ, ಮೀನುಗಾರ, ಗಾವಡಿ ಹೆಣ್ಣು-ಗಂಡು, ಒಂದೇ ಎರಡೇ ಕಂಡದ್ದೆಲ್ಲ ಕ್ಲಿಕ್ಕಿಸಿದರು. ಮುಳಗಾಂವದ ಹತ್ತಿರದ ಒಂದು ಹಳ್ಳಿಯ ದೇವಾಲಯದ  ಗೋಡೆಯ ಮೇಲೆ ಕಾವಿ ಕಲೆಯನ್ನು ನೋಡಿದರು. ಹತ್ತಿರದಿಂದ ಚಿತ್ರ ತೆಗೆದರು. (ಆಗ ಅವರು ಕಾವಿ ಕಲೆಯ ಅಧ್ಯಯನದಲ್ಲಿ ತೊಡಗಿದ್ದರು)

ವ್ಯಕ್ತಿಗಳ ಚಿತ್ರ ತೆಗೆಯುವಾಗ ಮಾತ್ರ ತುಂಬ ಎಚ್ಚರಿಕೆ ವಹಿಸುತ್ತಿದ್ದರು. ಒಮ್ಮೆ  ಮೀನು ಮಾರುಕಟ್ಟೆಯಲ್ಲಿ ಒಂದು ಮೀನುಗಾತಿಯ ಚಿತ್ರ ತೆಗೆಯಬೇಕಾಗಿತ್ತು. ಆಕೆಗೆ ಅರಿವಾಗದಂತೆ ಚಿತ್ರ ತೆಗೆಯಲು ಸಾಧ್ಯವಿತ್ತು. ಆದರೆ ಅದಕ್ಕೆ ಅವರು ಒಪ್ಪಲಿಲ್ಲ. ಆ ಮೀನುಗಾತಿಯ ಹತ್ತಿರ ಹೋಗಿ ಅವಳ ಅನುಮತಿ ಕೇಳಿದರು. ಅವಳ ಒಂದೇ ಚಿತ್ರ ತೆಗೆದುಕೊಂಡು ಅವಳ ಕೈಯಲ್ಲಿ ಒಂದು ನೋಟು ಇಟ್ಟರು. ಫೋಟೋಗ್ರಫಿಯಲ್ಲಿಯೂ ಸುಸಂಸ್ಕೃತತೆ ಸಾಧಿಸಿದ ಕಾಮತರು ದಾಮೋದರ ದೇವಾಲಯಕ್ಕೆ ಹೋದಾಗ ಅಲ್ಲಿಯ ಪರಿಚಾರಕರು ಹೆಬ್ಬಾಗಿಲಿನಲ್ಲಿ ನಿಲ್ಲಿಸಿದ ಕಲ್ಲಿನ ಜಯವಿಜಯರ ಚಿತ್ರ ತೆಗೆಯಲು ಅಡ್ಡಿ ಪಡಿಸಿದರು. ನನಗೆ ಸಿಟ್ಟು ಬಂತು. ಆದರೆ ಕಾಮತರು  ಅಷ್ಟೇ ಶಾಂತವಾಗಿ "ಇರಲಿ ಬಿಡು, ಅವರ ನಿಯಮ-ನಿರ್ಬಂಧನೆ ನಾವೇಕೆ ಮೀರಬೇಕು" ಎಂದರು.

ದಾರಿಯಲ್ಲಿ ಬರುವಾಗ "ಚಿತ್ರ ತೆಗೆದರೆ ಏನೂ ಆಗುವುದಿಲ್ಲ. ಅವರಿಗೆ ಇನ್ನಷ್ಟು ಪ್ರಚಾರ ಸಿಕ್ಕುತ್ತದೆ. ಅವರ ಮೌಢ್ಯಕ್ಕೆ ನಾವೇನು ಮಾಡೋಣ. ಖಜುರಾಹೋ, ಬೇಲೂರು-ಹಂಪಿಗಳಲ್ಲಿ ಪುರಾತನ ಶಿಲ್ಪಗಳಿದ್ದರೂ, ಅಲ್ಲಿ ಬಂದಿಯಿಲ್ಲ. ಆದರೆ ಇಲ್ಲಿ ರಂಜಾಳ ಗೋಪಾಲಶೆಣೈಯವರು ಮಾಡಿದ ಶಿಲ್ಪಗಳ ಚಿತ್ರ ತೆಗೆಯಬೇಡಿರೆಂದು ಹೇಳುವುದು, ಇವರು ಜಗತ್ತು ನೋಡಿಲ್ಲವೆಂದು ಸ್ಪಷ್ಟಪಡಿಸುತ್ತದೆ" ಎಂದರು.

ಕಾರವಾರಕ್ಕೆ ಬರುವ ದಾರಿಯಲ್ಲಿ ನಾವು ಪುರಾತನ ಪರ್ತಗಾಳಿ ಮಠಕ್ಕೆ ಹೋದೆವು. ಶ್ರೀಮದ್ ವಿದ್ಯಾಧಿರಾಜ ತೀರ್ಥ ಸ್ವಾಮೀಜಿಯವರು ಪೂಜೆಯಲ್ಲಿ ತೊಡಗಿದ್ದರು. ಕಾಮತರ ಕತ್ತಿನಲ್ಲಿ ಕ್ಯಾಮರಾ ನೋಡಿದ ಶಿಷ್ಯವರ್ಗ, ಫೋಟೊ ತೆಗೆಯಬೇಡಿ, "ಗುರುಗಳಿಗೆ ಕೋಪ ಬರುತ್ತದೆ", ಎಂದರು. ಗುರುಗಳನ್ನು ಬಲ್ಲ ನಾನು ಅವರು ಪೂಜೆ ಮಾಡುವಾಗ ಚಿತ್ರ ತೆಗೆಯಿರಿ ಎಂದೆ. ಗುರುಗಳು ನಮಗೆ ಬೆನ್ನುಮಾಡಿ ಕುಳಿತುಕೊಂಡಿದ್ದರು. ನಾವು ಬಂದುದು ಅವರಿಗೆ ಗೊತ್ತಿರಲಿಲ್ಲ. ಕಾಮತರು ಕ್ಯಾಮರಾ ರೆಡಿಮಾಡಿಕೊಂಡು ಕ್ಲಿಕ್ಕಿಸಿದರು. ಫ್ಲಾಷ್ ಬೆಳಕು ದೇವರ ಮೇಲೆ ಬಿದ್ದಾಗ ಗುರುಗಳು ಹಿಂತಿರುಗಿ ನೋಡಿದರು. ಅಲ್ಲಿಂದಲೇ ಬಲಗೈ ಎತ್ತಿ ತಮ್ಮ ಅನುಮತಿ ಸೂಚಿಸಿದರು. ಕಾಮತರ ಉತ್ಸಾಹಕ್ಕೆ ಪಾರವೇ ಇಲ್ಲ. ಆ ಬೃಹನ್ಮಠದ ಮೂಲೆ ಮೂಲೆಯ ಚಿತ್ರಗಳನ್ನು ದಾಖಲಿಸಿದರು. ಗುರುಗಳು ಪೂಜೆ ಮುಗಿಸಿ ಹೊರಬಂದರು. ಕಾಮತರನ್ನು ಕಂಡು ಅವರ ಮನೆತನದ ವಿಚಾರವೆಲ್ಲ ಕೇಳಿದರು. ಪ್ರಸಾದ ಸ್ವೀಕರಿಸಿ ಮಹಡಿಗೆ ಬನ್ನಿ ಎಂದು ಆದೇಶ ನೀಡಿದರು. ನಾವು ಮೂವರು ಊಟ ಮುಗಿಸಿ ಗುರುಗಳ ಕೊಠಡಿಗೆ ಹೋದೆವು. ಗುರುಗಳು ನಮ್ಮನ್ನು ಕೂಡಿಸಿಕೊಂಡು ಶ್ರೀಗೋಕರ್ಣ ಪರ್ತಗಾಳಿ ಮಠದ ಸಮಗ್ರ ಇತಿಹಾಸ ಸಂಕ್ಷಿಪ್ತವಾಗಿ ಹೇಳಿದರು. ತಮ್ಮ ವಸ್ತು ಸಂಗ್ರಹಾಲಯಕ್ಕೆ ಕರೆದುಕೊಂಡು  ಹೋದರು. ಅಲ್ಲಿರುವ ಗೊಂಬೆ, ಚಿತ್ರ, ಪುಸ್ತಕ, ಪಟ, ಹಸ್ತಪ್ರತಿಗಳನ್ನು ತೋರಿಸಿದರು. ಕಾಮತರು ಹುರುಪಿನಿಂದ ಅವೆಲ್ಲವುಗಳ ಚಿತ್ರ ತೆಗೆದರು. ಗುರುಗಳು ಕೆಲವು ಅಮೂಲ್ಯವಾದ ಪುಸ್ತಕ, ಪಟ, ಚಿತ್ರಗಳನ್ನು ತೋರಿಸಿ ಇವುಗಳನ್ನು ಬೇಕಾದರೂ ಚಿತ್ರೀಕರಿಸಬಹುದು ಎಂದರು. ಕಾಮತರ ಉತ್ಸಾಹ ಇಮ್ಮಡಿಯಾಯಿತು. ಒಟ್ಟಿಗೆ ನೂರಾರು ಚಿತ್ರಗಳನ್ನು ತೆಗೆದರು. ಎಷ್ಟು ರೀಲು ಖರ್ಚಾಯಿತೋ ಅವರಿಗೇ ಗೊತ್ತಿಲ್ಲ. ಫಿಲ್ಮ ಬಳಸುವಾಗ ಅವರು ತೋರುವ ಧಾರಾಳತನ ನಾನು ಇನ್ನೆಲ್ಲಿಯೂ ಕಂಡಿಲ್ಲ. ಪರ್ತಗಾಳಿಯಿಂದ ನಾವು ಕಾರವಾರಕ್ಕೆ ಅವರ ತಂಗಿಯ ಮನೆಗೆ ಬಂದೆವು.

ಕ್ಯಾಮರಾ ಕತ್ತಿಗೇರಿಸಿಕೊಂಡು ಹೊರಟರೆ ಅವರ ಕಣ್ಣು ವಸ್ತುವನ್ನು ಹುಡುಕುತ್ತಿತ್ತು. ಅವರ ಕ್ಯಾಮರಾ ಕಣ್ಣಿಗೆ ಮಡಿ ಮೈಲಿಗೆಯಿರಲಿಲ್ಲ. ಕೀಟದಿಂದ ಹಿಡಿದು ಕುದುರೆಯವರೆಗೂ, ಆದಿವಾಸಿಗಳಿಂದ ಹಿಡಿದು ಆಧುನಿಕರವರೆಗೂ, ಎಲ್ಲವನ್ನೂ ತಮ್ಮ ತೆಕ್ಕೆಗೆ ತರುವ ಹಂಬಲ ಅವರದು. ಅವರು ಬೆಂಗಳೂರಿನಲ್ಲಿ ವೈಜ್ಞಾನಿಕ ಸ್ಟುಡಿಯೋ ನಡೆಸುತ್ತಿದ್ದರು. ಅದರಲ್ಲಿ ಸೂಕ್ಷ್ಮ ಕೀಟಗಳ ಅಂಗಾಂಗವನ್ನು ಬಿಡಿಬಿಡಿಯಾಗಿ ಸೆರೆ ಹಿಡಿಯುತ್ತಿದ್ದರು. ಅವರು ಫೋಟೋಗ್ರಫಿಯಿಂದ ಹಣ ಸಂಪಾದಿಸಲಿಲ್ಲ, ಆದರೆ ಹೆಸರು ಸಂಪಾದಿಸಿದರು. ಅವರ ಸಂಗ್ರಹದಲ್ಲಿದ್ದ ಸಾವಿರಾರು ನೆಗೆಟೀವ್ಸ್‌ಗಳನ್ನು ನೋಡಿದಾಗ ಫೋಟೋಗ್ರಫಿಯಿಂದ ಇವರು ಕಳೆದುಕೊಂಡಿದ್ದೆಷ್ಟು ಎಂದು ಅಂದಾಜು ಬರಬಹುದು. ಉತ್ತರ ಕನ್ನಡ ಜಿಲ್ಲೆಯ ಗ್ಯಾಝೆಟಿಯರ್‌ಗೆ ಬೇಕಾದ ನೂರಾರು ಫೋಟೋ ತೆಗೆದುಕೊಟ್ಟರೂ ಒಂದು ಬಿಡಿಗಾಸು ತೆಗೆದುಕೊಳ್ಳಲಿಲ್ಲವೆಂದು ಡಾ॥ ಸೂರ್ಯನಾಥ ಕಾಮತರೇ ಒಂದು ಸಭೆಯಲ್ಲಿ ಹೇಳಿದ್ದರು.

ಇದಲ್ಲದೆ ಅವರಲ್ಲಿ ಇನ್ನೊಂದು ಕಲೆ ಅಡಕವಾಗಿತ್ತು. ರಾಜಸ್ಥಾನದಲ್ಲಿ, ಮಧ್ಯಪ್ರದೇಶದಲ್ಲಿ, ಬಂಗಾಲದಲ್ಲಿ ಎಲ್ಲಿಯೇ ಆಗಲಿ ತಾವು ನೋಡಿದ ಚಿತ್ರ-ಶಿಲ್ಪಕೃತಿಗಳನ್ನು ಯಥಾವತ್ತಾಗಿ ಇಂಡಿಯನ್ ಇಂಕ್‌ನಿಂದ ಅಚ್ಚುಕಟ್ಟಾಗಿ ಮೂಡಿಸುತ್ತಿದ್ದರು. 'ಬಸ್ತರ ಪ್ರವಾಸ' 'ಕಾಪಿಕಲೆ', ಪುಸ್ತಕಗಳಲ್ಲಿ ಅವರು ಬಿಡಿಸಿದ ಚಿತ್ರಗಳಿವೆ. ಅವರ ಅನೇಕ ಪುಸ್ತಕಗಳಲ್ಲಿ ಅವರು ಕ್ಯಾಮರಾದಲ್ಲಿ ಸೆರೆಹಿಡಿದ ಚಿತ್ರಗಳಿವೆ. ಹೀಗೆ ಕಾಮತರು ಪ್ರವಾಸ ವರ್ಣನೆಯನ್ನು ಶಬ್ದಮಯಗೊಳಿಸದೆ ಚಿತ್ರವತ್ತಾಗಿ ಮಾಡಿದರು. ಅವರು ಬರೆದ ಪುಸ್ತಕಗಳಲ್ಲಿ ಸಣ್ಣ ಸಣ್ಣ ಘಟನೆಗಳೂ ರಸವತ್ತಾಗಿ ದಾಖಲಾಗುವಂತೆ, ಕಣ್ಣೆದುರು ಇಟ್ಟ ಚಿತ್ರದಂತೆಯೂ ಭಾಸವಾಗುತ್ತವೆ. ಅವರ ನಿರೀಕ್ಷಣಾ ಸಾಮರ್ಥ್ಯ ಅಂತಹುದು.

ನಾನು 'ನೂತನ'ದ ಸಂಪಾದಕನಾಗಿ ಬಂದಾಗ ಅವರ ಮನೆಗೆ ಹೋದೆ, ನೀವು ನಮ್ಮ ಪತ್ರಿಕೆಗೆ ಬರೆಯಬೇಕು ಎಂದೆ. 'ನಾನು ಬರೆಯುವುದಿಲ್ಲ' ಎಂದರು. ಅಲ್ಲಿ ಇಂಥವರಿದ್ದಾರೆ ನನ್ನನ್ನು ನೋಯಿಸಿದ್ದಾರೆ. ನಾನು ಬರೆಯುವುದಿಲ್ಲ, ಎಂದರು. ನನಗೆ ಅವರನ್ನು ಬಿಡಲು ಮನಸ್ಸಿರಲಿಲ್ಲ. ಮರುದಿನ ಅವರ ಮನೆಗೆ ಆ ವ್ಯಕ್ತಿಯನ್ನೇ ಕರೆದೊಯ್ದು ರಾಜಿ ಮಾಡಿಸಿದೆ! ಅವರು ಬರೆಯತೊಡಗಿದರು. ಅವರು ಲೇಖನಗಳನ್ನು ಅಂದವಾಗಿ ಬರೆದು ಅದಕ್ಕೆ ಅಗತ್ಯವಿರುವ ಚಿತ್ರಗಳನ್ನು ಇಟ್ಟು ಸಕಾಲದಲ್ಲಿ ತಂದುಕೊಟ್ಟು ಹೋಗುತ್ತಿದ್ದರು. ಅವರು ಒಪ್ಪಿಕೊಂಡರೆ ಸಮಯಕ್ಕೆ ಸರಿಯಾಗಿ ಲೇಖನಗಳು ಬರುತ್ತಿದ್ದವು. ಅವರು ತಮ್ಮ ಮಗ ವಿಕಾಸ ಆರಂಭಿಸಿದ www.kamat.com ಎಂಬ ವೆಬ್‌ಸೈಟ್ ನಡೆಸುತ್ತಿದ್ದರು. ಇಲ್ಲಿಂದ ಕಳಿಸಬೇಕಾದ ಲೇಖನ ಅಚ್ಚುಕಟ್ಟಾಗಿ ಟೈಪಿಸಿ, ಅದಕ್ಕೆ ಅಗತ್ಯವಾದ ಚಿತ್ರಗಳನ್ನು ಜೋಡಿಸಿ ಒಂದೊಂದು ಕವರ್ ತುಂಬಿ ಇಡುತ್ತಿದ್ದರು. ಒಂದು ದಿನ ಒಟ್ಟಿಗೆ ಎಲ್ಲವನ್ನು ಚೆನ್ನಾಗಿ ಪ್ಯಾಕ್ ಮಾಡಿ ರವಾನಿಸುತ್ತಿದ್ದರು. ಕಾಮತರಲ್ಲಿ ಅಚ್ಚುಕಟ್ಟುತನ, ಸಮಯಪ್ರಜ್ಞೆ, ಖಚಿತಜ್ಞಾನ, ಪ್ರಾಮಾಣಿಕತೆ ಇತ್ತು.

ಕಾಮತರು ಹಣಕ್ಕಾಗಿ ಬರೆಯಲಿಲ್ಲ. ಪತ್ರಿಕೆಗಳಿಗೂ ಅವರು ತಾವಾಗಿಯೇ ಲೇಖನ ಕಳಿಸುತ್ತಿರಲಿಲ್ಲ. ಬೇಡಿಕೆ ಇದ್ದಷ್ಟೆ ಬರೆಯುತ್ತಿದ್ದರು. ಅವರಿಂದ ಕರ್ನಾಟಕ ಪ್ರವಾಸಕಥನ ಬರೆಯಿಸಬೇಕೆಂದು ತುಂಬ ಪ್ರಯತ್ನಿಸಿದೆ. ಅದಾಗಲಿಲ್ಲ. ಕಾಮತರು ಪ್ರಚಾರ ಬಯಸಲಿಲ್ಲ. ಪ್ರಶಸ್ತಿ ಬಯಸಲಿಲ್ಲ, ಲೇಖನ ಪುಸ್ತಕ ಪ್ರಕಟನೆಗಾಗಿ ಅಂಗಲಾಚಲಿಲ್ಲ. ಅವರು ಬರೆದ 'ಪ್ರಾಣಿ ಪರಿಸರ' (೧೯೭೫) 'ನಾನೂ ಅಮೇರಿಕೆಗೆ ಹೋಗಿದ್ದೆ' (೧೯೬೯) 'ಬಸ್ತರ ಪ್ರವಾಸ' (೧೯೯೧) ಗಳಿಗೆ ಬಹುಮಾನಗಳು ಬಂದಿವೆ. ಅವರು ಹೊನ್ನಾವರದಲ್ಲಿ ನಡೆದ ಉತ್ತರ ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವೆಲ್ಲ ಅವರು ಬಯಸದೆ ಬಂದ ಪುರಸ್ಕಾರಗಳು.

ಕಾಮತರು, ಲೇಖಕರು ಎಷ್ಟು ಆದರ್ಶ ಬದುಕು ಬಾಳಬಹುದು ಎಂಬುದನ್ನು ತೋರಿಸಿಕೊಟ್ಟರು. ಪ್ರಶಸ್ತಿಗಾಗಿ, ಪ್ರಸಿದ್ಧಿಗಾಗಿ ಪರದಾಡುವ ಸಾಹಿತಿ, ಕಲಾವಿದರನ್ನು ಕಂಡಾಗ ಕಾಮತರ ಎತ್ತರ ಗೊತ್ತಾಗುತ್ತದೆ. ಸಾದಾ ಉಡುಪು, ಸಾದಾ ಬದುಕು, ಉನ್ನತ ವಿಚಾರ, ವ್ಯಾಪಕ ಓದುಗಳಿಂದ ಕಾಮತರು ತಮಗೆ ತಾವೇ ಮಾದರಿಯಾದರು.





# ಗಾಳಿಕುದುರೆಯ ಪಯಣಿಗ ಹಾಯಿ ಮಡಚಿ ಸಾಗಿದ!

**ಶಿವಾನಂದ ಕಳವೆ**

ಮಲ್ಲೇಶ್ವರದ ಶಶಿಕಿರಣ ಅಪಾರ್ಟ್‌ಮೆಂಟ್, ಜನಾಂಗ ವೈವಿಧ್ಯವೆಲ್ಲ ಠಿಕಾಣಿ ಹೂಡಿದ 'ಮಿನಿ ಭಾರತ'. ವಿಭಿನ್ನ ಸಂಸ್ಕೃತಿ, ಪರಂಪರೆಯನ್ನು ಮೆರೆವ ಗುಜರಾತ್, ರಾಜಸ್ಥಾನ, ಕಾಶ್ಮೀರ, ಡೆಲ್ಲಿ, ಮುಂಬೈ, ಕೇರಳ ಮುಂತಾದೆಡೆಗಳಿಂದ ಹಾಸಿಗೆಯ ಹಾಗೇ ಸುರುಳಿಸುತ್ತಿ ತಂದವರೆಲ್ಲ ಸಂಸಾರ ಹೂಡಿದ ಅದೊಂದು ಸಂಸ್ಕೃತಿ ಸಂಗಮ. ಅನ್ನದ ದಾರಿ ಹುಡುಕುತ್ತ ಮಹಾನಗರ ಸಂಸ್ಕೃತಿಯಲ್ಲಿ ಮಹಾಯಾನ ಮಾಡುವವರ ತಾಯ್ನೆಲದ ಮಳೆ, ಬಿಸಿಲು, ಕಾಡು, ಹೂವು, ಹಕ್ಕಿಗಳ ಒಡನಾಟದ ಸವಿ ನೆನಪುಗಳೆಲ್ಲ ನಿತ್ಯ ಒತ್ತಡದ ಪ್ರಾರಬ್ಧದಲ್ಲಿ ಬಳಲುತ್ತವೆ. ಮೂಲ ಸಂಸ್ಕೃತಿಯ ಹಸಿಹಸಿ ನೆನಪುಗಳು ಇಲ್ಲಿ ನಯಲಾನ್ ದಾರಕ್ಕೆ ಹರಗಿಟ್ಟ ಬಟ್ಟೆಯ ಹಾಗೇ ಒಣಗಿ ಒಣಗಿ ಸಾಯುತ್ತ ಮಣ್ಣ ಕಂಪಿನ ಪ್ರೀತಿ ಅಳಿಯುತ್ತದೆ. ಗಿಜಿಗುಡುವ ವಾಹನ ಮೂಗಿನಲ್ಲಿ ಕಟ್ಟಿಕೊಟ್ಟ ಕಾರ್ಬನ್ನಿನ ಕಪ್ಪು ಹಾಗೂ ಸಿಗ್ನಲ್ ಲೈಟಿನೆದುರಿನ ನರ್ತನದ ಜಂಜಡವಿರುವಾಗ ನೆಲದ ನೆನಪುಗಳಿಗೆ ಜತನದ ಆರೈಕೆ ಇದ್ದರೇನೆ ಉಳಿವು. ಹಾಗಾಗಿ ನೆಲ-ಮನೆಯ ಪ್ರೀತಿಯ ನೆನಪು ಯಾಂತ್ರಿಕ ಬದುಕಲ್ಲಿ ದಿಕ್ಕಾಪಾಲು.

ಎಲ್ಲಿಂದಲೋ ಬಂದವರನ್ನೆಲ್ಲ ಶಶಿಕಿರಣದ ಬಾಗಿಲಲ್ಲಿ ಕಂಡು ಬಾಹ್ಯ ನೋಟಕ್ಕೆ ದಂಗಾಗಿ ಹೋದೆ. ಆದರೆ ೧೯೯೭ರ ಆ ದಿನ ಮಹಡಿಯ ಪುಟ್ಟ ತಾವಿನಲ್ಲಿ ತೇಟ್ ಬನವಾಸಿಯ ಎತ್ತಿನಗಾಡಿಗಳ ಕಿಣಿ ಕಿಣಿ ನಾದ ಕೇಳಿತು. ಸೊಬಗಿನ ಯಾತ್ರೆಗೆ ಶರಾವತಿಯಲ್ಲಿ ಹಾಯಿದೋಣಿಯೆಂಬ ಗಾಳಿಕುದುರೆ ಸವಾರಿ ಸಾಗಿತು. ಮುಂಜಾನೆಯ ಚಳಿಗೆ ಅಂಜಿ ಮುಸುಕು ಹೊದ್ದು ಮಲಗಿದ ಶಿರಸಿ ನಗರದ ಮಧ್ಯೆ ಜಾನಪದ ಚಕ್ರಗಳು ಉರುಳಿದವು. ಬತ್ತದ ಚೀಲದೊಂದಿಗೆ ಬಂದು ಬಿಡಕಿ ಬೈಲಿನಲ್ಲಿ ಮುಕ್ಕಾಂ ಹೂಡಿದ ಚಕ್ಕಡಿಗಳ ಮೂರುನಾಲ್ಕು ದಶಕದ ನೆನಪುಗಳು ಒದಗಿದವು. ಕಾಳಿ ಕಣಿವೆಯ ಸೈಕ್ಸ್ ಪಾಯಿಂಟಿನ ಹುಲಿಮುಖದ ತಾಜಾ ಕತೆ ಕೇಳುವಾಗ ಕಿಟಕಿಯಾಚೆಯ ಬೆಂಗಳೂರಿನ ಟ್ರಾಫಿಕ್ ಗದ್ದಲದ ಮಧ್ಯೆ ಕಾಡು ಕೂಡಿದ ಅನುಭವ. ಉತ್ತರಕನ್ನಡದ ನಿಸರ್ಗ ವೈವಿಧ್ಯದ ಮಧ್ಯೆ ಬೆಳೆದು ಬಂದ ಖ್ಯಾತ ಬರಹಗಾರ ಡಾ. ಕೃಷ್ಣಾನಂದ ಕಾಮತರ ಜೊತೆ ಮಾತು ಆರಂಭವಾದಾಗ ಅಲ್ಲಿ ಕಾಣುತ್ತಿದ್ದುದು ಹಳ್ಳಿಗಾಡಿನ ಹಸಿಹಸಿ ನೆನಪುಗಳ ಸಂತೆ.

ಮೂರು ದಶಕಗಳಿಂದ ಉತ್ತರ ಕನ್ನಡದಾಚೆಯ ದೂರದೂರುಗಳಲ್ಲಿ ಅಲೆದಾಡಿದವರು, ಅಷ್ಟೇಕೆ ಬೆಂಗಳೂರಿನ ಮಾಯಾನಗರಿಯಲ್ಲಿ ಠಿಕಾಣಿ ಹೂಡಿದರೂ ತಮ್ಮ ಊರಿನ ಆಪ್ತ ನೆನಪುಗಳನ್ನು ಕುಡಿಕೆಯಲ್ಲಿ ಜೋಪಾನವಾಗಿ ಬಚ್ಚಿಟ್ಟಿದ್ದವರು. ವರ್ತಕರ ಕುಟುಂಬದಲ್ಲಿ ಜನಿಸಿದ ಕಾಮತರು ಅಲ್ಲಿಂದ ಕಲಿತಿದ್ದೆಂದರೆ ಬಹುಶಃ ನೆನಪುಗಳನ್ನು ಕಳಕೊಳ್ಳದ ಕಂಜೂಷಿತನ ಮಾತ್ರ! ಯಾವ ಕೃತಕತೆಯ ಸೋಂಕಿಲ್ಲದೇ ದಟ್ಟ ಅನುಭವಗಳನ್ನು ನಮ್ಮೆದುರು ತೆರೆದಿಡುವ ಕಲೆಯನ್ನು ಕಾಂಕ್ರೀಟ್ ಕಾಡಿನ ಮಧ್ಯೆ ಉಳಿಸಿಕೊಳ್ಳುವದಕ್ಕೆ ಎದೆಯ ಪ್ರೀತಿಬೇಕು. ಅದು ಇವರಿಗೆ ಕರಗತ.

ಕ್ಯಾಮರಾ ಹಿಡಿದು ನೆರಳು ಬೆಳಕಿನ ಆಟವನ್ನು ೧೯೫೪ರಿಂದಲೇ ದಾಖಲಿಸುತ್ತ ಬಂದ ಕಾಮತರು ಅರಣ್ಯ ಜಿಲ್ಲೆಯಾದ ಉತ್ತರಕನ್ನಡದ ಉದ್ದಗಲ ಸುತ್ತಿದವರು. ಇಲ್ಲಿನ ನೆಲ, ಜನಾಂಗ, ಸಂಸ್ಕೃತಿ ಬೃಹತ್ ಯೋಜನೆಗಳ ಪ್ರಾರಬ್ಧದಲ್ಲಿ ಮುಕ್ಕಾಗುವ ಮುನ್ನವೆ ಶ್ರೀಮಂತ ಅನುಭವಗಳನ್ನು ಎತ್ತಿ ತಂದವರು. ಡಾ. ಸೂರ್ಯನಾಥ ಕಾಮತರು ಈ ಜಿಲ್ಲೆಯ ಗೆಜೆಟ್ಟಿಯರ್ ಸಂಪಾದನೆ ಮಾಡುವಾಗಂತೂ ಜೊತೆ ನಿಂತು ಸಾವಿರ ಸಾವಿರ ಚಿತ್ರಗಳನ್ನು ದಾಖಲಿಸಿದವರು. ಜೋಗಜಲಪಾತದಲ್ಲಿ ಶಕ್ತಿ ಉತ್ಪಾದನೆಗೆ ಮುನ್ನವೇ ಕಾಲ್ನಡಿಗೆಯಲ್ಲಿ ಶರಾವತಿ ಕಣಿವೆಯ ವೈಭವ ಅನುಭವ, ಕಡಲ ತೀರಕ್ಕೆ ಬಂದ ತಾಜಾ ಮೀನು, ಕರಿಮಣಿ ಗೌಡ್ತಿಯರ ಜಾನಪದ ಬದುಕು, ದೇವಾಲಯದ ಗೋಡೆಗೆ ಮೂಡಿದ ಕಾವಿಕಲೆ ಸೊಬಗೆಲ್ಲ ಕಾಮತರ ಕ್ಯಾಮರಾದ ವಸ್ತು.

ಖುದ್ದು ಬೆಂಗಳೂರಿನ ನಿವಾಸಿ ಕೃಷ್ಣಾನಂದರು ಮೂಲ ಊರಾದ ಹೊನ್ನಾವರಕ್ಕೆ ಬರುತ್ತಿದ್ದುದು ತೀರ ಕಡಿಮೆ. ಆದರೆ ಬಾಲ್ಯದ ದಿನಗಳ ನೆನಪಿನ ಜೊತೆ ಜಿಲ್ಲೆಯ ಪರಿಸರದ ಪ್ರೀತಿಯನ್ನೂ ಗಾಢವಾಗಿಸಿಕೊಂಡ ನೆನಪುಗಳನ್ನು ಎಳೆಎಳೆಯಾಗಿ ಎತ್ತಿಡುವಾಗ ಯಾರಾದರೂ ಅಚ್ಚರಿಪಡಬೇಕು. ಅಧ್ಯಯನ, ನಿರಂತರ ಅವಲೋಕನ, ಬಳಿಕ ತುಲನೆಗೆ ನಿಲ್ಲುವದು ಕಾಮತರ ಪರಿಸರ ಪಯಣದ ಆದರ್ಶ ದೃಷ್ಟಿ. ಶರಾವತಿ ಕಣಿವೆಯಲ್ಲಿ ತಮ್ಮ ಪಯಣದ ಹೊತ್ತಿಗೆ ಕ್ರಿ.ಶ. ೧೬೨೨ರ ಅಕ್ಟೋಬರ್ ೪ರಂದು ಪಿಯಾತ್ರೋ ಡೆಲ್ಲಾವೆಲ್ಲೆ

ಪಯಣದ ದಾಖಲೆ ನೆನಪಿಸುತ್ತ ಸಾಗುವ ಸ್ವಾರಸ್ಯತನ. ಕಾಮತರ ಬರಹ ಮಾರ್ಗದ ಆಳ ಅಗಾಧ. ೧೯೭೦ರ ದಶಕದಲ್ಲಿ ಕನ್ನಡ ಪತ್ರಿಕೋದ್ಯಮ ಸಂದರ್ಭದಲ್ಲಿ ಪರಿಸರ ಬರವಣಿಗೆ ನಿಧಾನಕ್ಕೆ ಜನಪ್ರಿಯವಾಗುತ್ತಿರುವ ಕಾಲಕ್ಕೆ ರಾಜ್ಯದ ಪತ್ರಿಕಾ ಮಾಧ್ಯಮ ಕಂಡ ಮೊದಲ ಪಂಕ್ತಿಯ ಹೆಮ್ಮೆಯ ಬರಹಗಾರರಲ್ಲಿ ಪ್ರಮುಖರು. ಬೊಂಬಾಯಿಯ ವಡಾ ವ್ಯಾಪಾರಿ ಹಾರಿಸಿದ ವಡೆಯನ್ನು ಹದ್ದುಗಳು ಅಂತರಿಕ್ಷದಲ್ಲಿ ಬಂದು ಕ್ಯಾಚ್ ಮಾಡುವ ಸೋಜಿಗದ ಪ್ರಸಂಗ, ಕಾಗೆಗಳ ಪಂಚಾಯತ್ ರಾಜ್ಯದ ಕತೆ, ಪ್ರಾಣಿ, ಪಕ್ಷಿ, ಕೀಟಗಳ ಕೌತುಕದ ಬಗೆಗೆ ನಮ್ಮ ಅರಿವು ಬೆಳೆಸುವ ಮಾರ್ಗ ಕಟ್ಟಿ ಬೆಳೆಸಿದರು.

೧೯೯೭ರ ಒಂದು ದಿನ ಮಲ್ಲೇಶ್ವರದ ಶಶಿಕಿರಣ ಅಪಾರ್ಟ್‌ಮೆಂಟ್‌ನಲ್ಲಿ ಬರಹಗಾರ್ತಿ ಡಾ. ಜ್ಯೋತ್ಸ್ನಾ ಕಾಮತರನ್ನು ಕಾಣಲು ಹೋಗಿದ್ದೆ. ಉತ್ತಮ ಮಹಿಳಾ ಬರಹಗಾರ್ತಿಗೆ ಉತ್ತರಕನ್ನಡ ಜಿಲ್ಲಾ ಪತ್ರಿಕಾ ಮಂಡಳಿ ನೀಡುವ ಪ್ರಶಸ್ತಿ ಆ ವರ್ಷ ಜ್ಯೋತ್ಸ್ನಾರಿಗೆ ನೀಡಲಾಗಿತ್ತು. ಆದರೆ ಪ್ರಶಸ್ತಿ ವಿತರಣಾ ಸಮಾರಂಭಕ್ಕೆ ಅವರ ಅನುಪಸ್ಥಿತಿ ಕಾರಣ ಮಂಡಳಿಯ ಅಧ್ಯಕ್ಷನಾದ ನಾನು ಬೆಂಗಳೂರಿನ ಅವರ ಮನೆಗೇ ಹೋಗಿ ಪ್ರಶಸ್ತಿ ನೀಡಲು ಹೋದೆ. ಅಂತಹ ಸಂದರ್ಭದಲ್ಲಿ ಕಾಮತ ಕುಟುಂಬ ಪರಿಚಯ, ಸ್ನೇಹ ಆರಂಭ. ನಾನು ಕಂಡುಕೊಂಡಂತೆ ಕಾಮತರ ಮನೆಗೆ ಫೋನ್ ಮಾಡಿದಾಗಲೆಲ್ಲ ಬಹುತೇಕ ಸಂದರ್ಭದಲ್ಲಿ ಜ್ಯೋತ್ಸ್ನಾ ಕಾಮತರೇ ಮೊದಲು ಹಿಡಿಯುವವರು. ಮೊದ ಮೊದಲು ಮನೆಗೆ ಹೋದಾಗ ಹೆಚ್ಚು ಅವಧಿ ಜ್ಯೋತ್ಸ್ನಾರ ಸ್ವಾರಸ್ಯಕರ ಮಾತಿಗೇ ಮೀಸಲು. ಕೃಷ್ಣಾನಂದರು ಯಾರನ್ನೂ ಅಷ್ಟಾಗಿ ಹಚ್ಚಿಕೊಳ್ಳದ ಆಸಾಮಿ. ಥಕ್ಕನೆ ನೋಡಿದರೆ ಇವರಿಗೇನೂ ತಿಳಿದೇ ಇಲ್ಲವೇನೋ ಎಂಬಂತೆ ತೆಪ್ಪಗೆ ಉಳಿಯುವ ಮನೋಭಾವ. ಅಪರಿಚಿತರ ಮಧ್ಯೆ ಸಂಕೋಚ ಸ್ವಭಾವ. ತಮ್ಮ ಪಾಡಿಗೇ ತಮ್ಮ ಕಾಯಕದಲ್ಲಿ ತಲ್ಲೀನರು. ಆದರೆ ಸಲಿಗೆ ಬೆಳೆದಂತೆ ಕಾಮತರ ಜ್ಞಾನಗಣಿ ದರ್ಶನ. ಮಾತಿನ ವರಸೆ ಬದಲು. ಖುದ್ದು ಮುಂದೆ ಬಂದು ಉತ್ತರಕನ್ನಡದ ಕಾಲದ ಕತೆಯನ್ನು ಹೇಳುವದರಲ್ಲಿ ತಲ್ಲೀನರಾದರು. ೧೯೯೭ರಲ್ಲಿ ಉತ್ತರಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಡಾ. ಕೃಷ್ಣಾನಂದ ಕಾಮತರು ಆಯ್ಕೆಯಾದ ಸಂದರ್ಭದಲ್ಲಿ ಪತ್ರಿಕೆಗಾಗಿ ಸಂದರ್ಶನ ಮಾಡುವಾಗಂತೂ ಜಿಲ್ಲೆಯ ಅನುಪಮ ಅನುಭವಗಳ ಹಸ್ತಪ್ರತಿ ಓದಿದಂತಾಯಿತು.

ಛಾಯಾಗ್ರಹಣದಲ್ಲಿ ಸಿದ್ಧಹಸ್ತರಾದ ಕಾಮತರು ೧೯೯೭ರ ಒಂದು ದಿನ ಬೆಂಗಳೂರಿನ ತಮ್ಮ ಮನೆಯಲ್ಲಿ ಚಿತ್ರೀಕರಣದ ಪುಟ್ಟ ಪಾಠ ಆರಂಭಿಸಿದ್ದರು. ಕೀಟಗಳ ಛಾಯಾಗ್ರಹಣದಲ್ಲಿ ಆಸಕ್ತಿವಹಿಸಿದ ನನಗೆ ವಿವಿಧ ಚಿತ್ರಗಳನ್ನು ತೋರಿಸುತ್ತ ಕ್ಯಾಮರಾ, ಸ್ಟ್ಯಾಂಡು, ಲೆನ್ಸ್‌ಗಳ ಪ್ರಾತ್ಯಕ್ಷಿಕೆ. ಅಷ್ಟು ಹೊತ್ತಿಗೆ ಖ್ಯಾತ ಛಾಯಾಗ್ರಾಹಕ ಡಿ.ಸಿ ನಾಗೇಶ್ ಅಲ್ಲಿಗೆ ಬಂದರು. 'ಕಾಮತರ ಮನೆ ಇದೆಯಾ?' ಪ್ರಶ್ನೆ. ಒಳಕರೆದು ಕೂಡ್ರಿಸಿದ ಬಳಿಕ 'ನಿಮಗೆ ಯಾವ ಕಾಮತರು ಬೇಕು? ಕೃಷ್ಣಾನಂದ ಕಾಮತರೋ? ಸೂರ್ಯನಾಥ ಕಾಮತರೋ?' ಎಂದು ಕಾಮತರ ಪತ್ನಿ ಡಾ. ಜ್ಯೋತ್ಸ್ನಾ ಪ್ರಶ್ನಿಸಿದರು. ಖ್ಯಾತ ಇತಿಹಾಸ ಸಂಶೋಧಕ ಡಾ. ಸೂರ್ಯನಾಥ ಕಾಮತರನ್ನು ಹುಡುಕಿ ತಪ್ಪಾಗಿ ಹಲವರು ಇವರಲ್ಲಿಗೆ ಬರುತ್ತಿದುದರಿಂದ ಮಾಮೂಲಿಯಾಗಿಯೇ ಡಿ.ಸಿ. ನಾಗೇಶ್ ಈ ಪ್ರಶ್ನೆ ಎದುರಿಸಬೇಕಾಯ್ತು. ವಿಳಾಸ, ದೂರವಾಣಿ ವಿವರಗಳೆಲ್ಲ ಪರಿಶೀಲಿಸಿದ ಬಳಿಕ ಭೇಟಿಯಾಗಬೇಕಾದವರು ಕೃಷ್ಣಾನಂದ ಕಾಮತರೇ ಎಂಬುದು ಖಚಿತವಾಯ್ತು. 'ನಿಮ್ಮದೊಂದು ಫೋಟೋ ತೆಗಿಯೋದಕ್ಕೆ ಶರತ್ ಕಲ್ಕೋಡು ಹೇಳಿದ್ದಾರೆ' ಎಂದದ್ದೆ ಕೃಷ್ಣಾನಂದರಿಗೆ ಮತ್ತೆ ಅನುಮಾನ ಕಾಡತೊಡಗಿತು. 'ಫೋಟೋ ಯಾಕೆ ಪೋಲೀಸ್ ಸ್ಟೇಷನ್‌ಗೆ ಕೊಡೋದಕ್ಕಾ? ಯಾವುದಕ್ಕೂ ಫೋನ್ ಮಾಡಿ ಯಾರ ಫೋಟೋಬೇಕೆಂದು ಖಚಿತಪಡಿಸಿಕೊಳ್ಳಿ' ಎಂದು ತಮಾಶೆ ಮಾಡಿದರು. ಸುಧಾ ಪತ್ರಿಕೆಗೆ ಫೋನು ಹೋಯ್ತು. ಕೃಷ್ಣಾನಂದ ಕಾಮತರ ಫೋಟೋ ಬೇಕೆಂಬುದು ಖಚಿತವಾದಾಗ ಛಾಯಾಗ್ರಹಣ ಸೆಶನ್ ಆರಂಭ. ನಾಲ್ಕಾರು ಕಡೆ ಕಾಮತರನ್ನು ನಿಲ್ಲಿಸಿ ಬೆಳಕಿನ ಪರಿಣಾಮಗಳನ್ನು ಗುರುತಿಸುತ್ತಿರುವಾಗ 'ಇಲ್ಲಿ ನಿಂತರೆ ಬ್ಯಾಕ್‌ಗ್ರೌಂಡ್ ಚೆನ್ನಾಗಿರುತ್ತೆ'. ಎಂದು ಕಾಮತರು ಆರಂಭದಲ್ಲಿ ಸಣ್ಣದಾಗಿ ಒಮ್ಮೆ ಹೇಳಿದರು. ಆದರೆ ಡಿ.ಸಿ.ನಾಗೇಶ ಆ ಬಗೆಗೆ ಲಕ್ಷ್ಯಹರಿಸದೇ ಮತ್ತೆ ಮತ್ತೆ ಸೂಕ್ತ ಸ್ಥಳಕ್ಕಾಗಿ ಹುಡುಕುತ್ತಲೇ ಇದ್ದರು. ಕೆಲ ಹೊತ್ತು ಇವರ ಛಾಯಾಗ್ರಹಣದ ಪ್ರಸಂಗವನ್ನು ಜ್ಯೋತ್ಸ್ನಾ ಕಾಮತ್ ಮತ್ತು ನಾನು ವೀಕ್ಷಿಸುತ್ತ ಕುಳಿತೆವು. ಅಷ್ಟು ಕಾಲ ಚಿತ್ರ ತೆಗೆಯಲು ಸಹಕರಿಸುತ್ತ ನಿಂತ ಕಾಮತರು ಸ್ವತಃ ತಾನೊಬ್ಬ ಖ್ಯಾತ ಛಾಯಾಗ್ರಾಹಕನೆಂದು ಎಲ್ಲಿಯೂ ತೋರಿಸಿಕೊಳ್ಳಲಿಲ್ಲ. ದರ್ಪದ ಪೋಸು ಕೊಡಲಿಲ್ಲ. ಅವರು ಹೇಳಿದಲ್ಲಿ ನಿಲ್ಲುತ್ತ ತಮ್ಮ ಭಾವಚಿತ್ರ ತೆಗೆಯಲು ಬಂದವರೆದುರು ಸುಮ್ಮನೆ ಪ್ರಸಂಗವನ್ನು ಅನುಭವಿಸಿದರು. ಛಾಯಾಗ್ರಹಣದ ಬಗೆಗೆ ನನಗೆ ಪಾಠ ಮಾಡುತ್ತಿದ್ದವರು ಇವರೇನಾ? ಎಂದು ನನಗೆ ಅನುಮಾನ ಮೂಡುವಷ್ಟರ ಮಟ್ಟಿಗೆ ಛಾಯಾಗ್ರಾಹಕನೆದುರು ವಿಧೇಯರಾಗಿದ್ದರು.

ಕೃಷ್ಣಾನಂದ ಕಾಮತರು ೧೯೬೯ರಲ್ಲಿ 'ನಾನೂ ಅಮೇರಿಕೆಗೆ ಹೋಗಿದ್ದೆ' ಬರೆದಲ್ಲಿಂದ 'ಮರುಪಯಣ'ದ ತನಕ ವಿಷಯದ ಅಧ್ಯಯನ, ಪ್ರವಾಸದ ಅನುಭವಗಳನ್ನು ಸೃಜನಶೀಲವಾಗಿ ಬರಹದಲ್ಲಿ ಮಡಿಸಿಕೊಂಡವರು. ಪತ್ನಿ ಜ್ಯೋತ್ಸ್ನಾ ಇವರ ಅಮೇರಿಕೆಯ ಅನುಭವಗಳನ್ನು ಪುಸ್ತಕದಲ್ಲಿ ದಾಖಲಿಸಲು ಒತ್ತಾಯಿಸಿದ ಮುಖೇನ ಕಾಮತರ ಸಾಹಿತ್ಯಶೈಲಿ ತೆರೆದುಕೊಂಡಿತು. ಬರಹದ ಓದಿನ ಪ್ರೀತಿ ನಾಡಿನಲ್ಲಿ ಅಭಿಮಾನಿಗಳ ಬಳಗವನ್ನು ಹೇಗೆ ಗಳಿಸಿದೆ ಎಂಬುದಕ್ಕೆ ಪುಸ್ತಕಗಳ ಮರುಮುದ್ರಣವೇ ಸಾಕ್ಷಿ. ಖರ್ಚಿಗೆ ಪ್ರಚಾರಕ್ಕೆ ಆಸೆ ಪಡದ ಕಾಮತರು ಸಮ್ಮೇಳನ, ಗೋಷ್ಠಿಗಳಿಂದ ದೂರ. ಸಾಹಿತ್ಯದ ಲಾಬಿ, ವಶೀಲಿ ಪ್ರಪಂಚದಿಂದ ದೂರವುಳಿದು ಬದುಕಿನ ಪಾವಿತ್ರ್ಯವನ್ನು ಹೆಚ್ಚಿಸಿಕೊಂಡವರು. ಸಾಹಿತ್ಯ ಕಲಾ ಕ್ಷೇತ್ರದಲ್ಲಿನ ಸಾಧನೆ ಅಚ್ಚರಿಯದಾದರೂ ನಾವು ಗುರುತಿಸಿದ್ದು ಅತ್ಯಲ್ಪ ಮಾತ್ರ. ಎಷ್ಟೋ ಸಾರಿ ಕಾಮತರು  ಕ್ಯಾಮರಾ ಹಿಂದೇ ಉಳಿದು ನೆರಳು ಬೆಳಕಿನ ವೈಭವದಲ್ಲಿ ತಲ್ಲೀನರಾದವರು. ದಾಖಲಿಸುವ ಶ್ರದ್ಧೆಗೆ ಅಹರ್ನಿಶಿ ದುಡಿದವರು. ಕಟ್ಟಿಕೊಂಡ ಕಾಲರಂಗವೇ ಅಂತಹುದು. ಹಾಗಂತ ನಿಷ್ಠುರ ಸತ್ಯಗಳನ್ನು ಹೇಳುವ ಎದೆಗಾರಿಕೆ ಗಮನಿಸಬೇಕಾದ ಸಂಗತಿ. ಉತ್ತರಕನ್ನಡದ ಕಾವಿಕಲೆಯ ಬಗೆಗೆ ಅಧ್ಯಯನಪೂರ್ಣ ಗ್ರಂಥ ರಚಿಸಿದ ಇವರು ಶಿರಸಿಯ ಶ್ರೀ ಮಾರಿಕಾಂಬಾ ದೇವಾಲಯದ ಗೋಡೆಯಲ್ಲಿ ನೈಜ ಕಲೆಯನ್ನು ಊನವಾಗಿಸಿ ಆಯಿಲ್‌ಪೇಂಟ್ ಮಾಡಿಸಿದ ಕೃತ್ಯವನ್ನು ನೇರವಾಗಿ ಎತ್ತಿ ಹೇಳುತ್ತಾರೆ. ನಾಡಿನ ಹಿರಿಯ ಕಲಾವಿದರೊಬ್ಬರು ದೇವಾಲಯದ ಧರ್ಮದರ್ಶಿಯಾಗಿದ್ದ ಸಂದರ್ಭದಲ್ಲಿ ಕಲೆಗೆ ಇಂತಹ ಅಪಚಾರವಾಗಿದ್ದನ್ನು ಬೆಳಕಿಗೆ ಒಡ್ಡುತ್ತಾರೆ!

ಸಾಧಕನಾಗಿ ಬೆಳೆದು ತಮ್ಮ ಮೂಲ ಊರಾದ ಉತ್ತರಕನ್ನಡ ಜಿಲ್ಲೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಗೌರವಕ್ಕೆ ಪಾತ್ರರಾಗಿ ಖರ್ಚೆ ಏರಿದ ಸಂದರ್ಭ ಕೂಡ ಎಂದಿನ ತಮ್ಮ ಸರಳತನವನ್ನು ಬಿಟ್ಟುಕೊಡಲಿಲ್ಲ. "ಕಗ್ಗತ್ತಲಿನ ಕೋಣೆಯಲ್ಲಿ ಛಾಯಾಗ್ರಹಣ ಮಾಡುವವನನ್ನು ಎಳೆದು ಕರೆತಂದು, ಸಾರ್ವಜನಿಕರೆದುರು ವೇದಿಕೆಯ ಮೇಲೆ ಹತ್ತಿಸಿದ ಶ್ರೇಯಸ್ಸು ಉತ್ತರಕನ್ನಡ ಸಾಹಿತ್ಯ ಪ್ರೇಮಿಗಳಿಗೆ, ಅಭಿಮಾನಿಗಳಿಗೆ ಸಲ್ಲಬೇಕು. ನಾನೆಂದೂ ಇಂತಹ ಸಮ್ಮೇಳನಗಳಲ್ಲಿ ಪ್ರಬಂಧ ಮಂಡಿಸಿಲ್ಲ, ಗೋಷ್ಠಿಗಳಲ್ಲಿ ಪಾಲ್ಗೊಂಡಿಲ್ಲ, ಚರ್ಚೆಗಳಲ್ಲಿ ಭಾಗವಹಿಸಿಲ್ಲ. ಶಾಲಾ-ಕಾಲೇಜು ವಾರ್ಷಿಕೋತ್ಸವಗಳಲ್ಲಿ ಪತಾಕೆ ಹಚ್ಚುವದು, ಅಲಂಕಾರ ಮಾಡುವದು, ಛಾಯಾಗ್ರಹಣ ಇವಿಷ್ಟೇ ನನ್ನ ಪಾಲಿಗೆ ಮೀಸಲಿಡುತ್ತಿದ್ದರು. "ಈಗಲೂ ಈ ಭಾಷಣದ ಬದಲು ಇಲ್ಲಿ ಬಂದ ಗೌರವಾನ್ವಿತರ, ಸಾಹಿತ್ಯಾಸಕ್ತರ ಛಾಯಾಚಿತ್ರ ಮಾಡುವವನಾಗಿದ್ದರೆ ಎಂದು ಎನಿಸದೇ ಇರಲಿಲ್ಲ!" ೧೯೯೭ರ ಏಪ್ರಿಲ್ ೨೨ರಂದು ಹೊನ್ನಾವರದಲ್ಲಿನ ಸಾಹಿತ್ಯ ಸಮ್ಮೇಳನದಲ್ಲಿ ಅವರು ಹೇಳಿದರು. ಎತ್ತರಕ್ಕೆ ಬೆಳೆದರೂ ನೆಲದ ಪ್ರೀತಿಯನ್ನು ಉಳಿಸಿಕೊಳ್ಳುವ ಎಚ್ಚರ ಇವರಿಗೆ ಸಿದ್ಧಿಸಿತ್ತು.

ಉತ್ತರ ಕನ್ನಡದ ಪಾಲಿಗೆ ಕಾಮತರ ಮರುಪಯಣ, ಜಿಲ್ಲೆಯ ಜೀವನದರ್ಶನದ ಗಾಳಿಕುದುರೆಯ ಹಾಯಿದೋಣಿಯ ಹಾಯಿ ಮಡಚಿದಂತಾಗಿದೆ. ಶಿರಸಿಯ ಮಾರಿಕಾಂಬಾ  ದೇವಾಲಯದ ಗೋಡೆಗಳಲ್ಲಿ ಇಂದು ಕೃತಕ ಬಣ್ಣದಿಂದಾಗಿ ಅಂಗವೈಕಲ್ಯಕ್ಕೊಳಗಾದ ಕಾವಿಕಲೆ ಪುನಃ ನೈಜರೂಪ ಕೊಡುವದು, ಉತ್ತರಕನ್ನಡದ ಬಗೆಗೆ ಕಾಮತರು ದಾಖಲಿಸಿದ ಮೂರು ನಾಲ್ಕು ದಶಕಗಳ ಹಿಂದಿನ ಛಾಯಾಚಿತ್ರಗಳನ್ನು ಸಂರಕ್ಷಿಸಿ ಕಾಮತರ ಕಾಳಜಿಯ ದರ್ಶನವನ್ನು ನಾಳಿನ ತಲೆಮಾರಿಗೆ ಒದಗಿಸುವ ಕಾರ್ಯಗಳು ಇಂದು ನಡೆಯಬೇಕಿವೆ. ಪಯಣದ ಅವಸರ, ಅನಿವಾರ್ಯದಲ್ಲಿ ಕಾಮತರು ಉಳಿಸಿಹೋದ ಈ ಎರಡು ಜವಾಬ್ದಾರಿಗಳನ್ನು ನಿರ್ವಹಿಸುವದು ನಮ್ಮ ಹೊಣೆಯಾಗಿದೆ.

❑





# ಸ್ವತಂತ್ರವಾಗಿ ಬದುಕಿದ ಹಕ್ಕಿ

**ಡಾ॥ ಎಸ್. ಎಲ್. ಭೈರಪ್ಪ**

ಕೃಷ್ಣಾನಂದ ಕಾಮತರು ಇದ್ದಕ್ಕಿದ್ದಂತೆ ಇಲ್ಲವಾದರೆಂಬ ಸುದ್ದಿಯನ್ನು ಪತ್ರಿಕೆಯಲ್ಲಿ ಓದಿದಾಗ ನನಗೆ ನಂಬಲು ಸಾಧ್ಯವಾಗಲಿಲ್ಲ. ತಕ್ಷಣ ಜ್ಯೋತ್ಸ್ನಾ ಅವರಿಗೆ ಫೋನು ಮಾಡಿದೆ. ನಂಬಲೇ ಬೇಕಾಯಿತು. ಸ್ವತಂತ್ರವಾಗಿ ಬದುಕಿದ ಹಕ್ಕಿ ಸ್ವಾತಂತ್ರ್ಯವನ್ನು ತುಸುವೂ ಕಳಕೊಳ್ಳದೆ ಸ್ವಲ್ಪವೂ ಕಾಯಿಲೆ ಬೀಳದೆ ಇದ್ದಕ್ಕಿದ್ದಂತೆಯೇ ಹಾರಿಹೋಯಿತು. ಇಷ್ಟು ಬೇಗ ಹೋಗಬಾರದಿತ್ತು ಎಂಬುದೇ ಕೊರಗಿನ ಕಾರಣ.

ವಿಜ್ಞಾನದಲ್ಲಿ ಉನ್ನತ ತರಬೇತಿ ಪಡೆದು ಅಮೆರಿಕೆಯಿಂದ ಹಿಂತಿರುಗಿದನಂತರ ತಕ್ಕ ನೌಕರಿ ದೊರಕದ ಸಂದರ್ಭದಲ್ಲಿ ಬೇರೆಯವರಾಗಿದ್ದರೆ ಮತ್ತೆ ಅಮೆರಿಕೆಗೆ ಹೋಗಿ ಬಿಡುತ್ತಿದ್ದರು. ಕೃಷ್ಣಾನಂದರಿಗೆ ಆ ಹಾದಿ ಸರಿ ಎನಿಸಲಿಲ್ಲ. ನೌಕರಿ ಇಲ್ಲದೆಯೇ ತಾಯ್ನಾಡಿನಲ್ಲಿ ಅನ್ನ ಸಂಪಾದನೆ ಮಾಡಲು ಯಾಕೆ ಸಾಧ್ಯವಿಲ್ಲ ? ಎಂಬ ಪ್ರಶ್ನೆಯನ್ನು ತಮಗೆ ತಾವೇ ಹಾಕಿಕೊಂಡರು. ಹಣಮಾಡುವುದು ಅವರ ಜೀವನದಲ್ಲಿ ಎಂದೂ ಗುರಿಯಾಗಿರಲಿಲ್ಲ. ಎಷ್ಟು ಬೇಕೋ ಅಷ್ಟನ್ನು ದುಡಿಯುವುದು ಉಳಿದ ಸಮಯದಲ್ಲಿ ತಮ್ಮ ಮನಸ್ಸು ಬಯಸುವ ಕ್ಷೇತ್ರಗಳಲ್ಲಿ ಅಧ್ಯಯನ, ಸಂಶೋಧನೆಗಳನ್ನು ಮಾಡಿ ಜ್ಞಾನ ಸಂಪಾದಿಸುವುದು; ಅದನ್ನು ಬರೆದು ಕನ್ನಡಿಗರಿಗೆ ನೀಡುವುದು; ಅವರ ಗುರಿಯಾಗಿತ್ತು. ಅದರಂತೆಯೇ ಬದುಕಿದರು. ಈ ಬದುಕಿಗೆ ತಕ್ಕ ಸಾಂಗತ್ಯ ಹೆಂಡತಿ ಜ್ಯೋತ್ಸ್ನಾ ಅವರಿಂದ ದೊರೆಯಿತು. ಇಂಥ ಹೊಂದಾಣಿಕೆಯ ಜೋಡಿ ತೀರ ವಿರಳ.

ಕೃಷ್ಣಾನಂದರದು ಸಂಕೋಚ ಸ್ವಭಾವ. ಎಲೆಮರೆಯ ಕಾಯಿ ಎಂಬ ಮಾತು ಅಂಥವರನ್ನು ನೋಡಿಯೇ ಹುಟ್ಟಿದುದು. ಮೌಲಿಕವಾದ ಕೃತಿಗಳನ್ನು ಬರೆದರೂ ಮುನ್ನುಗ್ಗಿ ಪ್ರಚಾರ ಮಾಡಿಕೊಳ್ಳುವುದು ಅವರ ಸ್ವಭಾವದಲ್ಲೇ ಇರಲಿಲ್ಲ. ತಮ್ಮ ಬಗೆಗೆ ಏನೂ ಹೇಳಿಕೊಳ್ಳುತ್ತಲೂ ಇರಲಿಲ್ಲ. ಚೆನ್ನಾಗಿ ಪರಿಚಯವಾದ ಮೇಲೆ ಹಾಸ್ಯಭರಿತ ಸರಸದಿಂದ ಮಾತನಾಡುತ್ತಿದ್ದರು. ತಮ್ಮನ್ನು ತಾವು ಹಾಸ್ಯಮಾಡಿಕೊಳ್ಳುತ್ತಿದ್ದರು. ತಮ್ಮ ಓದಿನ ಆಳ ವಿಸ್ತಾರಗಳನ್ನು ಮರೆಮಾಚಿಕೊಳ್ಳುವುದೂ ಅವರ ಹಾಸ್ಯದ ಒಂದು ಆಯಾಮವಾಗಿತ್ತು. ಹಾಸ್ಯದಲ್ಲೂ ಈ ದಂಪತಿಗಳು ಹೇಳಿಮಾಡಿಸಿದಂತಿದ್ದರು.

ಇದಕ್ಕಿಂತ ಹೆಚ್ಚು ಬರೆಯ ಹೋದರೆ ದುಃಖವನ್ನು ತುಳುಕಿಸಿದಂತಾಗುತ್ತದೆ.





# ಸ್ನೇಹ ಜೀವಿ

**ಹೂಗೊಪ್ಪಲು ಕೃಷ್ಣಮೂರ್ತಿ**

"ಪ್ರತಿಫಲವನ್ನು ಎದುರು ನೋಡದ ಸ್ನೇಹವೇ - ಸ್ನೇಹ. ಅದು ಸ್ನೇಹಕ್ಕಾಗಿ ಆದ ಸ್ನೇಹ. ನಿಜವಾದ ಪರಸ್ಪರ ಸ್ನೇಹ, ಮೆಚ್ಚಿಕೆ" -ರಾಜಾಜಿ.

ಪ್ರತಿವರ್ಷ ಜನವರಿ ಮೊದಲಿಗೆ ಹೊಸವರ್ಷದ ಶುಭಾಶಯ ಹೊತ್ತ ಡಾ. ಕೃಷ್ಣಾನಂದ ಕಾಮತರ ಗ್ರೀಟಿಂಗ್ ಕಾರ್ಡ್, ಸ್ನೇಹದ ಪ್ರತೀಕವಾಗಿ ಬರುತ್ತಿತ್ತು. ಕಾರ್ಡನ್ನು ಅವರು ತಮ್ಮ ಕೈಯಲ್ಲಿಯೇ ತಯಾರಿಸಿ, ಚಿತ್ರಬರೆದು, ಚಿನ್ನ-ಬೆಳ್ಳಿ ಬಣ್ಣದ ಅಕ್ಷರಗಳ ಚಿತ್ತಾರದಲ್ಲಿ ಯಾರ ಮನಸ್ಸನ್ನೂ ಮುದಗೊಳಿಸುವಂತೆ ಆಕರ್ಷಕಗೊಳಿಸುತ್ತಿದ್ದರು. ಒಂದೊಂದು ಕಾರ್ಡ್ ತಯಾರಿಸಲು, ಅವರು ಎಷ್ಟೊಂದು ಸಮಯ ತೆಗೆದುಕೊಂಡಿರಬಹುದು? ಅಂತಹ ಎಷ್ಟು ಕಾರ್ಡ್‌ಗಳನ್ನು ಕಳಿಸುತ್ತಿರಬಹುದು? ಎಂದು ಯೋಚಿಸಿದಾಗ, ಕಾರ್ಡಿನ ಹಿಂದಿನ ಪರಿಶ್ರಮ, ಶ್ರದ್ಧೆ ಪ್ರೀತಿ, ಅರಿವಾಗದಿರದು.

* * * * * * * * * * *

ನನ್ನ ಕಾಮತರ ಪರಿಚಯ ಬಹಳ ಹಳೆಯದೇನಲ್ಲ. ೧೯೮೪-೮೫ರ ಹೊತ್ತಿಗೆ ಕಾಮತರ ಪತ್ನಿ ಡಾ. ಜ್ಯೋತ್ಸ್ನಾ ಕಾಮತರು ಮೈಸೂರು ಆಕಾಶವಾಣಿಯ ಪ್ರಥಮ ನಿರ್ದೇಶಕಿಯಾಗಿ ಅಧಿಕಾರ ವಹಿಸಿಕೊಂಡಾಗ ನಾನು ಅಲ್ಲಿ ಕಾರ್ಯಕ್ರಮ ನಿರ್ವಾಹಕನಾಗಿದ್ದೆ. ಒಮ್ಮೆ ಯಾವುದೋ ಕಾರಣಕ್ಕೆ ಒಂಟಿಕೊಪ್ಪಲಿನ ಅವರ ಬಿಡಾರಕ್ಕೆ (ಅದು ನಿಜವಾಗಿ ಬಿಡಾರವೇ ಆಗಿತ್ತು. ಒಂದೇ ರೂಮ್ + ಅಡಿಗೆಮನೆಯ ಪುಟ್ಟ ಹೊರಮನೆಯಾಗಿತ್ತು.) ಹೋದಾಗ, ಒಬ್ಬ ಬನಿಯನ್ ತೊಟ್ಟ ಚಡ್ಡಿಧಾರಿ ವ್ಯಕ್ತಿಯನ್ನು ತಮ್ಮ ಪತಿಯೆಂದು ಪರಿಚಯಿಸಿದಾಗ ಆಶ್ಚರ್ಯವಾಗಿತ್ತು! ವಿದೇಶಿ ವಿ.ವಿ.ದ ಡಾಕ್ಟರೇಟ್ ಪಡೆದ ವ್ಯಕ್ತಿಯನ್ನು ಒಬ್ಬ ಹಳ್ಳಿಯ ರೈತನ ಉಡುಗೆಯಲ್ಲಿ ಕಲ್ಪಿಸಿಕೊಳ್ಳುವುದೇ ಕಷ್ಟವಾಯಿತು! ಅಷ್ಟುಹೊತ್ತಿಗೆ ಕಾಮತರ ಛಾಯಾಚಿತ್ರಗಳು ಹಾಗೂ ವೈಜ್ಞಾನಿಕ ಲೇಖನಗಳ ಪರಿಚಯ ಪತ್ರಿಕೆಗಳ ಮೂಲಕ ನನಗಾಗಿತ್ತು. ಪರಿಚಯವಾದ ಮೇಲೂ ಬಹಳ ಮಾತಿಲ್ಲ. ಜ್ಯೋತ್ಸ್ನಾ ಅವರನ್ನು ನನ್ನೊಂದಿಗೆ ಮಾತಿಗೆ ಬಿಟ್ಟು ತಾವು ಅಡುಗೆಮನೆ ಸೇರಿಬಿಟ್ಟರು. ಬಂದ ಅತಿಥಿಗೆ ಚಹಾ ತಯಾರಿಸಲು!

ಅವರು ಮೈಸೂರಿನಲ್ಲಿದ್ದ ಸಂದರ್ಭದಲ್ಲಿ ಕೊಕ್ಕರೆ ಬೆಳ್ಳೂರು ಹಾಗೂ ರಂಗನತಿಟ್ಟು ಪಕ್ಷಿಧಾಮಗಳಲ್ಲಿ ಹಕ್ಕಿಗಳ photo ತೆಗೆಯಲು ಅವರ ಆಸಕ್ತಿಯನ್ನು ಗಮನಿಸಿ, ನಾನೂ ಆಕಾಶವಾಣಿಗೆ ಪಕ್ಷಿಧಾಮಗಳ ಮೇಲೆ ಒಂದು ಧ್ವನಿಚಿತ್ರ (Radio feature) ತಯಾರಿಸಲು ಇಚ್ಛೆ ವ್ಯಕ್ತಪಡಿಸಿದೆ. ನಾನೂ ಕಾಮತ ದಂಪತಿಗಳೊಂದಿಗೆ Recorder ಜೊತೆ ಕೊಕ್ಕರೆಬೆಳ್ಳೂರಿಗೆ ಹೋಗುವುದು ನಿಶ್ಚಯವಾಯಿತು. ಅರಣ್ಯ ಇಲಾಖೆಯ ಸಹಕಾರವೂ ದೊರೆಯಿತು.

ಕೊಕ್ಕರೆಬೆಳ್ಳೂರು ತಲುಪಿದ್ದೇ ತಡ, ಕಾಮತರು ಕ್ಯಾಮರ ಹೊರತೆಗೆದು ತಮ್ಮ ಕ್ಯಾಮರಾ ಕಾಯಕದಲ್ಲಿ ತೊಡಗಿಬಿಟ್ಟರು! ಮಧ್ಯಾಹ್ನದ ಬಿಸಿಲೇರಿದರೂ ಕ್ಯಾಮರಾದಲ್ಲಿ ಹಕ್ಕಿಗಳ ಬೇಟೆ ನಡೆದೇ ಇತ್ತು. ನಾನು ಸ್ವಲ್ಪ ಹೊತ್ತು ಹಕ್ಕಿಗಳ ಧ್ವನಿಸಂಗ್ರಹದಲ್ಲಿ ನಿರತನಾದೆ. ನಂತರ ಹಳ್ಳಿಯ ಜನರ ಸಂದರ್ಶನಗಳನ್ನು ಧ್ವನಿಮುದ್ರಿಸಿಕೊಂಡೆ. ಕಾಮತರು ಮಾತ್ರ ಕ್ಯಾಮರಾ ಹಿಡಿದು ಹಕ್ಕಿಗಳು ತುಂಬಿದ್ದ ಒಂದು ಮರದಿಂದ ಮತ್ತೊಂದು ಮರಕ್ಕೆ ದಾಪುಗಾಲು ಹಾಕುತ್ತಾ, ಕ್ಯಾಮರಾ ಕ್ಲಿಕ್ಕಿಸುತ್ತಾ ನಡೆದಿದ್ದರೆ, ಹಳ್ಳಿ ಮಕ್ಕಳ ಗುಂಪೊಂದು ಅವರ ಹಿಂದೆ, ಹಿಂದೆ ಹೋಗುತ್ತಿತ್ತು. ಕಾಮತರು ಮಕ್ಕಳೊಡನೆ ತಮಾಷೆಮಾಡುತ್ತಾ ಅವರನ್ನು ಕಿಲಕಿಲ ನಗಿಸುತ್ತಾ ಸಾಗಿದ್ದರು. ಮಕ್ಕಳ ಜೊತೆ ಸ್ನೇಹ, ಕಾಮತರ ವ್ಯಕ್ತಿ ವಿಶೇಷ. ಅವರ ಅಮೆರಿಕಾ ವಾಸದಲ್ಲಿ ಹೆಮೆಲಿನ್ ಕುಟುಂಬದ ಅತಿಥಿಯಾಗಿ ಹೋದಾಗ, ಕೆಲವೇ ನಿಮಿಷಗಳಲ್ಲಿ ಹೆಮೆಲಿನ್ ದಂಪತಿಗಳ ಮಕ್ಕಳೊಂದಿಗೆ ಹೇಗೆ ಒಂದಾಗಿಬಿಟ್ಟರು ಎನ್ನುವುದನ್ನು ಅವರ "ನಾನೂ ಅಮೆರಿಕೆಗೆ ಹೋಗಿದ್ದೆ" ಪುಸ್ತಕದಲ್ಲಿ ನೋಡಬಹುದು. ಮನೆಗೆ ಬಂದ ಅತಿಥಿ ಕಾಮತ್ ಮಕ್ಕಳೊಂದಿಗೆ ಭಾರತದ ಕಬಡಿಯಾಡಿ ಕುಣಿದು ಕುಪ್ಪಳಿಸಿದ್ದು, ಕೊನೆಗೆ ಮಕ್ಕಳು "ನಾವೆಲ್ಲಾ ನಿನ್ನನ್ನು ತುಂಬಾ ಪ್ರೀತಿಸುತ್ತೇವೆ, ಕ್ರಿಶ್. ನೀನು ಮತ್ತೆ ಯಾವಾಗ ನಮ್ಮ ಮನೆಗೆ ಬರುವೆ" ಎಂದು ಕೇಳುತ್ತಾ ಕಾಮತರನ್ನು ಬಿಟ್ಟು ಮಲಗಲು ತಯಾರಿಲ್ಲದ ಸನ್ನಿವೇಶವನ್ನು ಹೃದಯಂಗಮವಾಗಿ ನಿರೂಪಿಸಿದ್ದಾರೆ. ಮೊದಲ ಭೇಟಿಯಲ್ಲಿ ಮಕ್ಕಳು ಬೆಸೆದ ಸ್ನೇಹ

ಹೆಮಲಿನ್ ಕುಟುಂಬದೊಂದಿಗೆ ಶಾಶ್ವತ ಸ್ನೇಹವಾಯಿತೆನ್ನುತ್ತಾರೆ ಕಾಮತರು. ಮಗು ಹೃದಯದ ಕಾಮತರಿಗೆ ನಿಷ್ಕಲ್ಮಶ ಹೃದಯದ ಮುಗ್ಧಮಕ್ಕಳು ತಕ್ಷಣ ಹತ್ತಿರವಾಗುತ್ತಿದ್ದರು. ಅಲ್ಲಿ ಸ್ನೇಹಕ್ಕೆ ಯಾವುದೇ ಪ್ರತಿಫಲಾಪೇಕ್ಷೆ ಇಲ್ಲ. ಪರಸ್ಪರ ಮೆಚ್ಚುಗೆ, ಮಕ್ಕಳನ್ನು ಖುಷಿಪಡಿಸಬೇಕೆಂಬ ಒಂದೇ ಉದ್ದೇಶ ಮಾತ್ರ ಇರುತ್ತಿತ್ತು.

ಅಂತೂ ಸಂಜೆಯತನಕ ಅವರು ಎಷ್ಟು ಚಿತ್ರಗಳನ್ನು ತೆಗೆದರೋ, ಅದೆಷ್ಟು ಫಿಲ್ಮ್‌ಗಳನ್ನು ಖರ್ಚು ಮಾಡಿದರೋ ಗೊತ್ತಿಲ್ಲ. ಅವರಿಗೆ ಆ ಛಾಯಾಚಿತ್ರಗಳಿಂದ ಯಾವುದೇ ವರಮಾನವಿರಲಿಲ್ಲ. ಎಲ್ಲೋ ಒಮ್ಮೊಮ್ಮೆ ಯಾವುದಾದರೂ ಪತ್ರಿಕೆಯಲ್ಲಿ ಒಂದೆರಡು ಫೋಟೋ ಅಚ್ಚಾದರೆ ೧೦೦-೨೦೦ ಆ ಪತ್ರಿಕೆ ಕೊಟ್ಟರೆ, ಅಷ್ಟೇ ವರಮಾನ. ಛಾಯಾಚಿತ್ರಗಳ ಪ್ರದರ್ಶನ ನಡೆಸಿ ಹೆಸರು-ಕೀರ್ತಿ ಪಡೆಯುವ ಬಯಕೆಯೂ ಅವರಿಗಿರಲಿಲ್ಲ. ಅವರು ಛಾಯಾಚಿತ್ರ ತೆಗೆಯುತ್ತಿದ್ದಿದ್ದು ನಮ್ಮ ದೇಶದ ಸಂಪತ್ತಿನ ದಾಖಲೆಯನ್ನು photo ಮೂಲಕ ಭವಿಷ್ಯಕ್ಕೆ ಕಾದಿಡುವ ಉದ್ದೇಶದಿಂದ. ಅದು ಮೃಗ ಪಕ್ಷಿಗಳ ಛಾಯಾಗ್ರಹಣವಾಗಿರಬಹುದು; ಗುಡಿಗೋಪುರಗಳದಿರಬಹುದು; ಕಾವಿಕಲೆಯಿರಬಹುದು; ಅಥವಾ ಬೇರೆ ಯಾವುದೇ ಛಾಯಾಚಿತ್ರವಿರಬಹುದು. ಕಾಮತರು ಸಾವಿರಾರು ಫೋಟೋಗಳನ್ನು ಕಲೆಹಾಕಿದ್ದರು.

ಸಂಜೆಗೆ ಚಿತ್ರ ತೆಗೆಯುವ ಕೆಲಸ ನಿಲ್ಲಿಸಿದಾಗ ಹಕ್ಕಿಗಳ ಬಗ್ಗೆ ನನ್ನ ಪ್ರಶ್ನೆಗಳಿಗೆ ನಿರರ್ಗಳವಾಗಿ ಉತ್ತರವಿತ್ತರು. ಕೊಕ್ಕರೆಬೆಳ್ಳೂರಿಗೆ ವಲಸೆ ಬರುವ ಪೈಂಟೆಡ್ ಸ್ಟಾರ್ಕ್ ಹಾಗೂ ಪೆಲಿಕನ್ ಹಕ್ಕಿಗಳ ಜೀವನ ವಿಧಾನ, ಅವು ಎಲ್ಲಿಂದ ಬರುತ್ತವೆ? ಇದೇ ಊರಿಗೆ ಪ್ರತಿವರ್ಷ ಏಕೆ ಬರುತ್ತವೆ? ಮೊದಲಾದ ವಿಷಯಗಳ ಪೂರ್ಣ ವಿವರ ನೀಡಿದರು. ನಮ್ಮ ಕರ್ನಾಟಕದಲ್ಲಿಯೂ ಸಲೀಮ ಆಲಿಗಳಿದ್ದಾರೆಂದು ಹೆಮ್ಮೆಯೆನಿಸಿತು. ಕಾಮತರು ಹಳ್ಳಿಯ ಜನರ ಕಷ್ಟಸುಖ ವಿಚಾರಿಸಿದರು; ಅವರು ತಲೆತಲಾಂತರದಿಂದ ವಲಸೆ ಬರುವ ಪಕ್ಷಿಗಳಿಗೆ ಹೇಗೆ ರಕ್ಷಣೆ ಒದಗಿಸುತ್ತಾ ಬಂದಿದ್ದಾರೆಂಬ ವಿವರ ಪಡೆದರು. ನನಗೂ ಹಕ್ಕಿಗಳ ಮೇಲಿನ ಧ್ವನಿಚಿತ್ರಕ್ಕೆ ಸಾಮಗ್ರಿ ದೊರೆಯಿತು.

* * * * * * * * * * *

ರಂಗನತಿಟ್ಟಿಗೆ ಮುಂದೆ ಕೆಲವು ದಿನಗಳಲ್ಲಿ ಭೇಟಿ ಕೊಟ್ಟೆವು. ರಂಗನತಿಟ್ಟಿನ ಹಲವು ಜಾತಿಯ ಹಕ್ಕಿಗಳನ್ನು ಕುರಿತ ವಿವರಗಳನ್ನು ಕಾಮತರು ನೀಡಿದರು. ಯಾವಹಕ್ಕಿ ಹೇಗೆ ಆಹಾರವನ್ನು ಒದಗಿಸಿಕೊಳ್ಳುತ್ತದೆ? ತನ್ನ ಗಂಡನನ್ನು ಹುಡುಕಿಕೊಂಡು ಮನೆಕಟ್ಟಿಕೊಂಡು (ಕಟ್ಟಿಸಿಕೊಂಡು?) ಸಂಸಾರ ಮಾಡಿ ಮರಿಮಾಡುತ್ತದೆ? ಗಂಡು ಹಕ್ಕಿಯ ಕೆಲಸವೇನು? ಅವರ ದಾಂಪತ್ಯ ಜೀವನ ಹೇಗೆ? ಮೊದಲಾದ ಎಲ್ಲಾ ವಿವರಗಳೂ ಕಾಮತ ಕಂಠಸ್ಥ. ಕಾಮತರು ಕೀಟಶಾಸ್ತ್ರಜ್ಞರೆಂದು ಗೊತ್ತಿತ್ತು, ಆದರೆ ಪಕ್ಷಿಶಾಸ್ತ್ರಜ್ಞರೂ ಹೌದೆಂದು ಆಗಲೇ ಗೊತ್ತಾದದ್ದು. ಎರಡು ದಿನಗಳ ಪ್ರವಾಸದಲ್ಲಿ ಕಾಮತರು ಅರಣ್ಯ ಸಿಬ್ಬಂದಿಯ ವಿಶ್ವಾಸ ಪ್ರೀತಿಯನ್ನೂ ಗಳಿಸಿದರು, ಯಾವುದೇ ಲಂಚ ರುಷುವತ್ತಿಲ್ಲದೇ! ಎಲ್ಲರ ಜೊತೆಗೆ ಗ್ರೂಪ್ ಫೋಟೋ ತೆಗೆದು ವಿದಾಯ ಪಡೆದರು. ಬೆಂಗಳೂರಿಗೆ ಹಿಂತಿರುಗಿದ ಒಂದು ವಾರದಲ್ಲಿಯೇ ಅರಣ್ಯ ಸಿಬ್ಬಂದಿಗೆ ಹಾಗೂ ನನಗೆ ಒಂದೊಂದು Photo ಪ್ರತಿಯನ್ನು Mount ಮಾಡಿ ಕಳಿಸಲು ಮರೆಯಲಿಲ್ಲ.

ಪ್ರವಾಸದ ನಂತರ ಮೈಸೂರು ಆಕಾಶವಾಣಿಯಲ್ಲಿ ಒಂದು ಸಂದರ್ಶನ Record ಮಾಡಲು ಕೇಳಿಕೊಂಡೆ. ಸುತರಾಂ ಒಪ್ಪಲಿಲ್ಲ, ಪತ್ನಿ ಜ್ಯೋತ್ಸ್ನಾ ಅವರ ಶಿಫಾರಸ್ಸು ನಡೆಯಲಿಲ್ಲ. ಕಾರಣ ಪತ್ನಿ ಆಕಾಶವಾಣಿಯಲ್ಲಿ ನಿರ್ದೇಶಕಿಯಾಗಿರುವಾಗ ತಾವು ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವುದು ಸ್ವಜನಪಕ್ಷಪಾತವಾದೀತೆಂದು ಅವರ ಅಭಿಪ್ರಾಯ. ಕೊನೆಗೆ ಕೊಕ್ಕರೆಬೆಳ್ಳೂರು - ರಂಗನತಿಟ್ಟಿನಲ್ಲಿ ನಾನು ಪಡೆದ ವಿವರಗಳನ್ನೇ ಉಪಯೋಗಿಸಿಕೊಂಡು ಕಾರ್ಯಕ್ರಮ ತಯಾರು ಮಾಡಬೇಕಾಯಿತು. ಕಾರ್ಯಕ್ರಮ ತಯಾರಿಸಲು ಹೆಸರುಹಾಕದೆ, ಯಾವುದೇ ಸಂಭಾವನೆ ಪಡೆಯದೆ ಆಕರ್ಷಕವಾದ script ಬರೆದುಕೊಟ್ಟರು. ನಾನು ಅದೇ script ಆಧರಿಸಿದ ಕಾರ್ಯಕ್ರಮ ಪ್ರಸಾರ ಮಾಡಿ ಶ್ರೋತೃಗಳ ಮೆಚ್ಚುಗೆ ಪಡೆದೆ! ತಮ್ಮ ಸಮಯ, ಪ್ರತಿಭೆ, ವಿದ್ವತ್ತು ಎಲ್ಲವನ್ನೂ ನನ್ನ ವಿಶ್ವಾಸಕ್ಕಾಗಿ ವಿನಿಯೋಗಿಸಿದರು. ಕಾಮತರು ಪ್ರತಿಫಲವಾಗಿ ಏನನ್ನೂ ನಿರೀಕ್ಷಿಸಲಿಲ್ಲ. ಕವಿ ಗೋಪಾಲಕೃಷ್ಣ ಅಡಿಗರು ಒಮ್ಮೆ ಮೈಸೂರು ಆಕಾಶವಾಣಿಗೆ ಬಂದಿದ್ದಾಗ ಕಾಮತ ದಂಪತಿಗಳು ಹಣ-ಹೆಸರು ಎರಡಕ್ಕೂ ಆಸೆಪಡದ ಅಪರೂಪದ ವ್ಯಕ್ತಿಗಳೆಂದು ಅನಂತಮೂರ್ತಿಯವರಿಗೆ ಹೇಳುತ್ತಿದ್ದುದನ್ನು ನಾನು ಕಿವಿಯಾರೆ ಕೇಳಿದ್ದೆ. (ಕಾಮತರ ಎದುರಿಗಲ್ಲ!) ನನಗೂ ಅನುಭವವಾಯಿತು.

ಮೈಸೂರಿನಲ್ಲಿ ಆರಂಭಗೊಂಡ ನಮ್ಮ ಗೆಳೆತನ ನಾನು ಆಕಾಶವಾಣಿ ಬಿಟ್ಟು ಕೇಂದ್ರ ಸರ್ಕಾರದ ಸಂಗೀತ ನಾಟಕ ವಿಭಾಗ ಸೇರಿದ ಮೇಲೂ ಮುಂದುವರೆಯಿತು. ಆಗಾಗ ಭೇಟಿಯಾಗುತ್ತಿದ್ದೆ. ಸಾಗರ ತಾಲೋಕಿನ ನಮ್ಮ ಊರು ಹೂಗೊಪ್ಪಲಿಗೆ ಕಾಮತರನ್ನು ಹಲವು ಸಲ ಆಮಂತ್ರಿಸಿದರೂ ಯಾವುದೋ ಸಬೂಬು ಹೇಳಿ ತಪ್ಪಿಸಿಕೊಳ್ಳುತ್ತಲೇ ಇದ್ದರು. ಬಂದರೆ ಮನೆಯವರಿಗೆ ತೊಂದರೆಯಾದೀತು, ಅನ್ಯಥಾ ಶ್ರಮಕೊಡುವುದೇಕೆನ್ನುವುದು ಅವರ ಮನೋಭಾವ. ಜೊತೆಗೆ ಅವರದು ಸಂಕೋಚ ಸ್ವಭಾವ. ಕೊಡುವುದು ಗೊತ್ತೇ ಹೊರತು, ಇನ್ನೊಬ್ಬರಿಂದ ಪಡೆಯುವುದಲ್ಲ. ಅಂತೂ ೨-೩ ವರ್ಷ ಅವರನ್ನು ಊರಿಗೆ ಕರೆದೊಯ್ಯುವುದು ಸಾಧ್ಯವಾಗಲಿಲ್ಲ. ಕೊನೆಗೆ ಜ್ಯೋತ್ಸ್ನಾರ ವಶೀಲಿಪಟ್ಟಿಗೆ, ಕಾಮತರಿಗೆ ಭೂಮಿ ಹುಣ್ಣಿಮೆಯ ಬುಟ್ಟಿಯ ಕಲೆ ಪರಿಚಯ ಮಾಡಿಸುತ್ತೇನೆಂದೂ ಅಷ್ಟಾಗಿ ಪ್ರಸಿದ್ಧಿ ಪಡೆಯದ ಕಲಸಿ ದೇವಸ್ಥಾನದ ಶಿಲ್ಪಕಲೆ ನೋಡಬಹುದೆಂದೂ ಪುಸಲಾಯಿಸಿದ ಮೇಲೆ ಬರಲು ಒಪ್ಪಿದರು. ಕೊನೆಗೂ ಭೂಮಿ ಹುಣ್ಣಿಮೆ ಹಬ್ಬಕ್ಕೆ ಕಾಮತರು ಹೂಗೊಪ್ಪಲಿಗೆ ಬಂದೇಬಿಟ್ಟರು!

ಬಂದ ಮೇಲೆ ನಮ್ಮ ಮನೆಯವರೊಂದಿಗೆ ತಕ್ಷಣ ಬೆರೆತರು. ನನ್ನ ಅಪ್ಪ ಅಮ್ಮನಿಗೆ ಒಂದೇ ದಿನದಲ್ಲಿ ಆತ್ಮೀಯರಾಗಿಬಿಟ್ಟರು! ನನ್ನ ಎರಡೂ ಮಕ್ಕಳ ಜೊತೆಗೂ ಇವರ ಗೆಳೆತನ ಹೇಳಲೇ ಬೇಕಾಗಿಲ್ಲ. ನನ್ನ ಹಿರಿಯ ಮಗ ವಿಶ್ವಜಿತ್ ಆಗ ೫-೬ ವರ್ಷದ ಹುಡುಗ. ಕಾಮತರು ಹೋದ ಕಡೆಯಲ್ಲೆಲ್ಲಾ ಇವನು ಅವರ ಬಾಲ. ಕಲಸೆ, ಇಕ್ಕೇರಿ, ಕೆಳದಿಯೆಲ್ಲಾ ಸುತ್ತಾಡಿ photo ತೆಗೆದದ್ದೇ ತೆಗೆದದ್ದು. ಭೂಮಿಹುಣ್ಣಿಮೆ ದಿನವಂತೂ ಕಾಮತರ ಸಂಭ್ರಮವೋ ಸಂಭ್ರಮ. ಭೂಮಿಹುಣ್ಣಿಮೆ ಬುಟ್ಟಿಗಳನ್ನು ಹೊತ್ತ ಹೆಣ್ಣು ಮಕ್ಕಳನ್ನು ನಿಲ್ಲಿಸಿ ಮಾತಾಡಿಸಿ, ನಗಿಸಿ photo ತೆಗೆಯುವುದನ್ನು ನೋಡುವುದೇ ನನಗೆ ಖುಷಿಯ ಕೆಲಸವಾಯಿತು. ಆಮೇಲೆ ಹಳೇಕಾಲದ ಓಲೆಗರಿ ಮೇಲಿನ ಚಿತ್ರಗಳಿಗಾಗಿ ಸುತ್ತಮುತ್ತಲಿನ ಊರೆಲ್ಲಾ ಸಂಚರಿಸಿ ಅವುಗಳ photo ತೆಗೆದರು. ಹಳೇಕಾಲದ ಒಡವೆ, ಪರಿಕರಗಳೂ ಕಾಮತರ ಕ್ಯಾಮರಾಕ್ಕೆ ಗ್ರಾಸವೇ. ಈ ಚಿತ್ರಗಳನ್ನು ತೆಗೆದು ಇವರಿಗೇನು ಪ್ರಯೋಜನ? ಸುಮ್ಮನೆ Film ಗೆ ಹಣದಂಡ ಮಾಡುತ್ತಿದ್ದಾರೆಂದು ನನಗೆ ಅನ್ನಿಸದೇ ಇರಲಿಲ್ಲ. ಆದರೆ ಕಾಮತರಿಗೆ ತಾವು ಮಾಡುತ್ತಿರುವ ಕೆಲಸದ ಮಹತ್ವ ತಿಳಿದಿತ್ತು. ಯಾವ ಲಾಭವಿಲ್ಲದಿದ್ದರೂ posterity ಗಾಗಿ ಈ ಚಿತ್ರಗಳನ್ನು ತೆಗೆಯುತ್ತಿದ್ದರು. ಇಂತಹ ಫೋಟೋ ಮಾಹಿತಿಯನ್ನು ಅವರ ಮಗ ವಿಕಾಸ ಕಾಮತರ website ನಲ್ಲಿ ಲಭ್ಯಮಾಡಿ ಕನ್ನಡ ಸಂಸ್ಕೃತಿಗೆ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಕೊಕ್ಕರೆಬೆಳ್ಳೂರಿನಲ್ಲಿ ಮಾಡಿದಂತೆ ಹೂಗೊಪ್ಪಲಿನಲ್ಲಿಯೂ ಹಳ್ಳಿಯ ಜನರ ಜೊತೆ ಕಾಮತರ ಸರಸ ಸಂಭಾಷಣೆ ನಡದೇ ಇರುತಿತ್ತು. ಮಾತಾಡುತ್ತಿದ್ದ ವ್ಯಕ್ತಿಯನ್ನು ನಗಿಸಿಯೋ ಆಶ್ಚರ್ಯಪಡಿಸಿಯೋ ವಿವಿಧ ಭಂಗಿಗಳಲ್ಲಿ ಫೋಟೊ ತೆಗೆಯುವುದು ಕಾಮತರ ರೀತಿ. ಬೃಹದಾಕಾರದ ಗೂಡೆ (ಬುಟ್ಟಿ)ಯನ್ನು ಹೊತ್ತ ಮಡಿವಾಳ ಮಂಜನ ಫೋಟೋ ತೆಗೆದದ್ದು ನನಗೆ ಕಣ್ಣಿಗೆ ಕಟ್ಟಿದಂತಿದೆ. ಸಾಮಾನ್ಯರ ಜೊತೆಗೆ ಬೆರೆತು ಸ್ನೇಹ ಬೆಳೆಸುವುದು ಕಾಮತರಿಗೆ ಬಹಳ ಸಲೀಸು. ಯಾವುದೇ ಬೆಡಗು ಬಿಗುಮಾನವಿಲ್ಲದ ಹಳ್ಳಿಗರ ಮುಗ್ಧ ಸ್ವಭಾವ ಕಾಮತರನ್ನು ಸೆಳೆಯುತ್ತಿದ್ದದ್ದು ಸಹಜವೇ. ಈ ಸ್ವಭಾವದಿಂದಾಗಿಯೇ ಅವರು ನ್ಯೂಯಾರ್ಕ್ ವಿ.ವಿ.ದಲ್ಲಿ ಡಾಕ್ಟರೇಟ್ ಪಡೆದು ಅಮೇರಿಕಾವೆಲ್ಲಾ ಸುತ್ತಾಡಿ ಕೊನೆಗೆ ರಾಜಸ್ಥಾನದ ಜೊಬನೇರ್ ನಂತಹ ಚಿಕ್ಕ ಊರಿನಲ್ಲಿ ಕೆಲಸಕ್ಕೆ ನಿಂತರು. ಅವರೇ ಹೇಳುವಂತೆ. “ಇಲ್ಲಿನ (ಜೊಬನೇರದ) ಜನರ ಬಗ್ಗೆ, ಅವರ ರೀತಿ ನೀತಿಗಳ ಬಗ್ಗೆ, ಜಿಗುಪ್ಸೆಯಾಗಲಿಲ್ಲ; ಬದಲಾಗಿ ಅನಾಕರ್ಷಕವೆನಿಸಲಿಲ್ಲ, ನಾನೂ ಅವರಲ್ಲಿ ಒಬ್ಬನಾಗಿದ್ದರೆ ಜೀವನವನ್ನೂ ಸರಿಯಾಗಿ ಅರ್ಥೈಸಿಕೊಳ್ಳುತ್ತಿದ್ದೇನೇ? ಎಂದು ಆಶ್ಚರ್ಯಪಡುತ್ತೇನೆ” ಎನ್ನುತ್ತಾರೆ.[1] ಕಾಮತರಿಗೆ ಮದುವೆ ನಿಶ್ಚಯವಾದದ್ದನ್ನು ತಿಳಿದ ಊರಜನರ ಪ್ರತಿಕ್ರಿಯೆ ಅವರು ವಧುವಿನ ಬಗ್ಗೆ ತೋರಿಸಿದ ಕುತೂಹಲ ಮೆಚ್ಚುಗೆ- ಒಟ್ಟಾರೆ ಕಾಮತರು ಊರ ಜನರೊಂದಿಗೆ ಬೆಳೆಸಿಕೊಂಡಿದ್ದ ಸ್ನೇಹಯುತ ಸಂಬಂಧದ ವರ್ಣನೆಯನ್ನು ಅವರು ತಮ್ಮ ನವವಧುವಿಗೆ ಬರೆದ ಪತ್ರದಲ್ಲಿ ರಸವತ್ತಾಗಿ ನೀಡಿದ್ದಾರೆ.[2]

ಅವರು ಬಂಗಾಳದ ಪ್ಲಾಸಿಯಲ್ಲಿದ್ದಾಗ ಅಲ್ಲಿ ದುಡಿಯಲು ಬರುತ್ತಿದ್ದ ಕಾರ್ಮಿಕರಿಗೆ ಕಷ್ಟದಲ್ಲಿ ನೆರವಾಗಿ ಅವರೆಲ್ಲರ ಮೆಚ್ಚುಗೆ, ಸ್ನೇಹ ಸಂಪಾದಿಸಿದ್ದರು. ತಾವು ಹಿರಿಯ ಅಧಿಕಾರಿಯಾಗಿದ್ದರೂ ತಮ್ಮ ಸಹಾಯಕ ಹುಸೇನ್ ಊಟದ ಡಬ್ಬಿ ತರದಿದ್ದನ್ನು ಗಮನಿಸಿ, ತಮ್ಮ ಮನೆಗೇ ಕರೆದುಕೊಂಡು ಹೋಗಿ ತಾವು ಮಾಡಿಟ್ಟುಕೊಂಡಿದ್ದ ಊಟದ ಅರ್ಧಪಾಲನ್ನು ಅವನಿಗೆ ಉಣಬಡಿಸಿ ಹೃದಯವಂತಿಕೆ ಮೆರೆದ ಪ್ರಸಂಗ,[3] ಕಾಮತರು ಹೇಗೆ ಜನರ ಸ್ನೇಹ ಗಳಿಸುತ್ತಿದ್ದರೆನ್ನುವುದಕ್ಕೆ ಉದಾಹರಣೆ. ಅವರ ಕರುಣಾಪೂರಿತ ಹೃದಯ, ಬಡ ಕಾರ್ಮಿಕರ ಬವಣೆ ಕಂಡು ಮರುಗುತ್ತಿತ್ತು. ತನ್ನ ಕೈಲಾದ ಸಹಾಯ ಮಾಡಲು ಸದಾ ಪ್ರೇರೇಪಿಸುತ್ತಿತ್ತು. ಅವರ ಧನಾರ್ಜನೆಯ ಉದ್ದೇಶ ಇತರರಿಗೆ ನೆರವಾಗುವುದು. “ನಾವಿಬ್ಬರೂ ದುಡಿಯುತ್ತಿದ್ದು ಸಹಸ್ರಾರು ರೂಪಾಯಿಗಳಿಂದ ಸುಖಜೀವನ ನಡೆಸಬಹುದು. ಸಕಲರೂ ಇದನ್ನೇ ಮಾಡುತ್ತಾರೆ. ಆದರೆ ನಮ್ಮ ಆದಾಯದ ಅಲ್ಪ ಭಾಗವನ್ನಾದರೂ ಇನ್ನಿತರರ ಕಷ್ಟ-ಸಂಕಟದ ಸಂದರ್ಭದಲ್ಲಿ ವಿನಿಯೋಗಿಸಬೇಕೆಂಬುದು ನನ್ನ ಕನಸು”.

* * *

ಮಣಿಪಿ ದರಿದ್ರರ ಜೊತೆಗೆ ಮಾತ್ರ ಕಾಮತರು ಸ್ನೇಹ ಬೆಳಸುತ್ತಿದ್ದರೆಂದಲ್ಲ. ಹೆಮಲಿನ್ ದಂಪತಿಗಳಂತಹ ಶ್ರೀಮಂತರೂ ಕಾಮತರ ಹತ್ತಿರದ ಗೆಳೆಯರಾಗಿದ್ದರು. "ಕ್ರಿಶ್ ನೀನು ಬಲುಬೇಗ ನಮಗೆ ಸಮೀಪದವನಾದೆ. ನೀನು ನನ್ನ ತಮ್ಮನಂತೆ ಭಾಸವಾಗುತ್ತಿದೆ.... ಇನ್ನೂ ಕೆಲವು ದಿನ ಇಲ್ಲಿ ನಿಲ್ಲುವಂತಾಗಿದ್ದರೆ ಎಷ್ಟು ಚೆನ್ನಾಗಿತ್ತು".[3] ಎನ್ನುವ ಹೆಲೆನ್ನರ ಮಾತು ಇದಕ್ಕೆ ಸಾಕ್ಷಿ. ಹಲವು ಪತ್ರ ಸ್ನೇಹಿತೆಯರನ್ನೂ ಹೊಂದಿದ್ದ ಕಾಮತರು ಲೇಖನಿ ಸ್ನೇಹಿತೆ ಜೀನ್‌ರೋಥ್‌ಳ ನಿರ್ವ್ಯಾಜ ಸ್ನೇಹದ ನಿರೂಪಣೆ ಮಾಡುತ್ತಾ "ಹೆಮಲಿನ್ ಕುಟುಂಬದಂತೆಯೇ ನಿರ್ವ್ಯಾಜ ಪ್ರೀತಿ, ಆತ್ಮೀಯತೆಗಳು ನನಗೆ ಇಲ್ಲೂ ದೊರಕಿದವು....", "ನಿನ್ನ ಸಹವಾಸ ಒದಗಿಸಿದ್ದಕ್ಕಾಗಿ ಅನೇಕ ಧನ್ಯವಾದಗಳು ಎಂದು ಮನಸ್ಸು ತುಂಬಿ ಬೀಳ್ಕೊಟ್ಟಾಗ ರೋಥ್ ದಂಪತಿಗಳ ಹೃದಯ ಭಾವೋದ್ವೇಗದಿಂದ ಭಾರವಾಗಿತ್ತು" ಎನ್ನುತ್ತಾರೆ.[4]

* * *

ನಾನು ಕಾಮತರ ಮನೆಗೆ ಸಮಯ ಸಿಕ್ಕಾಗ ಹೋಗಿ ಸ್ವಲ್ಪ ಹೊತ್ತು ಕಳೆದುಬರುತ್ತಿದ್ದೆ. ಅವರ ಹೊಸ ಪುಸ್ತಕ ಬಂದಾಗಲೆಲ್ಲಾ ಅದರ ಪ್ರತಿಯನ್ನು ಪ್ರೀತಿಯಿಂದ ನನಗೆ ಕೊಡುತ್ತಿದ್ದರು. ನಾನು ಓದಿ ನನ್ನ ಅಭಿಪ್ರಾಯ ಬರೆದು ತಿಳಿಸಿದಾಗ ಸಂತೋಷಪಡುತ್ತಿದ್ದರು. ಸ್ವಭಾವತಃ ಮಿತಭಾಷಿಯಾದ ಕಾಮತರು ಯಾವಾಗಲೂ ಮಾತಿಗೆ ಸಿಗದಿದ್ದರೂ ಹಲವು ಸಲ, ನಮ್ಮ ದೇಶದ ಆಗುಹೋಗುಗಳ ಬಗ್ಗೆ ಜನರ ಸ್ವಭಾವದ ಬಗ್ಗೆ ದುರಾಸೆ ಸ್ವಾರ್ಥಗಳ ಬಗ್ಗೆ ತಮ್ಮ ಕಳಕಳಿಯನ್ನು ತೋಡಿಕೊಳ್ಳುತ್ತಿದ್ದದ್ದುಂಟು, ಆದರೆ ಒಮ್ಮೆಯೂ ತಮ್ಮ ಪದವಿ ವಿದ್ವತ್ತಿಗೆ ನಮ್ಮ ದೇಶದಲ್ಲಿ ಅವರಿಗೆ ಕೆಲಸ ದೊರೆಯದಿದ್ದರ ಬಗ್ಗೆ ಪ್ರಸ್ತಾಪ ಮಾಡಲಿಲ್ಲ.

ನನ್ನ ಅವರ ಕೊನೆಯ ಭೇಟಿ ಅವರು ನಮ್ಮನ್ನಗಲಿದ ಕೆಲವು ದಿನಗಳ ಮುಂಚೆ. ನಾನು ನನ್ನ ಕಛೇರಿಯ ಒಬ್ಬ ಅಧಿಕಾರಿಯ ಹಗರಣದಿಂದಾಗಿ, ಅವನ ಕಿರಿಕಿರಿಗೆ ಬಹಳ ನೊಂದು ಕ್ಲೇಶಗೊಂಡು ಅವರ ಮನೆಗೆ ಹೋಗಿದ್ದೆ. ಕಾಮತರು ನನ್ನ ಬಗ್ಗೆ ಪೂರ್ಣ ಸಹಾನುಭೂತಿ ವ್ಯಕ್ತಪಡಿಸಿದರು. ಬಹಳ ಹೊತ್ತು ಮಾತನಾಡಿದ್ದರು. ನನ್ನ ದುಗುಡವನ್ನು ಹಂಚಿಕೊಂಡರು, ನಾನು ಹಗುರ ಮನಸ್ಸಿನಿಂದ ಮನೆಗೆ ಬಂದೆ. ಆಮೇಲೊಂದು ದಿನ ಡಾ.ಜ್ಯೋತ್ಸ್ನಾ, ಆ ದಿನ ನಾನು ಹೋದ ಮೇಲೂ ನನ್ನ ಸಂಕಟದ ಬಗ್ಗೆ ನೊಂದುಕೊಂಡಿದ್ದನ್ನು ಹೇಳಿದಾಗ ನನ್ನ ಹೃದಯ ತುಂಬಿ ಬಂತು.

* * *

ಡಾ.ಕೃಷ್ಣಾನಂದ ಕಾಮತರ ಸ್ನೇಹ ರಾಜಾಜಿ ಹೇಳಿದಂತೆ ಪ್ರತಿಫಲವನ್ನು ಎದುರು ನೋಡದ ಸ್ನೇಹ. ಸ್ನೇಹಕ್ಕಾಗಿ ಸ್ನೇಹ. ತನ್ನಲ್ಲಿದ್ದದ್ದನ್ನು ಬೇರೆಯವರಿಗೆ ಕೊಡಮಾಡುವ ಸ್ನೇಹ, ಇಂತಹ ಸ್ನೇಹಕ್ಕೆ ನಾನೂ ಪಾಲುದಾರನಾಗಿದ್ದೇನೆನ್ನುವುದು ನನ್ನಲ್ಲಿ ಧನ್ಯತೆಯನ್ನು ಮೂಡಿಸುತ್ತದೆ.



---

1. ನೋಡಿ : ನಾನು ಅಮೇರಿಕೆಗೆ ಹೋಗಿದ್ದೆ
2. ನೋಡಿ : ಅದೇ
3. ನೋಡಿ : ಕೃಷ್ಣಾನಂದ ಕಾಮತರ (ಪ್ರೇಯಸಿಗೆ ಪತ್ರಗಳು)
4. ನೋಡಿ : ಅದೇ

# ಡಾ। ಕೃಷ್ಣಾನಂದ ಕಾಮತ : ಒಂದು ನೆನಪು

**ಡಾ॥ ಬಸವರಾಜ ಸಾದರ**

"ಸ್ವಲ್ಪ ಗಂಭೀರವಾದ ವಿಚಾರ ಬರೆಯಲೇ? ಪಡೆದ ಪದವಿಗಳನ್ನು ಬಳಸದೇ ಜೀವನ ನಡೆಸಬೇಕೆಂಬ ನಿರ್ಣಯ ಫಲ ನೀಡುವುದರಲ್ಲಿದೆ. ಯಾವ ತರಬೇತಿಯೂ ಇಲ್ಲದೆ ಬರಹಗಾರನಾಗಿ ಬಿಟ್ಟಿದ್ದೇನೆ. ಆದರೆ ಅದನ್ನು ವೃತ್ತಿಯನ್ನಾಗಿಸುವ ಎದೆಗಾರಿಕೆ ನನ್ನಲ್ಲಿಲ್ಲ. ಹಾಗೆ ಮಾಡಿದಾಗಲ್ಲ ಟೊಳ್ಳು ಸಾಹಿತ್ಯ ಹೊರ ಬರುವದು ಅನುಭವದ ಮಾತು. ಛಾಯಾಗ್ರಹಣ ನನಗೆ ಅತ್ಯಂತ ಪ್ರಿಯವಾದ ಕಲೆ. ಗುರುವಿನ ಆವಶ್ಯಕತೆ ಕೂಡಾ ಅನಿಸಲಿಲ್ಲ; ಸ್ವಸಂತೋಷಕ್ಕಾಗಿ ಛಾಯಾಗ್ರಹಣವನ್ನು ಕೈಕೊಂಡರೂ, ಅದನ್ನು ವೈಜ್ಞಾನಿಕ ಸಂಶೋಧನಕ್ಕೂ ಯಶಸ್ವಿಯಾಗಿ ಉಪಯೋಗಿಸಬಹುದು ಎಂಬುದನ್ನು ಸ್ಮರಿಸಿಕೊಳ್ಳಬಹುದು. ಇದನ್ನೇ ಜೀವನೋಪಾಯವಾಗಿ ಮಾಡಿಕೊಂಡರೆ, ವಿಜ್ಞಾನ, ಶಿಕ್ಷಣ, ಸಂಶೋಧನೆ, ಜೊತೆಗೆ ವಿದ್ಯಾರ್ಥಿಗಳ ನಿಕಟ ಸಂಪರ್ಕ ಇಟ್ಟುಕೊಳ್ಳಲು ಅನುಕೂಲವಾಗುತ್ತದೆ, ಎಂಬುದು ನನ್ನ ಮನದಾಸೆ. ಇದರಲ್ಲಿ ಧುಮುಕಲು ದೃಢ ಸಂಕಲ್ಪ ಒಂದನ್ನು ಬಿಟ್ಟರೆ ಬೇರಾವ ತರಬೇತಿಯೂ ಇಲ್ಲ. ಆದರೆ ಪಡೆದ ಶಿಕ್ಷಣ-ಅನುಭವಗಳು, ಇಂಥ ಸಾಹಸಕ್ಕೆ ಕೈ ಹಾಕುವಂತೆ ಪ್ರೋತ್ಸಾಹಿಸುತ್ತಲಿವೆ. ನಿಜವಾಗಿ ಅಂಥ ವಿದ್ಯೆಗೆ ಇದೇ ಪರೀಕ್ಷಾ ಕಾಲವೆಂದು ನನ್ನ ಗ್ರಹಿಕೆ". (ಪ್ರೇಯಸಿಗೆ ಪತ್ರಗಳು: ಪು. ೧೪೧) ಡಾ. ಕೃಷ್ಣಾನಂದ ಕಾಮತರು ದಿ: ೧೧-೧೧-೧೯೭೦ ರಂದು ತಮ್ಮ ಅರ್ಧಾಂಗಿ ಶ್ರೀಮತಿ ಜ್ಯೋತ್ಸ್ನಾ ಅವರಿಗೆ ಪ್ಲಾಸಿಯಿಂದ ಬರೆದ ಪತ್ರವೊಂದರಲ್ಲಿಯ ಮಾತುಗಳಿವು. ಈ ಮಾತುಗಳ ಒಳಹೊಕ್ಕು ನೋಡಿದಾಗ ಡಾ. ಕೃಷ್ಣಾನಂದ ಕಾಮತರ ಒಟ್ಟು ಬದುಕಿನ ದಾರಿ ಮತ್ತು ಧೋರಣೆಗಳು ಎಂಥವಾಗಿದ್ದುವೆಂಬುದರ ಸ್ಪಷ್ಟ ಅರಿವಾಗುತ್ತದೆ.

ಇವತ್ತಿನ ಶೈಕ್ಷಣಿಕ ಮಾನದಲ್ಲಿ ಹೇಳುವುದಾದರೆ ಡಾ. ಕೃಷ್ಣಾನಂದ ಕಾಮತರು ಉನ್ನತ ಪದವಿಗಳನ್ನು ಸಂಪಾದಿಸಿದವರು. ವಿಶ್ವದಲ್ಲೇ ಅತ್ಯಂತ ಮುಂದುವರೆದ ರಾಷ್ಟ್ರವೆನಿಸಿಕೊಂಡಿರುವ ಅಮೇರಿಕೆಯ ನೂಯಾರ್ಕ್ ವಿಶ್ವವಿದ್ಯಾಲಯದಲ್ಲಿ ವ್ಯಾಸಂಗ ಮಾಡಿ, ಡಾಕ್ಟರೇಟ್ ಪದವಿ ಪಡೆದವರು. ಪದವಿಗನುಗುಣವಾದ ವೃತ್ತಿ ಎಂಬ ಸಮೀಕರಣಕ್ಕನುಗುಣವಾಗಿ ಎಲ್ಲಾ ಸರಿಯಾಗಿದ್ದಿದ್ದರೆ, ಅವರು ಈ ದೇಶದ ಬಹು ದೊಡ್ಡ ವಿಶ್ವವಿದ್ಯಾಲಯದಲ್ಲಿ (ಯಾವುದೇ ಆಗಿರಬಹುದು) ಕೀಟಶಾಸ್ತ್ರದ ಪ್ರಾಧ್ಯಾಪಕರಾಗಿ, ಆ ವಿಭಾಗದ ಮುಖ್ಯಸ್ಥರಾಗಿ ಅಥವಾ ಅದಕ್ಕೂ ಹೆಚ್ಚಿನ ಸ್ಥಾನ-ಮಾನಗಳನ್ನು ಅಲಂಕರಿಸುತ್ತಿದ್ದರು. ಆದರೆ ಅವರ ಬದುಕಿನಲ್ಲಿ ಹಾಗಾಗಲಿಲ್ಲವೆಂಬುದು ಅತ್ಯಂತ ಕೆಟ್ಟ ವಾಸ್ತವ. ಆಶ್ಚರ್ಯವೆಂದರೆ ತಮ್ಮ ಪದವಿಗಳು ಮತ್ತು ಅನುಭವಕ್ಕೆ ತಕ್ಕ ವೃತ್ತಿ ಸಿಗಲಿಲ್ಲವೆಂದು ಅವರು ಎಂದೂ ತಮ್ಮ ವ್ಯಕ್ತಿತ್ವವನ್ನು ಗೌಣಗೊಳಿಸಿಕೊಳ್ಳಲಿಲ್ಲ. ಅದಕ್ಕೂ ಮಿಗಿಲಾದ ಸತ್ಯವೆಂದರೆ ತಮಗೆ ಅಂಥ ಸ್ಥಿತಿಯನ್ನು ತಂದ ನಮ್ಮ ಶಿಕ್ಷಣ ವ್ಯವಸ್ಥೆಯನ್ನಾಗಲಿ ಅಥವಾ ಅನ್ಯಾಯ ಮಾಡಿದ ವಿಶ್ವವಿದ್ಯಾಲಯಗಳ ಕೆಟ್ಟ ರಾಜಕೀಯವನ್ನಾಗಲಿ ಅವರೆಂದೂ ದೂಷಿಸಲಿಲ್ಲ; ಮತ್ತು ಅವುಗಳ ಮೇಲೆ ಕಲ್ಲೆಸೆದು ರಾಡಿಯನ್ನು ಸಿಡಿಸಿಕೊಳ್ಳಲಿಲ್ಲ. ತಾವು ಸಾಧಿಸಿದ ವಿದ್ಯೆಯ ಪರಿಣತಿಯನ್ನೇ ವೃತ್ತಿಯನ್ನಾಗಿಸಿಕೊಂಡ ಅವರು ಅತ್ಯಂತ "ಅರ್ಥ"ಪೂರ್ಣವಾಗಿ ಹಾಗೂ ಸೃಜನಾತ್ಮಕವಾಗಿ ಜೀವನವನ್ನು ನಡೆಸಿದರು. ಕೆಟ್ಟ ವ್ಯವಸ್ಥೆಯಿಂದಾಗಿ ಅವರಿಗೆ ಸಿಗಬೇಕಾದ್ದು ಸಿಗದಿದ್ದಾಗ ಅವರೆಂದೂ ರೊಚ್ಚಿಗೇಳಲಿಲ್ಲ. ಬದುಕನ್ನು ಅತ್ಯಂತ ತಾಳ್ಮೆಯಿಂದ ಸ್ವೀಕರಿಸಿದ ಅವರು ವೈಯಕ್ತಿಕ ಸಾಧನೆಯಲ್ಲೇ ತಮ್ಮ ಕ್ರಿಯಾಶೀಲತೆ ಫಲವನ್ನು ನಾಡಿಗೆ ಧಾರೆಯೆರೆದರು. ಅವರನ್ನು ಕಂಡವರು "ಅಯ್ಯೋ ಪಾಪ" ಎನ್ನುವ ಹಾಗೆ ಅವರೆಂದೂ ಬದುಕಲಿಲ್ಲ. ತುಂಬು ಅಭಿಮಾನದಿಂದಲೇ ಬದುಕಿದರು. "ನಾವು ಅಭಿಮಾನಿಗಳಾಗದಿದ್ದರೆ ಇನ್ನಿತರರು ಗೌರವದಿಂದ ಹೇಗೆ ಕಂಡಾರು? ನಮ್ಮ ನಮ್ಮ ಆತ್ಮಕ್ಕೆ ಒಪ್ಪಿಗೆಯಾಗುವಂತೆ ಜೀವನ ನಡೆಸಿದರೆ ಬೇರಾರಿಗೂ ಸೊಪ್ಪು ಹಾಕಬೇಕಾದದ್ದೇ ಇಲ್ಲ". (ಪ್ರೇಯಸಿಗೆ ಪತ್ರಗಳು: ಪು-೧೭೫) ಎಂಬುದು ಅವರ ಬದುಕಿನ ಮೌಲ್ಯಗಳಲ್ಲಿ ಒಂದು.

ಉನ್ನತ ಪದವಿಗಳನ್ನು ಪಡೆದ ಯಾರಿಗೇ ಆಗಲಿ ಇಂಥ ಅನ್ಯಾಯವಾದಾಗ, ಇಲ್ಲವೇ ಅಂಥವರಿಗೆ ದೊರೆಯಬೇಕಾದದ್ದು ದೊರಕದಿದ್ದಾಗ, ಯಾರಾದರೂ ಅದರ ಬಗ್ಗೆ ಚಿಂತೆ ಮಾಡುವುದು ಸ್ವಾಭಾವಿಕ. ಬೇರೆಯವರ ಮಾತಿರಲಿ, ಡಾ. ಕೃಷ್ಣಾನಂದ ಕಾಮತರ ಪತ್ನಿ, ಶ್ರೀಮತಿ ಜ್ಯೋತ್ಸ್ನಾ ಅವರೇ ಈ ಸಂಬಂಧವಾಗಿ ತುಂಬ ನೊಂದುಕೊಂಡಿದ್ದರೆಂದು ತೋರುತ್ತದೆ. ಆ ಸಂದರ್ಭದಲ್ಲಿ ಡಾ. ಕೃಷ್ಣಾನಂದರು ವ್ಯಕ್ತಪಡಿಸಿದ ಪ್ರತಿಕ್ರಿಯೆ ಎಂಥದಾಗಿತ್ತೆಂಬುದಕ್ಕೆ ಈ ಮುಂದಿನ ಮಾತುಗಳೇ ಸಾಕ್ಷಿ. "ವಿದ್ಯಾರ್ಹತೆಗೆ ಅನುಗುಣವಾದ ನೌಕರಿ ಇಲ್ಲದ್ದಕ್ಕೆ ನೀನೇಕೆ ಬೇಸರಿಸಬೇಕು? ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿಯೇ ಶಿಕ್ಷಣ ಎಂಬುದು ತಪ್ಪು ಗ್ರಹಿಕೆ. ನರಿ-ನಾಯಿಗಳೂ ತಮ್ಮ ಆವಶ್ಯಕತೆಗಳನ್ನು ಯಾವ ಶಾಲೆ-ಕಾಲೇಜುಗಳ ಮೆಟ್ಟಲು ಹತ್ತದೇ ಪೂರೈಸಿಕೊಳ್ಳುತ್ತವೆ. ವಿದ್ಯಾಭ್ಯಾಸದ ಮೂಲ ಉದ್ದೇಶವಿರುವದು

ಮಾನವನ ಮಾನಸಿಕ ವಿಕಾಸಕ್ಕಾಗಿ, ಹಣ ಸಂಪಾದನೆ, ಸುಖಜೀವನಗಳೇ ಶಿಕ್ಷಣದ ಗುರಿಯಾಗಿದ್ದರೆ, ಡಾರ್ವಿನ್, ನ್ಯೂಟನ್, ಐನ್‌ಸ್ಟೈನ್‌ರಂಥವರು ಈ ವಿಶ್ವವನ್ನು ಶ್ರೀಮಂತವಾಗಿಸುತ್ತಿರಲಿಲ್ಲ. ಅದೇ ಮಾರವಾಡಿ, ಸಿಂಧಿಗಳು ಅಂಥ ಶಿಕ್ಷಣ ಪಡೆಯದಿದ್ದರೂ ಧನಿಕರಾಗಲು ಎಂದೂ ಹಿಂದೆ ಬಿದ್ದಿಲ್ಲ. ನಾನು ಎಂದೂ ಶಿಕ್ಷಣದಿಂದ ಸಿರಿವಂತನಾಗಬೇಕೆಂದು ಕನಸು ಕಟ್ಟಿದವನಲ್ಲ. ಅಂತೆಯೇ ಸರ್ವೇ ಸಾಮಾನ್ಯರಲ್ಲಿ ಕಂಡುಬಾರದ ವಿದ್ಯೆಯ ಬಗೆಗಿನ ಮಮತೆ-ವಿಶ್ವಾಸಗಳು ನನ್ನಲ್ಲಿ ಮನೆ ಮಾಡಿಕೊಂಡಿವೆ." (ಪ್ರೇಯಸಿಗೆ ಪತ್ರಗಳು : ಪುಟ-೧೩೮) ಈ ಮಾತುಗಳಲ್ಲಿರುವ ಖಚಿತತೆ ಹಾಗೂ ಸ್ಪಷ್ಟ ಧೋರಣೆ ಯಾರನ್ನಾದರೂ ಬೆರಗುಗೊಳಿಸುವಂತಿವೆ. ನಾವೆಲ್ಲಾ ಸಾಮಾನ್ಯವಾಗಿ ಗ್ರಹಿಸಿರುವುದು: ಶಿಕ್ಷಣವಿರುವುದು ಅಥವಾ ಪದವಿಗಳನ್ನು ಗಳಿಸುವುದು ನೌಕರಿ ಮಾಡಿ ಹೊಟ್ಟೆ ಹೊರೆಯುವುದಕ್ಕಾಗಿ ಮತ್ತು ಅದಾದ ನಂತರ ಹಣ ಸಂಪಾದಿಸುವುದಕ್ಕಾಗಿ ಎಂದೇ. ಆದರೆ ಡಾ. ಕೃಷ್ಣಾನಂದರ ಕ್ರಿಯಾಗ್ರಹಿಕೆಯೇ ಬೇರೆ. ಅವರ ಪ್ರಕಾರ "ಅವು ಇರುವುದು ಮಾನವನ ಮಾನಸಿಕ ವಿಕಾಸಕ್ಕಾಗಿ". ಇಂಥ ಮಾತುಗಳನ್ನು ಬೇರೆ ಯಾರಾದರೂ ಆಡಿದ್ದರೆ, ಅದು ನರಿ ಮತ್ತು ಹುಳಿದ್ರಾಕ್ಷಿ ನ್ಯಾಯ ಎಂದು ಗೇಲಿ ಮಾಡಿಬಿಡಬಹುದಿತ್ತೇನೋ! ಆದರೆ ಡಾ. ಕೃಷ್ಣಾನಂದ ಕಾಮತರ ವಿಷಯದಲ್ಲಿ ಅಂಥ ಯೋಚನೆ ಕೂಡಾ ಬರಲಾರದು. ಏಕೆಂದರೆ ಅವರು ಮನಸ್ಸು ಮಾಡಿದ್ದರೆ, ಅಥವಾ ಉಳಿದ ಪದವಿಪತ್ರಧರರ ಹಾಗೆ ಅಲ್ಲಿಲ್ಲಿ ಕೈಚಾಚಿದ್ದರೆ ಅತ್ಯಂತ ಸರಳವಾಗಿ ಉನ್ನತ ಹುದ್ದೆಗಳಲ್ಲಿ ಮೆರೆಯಬಹುದಿತ್ತು. ಆದರೆ ಎಂದೂ ಅಂಥ ಅಡ್ಡದಾರಿ ಹಿಡಿಯಲಿಲ್ಲ. ಬದಲಾಗಿ ಸಂಪಾದಿಸಿದ ವಿದ್ಯೆಯ ಸದುಪಯೋಗ ಮಾಡಿಕೊಂಡು ಆ ವಿದ್ಯೆಯನ್ನೇ ಶ್ರಮವಾಗಿ ಪರಿವರ್ತಿಸಿಕೊಂಡು, ಜೇನುಹುಳದ ಹಾಗೆ ದುಡಿದರು-ಬದುಕಿದರು. ಡಾ. ಕೃಷ್ಣಾನಂದ ಕಾಮತರು ಶ್ರೇಷ್ಠರಾಗುವುದು ಈ ಕಾರಣಕ್ಕಾಗಿ.

ಅನುಭವ ಮತ್ತು ಸತತ ಅಧ್ಯಯನದ ಮೂಲಕ ಡಾ. ಕೃಷ್ಣಾನಂದ ಕಾಮತರು ಬೆಳೆಸಿಕೊಂಡು ಬಂದ ಹವ್ಯಾಸಗಳು ಒಂದಲ್ಲ, ಎರಡಲ್ಲ, ಅವುಗಳನ್ನು ಪಟ್ಟಿ ಮಾಡುವುದೂ ಕಷ್ಟಕರ, ಚಿತ್ರಕಲೆ, ಎನ್.ಸಿ.ಸಿ., ಓದು, ಬರಹ, ನೂಲುವುದು, ಹಾಸು ಹಾಕುವುದು, ನೇಯುವುದು, ರಟ್ಟಿನ ಕೆಲಸ, ಬಡಗಿತನ, ಪ್ರವಾಸ, ಕೀಟಶಾಸ್ತ್ರ, ಪರಿಸರ ವಿಜ್ಞಾನ, ಛಾಯಾಗ್ರಹಣ (ಇದನ್ನು ವೈಜ್ಞಾನಿಕ ಸಂಶೋಧನೆಗೆ ಬಳಸುವಲ್ಲಿ ಅವರು ನಿಷ್ಣಾತರು) ಶಿಕ್ಷಣ, ಸಂಶೋಧನೆ-ಹೀಗೇ ಬೆಳೆಸುತ್ತ ಹೋಗಬಹುದಾದ ಅವರ ಹವ್ಯಾಸಗಳು ರುಚಿಕರ ತಿಂಡಿ, ಊಟಗಳನ್ನು ತಯಾರಿಸುವವರೆಗೂ ಹೋಗುತ್ತವೆ. ಅವರ ವೈವಿಧ್ಯಪೂರ್ಣ ಹಾಗೂ ಅಸಂಖ್ಯ ಹವ್ಯಾಸಗಳ ಪ್ರತಿರೂಪ ಮಲ್ಲೇಶ್ವರಂನ ಶಶಿಕಿರಣದ ಅವರ ಫ್ಲ್ಯಾಟ್‌ನ ಪ್ರಯೋಗಶಾಲೆ. ಡಾ. ಜ್ಯೋತ್ಸ್ನಾ ಕಾಮತ್ ಅವರು ಅದನ್ನು ನನಗೆ ಪರಿಚಯಿಸಿದ್ದು "ನೋಡಿ ಅಲ್ಲಿದೆ ನಿಮ್ಮ ಸರ್ ಅವರ ಗುಜರಿ ಗೋದಾಮು" ಎಂದು. ಅದು ಡಾ. ಜ್ಯೋತ್ಸ್ನಾ ಕಾಮತ್ ಅವರ ಹಾಸ್ಯ ಪ್ರವೃತ್ತಿಯ ಪ್ರತಿರೂಪ ಹೌದು, "ಸಾದರವರೇ ಈ ಗುಜರಿ ಗೋದಾಮಿನ ಒಡೆಯನೇ ನಿಮ್ಮ ಮೇಡಂ ಅವರ ಪತಿದೇವ" -ಎಂದು ಡಾ. ಕೃಷ್ಣಾನಂದರು ಪ್ರತಿನವಿರು ಸುರಿದಿದ್ದು ಇನ್ನೂ ನಿಚ್ಚಳವಾಗಿ ನೆನಪಿದೆ. ಇಂಥ ಹವ್ಯಾಸಗಳಲ್ಲೇ ಕೆಲವು ಅವರ ಪ್ರಮುಖ ವೃತ್ತಿಯಾದವು. ಅವುಗಳಲ್ಲಿ ಮುಖ್ಯವಾದವುಗಳು ವೈಜ್ಞಾನಿಕ ಛಾಯಾಗ್ರಹಣ, ಸಂಶೋಧನೆ (ಕೀಟ, ಪಕ್ಷಿ, ಚಿತ್ರಕಲೆ ಇತ್ಯಾದಿ ಕ್ಷೇತ್ರಗಳಲ್ಲಿ ಸಂಶೋಧನೆ) ಹಾಗೂ ಬರವಣಿಗೆ. ಈ ಮೂರರಲ್ಲಿ ಅಗ್ರಸ್ಥಾನ ಪಡೆದಿರುವುದು ಅವರ ಬರವಣಿಗೆಯ ಪ್ರವೃತ್ತಿ. ಇನ್ನಾವುದೇ ಹವ್ಯಾಸಕ್ಕಿಂತ ಹೆಚ್ಚಾಗಿ ಡಾ. ಕೃಷ್ಣಾನಂದ ಕಾಮತ್ ಅವರನ್ನು ಕನ್ನಡ ನಾಡಿಗೆಲ್ಲ ಪರಿಚಯಿಸಿದ್ದು ಅವರ ಬರವಣಿಗೆ.

ಡಾ. ಕೃಷ್ಣಾನಂದ ಕಾಮತರು ವೈವಿಧ್ಯಪೂರ್ಣ ಮತ್ತು ವೈಶಿಷ್ಟ್ಯಪೂರ್ಣ ವಸ್ತುಗಳನ್ನುಳ್ಳ ೨೨ ಕೃತಿಗಳನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಕೊಟ್ಟಿದ್ದಾರೆ. ಅವುಗಳಲ್ಲಿ ಪ್ರವಾಸ ಕಥನಗಳಿವೆ, ಸಸ್ಯ, ಕೀಟ ಮತ್ತು ಪಶು-ಪಕ್ಷಿ ಸಂಕುಲ ಕುರಿತಾದ ವೈಜ್ಞಾನಿಕ ಸಂಶೋಧನೆಯ ಸಾಹಿತ್ಯ ಕೃತಿಗಳಿವೆ, ಚಿತ್ರಕಲೆ, ಕಾವಿಕಲೆಯನ್ನು ಕುರಿತ ಸಂಶೋಧನಾತ್ಮಕ ಕೃತಿಗಳಿವೆ, ಆಕರ್ಷಕವಾದ ಪತ್ರಸಾಹಿತ್ಯ ಕೃತಿಯಿದೆ. ವಿಜ್ಞಾನವೇ ಇರಲಿ, ಸಂಶೋಧನೆ, ಪ್ರವಾಸ, ಪತ್ರಸಾಹಿತ್ಯವೇ ಇರಲಿ ಡಾ. ಕೃಷ್ಣಾನಂದ ಕಾಮತರ ಬರವಣಿಗೆಯ ಮುಖ್ಯಗುಣ ಸರಳತೆ ಮತ್ತು ಲಲಿತತೆ. ಅತ್ಯಂತ ವೈಜ್ಞಾನಿಕವೆನ್ನಬಹುದಾದ, ಕೀಟ, ಸಸ್ಯ ಮತ್ತು ಪಕ್ಷಿ ಸಂಕುಲಗಳನ್ನು ಕುರಿತು ಬರೆದ ಅವರ ಕೃತಿಗಳೂ ಒಂದು ಬಗೆಯ ನವಿರಾದ ಹಾಸ್ಯದ ಶೈಲಿಯನ್ನು ಹೊಂದಿವೆ. ಇಂಥ ಶೈಲಿಯನ್ನು ಅವರು ಉದ್ದೇಶಪೂರ್ವಕವಾಗಿ ತರುತ್ತಾರೆಂದಲ್ಲ, ಅದು ಅತ್ಯಂತ ಸಹಜವಾಗಿಯೇ ಒಡಮೂಡಿ ಬರುವ ಶೈಲಿ. ಡಾ. ಕೃಷ್ಣಾನಂದ ಕಾಮತರ ಬದುಕಿನ ಶೈಲಿಯೇ ಆ ತೆರನಾದುದಾಗಿರುವ ಕಾರಣ ಅವರ ಅಭಿವ್ಯಕ್ತಿಯಲ್ಲೂ ಅದು ಅತ್ಯಂತ ಅಕೃತಕವಾಗಿಯೇ ಎಡೆ ಪಡೆದಿದೆ. ಇದರಿಂದಾದ ಅತೀ ಮುಖ್ಯಲಾಭವೆಂದರೆ, ಗಹನವಾದ ಮತ್ತು ವೈಜ್ಞಾನಿಕವಾದ ಎಷ್ಟೋ ವಿಷಯಗಳು ಅವರ ಈ ಬಗೆಯ ಸರಳ ಮತ್ತು ಲಲಿತ (ಆಪ್ತವೂ ಹೌದು) ಶೈಲಿಯ ಕಾರಣದಿಂದ

ಅತ್ಯಂತ ಸಹಜವಾಗಿ ಓದುಗರನ್ನು ತಲುಪುವುದು ಮತ್ತು ತಟ್ಟುವುದು. ಇಂಥ ಶೈಲಿಯ ಜೊತೆಗೇ ಅವರ ಬರವಣಿಗೆ ಓದುಗರಿಗೆ ಆಪ್ತವಾಗುವುದರ ಇನ್ನೊಂದು ಮುಖ್ಯ ಕಾರಣ ಮಾನವೀಯ ಸಂವೇದನೆಗಳನ್ನು ಮಿಡಿಯಬಲ್ಲ ಅವರ ಹೃದ್ಯ ಗುಣ.

ಡಾ. ಕೃಷ್ಣಾನಂದ ಕಾಮತ್ ಹಾಗೂ ಡಾ. ಜ್ಯೋತ್ಸ್ನಾ ಕಾಮತ್ ಅವರದು ಅನ್ಯೋನ್ಯ ದಾಂಪತ್ಯ. ಆದರೆ ಉದ್ಯೋಗದ ಕಾರಣಕ್ಕಾಗಿ ಅವರು ಬಹಳಷ್ಟು ಕಾಲ ದೂರ ದೂರವೇ ಇದ್ದವರು. ಅದೊಂದು ಬಗೆಯ ಅನಿವಾರ್ಯ ವಿರಹಕಾಲ. ಈ ವಿರಹ ಕಾಲದಲ್ಲಿ ಡಾ. ಕೃಷ್ಣಾನಂದರು ಡಾ. ಜ್ಯೋತ್ಸ್ನಾ ಅವರಿಗೆ ಬರೆದ ಪತ್ರಗಳ ಸಂಖ್ಯೆ ಲೆಕ್ಕವಿಲ್ಲದಷ್ಟು. ಬಹುಶಃ ಅವರೂ ದೂರ ದೂರ ಇದ್ದುದನ್ನು ಅತ್ಯಂತ ಸನಿಹ ಸನಿಹ ಮಾಡಿದ್ದೇ ಈ ಪತ್ರ ವ್ಯವಹಾರ. ಈ ಕಾರಣಕ್ಕಾಗಿಯೇ ಡಾ. ಜ್ಯೋತ್ಸ್ನಾ ಅವರನ್ನು ಅವರ ಗೆಳತಿಯರು ನಿನ್ನದು **'ಪತ್ರ ಸಂಸಾರ'** ಎಂದು ಗೇಲಿ ಮಾಡಿದ್ದುಂಟು. ಇಂಥ ಪತ್ರಗಳಲ್ಲಿ ಆಯ್ದ ಕೆಲವನ್ನು ಡಾ. ಕೃಷ್ಣಾನಂದ ಕಾಮತ್ ಅವರು "ಪ್ರೇಯಸಿಗೆ ಪತ್ರಗಳು" ಎಂಬ ಕೃತಿಯಲ್ಲಿ ಸಂಗ್ರಹಿಸಿ ಪ್ರಕಟಿಸಿದ್ದಾರೆ. ಪತ್ರಗಳು ಸಾಮಾನ್ಯವಾಗಿ ಅದರಲ್ಲೂ ಹರಯದ ಗಂಡ-ಹೆಂಡತಿಯರು ಬರೆದಾಡುವ ಪತ್ರಗಳು ತೀರ ಖಾಸಗಿಯಾಗಿರುತ್ತವೆ: ಮತ್ತು ಅವು ಪ್ರೀತಿ-ಪ್ರೇಮ-ಕಾಮದ ವಿಷಯಗಳಿಂದಲೇ ತುಂಬಿರುತ್ತವೆ. ಆದರೆ ಡಾ. ಕೃಷ್ಣಾನಂದ ಕಾಮತ್ ಅವರ ಈ ಪುಸ್ತಕವನ್ನು ಓದಿದಾಗ ಈ ಅಂಶಗಳು ಅಲ್ಲಿ ತೀರ ಗೌಣವಾಗಿರುವುದು ಸ್ಪಷ್ಟಗೋಚರವಾಗುತ್ತದೆ. ಈ ಕೃತಿಗೆ ಮುನ್ನುಡಿ ಬರೆದ ಡಾ. ಜ್ಯೋತ್ಸ್ನಾ ಕಾಮತ್ ಅವರ ಮಾತುಗಳನ್ನು ಗಮನಿಸಿದರೆ ಸಾಕು ಸತ್ಯದ ಅರಿವಾಗುತ್ತದೆ. "ಆಡು ಮುಟ್ಟದ ಗಿಡವಿಲ್ಲವಂತೆ. ಕಾಮತರು ಬರೆಯದ ವಿಷಯವಿರಲಿಲ್ಲ. ಅಸಾಮಾನ್ಯ ಜನಸಾಮಾನ್ಯರು, ಭೇಟಿಮಾಡಿದ ವಿಶೇಷ ವ್ಯಕ್ತಿ, ಓದಿದ ಪುಸ್ತಕ, ಕೇಳಿದ ಸಂಗೀತ, ಬರೆದ ಲೇಖನ, ಹಾಸ್ಯ, ವಿನೋದ, ವಿಚಾರ, ಪ್ರದೇಶ ಪರಿಚಯ, ಅನಿಸಿಕೆಗಳು, ರಾಜಕಾರಣ, ಹಣಕಾಸಿನ ವ್ಯವಸ್ಥೆ, ಜನಜೀವನ, ಆದರ್ಶಗಳು ಒಟ್ಟಿನಲ್ಲಿ ಜೀವನ ಪಾಠಗಳು, ರೇಗಿದಾಗ ಪ್ರೇಮ ಬರೆಯುವ ಭಾಷೆಯೂ ಪ್ರಭಾವಕಾರಿಯಾಗಿ, ವಾದ, ತರ್ಕಬದ್ಧವಾಗಿರುತ್ತಿತ್ತು." (ಪ್ರೇಯಸಿಗೆ ಪತ್ರಗಳು: ಮುನ್ನುಡಿ: ಪು-೭) ಈ ಮಾತುಗಳ ಆಧಾರದಿಂದ ಅವರ ದಾಂಪತ್ಯ, ವೈಜ್ಞಾನಿಕ ನೆಲೆಯ ಮೇಲೆ ಕಟ್ಟಿದ ಲಲಿತ ಮಹಲಾಗಿತ್ತೆಂಬುದು ಸ್ಪಷ್ಟವಾಗುತ್ತದೆ. "ಪ್ರೇಯಸಿಗೆ ಪತ್ರಗಳು" ಕೃತಿಯಲ್ಲಿ ವಿಚಾರ ಪ್ರಾಧಾನ್ಯತೆ ಇರುವ ಹಾಗೆಯೇ ಆ ವಿಚಾರ ಪ್ರಾಧಾನ್ಯತೆ ಹಾಸ್ಯದಿಂದೊಡಗೂಡಿ ಅಭಿವ್ಯಕ್ತಗೊಂಡು ಹೊಸ ಶೈಲಿಯೇ ಸಿದ್ಧವಾದಂತಿದೆ. ಈ ಪತ್ರಗಳು ಕೇವಲ ಪತ್ರಗಳಲ್ಲ, ಅವುಗಳಲ್ಲಿ ಕಾಮತ್ ದಂಪತಿಗಳ ಬದುಕಿನ ಚರಿತ್ರೆ ಇದೆ. ಜೊತೆಗೇ ಸಮಕಾಲೀನ ವಿವಿಧ ವಿದ್ಯಮಾನಗಳ ದಾಖಲೆಗಳೂ ಇವೆ. ಕನ್ನಡದಲ್ಲಿ ಪತ್ರಸಾಹಿತ್ಯವೇ ತೀರ ಕಡಿಮೆ. ಇಂಥ ಸ್ಥಿತಿಯಲ್ಲಿ ಡಾ. ಕೃಷ್ಣಾನಂದ ಕಾಮತ್ ಅವರ ಈ ಕೃತಿ ಕನ್ನಡ ಪತ್ರ ಸಾಹಿತ್ಯ ಕ್ಷೇತ್ರಕ್ಕೆ ಒಂದು ಅತ್ಯುತ್ತಮ ಕೊಡುಗೆ. ಯಾರಿಂದಲಾದರೂ ಆಸಕ್ತಿಯಿಂದ ಓದಿಸಿಕೊಳ್ಳುವ ಕೃತಿಯಿದು.

ಡಾ. ಕೃಷ್ಣಾನಂದ ಕಾಮತರು ಪ್ರವಾಸ ಪ್ರಿಯರು. ಅಂದರೆ ಅವರು ಕೇವಲ ಜಾಲಿಟ್ರಿಪ್‌ಗಾಗಿ ಎಂದೂ ಪ್ರವಾಸ ಮಾಡಿದವರಲ್ಲ; ಅಥವಾ ಪ್ರವಾಸಕ್ಕೆಂದು ಪ್ರವಾಸ ಮಾಡಿದವರಲ್ಲ, ಅವರ ಪ್ರವಾಸಕ್ಕೆ ನಿಶ್ಚಿತವಾದ ಶೈಕ್ಷಣಿಕ ಗುರಿ ಇರುತ್ತಿತ್ತು. ಮುಖ್ಯವಾಗಿ ಅವರು ಪ್ರವಾಸಕ್ಕೆ ಹೋದಲ್ಲೆಲ್ಲಾ ಮಾಡಿದ್ದು ವಿವಿಧ ಜನಾಂಗಗಳ ಸಾಂಸ್ಕೃತಿಕ ಅಧ್ಯಯನವನ್ನು. ಅವರ 'ನಾನೂ ಅಮೇರಿಕೆಗೆ ಹೋಗಿದ್ದೆ', 'ಬಸ್ತರ ಪ್ರವಾಸ', 'ಮಧ್ಯಪ್ರದೇಶದ ಮಡಿಲಲ್ಲಿ', 'ಪ್ರವಾಸಿಯ ಪ್ರಬಂಧಗಳು'-ಇತ್ಯಾದಿ ಪ್ರವಾಸ ಕಥನಗಳು ತಮ್ಮ ಅನನ್ಯ ರೀತಿಯ ವಸ್ತು ನಿರೂಪಣಾ ಕ್ರಮದಿಂದ ಪ್ರವಾಸ ಸಾಹಿತ್ಯ ಕ್ಷೇತ್ರದಲ್ಲಿ ಭಿನ್ನವಾಗಿ ಕಾಣುತ್ತವೆ. ಈ ಕೃತಿಗಳು ಡಾ. ಕೃಷ್ಣಾನಂದರ ಕಾಮತರು ಪ್ರವಾಸ ಮಾಡಿದ ಸ್ಥಳಗಳ ಜನಜೀವನ ವಿಧಾನ, ಅವರ ಸಾಂಸ್ಕೃತಿಕ ವೈವಿಧ್ಯ, ಕಲಾತ್ಮಕ ಅಭಿವ್ಯಕ್ತಿ ಮೊದಲಾದವುಗಳನ್ನು ಸಂಶೋಧನಾತ್ಮಕ ಹಿನ್ನೆಲೆಯಲ್ಲಿ ಕಟ್ಟಿಕೊಡುತ್ತವೆ. ಹೀಗಾಗಿ ಈ ಪ್ರವಾಸ ಕಥೆಗಳು ಕುತೂಹಲಕಾರಿ ಸಂಗತಿಗಳನ್ನು ಹೊರಹಾಕುವ ಸಾಂಸ್ಕೃತಿಕ ಇತಿಹಾಸದ ದಾಖಲೆಗಳಾಗುತ್ತವೆ. ಡಾ. ಕೃಷ್ಣಾನಂದ ಕಾಮತರ ಆಳವಾದ ಅಧ್ಯಯನ ಸಾಮರ್ಥ್ಯ ಹಾಗೂ ಸೂಕ್ಷ್ಮ ನಿರೀಕ್ಷಣಾಶಕ್ತಿ ಇವೆರಡೂ ಅವರ ಪ್ರವಾಸ ಕಥನಗಳನ್ನು ಶ್ರೀಮಂತವಾಗಿಸಿವೆ. ಇಲ್ಲೂ ಎತ್ತಿ ಹೇಳಲೇಬೇಕಾದ ವಾಸ್ತವಾಂಶವೆಂದರೆ ಅವರ ಬರವಣಿಗೆಯ ಲಲಿತ ಮತ್ತು ಆಕರ್ಷಕ ಗುಣ. ಜನಾಂಗೀಯ ಅಧ್ಯಯನಗಳಂತೆ ತೋರುವ ಈ ಪ್ರವಾಸ ಕಥನಗಳು ಅತ್ಯಂತ ಲಲಿತವಾದ ಭಾಷೆ ಮತ್ತು ಲಘುಹಾಸ್ಯ ಬೆರೆತ ಶೈಲಿಯಲ್ಲಿ ಬರೆಸಿಕೊಂಡಿರುವುದು ಅವುಗಳ ವೈಶಿಷ್ಟ್ಯವೆಂದೇ ಹೇಳಬೇಕು. ಜೀವನನಿಷ್ಠವಾದ, ಲಲಿತ ಮತ್ತು ಹಾಸ್ಯ ಸಂಯುಕ್ತ ಬರವಣಿಗೆ ಡಾ. ಕೃಷ್ಣಾನಂದ ಕಾಮತರ ಅಭಿವ್ಯಕ್ತಿಯ ಅತ್ಯಂತ ಪ್ರಮುಖ ಲಕ್ಷಣ. ಇದು ಅವರ ಇತರ ಎಲ್ಲ ಸಾಹಿತ್ಯ ಶೈಲಿಗಳಲ್ಲಿ ಸ್ಪಷ್ಟವಾಗಿ ಎದ್ದು ಕಾಣುವ ಹಾಗೆ ಪ್ರವಾಸಕಥನಗಳಲ್ಲೂ ಎದ್ದು ಕಾಣುತ್ತದೆ. ಈ ಕಾರಣಕ್ಕಾಗಿಯೇ ಅವು ಓದುಗನನ್ನು ಗಟ್ಟಿಯಾಗಿ ಹಿಡಿದುಕೊಂಡು ಪೂರ್ತಿಯಾಗಿ ಓದಿಸಿಕೊಳ್ಳುತ್ತವೆ. ಡಾ. ಬಿ.ಜಿ.ಎಲ್. ಸ್ವಾಮಿ ಅವರ ಗದ್ಯದ ರೀತಿಯಲ್ಲಿಯೇ ಡಾ. ಕೃಷ್ಣಾನಂದ

ಕಾಮತರ ಬರವಣಿಗೆಗೂ ತನ್ನದೇ ಆದ ಆಕರ್ಷಕ ಗುಣವಿದೆ. ವೈಜ್ಞಾನಿಕ ವಿಷಯಗಳನ್ನು ಜನತೆಗೆ ತಲುಪಿಸುವಲ್ಲಿ ಇಂಥ ಶೈಲಿ ಅತ್ಯಂತ ಸಮರ್ಥವಾಗಿ ಕೆಲಸ ಮಾಡಬಲ್ಲದು. ಡಾ. ಕೃಷ್ಣಾನಂದ ಕಾಮತರ ಪ್ರವಾಸಕಥನಗಳು ಉನ್ನತ ವ್ಯಾಸಂಗದ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳಾದದ್ದು ಹಾಗೂ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದದ್ದು ಅವುಗಳ ಮೌಲಿಕತೆಗೆ ಸಾಕ್ಷಿ.

'ಕಾವಿ ಕಲೆ' ಡಾ. ಕೃಷ್ಣಾನಂದ ಕಾಮತ್‌ರ ಇನ್ನೊಂದು ಮಹತ್ವದ ಸಂಶೋಧನಾತ್ಮಕ ಕೃತಿ. ಗ್ರಾಮೀಣ ಕಲಾಪ್ರಕಾರವಾದ, ಅದರಲ್ಲೂ ಉತ್ತರ ಕನ್ನಡ ಜಿಲ್ಲೆಯ ಹಳ್ಳಿಗಳಲ್ಲಿ ಒಂದು ಕಾಲದಲ್ಲಿ ಕಡ್ಡಾಯವೆಂಬಂತೆ ಮನೆ ಮನೆಯಲ್ಲೂ ಕಾಣುತ್ತಿದ್ದ 'ಕಾವಿಕಲೆ' ಇಂದು ಅದೃಶ್ಯವಾಗುತ್ತಿದೆ. ಇಂಥ 'ಕಾವಿಕಲೆ'ಯನ್ನು ಕುರಿತಂತೆ ಒಂದು ಸಮಗ್ರ ಸಂಶೋಧನೆಯನ್ನು ಮಾಡಿದ ಅವರು, ಆ ಸಂಶೋಧನೆಯ ಫಲ-ಪರಿಣಾಮಗಳನ್ನು ಕಲಾತ್ಮಕವಾಗಿ ಮಂಡಿಸಿದ್ದಾರೆ. ಈ ಕೃತಿಯಲ್ಲಿ, ಕಾವಿಕಲೆಯ ಪ್ರಾದೇಶಿಕ ಮಹತ್ವ, ಅದರ ಪೂರ್ವ ತಯ್ಯಾರಿಗಳು, ಅದರ ಅಭಿವ್ಯಕ್ತಿಯ ತಾಂತ್ರಿಕತೆಗಳು, ಕಾವಿ ಚಿತ್ರಗಳ ವರ್ಗೀಕರಣ, ಅದು ಅಭಿವ್ಯಕ್ತಿ ಪಡೆದ ವಿವಿಧ ಪರಿಕರಗಳು, ಅದು ಕಾಣೆಯಾದುದರ ಕಾರಣಗಳು - ಇತ್ಯಾದಿಗಳೆಲ್ಲವನ್ನು ಅವರು ಇಲ್ಲಿ ಅಧ್ಯಯನಪೂರ್ಣ ಸಾಕ್ಷ್ಯಾಧಾರಗಳಿಂದ ಮಂಡಿಸಿದ್ದಾರೆ. ಬಹುಶಃ ಕಾವಿಕಲೆಯನ್ನು ಕುರಿತಾದ ಅತ್ಯಂತ ಖಚಿತವಾದ ಮತ್ತು ಅಧಿಕೃತವಾದ ಮಾಹಿತಿಯುಳ್ಳ ಈ ಕೃತಿ ಆ ಕಲೆಯನ್ನು ಕುರಿತ ಮೊಟ್ಟ ಮೊದಲ ದಾಖಲೆಯೆಂದೇ ಹೇಳಬೇಕು.

ಡಾ. ಕೃಷ್ಣಾನಂದ ಕಾಮತರು ಹೆಚ್ಚಿನ ಸಂಖ್ಯೆಯ ಕೃತಿಗಳನ್ನು ರಚಿಸಿರುವುದು ಕೀಟ, ಪಶು-ಪಕ್ಷಿ, ಪ್ರಾಣಿ ಮತ್ತು ಸಸ್ಯ ಪ್ರಪಂಚವನ್ನು ಕುರಿತಾಗಿ. ಅವುಗಳಲ್ಲಿ 'ಕೀಟ ಜಗತ್ತು', 'ಪಶು-ಪಕ್ಷಿ ಪ್ರಪಂಚ' 'ಸಸ್ಯ ಪ್ರಪಂಚ', 'ಕಾಗೆಯ ಕಾಯಕ', 'ಇರುವೆಯ ಇರವು'- ಮೊದಲಾದವುಗಳನ್ನು ನಾನು ಕುತೂಹಲದಿಂದ ಓದಿದ್ದೇನೆ. ಈ ಕೃತಿಗಳ ಹೆಸರುಗಳನ್ನು ಕೇಳಿದೊಡನೆಯೇ ಅವು ವೈಜ್ಞಾನಿಕ ವಿಷಯಗಳನ್ನು ಕುರಿತಾದವು ಎಂಬುದನ್ನು ಯಾರಾದರೂ ಸಹಜವಾಗಿಯೇ ಊಹಿಸುತ್ತಾರೆ. ನಿಜ, ಅವು ವೈಜ್ಞಾನಿಕ ಸಂಶೋಧನೆಯ ಆಧಾರದಿಂದಲೇ ರೂಪು ಪಡೆದಿವೆ. ಆದರೆ ಅವರ ವೈಜ್ಞಾನಿಕ ಸಂಶೋಧನೆಯ ಫಲಗಳು ಅಭಿವ್ಯಕ್ತಿ ಪಡೆದದ್ದು ಅತ್ಯಂತ ಆಕರ್ಷಕವಾದ ಸಾಹಿತ್ಯಿಕ ಶೈಲಿಯಲ್ಲಿ. ಈ ಕಾರಣಕ್ಕಾಗಿಯೇ ಡಾ. ಕಾಮತರ ಈ ಕೃತಿಗಳೆಲ್ಲ ಸಾಹಿತ್ಯ ಕೃತಿಗಳಾಗಿಯೇ ಹೆಚ್ಚು ಗಮನ ಸೆಳೆಯುತ್ತವೆ. ಈ ಎಲ್ಲ ಕೃತಿಗಳು ವಿಜ್ಞಾನಕ್ಕೆ ಸಹಜವಾದ ರಸರಹಿತ ಶೈಲಿಯಲ್ಲಿ ರೂಪು ತಾಳಿದ್ದರೆ ಅವು ಈಗಿರುವಷ್ಟೆ ಮಹತ್ವ ಪಡೆಯುತ್ತಲೇ ಇರಲಿಲ್ಲ. ವೈಜ್ಞಾನಿಕ ವಿಷಯಗಳನ್ನು ಭಾವಪ್ರಧಾನ ನೆಲೆಯಲ್ಲಿ ಅಭಿವ್ಯಕ್ತಿಸುವ ಸಾಮರ್ಥ್ಯ ಡಾ. ಕೃಷ್ಣಾನಂದ ಕಾಮತ್ ಅವರಿಗೆ ಅತ್ಯಂತ ಸಹಜವಾಗಿ ಕರಗತವಾಗಿರುವ ಕಾರಣ ಅವರು ವಿಜ್ಞಾನಿ ಎಂಬುದಕ್ಕಿಂತ ಹೆಚ್ಚಾಗಿ ಸಾಹಿತಿಯೆಂದೇ ಗುರುತಿಸಲ್ಪಡುತ್ತಾರೆ. ಈ ಬಗೆಯ ವಿಜ್ಞಾನಿ ಸಾಹಿತಿಗಳು ಕನ್ನಡದಲ್ಲಿ ತೀರ ಕಡಿಮೆ. ಡಾ. ಕೃಷ್ಣಾನಂದ ಕಾಮತರು ಅಂಥ ಕೆಲವರಲ್ಲೇ ಅಪರೂಪದವರು. ಕೀಟ, ಸಸ್ಯ, ಪಶು-ಪಕ್ಷಿಗಳನ್ನು ಕುರಿತಂತೆ ಅವರು ನಡೆಸಿದ ಸಂಶೋಧನೆ ಕೂಡಾ ತುಂಬ ಕುತೂಹಲಕಾರಿಯಾದದ್ದು ಹಾಗೂ ಅಷ್ಟೇ ಸೂಕ್ಷ್ಮಗ್ರಹಣಾಶಕ್ತಿಯಿಂದ ಕೂಡಿದ್ದು.

ಡಾ. ಕೃಷ್ಣಾನಂದ ಕಾಮತ್ ಅವರ ಕೃತಿಗಳೆಲ್ಲವುಗಳ ಸಮೀಕ್ಷೆಯಾಗಲಿ ಅಥವಾ ವಿಮರ್ಶೆಯಾಗಲಿ ಇಲ್ಲಿ ನನ್ನ ಗುರಿಯಲ್ಲ. ಆದರೆ ಅವರನ್ನ ನೆನೆಸಿಕೊಂಡಾಗ, ಥಟ್ಟನೆ ಕಣ್ಣೆದುರಿಗೆ ಹಾಗೂ ಮನದೆದುರಿಗೆ ಬರುವ ಅವರ ಕೃತಿಗಳ ಬಗ್ಗೆ ಉಂಟಾಗುವ ಸಹೃದಯ ಸ್ಪಂದನವನ್ನು ದಾಖಲಿಸುವುದು ಅಗತ್ಯವೆನಿಸಿದ ಕಾರಣ ಇಷ್ಟು ವಿಶ್ಲೇಷಣೆ, ಇಂಥ ಸ್ಪಂದನದ ಮೂಲಕವೇ ಅವರ ಹಾಗೂ ನನ್ನ ಸಂಪರ್ಕ-ಸಂಬಂಧಗಳೂ ಸ್ಮರಣೆಗೆ ಬಂದು ಬಿಡುತ್ತವೆ.

೧೯೮೯ರಲ್ಲಿ ನಾನು ಗುಲ್ಬರ್ಗ ಆಕಾಶವಾಣಿಯಿಂದ, ಆಕಾಶವಾಣಿ ಬೆಂಗಳೂರು ಕೇಂದ್ರದ ವಾಣಿಜ್ಯ ವಿಭಾಗಕ್ಕೆ ವರ್ಗವಾಗಿ ಬಂದ ಸಂದರ್ಭ. 'ಬೋರೇಗೌಡ ಬೆಂಗಳೂರಿಗೆ ಬಂದ' ಎಂಬಂಥ ಸ್ಥಿತಿ ನನ್ನದು ಆಗ. ಹೊಸ ಜಾಗ, ಪರಿಚಿತರು, ಸ್ನೇಹಿತರು ಯಾರೂ ಇಲ್ಲ! ನನಗೆ ಬೆಂಗಳೂರಿಗೆ ಯಾಕಾದರೂ ವರ್ಗವಾಯಿತೋ? ಎಂಬ ಕೊರಗು. ಅಂಥ ಸ್ಥಿತಿಯಲ್ಲಿ ಒಂದು ಮಧ್ಯಾಹ್ನ ಊಟದ ಬಿಡುವಿನ ಹೊತ್ತಿನಲ್ಲಿ ಮೇಡಂ ಒಬ್ಬರು ಬಂದು, ನನ್ನ ಟೇಬಲ್ಲಿನ ಎದುರು ನಿಂತು "ಸಾವದರ ಅಂದ್ರ ನೀವು ಏನು?" ಎಂದು ಕೇಳಿದರು "ಹೌದ್ರಿ ಮೇಡಂ" ಎಂದು ಉತ್ತರ ಕೊಡುತ್ತಿದ್ದಂತೆ "ಏನು ಈ ಕಮರ್ಶಿಯಲ್ ವಿಭಾಗದೊಳಗಿದ್ದು ರೊಕ್ಕಾ ಎಣಿಸಿವ್ರೇನು ನೀವು? ಸಾಹಿತ್ಯದೊಳಗಿನ ಆಸಕ್ತಿ ಇದ್ದಂಗ ಕಾಣತೈತಿ ನಿಮಗ, ಬೆಂಗಳೂರ ಮೇನ್‌ಗೆ ವರ್ಗ ಮಾಡ್ಸಿದ್ರ ಬರ್ತೀರೇನು?" ಎಂದು ಏಕಾಏಕಿ ಕೇಳಿಬಿಟ್ಟರು. ನನಗೆ ಆಶ್ಚರ್ಯವೋ ಆಶ್ಚರ್ಯ! ಧಾರವಾಡದ ಭಾಷೆಯಲ್ಲಿ ಆ ಮೇಡಂ ಮಾತಾಡಿದ್ದು ಕೇಳಿದರೆ, ಅದಾಗಲೇ ಅವರಿಗೆ

ನನ್ನ ಪರಿಚಯವಿತ್ತೆಂಬುದು ಸ್ಪಷ್ಟವಾಗುತ್ತಿತ್ತು. ಅವರು ಆ ರೀತಿ ಕೇಳಿದ್ದು ನನಗಂತೂ ಕೆನೆ ಹಾಲು ಕುಡಿದಷ್ಟು ಸಂತಸ ತಂದಿತ್ತು. "ಹೂನ್ರಿ ಮೇಡಂ ಪ್ರೋಗ್ರಾಂ ಸೆಕ್ಷನ್‌ದಾಗ ಕೆಲಸಾ ಮಾಡೋದು ಭಾಳ ಇಷ್ಟ ನನಗ. ನೀವು ಹೆಲ್ಪ್ ಮಾಡಿದ್ರ ನಾನು ಅಲ್ಲಿಗೆ ಬರತೇನ್ರಿ" ಅಂದೆ. ಈ ಘಟನೆ ನಡೆದ ಕೇವಲ ಒಂದು ವಾರದೊಳಗೆ ನಾನು ಬೆಂಗಳೂರು ಆಕಾಶವಾಣಿಯ ಮೇನ್ ಚಾನಲ್‌ನಲ್ಲಿ ಕೆಲಸ ಮಾಡತೊಡಗಿದ್ದೆ. ಹಾಗೆ ನನ್ನನ್ನು ಪ್ರೀತಿಯಿಂದ ವರ್ಗ ಮಾಡಿಸಿಕೊಂಡವರೇ ಡಾ. ಜ್ಯೋತ್ಸ್ನಾ ಕಾಮತ್ ಅವರು, ಅರ್ಥಾತ್ ಡಾ. ಕೃಷ್ಣಾನಂದ ಕಾಮತ್‌ರ ಅರ್ಧಾಂಗಿ. ಅಲ್ಲಿಂದ ಆರಂಭವಾಗಿ, ಅವರು ನಿವೃತ್ತರಾಗುವವರೆಗೂ ನಾನು ಅವರ ಮಾರ್ಗದರ್ಶನದಲ್ಲಿ ಬೆಂಗಳೂರು ಆಕಾಶವಾಣಿಯಲ್ಲಿ ಕೆಲಸ ಮಾಡಿದೆ.

ಡಾ. ಜ್ಯೋತ್ಸ್ನಾ ಕಾಮತ್ ಅವರು ಒಬ್ಬ ಅತ್ಯಂತ ಕಠೋರ ಶಿಸ್ತಿನ ಅಧಿಕಾರಿ. ಅವರು ಆಡಳಿತದಲ್ಲಿ ದಕ್ಷರಾಗಿದ್ದ ಹಾಗೆಯೇ ಕಾರ್ಯಕ್ರಮ ನಿರ್ಮಾಣ ಕಾರ್ಯದಲ್ಲಿಯೂ ಪರಿಣತರಾಗಿದ್ದರು. ಶಿಸ್ತಿನ ಕೆಲಸಗಾರರೆಂದರೆ ಅವರಿಗೆ ಎಲ್ಲಿಲ್ಲದ ಪ್ರೀತಿ. ಆಕಾಶವಾಣಿಯಂಥ ಚಲನಶೀಲ ಮಾಧ್ಯಮದಲ್ಲಿ ಹೊಸ ಹೊಸ ಬಗೆಯ ಕಾರ್ಯಕ್ರಮಗಳನ್ನು ರೂಪಿಸಿ ಪ್ರಸಾರ ಮಾಡುವ ಅಧಿಕಾರಿಗಳಿಗೆ ಅವರು ಎಲ್ಲ ರೀತಿಯ ಪ್ರೋತ್ಸಾಹ ಕೊಟ್ಟವರು. ಸ್ವತಃ ಕನ್ನಡದ ಹೆಸರಾಂತ ಬರಹಗಾರ್ತಿಯಾದ ಅವರು ಇತರ ಬರಹಗಾರರನ್ನು ಅತ್ಯಂತ ಪ್ರೀತಿಯಿಂದ ಕಾಣುವವರು. ಇಂಥ ಸಮರ್ಥ ಅಧಿಕಾರಿಯೊಬ್ಬರ ಮಾರ್ಗದರ್ಶನದಲ್ಲಿ ಕೆಲಸ ಮಾಡುವುದೇ ಒಂದು ದೊಡ್ಡ ಸುಯೋಗ. ಅವರ ಕಾಲಾವಧಿಯಲ್ಲಿಯೇ ನಾನು 'ನೇರ ನಗೆ ಜಾಲ' ದಂಥ ಅಪ್ಪಟ ವಿನೂತನ ಕಾರ್ಯಕ್ರಮವನ್ನು ಆಯೋಜಿಸಿ ಪ್ರಸಾರ ಮಾಡಿದ್ದು. ಬೆಂಗಳೂರು ಆಕಾಶವಾಣಿಯಿಂದ ವಿಶೇಷ ಫೋನ್-ಇನ್-ಕಾರ್ಯಕ್ರಮಗಳನ್ನು ನಾನು ಆರಂಭಿಸಿದ್ದು ಅವರು ಅಲ್ಲಿದ್ದ ಅವಧಿಯಲ್ಲೇ. ಪ್ರೊ. ಯು.ಆರ್. ರಾವ್ ಅವರು ಭಾಗವಹಿಸಿ, ಕೇಳುಗರ ದೂರವಾಣಿ ಪ್ರಶ್ನೆಗಳಿಗೆ ನೇರ ಉತ್ತರ ಕೊಟ್ಟ ಮೊದಲ ಕಾರ್ಯಕ್ರಮದ ಥ್ರಿಲ್ ಈಗಲೂ ಹಸಿರಾಗಿದೆ. ಅನಂತರ ಪ್ರೊ. ಎ.ಎನ್. ಮೂರ್ತಿರಾವ್, ಡಾ. ಜಿ.ಎಸ್. ಶಿವರುದ್ರಪ್ಪ, ಸರಕಾರದ ವಿವಿಧ ಇಲಾಖೆಗಳ ಮುಖ್ಯ ಅಧಿಕಾರಿಗಳು ಭಾಗವಹಿಸಿದ ನೇರ ಫೋನ್-ಇನ್-ಕಾರ್ಯಕ್ರಮಗಳನ್ನು ನಾನು ಆಯೋಜಿಸಿ ಪ್ರಸಾರಮಾಡತೊಡಗಿದಾಗ ಡಾ. ಜ್ಯೋತ್ಸ್ನಾ ಕಾಮತ್ ಅವರು ಮೆಚ್ಚಿದ್ದು, ಬೆನ್ನುತಟ್ಟಿ ಪ್ರೋತ್ಸಾಹಿಸಿದ್ದು ಅಷ್ಟಿಷ್ಟಲ್ಲ. ಆಗ ಆರಂಭವಾದ ಫೋನ್-ಇನ್-ನೇರ ಕಾರ್ಯಕ್ರಮವೇ ಈಗ ಅತ್ಯಂತ ಜನಪ್ರಿಯ ಕಾರ್ಯಕ್ರಮವಾಗಿದೆ. ಪ್ರಸಾರ ಸಾಹಿತ್ಯವನ್ನೊಳಗೊಂಡ 'ಕನ್ನಡ ಸಾಹಿತ್ಯ ಸಮೀಕ್ಷೆ'ಯ ಮೂರು (೧೯೯೦, ೧೯೯೧, ೧೯೯೨) ಸಂಪುಟಗಳು, 'ನೂರೊಂದು ಚಿಂತನ', 'ಪ್ರಸಾರ ಹಾಸ್ಯ', 'ಬದುಕು ನನ್ನ ದೃಷ್ಟಿಯಲ್ಲಿ', 'ಆಧುನಿಕ ಕನ್ನಡ ಮಹಾಕಾವ್ಯಗಳು'- ಇಂಥ ಮಹತ್ವದ ಕೃತಿಗಳು ಪ್ರಕಟವಾದದ್ದು ಅವರ ಕಾಲದಲ್ಲಿಯೆ. ಪ್ರಸಾರ ಸಾಹಿತ್ಯವೂ ಪ್ರಕಟವಾಗಿ, ಕನ್ನಡ ಸಾಹಿತ್ಯದಲ್ಲಿ ಆ ರೂಪಕ್ಕೊಂದು ಪ್ರತ್ಯೇಕ ಅಸ್ತಿತ್ವ ದೊರಕಬೇಕೆಂಬ ನನ್ನ ಆಕಾಂಕ್ಷೆ ಸಾಕಾರವಾದದ್ದೇ ಡಾ. ಜ್ಯೋತ್ಸ್ನಾ ಕಾಮತ್ ಅವರ ಪ್ರೋತ್ಸಾಹದಿಂದ. ಡಾ. ಜ್ಯೋತ್ಸ್ನಾ ಕಾಮತ್ ಅವರ ಈ ಬಗೆಯ ಪ್ರೇರಣೆ ಪ್ರೋತ್ಸಾಹಗಳು ಕೇವಲ ಕಛೇರಿಯ ಕೆಲಸಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅವರು ನನ್ನನ್ನು ನನ್ನ ಹೆಂಡತಿ ಮಕ್ಕಳ ಸಹಿತ ತಮ್ಮ ಮನೆಗೆ ಮತ್ತೆ ಮತ್ತೆ ಆಮಂತ್ರಿಸುತ್ತಿದ್ದರು. ಹೀಗೆ ಮೊಟ್ಟ ಮೊದಲ ಬಾರಿ ಅವರ ಮನೆಗೆ ಹೋದಾಗಲೇ ಅವರ ಪತಿ ಡಾ. ಕೃಷ್ಣಾನಂದ ಕಾಮತ್‌ರ ಪರಿಚಯವಾದದ್ದು.

ಡಾ. ಕೃಷ್ಣಾನಂದ ಕಾಮತ್ ಅವರನ್ನು ಅವರ ಮನೆಯಲ್ಲಿ ನೋಡಿದಾಗ ನಾನು ನಿಜಕ್ಕೂ ಅಚ್ಚರಿಪಟ್ಟಿದ್ದೆ-ಈ ವ್ಯಕ್ತಿಯನ್ನು ಹಿಂದೆ ಎಲ್ಲೋ ನೋಡಿದ ಹಾಗಿದೆಯಲ್ಲ? ಎಂದು. ಎಲ್ಲಿರಬೇಕು? ಎಂದು ನೆನಪು ಮಾಡಿಕೊಂಡಾಗ ಸ್ಮೃತಿಪಟಲದಲ್ಲಿ ಮೂಡಿದ್ದು ಬೆಂಗಳೂರಿನ ಮಲ್ಲೇಶ್ವರಂ ಸರ್ಕಲ್! ಅದು ನಾನು ಕಛೇರಿಗೆ ಹೋಗಿ ಬರುವ ರಹದಾರಿಯ ಒಂದು ಮುಖ್ಯ ಕತ್ತರಿ. ಆ ಕತ್ತರಿಯಲ್ಲಿ ಸಿಗ್ನಲ್ ಸಿಗಬೇಕೆಂದರೆ ಎರಡು ಮೂರು ನಿಮಿಷ ಬೇಕು. ಸಂಜೆ ಕಛೇರಿಯಿಂದ ಹಿಂತಿರುಗಿ ಬರುವಾಗ ಸಿಗ್ನಲ್‌ಗಾಗಿ ಕಾಯುತ್ತಿದ್ದಾಗ ಕನಿಷ್ಠ ನಾಲ್ಕೈದು ಸಲವಾದರೂ ನಾನು ಅಪ್ಪಟ ಧಾರವಾಡ ಸ್ಟೈಲಿನಲ್ಲಿ ಸಂತೆ ಮಾಡುತ್ತಿದ್ದ ವ್ಯಕ್ತಿಯನ್ನು ನೋಡಿದ್ದೆ. ಅರಿವೆಯ ಕೈಚೀಲವನ್ನು ಹೆಗಲ ಹಿಂದಿನಿಂದ ಕೆಳಗೆ ಇಳಿಸಿ, ಕಾಯಿಪಲ್ಲೆ, ಅದೂ-ಇದೂ ಏನೆಲ್ಲವನ್ನೂ ಎನ್‌ಕ್ವಯರ್ ಮಾಡುತ್ತ, ಖರೀದಿ ಮಾಡಿ ಕೈಚೀಲ ತುಂಬುತ್ತ, ಮಲ್ಲೇಶ್ವರಂ ಸರ್ಕಲ್‌ನ ಆ ಬದಿಗೆ ಸಾಗುತ್ತಿದ್ದ ಆ ವ್ಯಕ್ತಿ ನಿಜಕ್ಕೂ ನನ್ನ ಕುತೂಹಲ ಕೆರಳಿಸಿದ್ದರು. ಡಾ. ಜ್ಯೋತ್ಸ್ನಾ ಕಾಮತ್ ಅವರ ಮನೆಗೆ ಹೋದಾಗ ನಾನು ಈ ಎಲ್ಲ ವಿವರಣೆ ಕೊಟ್ಟಾಗ ಎಲ್ಲರೂ ಹೊಟ್ಟೆ ತುಂಬ ನಕ್ಕಿದ್ದೇ ನಕ್ಕಿದ್ದು. "ಬರೋಬ್ಬರಿ ಹೇಳಿದ್ರಿ ನೀವು. ಅವರ ಹೆಗಲನ್ನ ಅಲಂಕರಿಸಿದ ಆ ಕೈಚೀಲದ ತುಂಬ ಏನಿರತಿದ್ದು ಗೊತ್ತಾ? ಕಾಯಿಪಲ್ಲೆ ಮತ್ತು ಗುಜರಿ ಸಾಮಾನುಗಳು" ಎಂದು ಮೇಡಂ ಹೇಳಿದಾಗ ಆ ದಂಪತಿಗಳ ಸರಸಯುಕ್ತ ಜೀವನ ಶೈಲಿಯ ಪರಿಚಯ ನಮಗಾಗಿತ್ತು.

ಇಂಥ ಮಹಾನ್ ವಿಜ್ಞಾನಿ, ಬರಹಗಾರ, ವಿವಿಧ ಕಲಾತ್ಮಕ, ವೈಜ್ಞಾನಿಕ ಹವ್ಯಾಸಗಳನ್ನುಳ್ಳ ವಿದ್ವಾಂಸ ಮನೆಯಲ್ಲಿದ್ದಾಗಲೂ, ತನ್ನ ಯಜಮಾನ ಇಂಥವರು; ಹೀಗಿದ್ದಾರೆ; ಅವರನ್ನು ಆಕಾಶವಾಣಿಯ ಕಾರ್ಯಕ್ರಮಗಳಿಗೆ ಕರೆಯಿರಿ ಎಂದು ಒಮ್ಮೆಯಾದರೂ ಡಾ. ಜ್ಯೋತ್ಸ್ನಾ ಕಾಮತ್ ಅವರು ಸೂಚಿಸಲಿಲ್ಲ. ತಮ್ಮ ಹೆಂಡತಿ ಆಕಾಶವಾಣಿಯಲ್ಲಿ ಇರದಿದ್ದರೆ ಡಾ. ಕೃಷ್ಣಾನಂದ ಕಾಮತ್ ಅವರಿಗೆ ಏನೆಲ್ಲ ಅವಕಾಶಗಳು ಸಿಗುತ್ತಿದ್ದವೇನೋ. ಡಾ. ಕೃಷ್ಣಾನಂದ ಕಾಮತರ ವಿವಿಧ ಆಸಕ್ತಿಗಳು, ವಿದ್ವತ್ತು ಪರಿಚಯವಾದ ನಂತರ ನಾನು ಮತ್ತು ಉದಯಾದ್ರಿ ಒಂದೆರಡು ಸಲ ಕಾರ್ಯಕ್ರಮಕ್ಕೆ ಕರೆದಾಗಲೂ ಅವರು ಒತ್ತಾಯಕ್ಕೆ ಲೇಖನಗಳನ್ನು ಬರೆದರೇ ಹೊರತು, ಕೇಂದ್ರಕ್ಕೆ ಬಂದು ಅವುಗಳನ್ನು ತಾವೇ ಪ್ರಸ್ತುತಪಡಿಸಲಿಲ್ಲ. ನೀವೇ ಓದಿಬಿಡಿರಿ ಎಂದು ವಿನಂತಿಸುತ್ತಿದ್ದರು. ಅದೂ ಐದಾರು ವರ್ಷಗಳಲ್ಲಿ ಎರಡೋ-ಮೂರೋ ಸಲ ಮಾತ್ರ. ತಮ್ಮ ಹೆಂಡತಿಯೇ ಬೆಂಗಳೂರು ಆಕಾಶವಾಣಿಯ ನಿರ್ದೇಶಕಿಯಾಗಿ ಕೆಲಸ ಮಾಡುತ್ತಿದ್ದುದೂ ಡಾ. ಕೃಷ್ಣಾನಂದ ಕಾಮತ್‌ರ ವೈಯಕ್ತಿಕ ಪ್ರತಿಭೆಯ ಅಭಿವ್ಯಕ್ತಿಗೆ ಇನ್ನೊಂದು ಬಗೆ ಆತಂಕವಾಗಿತ್ತು. ಏನೆಲ್ಲಾ ಜ್ಞಾನ ಸಂಪಾದಿಸಿಕೊಂಡಿದ್ದರೂ, ಪದವಿಗಳನ್ನೊಳಗೊಂಡು ಏನೆಲ್ಲ ಅರ್ಹತೆಗಳನ್ನು ಹೊಂದಿದ್ದರೂ ಡಾ. ಕೃಷ್ಣಾನಂದ ಕಾಮತರು ಇಡೀ ಜೀವನದಲ್ಲಿ ತಮಗೆ ನ್ಯಾಯವಾಗಿ ದೊರಕಬೇಕಾದ ಅವಕಾಶಗಳಿಂದ ವಂಚಿತರಾಗುತ್ತಲೇ ಬಂದದ್ದು ವಿಪರ್ಯಾಸ. ಹೀಗಿದ್ದರೂ ಅವರು ಅಂಥ ಅವಕಾಶಗಳಿಗೆ ಎಂದೂ ಹಪ ಹಪಿಸಲಿಲ್ಲ. ಸ್ಥಿತಪ್ರಜ್ಞರಾಗಿ ತಮ್ಮ ಕರ್ತವ್ಯವನ್ನು ಮಾಡುತ್ತ ಬಂದರು. ಅವಕಾಶಗಳ ವಿಷಯದಲ್ಲಿ ಅವರು ತೀರ 'ಅಲ್ಪತೃಪ್ತ'ರಾಗಿದ್ದರು. ಪ್ರಶಸ್ತಿ ಪ್ರಚಾರಗಳ ಬಗ್ಗೆ ತಲೆ ಕೆಡಿಸಿಕೊಳ್ಳದ ಸಾಧಕರಾಗಿದ್ದರು. ಡಾ. ಕೃಷ್ಣಾನಂದ ಕಾಮತರ ಪರಿಚಯವಾದ ನಂತರ; ಅವರನ್ನು ಮತ್ತೆ ಮತ್ತೆ ಹತ್ತಿರದಿಂದ ಕಂಡಂತೆಲ್ಲ, ಅವರ ವ್ಯಕ್ತಿತ್ವದ ಈ ವಿಶೇಷ ಗುಣಗಳು ಸಹಜವಾಗಿಯೇ ನನ್ನ ಗಮನಕ್ಕೆ ಬಂದವು. ಅವರೊಂದಿಗೆ ಬೇಕಾದಷ್ಟು ಚರ್ಚೆ, ಹರಟೆ, ಮಾತುಕತೆಗಳನ್ನು ನಾನು ನಡೆಸಿದ್ದೇನೆ. ಆಶ್ಚರ್ಯವೆಂದರೆ ಅವರು ಎಂದೂ ತಮ್ಮ ವೈಯಕ್ತಿಕ ನೋವನ್ನು, ಸಾಧನೆಗಳನ್ನು ಹೇಳಿಕೊಳ್ಳಲಿಲ್ಲ. ಇದು ಕೂಡ ಅವರ ವ್ಯಕ್ತಿತ್ವದ ಮತ್ತೊಂದು ಮಹತ್ವದ ಗುಣ.

ಡಾ. ಕೃಷ್ಣಾನಂದ ಕಾಮತ್ ಹಾಗೂ ಡಾ. ಜ್ಯೋತ್ಸ್ನಾ ಕಾಮತ್ ಅವರ ಪ್ರೀತಿಯ ಆಗ್ರಹದ ಮೇರೆಗೆ ಬೆಂಗಳೂರಿನಲ್ಲಿ ಇದ್ದಷ್ಟೂ ದಿನ ನಾನು ಮತ್ತು ನನ್ನ ಹೆಂಡತಿ ಅನಸೂಯಾ, ಮಕ್ಕಳಾದ ರಾಜೇಶ್ವರಿ ಮತ್ತು ಕವಿತಾ ಎಲ್ಲರೂ ಸೇರಿ ತಿಂಗಳಿಗೊಮ್ಮೆಯಾದರೂ 'ಶಶಿಕಿರಣ' ದ ಅವರ ಮನೆಗೆ ತಪ್ಪದೇ ಹೋದದ್ದಿದೆ. ನಾವು ಅವರ ಮನೆಗೆ ಹೋಗುತ್ತಿದ್ದುದು ರವಿವಾರ ಮಧ್ಯಾಹ್ನ ಡಾ. ಕೃಷ್ಣಾನಂದ ಕಾಮತರು ನಮ್ಮ ಬರವಿಗಾಗಿ ಕಾಯುತ್ತ ಕುಳಿತಿರುತ್ತಿದ್ದರೆಂಬಂತೆ ಬಂದು ಬಾಗಿಲು ತೆಗೆಯುತ್ತಿದ್ದರು. ಹೋದ ಕೂಡಲೇ ಸರ್ ಅವರ ಮೊದಲ ಕೆಲಸ ಮಕ್ಕಳೊಂದಿಗೆ ಮಾತು, ಹರಟೆ. ಅವರ ಕೈಗೆ ಕಾಗದ, ಕಲರ್ ಪೆನ್ಸಿಲ್ ಕೊಟ್ಟು ಚಿತ್ರ ತೆಗೆಸುತ್ತಿದ್ದರು. ಮಕ್ಕಳು ಯಾವ ಚಿತ್ರ ಬಿಡಿಸಿದರೂ ಅವರಿಗೆ ಮಾನ್ಯ. ಅನಂತರ ಅವರೇ ಸ್ವತಃ ಒಬ್ಬರಾದ ಮೇಲೆ ಮತ್ತೊಬ್ಬರ ಕೈಹಿಡಿದು ಚಿತ್ರ  ಬರೆಸುತ್ತಿದ್ದರು. ಹಾಗೆ ಬಿಡಿಸುತ್ತಲೇ ಗೊಂಬೆಗಳಿಗೆ ಉದ್ದ ಮೂಗು, ಡೊಳ್ಳು ಹೊಟ್ಟೆ ತೆಗೆದು ಅವರನ್ನು ನಗಿಸುತ್ತಿದ್ದರು. ಅವರು ಆಗ ಕುದುರಿಸಿದ ಚಿತ್ರ ಬಿಡಿಸುವ ಆಸಕ್ತಿ ಅವರಿಬ್ಬರಲ್ಲಿ ಇಂದೂ ಉಳಿದಿದೆ, ಬೆಳೆದಿದೆ. ಕವಿತಾ ಆಗ ತುಂಬ ತೆಳ್ಳಗೆ ಬಳ್ಳಿಯಂತೆ ಇದ್ದಳು. ಅವಳನ್ನು ಸರ್ ಹಾಗೂ ಮೇಡಂ ಅವರು ತುಂಬ ಪ್ರೀತಿಯಿಂದ 'ಹೂವಿನ ತೂಕದ ಹುಡುಗಿ' ಎಂದು ಗೇಲಿ ಮಾಡುತ್ತಿದ್ದರು. ಮಕ್ಕಳೊಂದಿಗೆ ಅವರು ಬೆರೆಯುತ್ತಿದ್ದ ರೀತಿ ಬೆರಗು ಹುಟ್ಟಿಸುತ್ತಿತ್ತು. ತಮ್ಮ ಗುಜರಿ 'ಗೋಡಾವನ್'ನಿಗೂ ಅವರಿಬ್ಬರನ್ನು ಕರೆದೊಯ್ದು ಅಲ್ಲಿನ ಎಲ್ಲವನ್ನೂ ಒಂದೊಂದಾಗಿ ಪರಿಚಯಿಸುತ್ತಿದ್ದರು – ಮಕ್ಕಳೊಂದಿಗೆ ಮಕ್ಕಳಾಗಿ.

ಇದಾದ ನಂತರ ಊಟದ ಪಾಳಿ, ಡಾ. ಕೃಷ್ಣಾನಂದ ಕಾಮತ್‌ರು ತಾವೇ ಎದುರಿಗೆ ಕುಳಿತು ನಮಗೆಲ್ಲ ಊಟ ಮಾಡಿಸುತ್ತಿದ್ದರು. ಇದು ಬರ್ಫಿ, ಇದು ಬೇಸಿನ್ ಉಂಡೆ, ಇದು ಚಕ್ಕಲಿ-ನಾನೇ ಮಾಡಿದ್ದು, ತಿನ್ನಿ, ಹೇಗಿದೆ? ಇದನ್ನ ಮಾಡೋದು ಹೀಗೆ........ಎಂದು ರನ್ನಿಂಗ್ ಕಾಮೆಂಟ್ರೀ ಕೊಡುತ್ತಲೇ ಅವನ್ನೆಲ್ಲ, ಒತ್ತಾಯ ಮಾಡಿ ಹೊಟ್ಟೆ ತುಂಬ ತಿನಿಸುತ್ತಿದ್ದರು. ಅವರ ಮನೆಗೆ ಹೋದ ದಿನವೆಲ್ಲ ನನ್ನ ಶ್ರೀಮತಿ ಜೋಳದ ರೊಟ್ಟಿ, ಎಣ್ಣೆಗಾಯಿ, ಪಲ್ಲೆ ಹಾಗೂ ಹೂರಣದ ಹೋಳಿಗೆಯನ್ನು ತಪ್ಪದೇ ಮಾಡುತ್ತಿದ್ದಳು. ಅವರಿಬ್ಬರಿಗೂ ಅವು ತುಂಬ ಪ್ರಿಯವಾದ ಅಡುಗೆಗಳು. ಎರಡು ಮೂರು ದಿನ ಫ್ರಿಜ್‌ನಲ್ಲಿ ಇಟ್ಟುಕೊಂಡು ಅಷ್ಟಷ್ಟೇ ತಿನ್ನುತ್ತಿದ್ದರಂತೆ. ಈ ರೀತಿ ಅಡುಗೆ ಮನೆ, ಊಟ, ತಿಂಡಿಗಳ ಬಗ್ಗೆ ಬರೆಯುವಷ್ಟು ಡಾ. ಕೃಷ್ಣಾನಂದ ಕಾಮತ್ ಅವರು ಮತ್ತು ಡಾ. ಜ್ಯೋತ್ಸ್ನಾ ಕಾಮತ್ ಅವರು ನಮ್ಮನ್ನು ಆತ್ಮೀಯವಾಗಿ ಹಚ್ಚಿಕೊಂಡಿದ್ದರು. ಡಾ. ಕೃಷ್ಣಾನಂದ ಕಾಮತ್‌ರು ತೀರಿಕೊಂಡಾಗ ನಮಗಿಂತಲೂ ಹೆಚ್ಚಾಗಿ ನೊಂದುಕೊಂಡದ್ದು ನಮ್ಮ ಮಕ್ಕಳು. ನಾವು ಧಾರವಾಡಕ್ಕೆ ಬಂದ ಮೇಲೆ ದಸರಾ, ದೀಪಾವಳಿ, ಉಗಾದಿ ಹಬ್ಬಗಳ ಸಂದರ್ಭದಲ್ಲಿ ಡಾ. ಕೃಷ್ಣಾನಂದ ಕಾಮತ್‌ರು

ತಪ್ಪದೇ ಸ್ವಚಿತ್ರಿತ ಶುಭಾಶಯ ಪತ್ರಗಳನ್ನು ಕಳಿಸುತ್ತಿದ್ದರು. ಮೇಡಂ ಅವರು ಧಾರವಾಡದ ಕಡೆಗೆ ಬಂದಾಗ ಅವರ ಕೈಯಲ್ಲಿ ಪೇಂಟ್ ಬಾಕ್ಸ್, ಬ್ರಶ್ ಮೊದಲಾದವುಗಳನ್ನು ಮಕ್ಕಳಿಗೆ ಕಳಿಸುತ್ತಿದ್ದರು. ಮಕ್ಕಳು ಆ ವಿದ್ವಾಂಸಜ್ಞ ಮಗುಮನಸ್ಸನ್ನು ಈಗಲೂ ನೆನೆಸುತ್ತಿರುತ್ತಾರೆ.

ಡಾ. ಕೃಷ್ಣಾನಂದ ಕಾಮತ್ ಹಾಗೂ ಡಾ. ಜ್ಯೋತ್ಸ್ನಾ ಕಾಮತ್‌ರ ಮಗ ಶ್ರೀ ವಿಕಾಸ ಅವರ ಬಗ್ಗೆಯೂ ಇಲ್ಲಿ ಪ್ರಸ್ತಾಪಿಸಲೇಬೇಕು. ತಂದೆ ಮತ್ತು ತಾಯಿಯರ ಪ್ರತಿಭೆಗಳ ಸಂಗಮದಂತಿದ್ದಾರೆ ಶ್ರೀ ವಿಕಾಸ. ವಿದೇಶದಲ್ಲಿರುವ (ಅಮೇರಿಕೆಯ ಬರ್ಮಿಂಗ್ ಹ್ಯಾಂ) ಅವರು ಆರಂಭಿಸಿರುವ ಕಾಮತ್ ವೆಬ್‌ಸೈಟ್ ಒಂದು ಅನನ್ಯ ಪ್ರಯೋಗವೆಂದೇ ಹೇಳಬೇಕು. ಈ ವೆಬ್‌ಸೈಟ್‌ಗಾಗಿಯೇ ಡಾ. ಕೃಷ್ಣಾನಂದ ಕಾಮತರು ಪ್ರತಿವಾರವೂ ಬೆಂಗಳೂರಿನಿಂದ ೨೦-೨೫ ಚಿತ್ರಗಳನ್ನು ಹಾಗೂ ಒಂದು ಲೇಖನವನ್ನು ತಪ್ಪದೇ ಕಳಿಸುತ್ತಿದ್ದರಂತೆ. ಡಾ. ಕೃಷ್ಣಾನಂದ ಕಾಮತ್ ಅವರು ಶೇಖರಿಸಿದ ಚಿತ್ರ ಸಂಪತ್ತು ಅಪಾರವಾಗಿದೆ. ಸುಮಾರು ಒಂದೂವರೆ ಲಕ್ಷದಷ್ಟು ನೆಗೆಟೀವ್‌ಗಳು, ಮುದ್ರಿತ ಚಿತ್ರಗಳು ಮತ್ತು ಸ್ಲೈಡ್‌ಗಳು ಅವರ ಸಂಗ್ರಹದಲ್ಲಿವೆ. ಅವರು ಇನ್ನೂ ಹಲವು ವರ್ಷ ಬದುಕಿದ್ದರೆ 'ಕಾಮತ್ ವೆಬ್‌ಸೈಟ್' ಮೂಲಕ ಈ ಎಲ್ಲ ಸಾಂಸ್ಕೃತಿಕ ಸಂಪತ್ತು ವಿದೇಶಿಯರಿಗೆ ತಲುಪುತ್ತಿತ್ತು. ಪ್ರತಿದಿನ ೩೫ ರಿಂದ ೬೦ ಸಾವಿರ ಪ್ರೇಕ್ಷಕರನ್ನು ಆಕರ್ಷಿಸುವ ಈ ವೆಬ್‌ಸೈಟ್‌ನ ಜನಪ್ರಿಯತೆಯ ಹಿಂದೆ ಶ್ರೀ ವಿಕಾಸ ಅವರ ಶ್ರಮವಿದ್ದರೆ, ಡಾ. ಕೃಷ್ಣಾನಂದ ಕಾಮತ್‌ರ ವಿಪುಲ ಸಾಮಗ್ರಿಯ ಕೊಡುಗೆ ಇದೆ.

ಕಾಮತ್ ದಂಪತಿಗಳ ಮಗ ಶ್ರೀ ವಿಕಾಸ ಅವರು ಮದುವೆಯಾದ ಶ್ರೀಮತಿ ಕಿಮ್, ವಿದೇಶಿ ಮಹಿಳೆ. ತಮ್ಮ ಮಗ ವಿದೇಶಿ ಮಹಿಳೆಯನ್ನು ಮದುವೆ ಮಾಡಿಕೊಂಡದ್ದನ್ನು ಡಾ. ಕೃಷ್ಣಾನಂದ ಕಾಮತ್ ಹಾಗೂ ಡಾ. ಜ್ಯೋತ್ಸ್ನಾ ಕಾಮತ್ ಅವರು ಅತ್ಯಂತ ಮುಕ್ತವಾದ ಮನಸ್ಸಿನಿಂದ ಒಪ್ಪಿಕೊಂಡಿದ್ದಾರೆ. ಇದು ಅವರ ಉದಾರ ಮನೋಭಾವಕ್ಕೆ ಸಾಕ್ಷಿ. 'ಕಾಮತ್ ವೆಬ್ ಸೈಟ್' ಕಾರ್ಯದಲ್ಲಿ ಶ್ರೀಮತಿ ಕಿಮ್ ಕೂಡಾ ಸಕ್ರಿಯವಾಗಿ ದುಡಿಯುತ್ತಿದ್ದಾರೆ.

ಒಂದು ಘಟನೆಯನ್ನು ನೆನೆಸಿಕೊಂಡು ಈ ಲೇಖನ ಮುಗಿಸುತ್ತಿದ್ದೇನೆ. ಡಾ. ಜ್ಯೋತ್ಸ್ನಾ ಕಾಮತ್ ಅವರು ನಿವೃತ್ತರಾಗಲಿದ್ದ ದಿನದ ಹಿಂದಿನ ರವಿವಾರ ಡಾ. ಕೃಷ್ಣಾನಂದ ಕಾಮತ್ ಅವರು ಬೆಂಗಳೂರು ಆಕಾಶವಾಣಿಯ ಆವರಣಕ್ಕೆ ಬಂದಿದ್ದರು. (ರಜೆಯ ದಿನ) ಅದರ ಹಿಂದಿನ ದಿನವೇ ನನಗೆ, ಶ್ರೀ ಎಂ.ಎಸ್.ಕೆ. ಪ್ರಭು ಹಾಗೂ ಶ್ರೀ ಉದಯಾದ್ರಿ-ಮೂವರಿಗೂ 'ನಾಳೆ ಕಛೇರಿಗೆ ಬನ್ನಿರೆಂದು' ಸೂಚನೆ ಕೊಟ್ಟಿದ್ದರು. ಅಂದು ಬೆಳಿಗ್ಗೆ ೯ಕ್ಕೇ ನಾವು ಮೂವರೂ ಕಛೇರಿಯಲ್ಲಿ ಹಾಜರಿದ್ದೆವು. ನಾವು ಬರುವ ಮೊದಲೇ ಡಾ. ಕೃಷ್ಣಾನಂದ ಕಾಮತರು ತಮ್ಮ ಶ್ರೀಮತಿಯವರೊಂದಿಗೆ ಬಂದಿದ್ದರು. 'ಏನ್‌ಸಾರ್, ಒಳ್ಳೇ ಮದುಮಕ್ಕಳ ಥರಾ ಕಾಣ್ತಿದ್ದೀರಿ ಇವತ್ತು' ಅಂತ ನಾವು ಮೂವರು ಜೋಕ್ ಮಾಡಿದಾಗ. 'ಹೌದು, ನಿಮ್ಮ ಮೇಡಂ ನಿವೃತ್ತರಾಗುತ್ತಿದ್ದಾರಲ್ಲ, ಆ ಖುಷಿ ಹೆಚ್ಚಾಗಿ ಹಾಗೆ ಕಾಣ್ತಿರಬೌದು' ಎಂದು ಅವರು ಪ್ರತಿಜೋಕ್ ಹಾರಿಸಿದ್ದರು. ಆ ಮುಂಜಾನೆ, ಅವರು ತಯಾರಿಸಿ ತಂದಿದ್ದ ವಿವಿಧ ಬಗೆ ತಿಂಡಿಗಳನ್ನು ಎಲ್ಲರೂ ಹಸಿರು ಹಾಸಿನ ಮೇಲೆ ಕುಳಿತು ತಿಂದದ್ದೇ ತಿಂದದ್ದು. ಅಂದು ಡಾ. ಕೃಷ್ಣಾನಂದ ಕಾಮತ್ ಅವರ ಕ್ಯಾಮರಾ ಕ್ಲಿಕ್ಕಿಸಿಕೊಂಡ ಫೋಟೋಗಳಿಗೆ ಲೆಕ್ಕವೇ ಇಲ್ಲ. ಅಂದು ಅವರು ವಿಶೇಷ ಹುರುಪಿನಲ್ಲಿ ನಮ್ಮೊಂದಿಗೆ ಮೂರುನಾಲ್ಕು ತಾಸು ಮುಕ್ತವಾಗಿ ಹರಟೆ ಹೊಡೆದರು. ಆ ದಿನ ನಾವೆಲ್ಲ ಮನೆಗೆ ಹೋಗುವ ಮುಂಚೆ ಡಾ. ಕೃಷ್ಣಾನಂದ ಕಾಮತ್‌ರು ನಮ್ಮ ಮೂವರಿಗೂ ಒಂದೊಂದು ಭಾವಚಿತ್ರವನ್ನು ಕೊಟ್ಟರು. ನಮಗೆ ನಿಜವಾಗಿಯೂ ಆಶ್ಚರ್ಯವೆನಿಸುವಷ್ಟು ಭಾವಪೂರ್ಣವಾಗಿದ್ದವು ಆ ಫೋಟೋಗಳು! 'ಫೋಟೋ ತೆಗೆಯುವುದೆಂದರೆ ಯಾಂತ್ರಿಕವಾಗಿ ಕ್ಲಿಕ್ಕಿಸುವುದು ಅಲ್ಲ, ಅದರಲ್ಲಿ ಭಾವನೆಗಳು ಮೂಡಿಬರಬೇಕು' – ಎಂದು ಅವರು ಹಿಂದೆ ಮಾತಾಡುವಾಗ ಅಂದದ್ದು ನೆನಪಾಗಿತ್ತು. ಅವರು ಕೊಟ್ಟ ಆ ಭಾವಚಿತ್ರ ಆ ಬಗೆಯಲ್ಲೇ ಇದ್ದವು. ನಮ್ಮದೇ ಆದ ಆ ಭಾವಚಿತ್ರಗಳನ್ನು ಅವರು ಎಲ್ಲಿ? ಯಾವಾಗ? ಹೇಗೆ ತೆಗೆದಿದ್ದರೆಂಬುದು ನಮಗಾರಿಗೂ ಗೊತ್ತಿರಲಿಲ್ಲ. 'ಸರ್ ಇದನ್ನು ಎಂದು, ಎಲ್ಲಿ ತೆಗೆದಿರಿ?' ಅಂತ ನಾನು ಕೇಳಿದಾಗ 'ಅದೇ ಸಸ್‌ಪೆನ್ಸ್! ನೀವೇ ವಿಚಾರಿಸಿ ನೋಡಿ' ಎಂದು ಮತ್ತೆ ನನ್ನನ್ನೇ ಸಸ್‌ಪೆನ್ಸ್‌ಗೆ ಹಾಕಿದರು ಅವರು. ಈಗಲೂ ಆ ಫೋಟೋ ನೋಡಿದಾಗ ಒಡೆಯಲಾಗದ ಆ ಸಸ್‌ಪೆನ್ಸ್ ನನ್ನ ಪಾಲಿನದಾಗುತ್ತದೆ. ಯಾರು ಒಡೆದು ಹೇಳಬೇಕು ಅದನ್ನು?

❑

# ಅಪರೂಪದ ಅಲೆಮಾರಿ

ಎಸ್. ಎಲ್. ಕುಲಕರ್ಣಿ

ನಮಗೆ ಗೊತ್ತಿಲ್ಲದಂತೆ ನಾವು ಹುಟ್ಟಿ ಬೆಳೆವ ಕಾಲ, ಸ್ಥಳ, ಸನ್ನಿವೇಶಗಳು ನಮ್ಮ ಬಾಳಿನ ಹೊಳಹನ್ನು ಆಗಲೇ ನಿರ್ಣಯಿಸಿರುತ್ತವೆ. ಸಾಂಸ್ಕೃತಿಕವಾಗಿ ಶ್ರೀಮಂತವಾದ ಧಾರವಾಡದ ಪರಿಸರದಲ್ಲಿ ೧೯೫೦ ರಿಂದ ೧೯೭೦ರ ವರೆಗೆ ಬೆಳೆವ ಸೌಭಾಗ್ಯವನ್ನು ವಿಧಾತನೇ ಒದಗಿಸಿಕೊಟ್ಟಿದ್ದ. ಕಲೆ, ಸಾಹಿತ್ಯ, ಸಂಗೀತ ಮುಂತಾದ ಕ್ಷೇತ್ರದಲ್ಲಿ ಬೆಳೆದು ದಿಗ್ಗಜರಾದವರೇ ಧಾರವಾಡದ ನಾಯಕ(Hero) ರಾಗಿದ್ದ ಕಾಲವದು. ಅಂಥವರೇ ನಮಗೆಲ್ಲ ಆದರ್ಶಪ್ರಾಯರಾದರು. ಬೇಂದ್ರೆ ಕಾವ್ಯದಲ್ಲಿ ನಿಸರ್ಗದ ವಿಜೃಂಭಣೆ, ನಿರ್ವ್ಯಾಜ ಪ್ರೀತಿ, ಮನಸೂರ್, ಹಾನಗಲ್, ರಾಜಗುರುಗಳ ಸುಶ್ರಾವ್ಯ ಸಂಗೀತ, ಮೇಲೆ ಧಾರವಾಡದ ಚಟ್ನಿ-ಭಕ್ರಿ, ಮತ್ತು ತಿಳಿಗಾಳಿ, ತಿಳಿನೀರು ಮೇಳವಿಸಿ, ನನ್ನ ಸಮಕಾಲೀನರ ವ್ಯಕ್ತಿತ್ವವನ್ನು ರೂಪಿಸಿದ್ದವು. ಜೀವನ ಯಾತ್ರೆ ಮುಂದುವರಿದಂತೆ ಇಂಥವರದೇ ಸ್ನೇಹ, ಒಡನಾಟಕ್ಕಾಗಿ ಮನಸ್ಸು ಹಾತೊರೆಯುತ್ತಿತ್ತು.

ಕಥಾ-ನಾಯಕರಾದ ಡಾ. ಕಾಮತರು ಅಂತಹ ಒಬ್ಬ ಹಿರಿಯ ಸ್ನೇಹಿತರಾಗಿ ದೊರತದ್ದು ನನ್ನ ಭಾಗ್ಯ. ಧಾರವಾಡ ಆಕಾಶವಾಣಿಯಲ್ಲಿ ಕೆಲಸಕ್ಕಿದ್ದ ನನ್ನ ಹಿರಿಯಕ್ಕನ ಸಹೋದ್ಯೋಗಿ ಕು. ಜ್ಯೋತ್ಸ್ನಾ ಬುರ್ಡೆ ಮದುವೆಯಾಗಿ ಶ್ರೀಮತಿ ಜ್ಯೋತ್ಸ್ನಾ 'ಕಾಮತ್' ಆಗಿದ್ದರು. ಅವರ ಪತಿದೇವರ ಚೊಚ್ಚಲ ಕೃತಿ "ನಾನೂ ಅಮೇರಿಕೆಗೆ ಹೋಗಿದ್ದೆ" ಆಗತಾನೇ ಮ. ಗ್ರ. ಮಾ. ದಲ್ಲಿ ಪ್ರಕಟವಾಗಿತ್ತು. ಓದಲು ನಾನು ಎತ್ತಿದ ಆ ಪುಸ್ತಕವನ್ನು ಮುಗಿಸದ ಹೊರತು ಕೆಳಗಿಡಲೇ ಇಲ್ಲ. ಅಚ್ಚ ಭಾರತೀಯ ಊರು ಕೇರಿಗಳಲ್ಲಿ ಉಂಡು ಬೆಳೆದ ಮಧ್ಯಮ ವರ್ಗದ (ಆದರೆ ಸಂಸ್ಕಾರದಲ್ಲಿ ಶ್ರೀಮಂತನಾದ) ಶ್ರೀಸಾಮಾನ್ಯನೊಬ್ಬ ಯಾವ pose ಕೊಡದೇ, ಅಮೇರಿಕದ ಗಿಲೀಟಿಗೆ ಮಾರು ಹೋಗದೇ, ಮೌಲ್ಯಗಳಿಗೆ ಮಾತ್ರ ಮನಸೋತು. ಬೆರಗುಗಣ್ಣುಗಳಿಂದ ನೋಡಿ ಬರೆದ ತಿಳಿ-ಚಿತ್ರವಾಗಿತ್ತು ಆ ಕೃತಿ. ಕೂತಲ್ಲಿ, ನಿಂತಲ್ಲಿ, ನಡೆದಾಡಿದಲ್ಲಿ ಅವಲೋಕಿಸಿದ್ದನ್ನು ಯಥಾವತ್ತಾಗಿ ಓದುಗನ ಮುಂದೆ ಇಟ್ಟು ಅಮೇರಿಕನ್ ಸಮಾಜದ ತಿರುಳನ್ನು ಬಗೆದು ತೋರಿಸುವ ಪ್ರವಾಸ ಕಥನವಾಗಿ ಕುಡಿತು ಆ ಕೃತಿ. ವಿದೇಶಕ್ಕೆ ಹೋಗಿ ಸಾಧಿಸಿದ್ದು ಏನೇ ಇರಲಿ, ಬಿಡಲಿ, ವಿದೇಶ ಪ್ರವಾಸವೇ ಒಂದು ಮಹತ್ಸಾಧನೆ ಎಂದು ಪರಿಗಣಿಸುವ ಜನ ಆಗ ಸಾಕಷ್ಟಿದ್ದರು. ಡಾ. ಕಾಮತರ ಪ್ರಥಮ ಕೃತಿಯ ಹೆಸರೇ ಅಂಥವರಿಗೆ ಒಂದು ಛೂ-ಬಾಣ, ಚುಚ್ಚು-ಮದ್ದಿನಂತಿತ್ತು. 'ನಾನೂ ಅಮೇರಿಕೆಗೆ ಹೋಗಿದ್ದೆ' ಆದರೆ ಬಗ್ಗೈಯಲ್ಲಿ ಹಿಂದಿರುಗಿಲ್ಲ-ಎಂದು ಹೇಳುವಂತಿತ್ತು ಆ ಕೃತಿ. ಆ ಕೃತಿಯಲ್ಲೇ ನಾನು ಒಬ್ಬ ಅಪರೂಪದ ಅಲೆಮಾರಿಯನ್ನು ಗುರುತಿಸಿದ್ದೇನೋ? ಆ ಅಪರೂಪದ ಕೃತಿಯ ಲೇಖಕನನ್ನು ಕಂಡು ಮಾತನಾಡುವ ತವಕ. ಅಕ್ಕನ ಆಕಾಶವಾಣಿ ಸಂಪರ್ಕದಿಂದ ಆ ಸಂದರ್ಭ ಒದಗಿಯೂ ಬಂತು.

ನವದಂಪತಿಗಳು ಮನೆಗೆ ಬಂದರು. ಆದರೆ ಡಾ. ಕಾಮತರು ಮಿತಭಾಷಿ. ಹೊಸದಾಗಿ ಪರಿಚಯವಾದವರೊಡನೆ ಕೊಂಚ reserved ಆಗೇ ಇರುವವರು. ಹೊಸಬರ ವ್ಯಕ್ತಿತ್ವವನ್ನು ತೂಗಿ, ಅಳೆದು ಪರಸ್ಪರ ಮನೋಧರ್ಮ ತಾಳೆ ಆದರೆ, ಪ್ರಾಂಜಲ ಮನಸ್ಸಿನವರಾಗಿದ್ದರೆ ಮಾತ್ರ ಖಾತ್ರಿಪಡಿಸಿಕೊಂಡು ನಿಧಾನ ಮೈಛಳಿ ಬಿಟ್ಟು ಮಾತನಾಡತೊಡಗುವರು, ಇನ್ನೂ ಖಾತ್ರಿಯಾದರೆ ಒಡನಾಡುವರು. ಇಲ್ಲವಾದರೆ ಅಷ್ಟಕ್ಕಷ್ಟೆ. ಲೌಕಿಕ ನಡೆ-ನುಡಿ (etiquettes) ಯ ಗುರುವಾದ ಆಂಗ್ಲ ಲೇಖಕ ಚೆಸ್ಟರ್ ಫೀಲ್ಡ್ ಒಂದೆಡೆ ಹೇಳುತ್ತಾನೆ (ತನ್ನ ಶಿಷ್ಯನಿಗೆ) : "ನಿನ್ನ ಜ್ಞಾನ ಹಾಗೂ ವ್ಯಕ್ತಿತ್ವದ ಶ್ರೀಮಂತಿಕೆಯ ಪ್ರದರ್ಶನ ಸಲ್ಲದು. ಸಭ್ಯನಾದವನು ತನ್ನ ಬೆಲೆಬಾಳುವ ಮುಂಗೈವಾಚಿನಂತೆ ಅದನ್ನು ತೆರೆಮರೆಯಲ್ಲಿಡುತ್ತಾನೆ." ಡಾ. ಕಾಮತರು ಇನ್ನೂ ಒಂದು ಹೆಜ್ಜೆ ಮುಂದು. ವಾಚನ್ನು ಮನೆಯಲ್ಲೇ ಬಿಟ್ಟು ಬರುವವರು. ಬೇಕೆಂದೇ ತಾನೇನೂ ಅರಿಯದ ಮುಗ್ಧ 'ಗಂವಾರ'ನಂತೆ ಅವರಿದ್ದು ಬಿಡುತ್ತಿದ್ದರು. ಹಾಗಿದ್ದುಕೊಂಡು ಸುತ್ತಣ ಪ್ರಪಂಚವನ್ನೆಲ್ಲ ಸೀಳಿ, ಬಗೆದು, ಅವಲೋಕಿಸಿ ತಮ್ಮ ಸ್ಮೃತಿಪಟಲದಲ್ಲಿ ನಂತರ ಶಬ್ದಗಳಲ್ಲಿ ಹಿಡಿದಿಡುತ್ತಿದ್ದರು. ಅವರ ಈ ಕಸುಬಿನಲ್ಲಿ ಅವರ ಕೆಮೆರಾ ಕೈಗೂಡಿಸಿ ಅವರ ಆಕರವನ್ನು ಶ್ರೀಮಂತಗೊಳಿಸುತ್ತಿತ್ತು. ಪ್ರಪಂಚ ಸುತ್ತಿ ಬಂದರೂ, ಅಮೇರಿಕದ ವಿದ್ಯಾಪೀಠದಲ್ಲಿ ಡಾಕ್ಟರೇಟ್ ಪಡೆದು ಸೈ ಎನಿಸಿಕೊಂಡು ಬಂದಿದ್ದರೂ ತನ್ನೂರ ಸೀಮೆ ದಾಟಿಯೇ ಇಲ್ಲವೇನೊ ಈ ವ್ಯಕ್ತಿ-ಎಂಬಂತೆ ಅವರ ನಡೆನುಡಿ. ಅದು ಎಷ್ಟು ನೈಜವಾಗಿರುತ್ತಿತ್ತೆಂದರೆ ಎಷ್ಟೋಜನ ಇವನೊಬ್ಬ "ಗುಡ್ಡಳ್ಳಿ" ಎಂದು ಮೋಸ ಹೋಗಿ ತಮ್ಮ ಹಸಿ-ಬಿಸಿ ಅನುಭವಾಮೃತವನ್ನು

ಇವರಿಗೆ ಉಣಸಿದ್ದುಂಟು. ಡಾ. ಕಾಮತರು ತಮ್ಮ "Scientific Photo Lab" ತೆರೆದ ಹೊಸತರಲ್ಲಿ ಮಾಜಿ ಮಂತ್ರಿಯೊಬ್ಬ ಬಂದು ಅಗ್ಗದಲ್ಲಿ ಫೋಟೋ ತೆಗೆಸಿಕೊಳ್ಳಲು ತನ್ನ ಮಾಜಿ ಹೆಗ್ಗಳಿಕೆಯ ರೀಲು ಬಿಟ್ಟಿದ್ದ. ಇಂತಹ ಅನುಭವಗಳನ್ನು ಕಾಮತರು ನಂತರ ತಮ್ಮ ಒಳಬಳಗದ ಸದಸ್ಯರಲ್ಲಿ ಹಂಚಿಕೊಂಡು ನಗುತ್ತಿದ್ದರು. ಆದರೆ ಅದು ತಿಳಿಹಾಸ್ಯವಾಗಿರುತ್ತಿತ್ತು, ಅವಹೇಳನಕರವಾಗಿರುತ್ತಿರಲಿಲ್ಲ.

ಹೀಗೆ ನಾನು ವಿದ್ಯಾರ್ಥಿದೆಸೆಯಲ್ಲಿದ್ದಾಗ ಬೆಳೆದ ನಂಟು ಮುಂದೆ ನಾನು ಬ್ಯಾಂಕೊಂದರಲ್ಲಿ ನೌಕರಿ ಪಡೆದು ಬಂದಾಗ ಕರುಣಟಾಗಿ ಬೆಸೆದಿತ್ತು. ಅಮೇರಿಕದಲ್ಲಿ ಸಾಕಷ್ಟು ಅವಕಾಶಗಳಿದ್ದರೂ ಮಣ್ಣಿ ವಾಸನೆ ಎಳೆತದಿಂದ ತಾಯ್ನಾಡಿಗೆ ಮರಳಿದ ಈ ಅನ್ವರ್ಥಕ 'ಮಣ್ಣಿನ ಮಗ', 'ಪಂಗದರ್ಶನ' ಮಾಡಿ, ರಾಜಸ್ಥಾನದಲ್ಲಿದ್ದು ನೌಕರೀ-ಚಾಕರೀಗೆ ಬೇಸತ್ತು ಬೆಂಗಳೂರಿನಲ್ಲಿ ಸ್ವಂತ ಕಾಲ ಮೇಲೆ ನೆಲೆಸಲು ಆಗಷ್ಟೇ ಬಂದಿದ್ದರು. ಹಿಗ್ಗಿಲ್ಲದ ಕೆಲಸ ಕಾಮತರ ಜಾಯಮಾನಕ್ಕೆ ಒಗ್ಗದು. ತಮ್ಮ Ph.D. ಪ್ರಬಂಧಕ್ಕಾಗಿ ಕಲಿತು ಬಳಸಿದ micro-photography ಯನ್ನೇ ಬಂಡವಾಳವಾಗಿ ವಿನಿಯೋಗಿಸಿ ಗಿರಣಿ ಮೂಲೆ (mill corner) ಮಲ್ಲೇಶ್ವರಂನಲ್ಲಿ "Scientific Photo Lab" ಎಂಬ "ಅತ್ಯಾಧುನಿಕ" studio ಶುರುಮಾಡಿದ್ದರು. Indian Institute of Science ನ ಕೆಲ ವಿದ್ಯಾರ್ಥಿಗಳನ್ನು ಬಿಟ್ಟರೆ ಹೆಚ್ಚಿನವರು ಇದೂ ಒಂದು photo studio ಎಂದೇ ತಿಳಿದು pose ಕೊಡಲು ಬಂದರು. ಆದರೂ ಕಾಮತರು ಯಾರನ್ನೂ ಹಿಂದೆ ಕಳಿಸಿದ್ದಿಲ್ಲ ಅವರವರ ಬೇಡಿಕೆಗೆ ತಕ್ಕಂತೆ ಛಾಯಾಗ್ರಹಣ ಮಾಡಿ ತೃಪ್ತಿ ಪಡಿಸಿ ಕಳಿಸುತ್ತಿದ್ದರು. ಮೇಲೆ ಪ್ರಸ್ತಾಪಿಸಿದ ಮಾಜಿ ಮಂತ್ರಿಗಳೂ ಇಂತಹ Satisfied ಗಿರಾಕಿಗಳಲ್ಲಿ ಒಬ್ಬರು. ಕಂಡದ್ದನ್ನು, ಕಂಡವರನ್ನು ಅಂತರಂಗದ ಒಳಹೊಕ್ಕು ನೋಡುವ ತೀಕ್ಷ್ಣ ದೃಷ್ಟಿ ಅವರಿಗಿತ್ತಾದ್ದರಿಂದ ಎಲ್ಲವೂ ಅವರಿಗೆ ಸಲೀಸಾಗಿ ಬಿಡುತ್ತಿತ್ತು. ಕಾಮತರ ತಾಂತ್ರಿಕ ಪರಿಣತೆಗೆ ಅವರ ಸ್ಪಂದನಶೀಲ ಗುಣ ಸೇರಿಕೊಂಡು ಅವರನ್ನು versatile ಆಗಿ ಮಾರ್ಪಡಿಸಿತ್ತು. ಕಾಮತರ Lab ನ ವ್ಯವಹಾರವೇಳೆ ಬಹು ಪರಿಮಿತ, ಕ್ಲುಪ್ತ. ದುಡ್ಡನ್ನೇ ದೊಡ್ಡಪ್ಪನನ್ನಾಗಿ ಮಾಡಿ ಮುಡಿಯಲಿಲ್ಲ ಕಾಮತರು. ಹೆಜ್ಜೆ ಹೆಜ್ಜೆಗೂ ಅವರು ಹಿಗ್ಗು ಸವಿಯಬೇಕು. ಹಾಗೆಂದೇ ಅವರು ಅಪರೂಪದ ಅಲೆಮಾರಿ.

ನಾನು ಅರ್ಥಶಾಸ್ತ್ರದ ಸ್ನಾತಕನಾಗಿದ್ದರೂ ಕಾಮತರ ಆರ್ಥಿಕ ಸೂತ್ರಗಳು ಮಾತ್ರ ನನಗೆ ಗೊತ್ತಾಗಲೇ ಇಲ್ಲ. ಮಾಸಿಕ ಸಂಬಳವಿಲ್ಲ, ದುಡ್ಡಿಗಾಗಿ ವ್ಯಾಪಾರ ಮಾಡಲಿಲ್ಲ. ಆದರೂ ಬೆಂಗಳೂರಿನ ಪ್ರತಿಷ್ಠಿತ ಮಲ್ಲೇಶ್ವರದಲ್ಲಿ ಪ್ರಶಸ್ತವಾದ flat ಖರೀದಿಸಿ ಹಾಯಾಗಿದ್ದರು. ಮುಖದಲ್ಲಿ ಕಣ್ಣಂಚಿನಲ್ಲಿ ಮಿಂಚಿನ ಬಳ್ಳಿ. ಸ್ವರೂಪದಲ್ಲೇ ಆನಂದದ ನೆಲೆ ಕಂಡವರಿಗೆ ಇದು ಸಾಧ್ಯ. ದಿನವಿಡೀ ಸೃಜನಶೀಲರಾಗಿ ಮನೆಯಲ್ಲಿ ದುಡಿದು ಸಂಜೆ ವಾಯುವಿಹಾರದ ನಡಿಗೆಯಲ್ಲಿ ದೂರದ ತಮ್ಮ Labಗೆ ನಿತ್ಯ ಪಯಣ. ದಾರಿಯುದ್ದಕ್ಕೂ ಪ್ರಪಂಚವೀಕ್ಷಣೆ. ಸಾಹಿತ್ಯ ಸಾಮಗ್ರಿಯ ಮೂಕ ಸಂಗ್ರಹ. ಕಾರು, ಡ್ರೈವರುಗಳ ಗೋಜಲು ಅವರಿಗೆ ಬೇಡವೇ ಬೇಡ. "ಮಲಗಲು ಭೂಮಿಯಿರಲು ಸುಪ್ಪತ್ತಿಗೆಗಳೇಕೆ? ತಲೆಯನ್ನಿಡಲು ಕೈಗಳಿಡಲು ದಿಂಬುಗಳೇಕೆ? ಕೈಗಳನ್ನು ಅಂಜಲಿಮಾಡಿ ಉಪಯೋಗಿಸುವಂತಿರಲು, ಬಹುಪರ್ಣ ಪಾತ್ರೆಗಳೇಕೆ? ದಿಕ್ಕುಗಳೇ ವಸ್ತ್ರವಾಗಿರಲು ಮೃದುವಸ್ತ್ರಗಳೇಕೆ?"- ಎನ್ನುತ್ತದೆ ಭಾಗವತ (೨-೨-೨೫). ಹಾಗೇಯೇ ಇತ್ತು ಕಾಮತರ ಜೀವನಶೈಲಿ. ಅವರ ಬೇಡಿಕೆಗಳು ಅತಿ ಪರಿಮಿತ. ಕೈಬೀಸಿಕೊಂಡು ಅವರು ಎಲ್ಲಿಗಾದರು ಹೊರಟುಬಿಡುವರು. ಜತೆಗೆ ಕೆಮರಾವೊಂದಿದ್ದರೆ ಸಾಕು. ಹಾಗೆಂದೇ ಅವರು ಅಪರೂಪದ ಅಲೆಮಾರಿ. ತಾಯ್ನಾಡಿನಲ್ಲಿ ಸರಕಾರೀ ವಾಹನಗಳ ಗುಣಮಟ್ಟ, ಸಿಬ್ಬಂದಿವರ್ಗದ ನಡತೆ ಕಂಡಾಗ, ಅವರು ಅಮೇರಿಕದ Grey Hound ಬಸ್‌ಗಳ ಸೇವಾ ಗುಣಮಟ್ಟವನ್ನು ಸ್ಮರಿಸಿದ್ದುಂಟು. ಹಾಗಾಗಿ ಊರೊಳಗಿನ ಸಂಚಾರಕ್ಕೆ ಅವರು ಕಾಲ್ನಡಿಗೆಯ "ವಿನೋಬಾ ಎಕ್ಸಪ್ರೆಸ್ಸ"ನ್ನೇ ಬಳಸಿದ್ದು ಹೆಚ್ಚು. ಆದರೂ ಅವರು ಗಡಿಬಿಡಿಯಲ್ಲಿದ್ದದ್ದನ್ನು ಎಂದೂ ನಾನು ಕಾಣಲಿಲ್ಲ. ಸಂತೃಪ್ತಿ, ಸೃಜನಶೀಲತೆ ಹಾಗೂ ಹುಮ್ಮಸ್ಸು ಇವುಗಳ ತ್ರಿವೇಣಿ ಸಂಗಮದ ಕಾರಣ ಅವರಿಂದ ಅಪಾರ ಸಾಹಿತ್ಯ ಸೃಷ್ಟಿ, ಸಂಶೋಧನೆ ಸಾಧ್ಯವಾಯಿತು. 'ನಾನು ಸಂಗ್ರಹಿಸಿದ ಸಾಮಗ್ರಿಯನ್ನೆಲ್ಲ ಬರೆದು ಪ್ರಕಟಿಸಬೇಕೆಂದರೆ ಇಡೀ ಜೀವನ ಸಾಲದು' ಎನ್ನುತ್ತಿದ್ದರವರು.

ನನಗೂ ಅಷ್ಟಿಷ್ಟು ಛಾಯಾಗ್ರಹಣದ ಹವ್ಯಾಸವಿದ್ದದ್ದರಿಂದ ಸಾಧ್ಯವಾದಾಗಲೆಲ್ಲ (ಆಫೀಸಿನಿಂದ ಮನೆಗೆ ಹೋಗುವ ದಾರಿಯಲ್ಲಿ) ಕಾಮತರ Labನಲ್ಲಿ ಗಿರಾಕಿಗಳಿಲ್ಲದಾಗ ಲೋಕಾಭಿರಾಮ, ಮಾತು, ಕತೆ. ಮಧ್ಯೆ ಕೆಮೆರಾಗಳ ಬಗ್ಗೆ, ಛಾಯಾಗ್ರಹಣದ ಬಗ್ಗೆ ತಮಗೆ ಗೊತ್ತಿದ್ದದ್ದನ್ನೆಲ್ಲ ಬಚ್ಚಿಡದೆ ಪ್ರಾಂಜಲವಾಗಿ ಹೇಳುತ್ತಿದ್ದರು. ತಮ್ಮ Exacta (ಜರ್ಮನ್) ಕೆಮೆರಾದ ಬಗ್ಗೆ ಅವರಿಗೆ ಎಲ್ಲಿಲ್ಲದ ಹೆಮ್ಮೆ

ಅಭಿಮಾನ, ಅದರಷ್ಟು sturdy ಕೆಮೆರಾ ಇನ್ನೊಂದಿಲ್ಲವೆನ್ನುತ್ತಿದ್ದರು. ಮಾಳಿಗೆ ಎತ್ತರದಿಂದ ದೊಪ್ಪನೇ ಕೆಳಗೆ ಬಿದ್ದರೂ ಅದಕ್ಕೇನೂ ಆಗಿರಲಿಲ್ಲವಂತೆ, ಬೆಲೆಬಾಳುವ ಕೆಮೆರಾಕ್ಕೆ ಆಕರ್ಷಕ ಕವಚ ತೊಡಿಸಿ ಪ್ರದರ್ಶನ ಮಾಡುತ್ತ ನಡೆದರೆ ದೃಷ್ಟಿಯಾದೀತು, ಕಳ್ಳರ ಕಾಕದೃಷ್ಟಿಯೂ ಬಿದ್ದೀತು. ಕಾಮತರ ದೊಗಲು ಕೈಚೀಲದಲ್ಲಿ Made in Germany ಕೆಮೆರಾ ಇರುತ್ತಿತ್ತೆಂದು ಯಾರಿಗೂ ಗೊತ್ತಾಗಲೇ ಇಲ್ಲ.

'ವೈನ್ ಶಾಪ್', 'ಪ್ರಾವಿಜನ್ ಶಾಪ್' ಮುಂತಾದ ವ್ಯಾಪಾರದ ಮಳಿಗೆಗಳ ಸಾಲಿನಲ್ಲಿ ವೈದ್ಯರ ಚಿಕಿತ್ಸಾಲಯವೂ ಬೆಂಗಳೂರಿನಲ್ಲಿ "ಡಾಕ್ಟರ್ ಶಾಪ್" ಆಗಿಬಿಟ್ಟಿದೆ. ಶಿಕ್ಷಣವಾದರೇನು, ಚಿಕಿತ್ಸೆಯಾದರೇನು? ಬೆಂಗಳೂರಿನಲ್ಲಿ ಎಲ್ಲವೂ ವ್ಯಾಪಾರ ತಾನೇ? ದುಡ್ಡು, ವ್ಯಾಪಾರಗಳ ಈ ನಿರಂಕುಶ ಪ್ರಭುತ್ವದ ಮಧ್ಯೆ ಕಾಮತರ Lab ಒಂದು ಅಪವಾದವಾಗಿತ್ತು. ಅದಕ್ಕೆ ಹೆಚ್ಚಿನ ಕಾರಣ ಅದರ ಒಡೆಯ ಒಬ್ಬ ಅಪರೂಪದ ಅಲೆಮಾರಿಯಾದದ್ದೇ. ದಿನವಿಡೀ ಬಾಗಿಲು ಮುಚ್ಚಿಕೊಂಡು ಸಂಜೆ ಕೆಲ ಗಂಟೆಗಳ ಕಾಲಮಾತ್ರ ತೆರೆದಿರುತ್ತಿತ್ತು. ಅಕ್ಕಪಕ್ಕದ ಅಂಗಡಿ ಮಾಲೀಕರು ಈ ವಿಚಿತ್ರ ವ್ಯಾಪಾರಿಯ ಬಗ್ಗೆ ಆಶ್ಚರ್ಯಪಟ್ಟಿದ್ದುಂಟು. ಮಿಲ್ ಕಾರ್ನರ್‌ನ ಅಂಗಡಿ ಸಾಲುಗಳಲ್ಲಿ ಝಗಮಗ ದೀಪಾಲಂಕಾರ. Labನಲ್ಲಿ ಮಾತ್ರ ಮಿಣಿ ಮಿಣಿ ಬಲ್ಬು ಉರಿಯುತ್ತಿತ್ತು. ಅನೇಕ ಬಾರಿ ಒಡೆಯರು ಒಳಗಿದ್ದೂ Shutter ಎಳೆದು dark-room ಕೆಲಸದಲ್ಲಿ ತೊಡಗಿರುತ್ತಿದ್ದರು. ನೂರು-ನೂರಿಪ್ಪತ್ತು ಚದರಡಿಯ ಆ ಮಳಿಗೆಯಲ್ಲಿ ಕಾಮತರು ಕೂಡುವ "ಗಲ್ಲೆ", dark room ಹಾಗೂ ಮಧ್ಯೆ ಫೋಟೋ ತೆಗೆಯಲು ಪುಟ್ಟ ಸ್ಟುಡಿಯೋ ಇಷ್ಟೆಲ್ಲವನ್ನೂ ನಿಯೋಜಿಸಿ ಅಳವಡಿಸಿದ್ದರು ತಾವೇ. ಕಿರಿದಾದ ಡಾರ್ಕ ರೂಮಿನಲ್ಲಿ ಗಾಳಿ ಸುತ್ತಾಡುವಂತೆ ರಚಿಸಿದ್ದರು. ಹೊಳಹು, ನೀಲ ನಕ್ಷೆ ಅವರದೇ. ಒಳಗಿರುವ ತಾಂತ್ರಿಕ ಸಲಕರಣೆಗಳನ್ನು ಕೂಡ ತಾವೇ ತಯಾರಿಸಿಕೊಳ್ಳುತ್ತಿದ್ದರು. ಬೆಂಗಳೂರಿನ ಗುಜರಿ (ಧಾರವಾಡದ ಮೋಡಕಾ ಬಜಾರ)ಗಳಲ್ಲಿ ಕೇಳುವವರಿಲ್ಲದೇ ಬಿದ್ದುಕೊಂಡ ವಸ್ತುಗಳು ಅಗ್ಗವಾಗಿ ಇವರ ಕೈಸೇರಿ ಅಪ್ರತಿಮ ಸಿದ್ಧ ಸರಕುಗಳಾಗಿ ಬಿಡುತ್ತಿದ್ದವು. ಪೇಟೆಯಲ್ಲಿ ಸಹಸ್ರಾರು ರೂಪಾಯಿ ಬೆಲೆ ಬಾಳುವ ಸಲಕರಣೆಗಳಿಗೆ ಇವರು ಕೇವಲ ನೂರಾರು ರೂಪಾಯಿಗಳಲ್ಲಿ ಸುಲಭ ಪರ್ಯಾಯವೊಂದನ್ನು ತಮ್ಮದೇ ಕಮ್ಮಟದಲ್ಲಿ ತಯಾರಿಸಿಬಿಡುತ್ತಿದ್ದರು. ಇಲ್ಲವೇ ಕುಶಲಕರ್ಮಿಗೆ ಹೇಳಿ ಮಾಡಿಸುತ್ತಿದ್ದರು. ಅಂತೂ ಉತ್ಪಾದನಾ ವೆಚ್ಚ(cost of production)ವನ್ನು ಹೇಗೆ ತಗ್ಗಿಸುವದೆಂದು ಅವರು ಚೆನ್ನಾಗಿ ಅರಿತಿದ್ದರು. ಯಾವುದೇ ಉಪಕರಣ ಎಷ್ಟು ಸಮರ್ಪಕವಾಗಿ, ಸೊಗಸಾಗಿ ತನ್ನ ಪಾತ್ರ ನಿರ್ವಹಿಸುತ್ತದೆ ಎಂಬುದು ಮುಖ್ಯವಾಗಿತ್ತೇ ಹೊರತು ಅದರ brand ಆಗಲಿ ದಿಖಾವ್ ಆಗಲಿ ಅಮುಖ್ಯ. ಬೆಂಗಳೂರಿನ ಯಾವ ಸಂತೆ-ಪೇಟೆಗಳಲ್ಲಿ ಯಾವ ವಸ್ತು ಯಾವ ದರದಲ್ಲಿ ಸಿಗುವದೆಂದು ಅವರಿಗೆ ಕರತಲಾಮಲಕ. ಯಶವಂತಪುರದ ಭಾನುವಾರದ ಸಂತೆ ಅವರಿಗೆ ಅಚ್ಚುಮೆಚ್ಚು, ಮನೆಗೆ ಹತ್ತಿರ ಕೂಡ. ಅವರಿಗೆ ಅದೊಂದು ಖುಲ್ಲಾ ಸೂಪರ್ ಬಜಾರ್. ಅಲ್ಪಾವಧಿಯ ಆ ಸಾಪ್ತಾಹಿಕ ಸಂತೆಯಲ್ಲೂ ತೇಜೀ, ಮಂದೀ ಸಮಯ ಸಂಧಿಗಳಿರುತ್ತವೆಂದು ಅವರು ಗುರುತಿಸಿದ್ದರು. ಮಂದೀ ಸಮಯದಲ್ಲೇ ಹೋಗಿ ಇಡೀ ವರ್ಷಕ್ಕೆ ಬೇಕಾಗುವ (ಉಪ್ಪಿನಕಾಯಿಗಾಗಿ) ಕಚ್ಚಾ ಮಾವಿನಕಾಯಿ, ನೆಲ್ಲೀಕಾಯಿ ಇತ್ಯಾದಿ ಖರೀದಿ ಆಗಿ ಮನೆಗೆ ಬರುತ್ತಿತ್ತು. ಸಂಶೋಧನೆ, ಬರಹದ ಮಧ್ಯೆ ಸುಸ್ತಾದಾಗ 'change of work is rest' ಅನ್ನುತ್ತಾ ರುಚಿಕಟ್ಟಾದ ಉಪ್ಪಿನಕಾಯಿ ತಯಾರಿಸುತ್ತಿದ್ದರು. ನೌಕರಿ ನಿಮಿತ್ತ ಪತ್ನಿ ದೂರದ ಮುಂಬೈನಲ್ಲಿ ಇದ್ದರೂ ಬೆಂಗಳೂರಿನ 'ಶಶಿಕಿರಣ್' ಮನೆಯಲ್ಲಿ ವೈವಿಧ್ಯದ ಉಪ್ಪಿನಕಾಯಿ ವ್ಯಂಜನ ಪದಾರ್ಥಗಳು ತಯಾರಾಗಿ ಭರಣಿಗಳು ತುಂಬಿರುತ್ತಿದ್ದವು. ಅತಿಥಿ, ಅಭ್ಯಾಗತರು ಊಟಕ್ಕೆ ಬಂದರೆ ಹೆಮ್ಮೆಯಿಂದ ತಾವೇ ತಯಾರಿಸಿದ ಉಪ್ಪಿನಕಾಯಿಯನ್ನು ನಂಚಿಕೊಳ್ಳಲು ಬಡಸುವರು. ಮತ್ತೊಂದು ಮಧ್ಯಂತರದಲ್ಲಿ fabric paint ಬಳಸಿ ಕಿಟಕಿಯ ಗಾಜುಗಳಿಗೆ, ಶ್ರೀಮತಿಯ ಗಂಟಿನೊಳಗಿನ ಸೀರೆಯ ಸೆರಗುಗಳಿಗೆ ಕಸೂತಿ-ಚಿತ್ರ ಬರೆಯುತ್ತಿದ್ದರು. ತಮ್ಮ ಕೆಮೆರಾದ ಮೂಲಕ ಇವರ ನೆಗೆಟಿವ್‌ಗಳಲ್ಲಿ ಸೆರೆಸಿಕ್ಕ ಚಾಲುಕ್ಯ, ಹೊಯ್ಸಳ ಶಿಲ್ಪ ಕಲೆಯ ನಕ್ಷೆಗಳನ್ನಳವಡಿಸಿ ತಯಾರಾಗುತ್ತಿದ್ದ ಈ 'ಪಲ್ಲೂ'ಗಳು ಪ್ರಪಂಚದ ಬೇರೆ ಯಾವ ಸೀರೆಗಳಲ್ಲೂ ಕಾಣಸಿಕ್ಕವು. ಅವು ಕಾಮತರದೇ ಆದ unique ಕೃತಿಗಳು, trade mark. ಆಗ WTO ಒಡಂಬಡಿಕೆಯಾಗಿ intellectual property rights ಲಾಗೂ ಆಗಿದ್ದರೆ ಡಾ. ಕಾಮತರು ನೂರಾರು ಪೇಟೆಂಟ್‌ಗಳನ್ನು ಪಡೆಯಬಹುದಿತ್ತು. ಆದರೆ ದೇಶವೆಲ್ಲ ಸುತ್ತಾಡಿದ ಈ ಅಪರೂಪದ ಅಲೆಮಾರಿ ತಾನು ಸಂಗ್ರಹಿಸಿದ್ದನ್ನೆಲ್ಲ ಮುಫತ್ತಾಗಿ ಸಹೃದಯರೊಡನೆ ಹಂಚಿಕೊಳ್ಳಬಯಸಿದರೇ ಹೊರತು ವ್ಯಾಪಾರಕ್ಕಿಳಿಯಲಿಲ್ಲ.

ಆಗತಾನೇ ಹೊಸತಾಗಿ second hand SLR ಕೆಮೆರಾ ಖರೀದಿಸಿದ್ದ ನನಗೆ ಅದನ್ನು ಕ್ಲಿಕ್ಕಿಸುತ್ತ ಫೋಟೋಗ್ರಾಫಿ ಕಲಿಯಬೇಕೆಂಬ ಹುಮ್ಮಸ್ಸು. ಬೆಂಗಳೂರಿನ ಸುತ್ತ ನೈಸರ್ಗಿಕ, ಐತಿಹಾಸಿಕ ತಾಣಗಳಿಗೇನು ಕಡಿಮೆಯೇ? ಭಾನುವಾರ ರಜೆ, ಬಂದಾಗಲೆಲ್ಲ ಕಾಮತರ ಜತೆ ಕೆಮೆರಾ ಹಿಡಿದು ತಿರುಗಬೇಕೆಂಬ ಉತ್ಸಾಹ ನನಗೆ. ವಾರಾಂತ್ಯ ಎಲ್ಲಿಗಾದರೂ ಹೋಗಿ ಬರೋಣವೇ? ಎಂದು ಪ್ರಸ್ತಾಪಿಸಿದಾಗ ಸಂತೋಷದಿಂದ ಒಪ್ಪಿ ಸೊಗಸಾದ ತಾಣವೊಂದನ್ನು ತಾವಾಗಿ ಆಯ್ಕೆ ಮಾಡಿ ನನಗಿಂತ ಮುಂದಾಗಿ ಅವರೇ ರೆಡಿಯಾಗಿಬಿಡುತ್ತಿದ್ದರು. ಸರಕಾರೀ ಅಥವಾ ಸಾವಕಾರೀ sponsorship ಇದ್ದರೆ ಮಾತ್ರ ಅಷ್ಟಿಷ್ಟು ಕೆಲಸ ಮಾಡುವ ಕಲಾ-ಕಸುಬುದಾರಿಕೆ ಕಾಮತರದಾಗಿದ್ದಿಲ್ಲ. ಸಂಶೋಧನೆಗೆ ಸಾಹಿತ್ಯ-ಸಾಮಗ್ರಿ ಸಂಗ್ರಹಿಸಲಿಕ್ಕೆ ದೊಡ್ಡ ಖರ್ಚು ಮಾಡಿ ಸಹಸ್ರಾರು ಮೈಲಿ ಪ್ರವಾಸ ಹೋಗಬೇಕೆಂದೇನಿಲ್ಲ. ಮಿತವಾದ ಖರ್ಚಿನಲ್ಲಿ ನಮ್ಮ ನಮ್ಮ ಹತ್ತಿರವಲ್ಲೇ ಅವಲೋಕಿಸಬೇಕಾದ ಸಾಮಗ್ರಿ ಸಾಕಷ್ಟು ಬಿದ್ದುಕೊಂಡಿದೆ. ಅಷ್ಟನ್ನೇ ಸಂಶೋಧಿಸಿದರೆ ಹಗಲು-ರಾತ್ರಿ ಎಡೆಬಿಡದೇ ಕೆಲಸ ಮಾಡಲು ಸಾಕಾಗುವಷ್ಟು ಸಾಮಗ್ರಿ ಸಿಗುತ್ತದೆ. ಅದನ್ನೇ ಬಗೆದು ನೋಡುವ ಸಾಮರ್ಥ್ಯ ಬೇಕು, ಸಹೃದಯತೆ, ಪ್ರತಿಭೆ ಬೇಕು-ಇದು ಅವರ ಧೋರಣೆ. ಪ್ರಪಂಚವನ್ನು ಅದರ ಎಲ್ಲಾ ಆಯಾಮಗಳಲ್ಲೂ ಕಂಡು ಅರಿಯಬೇಕೆಂಬ ಅವರ ಕುತೂಹಲ, ಉತ್ಸಾಹದಿಂದಾಗಿ ಅವರಲ್ಲಿ ಸಾಕಷ್ಟು ವಿಷಯಗಳ ಬಗ್ಗೆ ವಿಸ್ತೃತ ಮಾಹಿತಿ ಸಂಗ್ರಹವಾಗಿ ಇದ್ದೇ ಇರುತ್ತಿತ್ತು. ಸಂದರ್ಭೋಚಿತವಾಗಿ ಹಾಗೆ ಸಂಗ್ರಹಿಸಿದ ಹಿನ್ನೆಲೆ ಅವರ ಬಳಕೆಗೆ ಬರುತ್ತಿತ್ತು. ಕಾಡಿನಲ್ಲಿ ಅಲೆಯುವಾಗ ಅವರ ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರದ ಹಿನ್ನೆಲೆ, ಹೊಯ್ಸಳ ದೇವಾಲಯಗಳನ್ನು ನೋಡುವಾಗ ಇತಿಹಾಸ, ವಾಸ್ತುಶಾಸ್ತ್ರದ ಹಿನ್ನೆಲೆ ಅವರ ಸಹಾಯಕ್ಕೆ ಸಿದ್ಧವಾಗಿರುತ್ತಿದ್ದವು. ಹೀಗೆ 'ಸವ್ಯಸಾಚಿ'ಯಾದ ಈ ಅಪರೂಪದ ಅಲೆಮಾರಿಗೆ ಬೇರಾರಿಗೂ ಕಾಣದ ಹೊಸ ಅರ್ಥಗಳು, ಆಯಾಮಗಳು ದೃಗ್ಗೋಚರವಾಗುತ್ತಿದ್ದವು. ಕಾಮತರ ತಿರುಗಾಟದಲ್ಲಿ ಇಂತಹ ಅಂತಃಪರಿಕರಗಳು ಮುಖ್ಯವಾಗಿರುತ್ತಿದ್ದವೇ ಹೊರತು ಬಾಹ್ಯಪರಿಕರಗಳು ಗೌಣವಾಗಿರುತ್ತಿದ್ದವು. ಅವರ ಮುಖ್ಯ ಬಾಹ್ಯ ಪರಿಕರವೆಂದರೆ ಕೆಮೆರಾ ಮಾತ್ರ. ಬೆಳಿಗ್ಗೆ ಹೊರಟು ರಾತ್ರಿ ಮರಳುವುದಾದರೆ ಕೆಮೆರಾವೊಂದೇ ಕೈಸಂಗಾತಿ; ರಾತ್ರಿ ಉಳಿದುಕೊಳ್ಳುವ (ವಸತಿ) ಪ್ರಸಂಗ ಬಂದರೂ ಟೂಥ್-ಬ್ರಶ್, ಟೂಥ್‌ಪೇಸ್ಟ್, ಶೇವಿಂಗ್-ಕಿಟ್‌ಗಳ ಕಿಟಿ ಕಿಟಿಯಿಂದ ತಲೆಬಿಸಿ ಮಾಡಿಕೊಳ್ಳುತ್ತಿರಲಿಲ್ಲ ಚಳಿಗಾಲವಾದರೆ ಬೆಚ್ಚಗಿನ ಸ್ವೆಟರೋ, ಶಾಲೋ ಆದರೆ ಸಾಕು, ಬೇಸಿಗೆಯಾದರೆ ಅದೂ ಇಲ್ಲ. ಒಂದೆರಡು ದಿನ ದಾಡಿ ಬೆಳೆಸಿ ಸ್ವಂತ ಮನೆಗೆ ಮರಳಿದೊಡನೆ Shaving ನಡೆದೀತು. ಹಲ್ಲುಜ್ಜಲು ಬೇವಿನಕಡ್ಡಿಯೋ, ಸ್ಥಳೀಯವಾಗಿ ಸಿಗುವ ಹಲ್ಲುಪುಡಿಯೋ ಸಾಕು. ಊಟಕ್ಕೆ ಉಡುಪಿ ಹೊಟೆಲ್ ಅದೂ ಇಲ್ಲವಾದರೆ ಬ್ರೆಡ್ಡು, ಹಣ್ಣು ಹಂಪಲು. ಆಗಂತೂ ನೀರು ವ್ಯಾಪಾರದ ವಸ್ತುವಾಗಿರಲಿಲ್ಲ. ಮಿನರಲ್ ವಾಟರ್ ಒಯ್ಯುವ ಪ್ರಸಂಗವೇ ಇರಲಿಲ್ಲ. ಇದ್ದರೂ ಕಾಮತರು ಒಯ್ಯುತ್ತಿರಲಿಲ್ಲವೇನೋ? ಯಾಕೆಂದರೆ ಅಷ್ಟೆಲ್ಲ ತಯಾರಿ ಅವರಿಗೆ ಒಗ್ಗುತ್ತಿರಲಿಲ್ಲ. ಹೋದಲ್ಲಿ ಸಿಕ್ಕುವ ನಲ್ಲಿ ನೀರನ್ನೊ, ಹರಿವ ನದೀ ನೀರನ್ನೊ ಬೊಗಸೆಯಲ್ಲೇ ಕುಡಿದುಬಿಟ್ಟಾರು.

ಡಾ. ಕಾಮತರೊಡನೆ ಈ ರೀತಿಯ ನಿರಾಡಂಬರ, ಕುತೂಹಲಭರಿತ ತಿರುಗಾಟ, ಕೆಮೆರಾಯಾತ್ರೆ ಮಾಡುವ ಸು-ಯೋಗ ನನಗೆ ಕೆಲ ಕಾಲ ಲಭಿಸಿತ್ತು. ಲೇಪಾಕ್ಷಿ, ಸೋಮನಾಥಪುರ, ಮಾರಿ-ಕಣಿವೆ (ವಾಣಿ ವಿಲಾಸ ಸಾಗರ) ಇತ್ಯಾದಿ ತಾಣಗಳಿಗೆ ತಿರುಗಾಟ, ಸಂದರ್ಶಿಸಿದ ಹಲವಾರು ತಾಣಗಳ ಅಭ್ಯಾಸಕೇಂದ್ರ, ದೇವಸ್ಥಾನಗಳಾಗಿದ್ದರೂ ಪ್ರವಾಸಗಳು ಕೆಮೆರಾಯಾತ್ರೆಗಳಾದವೇ ಹೊರತು ತೀರ್ಥಯಾತ್ರೆಗಳಾಗಲಿಲ್ಲ, ಕಾಮತರು ನಾಸ್ತಿಕರೇನೂ ಆಗಿರಲಿಲ್ಲ, ಧಾರ್ಮಿಕ ಕರ್ಮಕಾಂಡದೆಡೆ ಉದಾಸೀನರಾಗಿರುತ್ತಿದ್ದರು. ಆದರೆ ಅಂಧಶ್ರದ್ಧೆ, ಅವೈಜ್ಞಾನಿಕತೆ ಅವರ ಅಪಹಾಸ್ಯಕ್ಕೆ ಗುರಿಯಾಗುತ್ತಿದ್ದವು. ನಾವು ಸಂದರ್ಶಿಸಿದ ಹೆಚ್ಚಿನವು ಪಾಳು-ದೇವಾಲಯಗಳೇ ಆಗಿದ್ದವು. ಆಗಂತೂ ಇವರ ಕೆಮರಾ ಚೆನ್ನಾಟಕ್ಕೆ ಅಡೆತಡೆ ಇರುತ್ತಿರಲಿಲ್ಲ, ಒಂದು ವೇಳೆ ಪೂಜೆ ಪುನಸ್ಕಾರಗಳಿದ್ದರೂ ಅತ್ತಕಡೆ ಇವರ ಲಕ್ಷ್ಯ ಹೋಗುತ್ತಲೇ ಇರಲಿಲ್ಲ. ದೇಗುಲ ಶಿಲ್ಪದಲ್ಲಿ ಸಿಕ್ಕುವ, ಸಿಕ್ಕಬಹುದಾದ ಸಂಶೋಧನಾ ಸಾಮಗ್ರಿಗಾಗಿ ಅವರ ಕಣ್ಣು ತಡಕಾಡುತ್ತಿತ್ತು, ಸಿಕ್ಕೊಡನೆ ಅವರ ಕೆಮೆರಾ ಕ್ಲಿಕ್ ಕ್ಲಿಕ್ ಎನ್ನುತ್ತ ಆಯಾ ದೃಶ್ಯಗಳನ್ನು ಸೆರೆಹಿಡಿಯುತ್ತಿತ್ತು. ಹಲವೊಮ್ಮೆ ಪಾಶ್ಚಾತ್ಯ ಪ್ರವಾಸಿಗಳಂತೆ ಇವನೂ ಒಬ್ಬ ಸಾಂಸ್ಕೃತಿಕ 'ಮುಕ್ಕ'ನೆಂದು ಬಗೆದು ದೇಗುಲದ ಪೂಜಾರಿಯೋ, ನೆರಳಲ್ಲಿ ತೂಕಡಿಸುತ್ತಿದ್ದ ಹಳ್ಳಿಯ ಸೋಮಾರಿಯೋ ಕ್ಷೇತ್ರದ ಮಹಿಮೆ, ಹಿರಿಮೆಗಳ ಬಗ್ಗೆ ರೀಲು ಬಿಟ್ಟದ್ದುಂಟು. ಅದು ದಕ್ಷಿಣ ಕಾಶಿಯೆಂದೋ, ಪಾಂಡವರು ಬೀಡು ಬಿಟ್ಟಿದ್ದರೆಂದೋ, ಸೀತಾರಾಮರು ತಂಗಿದ್ದ ತಾಣವೆಂದೋ, ಉಪನ್ಯಾಸ ಕೊಡುತ್ತಿದ್ದರು. ಕಾಮತರು ಮುಗ್ಧರಂತೆ ಕೇಳಿ, ನಂತರ ನಸು-ನಕ್ಕು ಜಾಗ ಖಾಲಿ ಮಾಡಿಬಿಡುವರು.

ಬೆಂಗಳೂರಿನಿಂದ ಮಾರಿಕಣಿವೆಗೆ ಹೋಗುವಾಗ ಮಧ್ಯೆ ಹಿರಿಯೂರಿನಲ್ಲಿ ಬಸ್ಸು ಬದಲಿಸಬೇಕಿತ್ತು. ಮಧ್ಯಂತರ ಕೊಂಚ ಅವಕಾಶವಿತ್ತು. ಬಸ್ ಸ್ಟಾಂಡಿನ ಸನಿಹದಲ್ಲೇ ಹಳೆಯ ದೇವಾಲಯವೊಂದು ಕಂಡಿತು. ಅವರಿಗೇನು ವಾಸನೆ ಹತ್ತಿತ್ತೋ, ಕಾಮತರು ಅತ್ತ ನಡೆದೇ ಬಿಟ್ಟರು. ನೋಡಿದರೆ ದೇವಾಲಯದ ಮಡಿಲಲ್ಲಿ ಅಪರೂಪದ ಬಣ್ಣ ಬಣ್ಣದ (ವಿಜಯನಗರದ ಸಾಮ್ರಾಜ್ಯದ ಕಾಲದ)

ಭಿತ್ತಿ ಚಿತ್ರಗಳಿದ್ದವು. ಆ ಚಿತ್ರಗಳ ಐತಿಹಾಸಿಕ, aesthetic ಮಹತ್ವವನ್ನರಿಯದೇ ಸ್ಥಳೀಯ ಉತ್ಸಾಹಿಗಳು ಚಿತ್ರಗಳ ಮೇಲೆಲ್ಲಾ ಸುಣ್ಣ ಬಳಿದು ಬಿಟ್ಟಿದ್ದರು. ಅದನ್ನು ಕಂಡ ಕಾಮತರು ಖೇದಗೊಂಡರೂ ಛಲ ಬಿಡದ ತ್ರಿವಿಕ್ರಮನಂತೇ ಅಲ್ಲೇ ದೊರಕಿದ ಲಿಕಿ ಲಿಕಿ ನಿಚ್ಚಣಿಕೆಯನ್ನೇರಿ ಕೆಮೆರಾ ಕ್ಲಿಕ್ಕಿಸತೊಡಗಿದರು. ಸುಣ್ಣದ ಪರೆಯನ್ನು ಸೀಳಿಕೊಂಡು ಆ ಹಳೆಯ ಚಿತ್ರಗಳು ಅಷ್ಟಿಷ್ಟು ಬಣ್ಣ, ಆಕಾರ, ಆಕೃತಿಗಳನ್ನು ಹೊರಸೂಸುತ್ತಿದ್ದವು 'ಸಿಕ್ಕಷ್ಟೇ ಶಿವಾ' ಎಂದು ನಗುತ್ತಾ ಕಾಮತರು ಅವನ್ನು ತಮ್ಮ ಕೆಮೆರಾದಲ್ಲಿ ಸೆರೆ ಹಿಡಿದು ನಡೆದರು. ಅವರ ಸಂಶೋಧನಾ ಸಾಮಗ್ರಿಯ ಆಕರ ಹಿಗ್ಗಿತ್ತು. ಪ್ರವಾಸದ ಖರ್ಚಿನ "ಪೈಸಾ ವಸೂಲ್" ಆಗಿತ್ತು. ಮುಂದೆ ಮಾರಿ-ಕಣಿವೆಯಲ್ಲಿ ದಿ|| ವಿಶ್ವೇಶ್ವರಯ್ಯನವರ ಮುಂದೃಷ್ಟಿ, ತಾಂತ್ರಿಕಜ್ಞಾನ ಹಾಗೂ ಆಗಿನ ಮಹಾರಾಜರ ಪ್ರೋತ್ಸಾಹದಿಂದ ಎದ್ದುನಿಂತ ಅಣೆಕಟ್ಟು ನಮ್ಮನ್ನು ಕೈಮಾಡಿ ಕರೆದಿತ್ತು. ನದಿಯಲ್ಲಿ ಹರಿವ ನೀರು ಕಡಿಮೆಯಾಗಿ ವಾಣೀವಿಲಾಸ ಸಾಗರವು ಸರೋವರದಂತೆ ಕಾಣುತ್ತಿತ್ತು. ಆದರೂ ಸುತ್ತ ಮುತ್ತಲಿನ ಹೊಲಗದ್ದೆಗಳಿಗೆ ಅಷ್ಟಿಷ್ಟು ನೀರು ಪೂರೈಕೆ ಆಗಿ ಹಿರಿಯೂರು ಶೇಂಗಾಕಾಳಿನ ಹಿರಿದಾದ ಮಾರುಕಟ್ಟೆಯಾಗಿತ್ತು. ಹಳೇ ಮೈಸೂರು ಸೀಮೆಯಲ್ಲಿ ಕಣ್ವ, ಮಾರೀಕಣಿವೆಯಂತಹ ಪುಟ್ಟ ನೀರಾವರಿ ಯೋಜನೆಗಳು, ಶಿವಸಮುದ್ರಮ್, (ಬ್ಲಫ್) ನಂತಹ ಜಲವಿದ್ಯುದಾಗರಗಳು ಆಗ ಎದ್ದು ನಿಂತವು. ಅಂತಹ ಚಿಕ್ಕಪುಟ್ಟ ಯೋಜನೆಗಳು ಈಗಿನ ಅಧಿಕಾರಶಾಹಿಗೆ ಬೇಕಾಗಿಲ್ಲ. ಯಾಕೆಂದರೆ ಬೃಹತ್ ನೀರಾವರೀ ಯೋಜನೆಗಳಲ್ಲಿ ಕಾಡು ಸವರುವ ನೆಪದಲ್ಲಿ, ಕಾಮಗಾರಿ ಮುಂತಾದ ವ್ಯವಹಾರದಲ್ಲಿ ಸಾಧ್ಯವಾಗುವ ಸಂಪಾದನೆ ಪುಟ್ಟ ಯೋಜನೆಗಳಲ್ಲಿ ಅಸಾಧ್ಯ ಅಥವಾ ಹಂಚಿಕೊಳ್ಳಲು ಸಾಲದು. ಬೃಹತ್ ಯೋಜನೆಗಳಿಂದಾಗುವ ಪರಿಸರನಾಶ, ಸ್ಥಾನೀಯರ ಸ್ಥಳಪಲ್ಲಟ ಮುಂತಾದ ಸಮಸ್ಯೆಗಳನ್ನು ಹೇಗಾದರೂ ನಿಭಾಯಿಸಿ ಇಂದಿನ ಅಧಿಕಾರಶಾಹಿ, ಬೃಹತ್ ಯೋಜನೆಗಳನ್ನೇ ಬಯಸುತ್ತದೆ. ಕೀಟಶಾಸ್ತ್ರಜ್ಞರಾದ ಕಾಮತರು ವಾಣಿವಿಲಾಸ ಸಾಗರದ ದಡದಲ್ಲಿ ಕುಳಿತು ತಮ್ಮ ಪರಿಸರದ ಬಗೆಗಿನ ಕಳಕಳಿ, ಆರ್ಥಿಕ-ವಿಕಾಸದ ಪ್ರಯತ್ನಗಳ ಬಗ್ಗೆ ತೋಡಿಕೊಳ್ಳುತ್ತಿದ್ದರು.

ಲೇಪಾಕ್ಷಿಗೆ ಹೊರಟಾಗ ಶ್ರೀಮತಿ ಜ್ಯೋತ್ಸ್ನಾ ಕಾಮತರೂ ಜತೆಗಿದ್ದರು. ಬೆಂಗಳೂರಿನ ಕಲಾಸಿಪಾಳ್ಯದಿಂದ ಅನಂತಪುರಕ್ಕೆ ಹೊರಡುವ ಪ್ರಥಮ ಬಸ್ಸು ಸುಮಾರು ಬೆಳಿಗ್ಗೆ ಎಂಟು ಗಂಟೆಗೆ ಹೊರಡುವದಿತ್ತು. ಖಾಸಗೀ ಬಸ್ಸಿನವನು ನಮ್ಮನ್ನು ಹತ್ತಿಸಿಕೊಂಡು ಬೇರೆ ಸೀಟ್ ಗಳಿಗಾಗಿ ಕೂಗಿ ಕಾಯತೊಡಗಿದ. "ಹೇಗೂ ಸಮಯವಿದೆ, ನಾಶ್ತಾ ಪೂರೈಸೋಣವೇ? ಹಸಿವೆಯಾಗಿದೆ" ಎಂದೆ ನಾನು ಚಿಕ್ಕ ಬಾಲಕನಂತೆ. ಪರೆಯದವನನ್ನು ಹಸಿದ ಹೊಟ್ಟೆಯಲ್ಲಿ ಕರೆದೊಯ್ಯುವದು ಡಾ. ಕಾಮತರಿಗೆ ಅಸಮ್ಮತವಾಗಿತ್ತು. ಬಸ್ಸಿನ ಸೀಟುಗಳು ಒಂದೊಂದೇ ತುಂಬ ತೊಡಗಿದ್ದವು. ಅಷ್ಟರಲ್ಲೇ ಬಂದು ಬಿಡುವ ಹುನ್ನಾರದಲ್ಲಿ ಕಾಮತರು ನನ್ನನ್ನು ಕರೆದುಕೊಂಡು ನಡೆದೇಬಿಟ್ಟರು. "ಕೆಮರಾ ತ್ರಿಪಾದ (Tripad) ಇತ್ಯಾದಿ ವಸ್ತುಗಳನ್ನೂ ನೋಡಿಕೊಂಡು ನಾನಿಲ್ಲೇ ಇರುತ್ತೇನೆ. ನೀವು ಹೋಗಿ ಬೇಗ ಬನ್ನಿ" ಎಂದರು ಶ್ರೀಮತಿ ಜ್ಯೋತ್ಸ್ನಾ. ಅವರಿಗೆ ಬಸ್ಸು ಎಲ್ಲಿ ಹೊರಟೇ ಬಿಡುತ್ತೋ ಎಂಬ ಸಂದೇಹವಿತ್ತು. ಹಾಗೆಯೇ ಆಗಿತ್ತು. ನಾವಿಬ್ಬರೂ ನಾಶ್ತಾ ಮುಗಿಸಿ ಬರುವ ಹೊತ್ತಿಗೆ ಬಸ್ಸಿನವನು ಶ್ರೀಮತಿ ಕಾಮತರನ್ನು ಸಾಮಾನು ಸರಂಜಾಮಿನೊಂದಿಗೆ ಇಳಿಸಿ ಹೊರಟು ಹೋಗಿದ್ದ. ಮುಂದಿನ ಬಸ್ಸಿಗೆ ಇನ್ನೊಂದು ಗಂಟೆ ಕಾಯಬೇಕಾಗಿತ್ತು. ನನ್ನ ಅಶಿಸ್ತು, ಹೊಟ್ಟೆ ತುಂಬಿಸುವ ಕಾತರದಿಂದಾಗಿ ಕಾರ್ಯಕ್ರಮದಲ್ಲಿ ವ್ಯತ್ಯಯವಾಗಿತ್ತು. ಶ್ರೀಮತಿ ಜ್ಯೋತ್ಸ್ನಾರಿಗೆ ಕೊಂಚ ಅಸಮಾಧಾನ, ಇರಿಸು-ಮುರಿಸಾಗಿತ್ತು. ನನ್ನಿಂದಾಗಿ ಅವರ ಪತಿದೇವರಿಗೆ ಕೊಂಕಣಿಯಲ್ಲಿ ಮಂತ್ರಾಕ್ಷತೆ ಕೂಡಬಿದ್ದವು. ಕೃಷ್ಣಾನಂದರು ಮಾತ್ರ ಎಂದಿನಂತೆ ನಸುನಕ್ಕು "ಅದಕ್ಕೇನು ಮುಂದಿನ ಬಸ್ಸಿನಲ್ಲಿ ಹೋಗೋಣ. ಹಸಿದ ಹೊಟ್ಟೆಯಲ್ಲಿ ಹೋಗುವದಕ್ಕಿಂತ ತಡವಾಗಿ ಹೋಗುವದು ವಾಸಿ" ಎಂದು ಶ್ರೀಮತಿಯವನ್ನು ಸಂತೈಸಿ ನನ್ನ ನೆರವಿಗೆ ಬಂದರು. ಮಧ್ಯಾಹ್ನದ ಮೊದಲು ಲೇಪಾಕ್ಷಿ ತಲುಪಿದೆವು. ಕಾಮತರ ಕೆಮರಾ ತೆರಪಿಲ್ಲದೇ ಕಣ್ಣು ಮಿಳುಕಿಸಿ ಭಿತ್ತಿ ಚಿತ್ರಗಳನ್ನು ವಾಸ್ತು ಶಿಲ್ಪ ಸಂಪತ್ತನ್ನು ಸೆರೆಹಿಡಿಯಿತು. ಕಾಮತ ದಂಪತಿಗಳ ಉಭಯ ಲೇಖನಿಗೆ, ಸಂಶೋಧನೆಗೆ ಆಕರವು ಬೆಳೆದು ಮತ್ತಷ್ಟು ಬೃಹತ್ತಾಗಿತ್ತು.

ಆಗ ಚೆನ್ನಪಟ್ಟಣದಲ್ಲಿ ನನ್ನ ಅಣ್ಣ (ಎನ್. ಎಲ್. ಕುಲಕರ್ಣಿ) ಅಂಚೆಕಛೇರಿಯಲ್ಲಿ ಕೆಲಸಕ್ಕಿದ್ದ. ಒಂದು ಶನಿವಾರ ಸಂಜೆ ಬೆಂಗಳೂರಿಂದ ಹೊರಟು ಚೆನ್ನಪಟ್ಟಣದ ನನ್ನ ಅಣ್ಣನ ಮನೆಯಲ್ಲಿ ತಂಗಿದ್ದು ಮರುದಿನ (ಭಾನುವಾರ) ಬೆಳಿಗ್ಗೆ ಅಲ್ಲಿಂದ ಸೋಮನಾಥಪುರಕ್ಕೆ ಹೋಗುವದೆಂದು ಠರಾವಾಗಿತ್ತು. ನನ್ನ ಅಣ್ಣ, ಅತ್ತಿಗೆ ಅಭ್ಯಾಗತರ ಸೌಕರ್ಯಕ್ಕೆ ತಕ್ಕ ಏರ್ಪಾಟು ಮಾಡಿ ನಮ್ಮನ್ನು ಬರಮಾಡಿಕೊಂಡರು. ಅವರ ಮನೆಯಲ್ಲಿ ಎರಡು ಪುಟ್ಟ ಪುಟ್ಟ ಹೆಣ್ಣುಮಕ್ಕಳು. ಏನೂ ಅಧ್ವಾನವಾಗಬಾರದು ಎಂದು ನನ್ನ ಅತ್ತಿಗೆ

ಕೊಂಚ nervous ಆಗಿದ್ದರು. ಅತ್ತ ಅಡಿಗೆ, ಊಟ ತಯಾರಾಗಿತ್ತು. ಇತ್ತ ಹಾಸಿಗೆಯನ್ನು ಕೂಡ ಹಾಸಿ ಇಟ್ಟಿದ್ದರು. ಬೆಳಗಿನ ಜಾವ ಬೇಗನೇ ಎದ್ದು ಹೊರಡಬೇಕಾಗಿದ್ದರಿಂದ ರಾತ್ರಿ ಬೇಗ ಊಟಮಾಡಿ ಮಲಗುವ ವ್ಯವಸ್ಥೆ ಆಗಿತ್ತು. ಮಕ್ಕಳಿಗೆ ಮುಂಚಿತವಾಗಿ ಊಟ ಮಾಡಿಸಿ ಆಡಲು ಬಿಟ್ಟು ನಮ್ಮನ್ನು ಊಟಕ್ಕೆ ಕರೆದರು. ನಾವೆಲ್ಲ ಇತ್ತ ಊಟಮಾಡುವಾಗ ಅತ್ತ ಮಕ್ಕಳಿಬ್ಬರೂ ಆಡುತ್ತಾಡುತ್ತಾ ದಣಿದು ಅತಿಥಿಗಳಿಗಾಗಿ ಬಿಡಿಸಿದ ಹಾಸಿಗೆಯಲ್ಲೇ ಮಲಗಿ ನಿದ್ರೆ ಹೋದವು. ಗಾಢ ನಿದ್ರೆಯಲ್ಲಿ ಮಕ್ಕಳಿಗೆ ಮೆತ್ತಗಿನ ಹಾಸಿಗೆಯೇ ಕನಸಿನ ಬಚ್ಚಲು ಮನೆಯಾಗಿರಬೇಕು. ನಾವು ಊಟ ಮುಗಿಸಿ ಮಲಗಲು ಹೋದಾಗ ಹಾಸಿಗೆಯಲ್ಲ ಒದ್ದೆಯಾಗಿತ್ತು. ಅತ್ತಿಗೆಯ ತಯಾರಿ ಬುಡಮೇಲಾಗಿ ಕಕ್ಕಾವಿಕ್ಕಿಯಾಗಿದ್ದರು. ಡಾ. ಕಾಮತರು ನನ್ನ ಅತ್ತಿಗೆಯ ಗಲಿಬಿಲಿಯ ಕಾರಣ ತಿಳಿದು ದೊಡ್ಡದಾಗಿ ನಕ್ಕು ನಗಿಸಿದರು. ನಿರುಮ್ಮಳರಾದ ಅತ್ತಿಗೆ ಬೆಡ್-ಶೀಟ್ ಬದಲಾಯಿಸಿಕೊಟ್ಟರು. ಕಾಮತರು ಹಾಯಾಗಿ ಮಲಗಿ ಗುರು ಗುರು ನಿದ್ರೆ ಹೊಡೆದು ಬೆಳಗಿನ ಜಾವ ನಾಲ್ಕು ಗಂಟೆಗೇನೆ ಎದ್ದು ಕುಳಿತುಬಿಟ್ಟರು. ಅವರಿಗೆ ಅಲಾರಾಂ ಗಡಿಯಾರ ಬೇಕಿರಲಿಲ್ಲ. ಕೆಲಸದ ಕಾತರ, ಕೌತುಕವೇ ಅವರನ್ನೆಬ್ಬಿಸುವ ಅಲಾರಾಂ ಗಂಟೆಯಾಗಿತ್ತು. ಸ್ವಂತ ಮನೆಯಲ್ಲಾದರೆ ಆಗಲೇ ಎದ್ದು ತಮ್ಮ ಕಾಯಕ ಶುರುಮಾಡುತ್ತಿದ್ದರು. ಅದಕ್ಕಿಲ್ಲಿ ಅವಕಾಶವಿಲ್ಲದ್ದರಿಂದ ನಿರ್ವಾಹವಿಲ್ಲದೇ ನಾವೆಲ್ಲ ಎಚ್ಚೆತ್ತು ಏಳುವದನ್ನೇ ದಾರಿ ನೋಡುತ್ತ ಹಾಸಿಗೆಯಲ್ಲೇ ಕುಳಿತಿದ್ದರು. ಮಿಕ್ಕವರು ಏಳುವವರೆಗೆ ಮತ್ತೊಂದು ಜೊಂಪು ನಿದ್ರೆ ಹೊಡೆದರಾಯಿತು ಎಂದು ಮತ್ತೆ ಮಲಗಲಿಲ್ಲ. ಅವರು ಎದ್ದು ಕುಳಿತಿದ್ದನ್ನು ನೋಡಿ ನಾವೂ ಸಹ ಏಳಲೇಬೇಕಾಯಿತು. ಸಾತ್ವಿಕ ಸಾಧಕನು ನಿತ್ಯ ಅರುಣೋದಯಕ್ಕೆ ಪೂರ್ವದಲ್ಲೇ ಬ್ರಾಹ್ಮೀ ಮುಹೂರ್ತದಲ್ಲಿ ಎಚ್ಚೆತ್ತು ಸಾಧನೆ ಮಾಡಬೇಕೆಂಬುದು ಪ್ರಾಚೀನ ಭಾರತೀಯ ಆರ್ಷ ನಿಯಮ. ಕಾಮತರು ಅದನ್ನು ಸಹಜವಾಗಿ, ಬೇಕಾಗಿ ಪಾಲಿಸುತ್ತಿದ್ದರು. ಅವರೇನು ಶಾಸ್ತ್ರ ಓದಿದವರಲ್ಲ. ಅದು ಅವರ ಮೈಗುಣ, ಮನೋಧರ್ಮ. ಈ ಅಪರೂಪದ ಅಲೆಮಾರಿ ಸಾತ್ವಿಕನಾಗಿದ್ದನೆಂಬುದಕ್ಕೆ ಇದೊಂದು ಸಾಕ್ಷಿ.

ಡಾ. ಕಾಮತರು ಪುಸ್ತಕ ಓದುತ್ತಿದ್ದರು, ಬರೆಯುತ್ತಿದ್ದರು. ಆದರೆ ಪ್ರತ್ಯಕ್ಷ ಪ್ರಪಂಚವೀಕ್ಷಣೆ ಅವರಿಗೆ ಹೆಚ್ಚು ಪ್ರಿಯ. ಪ್ರವಾಸ, ಪರ್ಯಟನೆಗಳು ಅವರ ಬಾಳುದ್ದದ ಗೀಳು. ನಿರಂತರ ಶಿಕ್ಷಣ ಮಾಧ್ಯಮ. ಕೇವಲ ವಿಹಾರಕ್ಕಾಗಿ ಅವರು ತಿರುಗಾಡಲಿಲ್ಲ. ಪ್ರತ್ಯೇಕ ಮನರಂಜನೆ, ವಿಹಾರ ಅವರಿಗೆ ಆವಶ್ಯಕವೂ ಆಗಿರಲಿಲ್ಲ. ತಿಳಿಯಾದ ಅಂತಃಕರಣದಿಂದ, ಲವಲವಿಕೆಯಿಂದ ನಿರ್ದಿಷ್ಟ ಅರಿವಿನಿಂದ ತಮಗೆ ಬೇಕಾಗಿ ಅವರು ದುಡಿಯುತ್ತಿದ್ದರು. ಹಾಗಾಗಿ ಅವರ ಕಾಯಕವೇ ಅವರಿಗೆ ನೃತ್ಯ, ಸಂಗೀತ ನಾಟಕ, ಸಿನೇಮ, ಆಟ-ಪಾಠವಾಗಿತ್ತು. ಅಷ್ಟಿಷ್ಟು ಮನರಂಜನೆ, ವಿಹಾರ ಬೇಕೆನಿಸಿದರೆ ತಿರುಗಾಟದ ಸಮಯದಲ್ಲಿ ಅವರು ಮಾಡುತ್ತಿದ್ದ ವಿಲಕ್ಷಣ ಪ್ರಪಂಚ ವೀಕ್ಷಣೆ ಅದನ್ನು ಪೂರೈಸಿಬಿಡುತ್ತಿತ್ತು. ಹೆಜ್ಜೆ, ಹೆಜ್ಜೆಗೂ ಕುತೂಹಲ, ಉತ್ಸಾಹ, ಸವಿರಾದ ಹಾಸ್ಯ ಮನೋಧರ್ಮದೊಂದಿಗೆ ಅವರು ಜಗತ್ತನ್ನು ನೋಡುತ್ತ ಸವಿಯುತ್ತ ನಡೆಯುವರು. ನೋಡಿದ್ದರಲ್ಲಿ ಬೇಕಾದಷ್ಟನ್ನು ಮಾತ್ರ ತಮ್ಮ ಬರಹ, ಸಂಶೋಧನೆಯಲ್ಲಿ ಸರಕಾಗಿ ಬಳಸುವರು. ವಿಸ್ತೃತ ಪ್ರಪಂಚವೆಲ್ಲ ಅವರಿಗೆ ಆಕರದ ನಿಧಿ. ಪ್ರಯೋಗಶಾಲೆ, ಸಂಶೋಧನೆ, ಸೃಜನಶೀಲತೆಗೆ ಎಲ್ಲ ಠಾವಿನಲ್ಲೂ ಅವಕಾಶವಿದೆ. ಅದು ವಾಚನಾಲಯ, ವಿದ್ಯಾಪೀಠ, ಕಾವ್ಯ, ಕಾದಂಬರಿ, ನಾಟಕಕ್ಕೆ ಸೀಮಿತವಾಗಬೇಕಾದ್ದಿಲ್ಲ. ಸಂಶೋಧಕನಿಗೆ ಸತತ ಅಭ್ಯಾಸದಿಂದ ಅಪಾರ ಹಿನ್ನೆಲೆ ಮಾಹಿತಿಯ ಸಂಗ್ರಹಣೆ, ವಸ್ತುವಿನ ಅಂತರಾಳವನ್ನು ಬಗೆದು ನೋಡುವ ಒಳಗಣ್ಣು ಬೇಕು. ಸಂಶೋಧನಾ ಕ್ರಮದ ತತ್ವ, ಪದ್ಧತಿ ಮತ್ತು ಹೆಚ್ಚಾಗಿ ಹೊಸತನ್ನು ಪತ್ತೆ ಹಚ್ಚುವ ಕುತೂಹಲವಿದ್ದವನು ಸಂಚರಿಸಿದಲ್ಲೆಲ್ಲಾ ಹಿಂದೆ ಕಾಣದ್ದನ್ನು ಕಂಡು ಹೊರಗೆಡಹಬಲ್ಲ ಎಂದು ಅವರು ತೋರಿಸಿಕೊಟ್ಟರು. ಕೀಟಶಾಸ್ತ್ರವಾದರೇನು, ಕಾವಿಕಲೆಯಾದರೇನು? ಶಿರಸಿ ಮಾರಿಕಾಂಬಾ ದೇವಸ್ಥಾನವನ್ನೂ, ಅಲ್ಲಿಯ ಕಾವಿ-ಚಿತ್ರಗಳನ್ನೂ ಯಾರು ನೋಡಿಲ್ಲ? ನಾನಂತೂ ಹೋದಾಗಲೆಲ್ಲಾ ಮಾರಿಕಾಂಬೆಗೆ ಹಣ್ಣುಕಾಯಿ ಮಾಡಿಸಿಕೊಂಡೇ ಬಂದಿದ್ದೇನೆ! ಆದರೆ ಅಲ್ಲಿನ ಕಾವಿ-ಕಲೆಯ ಇತಿಹಾಸ, ತಂತ್ರ, ಪ್ರಕಾರಗಳ ವಿರಳವಾದ ರಹಸ್ಯಗಳು ಕಾಮತರಿಗೆ ಗೋಚರಿಸಿದವು. ಅವರ ಸಂಶೋಧನಾತ್ಮಕ ಲೇಖನಗಳು ಕಾವಿ-ಕಲೆಯ ಮೇಲೆ ಬೆಳಕು ಚೆಲ್ಲಿದ ಮೇಲೆ ಅದು ಚರ್ಚೆಯ ವಿಷಯವಾಯಿತು. ಅದೊಂದು near - extinct ಅಥವಾ endangered school of art ಅಂತ ಪ್ರಪಂಚಕ್ಕೆ ಗೊತ್ತಾಯಿತು. ಆ ಮೇಲೆ ಅದು ಮಗುದೊಬ್ಬರಿಗೆ Ph.D ಪ್ರಬಂಧದ ವಿಷಯವಾಯಿತೆಂದೂ ಕೇಳಿದೆ. ಕಾವಿ-ಕಲೆಯ ತಾಣಗಳನ್ನು ಅರಸುತ್ತ ಕಾಮತರು ಅಲೆದಂತೆ Ph.D. ವಿದ್ಯಾರ್ಥಿಗಳು ಅಲೆಯುತ್ತಾರೆಯೇ? ಬರೀ ಅಲೆದರೂ ಪ್ರಯೋಜನವಿಲ್ಲ. ಹಲವರಿಗೆ ತಿರುಗಾಟ, ತಿನ್ನುವ ಸಂಭ್ರಮವೇ ಜಾಸ್ತಿ ಆಗಿ 'ಸಂಶೋಧನೆ' ಮೂಲೆಗುಂಪಾಗಿರುತ್ತದೆ. ಪರ್ಯಟಕನಿಗೆ, ಕುತೂಹಲ, ಉತ್ಸಾಹ, ಜ್ಞಾನಪಿಪಾಸೆಯೊಡನೆ ತಕ್ಕ ಪ್ರತಿಭೆ, ತೀಕ್ಷ್ಣ ಒಳದೃಷ್ಟಿ, ಮನೋಬೌದ್ಧಿಕ ಹದ ಇದ್ದರೆ ಅವನಿಂದ ಸಂಶೋಧನೆ, ಸಾಹಿತ್ಯ ತಾವಾಗಿ ಹೊರಹೊಮ್ಮುತ್ತವೆ.

ಡಾ. ಕೃಷ್ಣಾನಂದ ಕಾಮತರು ಇದಕ್ಕೊಂದು ಜ್ವಲಂತ ಉದಾಹರಣೆಯಾಗಿದ್ದರು. ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ತಿರುಗಾಡಿ ಯಾರೂ ಅಲೆಮಾರಿಯಾಗಬಹುದು. ಆದರೆ ದಿ|| ಡಾ. ಕೃಷ್ಣಾನಂದ ಕಾಮತರ ತಿರುಗಾಟವೆಲ್ಲ ಅಪಾರವಾದ, ಅಪ್ರತಿಮವಾದ ಸಾಹಿತ್ಯ, ಸಂಶೋಧನಾ ಕೃತಿಗಳಲ್ಲಿ ರೂಪುಗೊಂಡದ್ದರಿಂದ ಅವರೊಬ್ಬ ಅಪರೂಪದ ಅಲೆಮಾರಿ. ನಿಸ್ಸಂದೇಹವಾಗಿ.

ತಾವು ಅಲೆದಲೆದು ಕಲೆಹಾಕಿದ ಅಪಾರ ಸಾಂಸ್ಕೃತಿಕ ಸಂಪತ್ತನ್ನು ದಿ|| ಡಾ. ಕೃ. ಕಾಮತರು ನಮಗಾಗಿ ಬಿಟ್ಟು ಹೋಗಿದ್ದಾರೆ. ಅವರ ಮಗ ವಿಕಾಸ ತನ್ನ ತಂದೆ ಸಂಗ್ರಹಿಸಿದ್ದನ್ನು internet ಮೇಲೆ ಬಿತ್ತರಿಸುತ್ತಿದ್ದಾನೆ, ಮುಫತ್ತಾಗಿ. ಅದನ್ನು ಸವಿಯುವಾಗಲೆಲ್ಲ ನಮಗೆ ಈ ಅಪರೂಪದ ಅಲೆಮಾರಿಯ ನೆನಪಾಗಬೇಕು.*

* ನಿಗಮಕಲ್ಪತರೋರ್ಗಲಿತಂ ಫಲಂ

ಶುಕಮುಖಾದಮೃತದ್ರವ ಸಂಯುತಂ

ಪಿಬತ ಭಾಗವತಂ ರಸಮಾಲಯಂ

ಮುಹುರಹೋ ರಸಿಕಾ ಭುವಿ ಭಾವುಕಾಃ —ಭಾಗವತ

ಅದ್ಭುತ, ಸುಂದರವಾದ ಈ ಸತ್ಯ ಪ್ರಪಂಚದ ವರ್ಣನೆ ಒಂದು ದೃಷ್ಟಿಯಿಂದ ಭಾಗವತವೇ. ಕಾಮತರು ಅದನ್ನು ಮಾಡಿದ್ದಾರೆ. ವರ್ಣಿಸುವಾಗ ತಾವೂ ಸವಿದು ನಮಗೆ ಕೊಟ್ಟಿದ್ದಾರೆ. ಗಿಳಿ ಕಚ್ಚಿದ ಹಣ್ಣು ಅದು. ಭರತ ಭೂಮಿಯ ಭಾವುಕ ರಸಿಕರೇ, ಈ ಪಕ್ವವಾದ ಹಣ್ಣನ್ನು (ಗಲಿತಂ ಫಲಂ) ಸಂತತ ಸವಿಯಿರಿ.

❑



# ಹಿರಿಯ ಕೀಟಶಾಸ್ತ್ರಜ್ಞ - ಡಾ। ಕೃಷ್ಣಾನಂದ ಕಾಮತ

**ನಾಗೇಶ ಶಾನಭಾಗ**

**ಪ್ರೊ. ವಿ. ಎ. ಕುಲಕರ್ಣಿ**

ಡಾ॥ ಕೃಷ್ಣಾನಂದ ಕಾಮತ ಅವರು ದೇಶದ ಬೆರಳೆಣಿಕೆಯ ಕೀಟಶಾಸ್ತ್ರಜ್ಞರಲ್ಲಿ ಒಬ್ಬರು. ವಿಜ್ಞಾನಿಯ ಕುತೂಹಲ, ಸಾಹಿತಿಯ ಜೀವನಪ್ರೀತಿ, ಕಲಾವಿದನ ಅಂತರ್ ದೃಷ್ಟಿ, ಛಾಯಾಚಿತ್ರಕಾರನ ಸೂಕ್ಷ್ಮತೆ, ಪರಿಸರ ಪ್ರೇಮಿಯ ಕಾಳಜಿ ಮೈಗೂಡಿಸಿಕೊಂಡಿದ್ದ ಡಾ। ಕೃಷ್ಣಾನಂದ ಕಾಮತ ಅವರು ವಿಜ್ಞಾನ, ಪ್ರವಾಸ ಸಾಹಿತ್ಯ, ಲಲಿತ ಪ್ರಬಂಧ, ಚಿತ್ರಕಲೆ, ಛಾಯಾಚಿತ್ರ, ಕಾದಂಬರಿ – ಹೀಗೆ ವಿವಿಧ ಕ್ಷೇತ್ರಗಳಲ್ಲಿ ಹಲವಾರು ಕೃತಿಗಳನ್ನು ರಚಿಸಿ ಕನ್ನಡ ಸಾರಸ್ವತಲೋಕವನ್ನು ಶ್ರೀಮಂತಗೊಳಿಸಿದ ಧೀಮಂತ ವ್ಯಕ್ತಿ.

"ನಾನೂ ಅಮೇರಿಕೆಗೆ ಹೋಗಿದ್ದೆ" ಎಂಬ ಪ್ರವಾಸ ಕಥನದಿಂದ ಕನ್ನಡದ ಓದುಗರಿಗೆ ಪರಿಚಿತರಾಗಿದ್ದ ಕೃಷ್ಣಾನಂದರು "ನಾ ರಾಜಸ್ಥಾನದಲ್ಲಿ" 'ವಂಗದರ್ಶನ' 'ಕಾಲರಂಗ' 'ಮಧ್ಯಪ್ರದೇಶದ ಮಡಿಲಲ್ಲಿ' ಮೊದಲಾದ ಪ್ರವಾಸ ಕಥನಗಳನ್ನು ವಿಶಿಷ್ಟ ಶೈಲಿಯಲ್ಲಿ ರಚಿಸಿದ್ದಾರೆ.

"ನಾನೂ ಅಮೇರಿಕೆಗೆ ಹೋಗಿದ್ದೆ" "ಪ್ರಾಣಿ ಪರಿಸರ" "ಬಸ್ತರ ಪ್ರವಾಸ" – ಕೃತಿಗಳಿಗೆ ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ ದೊರೆತಿದೆ.

ಪ್ರಾಣಿ ಪರಿಸರ, ಪಶುಪಕ್ಷಿ ಪ್ರಪಂಚ, ಸಸ್ಯ ಪರಿಸರ, ಕೀಟಜಗತ್ತು ಮೊದಲಾದ ಕೃತಿಗಳು ಪರಿಸರ ವಿಜ್ಞಾನಕ್ಕೆ ಹಾಗೂ ಕನ್ನಡ ಸಾಹಿತ್ಯಕ್ಕೆ ಅವರ ಅಮೂಲ್ಯ ಕೊಡುಗೆಗಳು. ತಮ್ಮ ಕೃತಿಗಳಲ್ಲಿ ಸುಂದರ, ಸರಳ ರೇಖಾಚಿತ್ರಗಳನ್ನು ಸ್ವತಃ ತಾವೇ ಬಿಡಿಸಿದ್ದಾರೆ. ಬದುಕು, ಜೀವನ, ಜಗತ್ತು, ಪರಿಸರವನ್ನು ನೋಡುವ ಅವರ ದೃಷ್ಟಿ ಇತರರಿಗಿಂತ ಭಿನ್ನವಾಗಿತ್ತು. ಒಂದೆಡೆ ಹದ್ದಿನ ಕಣ್ಣುಗಳ ತೀಕ್ಷ್ಣದೃಷ್ಟಿ ಕುರಿತು ಹೇಳುವಾಗ "ಇಂದಿನ ಗುಪ್ತಚಾರರ ಸೆಟಲೈಟ್ ಕ್ಯಾಮರಾಗಳಂತೆ ಹದ್ದಿನ ಕಣ್ಣುಗಳು ಅತಿಸೂಕ್ಷ್ಮ, ತನ್ನ ಬೇಟೆ ಚಲನವಲನಗಳನ್ನು ಎತ್ತರದಿಂದಲೇ ಚೆನ್ನಾಗಿ ಪರಿಶೀಲಿಸಿ ಕ್ಷಣಾರ್ಧದಲ್ಲಿ ನಾಗ, ಕುಕ್ಕುಟ, ಇಲಿ, ಕಪ್ಪೆಗಳನ್ನು ನಖಗಳಲ್ಲಿ ಹಿಡಿದು ಮಾಯಮಾಡಿಬಿಡುವುದು" ಎಂದು ವರ್ಣಿಸಿದ್ದಾರೆ. ಯಾವುದೇ ವಿಷಯವಿರಲಿ, ಕೃಷ್ಣಾನಂದ ಕಾಮತ ಅವರದು ದುರ್ಬೀನು ದೃಷ್ಟಿಯೇ ಆಗಿತ್ತು.

ಪರಿಸರ ವಿನಾಶದ ಬಗ್ಗೆ ಅವರು ಇತ್ತೀಚೆಗೆ ರಚಿಸಿದ್ದ 'ಮರುಪಯಣ' ಕೃತಿಯನ್ನು ಪರಿಸರ ಪ್ರೇಮಿ ದಿ. ಕುಸುಮಾ ಸೊರಬ ಅವರಿಗೆ ಅರ್ಪಿಸಿ ತಮ್ಮ ಪರಿಸರ ಕಾಳಜಿ ವ್ಯಕ್ತಪಡಿಸಿದ್ದರು.

ದೇವಾಲಯಗಳ ಭಿತ್ತಿ ಚಿತ್ರಗಳನ್ನು ಕುರಿತ ಅವರ 'ಕಾವಿಕಲೆ' ಕೃತಿ ವೈಶಿಷ್ಟಪೂರ್ಣವಾಗಿದೆ. ಸತತ ಅಧ್ಯಯನದಿಂದ ಯಾವುದನ್ನೂ ಸಾಧಿಸಬಹುದು ಎನ್ನುವುದಕ್ಕೆ ಈ ಕೀಟಶಾಸ್ತ್ರಜ್ಞ ನಿದರ್ಶನವಾಗಿದ್ದಾರೆ.

ಪ್ರತಿಭಾವಂತರನ್ನು ಹುಡುಕುವುದರಲ್ಲಿ ದಿ. ಜಿ.ಬಿ. ಜೋಶಿ ಅವರು ನಿಸ್ಸೀಮರೆಂಬುದು ಇಡೀ ಸಾರಸ್ವತ ಲೋಕಕ್ಕೇ ಗೊತ್ತಿದ್ದ ವಿಷಯವಷ್ಟೇ. ಅಂತರ್ಯದ ಕಿಡಿ ಪ್ರಜ್ವಲಿಸಬೇಕು. ಅದು ಶಬ್ದರೂಪದಲ್ಲಿ ಬೆಳಗಿ ಸಮಾಜಕ್ಕೆ ಬೆಳಕಾಗಬೇಕು ಎಂಬುದು ಅವರ ಗುರಿ, ಧ್ಯೇಯ. ಡಾ. ಕೃಷ್ಣಾನಂದ ಕಾಮತ ಅವರು ಪ್ರಾಣಿಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದವರು ಎಂಬ ವಿಷಯ ಅವರಿಗೆ ಗೊತ್ತಿತ್ತು. "ಶಿಲ್ಪದಲ್ಲಿ ಪ್ರಾಣಿಗಳು" ಕುರಿತು ಯಾಕೆ ಬರೆಯಬಾರದು? ಎಂದು ಡಾ. ಕೃಷ್ಣಾನಂದರನ್ನು ಕೇಳಿದಾಗ ಜೀವಶಾಸ್ತ್ರ ವಿದ್ಯಾರ್ಥಿಗೆ ಇದೇನು ಮಹಾ ಎಂದು ಒಪ್ಪಿಕೊಂಡರು. ಆದರೆ ಕಾರ್ಯೋನ್ಮುಖರಾದಾಗ ಈ ದಾರಿ ಎಷ್ಟು ದುರ್ಗಮ ಎಂಬ ಅರಿವಾಯಿತು. ಡಾ. ಕೃಷ್ಣಾನಂದ ಕಾಮತರಿಗೆ ಪ್ರಾಣಿಗಳ ಸ್ವಭಾವ, ಅವುಗಳ ಪರಿಸರ ಇತ್ಯಾದಿ ಗೊತ್ತು. ಆದರೆ ದೇವಾಲಯದ ಕಲ್ಲುಗಳಲ್ಲಿ ಅರಳಿನಿಂತ ಶಿಲ್ಪಕಲೆಯ ಸ್ವರೂಪ, ಐತಿಹಾಸಿಕ ಹಾಗೂ ಪೌರಾಣಿಕ ಹಿನ್ನೆಲೆ ತಿಳಿದುಕೊಳ್ಳುವುದು ಅವಶ್ಯವಾಗಿತ್ತು. ಕೃಷ್ಣಾನಂದರು ತಮ್ಮ ಹಟ ಬಿಡಲಿಲ್ಲ. ಆಯಾಯ ಕ್ಷೇತ್ರಗಳ ತಜ್ಞರೊಂದಿಗೆ ಚರ್ಚಿಸಿ, ಪುರಾಣ – ಗ್ರಂಥ ಪರಿಚಯ, ಶಿಲ್ಪಕಲೆ, ಇತಿಹಾಸ ಅಭ್ಯಸಿಸಿ ತಿಳಿಯಾಗಿ ಸರಳಶೈಲಿಯಲ್ಲಿ ಬರೆದು "ಪ್ರಾಣಿ ಪರಿಸರ" ಎಂಬ ಅಮೂಲ್ಯ ಕೃತಿಯನ್ನು ಹೊರತಂದರು.

ಪ್ರತಿಯೊಂದು ಪ್ರಾಣಿಯ ಪೌರಾಣಿಕ ಕಥೆ, ಸಂಕೇತ ತತ್ವಗಳನ್ನು ವಿಪುಲವಾಗಿ ಹೆಣೆದು ನಮ್ಮ ಸಂಸ್ಕೃತಿಯ ಪದರುಗಳೆಷ್ಟು ಸಂಕೀರ್ಣ, ಸುಮನೋಹರ, ಸಮಗ್ರ ಹಾಗೂ ಧ್ವನಿಪೂರ್ಣ ಎಂಬುದನ್ನು ಈ ಕೃತಿಯಲ್ಲಿ ತೋರಿದ್ದಾರೆ. ಹೀಗೆ ವಿಜ್ಞಾನ ಕೃತಿ ಮೂಲಕ ಸಮಗ್ರ ಪುರಾಣ ಪ್ರಜ್ಞೆ ( total awareness of Myth) ಯನ್ನು ಜಾಗೃತಗೊಳಿಸಿ ನಮ್ಮ ಸಂಸ್ಕೃತಿಯ ಅವಿಚ್ಛಿನ್ನ ಜೀವಂತ ಪರಂಪರೆಯನ್ನು ಸ್ಫುಟವಾಗಿ ತೋರಿಸಿದ್ದಾರೆ.

ಡಾ. ಕೃಷ್ಣಾನಂದ ಅವರಿಗೆ ಧರ್ಮದಲ್ಲಿ ವಿಶ್ವಾಸವಿತ್ತು. ಆದರೆ ಕೆಲವು ಅಂಧಶ್ರದ್ಧೆ ಪರಂಪರಾಗತವಾಗಿ ಬಂದ ಮೂಢನಂಬಿಕೆಗಳನ್ನು ಅವಕಾಶ ಸಿಕ್ಕಾಗ ಲಘುವಾಗಿ ಟೀಕಿಸುತ್ತಿದ್ದರು. ಕಾಗೆಯನ್ನು ಕುರಿತು ಬರೆಯುವಾಗ–"ಸ್ವರ್ಗಕ್ಕೆ ಹೋಗಬಯಸುವವರಿಗೆ ಕಾಗೆಯ ಸಹಕಾರ ಅತ್ಯವಶ್ಯ. ಸತ್ತವನ ಆತ್ಮ ಸ್ವರ್ಗವನ್ನು ಸೇರಲು ಹತ್ತು ದಿನ ಬೇಕು ಎಂದು ಕಂಪ್ಯೂಟರ್‌ಗಳಿಲ್ಲದ ದಿನಗಳಲ್ಲೂ ಪೂರ್ವಜರು ಲೆಕ್ಕಾಚಾರ ಹಾಕಿದ್ದಾರೆ. ಅಷ್ಟು ದಿನಗಳವರೆಗೆ ನಮ್ಮ ಆತ್ಮೀಯರು ಹಸಿದು ಬಳಲುವುದು ನಮಗೆ ಮನಸ್ಸಿಗೆ ಬಾರದ್ದರಿಂದ ಪ್ರತಿದಿನವೂ ಕಾಕರಾಜನಿಗೆ ಅನ್ನ ಸಂತರ್ಪಣೆ ಮಾಡಿ ಸತ್ತವರ ಆತ್ಮಕ್ಕೆ ಆಹಾರ ತಲುಪುವಂತೆ ಮಾಡುತ್ತೇವೆ. ಹನ್ನೆರಡನೆಯ ದಿನವಂತೂ ವಿಶೇಷ ಅಡಿಗೆ ಮಾಡಿ ಕಾಕವರ್ಗಕ್ಕೆ ಮೊದಲು ಬಡಿಸುವಂತೆ ನೋಡಿಕೊಳ್ಳುತ್ತೇವೆ. ತನ್ನ ಇಚ್ಛೆ ಈಡೇರುವ ಮೊದಲೇ ಆತ್ಮ ಪಯಣ ಬೆಳೆಸಿದ್ದರೆ ಬದುಕಿದವರು ಅದನ್ನು ಈಡೇರಿಸಬೇಕು. ಕಾಕ ಪಿಂಡ ಮುಟ್ಟಿದಾಗಲೇ ಸಮಾಧಾನ. ಮಗನ ಮುಂಜಿ, ಮಗಳ ಮದುವೆ, ಒಳ್ಳೆಯ ನಡತೆಗಳನ್ನೆಲ್ಲಾ ವಾಗ್ದಾನ ಮಾಡಿದಾಗಲೇ ಕಾಕ ಆಹಾರವನ್ನು ಸ್ವೀಕರಿಸುವುದಂತೆ. ಇಂದಿನ ರಾಜಕಾರಣಿಗಳ ಆಶೆ ಆಕಾಂಕ್ಷೆಗಳಿಗೆ ಕೊನೆ ಮೊದಲಿಲ್ಲವಾದ್ದರಿಂದ ಅವರ ಪಿಂಡವನ್ನು ಕಾಕರಾಜ ಎಂದಾದರೂ ಮುಟ್ಟುವನೇ ಎಂಬುದನ್ನು ಶೋಧಿಸಿ ನೋಡಬೇಕು!"

ಡಾ. ಕೃಷ್ಣಾನಂದ ಕಾಮತರ ಬರಹದ ಶೈಲಿ ಇದು. ವ್ಯಂಗ್ಯವನ್ನೇ ತುಸು ನವಿರಾಗಿ ಮನಸ್ಸಿಗೆ ತಟ್ಟುವ ಹಾಗೆ ಬರೆಯುವ ಶೈಲಿ ಅವರದಾಗಿತ್ತು.

ಸಿರಾಕ್ಯೂಸ್ ನ್ಯೂಯಾರ್ಕ್ ಸ್ಟೇಟ್ ವಿಶ್ವವಿದ್ಯಾಲಯದಿಂದ ಕೀಟಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದಿದ್ದ ಡಾ. ಕಾಮತ ಅವರು ಮನಸ್ಸು ಮಾಡಿದ್ದರೆ ಅಮೇರಿಕೆಯಲ್ಲಿಯೇ ಉಳಿದು ಉನ್ನತಸ್ಥಾನ ಗಳಿಸಬಹುದಿತ್ತು. ಆದರೆ ಶುದ್ಧ ಭಾರತೀಯ ಸಂಸ್ಕೃತಿಯ ಬಗ್ಗೆ ಅಪಾರ ಗೌರವ ಹೊಂದಿದ್ದ ಅವರು ಅಲ್ಲಿಯ ಹುದ್ದೆ, ಆಮಿಷ ಧಿಕ್ಕರಿಸಿ, ನಾಡಿನ ಮಣ್ಣಿನ ಕಂಪಿಗೆ ಮಾರುಹೋಗಿ ತಾಯ್ನಾಡಿಗೆ ಮರಳಿ ಬಂದರು.

ಅಮೇರಿಕೆಯಲ್ಲಿ ಸದ್ಯ ಇಂಜಿನಿಯರ್ ಆಗಿ ಸೇವೆ ಸಲ್ಲಿಸುತ್ತಿರುವ ಮಗ ವಿಕಾಸನಿಗೆ "ಕಾಮತ್ ಡಾಟ್ ಕಾಂ" ನಿರ್ಮಿಸುವಂತೆ ಪ್ರೇರಣೆ ನೀಡಿ, ನಮ್ಮ ದೇಶದ ನಾಡಿನ ಸಂಸ್ಕೃತಿ, ಪರಿಸರ, ಜೀವನ ಶೈಲಿ, ತಿನಸು-ಉಣಿಸುಗಳ ಬಗ್ಗೆ ಪರಿಚಯ ಒದಗಿಸುವ ಅವಿಸ್ಮರಣೀಯ ಕಾರ್ಯವನ್ನು ಕೈಕೊಂಡಿದ್ದರು. ಈ 'ಡಾಟ್ ಕಾಂ' ಜಾಲ ಇಡೀ ಅಮೇರಿಕ ಯುರೋಪಗಳಲ್ಲಿ ಬಹು ಜನಪ್ರಿಯಗೊಂಡಿದ್ದು ಭಾರತೀಯರ ಬಗ್ಗೆ ತಪ್ಪು ಕಲ್ಪನೆ ಹೊಂದಿದ್ದ ವಿದೇಶಿಯರಿಗೆ ಈ ಮೂಲಕ ಅಪ್ಪಟ ಭಾರತೀಯ ಸಂಸ್ಕೃತಿಯ ಪರಿಚಯ ನೀಡಿದ್ದಾರೆ.

ಕೇಂದ್ರ ಸರಕಾರದಲ್ಲಿ ಕೆಲಕಾಲ ಕೀಟಶಾಸ್ತ್ರಜ್ಞರಾಗಿ ಸೇವೆ ಸಲ್ಲಿಸಿದ್ದ ಡಾ. ಕಾಮತ ಅವರು ಪ್ರತಿಭೆಗೆ ಬೆಲೆ ನೀಡದ ಅಧಿಕಾರಶಾಯಿ ಪ್ರವೃತ್ತಿಗೆ ಬೇಸತ್ತು, ಕೆಲಸಕ್ಕೆ ರಾಜೀನಾಮೆ ನೀಡಿ, ಬೆಂಗಳೂರಿನಲ್ಲಿ ವೈಜ್ಞಾನಿಕ ಛಾಯಾಚಿತ್ರ ಸ್ಟುಡಿಯೋ ಆರಂಭಿಸಿ ತಮ್ಮ ವಿಜ್ಞಾನ - ಸಾಹಿತ್ಯ ಚಟುವಟಿಕೆಗಳನ್ನು ವಿಸ್ತಾರಗೊಳಿಸಿದರು. ಸದಾಕಾಲ ಓದು, ಗ್ರಂಥರಚನೆ, ಪ್ರಯೋಗ, ಸಂಶೋಧನೆಗಳಲ್ಲಿಯೇ ಸಮಯ ಕಳೆಯುತ್ತಿದ್ದ ಅವರು ಪ್ರಚಾರ ಬಯಸದ ಸಂಕೋಚ ಸ್ವಭಾವದ ವ್ಯಕ್ತಿಗಳಾಗಿದ್ದರು. ಕೊನೆಯವರೆಗೂ ಎಲೆ ಮರೆಯ ಕಾಯಿಯಂತೇ ಉಳಿದರು.

ಪ್ರಚಾರಕ್ಕೆ ಆಶೆ ಪಡದ, ಕಂಡ ಸತ್ಯವನ್ನು ಸ್ಪಷ್ಟವಾಗಿ ಹೇಳುವ ಹಾಗೂ ಅದರಂತೆ ನಡೆಯುವ ಸ್ವಭಾವ ಅವರದಾಗಿತ್ತು. ಖಂಡಿತವಾದಿ; ಆದರೆ ಲೋಕವಿರೋಧಿಯಾಗಿರಲಿಲ್ಲ. ಅನ್ಯಾಯಗಳೊಂದಿಗೆ ಎಂದಿಗೂ ಒಪ್ಪಂದ ಮಾಡಿಕೊಳ್ಳಲಿಲ್ಲ. ಗಟ್ಟಿ ಸಂಕಲ್ಪ, ಶಕ್ತಿಯ ಸೂಕ್ಷ್ಮಸಂವೇದನಾಶೀಲ ವ್ಯಕ್ತಿಯಾಗಿದ್ದರು. ಡಾ. ಕಾಮತ್. ಸಾಮಾನ್ಯರದು ಒಂದು ದಾರಿಯಾದರೆ, ಸಾಮಾನ್ಯ ಪಂಡಿತರದು ಇನ್ನೊಂದು ದಾರಿ. ಆದರೆ ಡಾ. ಕಾಮತ್‌ರದು ಯಾರೂ ನಡೆಯದ, ಸವೆಯದ ದಾರಿ. ಅವರೊಬ್ಬ ಅಪೂರ್ವ ವಿಜ್ಞಾನಿ, ಸಾಹಿತಿ,

ಛಾಯಾಗ್ರಾಹಕ, ಪರಿಸರ ಚಿಂತಕ. ಕಡಲ ಮೇಲಿನ ತೆರೆಗಳನ್ನು ಎಣಿಸುತ್ತ ವ್ಯರ್ಥ ಕಾಲಹರಣ ಮಾಡದೆ ಕಡಲಾಳಕ್ಕೆ ಇಳಿದು ಮುತ್ತು ಹುಡುಕುವ ವಿಶಿಷ್ಟ ದೃಷ್ಟಿ ಅವರದು.

ಅನಾವಶ್ಯಕ ಖರ್ಚು ಮಾಡುವುದು ಅವರಿಗೆ ಸೇರದು. ಗೆಳೆಯರಿಗೆ, ಆತ್ಮೀಯರಿಗೆ ಶುಭಾಶಯ ಪತ್ರಗಳನ್ನು ರವಾನಿಸುವಾಗಲೂ ಸಾದಾ ಅಂಚೆಕಾರ್ಡ್ ಬಳಸಿ ಅದರ ಮೇಲೆ ತಾವೇ ಅಂದವಾಗಿ ಚಿತ್ರ ಬರೆದು ಶುಭ ಹಾರೈಸುವ, ಸರಳ ಸಾದಾ ವ್ಯಕ್ತಿತ್ವ ಅವರದಾಗಿತ್ತು. ಕೊನೆಯವರೆಗೂ ಈ ಸರಳತನವನ್ನು ಅವರು ಬಿಟ್ಟುಕೊಡಲಿಲ್ಲ. ಯಾವುದೇ ವಿಷಯವನ್ನು ತಿಳಿನಗೆಯೊಂದಿಗೆ ಹಾಸ್ಯಮಯವಾಗಿ ಹೇಳುವ ಶೈಲಿ ಅವರದಾಗಿತ್ತು. ತೋರಿಕೆಗೆ ಗಂಭೀರ ವ್ಯಕ್ತಿ ಎನಿಸುತ್ತಿದ್ದರೂ ಶುದ್ಧ ಹಾಸ್ಯಪ್ರಿಯರು.

ಒಮ್ಮೆ ಅವರ ಬಂಗಾಲಿ ಮಿತ್ರರು "ಇಂದು ರಾತ್ರಿ ನಮ್ಮಲ್ಲಿ ಭೋಜನ್. ಎಂಟು ಗಂಟೆಗೆ ಮನೆಗೆ ಬನ್ನಿ" ಎಂದು ಆಮಂತ್ರಿಸಿದರು. ಡಾ. ಕಾಮತರಿಗೂ ಬಂಗಾಲಿಗಳ ಊಟದ ರುಚಿಯನ್ನು ಸವಿಯಲು ತವಕ. ಆಮಂತ್ರಣವನ್ನು ಸ್ವೀಕರಿಸಿದರು. ಸಾಯಂಕಾಲ ಮನೆಗೆ ಬರುತ್ತಲೇ ಪತ್ನಿಗೆ ವಿಷಯ ತಿಳಿಸಿ, ತಮಗಾಗಿ ಏನೂ ಮಾಡುವ ಆವಶ್ಯಕತೆ ಇಲ್ಲ ಎಂದು ಹೇಳಿ ಕಲಕತ್ತಾದ ದೂರದ ಬಡಾವಣೆಯಲ್ಲಿದ್ದ ತಮ್ಮ ಸಹೋದ್ಯೋಗಿಯ ಮನೆಗೆ ಹೋದರು. ಅಲ್ಲಿಟ್ಟಿದ್ದ ತಬಲಾ, ಹಾರ್ಮೋನಿಯಂ ಮುಂತಾದ ಸಂಗೀತವಾದ್ಯಗಳನ್ನು ನೋಡಿ, ಬಹುಶಃ ಗಾಯನ ಕಾರ್ಯಕ್ರಮದ ನಂತರ ಭೋಜನ ಇರಬಹುದೆಂದು ತಿಳಿದು ತಾವೂ ಶ್ರೋತೃವೃಂದದಲ್ಲಿ ಕುಳಿತರು. ರಾತ್ರಿ ೧೦ ಗಂಟೆಗೆ ಸಂಗೀತ ಕಾರ್ಯಕ್ರಮ ಮುಗಿಯುತ್ತಲೇ ಭೋಜನಕ್ಕೆ ಆಹ್ವಾನಿಸಿದ ಬಂಗಾಲಿ ಮಿತ್ರ ಅತಿಥಿಗಳಿಗೆಲ್ಲ ಚಹಾ ನೀಡಿ 'ಶುಭರಾತ್ರಿ' ಎಂದು ಬೀಳ್ಕೊಟ್ಟಾಗ. ಡಾ. ಕಾಮತರು ಕಕ್ಕಾಬಿಕ್ಕಿ! ಬಂಗಾಲಿಗಳ 'ಒ' ಸ್ವರಪ್ರಿಯತೆ ಈ ಎಲ್ಲ ರಾದ್ಧಾಂತಕ್ಕೆ ಕಾರಣ ಎಂದು ಡಾ. ಕಾಮತ ಅವರಿಗೆ ಹೊಳೆದುದು ಆಗಲೇ. ಭಜನೆ ಎಂಬ ಶಬ್ದ ಬಂಗಾಲಿ ಮಿತ್ರನ ಉಚ್ಚಾರದಲ್ಲಿ "ಭೋಜನ್" ಆಗಿತ್ತು. ಡಾ. ಕಾಮತ್ ಅವರಿಗೆ ಅದು ಭೋಜನ ಎಂದೇ ಕೇಳಿಸಿತ್ತು. ಮನೆಗೆ ಬಂದಾಗ ಪತ್ನಿ ಹಾಗೂ ಅಡುಗೆ ಮನೆ – ಎರಡೂ ಮಲಗಿದ್ದವು. ಇಡೀ ರಾತ್ರಿ ಡಾ. ಕಾಮತ ಅವರಿಗೆ ಉಪವಾಸದ ಭಜನೆಯಾಯಿತೆನ್ನಿ!

ತಾವು ಕಂಡ ವಿಷಯಗಳನ್ನು ಪತ್ನಿಗೆ ಪತ್ರ ಮುಖೇನ ಬರೆದು ಕಳಿಸಿದ ಲೇಖನಗಳನ್ನು "ಪ್ರೇಯಸಿಗೆ ಬರೆದ ಪತ್ರಗಳು" ಎಂಬ ಕೃತಿ ರಚಿಸಿ ಉತ್ತಮ ಸಾಹಿತ್ಯ ನೀಡಿದ್ದಾರೆ. ತಮ್ಮ ವೈಶಿಷ್ಟ್ಯಪೂರ್ಣ ಕೃತಿಗಳಿಂದ ವಿಜ್ಞಾನ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಪ್ರತಿಭಾವಂತ ಡಾ. ಕೃಷ್ಣಾನಂದ ಕಾಮತ ಇಂದು ನಮ್ಮ ಮಧ್ಯದಲ್ಲಿಲ್ಲ. ಮರಳಿ ಬಾರದ "ಮನೆಗೆ" ಹೋಗಿದ್ದಾರೆ. ಆಲಮ್ ಕವಿಯ ಪ್ರಿಯತಮೆ, ಕವಯಿತ್ರಿ ಶ್ರೀಮತಿ ಶೇಖ್ ಶ್ರೀಕೃಷ್ಣನನ್ನು ಕುರಿತು "ಯಾವದಿನ ಶ್ರೀಕೃಷ್ಣ ಗೋಕುಲ ತೊರೆದು ಮಥುರೆಗೆ ಹೋದನೋ ಆ ದಿನದಿಂದ ಮಧುಬನ ಉದಾಸ ಮತ್ತು ಭಯಾನಕವಾಗಿ ಕಾಣುತ್ತಿದ್ದು ಗಿಳಿ, ಮೈನಾಹಕ್ಕಿ ಮುಂತಾದ ಪಕ್ಷಿಗಳೆಲ್ಲವೂ ಯಮುನೆಯ ತಟದಲ್ಲಿಯ ಕದಂಬ ವೃಕ್ಷದ ಕೊಂಬೆಗಳಲ್ಲಿ ದುಃಖಿತಗೊಂಡು ಕುಳಿತಿವೆ" ಎಂದು ಹೇಳಿದಂತೆ ನಾವಿಂದು ನಮ್ಮ "ಕೃಷ್ಣ"ನನ್ನು ಕಳೆದುಕೊಂಡು, ನೆನಪಿನ ನೆರಳಿಗೆ ಮೈಯೊಡ್ಡಿ ಕುಳಿತಿದ್ದೇವೆ.

❑

# 'ಜ್ಞಾನಂ ವಿಜ್ಞಾನ ಸಹಿತಂ'

**ಡಾ. ಇಂದಿರಾ ಮೂರ್ತಿ**

ಡಾ. ಕೃಷ್ಣಾನಂದ ಕಾಮತರ ಬಹುಮುಖ ಪ್ರತಿಭೆಯಲ್ಲಿ ನಾನು ಕಂಡದ್ದು ಶ್ರೀಮದ್ಭಗವದ್ಗೀತೆಯ ಮೇಲಿನ ನುಡಿಯನ್ನು. ತಮ್ಮ ಸುತ್ತಲಿನ ಪ್ರಪಂಚವನ್ನು ತೀಕ್ಷ್ಣವಾಗಿ ಅತ್ಯಂತ ಕುತೂಹಲದಿಂದ ಗಮನಿಸುತ್ತಿದ್ದ ಕಾಮತರ ಬರವಣಿಗೆಯಲ್ಲಿ, ವೈಜ್ಞಾನಿಕ ಮನೋಭಾವದೊಂದಿಗೆ ಸಾಮಾಜಿಕ ಕಳಕಳಿಯೂ ಸಮ ಸಮವಾಗಿ ಬೆರೆತಿರುವುದನ್ನು ನಾವು ಕಾಣುತ್ತೇವೆ. ಕವಿ 'ಹಾಡುವುದು ನನ್ನ ಕರ್ಮ' ಎಂದಂತೆ, ಕಂಡದ್ದನ್ನು ಪ್ರಾಮಾಣಿಕತೆಯಿಂದ ಅರಿಯುವ ಪ್ರಯತ್ನ, ಅರಿತಿದ್ದನ್ನು ಅವಕಾಶ ಸಿಕ್ಕಾಗ ಇತರರಲ್ಲಿ ಹಂಚಿಕೊಳ್ಳುವ ಮನೋಧರ್ಮ, ಇನ್ನೂ ಮುಖ್ಯವಾಗಿ ಕಂಡದ್ದನ್ನು ಕಂಡಂತೆ ಕ್ಯಾಮರ ಮತ್ತು ಒಳಗಣ್ಣಿನ ಮೂಲಕ-ಒಪ್ಪವಾಗಿ ಶೇಖರಿಸಿಡುವ ಕಾಯಕವನ್ನು ಅವರು ತಮ್ಮ ಕರ್ಮವೇ ಎಂಬಂತೆ ಜೀವನದುದ್ದಕ್ಕೂ ಪಾಲಿಸಿದರು. ನಾನು ಕಾಮತರನ್ನು ನೋಡಿದ್ದು ಒಮ್ಮೆ ಮಾತ್ರ, ಅವರ ಪತ್ನಿಯನ್ನು ಭೇಟ್ಟಿಯಾಗಲು ಹೋದಾಗ. (ನಾಲ್ಕು ದಶಕಗಳು ಕರ್ನಾಟಕದಿಂದ ಹೊರಗಿದ್ದ ಕೆಲವೇ ವರ್ಷಗಳಿಂದ ಬೆಂಗಳೂರಲ್ಲಿ ನೆಲಸಿರುವ ಕಾರಣ ಅವರ ಬರವಣಿಗೆಯ ಪರಿಚಯ ನನಗೆ 'ನಾನೂ ಅಮೆರಿಕಾಗೆ ಹೋಗಿದ್ದೆ' ಗೆ ಸೀಮಿತವಾಗಿತ್ತು) ಆ ದಿನ ಕಾಮತರೇ ಚಹಾ ಮಾಡಿದ್ದು ನನಗೇನೂ ವಿಶೇಷವಾಗಿ ಕಾಣಲಿಲ್ಲ. ನನ್ನ ತಂದೆ, ಪತಿ, ಮಗ ಯಾರೂ ಅತಿಥಿಗಳಿಗೆ ಕಾಫಿ, ಚಹ ಮಾಡುವುದು ಕಷ್ಟದ ಕೆಲಸವೆಂದು ಎಂದೂ ತಿಳಿದಿಲ್ಲ. ಆದರೆ ನನಗೆ ಬಹಳ ವಿಚಿತ್ರವೆನಿಸಿದ್ದು ಅವರ ಮನೆಯಲ್ಲಿ ಟೀವಿ, ಕಂಪ್ಯೂಟರ್ ಏನನ್ನೂ ಕಾಣದಿದ್ದಾಗ. ಈ ಬಗ್ಗೆ ಹಲವಾರು ಬಾರಿ ಡಾ. ಜ್ಯೋತ್ಸ್ನಾರೊಡನೆ ಚರ್ಚಿಸಿಯೂ ಇದ್ದೇನೆ. ಹೀಗಾಗಿ ಅವರ ಮಗ ವಿಕಾಸ, 'ಕಾಮತ್ ಡಾಟ್ ಕಾಂ' ಎಂಬ ವೆಬ್‌ಸೈಟ್ ಶುರುಮಾಡಿದ್ದಾರೆಂದು ಜ್ಯೋತ್ಸ್ನಾರವರು ಹೇಳಿದಾಗ, ಅದರ ವಿಶೇಷತೆಯನ್ನು ನನಗೆ ಊಹಿಸಲೂ ಸಾಧ್ಯವಾಗಲಿಲ್ಲ. ಆದರೆ ಮನೆಗೆ ಬಂದು ನೋಡಿದಾಗ ಅತ್ಯಾಶ್ಚರ್ಯವಾಗಿದ್ದಂತೂ ನಿಜ. ತಕ್ಷಣವೇ ನಾನು ಜ್ಯೋತ್ಸ್ನಾರಿಗೆ ದೂರವಾಣಿ ಕರೆ ಮಾಡಿದೆ. ನಾನು ಕೇಳಿದ ಪ್ರಶ್ನೆಗಳಿಗೆ ಅವರು ನೇರವಾಗಿ ಉತ್ತರಿಸದೆ ಕಾಮತರಿಗೇ ಫೋನ್ ಕೊಟ್ಟರು. ಅವರ ವೆಬ್‌ಸೈಟ್‌ನಲ್ಲಿ ನನಗೆ ಅತ್ಯಂತ ಆಕರ್ಷಕವೆನಿಸಿದ ವಿಷಯಗಳ ಬಗ್ಗೆ ಅವರೊಡನೆ ಚರ್ಚಿಸುವ ಸದವಕಾಶ ಈ ರೀತಿ ದೊರಕಿತು. ಸಾಮಾನ್ಯರು ನಿಷ್ಕೃಷ್ಟವೆಂದು ಪರಿಗಣಿಸುವ ವಸ್ತುಗಳಲ್ಲೂ ಉತ್ಕೃಷ್ಟವಾದದ್ದನ್ನು ಹೆಕ್ಕಿ ತೆಗೆಯುವ ಕುಶಲತೆ ಕಾಮತರಿಗಿರುವುದನ್ನು ಈ ಮೂಲಕ ನಾನು ಕಂಡೆ. ಡಿವಿಜಿಯವರೆಂದಂತೆ ಕಲೆಗಳಲ್ಲಿ ಪರಮ ಕಲೆ ಜೀವನದ ಲಲಿತ ಕಲೆ. ಆ ಕ್ಷಣ, ಇದನ್ನು ಕಾಮತರು ಬಹಳಷ್ಟು ಸಾಧಿಸಿದ್ದಾರೆ ಎನ್ನಿಸಿತು. ಅಂತರ್ಜಾಲದ ಆಳ ವಿಸ್ತಾರ ಎಲ್ಲ ಕಾಮತ್ ದಂಪತಿಗಳಿಗೆ, ಪ್ರಾರಂಭದಲ್ಲಿ ಕೊಂಚ ಗೊಂದಲ, ಅನಂತರ ಅತೀವ ಅಚ್ಚರಿಗೆ ಈಡು ಮಾಡಿತ್ತೆಂದು ನನಗೆನಿಸಿತು. ಆ ನಂತರ ನಾನು ಕಾಮತರನ್ನು ಪರಿಚಯ ಕಾರ್ಯಕ್ರಮದಲ್ಲಿ ಟಿವಿ ಪರದೆಯ ಮೇಲೆ ಕಂಡೆ. ಅವರ ಜೀವನ ಪ್ರೀತಿ, ಸುತ್ತಲಿನ ಜಗತ್ತಿನ ಬಗೆಗಿನ ಆಸಕ್ತಿ, ಕುತೂಹಲ, ನಂಬಿದಂತೆ ನಡೆಯುವ ಛಲ ಎಲ್ಲವೂ ನಿಜಕ್ಕೂ ಶ್ಲಾಘನೀಯ.

ಅವರ ಇತ್ತೀಚಿನ ಪುಸ್ತಕಗಳಲ್ಲಿ 'ಮರುಪಯಣ' ನನಗೆ ಅತ್ಯಂತ ಹಿಡಿಸಿತು. ಅವರ ವೈಚಾರಿಕತೆ, ಪ್ರಾಮಾಣಿಕವಾಗಿ ಮತ್ತೊಬ್ಬರ ದೃಷ್ಟಿಯಿಂದ ಜೀವನವನ್ನು ಕಾಣಬಲ್ಲ ರೀತಿ ಎಲ್ಲಕ್ಕೂ, ಹಿಡಿದ ಕನ್ನಡಿಯೇ ಅದಾಗಿದೆ. 'ಇರುವೆಯ ಇರವು,' 'ಕಾಗೆಯ ಕಾಯಕ' ಓದಿದಾಗ ದಿನ ನಿತ್ಯ ನೋಡುವ ಇರುವೆ ಹಾಗೂ ಕಾಗೆಗಳ ಬಗ್ಗೆ ನನಗಿದ್ದ ಅಜ್ಞಾನಕ್ಕೆ ನಾಚಿಕೆಯಾಯಿತು. ಸರಳವಾಗಿ, ಓದುಗರಿಗೆ ಅಜೀರ್ಣವಾಗದಂತೆ ಬರೆಯುವ ಕಾಮತರ ಶೈಲಿ ಜನಪ್ರಿಯ ವೈಜ್ಞಾನಿಕ ಲೇಖಕರಿಗೆ ಒಂದು ಮಾದರಿ. ನವಿರಾದ ಹಾಸ್ಯದ ಲೇಪನವೂ ಅದಕ್ಕಿದ್ದು ಓದುಗರಿಗೆ ಮುದ ನೀಡುವಂತಿದೆ. 'ಕಾಗೆಯ ಕಾಯಕ'ದಲ್ಲಿ ಕಾಗೆಗಳ ನಡುವಿನ ಸಂಭಾಷಣೆ ಕಾಮತರ ಕಲ್ಪನಾಶಕ್ತಿಗೊಂದು ಚಿಕ್ಕ ಉದಾಹರಣೆಯಂತಿದೆ. ಇದೇ ರೀತಿ ಪ್ರಾಣಿ, ಪಕ್ಷಿಗಳ ನಡುವಿನ ಸಂಭಾಷಣೆಯ ಮೂಲಕ ಅವುಗಳ ಬಗ್ಗೆ ತಿಳಿಸಿಕೊಡುವ ಪುಸ್ತಕಗಳು ಮಕ್ಕಳಿಗೆ ಅತ್ಯಂತ ಆಕರ್ಷಕವಾಗುವುದರಲ್ಲಿ ಸಂದೇಹವೇ ಇಲ್ಲ. ಕಾಮತರಿಗೆ 'ಕನ್ನಡದ ರಸ್ಕಿನ್ ಬಾಂಡ್' ಆಗುವ ಎಲ್ಲ

ಲಕ್ಷಣಗಳಿದ್ದವು. ಅವರಿಂದ ಇನ್ನೂ ಹೆಚ್ಚಿನ ವಿಜ್ಞಾನ ಸಂಬಂಧಿತ ಲೇಖನಗಳು, ಪುಸ್ತಕಗಳು ಬರಬೇಕಿತ್ತು. ವಿಷಯ ಸಂಗ್ರಹಣೆಗೆ ಬೇಕಾದ ಸೌಕರ್ಯದ ಕೊರತೆ, ಕಾಲದ ಅಭಾವ, ಅವರಿಗೆ ಪ್ರಿಯವಾದ ಇನ್ನಿತರ ಹವ್ಯಾಸಗಳು ಇವೆಲ್ಲ ಕಾರಣಗಳಿಂದ ಇದು ಸಾಧ್ಯವಾಗಲಿಲ್ಲವೇನೋ ಅನ್ನಿಸುತ್ತಿದೆ. ಆದರೆ, ಅವರಿಗೆ ಈ ನಿಟ್ಟಿನಲ್ಲಿದ್ದ ಪ್ರತಿಭೆಯ ಪೂರ್ಣ ಉಪಯೋಗ ನಾವು ದೊರಕಿಸಿಕೊಳ್ಳಲು ಅಸಮರ್ಥರಾದುದು ನಮ್ಮ ದುರಾದೃಷ್ಟ.

ಡಿಸ್ಕವರಿ, ನ್ಯಾಷನಲ್ ಜಿಯೋಗ್ರಾಫಿಕ್‌ಗಳಲ್ಲಿ ಆಕರ್ಷಕವಾಗಿ ಮೂಡಿಬರುವ ಹೊಸ ಹೊಸ ಜಾಗಗಳ ಬಗ್ಗೆ ಹಾಗೂ ಅಲ್ಲಿನ ಜನಗಳ ವಿಶಿಷ್ಟ ಜೀವನ ಶೈಲಿ, ಇತ್ಯಾದಿಗಳ ಕಾರ್ಯಕ್ರಮಗಳನ್ನು ನೋಡಿದಾಗಲೆಲ್ಲಾ ನನಗೆ ಕಾಮತರೇ ನೆನಪಾಗುತ್ತಾರೆ. ಅವರಿಗೂ ಇಂತಹ ಒಂದು ಅವಕಾಶ ದೊರಕಿದ್ದರೆ ನಮ್ಮ ಕರ್ನಾಟಕವೇ ಏಕೆ ಪೂರ ಭಾರತ ದೇಶದ ಒಂದು ಅಮೂಲ್ಯ ನೋಟವನ್ನೇ ಅವರು ತೆರೆದಿಡುತ್ತಿದ್ದರು, ನಮಗಾಗಿ, ನಮ್ಮ ಮುಂದಿನ ಪೀಳಿಗೆಗಳಿಗಾಗಿ. 'ಕಾಣುವ ಕಣ್ಣಿರಲು ಕೇಳುವ ಕಿವಿಯಿರಲು ಎಲ್ಲೆಲ್ಲೂ ಸೌಂದರ್ಯವೇ (ವಿಜ್ಞಾನವೇ)! ಎನ್ನುವುದು ಅವರ ಜೀವನ ತತ್ವವೇ ಆಗಿತ್ತು.

ಬದುಕಿನುದ್ದಕ್ಕೂ ಒಂದು ಅರ್ಥ, ಆಯಾಮ ಹುಡುಕುತ್ತಾ, ಅದಕ್ಕಾಗಿ ಶುದ್ಧ ಸರಳ ಮಾರ್ಗದಲ್ಲಿ ನಡೆದವರು ಕಾಮತರು. ಅವರ ಮಗ ವಿಕಾಸ ಕಾಮತ್ 'ಕಾಮತ್ ಡಾಟ್ ಕಾಂ' ಮೂಲಕ ತನ್ನ ತಂದೆಯವರ ಬಹುಮುಖ ಪ್ರತಿಭೆಯನ್ನು ಪರಿಚಯಿಸಿ ಬಹಳ ಶ್ರೇಷ್ಠ ಕೆಲಸವೊಂದನ್ನು ಮಾಡುತ್ತಿದ್ದಾರೆ. ಇದಕ್ಕಾಗಿ ನಾವು ಅವರಿಗೆ ಚಿರಋಣಿಗಳು.

❑







# ಕಹಿ ಇಲ್ಲದ ಸಿಹಿ ಮನಸ್ಸಿನ ವ್ಯಕ್ತಿ

**ನೇಮಿಚಂದ್ರ**

ಕಾಮತರು ನನ್ನ ಬದುಕಿನ ಮೇಲೆ ಅವರು ತಿಳಿದದ್ದಕ್ಕಿಂತ ಹೆಚ್ಚು ಪ್ರಭಾವ ಬೀರಿದ್ದರು. ಅವರ ಬರವಣಿಗೆಯಿಂದ ನಾನು ಪ್ರಭಾವಿತಳಾದದ್ದಲ್ಲ, ಅವನ್ನು ನಾನು ಓದಿದ್ದು ತೀರಾ ಇತ್ತೀಚಿಗೆ. ಅವರ ಬದುಕಿನಿಂದ ನಾನು ಪ್ರಭಾವಿತಳಾಗಿದ್ದೆ. ಅವರ ಉನ್ನತ ವ್ಯಕ್ತಿತ್ವ, ಪ್ರಶಂಸೆ-ಪ್ರಶಸ್ತಿಗಳ ತಹತಹವಾಗಲಿ, ಅತೃಪ್ತಿಯಾಗಲಿ ಇಲ್ಲದ ಶಾಂತ ಸ್ವಭಾವ, ಸರಳ ಬದುಕು, ಸದಾ ಮುಖದ ತುಂಬಾ ಹರಡಿದ ನಗು, ಪುಟಿವ ಉತ್ಸಾಹ-ಇವೆಲ್ಲವೂ ನನ್ನನ್ನು ಪ್ರಭಾವಿಸಿತ್ತು. ಅದೆಲ್ಲಿಯದು ಆ ನಿರಂತರ ಹುಮ್ಮಸ್ಸು, ದಣಿಯದ ದೇಹ-ಮನಸ್ಸು. ತಮ್ಮ ಬರವಣಿಗೆ, ಚಿತ್ರಗಳ ಅದ್ಭುತ ಜಗತ್ತನ್ನು ಎಲ್ಲಿಲ್ಲದ ಉತ್ಸಾಹದಿಂದ ಹಂಚಿಕೊಳ್ಳುತ್ತಿದ್ದ ಅವರ ಪರಿ, ನನಗೆ ತತ್‌ಕ್ಷಣದ ಸ್ಫೂರ್ತಿ ಒದಗಿಸುತ್ತಿತ್ತು. 'ಬೇಕು'ಗಳ ಅಗತ್ಯವೇ ಇಲ್ಲದೆ ಬದುಕಿದ ಅವರ ಜೀವನ ಕ್ರಮ ನನಗೆ ಆಪ್ಯಾಯಮಾನವಾಗಿತ್ತು. ಕಾರಣ ಅವೆಲ್ಲವೂ ನನ್ನ ಆದರ್ಶವಾಗಿದ್ದವು- ನಾನು ತಲುಪಲು ಬಯಸಿದ, ತಲುಪುವ ಹಾದಿಯಲ್ಲಿ ಬಲುದೂರ ನಿಂತ ಆದರ್ಶಗಳು. ಹಣ, ಅಧಿಕಾರ, ಆರಾಮ, ಐಷಾರಾಮ ಯಾವುದನ್ನೂ ಬಯಸದೇ, ಸಂತಸದಿಂದ ಬದುಕಿ ಬಾಳಿದ ವ್ಯಕ್ತಿ-ಕಾಮತರು.

ಕಾಮತರು ಒಂದು ವಿಧದಲ್ಲಿ ನನಗೆ ಮಾದರಿಯಾಗಿದ್ದರು. 'ಅತ್ಯಂತ ಶ್ರಮ ಮತ್ತು ಉತ್ಕಟತೆಯಿಂದ ಬರೆದ ಪುಸ್ತಕ, ಯಾರ ಗಮನಕ್ಕೂ ಬರಲಿಲ್ಲ' ಎಂದು ಒಮ್ಮೊಮ್ಮೆ ಮನಸ್ಸಿನ ಮೂಲೆಯಲ್ಲೆಲ್ಲೋ ಇರುಸು ಮುರುಸು ಉಂಟಾದಾಗ, ತಟ್ಟನೆ ಕಾಮತರು ನೆನಪಾಗುತ್ತಿದ್ದರು. 'ತಮ್ಮ ಅಗಾಧ ಪರಿಶ್ರಮ, ತಿರುಗಾಟ ಮತ್ತು ಹಣ ತೊಡಗಿಸಿ ಬರೆದ ಪುಸ್ತಕಗಳಿಗೆ ಸಿಗಬೇಕಾದ ಪುರಸ್ಕಾರ ಸಿಗಲಿಲ್ಲ. ಹಾಕಿದ ಹಣವೂ ಹಿಂತಿರುಗಲಿಲ್ಲ' ಎಂದು ಕಾಮತರು ವಿಷಾದಿಸಿದ್ದನ್ನು ನಾನು ಎಂದೂ ಕಂಡಿರಲಿಲ್ಲ. ಅವರು ತಮ್ಮ ಬರೆಯುವ ಮತ್ತು ಚಿತ್ರಗಳನ್ನು ತೆಗೆಯುವ ಆ ಕ್ರಿಯೆಯಲ್ಲಿ ಎಷ್ಟು ಹುಮ್ಮಸ್ಸಿನಿಂದ ಉಲ್ಲಾಸದಿಂದ ತೊಡಗಿದ್ದರೆಂದರೆ, ಅದರಾಚಿನ ಮತ್ತಾವ ಪ್ರತಿಫಲದ ನಿರೀಕ್ಷೆ ಇಲ್ಲದಷ್ಟು ಅವರು ತಮ್ಮ ಕೆಲಸದಲ್ಲಿ ತೃಪ್ತರಿದ್ದರು. 'ನನ್ನ ಬರಹ ಬರೆಯಲೇಬೇಕೆಂಬ ನನ್ನ ಒಳ ಒತ್ತಡದಲ್ಲಿ ಹುಟ್ಟಿದ್ದು, ಬರೆಯದೆ ನನಗೆ ಸಮಾಧಾನವಿಲ್ಲ. 'ಬರಹವೇ ನನ್ನ ಗುರಿಯಾಗಬೇಕೇ ಹೊರತು, ಬರೆದ ಖುಷಿಗಿಂತ ನಿರೀಕ್ಷೆ ಬೇಡ' ಎಂದು ನನಗೆ ಆಗ ಮನದಟ್ಟಾಗುತ್ತಿತ್ತು.

ಕಾಮತರು ಕಂಡ ಜಗತ್ತನ್ನು ನಾವು ಯಾರೂ ಕಂಡಿಲ್ಲ ಎಂದು ನನಗನಿಸುತ್ತಿದೆ. ನಾನು ಇಂಗ್ಲೆಂಡು, ಯೂರೋಪು, ಆಫ್ರಿಕ, ಅಮೇರಿಕ ಸುತ್ತಿ ಬಂದಿದ್ದೆ, ಆದರೆ ಕಾಮತರು ತಮ್ಮ ಬಾಲ್ಕನಿಯಲ್ಲಿ ಕುಳಿತು ನೋಡಿದಷ್ಟು ಜಗತ್ತನ್ನು ನಾನು ನೋಡಿರಲಿಲ್ಲ. ಕಾಮತರು ತಾವು ತೆಗೆದ ಛಾಯಾಚಿತ್ರಗಳನ್ನು ತೆರೆದು ತೋರಿಸುವಾಗ, ನಾನು ಮಲ್ಲೇಶ್ವರಂ ಕೂಡಾ ಸರಿಯಾಗಿ ನೋಡಿಲ್ಲ, ಇಪ್ಪತ್ತು ವರ್ಷದಿಂದ ಇರುವ ಬೆಂಗಳೂರನ್ನು ಕಂಡೇ ಇಲ್ಲ ಎನಿಸುತ್ತಿತ್ತು. ನಾನು ನೋಡದ ಅದೆಷ್ಟು ದೊಡ್ಡ ಜಗತ್ತಿತ್ತು, ನನ್ನ ಸುತ್ತ ಮುತ್ತ. ಮಲ್ಲೇಶ್ವರಂನಲ್ಲಿ, ಅವರು ತೆಗೆದ ನೂರಾರು ಚಿತ್ರಗಳು, ಬೆಂಗಳೂರಿನ ಬೀದಿ ಬೀದಿ, ಗಲ್ಲಿ ಗಲ್ಲಿಗಳ ಚಿತ್ರ-ಅವರು ಕಂಡ ಜಗತ್ತು ಬಲು ವಿಶಾಲವಿತ್ತು. ನಮ್ಮ ಕಣ್ಣಿಗೆ ಕಾಣದ ಅದ್ಭುತಗಳು ಕಾಮತರಿಗೆ, ಅವರ ಕ್ಯಾಮರ ಕಣ್ಣಿಗೆ ಕಾಣುತ್ತಿತ್ತು. ನಾನು ಕಾಮತರಿಂದ ಕಲಿತ ಮತ್ತೊಂದು ವಿಷಯವೆಂದರೆ – ಅವಲೋಕನ. ನನಗೆ ನೆನಪಿದೆ, ಜನವರಿ ತಿಂಗಳ ಆ ಹಿಂದಿನ ದಿನ ಕಾಮತರ ಮನೆಗೆ ಹೋಗಿದ್ದೆ. ಅವರು, ಮನೆಯಿಲ್ಲದೆ ಫುಟ್‌ಪಾತಿನಲ್ಲಿ ವಾಸಿಸುವ ಬೀದಿ ಬದಿಯ ಜನರ ಇಡೀ ಬದುಕನ್ನು ನೂರಾರು ಚಿತ್ರಗಳಲ್ಲಿ ಹಿಡಿದಿಟ್ಟಿದ್ದರು, ನನಗೆ ಅಂದು ಸುಮಾರು ಐವತ್ತು ಚಿತ್ರಗಳನ್ನಾದರೂ ತೋರಿಸಿದ್ದರು. ಮರುದಿನ ಪ್ರತಿ ಮುಂಜಾವಿನಂತೆ, ರಾತ್ರಿಯ ಅರೆನಿದ್ರೆಯ ನಂತರ, ಬೆಳಗ್ಗೆ ಆರು ಗಂಟೆಗೆ ಕಾರ್ಖಾನೆಗೆ ಹೊರಟಂತೆ, 'ಇಂದೆಂಥಾ ಕೆಲಸ ನನ್ನದು! ಜಗತ್ತೆಲ್ಲ ಮಲಗಿದ್ದಾಗ ಎದ್ದು ಹೊರಡಬೇಕು' ಎಂದು ನನ್ನ ಬಗ್ಗೆ ನನಗೇ ಸ್ವಯಂಮರುಕ ಹುಟ್ಟಿ ಮನಸ್ಸಿನಲ್ಲಿ ಬೇಸರ, ಖಿನ್ನತೆ ಮೂಡಿತ್ತು. ಎದ್ದಂತೂ ಕಛೇರಿಗೆ ಹೋಗಲೇಬೇಕಿತ್ತು, ಒಂದು ಗಂಟೆ ಕಾರಲ್ಲಿ ನಿದ್ದೆ ಮಾಡುವ ಬದಲು, ಕಾಮತರಂತೆ ಜಗತ್ತು ನೋಡೋಣ ಎಂದು ಹೊರಟೆ, ಹೊರಗೆ ಕಣ್ಣಿಟ್ಟು ಕುಳಿತೆ. ದಿನವೂ ಬೆಳಗ್ಗೆ ಹಾದ ಈ ಹಾದಿಯಲ್ಲಿ ಬದುಕು ಬಿಡಿಸಿದ ಚಿತ್ರಗಳು, ದೃಶ್ಯಗಳು ಕಾಣತೊಡಗಿದವು. ಬೆಳಗಿನ ಆ ಚಳಿಯಲ್ಲಿ ಶಾಲು ಹೊದ್ದು ಸೀಮೆಎಣ್ಣೆಗೆ ಡಬ್ಬಿ ಇಟ್ಟು ಕಾದು ಕುಳಿತ ಜನ ಕಂಡರು. ಮೈಸೂರು ರಸ್ತೆಯಲ್ಲಿ ಮುಂಜಾವಿನ ಚಳಿಗತ್ತಲಲ್ಲಿ, ರಾತ್ರಿ ಇಡೀ ರಸ್ತೆಗೆ ಡಾಂಬರು ಕೆಲಸ ಮಾಡುತ್ತಿದ್ದ ಮಸುಕು ವ್ಯಕ್ತಿಗಳು ಕಂಡರು. 'ಮೇಲು ಸೇತುವೆ' ದಾಟಿದಂತೆ, ರಸ್ತೆ ಬದಿಯಲ್ಲಿ ಕೇಬಲ್‌ಗಳ ತುಂಡನ್ನೇ ಕಮಾನಾಗಿ ಬಾಗಿಸಿ, ಪ್ಲಾಸ್ಟಿಕ್ ಹೊದಿಸಿ ಕಟ್ಟಿದ ಡೇರೆಯೊಳಗಿಂದ, ಚಳಿಯ ಮುಂಜಾನೆ ಅಳುವ ಕಂದನ ಕಿರುಕಂಠ ಕೇಳಿಸಿತು.

ಎಷ್ಟೋಂದು ಕಂಡಿದ್ವೆ, ಕಂಡಿಲ್ಲದ್ದು. ತಟ್ಟನೆ ನನ್ನೊಳಗಿನ ಖಿನ್ನತೆ ಮರೆಯಾಗಿತ್ತು, ಏನೆಲ್ಲವನ್ನು ಬದುಕು ಕೊಟ್ಟಿರುವಾಗ, ಕಳೆದುಕೊಂಡ ಮುಂಜಾನೆಯ ನಿದ್ರೆಗಾಗಿ ದೂರುವುದು ಅಸಂಬದ್ಧವಾಗಿ ಕಂಡಿತ್ತು. ಕಾಮತರಿಂದ ನಾನು ಜಗತ್ತು ವೀಕ್ಷಿಸುವ ಬಗೆ ಕಲಿತೆ. ಇದೆಲ್ಲ ನಾನೆಂದೂ ಪ್ರಜ್ಞಾಪೂರ್ವಕವಾಗಿ ಕಲಿತದ್ದಲ್ಲ, ಆದರೆ ಅವರೊಡನೆ ಗಂಟೆ ಗಂಟೆಗಳು ಹರಟೆ ಹೊರಟಾಗ, 'ರೀಚಾರ್ಜ್' ಆದ ಅನುಭವ. ಅವರ ಉತ್ಸಾಹ, ಉಲ್ಲಾಸ, ತಮ್ಮ ಆಸಕ್ತಿಗಳ ಬೆನ್ನತ್ತಿ ಹೋಗುವ ಆ ಹುಮ್ಮಸ್ಸು, ಸಾಂಕ್ರಾಮಿಕವಾಗಿ ನನ್ನನ್ನು ಆವರಿಸುತ್ತಿತ್ತು.

ಕಾಮತರಲ್ಲಿ ಇದ್ದ ಆಸಕ್ತಿ ಹವ್ಯಾಸಗಳ ಲೆಕ್ಕ ನನಗೆ ಸಿಕ್ಕಿರಲಿಲ್ಲ. ಅವರ ಮನೆಯ ಕುರ್ಚಿಯ ದಿಂಬುಗಳೆಲ್ಲ, ಅವರ ಬಣ್ಣದ ಚಿತ್ರಗಳ ಸ್ಪರ್ಶ ಪಡೆದಿದ್ದವು. ಜ್ಯೋತ್ಸ್ನಾರ ಸೀರೆಯ ಅಂಚನ್ನು, ಸೆರಗನ್ನು ಅಲಂಕರಿಸಿತ್ತು ಅವರ ಕುಂಚದ ಕಲೆ. ಛಾಯಾಚಿತ್ರಗಳಂತೂ ಅವರು ರೀಲುಗಟ್ಟಲೆ ಹೊಡೆಯುತ್ತಿದ್ದರು. ಅವನ್ನು ಪ್ರಕಟಿಸಿ ಹಣ ಮಾಡುವ ಉದ್ದೇಶದಿಂದ ಅಲ್ಲ, ಅವರು ಬದುಕನ್ನು 'ಹಿಡಿಯ' ಹೊರಟವರು. ಸುಣ್ಣ ಬಣ್ಣ ತುಟಿಗೆ ರಂಗು ಹಚ್ಚಿ ಮೇಕ್‌ಅಪ್ ಮಾಡಿದ ಮುಖಗಳಲ್ಲ, ರಸ್ತೆ ಬದಿಯ ಕಾರ್ಮಿಕರು, ಮನೆಯಿಲ್ಲದ ನಿರ್ಗತಿಕರು, ಮರಕ್ಕೆ ನೇತು ಹಾಕಿದ್ದ ಹಳೆಯ ತೊಟ್ಟಿಲಲ್ಲಿ ಕಿಲಕಿಲ ನಗುವ ಮಗು, ಇಟ್ಟಿಗೆಯ ಭಾರ ತಲೆಯ ಮೇಲೆ ಹೊತ್ತಂತೇ ಇಷ್ಟಗಲ ಮುಗುಳ್ನಕ್ಕು ನೋಡಿದ ಹೆಂಗಳೆಯರು.... ತಮ್ಮ ರೀಲು ರೀಲುಗಳಲ್ಲಿ ಬದುಕನ್ನು ಹಿಡಿದವರು. ಅವರ ಕಣ್ಣ ಹೊಳಪು, ಮುಖದ ಭಾವ ಒಂದೊಂದನ್ನು ವಿವರಿಸಿ ತೋರಿಸುತ್ತಿದ್ದರು. ಬದುಕನ್ನು ಸ್ವೀಕರಿಸಿದ ಮುಖಗಳು, ಬದುಕುಳಿದ ಜೀವಂತಿಕೆ – ಎಲ್ಲವೂ ಕಾಮತರ ಕ್ಯಾಮರಾದಲ್ಲಿ ದಾಖಲು. ಅವರು ತೋರಿಸುತ್ತಿದ್ದ ಒಂದೊಂದು ಫೋಟೋ ಹಿಂದೆಯೂ ಒಂದೊಂದು ಕಥೆಯಿತ್ತು, ಬದುಕಿತ್ತು. ಅದೆಷ್ಟು ರೇಖಾ ಚಿತ್ರಗಳನ್ನು ಕಾಮತರು ಬಿಡಿಸಿದ್ದರು. ಅದೆಷ್ಟು ಊರು ಸುತ್ತಿಬಂದಿದ್ದರು. ತಿರುಗಾಟದ ಚಟದವರು. ಅವರ ಬರವಣಿಗೆ ಕೂಡಾ ಎಷ್ಟು ಬಗೆಯದು – ಕೀಟಗಳ ವಿಷಯವೆ, ಸರೀಸೃಪಗಳೆ, ಪ್ರಾಣಿಗಳೆ, ಸಸ್ಯಗಳೆ, ಚಿತ್ರಕಲೆಯೆ, ಕಾವಿಕಲೆಯೆ, ಪರಿಸರವೆ, ಪ್ರವಾಸವೆ – ಎಲ್ಲವೂ ಅವರ ಬರಹದ ವ್ಯಾಪ್ತಿಗೆ ಬರುತ್ತಿದ್ದವು. ಒಬ್ಬ ವ್ಯಕ್ತಿಗೆ ಇಷ್ಟು ಬಗೆಯ ಆಸಕ್ತಿಗಳು ಇರಲು ಸಾಧ್ಯ! ಎನ್ನುವುದೇ ನನಗೆ ಅಚ್ಚರಿ ಆಗುತ್ತಿತ್ತು. ಅವು ಕೇವಲ ಅವರ ಹವ್ಯಾಸಗಳಾಗಿರಲಿಲ್ಲ, ಉತ್ಕಟ ಅಭಿರುಚಿಯಾಗಿ ಬದುಕಿನ ಭಾಗವಾಗಿದ್ದವು. ವಿಜ್ಞಾನ, ಕಲೆ ಮತ್ತು ಸಾಹಿತ್ಯ ಮೂರಕ್ಕೂ ಮನಸೋತ ನನ್ನ ಮನಸ್ಸು ಕಾಮತರನ್ನು ಈ ಕಾರಣಕ್ಕಾಗಿ ತುಂಬ ಮೆಚ್ಚಿಕೊಂಡಿತ್ತು. ಎಲ್ಲವನ್ನೂ ನಿಭಾಯಿಸಬಲ್ಲ, ಮೂರೂ ರಂಗಗಳಲ್ಲಿ ದುಡಿಯಬಲ್ಲ ಅವರ ತಾಕತ್ತು ನನಗೆ ಮೆಚ್ಚುಗೆಯಾಗುತ್ತಿತ್ತು.

ಅವರಿಗೆ ಎಲ್ಲಕ್ಕೂ ಸಮಯ ಹೇಗೆ ಸಿಗುತ್ತಿತ್ತು ಎಂದು ಅನೇಕರಿಗೆ ಅಚ್ಚರಿಯಾಗಬಹುದು. ಅವರು ಹೇಳಿದ್ದರು – 'ನಿಮಗೆ ಇದಕ್ಕೆಲ್ಲ ಸಮಯ ಹೇಗೆ ಸಿಗುತ್ತೆ ಎಂದು ಜನ ಕೇಳುತ್ತಾರೆ. ನಾ ಹೇಳ್ತೀನಿ, ನಮ್ಮ ಮನೆಯಲ್ಲಿ ಟೀವಿ ಇಲ್ಲ, ಅದಕ್ಕೆ ಅಂತ'. ಇದು ದಿಟವಾದ ಮಾತಾಗಿತ್ತು. ಅವರ ಮನೆಯಲ್ಲಿ ಟೀವಿ ಇರಲಿಲ್ಲ, ಫ್ರಿಜ್ ಇರಲಿಲ್ಲ, ಕಂಪ್ಯೂಟರ್ ಆಗಲಿ, ಇಂಟರ್ನೆಟ್ ಆಗಲಿ ಇರಲಿಲ್ಲ, ನಾವು ಅನಿವಾರ್ಯ ಅಂದುಕೊಳ್ಳುವುದಾವುದೂ ಕಾಮತರಿಗೆ ಅಗತ್ಯವಾಗಿ ಕಂಡೇ ಇರಲಿಲ್ಲ. ಹಣವಿಲ್ಲದೆ ಟೀವಿ ಕೊಳ್ಳದ ಬಡವರಿರಬಹುದು. ಆದರೆ ಕೊಳ್ಳುವ ತಾಕತ್ತು ಇದ್ದೂ, ಅದರ ಆಕರ್ಷಣೆಗೆ ಮಣಿಯದಿದ್ದ ವ್ಯಕ್ತಿ – ಕಾಮತರು. 'ಇ-ಮೇಲ್'ನ ಈ ಯುಗದಲ್ಲಿ 'ಸ್ನೋ-ಮೇಲ್'ನಲ್ಲಿ ಪತ್ರಗಳನ್ನು ಮಗನಿಗೆ ಕಳುಹಿಸುತ್ತಿದ್ದರು. ಲಕ್ಷ ಲಕ್ಷ ಜನ ಓದುವ ಅವರ ಪ್ರತಿ ವಾರದ 'ಕಾಮತ್ ಪಾಟ್‌ಪುರಿ'ಗೆ ವಾರ ವಾರವೂ ತಪ್ಪದೇ ಚಿತ್ರ-ಲೇಖನಗಳನ್ನು ಕಳುಹಿಸುತ್ತಿದ್ದರು. ಅಚ್ಚುಕಟ್ಟಾಗಿ ಟೈಪ್ ಆದ ಲೇಖನಗಳು. ಲೇಖನಕ್ಕೆ ಸೂಕ್ತವಾದ ಚಿತ್ರಗಳು.

ಹಣವಿದ್ದೂ, ಕೈಗೆಟಕುವಂತಿದ್ದೂ, ಆರಾಮ, ಐಷಾರಾಮದ ಯಾವ ವಸ್ತುವಿನ ಮೋಹಕ್ಕೆ ಬೀಳದೆ, ಚಟವಿಲ್ಲದೆ ಬದುಕಿದ ವ್ಯಕ್ತಿ – ಕಾಮತ್. ಅವರಿಗಿದ್ದ ಚಟ ಒಂದೇ ಒಂದು – ಫೋಟೋ ಹೊಡೆಯುವ ಚಟ. ಜನವರಿಯಲ್ಲಿ ಅವರ ಮನೆಗೆ ಹೋದಾಗ, ಕಛೇರಿಯಿಂದ ಸುಸ್ತಾಗಿ ಎಣ್ಣೆ ಸುರಿವ ಮುಖದಲ್ಲಿ, ಕೆದರಿದ ತಲೆಯಲ್ಲಿ ಅವರ ಮನೆ ತಲುಪಿ ಯಾವುದರ ಪರಿವೆ ಇಲ್ಲದೆ ಹರಟುತ್ತಿದ್ದೆ, ಕಾಮತರು ಒಂದೇ ಸಮನೆ ಕ್ಯಾಮರಾ ಹಿಡಿದು ನನ್ನ ಮುಖವನ್ನು 'ಕ್ಲಿಕ್' ಮಾಡತೊಡಗಿದರು. 'ಬೇಡಿ ಸರ್, ಬೆವರು ಸುರಿಯೋ ಮುಖದ ಫೋಟೋ ಹೊಡೀಬೇಡಿ' ಎಂದರೂ ಕೇಳದೆ ಇಡೀ ರೀಲು ಮುಗಿಸಿದ್ದರು. ನಂತರ ಅವರೇ ಹೇಳಿಕೊಂಡು ನಕ್ಕಿದ್ದರು – ಯಾರೋ ಹಿತೈಷಿಗಳು ಒಮ್ಮೆ ಕೇಳಿದ್ದರಂತೆ, 'ಅಲ್ಲ ಕಾಸು ಬರಲ್ಲ ಏನಿಲ್ಲ, ಯಾಕಿಷ್ಟು ಊರು ಅಲೀತೀರಾ, ರೀಲು ಖರ್ಚು ಮಾಡ್ತೀರಾ?' ಅಂತ. ಅದಕ್ಕೆ ಕಾಮತರು ಕೊಟ್ಟ ಉತ್ತರ 'ಕೆಲವರಿಗೆ ಕುಡಿಯುವ ಚಟ, ಕೆಲವರಿಗೆ ಇಸ್ಪೀಟು ಚಟ, ನನಗೆ ನೋಡಿ ಈ ಫೋಟೋ ಹೊಡೆಯುವ ಚಟ!.' ಅದು ನಿಜಕ್ಕೂ ಚಟವಾಗಿಯೇ ಇತ್ತು. ಕಾಮತರು ತೆಗೆದ ಕೆದರಿದ ತಲೆಯ ಎಣ್ಣೆ ಸುರಿದ

ಮುಖದ ನನ್ನ ಛಾಯಾಚಿತ್ರಗಳು ನನಗೆ ಅತಿಪ್ರಿಯವಾಗಿವೆ, ಕಾರಣ ಅವು ನನ್ನ ಮುಖಭಾವವನ್ನು, ಜ್ಯೋತ್ಸ್ನಾ ಮತ್ತು ಕಾಮತರೊಡನೆ ಕಳೆದ ಆ ಸಂಜೆಗಳ ಗೆಲುವನ್ನು ಸದಾ ಕಾಲಕ್ಕೂ ಹಿಡಿದು ನಿಲ್ಲಿಸಿವೆ.

ಕಾಮತರಲ್ಲಿದದ್ದು ತುಂಬು ಹಾಸ್ಯ ಪ್ರಜ್ಞೆ, ತಮ್ಮ ಬಗ್ಗೆಯೇ ಹೇಳಿಕೊಂಡು ಭಿಡೆಯಿಲ್ಲದೆ ನಗಬಲ್ಲ ವ್ಯಕ್ತಿ ಅವರು. ಕಾಮತರು ಸದಾ ಕೈಚೀಲ ಹಿಡಿದು ಹೊರಡುತ್ತಿದ್ದರು. ಅವರಿಗೆ ಇಡೀ ಮಲ್ಲೇಶ್ವರವೇ ಪರಿಚಯವಿತ್ತು ಒಂದು ಅಂಗಡಿಯಲ್ಲಿ 'ಸೀಳಿದ ತೆಂಗಿನ ಕಾಯಿ' ತೆಗೆದುಕೊಳ್ಳುವ ಪರಿಪಾಠ ಅವರದು. ದಿನಾ ಬಂದು 'ಸೀಳು ಕಾಯಿ' ತೆಗೆದುಕೊಂಡು ಹೋಗುವ ಇವರ ಬಗ್ಗೆ ಆತನಿಗೆ ಹೆಚ್ಚೇನೂ ತಿಳಿದಿರಲಿಲ್ಲ. ಆದರೆ ಒಂದು ಮುಂಜಾನೆ ಟೀವಿಯಲ್ಲಿ ಕಾಮತರ ಸಂದರ್ಶನ, ಅವರ ಬಗ್ಗೆ ದೀರ್ಘ ವಿವರ. ಮರುದಿನ ಅಂಗಡಿಗೆ ಹೋದರೆ, ಆತನ ಉತ್ಸಾಹವೇನು, 'ಅರೆ! ಸೀಳ್ ಕಾಯಿ ಸ್ವಾಮಿಗಳು ಟೀವಿಯಲ್ಲಿ ಬಂದಿದ್ದರು', ಸುತ್ತಲಿನ ಜನಕ್ಕೆಲ್ಲ ಪರಿಚಯ ಮಾಡಿಕೊಟ್ಟ! ಹೇಳಿಕೊಂಡು ಕಾಮತರು ಬಿದ್ದು ಬಿದ್ದು ನಕ್ಕರು.

ನಾನು ಕಾಮತರನ್ನು ಆಗಾಗ್ಗೆ ಕೇಳುವ ಮಾತಿತ್ತು 'ಅಮೆರಿಕೆಗೆ ಹೋದವರು ಹಿಂತಿರುಗಿ ಬರುವುದು ಅಪರೂಪ. ನಾಲ್ಕು ವರ್ಷ ನ್ಯೂಯಾರ್ಕ್ ನಗರದಲ್ಲಿದ್ದವರು ನೀವು, ಹಿಂತಿರುಗಿ ಭಾರತಕ್ಕೆ ಬಂದ ಬಗ್ಗೆ ನಿಮಗೆ ವಿಷಾದವಿಲ್ಲವೇ?' ಎಂದು. ಅಮೆರಿಕೆಯಲ್ಲಿ ನೆಲೆಸುವುದಿರಲಿ, ಮತ್ತೊಮ್ಮೆ ಭೇಟಿ ಕೊಡಲೂ ಅವರು ಹೋಗಿರಲಿಲ್ಲ. 'ವಿದ್ಯಾರ್ಥಿ ದೆಸೆಯಲ್ಲಿ, ಕಿಸೆಯಲ್ಲಿ ಹಣವಿಲ್ಲದೆ ಅಷ್ಟೆಲ್ಲ ಕಷ್ಟಪಟ್ಟು ಅಮೆರಿಕ ಸುತ್ತಿ ಅಲೆದು ಬಂದಿದ್ದೀರಿ. ಹಣ, ಅನುಕೂಲ ಎಲ್ಲಾ ಇದ್ದು, ಮಗನೂ, ಅಲ್ಲೇ ನೆಲೆಸಿರುವಾಗ ಒಂದೆರಡು ತಿಂಗಳಿಗೆ ಸುತ್ತಲಾದರೂ ಯಾಕೆ ಹೋಗಿಲ್ಲ?' ಕೇಳಿದ್ದೆ. ಅದಕ್ಕೆ ಅವರ ಉತ್ತರ ಸದಾ ಒಂದೇ ಇರುತ್ತಿತ್ತು. 'ಏನಿದೆ ಅಮೆರಿಕೆಯಲ್ಲಿ? ಇಲ್ಲಿ ಬದುಕು ಇದೆ. ಅಲ್ಲಿ ಆಸೆ ಅತಿಯಾಸೆ ಕೊನೆಯೇ ಇಲ್ಲದ ಆಕಾಂಕ್ಷೆ, ಬೇಕು ಬೇಕುಗಳ ಜಗತ್ತಿದೆ' ಎನ್ನುತ್ತಿದ್ದರು. ಅದು ನಿಜವಿತ್ತು. ನನಗೆ ಬೇಕು, ಇನ್ನಷ್ಟು, ಮತ್ತಷ್ಟು, ಮನುಷ್ಯನ ದುರಾಸೆ, ಕೊಳ್ಳುಬಾಕತನದ ಅಪಾಯಗಳ ಬಗ್ಗೆ ಗಂಟೆಗಟ್ಟಲೆ ಮಾತನಾಡುತ್ತಿದ್ದೆವು. 'ನಮ್ಮ ಅಪ್ಪ ಅಜ್ಜರಿಗೆ ವರ್ಷಕ್ಕೆ ಒಂದೆರಡು ಜೋಡಿ ಧೋತರ ಅಂಗಿ ಬೇಕಿದ್ದರೆ ಮೊಮ್ಮಗನಿಗೆ ಕೊನೆಯ ಪಕ್ಷ ಇಪ್ಪತ್ತು ಜೋಡಿ ಬಟ್ಟೆಗಳಾದರೂ 'ಬೇಕೇ ಬೇಕು' ಎನ್ನುತ್ತಿದ್ದ ಕಾಮತರು 'ಬೇಕು'ಗಳನ್ನೆಲ್ಲ ಜಯಿಸಿದ ವ್ಯಕ್ತಿ. ಅವರಿಗೆ ಯಾವುದೂ 'ಬೇಕು' ಎನಿಸಿರಲಿಲ್ಲ, ಅಗತ್ಯವೆನಿಸಿರಲಿಲ್ಲ. ಏನಿಲ್ಲದೆಯೂ ಖುಷಿಯಾಗಿ ಬದುಕಬಲ್ಲ ವ್ಯಕ್ತಿ. ತನ್ನೊಳಗೆ, ತನ್ನೊಡನೆ ಸಂತಸವನ್ನು, ನಗುವನ್ನೂ ಸದಾ ಕೊಂಡೊಯ್ದ ವ್ಯಕ್ತಿ.

ಒಮ್ಮೆ ನನ್ನ ವೈಯಕ್ತಿಕ ಪುರಾಣ ತೆಗೆದು, ಅಲ್ಪತೃಪ್ತರು ಅಂತ ಅಮೇರಿಕೆಯಲ್ಲಿ ನೆಲೆಸಿರುವ ನನ್ನವರ ಅಕ್ಕ ಹೀಗಳೆಯುತ್ತಾರೆ' ಎಂದು ಅವರಿಗೆ ಹೇಳಿದ್ದೆ. 'ಸರ್, ನಮ್ಮ ಭಾರತೀಯರ ಅಲ್ಪತೃಪ್ತತನ ನನಗೆ ದೋಷವಾಗಿ ಕಾಣೋದಿಲ್ಲ, ಮಹತ್ವಾಕಾಂಕ್ಷೆ ಇಲ್ಲದ್ದೂ ನನಗೆ ದೋಷವಾಗಿ ಕಾಣುವುದಿಲ್ಲ. ಯಾವುದೋ ಭಯಂಕರ ಸುಖದ ಬೆನ್ನತ್ತಿ ಹೊರಟ ಜನರೇ ಕಾಣುತ್ತಾರೆ. ಭಾರತೀಯರ ಬದುಕಿನಲ್ಲಿಯೇ ಹಾಸು ಹೊಕ್ಕಾದ, ಏನಿಲ್ಲದಿದ್ದರೂ ಖುಷಿ ಇರಬಲ್ಲ ಆ ಮೂಲಭೂತ ಮನೋಭಾವ ನನಗೆ ನಿಜಕ್ಕೂ ಅದ್ಭುತವಾಗಿ ಕಾಣುತ್ತದೆ. ಮನೆಯಿಲ್ಲ, ಮಠವಿಲ್ಲ ಬೀದಿ ಬದಿಯಲ್ಲೂ ಮುಖದ ತುಂಬಾ ನಗು ತುಂಬಿದ ಮುಖಗಳನ್ನು ಕಾಣುತ್ತೀರಿ, ಅಮೆರಿಕದ ಐಷಾರಾಮದ ಒಡಲಲ್ಲಿ ಕಾಣದ ಮುಖಗಳು' ಎಂದಿದ್ದೆ. ಕಾಮತರು ತಲೆಯಾಡಿಸಿದ್ದರು. ಅಮೆರಿಕದ ಅನುಭವಗಳನ್ನು ಹಂಚಿಕೊಂಡಿದ್ದರು. ತಾವು ಮೂರುವರೆ ದಶಕದ ಹಿಂದೆ ಅಮೆರಿಕೆಗೆ ಹೋದಾಗಿನ ಅನುಭವಗಳನ್ನು ಬರೆದಿಟ್ಟ ದಿನಚರಿಯನ್ನು ಹೊರತೆಗೆದು ತೋರಿಸಿದರು. ಕುಂದು ತಿರುಗಿದ ಪುಟಗಳಲ್ಲಿ ಗುಂಡಾದ ಅಕ್ಷರಗಳು. ಅನೇಕ ವಿಚಾರಗಳನ್ನು ಹಂಚಿಕೊಂಡರು "ಇವೆಲ್ಲವನ್ನೂ ನನ್ನ 'ಮರುಪಯಣ'ದಲ್ಲಿ ಬರೆದಿದ್ದೇನೆ" ಎಂದವರು, ಆಗಷ್ಟೇ ಹೊರಬಂದ ಅವರ ಪುಸ್ತಕವನ್ನು ತೆಗೆದುಕೊಟ್ಟರು. ತಮ್ಮ ಹಸ್ತಾಕ್ಷರವನ್ನು ಹಾಕಿ. ಅದು ಅವರಿಂದ ನಾನು ಪಡೆಯುವ ಕೊನೆಯ ಪುಸ್ತಕ ಎಂದು ಆಗ ನನಗೆ ತಿಳಿದಿರಲಿಲ್ಲ.

'ಜಗತ್ತಿನಲ್ಲಿ ಅತಿ ಅತೃಪ್ತ ಜೀವಿಯೆಂದರೆ ಮಾನವನೊಬ್ಬನೇ. ಆತನ ಸಕಲ ಸಮಸ್ಯೆಗಳು ತನ್ನ ಹಾಗೂ ತನ್ನ ಪೀಳಿಗೆಯ ಸುಖಲೋಲುಪತೆಯ ಮೇಲೆ ಆಧರಿಸಿದ್ದು' ಎಂದು ಹೇಳುತ್ತಿದ್ದ ಕಾಮತರು ನಮ್ಮ ಪರಿಸರದ ಬಗ್ಗೆ ಅತ್ಯಂತ ಕಾಳಜಿ ವಹಿಸಿದವರು. ಅವರು ವೇದಿಕೆಯ ಮೇಲೆ ಮೆರೆದ ಪರಿಸರವಾದಿಯಲ್ಲ, ಆದರೆ ನಿಜ ಬದುಕಿನಲ್ಲಿ ಪರಿಸರ ಪ್ರೇಮಿಯಾಗಿ ಬದುಕಿದವರು. ಸದಾ ಕೈಯಲ್ಲಿ ಒಂದು ಕೈಚೀಲ ಹಿಡಿದು ಮನೆಯಿಂದ ಹೊರಡುತ್ತಿದ್ದ ಕಾಮತರು ಎಂದೂ ಪ್ಲಾಸ್ಟಿಕ್ ಚೀಲಗಳನ್ನು ಹೊತ್ತು ತಂದವರಲ್ಲ.

'ಬಳಸಿದಷ್ಟು ಅರಣ್ಯ ಬೆಳೆಸಬೇಕು, ಮಳೆ ಬೀಳುವಷ್ಟೇ ನೀರನ್ನು ಬಳಸಬೇಕು. ಲಾಭಕ್ಕಾಗಿ ಸಹಜೀವಿಗಳ ಪಾಲನ್ನು ಕಸಿದುಕೊಳ್ಳಲೇ ಬಾರದು' ಎಂದು ನಂಬಿದ ಕಾಮತರದು ಮಿತ ಬಳಕೆ, ಮಿತ ಬದುಕು. ಸರಳ ಜೀವನ ಮತ್ತು ಉನ್ನತ ವಿಚಾರಗಳಲ್ಲಿ ಬದುಕಿದವರು.

ಅಮೆರಿಕದ ನ್ಯೂಯಾರ್ಕ್ ನಗರದಲ್ಲಿ ನಾಲ್ಕು ವರ್ಷ ಕಳೆದು, ಅಲ್ಲಿಯ ಅವಕಾಶಗಳನ್ನು ತೊರೆದು, ಅವರ ಪ್ರತಿಭೆಯನ್ನಾಗಲಿ, ಪಾಂಡಿತ್ಯವನ್ನಾಗಲಿ ಗುರುತಿಸದ, ಅವರ ಓದು-ವಿದ್ಯಾಭ್ಯಾಸಕ್ಕೆ ಸರಿಯಾದ ಒಂದು ಕೆಲಸ ಕೂಡಾ ನೀಡದ ಭಾರತವನ್ನು ಅರಿಸಿ ಹಿಂತಿರುಗಿ ಬಂದು, ಏನೊಂದೂ ಕಹಿ ಇಲ್ಲದೆ ಬದುಕಿದ ಕಾಮತರಲ್ಲಿ ನನಗೆ ಕೇಳಲು ನೂರು ಪ್ರಶ್ನೆಗಳಿದ್ದವು. ಐ.ಐ.ಟಿ., ಐ.ಐ.ಎಸ್ಸಿಗಳಲ್ಲಿ ಡಿಗ್ರಿ ತಗಂಡು, ವಾರಕ್ಕೆ ಆರು ದಿನ ದುಡಿದು ಇಷ್ಟೇನಾ ನೀವು ಗಳಿಸೋದು. ಒಂದು ಗಾಡಿಯೂ ಇಲ್ಲ. ಒಳ್ಳೆ ಕೂಲಿ ಕೆಲಸವಾಯಿತಲ್ಲ. ಬನ್ನಿ ಅಮೆರಿಕೆಗೆ..' ಎನ್ನುತ್ತಿದ್ದ ನನ್ನವರ ಅಕ್ಕನ ಒತ್ತಡ, ಒಂದಷ್ಟು ಕಾಲ ನನ್ನ ಬದುಕಿನ ಮೇಲೆ ಕರಿನೆರಳಾದದ್ದುಂಟು. ಅಮೆರಿಕೆಗೆ ಹೋಗಿ ಹೇರಳವಾಗಿ ಹಣ ಮಾಡದೆ, ಬೆಂಗಳೂರಿನ ಮೂಲೆಯ ನಮ್ಮ ಅಲ್ಪತೃಪ್ತ ಬದುಕಿನ ಬಗ್ಗೆ ಅತ್ತೆ-ಮಾವನವರಿಗೂ ಅಸಮಾಧಾನವಿತ್ತು. ಈ ಒತ್ತಡ ಏಳು ವರ್ಷಗಳ ಹಿಂದೆ ನನ್ನ ಬದುಕಿನಲ್ಲಿ ಒಂದಿಷ್ಟು ಕೋಲಾಹಲ ಎಬ್ಬಿಸಿದ್ದೂ ಉಂಟು. ಇಂತಹ ಸಮಯದಲ್ಲಿ ಕಾಮತರೊಡನೆ ಮಾತುಕತೆಯಲ್ಲಿ ಕಳೆದ ಗಂಟೆಗಳು ನನಗೆ ಬಹಳಷ್ಟು ನೆಮ್ಮದಿಯನ್ನು ಕೊಟ್ಟಿದ್ದವು, ನನ್ನ ಬದುಕಿನ ಆಯ್ಕೆಯ ಬಗ್ಗೆ ಆತ್ಮವಿಶ್ವಾಸವನ್ನು ನೀಡಿದ್ದವು.

ಕಾಮತರು ಕೇವಲ ವ್ಯಕ್ತಿಯಾಗಿ ಅಲ್ಲ, ಪತಿಯಾಗಿ, ತಂದೆಯಾಗಿ ಆದರ್ಶವಾಗಿದ್ದರು. ಪತ್ನಿಯ ಉನ್ನತ ಹುದ್ದೆ, ಬಡ್ತಿ ಯಾವುದೂ ಅವರನ್ನು ಕಲಕಿರಲಿಲ್ಲ, ಎಲ್ಲಕ್ಕೂ ಅವರ ಪ್ರೀತಿಯ ಸಹಕಾರವಿತ್ತು. ಹೆಂಡತಿಯ ಸೀರೆ ಸೆರಗಿಗೆ ಬಣ್ಣ ಹಚ್ಚುವುದೂ ಅವರಿಗೆ ಸಂಕೋಚದ ಕೆಲಸವಾಗಿರಲಿಲ್ಲ. ಜಗತ್ತು ಏನೇ ಭಾವಿಸಲಿ, ಅದು ಈ ಪತಿ-ಪತ್ನಿಯರ ನಡುವಿನ ಪ್ರೀತಿಯನ್ನು ಅಲುಗಿಸಿರಲಿಲ್ಲ. ದಿಲ್ಲಿಯಲ್ಲಿ ನನ್ನ ಅತ್ತೆ ಮನೆಯಲ್ಲಿ ನಡೆದ ಘಟನೆಗಳ ಬಗ್ಗೆ ಮಾತನಾಡಿದ್ದೆ, ಹಂಚಿಕೊಂಡಿದ್ದೆ, ಮತ್ತೊಮ್ಮೆ ನಮ್ಮ ಬದುಕಿನ ಬಗ್ಗೆ ಸ್ಪಷ್ಟತೆ ಮೂಡಿ ನಾನು ಹಿಂತಿರುಗಿದ್ದೆ. ನನ್ನ ಆಯ್ಕೆ ತಪ್ಪಿರಲಿಲ್ಲ. ಅಮೆರಿಕ, ನಾನು ಬಯಸಿದ ಬದುಕಾಗಿರಲಿಲ್ಲ.

ಐದು ವರ್ಷಗಳ ನಂತರ ಅಮೇರಿಕ ಸುತ್ತಿ ಹಿಂತಿರುಗಿ ಬಂದಿದ್ದೆ. ಅಂದು ಕಾಮತರೊಡನೆ ನನ್ನ ಪ್ರವಾಸದ ಬಗ್ಗೆ ಹೇಳುತ್ತಾ – 'ಜೂಜು ಕುಡಿತ ಮಾತ್ರ ಚಟ ಅಂದುಕೊಳ್ಳುತ್ತೇವೆ. ಸರ್, ಹಣಗಳಿಕೆ ಕೂಡಾ ಒಂದು ಚಟವಾಗಬಲ್ಲದು' ಎಂದಿದ್ದೆ. ಕಾಯಿಲೆಯಿಂದ ನರಳುತ್ತಾ ಮಲಗಿದ್ದ ತಾಯಿ ಮನೆಯಲ್ಲಿ, ಮಗಳು ಗಂಟೆಗಿಷ್ಟು ಡಾಲರ್‌ಗಳಿಸುವ ಬೇಬಿ ಸಿಟ್ಟಿಂಗ್‌ಗೆ ಹೋದ ಕತೆ ಹೇಳಿದ್ದೆ. ಅತ್ಯಾಧುನಿಕ ಆಸ್ಪತ್ರೆಯಲ್ಲಿ, ಏಕಾಂಗಿಯಾಗಿ ಮಲಗಿದ್ದ ಕ್ಯಾನ್ಸರಿನಿಂದ ನರಳುತ್ತಿದ್ದ ಅಕ್ಕ. ತಾವೊಬ್ಬರೆ ಹೆಲಿಕಾಪ್ಟರಿನಲ್ಲಿ ಹಾರಿ ವಾಷಿಂಗ್ಟನ್‌ನ ಆಸ್ಪತ್ರೆಗೆ ದಾಖಲಾಗಿ, ಶಸ್ತ್ರ ಕ್ರಿಯೆಗೆ ಒಪ್ಪಿಸಿಕೊಂಡು, ಅನಾಸ್ತೇಷಿಯಾದಿಂದ ಎದ್ದು ಕಣ್ಣು ಬಿಟ್ಟು, ತಾವೇ ಸುಧಾರಿಸಿಕೊಂಡು ಹಿಂತಿರುಗಿದ ಕತೆಯನ್ನೆಲ್ಲ ಅತ್ತಿಗೆ ಹೇಳಿಕೊಂಡಾಗ ಮನಸ್ಸಿಗೆ ಎಲ್ಲಿಲ್ಲದ ನೋವಾಗಿತ್ತು. ಅದೇ ಮರುಕ್ಷಣ ಕೀರ್ತಿನ ಒಂದು ಆರು ತಿಂಗಳಿಗಾದರೂ ಅಮೆರಿಕೆಗೆ ಕಳುಹಿಸು, ನಾನಿಲ್ಲಿ ಕೆಲಸ ಕೊಡಿಸ್ತೇನೆ, ಆರು ತಿಂಗಳು ದುಡಿದರೂ ಅಷ್ಟು ಲಕ್ಷ ಹಣ ಆಗುತ್ತೆ' ಎಂದು ಹಳೆಯ ಕತೆಯನ್ನೇ ತೆಗೆದಾಗ 'ಅಬ್ಬಾ! ಇವರಿಗೆ ಗಳಿಸಿದ್ದಷ್ಟೆ ನೆನಪಿದೆ, ಕಳೆದುಕೊಂಡದ್ದರ ಅರಿವೇ ಇಲ್ಲ' ಎನಿಸಿತ್ತು. ಕಾಮತರೊಡನೆ ನಾನು ಹಂಚಿಕೊಂಡಂತೆ, ಕಾಮತರು ಹೇಳಿದ್ದರು 'ಹಣ, ಅಧಿಕಾರ, ವರ್ಚಸ್ಸು, ಲಾಭ, ಲಾಲಸೆ, ಐಷಾರಾಮ ಇವೇ ಅಮೇರಿಕದ ಬದುಕಿನ ಮೂಲಮಂತ್ರವಾಗಿವೆ. ಹಾಗೆಂದೇ ಅವರು ಸುಖದ ಹಿಂದೆ ಎಷ್ಟೇ ಓಡಿದರೂ ಅದು ಅವರಿಗೆ ಸಿಗೋಲ್ಲ. ಇದ್ದುದರಲ್ಲಿಯೇ ನೆಮ್ಮದಿಯಿಂದ ಬಾಳಲು ಕಲಿತರೆ, ನಮ್ಮ ಮನಸ್ಸಿನ ಶಾಂತಿಯನ್ನು ಯಾರೂ ಕಿತ್ತುಕೊಳ್ಳೋಕೆ ಸಾಧ್ಯವಿಲ್ಲ.' ಇಂದು ಅಮೆರಿಕೆಗೆ ಹೋಗದೆಯೇ, ಅಮೆರಿಕದ ಜೀವನ ಶೈಲಿಯನ್ನು ಆಮದು ಮಾಡಿಕೊಂಡಿದ್ದೇವೆ. ಕೊಳ್ಳುಬಾಕ ಸಂಸ್ಕೃತಿಯ ಎಲ್ಲ ಆಕರ್ಷಣೆಗೆ ಬಲಿಯಾಗುತ್ತಿದ್ದೇವೆ. 'ಬಳಸು ಬಿಸಾಕು' ಸಂಸ್ಕೃತಿ ನಮ್ಮ ಪರಿಸರವನ್ನು ಹಾಳು ಮಾಡುತ್ತಿದೆ. ಗಂಟೆಗಟ್ಟಲೆ ನಾವು ಮಾತನಾಡಿದ್ದೆವು. ಕಾಮತರೊಡನೆ ಹಂಚಿಕೊಂಡ ವಿಷಯಗಳು ನೂರಿದ್ದವು.

ಕಾಮತರಿಗೆ ಭಾರತ ತಮ್ಮ ಪ್ರತಿಭೆಯನ್ನು ಗುರುತಿಸಲಿಲ್ಲ ಎಂಬ ವ್ಯಥೆ ಇರಲಿಲ್ಲ, ಕಹಿ ಇರಲಿಲ್ಲ. ಹೇರಳವಾದ ಹಣ ಗಳಿಕೆಯ ದೇಶವನ್ನು ಬಿಟ್ಟು ಬಂದ ಬಗ್ಗೆ ವಿಷಾದವಿರಲಿಲ್ಲ. ಪತ್ನಿ ತಮ್ಮ ಉದ್ಯೋಗದಲ್ಲಿ ತುತ್ತ ತುದಿಗೇರಿದ ಬಗ್ಗೆ ಅಸೂಯೆ ಇರಲಿಲ್ಲ. ಅವರ ಬದುಕು ನಿಜಕ್ಕೂ ನನಗೆ ಆದರ್ಶವಾಗಿತ್ತು. ನನ್ನೊಳಗೆ ನಮ್ಮ ಬದುಕಿನ ಆಯ್ಕೆಯ ಬಗೆಗಿದ್ದ ಅಲ್ಪಸ್ವಲ್ಪ ಅನುಮಾನಗಳೂ ಕರಗಿ ಹೋದವು. ನನ್ನ ಬದುಕಿನ ಒಂದಿಷ್ಟು ಗೊಂದಲದ, ಖಿನ್ನತೆಯ ಆ ಕ್ಷಣದಲ್ಲಿ ಕಾಮತರೊಡನೆ ಕಳೆದ ಗಂಟೆ ಗಂಟೆಗಳು ಬದುಕಿನ ಕಗ್ಗಂಟುಗಳನ್ನು ಬಿಡಿಸಿದ್ದವು. ಅವರ ಮನೆಯಿಂದ ಹೊರಟಾಗ ಹೆಜ್ಜೆ ಹಗುರಾಗಿತ್ತು, ಮನಸ್ಸಿಗೆ ಉಲ್ಲಾಸವಿತ್ತು, ನಾವು ಆಯ್ದ ಬದುಕಿನಲ್ಲಿ

ಮತ್ತಷ್ಟು ಭರವಸೆ ಮೂಡಿತ್ತು. ಮನೆಗೆ ಬಂದು ಕಾಮತರ ಬಗ್ಗೆ ಕೀರ್ತಿಗೆ ಹೇಳಿದ್ದೆ. ಅವರು ನನ್ನ ಆದರ್ಶವಲ್ಲ, ಕೀರ್ತಿಗೂ ಆದರ್ಶವಾಗಲಿ! ಎಂಬ ಹಂಬಲ. ಪತ್ನಿಯ ಕೆಲಸ, ಬರಹ, ಬಡ್ತಿ ಎಲ್ಲವನ್ನೂ ಖುಷಿಯಿಂದ ಸ್ವಾಗತಿಸ್ಸುವ ವ್ಯಕ್ತಿತ್ವ ಆತನದೂ. ಅಕ್ಕ ಮತ್ತು ಅಪ್ಪನ ಮಾತಿನ ಪ್ರಭಾವದಲ್ಲಿ, ಡಾಲರ್ ಹಿಂದೆ ಅಮೆರಿಕೆಗೆ ಎಲ್ಲಿ ಹೋಗಿಬಿಡುವರೋ! ಎಂಬ ಅಲ್ಪ ಸ್ವಲ್ಪ ಭೀತಿ ಕೂಡಾ ಅಂದು ಮರೆಯಾಗಿತ್ತು.

ಕಾಮತರು ನನ್ನ ವೈಯಕ್ತಿಕ ವಿದೇಶ ಪ್ರವಾಸಗಳಿಗೆ ಬಹಳಷ್ಟು ಪ್ರೋತ್ಸಾಹ ನೀಡಿದ್ದರು. ೧೯೯೭ರಲ್ಲಿ ಇಂಗ್ಲೆಂಡು ಯೂರೋಪಿನ ದೇಶಗಳನ್ನು ಅಲೆದು ಬರಬೇಕೆಂದು ಪ್ರಥಮ ಬಾರಿಗೆ ಹೊರಟಾಗ ಅವರ ಮನೆಗೆ ಮೊದಲು ಹೋಗಿದ್ದೆ. ಅವರಿಂದ ಬಹಳಷ್ಟು 'ಪ್ರಾಕ್ಟಿಕಲ್ ಸಲಹೆಗಳು ಸಿಕ್ಕಿತ್ತು. ಎಲ್ಲಕ್ಕಿಂತ ಮುಖ್ಯವಾಗಿ 'ಕಂಡಕ್ಟೆಡ್ ಟೂರ್ ಬೇಡ, ಮಹಿಳಾ ವಿಜ್ಞಾನಿಗಳ ತಾಣಗಳನ್ನು ನನ್ನಂತೆ ನಾನು ಹುಡುಕಿ ಅಲೆಯಲು ಹೋಗಬೇಕು' ಎಂಬ ನನ್ನ ಪ್ರವಾಸಕ್ಕೆ ಅವರು ಹಂಚಿಕೊಂಡ ಅನುಭವಗಳು ಸ್ಫೂರ್ತಿ ನೀಡಿದ್ದವು. ಅಂದು ನಾನು ಮತ್ತು ಹೇಮಲತಾ, ಅವರ ಮನೆಯಲ್ಲಿ ಗಂಟೆಗಟ್ಟಲೆ ಕಳೆದು ಹುರುಪಿನಿಂದ ಹೊರಟಿದ್ದೆವು. ಕಾಮತರು ತಮ್ಮಲ್ಲಿದ್ದ ಇಂಗ್ಲೆಂಡು, ಯೂರೋಪುಗಳ ಅದೆಷ್ಟು ಪುಸ್ತಕಗಳನ್ನು ಕೊಟ್ಟಿದ್ದರು. ನೆನಪಿಲ್ಲ. ಹೊರಲಾರದ ಹೊರೆ ಹೊತ್ತು ನಾವು ಅವರ ಮನೆಯಿಂದ ಹೊರಬಿದ್ದಿದ್ದೆವು.



ನನ್ನ 'ಒಂದು ಕನಸಿನ ಪಯಣ' ಪುಸ್ತಕ ಬಿಡುಗಡೆಯ ಕಾರ್ಯಕ್ರಮಕ್ಕೆ ನಾನು ಬಯಸಿದ್ದು ಕಾಮತರು ಬರಲೆಂದು. ಜ್ಯೋತ್ಸ್ನಾ 'ನೀವೇ ಕೇಳಿ ಅವರನ್ನು' ಯಾವುದಾದರೂ ಸಮಾರಂಭದಲ್ಲಿ ಕಾಮತರನ್ನು ನೋಡಿದ್ದೀರಾ? ಅವರು ಯಾವ ಕಾರ್ಯಕ್ರಮಕ್ಕೂ ಬರೋಲ್ಲ, ನೀವೇ ಕೇಳಿ' ಎಂದರು. ನಾನು ಕೇಳಿದೊಡನೆ ಕಾಮತರು ಒಪ್ಪಿದ್ದು ನನ್ನ ಭಾಗ್ಯ ಅದೃಷ್ಟ. 'ಮಾನಸ ಪುತ್ರಿ' ಎಂದು ಅವರು ಆತ್ಮೀಯವಾಗಿ ಭಾವಿಸಿದ್ದು ನನ್ನ ಭಾಗ್ಯ ಎಂದು ನನಗೆ ಅನಿಸಿದೆ. ಪ್ರವಾಸವನ್ನೇ ಪ್ರವೃತ್ತಿಯಾಗಿರಿಸಿಕೊಂಡ, 'ನಾನೂ ಅಮೇರಿಕೆಗೆ ಹೋಗಿದ್ದೆ' 'ವಂಗದರ್ಶನ' 'ನಾ ರಾಜಸ್ಥಾನದಲ್ಲಿ', 'ಮಧ್ಯಪ್ರದೇಶ ಮಡಿಲಲ್ಲಿ', 'ಕಾಲರಂಗ' ಮುಂತಾದ ಉತ್ತಮ ಕೃತಿಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ ಕಾಮತರು ನನ್ನ ಪ್ರವಾಸ ಕಥನವನ್ನು ಬಿಡುಗಡೆ ಮಾಡಿದ್ದು ನನಗೆ ಹೆಮ್ಮೆಯ ವಿಷಯವಾಗಿದೆ. ಸಾರ್ವಜನಿಕವಾಗಿ ತಮ್ಮನ್ನು ಬಹಿರಂಗಗೊಳಿಸಿಕೊಳ್ಳಲು ಇಚ್ಛಿಸದೇ ಇರುವ ಈ ಮಹಾನ್ ಲೇಖಕರನ್ನು ಅಂದು ನಾವು 'ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ'ದ ಗೆಳತಿಯರೂ, 'ಮಹಿಳಾ ಸಾಹಿತ್ಯಿಕ'ದ ಹನುಮಾಕ್ಷಿಯವರು ಎಳೆತಂದು ಭಾಷಣ ಮಾಡಿಸಿದ್ದು, ನಮ್ಮ ನೆನಪಲ್ಲಿ ಸವಿಯಾಗಿ ಉಳಿದಿದೆ. ನನ್ನ ಬರಹದ ಬದುಕಿನ ಒಂದು ಅಪೂರ್ವ ದಿನ ಅದಾಗಿತ್ತು.

ಕಳೆದ ವರ್ಷ ನಾನು ಉತ್ತರ ಅಮೆರಿಕ, ದಕ್ಷಿಣ ಅಮೆರಿಕದ ಪೆರು ಬ್ರಜಿಲ್ ಎಂದು ಹೊರಟಾಗ, ಅವರ ಮನೆಗೆ ಮತ್ತೆ ಓಡಿದ್ದೆ. 'ದಕ್ಷಿಣ ಅಮೇರಿಕ ನಾನು ನೋಡಿಲ್ಲ, ಆದರೆ ಅಮೆರಿಕದ ಅನುಭವಗಳನ್ನು ಹೇಳುತ್ತೇನೆ ಕೇಳಿ' ಎಂದು ಹಂಚಿಕೊಂಡಿದ್ದರು. 'ನಾನೂ ಅಮೆರಿಕೆಗೆ ಹೋಗಿದ್ದೆ' ಪುಸ್ತಕ ನೀಡಿದರು. ಅಮೇರಿಕದ ಬಗ್ಗೆ ನಾನು ಎಷ್ಟೋ ಪುಸ್ತಕಗಳನ್ನು ಓದಿದ್ದೆ. ಅಮೆರಿಕೆಗೆ ಮಗಳ ಬಾಣಂತನಕ್ಕೋ, ಮಗ ಇದ್ದಾನೆ ಎಂದೋ ಹೋಗಿ ನಾಲ್ಕು ತಿಂಗಳಿದ್ದರೂ, ನಾಲ್ಕು ಜಾಗ ನೋಡದೆ ಹಿಂತಿರುಗಿ ಬಂದು, ಅಲ್ಲಿಯ ಕಾರು, ಮಾಲುಗಳ ವೈಭವವನ್ನು ಹೊಗಳಿ ಹೊಗಳಿ ಭಾರತದ ಬಗ್ಗೆ ಕೀಳರಿಮೆ ಬೆಳೆಸಿಕೊಂಡವರ ಮಾತು, ಬರಹಗಳನ್ನು ನೋಡಿದ್ದೆ. ೨೦೦೧ರಲ್ಲಿ ಅಮೆರಿಕೆಗೆ ಹೋದ ನನ್ನ ಅನುಭವಗಳು, ಮೂರೂವರೆ ದಶಕಗಳ ಹಿಂದಿನ ಕಾಮತರ ಅನುಭವಗಳಿಗೆ ಎಷ್ಟು ನಿಕಟವಾಗಿತ್ತು ಎಂದು ಆಶ್ಚರ್ಯವಾಯಿತು. ಅಮೆರಿಕದ ಯಾಂತ್ರಿಕ ಪ್ರಗತಿಯನ್ನು, ಸಿರಿವಂತಿಕೆಯನ್ನು ಮಾತ್ರ ಮನಮುಟ್ಟುವಂತೆ ವಿವರಿಸುತ್ತಾರೆ, ಇದರಿಂದ ಜನರು ಅಮೆರಿಕ ಭೂಲೋಕದ ಸ್ವರ್ಗ ಎಂದು ನಂಬಿ ಏನೇನೋ ಕನಸು ಕಟ್ಟಿಕೊಂಡು ಹೋಗುತ್ತಾರೆ. ಅಮೇರಿಕೆಗೆ ಹೋಗಿ ನಿರಾಶರಾದರೆ ಆಶ್ಚರ್ಯವೇನಿಲ್ಲ. ಅಮೆರಿಕೆಗೆ ಹೋಗಿ ಬಂದವರು ಹೇಳಿದ್ದು, ಬರೆದದ್ದು ಸುಳ್ಳೆಂದಲ್ಲ. ಆದರೆ ಹೆಚ್ಚಿನ ಬರಹಗಳು ಕುತೂಹಲ ಕೆರಳಿಸುವಂತಹವು, ವಾಸ್ತವಿಕತೆಯಿಂದ ದೂರವಾದವು. ಅವು ಅವರ ವೈಯಕ್ತಿಕ ಅನುಭವಗಳ ಶೇಕಡಾ ಹತ್ತರಷ್ಟು ಮಾತ್ರ ಇರಬಹುದು ಎಂದರೆ ಅತಿಶಯೋಕ್ತಿಯಾಗಲಾರದು. ಹೇಳದಿದ್ದ, ಬರೆಯಲಾಗದ ಎಷ್ಟೋ ಕಟು ಅನುಭವಗಳಿರುತ್ತವೆ...' ಕಾಮತರು ತಮ್ಮ ಪ್ರವಾಸ ಕಥನದಲ್ಲಿ ಬರೆದಿದ್ದ ಮಾತುಗಳು ನೂರಕ್ಕೆ ನೂರು ಸತ್ಯವಿತ್ತು. ಮೂರು ದಶಕಕ್ಕೂ ನಂತರ ಅಮೆರಿಕೆಗೆ ಹೊರಟಾಗಲೂ, ಇದ್ದ ಬದ್ದ ಪ್ರವಾಸ ಕಥನಗಳನ್ನು ಓದಿದ್ದೆ, ಅವರ ಮಾತು ಇಂದಿಗೂ ಸತ್ಯವಾಗಿತ್ತು. ಸ್ವಾಮಿಯವರ 'ಅಮೆರಿಕೆಯಲ್ಲಿ ನಾನು'

ಮೂರ್ತಿರಾವ್ ಅವರ 'ಅಪರವಯಸ್ಕನ ಅಮೇರಿಕ ಯಾತ್ರೆ' ಮತ್ತು ಕಾಮತರ 'ನಾನೂ ಅಮೆರಿಕೆಗೆ ಹೋಗಿದ್ದೆ' ಬಿಟ್ಟರೆ ಬಹುಪಾಲು ಪ್ರವಾಸ ಕಥನಗಳು ಅಲ್ಲಿಯ ವೈಭವಕ್ಕಷ್ಟೇ ಮಾರು ಹೋದವು.

ಅಮೆರಿಕನ್ನರ ಸುಖದ ಕಲ್ಪನೆಯ ಬಗ್ಗೆ ತಮ್ಮ ಪುಸ್ತಕದಿಂದ ಉಲ್ಲೇಖಿಸುತ್ತಾ ಕಾಮತರು ಹೇಳಿದ್ದರು. 'ನೀನು ಸಿಗರೇಟು ಸೇದುವುದಿಲ್ಲ, ಸೆರೆ ಕುಡಿಯುವುದಿಲ್ಲ, ವಾರಾಂತ್ಯದಲ್ಲಿ ವಿಶ್ರಮಿಸುವುದಿಲ್ಲ. ಇಂತಹ ನೀರಸ, ಕಷ್ಟಮಯ ಜೀವನ ನಡೆಸುವದಿದ್ದರೆ ಜೀವಿಸಿಯಾದರೂ ಏನು ಫಲ?' ಎಂದು ಅವರ ಅಮೆರಿಕೆಯ ಸ್ನೇಹಿತರೊಬ್ಬರು ಕೇಳಿದ್ದರಂತೆ. ಕಾಮತರು ಕೊಟ್ಟ ಉತ್ತರ ಅಷ್ಟೇ ಚುರುಕಿನದಾಗಿತ್ತು. 'ಅಮೆರಿಕನ್ನರು ತುಂಬ ವ್ಯಾಪಾರಿ ಮನೋವೃತ್ತಿಯುಳ್ಳವರು. ಪ್ರತಿಯೊಂದು ಕಾರ್ಯಕ್ಕೂ ತನಗೇನು ಲಾಭ ಸಿಗುತ್ತದೆ ಎಂದೇ ಪ್ರಾರಂಭಿಸುತ್ತಾರೆ. ಇನ್ನೊಬ್ಬರಿಗೆ ಒಳಿತು ಮಾಡುವದಿರಲಿ, ತನಗೆ ಲಾಭವಿಲ್ಲದೆ ಯಾವಕೆಲಸಕ್ಕೂ ಕೈ ಹಾಕುವುದಿಲ್ಲ. ನಿಮಗೆ ನಿಮ್ಮದೊಂದು ಸಮಾಜ ಬಿಟ್ಟರೆ ಉಳಿದವುಗಳ ಕಲ್ಪನೆಯಿಲ್ಲ. ಅವನ್ನು ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆ ಕೂಡಾ ಇಲ್ಲ. ಇಡೀ ಜಗತ್ತೇ ನಿಮ್ಮ ನೆರಳಾಗಿ ಬಾಳಬೇಕು ಎನ್ನುತ್ತೀರಿ. ಹೆಣ್ಣೊಂದು ಕಾರಿನಲ್ಲಿ ಹತ್ತಿಸಿಕೊಂಡು ಹೋಗಿ ಚಲನಚಿತ್ರಕ್ಕೋ, ನೃತ್ಯಕೂಟಕ್ಕೋ, ಹೋಟಲಿಗೋ ಕರೆದೊಯ್ದು ಅಲ್ಲಿ ನಿಮ್ಮಂತೆ ಬಂದ ಇನ್ನೂ ಹಲವಾರು ಸ್ನೇಹಿತರೊಂದಿಗೆ ಹಣ ಮತ್ತು ವೇಳೆ ಹಾಳು ಮಾಡಿದರೆ ತೀರಿತು, ನಿಮಗದು ಸಾಮಾಜಿಕ ಜೀವನ ಎನಿಸುತ್ತಿದೆ. ನಾವು ಭಾರತೀಯರು ಆರಾಮ ಶೂರರು. ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆಗಳಿಲ್ಲದಿದ್ದರೂ ಸುಖವಾಗಿ ಹೇಗಿರಬೇಕು ಎಂಬ ದಿವ್ಯಮಂತ್ರ ಕಲಿತವರು. ನಿಮ್ಮಂತೆ ಹಗಲು ರಾತ್ರಿ ದುಡಿದು ಸುಖವನ್ನು ಬೆನ್ನಟ್ಟಿಕೊಂಡು ಹೋಗುವವರಲ್ಲ. ಇದ್ದುದರಲ್ಲಿಯೇ ಸುಖಿಯಾಗಿರಬೇಕೆನ್ನುವವರು. ಅಮೆರಿಕನ್ನರು ತಾವು ಸುಖವೆಂದು ತಿಳಿದದ್ದೇ ಜಗತ್ತಿನ ಸುಖವೆಂದು ನಂಬುತ್ತಾರೆ. ಸುಖವು ಮನಸ್ಸಿನ ಸ್ಥಿತಿಯೇ ಹೊರತು ಬಾಹ್ಯವಸ್ತುಗಳಲ್ಲಿ ಇರುವುದಿಲ್ಲ. ಸಿಗುವುದಿಲ್ಲ...' ಎಂದು ಉತ್ತರಿಸಿದ್ದರು.

ಎರಡು ತಿಂಗಳು ಉತ್ತರ ಮತ್ತು ದಕ್ಷಿಣ ಅಮೆರಿಕಗಳ ಪ್ರವಾಸ ಮುಗಿಸಿ, ಹಿಂತಿರುಗಿ ಬಂದಾಗ ನಾನು ಕಾಮತರಿಗ ಹೇಳಿದ್ದೆ, 'ಸರ್ ಅಮೆರಿಕೆಯ ಉದ್ದಗಲವನ್ನು ಅಲೆದು ಬಂದೆ, ಆದರೆ ನಾನು ಅಮೆರಿಕದ ಬಗ್ಗೆ ಏನೂ ಬರೆಯುವುದಿಲ್ಲ, ನೀವೆಲ್ಲ ಬರೆದಿರುವುದಕ್ಕಿಂತ ಹೆಚ್ಚು ಬರೆಯಲು ಏನೂ ಉಳಿದಿಲ್ಲ. ನಾನು ಹೇಳಬೇಕಾದ್ದನ್ನೆಲ್ಲ ಮುವತ್ತೈದು ವರ್ಷಗಳ ಹಿಂದೆಯೆ ನೀವು ಹೇಳಿಬಿಟ್ಟಿದ್ದೀರಿ. ನಾನು ಪೆರುವಿನ ಬಗ್ಗೆ ಬರೆಯುತ್ತೇನೆ. ಆಂಡೀಸ್ ಪರ್ವತಗಳನ್ನು ಏರಿದ್ದು, ಪೆರುವಿನ ಪವಿತ್ರ ಕಣಿವೆಯಲ್ಲಿ ಇಳಿದದ್ದು, ಅಮೆಜಾನ್ ಕಾಡುಗಳಲ್ಲಿ ರಾತ್ರಿ ಕಳೆದದ್ದು, ಅಮೇಜಾನ್ ನದಿಯ ಮೇಲೆ ೨೮ ಗಂಟೆಗಳ ಕಾಲ ತೇಲಿ ಹೋದ ಅನುಭವಗಳನ್ನು ಬರೆಯುತ್ತೇನೆ' ಎಂದೆಲ್ಲ ಉತ್ಸಾಹದಿಂದ ಬಡಬಡಿಸಿದ್ದೆ. ಇಂದು ನನ್ನ ಪ್ರವಾಸ ಕಥನ ಮುಗಿಯುತ್ತಿರುವ ಹೊತ್ತಿನಲ್ಲಿ ಕಾಮತರಿಲ್ಲ. ನನ್ನ ಪ್ರವಾಸಕ್ಕೆ ಅಷ್ಟೊಂದು ಪ್ರೋತ್ಸಾಹದ ಮಾತನಾಡಿ, ತಮ್ಮೆಲ್ಲ ಅನುಭವಗಳನ್ನು ಹಂಚಿಕೊಂಡು ಹುರಿದುಂಬಿಸಿದ ಕಾಮತರಿಲ್ಲ.

ಕಾಮತರು ಹೆಜ್ಜೆ ಮೂಡದ ಹಾದಿಯಲ್ಲಿ ನಡೆದವರು. ಭಾರತದ ಜನಸಾಮಾನ್ಯರ ಕತೆ ಹೇಳಿದವರು, ಇದುವರೆಗೂ ಜಗತ್ತಿಗೆ ತಿಳಿದಿರದ ಭಾರತದ ವೈವಿಧ್ಯವನ್ನು ಇವರಷ್ಟು ಸೊಗಸಾಗಿ ಇಂಟರ್ನೆಟ್‌ನಲ್ಲಿ ಮೂಡಿಸಿದ ಮತ್ತೊಬ್ಬ ಭಾರತೀಯ ನನಗೆ ಕಂಡಿಲ್ಲ. ಬರೀ ಪತ್ರಗಳಲ್ಲಿ ಅಲ್ಲ, ಚಿತ್ರಗಳಲ್ಲಿ, ಕಲೆ, ಚಿತ್ರಕಲೆ, ಛಾಯಾಕಲೆ, ಬರವಣಿಗೆ, ಪ್ರವಾಸ, ವಿಜ್ಞಾನ ಎಲ್ಲದರಲ್ಲೂ ಆಸಕ್ತಿ ಮತ್ತು ಅಗಾಧ ಪ್ರತಿಭೆ ಇದ್ದ ಕಾಮತರ ಸರಿಸಾಟಿ ನನಗೆ ಕಂಡಿಲ್ಲ. ಅಂತಹ ಅದ್ಭುತ ಪ್ರತಿಭೆಯ ವ್ಯಕ್ತಿ, ಯಾವೊಂದೂ ರಾಜಕೀಯ ಮಾಡದೆ, ಪ್ರಶಸ್ತಿ ಪುರಸ್ಕಾರಗಳಿಗೆ ಹಪಹಪಿಸದೇ, ಇವರ ಹತ್ತರಲ್ಲಿ ಒಂದು ಭಾಗ ಪ್ರತಿಭೆ ಇಲ್ಲದವರೂ ವೇದಿಕೆಯಲ್ಲಿ ಮೆರೆದಾಡುವಾಗ, ಒಂದಿಷ್ಟೂ ಕಹಿ ಇಲ್ಲದೆ ಬದುಕಿದ, ಸಿಹಿ ಮನಸ್ಸಿನ ನಗು ಮುಖದ ಕಾಮತರು ಸದಾ ನನ್ನ ನೆನಪಿನಲ್ಲಿ ಹಸಿರಾಗಿ ಉಳಿದಿದ್ದಾರೆ.

❑

# ನಾ ಕಂಡ ಕಾಮತರು

**ಎಸ್. ಸೌಮ್ಯ**

ಒಂದು ದಿನ ನಮ್ಮ ಮನೆಗೆ "ಹೊಸ ವರುಷದ ಶುಭಾಶಯಗಳು" ಎಂದು ಹಾರೈಸುತ್ತಾ ಒಂದು ಕಾರ್ಡು ಬಂತು. ನೋಡಲು ಬಹಳ ಸುಂದರವಾಗಿದ್ದ ಕಾರ್ಡನ್ನು ಯಾರು ಮಾಡಿದ್ದರೋ ಎಂದು ನಾನು ಅಂದುಕೊಳ್ಳುತ್ತಿರುವ ಹಾಗೆಯೇ ಅಪ್ಪ ಹೇಳಿದರು- "ಇದನ್ನು ಕೃಷ್ಣಾನಂದ ಕಾಮತ್ ಎಂಬ ನನ್ನ ಸ್ನೇಹಿತರು ಮಾಡಿದ್ದು. ಈ ಶುಭಾಶಯ ಪತ್ರಗಳನಷ್ಟೇ ಅಲ್ಲ ಅವರು ಚಿತ್ರಗಳನ್ನೂ ಚೆನ್ನಾಗಿ ಬಿಡಿಸುತ್ತಾರೆ. ನನ್ನ ಥೀಸಿಸ್‌ನಲ್ಲಿಯೂ ಇವರು ಬಿಡಿಸಿದ ಚಿತ್ರಗಳೇ ಇರುವುದು".

ಅಪ್ಪನ ಥೀಸಿಸ್ ಅಂದರೆ ಜ್ಞಾಪಕ ಬಂತು- ಅದರಲ್ಲಿನ ಒಂದು ವಿಷಯವೂ ನನಗೆ ಅರ್ಥವಾಗುತ್ತಿರಲಿಲ್ಲ. ಆದರೆ ಪುಸ್ತಕದ ಕೊನೆಯಲ್ಲಿ ಮಾತ್ರ, ಕತ್ತಿ, ಗುರಾಣಿ ಹಿಡಿದ ಸೈನಿಕರು, ಹಲವಾರು ರೀತಿಗಳಲ್ಲಿ ಕೇಶಾಲಂಕಾರ ಮಾಡಿಕೊಂಡ ಪುರುಷರು ಮೊದಲಾದ ಚಿತ್ರಗಳನ್ನು ನೋಡುವ ಮೋಜಿನಿಂದ ಆಗಾಗ comics ತಿರುವಿ ಹಾಕಿದ ಹಾಗೆ ನೋಡುತ್ತಿದ್ದೆ. ಆದ್ದರಿಂದ ತಕ್ಷಣ ಅವರ ನೆನಪು ಹೊಳೆಯಿತು.

ಪ್ರತಿ ವರ್ಷ ಬೇಸಿಗೆಯ ರಜೆಯಲ್ಲಿ ಬೆಂಗಳೂರಿಗೆ ಹೋದಾಗ ಅಪ್ಪ ನನ್ನನ್ನೂ, ತಂಗಿಯನ್ನೂ ಅವರ ಮನೆಗೆ ಕರೆದುಕೊಂಡು ಹೋಗುತ್ತಿದ್ದರು. ಅವರ ಮನೆಗೆ ಹೋಗುವೆವು ಅಂತ ತಿಳಿದ ತಕ್ಷಣ ಅಂದಿನ ಆಟವನ್ನೆಲ್ಲಾ ಬೇಗ ಮುಗಿಸಿ ಉತ್ಸಾಹದಿಂದ ತಯಾರಾಗುತ್ತಿದ್ದೆವು. ಅವರ ಮನೆಗೆ ಹೋದಾಗಲೆಲ್ಲಾ ಅವರು ನಮಗೆ ರುಚಿರುಚಿಯಾದ ಮಿಠಾಯಿ, ತಿಂಡಿ ತಪ್ಪದೆ ಕೊಡುತ್ತಿದ್ದುದರ ಜೊತೆಗ ಪ್ರತಿ ಸಲವೂ ನಮ್ಮ ಫೋಟೋಗಳನ್ನೂ ಸಹ ತೆಗೆಯುತ್ತಿದ್ದರು. ಹೀಗಾಗಿ ಕಾಮತರ ಮನೆಗೆ ಹೊರಡೋಣವೆಂದರೆ ಎಲ್ಲಿಲ್ಲದ ಉತ್ಸಾಹ. ಕಾಮತರೊಡನೆ ಅಪ್ಪ ಏನೋ ಚರ್ಚಿಸುವಾಗ ಕಾಮತರು ನಮಗೆ ಬೇಜಾರಾಗದಂತೆ ನೋಡಿಕೊಳ್ಳುತ್ತಿದ್ದರು. ಅವರು ಬರೆದ ಚಿತ್ರ, ತೆಗೆದ ಛಾಯಾ ಚಿತ್ರಗಳು ಎಲ್ಲವನ್ನೂ ಮುಂದಿಡುತ್ತಿದ್ದರು. ಆ ಚಂದವಾದ ಚಿತ್ರಗಳನ್ನು ನೋಡುತ್ತಾ ಆ ಮನೆಯಲ್ಲಿ ಎಷ್ಟುಹೊತ್ತು ಇರುತ್ತಿದ್ದರೂ ಸಮಯದ ಅರಿವೇ ಇರುತ್ತಿರಲಿಲ್ಲ. ಅಪ್ಪ ಹೇಳುತ್ತಿದ್ದರು-"ಕಾಮತರು scientific photography ಮಾಡುತ್ತಾರೆ. ಅವರು ಅಮೆರಿಕೆಯಲ್ಲಿ ಕೀಟಶಾಸ್ತ್ರವನ್ನು ಅಧ್ಯಯನ ಮಾಡಿರುವ ವಿಜ್ಞಾನಿ, ಒಳ್ಳೆಯ ಪುಸ್ತಕಗಳನ್ನು ಬರೆದಿರುವ ಲೇಖಕರೂ ಹೌದು." ಎಂದು ಒಮ್ಮೆ 'ನಾನೂ ಅಮೇರಿಕೆಗೆ ಹೋಗಿದ್ದೆ' ಎಂಬ ಪುಸ್ತಕವನ್ನು ನನ್ನ ಕೈಗಿತ್ತರು. ಸಾಧಾರಣವಾಗಿ ಪ್ರವಾಸ ಕಥನವೆಂದರೆ -ಆ ಜಾಗ ಎಷ್ಟು ಸುಂದರವಾಗಿದೆ. ಈ ಪ್ರದೇಶ ಎಷ್ಟು ಅದ್ಭುತವಾಗಿದೆ ಎನ್ನುವ ಹೊಗಳಿಕೆಗಳೇ ತುಂಬಿರುತ್ತವೆ. ಇನ್ನು ಅಮೆರಿಕೆಯ ಕುರಿತ ಪುಸ್ತಕವೆಂದರೆ ಹೇಳಲೇಬೇಕಾಗಿಲ್ಲ! ಆದರೆ ಈ ಪುಸ್ತಕದಲ್ಲಿ ಉತ್ಪ್ರೇಕ್ಷೆಗೆ ಅವಕಾಶವೇ ಇಲ್ಲದಂತೆ ವಾಸ್ತವಿಕತೆಯನ್ನು ಯಥಾತಥವಾಗಿ ಪ್ರತಿಬಿಂಬಿಸಲಾಗಿದೆ. ಕೇವಲ ಈ ಒಂದು ಕೃತಿಯಲ್ಲಷ್ಟೇ ಅಲ್ಲ-ಅವರ ವಂಗದರ್ಶನ, ನಾ ರಾಜಸ್ಥಾನದಲ್ಲಿ ಮೊದಲಾದವುಗಳಲ್ಲಿಯೂ ಕೂಡ ಇಷ್ಟೇ ನಿಖರವಾದ ನಿರೂಪಣೆ ಇದೆ.

ಕಾಮತರು ಕೀಟಶಾಸ್ತ್ರಜ್ಞರು ಎಂದು ತಿಳಿದಾಗ ನನಗೆ ಅಚ್ಚರಿಯಾಯಿತು. ನನ್ನಲ್ಲಿ ಒಂದು ಅನಿಸಿಕೆ ಇತ್ತು – ಒಂದು ತರಹದ Mind set ಅಂತಲೂ ಹೇಳಬಹುದು – ಈ ಹುಳುಗಳಿಗೆ, ಕೀಟಗಳಿಗೆ ಮನುಷ್ಯರನ್ನು ಕಚ್ಚುವುದು, 'ಕೀಟ'ಲೇ ಮಾಡುವುದು ಬಿಟ್ಟು ಇನ್ನು ಯಾವ ಉಪಯೋಗಕರವಾದ ವಿಷಯಗಳೂ ಗೊತ್ತಿಲ್ಲವೆಂದು. 'ಕೀಟ'ಲೆ ಮಾಡುವುದರಿಂದಲೋ ಏನೋ ಕೀಟಗಳು ಎಂದು ಹೆಸರು ಬಂದಿರಬಹುದು! ಅಂತಹ ಪುಟ್ಟ ಕೀಟಗಳ ಬಗ್ಗೆ ಏನು ಅಧ್ಯಯನ ಮಾಡಬಹುದು ಎಂದೆನಿಸುತ್ತಿತ್ತು. ನನಗಂತೂ ಈ ವಿಷಯ ತಮಾಷೆಯಾಗಿ ಅನ್ನಿಸುತ್ತಿತ್ತು.

ರಜೆಯಲ್ಲಿ ಒಂದುದಿನ ಕಪಾಟಿನಲ್ಲಿದ್ದ ಕೀಟಪ್ರಪಂಚ ಎಂಬ ಪುಸ್ತಕ ಸಿಕ್ಕಿತು. ಕೀಟಗಳ ಬಗ್ಗೆಯೇ ಪ್ರತ್ಯೇಕವಾಗಿ ಆ ಪುಸ್ತಕವನ್ನು ಬರೆಯಲಾಗಿತ್ತು. "ಒಂದು ಪುಸ್ತಕದ ತುಂಬಾ ಏನಿರುತ್ತೋ-ಕೀಟಗಳ ಬಗ್ಗೆ ಬರೆಯುವುದಕ್ಕೆ" ಎಂದುಕೊಳ್ಳುತ್ತಲೇ ಆ ಪುಸ್ತಕವನ್ನು ಓದಲು ಶುರುಮಾಡಿದೆ. ಕೊನೆಯ ಪುಟಮುಗಿಸುವವರೆಗೂ ಪುಸ್ತಕವನ್ನು ಬಿಡಲಾಗಲಿಲ್ಲ. ಅಮೆರಿಕೆಯಲ್ಲಿ ಅಧ್ಯಯನ ನಡೆಸಿದ ವಿಜ್ಞಾನಿ ತಾವೆಂದು ವೈಜ್ಞಾನಿಕ ಪರಿಭಾಷೆಯಲ್ಲಿ ಕ್ಲಿಷ್ಟವಾಗಿ ಬರೆದು ಇಲ್ಲದ ಕಷ್ಟವನ್ನು ಕೊಟ್ಟಿರಲಿಲ್ಲ. ಮಕ್ಕಳಿಗೆ ಕೂಡಾ ಅರ್ಥವಾಗುವ ಹಾಗೆ ಬರೆದಿದ್ದರು.

"ಕಾಗೆಯ ಕಾಯಕ" "ಪ್ರಾಣಿ ಪರಿಸರ" ಕೂಡ ಇದೇ ಶೈಲಿಯಲ್ಲಿ ಇರುವ ಕೃತಿಗಳು – ಅವರ ಪುಸ್ತಕಗಳಲ್ಲಿ ಮುಖಪುಟ ಹಾಗೂ ಚಿತ್ರಗಳೂ ಅವರದ್ದೇ ಆಗಿರುತ್ತವೆ. ವಿಜ್ಞಾನವನ್ನು ಜನಪ್ರಿಯಗೊಳಿಸುವುದು ಇಷ್ಟು ಸುಲಭವೇ ಎಂದು ಇವರ ಕೃತಿಗಳನ್ನು ಓದಿದನಂತರ ಅನಿಸದಿರಲಾರದು.

❋ ❋ ❋

ನಮ್ಮ ಕಾಲೇಜಿನಲ್ಲಿ ಡಿಗ್ರಿಯ ಜೊತೆ ಮಾಡಬಹುದಾದ ಆನರ್ಸ್ ಕೋರ್ಸ್‌ಗಳಲ್ಲಿ ಕೀಟಶಾಸ್ತ್ರವೂ ಇದೆಯೆಂದು ತಿಳಿಯಿತು. ಕಾಮತರ ಕೀಟಪ್ರಪಂಚ ಓದಿದ ಮೇಲೆ ನನ್ನಲ್ಲಿ ಆಸಕ್ತಿಯನ್ನು ಬೆಳೆಸಿಕೊಳ್ಳಲು ಆ ಕೋರ್ಸನ್ನೇ ಆರಿಸಿಕೊಂಡೆ. ದರಖಾಸ್ತು ಫಾರಮಿನಲ್ಲಿ ಒಂದು ಪ್ರಶ್ನೆ ಕೇಳಲಾಗಿತ್ತು – ಈ ಕೋರ್ಸನ್ನು ಆರಿಸಿಕೊಳ್ಳಲು ಕಾರಣವೇನು? ಅದಕ್ಕೆ ನಾನು ಕಾಮತರ ಸ್ಫೂರ್ತಿಯಿಂದ ಎಂದು ಬರೆದೆ. ನಿಜ, ಅವರ ಬಗ್ಗೆ ತಿಳಿದುಕೊಳ್ಳದಿದ್ದರೆ ಅವರು ಬರೆದ ಪುಸ್ತಕ ಓದದಿದ್ದರೆ, ನನಗೆ ಕೀಟಶಾಸ್ತ್ರ ಎನ್ನುವುದೊಂದಿದೆ ಎಂದೂ ಸಹ ತಿಳಿಯುತ್ತಿರಲಿಲ್ಲ. ಈಗೀಗ ತಿಳಿದುಬರುತ್ತಿದೆ. ನನಗೆ ಈ ಕೀಟಗಳ ಲೋಕವೆಷ್ಟು ವಿಸ್ಮಯಕರ ಎಂದು ; ಕಾಮತರಿಗೆ ಈ ಕೀಟಗಳ ಮೇಲೆ ಅಷ್ಟೊಂದು ಒಲವೇಕೆ ಎಂದು !



# ನನ್ನ ಕಲ್ಪನೆಯ ಕೃಷ್ಣಾನಂದರು

**ಕೆ.ಜಿ. ಶ್ರೀಕಂಠದಾನಿ**

## ಅರಿಕೆ

ದಿII ಕೃಷ್ಣಾನಂದ ಕಾಮತರ ಛಾಯಾಚಿತ್ರವೊಂದು ಈಗ ನನ್ನ ಕೈಲಿದೆ. ನಾನು ಅವರನ್ನು ಜೀವಂತವಾಗಿ ನೋಡಿಲ್ಲ. ಆದರೆ ಜೀವಂತ ನೋಡುವುದು ಸಾಧ್ಯವಾಗಿದೆ. ಅವರ ಚಿತ್ರ, ಅವರು ಕ್ಲಿಕ್ಕಿಸಿದ ಚಿತ್ರಗಳು, ಬರವಣಿಗೆಗಳು ನನಗೆ ಸ್ಫೂರ್ತಿಕೊಡುತ್ತವೆಂಬ ಆತ್ಮವಿಶ್ವಾಸ ನನಗಿದೆ. ಅವರ ಜನಪ್ರಿಯ ಕೃತಿಗಳನ್ನಾಧರಿಸಿದ ವ್ಯಕ್ತಿಗತ ವಿಶ್ಲೇಷಣೆಗಳನ್ನು ಇಲ್ಲಿ ನಿಮ್ಮ ಮುಂದಿರಿಸುತ್ತಿದ್ದೇನೆ. ಕಾಮತರ "ಪಶುಪಕ್ಷಿ ಪ್ರಪಂಚ" ಮತ್ತು "ಸಸ್ಯ ಪ್ರಪಂಚ", ಇವು ನಾನು ಆರಿಸಿಕೊಂಡಿರುವ ಕೃತಿಗಳಾಗಿವೆ. ಅವರನ್ನು ನಾನು ಕಂಡಿರುವುದು ಕಲ್ಪನೆಯಲ್ಲಿ ಮಾತ್ರ.

## ಕೃಷ್ಣಾನಂದ ಉದ್ದೇಶ

ದೇಶದ ಬೆಳವಣಿಗೆಗೆ ವಿಜ್ಞಾನದ ಆವಶ್ಯಕತೆ, ವಿಜ್ಞಾನವು ಜನರ ಮನ್ನಣೆ ಪಡೆಯುವುದಷ್ಟೇ ಅಲ್ಲದೆ ಜನರಿಗೆ ಅರ್ಥವೂ ಆಗಬೇಕಾದುದರ ಪ್ರಾಮುಖ್ಯತೆಯನ್ನು ಅರಿತಿದ್ದ ಕಾಮತರು ಈ ಪುಸ್ತಕಗಳನ್ನು ಪ್ರಕಟಿಸಿದರೆಂಬುದು ಸ್ಪಷ್ಟವಾಗಿ ಕಾಣುತ್ತದೆ. ಜೊತೆಗೆ ತಮ್ಮಲ್ಲಡಗಿದ್ದ ಲೇಖನಕಲೆಯನ್ನು ಆಗಾಗ್ಗೆ ಒರೆಗೆ ಹಚ್ಚುವುದೂ ಅವರ ಉದ್ದೇಶವಾಗಿತ್ತೆಂಬುದಕ್ಕೆ ಸೂಕ್ಷ್ಮವಾದ ಸಾಕ್ಷಿಗಳು ದೊರೆಯುತ್ತವೆ. ತಮ್ಮ ಪ್ರಯತ್ನಗಳಿಂದ ಎಲ್ಲರಿಗೂ ಮಾಹಿತಿ ಸಿಗುವಂತಾಗಬೇಕೆಂಬುದು ಅವರ ಮೊದಲ ಆದ್ಯತೆಯಾಗಿತ್ತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

## ಕೃಷ್ಣಾನಂದರ ನಿಲುವು

ತಮ್ಮ ಈ ಎರಡೂ ಪುಸ್ತಕಗಳಲ್ಲಿ ಒಮ್ಮೆಯೂ ಹಿಡಿದ ಪಟ್ಟನ್ನು ಬಿಡದೇ ಇರುವ ಮೂಲಕ ಕಾಮತರು ದೃಢತೆಯನ್ನು ತೋರುತ್ತಾರೆ.

ಉದಾ

**ಕಣ್ತೆರೆದು ನೋಡಿದರೆ, ಆಸಕ್ತಿಯಿಂದ ಕಂಡರೆ ಪರಿಸರದ ಪ್ರಾಣಿಗಳು ಪಕ್ಷಿಗಳುಅದೆಂತಹ ಆನಂದ ನೀಡಬಲ್ಲವು ಎಂದು ಅದನ್ನು ಅನುಭವಿಸಿಯೇ ತಿಳಿಯಬೇಕು......ಇದಕ್ಕೆಲ್ಲ ಒಳ್ಳೆಯ ತಾಳ್ಮೆ ಬೇಕು ಪ.ಪ.ಪ್ರ (ಪು-೧) ೧೯೯೦.**

**ತೆರೆದ ಕಣ್ಣು, ಬಿಚ್ಚು ಮನಸ್ಸು, ಪರಿಸರದಲ್ಲಿ ಆಸಕ್ತಿ ಇವಿಷ್ಟೇ ಇದ್ದರೆ ಸಾಕು ಸ. ಪ್ರ. (ಪು.-೨೬) ೧೯೯೨**

ಈ ಮಾತುಗಳ ನಡುವಣ ಹೋಲಿಕೆಗಳು ನನ್ನ ಮೇಲಿನ ವಾದಕ್ಕೆ ಪುಷ್ಟಿಕೊಡುತ್ತವೆ. ಒಂದು ಪುಸ್ತಕಕ್ಕೂ ಇನ್ನೊಂದಕ್ಕೂ ಸುಮಾರು ಎರಡು ವರ್ಷಗಳ ಅಂತರವಿದೆ. ಅವುಗಳಲ್ಲಿನ ಲೇಖನಗಳ ನಡುವೆ ಐದಕ್ಕೂ ಹೆಚ್ಚು ವರ್ಷಗಳ ಅಂತರವಿದೆ. ಆದರೆ ಕಾಮತರ ಧ್ವನಿಯಲ್ಲಿ ಸ್ವಲ್ಪವೂ ವ್ಯತ್ಯಾಸವಾಗಿಲ್ಲ. ಅವರ ಮೊದಮೊದಲ ಕೃತಿಗಳಲ್ಲಿ ಯಾವ ರೀತಿಯ ಅಳುಕಿತ್ತು ಎಂದು ಅವರೇ ಹೇಳಿಕೊಂಡಿದ್ದಾರೋ ಅವರ ಎಲ್ಲಾ ಕೃತಿಗಳಲ್ಲಿ ಅದೇ ಅಳುಕಿದೆ ಎಂದು ಕಾಣಿಸುತ್ತದೆ. ಹಾಗೆಂದ ಮಾತ್ರಕ್ಕೆ ಅವರಲ್ಲಿ ಬದಲಾವಣೆಗಳಿಗೇನೂ ಕೊರತೆಯಿರಲಿಲ್ಲ. ಎರಡೇ ವರ್ಷಗಳಲ್ಲಿ ತಮ್ಮ ನಿಲುವನ್ನು ಚಿಕ್ಕದಾಗಿ, ಇನ್ನೂ ಅರ್ಥಪೂರ್ಣವಾಗಿ ಹೇಳುವುದರ ಮೂಲಕ ದೊಡ್ಡ ಬೆಳವಣಿಗೆಯನ್ನು ಸಾಧಿಸಿದ್ದಾರೆ.

ಕಾಮತರ ಈ ಪುಸ್ತಕಗಳಲ್ಲಿ ಅವರಲ್ಲಿದ್ದ ಪ್ರಕೃತಿಯ ಬಗೆಗಿನ ಕಾಳಜಿ ಮತ್ತು ಶುಭ್ರ ಆಲೋಚನೆಗಳು ಎದ್ದು ಕಾಣುತ್ತವೆ. "ನಿಮ್ಮ ಕಣ್ಣುಗಳು ಸದಾ ತೆರೆದಿರಲಿ" ಎಂಬ ಸತತವಾದ ಪ್ರಾರ್ಥನೆ, ಕೃಷ್ಣಾನಂದರ ಬಗ್ಗೆ ಬಹಳಷ್ಟು ಹೇಳುತ್ತವೆ.

## ಕೃಷ್ಣಾನಂದರ ಸ್ವಾಭಾವಿಕತೆ

ತಾವು ಪುಸ್ತಕಕ್ಕೆ ಬರೆದ 'ಹಿನ್ನೆಲೆ'ಯಲ್ಲಿ ಕಾಮತರು ಲೇಖನಗಳು ಏಕಪ್ರಕಾರವಾಗಿ ಇಲ್ಲದೇ ಇದ್ದುದಕ್ಕೆ ಕಾರಣಗಳನ್ನು ಕೊಡುತ್ತಾರೆ. ಆದರೆ, ಅವರಿಗೆ ತಿಳಿದೋ ತಿಳಿಯದೆಯೋ ಎರಡಕ್ಕಿಂತ ಹೆಚ್ಚು ಲೇಖನಗಳು ಹಿಂದಿನದಕ್ಕೆ ಹೊಂದಿಕೊಂಡಂತೆಯೇ ಮೂಡಿಬಂದಿವೆ. ಉದಾ : ಅವರು ಪ.ಪ.ಪ್ರ.ನ 'ಲಾಂಗೂಲ ಮಹಾತ್ಮೆ' ಎಂಬ ಲೇಖನದಲ್ಲಿ ಹೀಗೆ ಹೇಳುತ್ತಾರೆ:

**ಎಷ್ಟಾದರೂ ಮಾನವ ಮರವನ್ನು ತ್ಯಜಿಸಿ ಬಂದ ಮಂಗನೇ-ಅಲ್ಲವೇ?** (ಪು-೪೨) -

ಇದು ಜನಸಾಮಾನ್ಯನ ಮಟ್ಟಕ್ಕೆ ಸರಿಯಾದ ವಿವರಣೆಯಾದರೂ, ಆಳವಾಗಿ ನೋಡಿದಾಗ ಅಷ್ಟು ಸರಿಯೆನಿಸುವುದಿಲ್ಲ. ಇನ್ನೊಂದು ಕಡೆ 'ನಮ್ಮ ಆಪ್ತ ಗೊರಿಲ್ಲಾ' ಎಂಬ ಲೇಖನದಲ್ಲಿ (ಅದೇ ಪುಸ್ತಕ),

**ನರವಾನರರೆಲ್ಲಾ ಒಂದೇ ಆದಿವಂಶದಿಂದ ಇಳಿದು ಬಂದವರೆಂದು ಜೀವ ವಿಜ್ಞಾನಿಗಳು ಪರಿಗಣಿಸುತ್ತಾರೆ.** (ಪುಟ-೫೬)

–ಹೀಗೆಂದು ಹೇಳುತ್ತಾರೆ. ಎರಡೂ ಕಡೆ ಹೇಳಿರುವ ವಿಷಯ ಹೆಚ್ಚೂ ಕಡಿಮೆ ಒಂದೇ ಆದರೂ ಹೇಳಿರುವ ರೀತಿ ಬೇರೆ. ಇದು ಅವರ ನೈಜತೆಗೆ ಸಾಕ್ಷಿ. ಜೀವವಿಜ್ಞಾನದಲ್ಲಿ ಪರಿಣತಿ ಪಡೆದ–ಅವರಿಗೆ ಅದೇ ವಿಷಯವನ್ನು ಎಲ್ಲ ಕಡೆಯೂ ಮೇಲ್ಮೈಯಲ್ಲೇ ನೋಡುವುದು ಕಷ್ಟವಾದದ್ದೂ ಸ್ವಾಭಾವಿಕ. ಎರಡೂ ಪುಸ್ತಕಗಳಲ್ಲಿ ಬಲವಂತವಾಗಿ ಬರೆದುದರ ಒಂದೇ ಒಂದು ನಿದರ್ಶನವೂ ಇಲ್ಲ, ಮೂಲತಃ ಅವರ ವ್ಯಕ್ತಿತ್ವ ಸಹ ಸ್ವಾಭಾವಿಕತೆಯ ಮೊರೆಯಲ್ಲಿತ್ತೆಂದು ಸ್ಪಷ್ಟವಾಗಿ ಕಾಣುತ್ತದೆ.

## ಕೃಷ್ಣಾನಂದರ 'ದೇವರು'

ಕಾಮತರಲ್ಲಿ ಎಲ್ಲರೂ ಕಂಡ ಗುಣಗಳಲ್ಲಿ ಪ್ರಕೃತಿ ಆರಾಧನೆಯೂ ಒಂದು. ಅವರು ಈ ವಿಚಾರ ಬಂದಾಗ ಆಸ್ತಿಕರೋ ನಾಸ್ತಿಕರೋ ಹೇಳುವುದು ಕಷ್ಟ. ಆದರೆ ಒಂದಂತೂ ನಿಜ. ಅವರ ದೇವನೇನಾದರೂ ಇದ್ದರೆ ಅದು ಕೇವಲ ನಿಸರ್ಗದ ರೂಪದಲ್ಲಿ ಮಾತ್ರ ಸಾಧ್ಯ. ಇದರ ಬಗ್ಗೆ ಯಾವಾಗ ಪ್ರಸ್ತಾಪ ಮಾಡಿದರೂ ಅವರ ಧ್ವನಿಯಲ್ಲಿ ಇನ್ನಿಲ್ಲದ ಆರ್ದ್ರತೆ ತುಂಬುವುದನ್ನು ಕಾಣಬಹುದು ಉದಾ :

**ಮಾನವನು ನಿರ್ಮಿಸಿದ ಪುತ್ಥಳಿ ಯಾರದು ಎಂದು ಗುರುತಿಸುವದು ಕಷ್ಟಸಾಧ್ಯವಾದರೆ ನಿಸರ್ಗದ ಈ ನೆನಪಿನ ಕಲ್ಲಿನಲ್ಲಿ ಪ್ರತಿಯೊಂದು ಅವಯವವನ್ನು ಗುರುತಿಸಬಹುದಾಗಿದೆ** ಸ.ಪು (ಪು-೩೮)

**ಭೂಗರ್ಭದಲ್ಲಡಗಿರುವ... ರಹಸ್ಯಗಳನ್ನು ಅಷ್ಟು ಸುಲಭದಲ್ಲಿ ಬಯಲು ಮಾಡಲಾಗುವುದಿಲ್ಲ** ಸ.ಪು (ಪು-೪೦)

**ನಿಸರ್ಗ ಸುಲಭದಲ್ಲಿ ಸೋಲನ್ನೊಪ್ಪಿಕೊಳ್ಳುವುದಿಲ್ಲ, ಈ ಗಟ್ಟಿತನ ಇಲ್ಲದಿದ್ದರೆ ಇಂದು ಜಗತ್ತಿನಲ್ಲಿ ಜೀವಿಗಳೇ ಇರುತ್ತಿರಲಿಲ್ಲ,** ಸ.ಪು (ಪು-೪೨)

ನಿಸರ್ಗದ ಮೇಲ್ಮೆಯನ್ನು ಕೊಂಡಾಡಿ, ಸಾರುವಾಗಲೇ ಮನುಷ್ಯನ ಮೂರ್ಖ ಪ್ರಯತ್ನಗಳನ್ನು ಬೆಳಕಿಗೆ ತರುವ ಅವರ ವಿಧಾನ ಮನಸ್ಸಿಗೆ ಹಿಡಿಸುತ್ತದೆ. (ಈ ವಿಷಯವನ್ನು ಮುಂದೆ ಇನ್ನೂ ವಿವರವಾಗಿ ಚರ್ಚಿಸುತ್ತೇನೆ.) ಅವರ ಈ ಪುಸ್ತಕಗಳುದ್ದಕ್ಕೂ ನಾವು ಮನುಷ್ಯನ ಮಿತಿಗಳನ್ನು, ಪ್ರಕೃತಿಯ ಹಿರಿತನವನ್ನೂ ಕಾಣಬಹುದಾಗಿದೆ. ತಾವು ೧೯೬೫ರಲ್ಲಿ ಐನೂರು ರೂಪಾಯಿಗಳನ್ನು ಕೊಟ್ಟು ಕೊಂಡ ಜರ್ಮನಿಯ (ಬರ್ಲಿನ್‌ನಗರ) ಎಕ್ಸಾಕ್ಟಾ ಕ್ಯಾಮೆರಾ, ತಮ್ಮ ಫೋಟೋ ಸ್ಟುಡಿಯೋ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಉತ್ಸಾಹೀ ಬದುಕನ್ನು ಅವರು ಗೌರವದಿಂದ ನೋಡುತ್ತಿದ್ದರೆಂದು ಭಾವಿಸಿದರೆ ಅದು ತಪ್ಪಾಗಲಾರದು.

## ಕೃಷ್ಣಾನಂದರ ಉಪಮೆಗಳು

ಇದು ಬಹು ವಿಸ್ತಾರವಾದ ವಿಷಯ, ಆದರೂ ಹೇಳಲೇಬೇಕಾದಂಥದ್ದು. ಕೆಲವು ಉದಾಹರಣೆಗಳು ಅಗತ್ಯ, ಅವು ಇಲ್ಲಿವೆ:

**ಹಾರುವ ಹಕ್ಕಿಗಳ (೬)..... ಆಗಮನದಿಂದಾಗಿ ಹಲಸಿನಮರವಿಡೀ ಬಿಳೀ ಹೂಗಳನ್ನು ತಳೆದು ನಿಂತಂತೆ ಭಾಸವಾಯ್ತು.** ಪ.ಪ.ಪು (ಪು-೨೪)

**ದೂರದರ್ಶಕದಿಂದ (ಅವನ್ನು) ವೀಕ್ಷಿಸಿದಾಗ, ಯಾವುದೋ ನರ್ತನಕೂಟದಲ್ಲಿ ಪಾಲುಗೊಳ್ಳಲು ಸಿದ್ಧರಾದ ನರ್ತಕಿಯರಂತೆ ಸಿಂಗರಿಸಿಕೊಂಡಿದ್ದಂತೆ ಭಾಸವಾಯಿತು.** ಪ.ಪ.ಪು (ಪು-೨೫)

**ಅಭ್ಯಾಸಕ್ಕಾಗಿಯೋ, ಚಲಚ್ಚಿತ್ರ, ದೂರದರ್ಶನ ವೀಕ್ಷಣೆಗಾಗಿಯೋ ರಾತ್ರಿಯೆಲ್ಲಾ ಎಚ್ಚೆತ್ತು ವಿಳಂಬವಾಗಿ ಏಳುವ ಮಕ್ಕಳಂತೆ ಅರಳುವ ಹೂಗಳೂ ಇಲ್ಲದಿಲ್ಲ** ಸ.ಪು (ಪು-೧೮)

**ಶಾಲಾ ವಿದ್ಯಾರ್ಥಿನಿಯರಂತೆ ಅವೆಲ್ಲ ಹಸಿರು ಸಮವಸ್ತ್ರಧಾರಿಯಾಗಿದ್ದರೂ ವರ್ಣವೈಖರಿಗೆ ಏನೂ ಕೊರತೆಯಿಲ್ಲ. ಸ.ಪು (ಪು-೪೪)**

ಮೇಲೆ ಉಲ್ಲೇಖಿಸಿರುವ ಉದಾಹರಣೆಗಳು ಒಂದು ರೀತಿಯಲ್ಲಿ 'ಪ್ರತಿನಿಧಿಗಳೆಂದೇ ಮತ್ತು ಹೇಳಬೇಕು. ಕಾಮತರ ಹೋಲಿಕೆಗಳ ಮಧ್ಯೆ ಭದ್ರವಾದ ನಂಟಿತ್ತೆಂದು ತೋರುತ್ತದೆ. ಮಕ್ಕಳಿಗೆ ಪಾಠ ಹೇಳಿಕೊಡುವಾಗ 'ಅದರಂತೆ ಇದು', 'ಇದರಂತೆ ಅದು' ಎಂದು ಹೋಲಿಸಿ ವಿವರಿಸುವುದು ಒಂದು ಪರಿಣಾಮಕಾರೀ ವಿಧಾನ. ಮೇಲಿನವು ಕಿರಿಯರಿಗಾಗಿ ಅವರು ಮಾಡಿರುವ ಯಶಸ್ವೀ ಪ್ರಯೋಗಗಳಾಗಿವೆ.

ಹಲಸಿನ ಮರದ ತುಂಬ ಬಿಳಿಹೂಗಳಂತೆ ಕಂಡ ಹಕ್ಕಿಗಳು ಕೃಷ್ಣಾನಂದರಿಗೆ ಪ್ರಾಣಿ ಮತ್ತು ಸಸ್ಯ ಪ್ರಪಂಚಗಳ ಸಂಬಂಧದ ಅರಿವಿತ್ತು ಎಂಬುದನ್ನು ತೋರಿಸುತ್ತವೆ. ಶಾಲಾವಿದ್ಯಾರ್ಥಿನಿಯರು ಸಿಂಗಾರಿ ನರ್ತಕಿಯರು. ಅವರಲ್ಲಿ ದೈನಂದಿನ ಬದುಕಿನ ಬಗೆಗಿದ್ದ ಅಭಿಮಾನವನ್ನು ತೋರುತ್ತಾರೆ. ಪುಸ್ತಕಮುದ್ದಕ್ಕೂ ತಿಳಿಹಾಸ್ಯ ಮಿಶ್ರಿತ ಉಪಮೆಗಳು ಓದುಗರಿಗೆ ಕಚಗುಳಿಯಿಡುತ್ತವೆ.

ಅವರು ರೂಪಕಗಳನ್ನೂ ಲೀಲಾಜಾಲವಾಗಿ ಬಳಸುತ್ತಾರೆ. ಇದಕ್ಕೆ ಅವರು ಕೊಡುವ ಕಿರಣ ಜನ್ಯ ಸಂಯೋಜನಕ್ರಿಯೆ ಅಥವಾ ಸಸ್ಯಗಳ ಆಹಾರ ಉತ್ಪಾದನೆಯ ಕಾರ್ಯವನ್ನು ಅತ್ಯುತ್ತಮ ಉದಾಹರಣೆಯಾಗಿ ಪರಿಗಣಿಸಬಹುದು.

**ಪ್ರಾಣವಾಯುವಿನ ಉತ್ಪಾದನೆ, ಆರ್ದ್ರತೆಯ ವಿಸ್ತರಣೆ ಆಹಾರೋತ್ಪಾದನೆಯ ಚಟುವಟಿಕೆಗಳಿಂದಾಗಿ ಪ್ರತಿಯೊಂದು ಎಲೆಯ ಅಂತರಾಳದಲ್ಲಿ ಕಾರ್ಖಾನೆಯೊಂದು ಅಡಕವಾಗಿರಬಹುದು....ಅವುಗಳಲ್ಲಿರುವ ಪರ್ಣ ಕರ್ಣಗಳೇ ಕಾರ್ಮಿಕವರ್ಗ. ಆದರೆ ಇವು (ಈ ಕಾರ್ಮಿಕವರ್ಗಗಳು) ಮುಷ್ಕರ ಹೂಡುವುದಿಲ್ಲ, ವೇತನದಲ್ಲಿ ಹೆಚ್ಚಳ ಕೇಳುವುದಿಲ್ಲ, ಬೋನಸ್ಸಿಗಾಗಿ ಬಡಿದಾಡುವುದಿಲ್ಲ, ಅಲ್ಲದೆ ದಿನದ ಇಪ್ಪತ್ನಾಲ್ಕು ತಾಸೂ ಕಾರ್ಯನಿರತವಾಗಿರುತ್ತವೆ. (ಸ.ಪು ಪು-೫೩)**

ಇಲ್ಲಿ ಕಾರ್ಖಾನೆಯು Extended metaphor ಆಗಿ ಬಳಸಲ್ಪಟ್ಟಿದೆ.

ಇಲ್ಲಿ ಇನ್ನೊಂದು ಮುಖ್ಯವಾದ ಅಂಶವನ್ನು ಹೇಳದಿದ್ದರೆ ತಪ್ಪಾಗುತ್ತದೆ. ನಾನು ಕೊಟ್ಟಿರುವ ಮೊದಲ ಎರಡು ಉದಾಹರಣೆಗಳು ಒಂದೇ ಲೇಖನದಲ್ಲಿ ಬಂದಂಥವು. ಒಂದು ಉಪಮೆಯಿಂದ ಇನ್ನೊಂದಕ್ಕೆ ಅವರು ಸಾಮಗ್ರಿಯನ್ನು ಬಳಸಿಕೊಂಡು ಸಾಧಿಸುವ ಬೆಳವಣಿಗೆ ಅದ್ಭುತವಾದದ್ದು. ಇದು ಅವರ ನೈಜತೆಗೆ ಇನ್ನೊಂದು ಚಿಕ್ಕ ನಿದರ್ಶನ ಅಷ್ಟೆ.

## ಕೃಷ್ಣಾನಂದರ ಜೀವಿಸಮೂಹ

ಸುತ್ತ ಮುತ್ತ ನಡೆಯುವ ಸಣ್ಣಪುಟ್ಟ ಘಟನೆಗಳನ್ನೂ ಬಿಡದೆ, ಕೂಲಂಕಷವಾಗಿ ಗಮನಿಸಿ ನೋಡಿದ ಫಲರೂಪವಾಗಿ ಅಪರೂಪವಾದ, ಅಚ್ಚರಿಯ ವಿಚಾರಗಳು ಇಲ್ಲಿ ಹೊರಬಂದಿವೆ. ನಾವು ನಿತ್ಯ ನೋಡುವ ಕಾಗೆ, ಓತೀಕಾಟ (ಕ್ಯಾತ). ಅಳಿಲುಗಳಿಂದ ಹಿಡಿದು, ಕವಡೆ, ಕಬ್ಬಾರೆ, ಹೆಜ್ಜಾರ್ಲೆ, ಹುಲಿಗಳವರೆಗೆ ರಸವತ್ತಾದ ಮಾಹಿತಿಗಳು ಇಲ್ಲಿ ಸಿಗುತ್ತವೆ. ಸಾಮಾನ್ಯವಾಗಿ ನಿರ್ಲಕ್ಷ್ಯಕ್ಕೊಳಗಾದ ವಿಷಯಗಳಿಗೆ ಸಿಗುವ ಸಮತೂಕದ ಪ್ರಾಮುಖ್ಯತೆಯಿಂದ ಈ ಕೃತಿಗಳು ವಿಶಿಷ್ಟವಾಗಿ ಮೂಡಿಬರುವಂತಾಗಿದೆ.

ಸಸ್ಯಗಳ ಅಧ್ಯಯನಕ್ಕೆ ಪರಿಣತಿರಹಿತ ಪ್ರಯತ್ನ ಸಾಲದೆಂಬುದು ಗೊತ್ತಿರುವ ವಿಷಯ. ನಿಶ್ಚಲವಾಗಿದ್ದೂ ಕೊಟ್ಟ ತೊಂದರೆಗಳನ್ನೆಲ್ಲಾ ಸಹಿಸಿಕೊಳ್ಳುವವಾದರೂ ಪ್ರಾಣಿಗಳಿಗಿಂತ ಅವುಗಳ ಸಂಗ ದುಸ್ತರ. ಕೃಷ್ಣಾನಂದರೂ ಇದಕ್ಕೆ ಹೊರತಲ್ಲ ಎಂಬುದನ್ನು ಅವರೇ ಸೂಚ್ಯವಾಗಿ ಬಹಳ ಕಡೆ ಹೇಳಿಕೊಳ್ಳುತ್ತಾರೆ. ಆದರೂ, ಪರಿಸರದ ಮನೆಗೆ ಕಾಲಿಟ್ಟವಗೆ ಗೊತ್ತಿರಬೇಕಾದ ನಿಯಮಗಳನ್ನು ಅವರು ಅರಿತಿದ್ದ ಕಾರಣದಿಂದ ಈ ಕಷ್ಟಕರವಾದ ಕೆಲಸಕ್ಕೆ (ಪೂರ್ಣಗೊಳ್ಳದಿದ್ದರೂ) ಉತ್ತಮ ಆರಂಭವನ್ನು ಒದಗಿಸಿದ್ದಾರೆ.

ಮೃದ್ವಂಗಿಗಳ ಬಗ್ಗೆ ಕೃಷ್ಣಾನಂದರ ಅನಿಸಿಕೆಗಳು ಅಪರೂಪವಾದವು. ಓಂಗಿಲೆಗಳ ಜೀವನ ಕ್ರಮವನ್ನು ವಿವರಿಸುವ ವಿಧಾನ ಎಲ್ಲಕ್ಕಿಂತ ಚೆನ್ನಾಗಿ ಕಂಡುಬರುತ್ತದೆ. ಬಿಳಿಹುಲಿಗಳ ಚರಿತ್ರೆಯು ಅಚ್ಚುಕಟ್ಟಾಗಿ ಚಿತ್ರಿಸಲ್ಪಟ್ಟಿದೆ. ಸಾವಯವ (ಜೈವಿಕ) ವಿಕಾಸದ ಹಂತಗಳನ್ನು ಮೀನು ಮತ್ತು ಕಪ್ಪೆಯ ಕಥೆಯನ್ನಾಧರಿಸಿ ಸೊಗಸಾಗಿ ಹೇಳುತ್ತಾರೆ. ಪ.ಪ.ಪ್ರ.(ಪು–೧೪೪) ಪ್ರಾಚ್ಯವಸ್ತುಶಾಸ್ತ್ರ, ಭೂವಿಜ್ಞಾನ ಮುಂತಾದ ಕ್ಷೇತ್ರಗಳು ತಮ್ಮದ್ದೇ ಆದ ವೈಜ್ಞಾನಿಕ ಪದಕೋಶಗಳನ್ನು ಹೊಂದಿವೆ. ಈ ವಿಷಯಗಳ ಯಾವ ಅಪರಿಚಿತ ಕಷ್ಟಕರ ಶಬ್ದಗಳನ್ನೂ ಬಳಸದಂಥ ಪಕ್ಷಿನೋಟ ಸಮಗ್ರವಾಗಿ ದೊರೆಯುತ್ತದೆ. ಸರಳೀಕರಣ ಮಾಡುವ ಸಂದರ್ಭದಲ್ಲಿ ಅರ್ಥಕ್ಕೆ ಯಾವ ಧಕ್ಕೆಯೂ ಬಾರದಂತೆ ನೋಡಿಕೊಂಡಿರುವುದು ಕಾಮತರ ಅಗ್ಗಳಿಕೆ.

ಮನುಷ್ಯರಂತೆಯೇ ಎಲ್ಲಾ ಪ್ರಾಣಿಪಕ್ಷಿಗಳಲ್ಲೂ ಭಾಷೆ, ಭಾವನೆಗಳ ಅಸ್ತಿತ್ವವಿದೆ (ನಗು ಮತ್ತು ಅಳು) ಎಂದು ಹೇಳುವಾಗ ಕೃಷ್ಣಾನಂದರಲ್ಲಿ ಸಹಜೀವಿಗಳ ಬಗ್ಗೆ (ನಿರ್ಜೀವಿಗಳನ್ನು ಸೇರಿ) ಇದ್ದ ಗೌರವದ ಪರಿಚಯವಾಗುತ್ತದೆ. ಇಂದು ಭಾರತದಲ್ಲಿ ೨೫೦ಕ್ಕೂ ಹೆಚ್ಚು ಪ್ರಾಣಿಸಂಗ್ರಹಾಲಯಗಳಿವೆ. ಅವುಗಳಲ್ಲಿ ಬಹುಪಾಲು ಹೀನಾಯ ಸ್ಥಿತಿಯಲ್ಲಿವೆ. ಈ ಪುಸ್ತಕಗಳನ್ನು ಬರೆದದ್ದು ಒಂದು ದಶಕದ ಹಿಂದೆಯೇ ಆದರೂ ಅವುಗಳ ಸ್ಥಿತಿಯಲ್ಲಿ ಅಂಥ ವ್ಯತ್ಯಾಸವೇನೂ ಆಗಿಲ್ಲ. ಕೃಷ್ಣಾನಂದರು ಸಂಗ್ರಹಾಲಯ ವಿರೋಧಿಗಳಲ್ಲದಿದ್ದರೂ ಅದನ್ನು ನಡೆಸಲು ಕೆಲವು ರೀತಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂದು ಹೇಳುತ್ತಾರೆ. ಅಳಿವಿನಂಚಿನ  ಜೀವಿಗಳ ರಕ್ಷಣೆಗೆ ಇವು ಖಂಡಿತಾ ಅಗತ್ಯ ಎಂದು ನಂಬಿ, ಅದನ್ನು ಒಂದು ಕಲೆಯೆಂದೇ ಪರಿಗಣಿಸಿ ಹಲವು ಪರಿಣಾಮಕಾರಿ ವಿಧಾನಗಳನ್ನು ವಿಡಂಬಿಸುತ್ತಾರೆ. ಸಂಗ್ರಹಾಲಯಗಳಲ್ಲಿ ಒಂಟಿಯಾಗಿ ಒಣಗುವ ಪ್ರಾಣಿಗಳನ್ನು ಒಮ್ಮೆಯಾದರೂ "ಹೇಗಿದ್ದೀಯಮ್ಮಾ (ಪ್ಪಾ)?" ಎಂದು ವಿಚಾರಿಸಿ ಎನ್ನುವ ಮಾತು ಅವರ ಹೃದಯದಿಂದ ಬಂದುದೆಂದು ಓದುಗನಿಗೆ ಅನ್ನಿಸದೇ ಇರುವುದಿಲ್ಲ. ಕೃಷ್ಣಾನಂದರ ಅಚ್ಚುಮೆಚ್ಚಿನ ಸೈನ್ಯದ ಬಗ್ಗೆ ಅವರಾಡುವ ಅಭಿಮಾನದ ನುಡಿಗಳು ಕಡೆಯವರೆಗೂ ನೆನಪಿನಲ್ಲಿ ಉಳಿಯುತ್ತವೆ.

## ಕೃಷ್ಣಾನಂದರ ದೃಷ್ಟಿಯಲ್ಲಿ ಮನುಷ್ಯ

ಓದುಗನನ್ನು ಆಗಾಗ್ಗೆ ಕಾಡುವ ಅಂಶಗಳಲ್ಲಿ ಕಾಮತರು ಮನುಷ್ಯನ ಬಗ್ಗೆ ವ್ಯಕ್ತಪಡಿಸುವ ಸಿಟ್ಟು ಬಹುಮುಖ್ಯವಾದುದು. 'ಪ.ಪ.ಪ್ರ' ಮತ್ತು 'ಸ.ಪ್ರ' ಎರಡೂ ಪುಸ್ತಕಗಳಲ್ಲಿ (ಅದರ ಪ್ರತಿಯೊಂದು ಲೇಖನದಲ್ಲಿಯೂ) ಅವರು ಮನುಷ್ಯನ ಹುಂಬತನವನ್ನು ಅವಹೇಳನ ಮಾಡುತ್ತಾರೆ. ಮನುಷ್ಯನ ಸುಮುಖದರ್ಶನವಿದೆಯಾದರೂ ಅವನನ್ನು ಖಳನಾಗಿ ಕಂಡಿರುವ ಸಂದರ್ಭಗಳೇ ಹೆಚ್ಚು. ಇದಕ್ಕೆ ಬೇಕಾದಷ್ಟು ಉಲ್ಲೇಖನಗಳು ಸಾಧ್ಯ. (**"ಕೃ. ದೇವರು" ಹಣೆಪಟ್ಟಿಯಡಿಯ ಮೊದಲ ಉದಾ : ಸೇರಿ**)

**ಕವಿಗಳು, ಸಾಹಿತಿಗಳು ಸೃಷ್ಟಿ ಸೌಂದರ್ಯವನ್ನು ಕುರಿತು ಬರೆದದ್ದನ್ನು ಕೊಂಡು ಓದಿದರೂ ನಾವು ಇನ್ನೂ ನಿಸರ್ಗಪ್ರೇಮಿ ಗಳಾಗಲಿಲ್ಲ .............ಆನಂದಿಸುವ ಕಲೆಯನ್ನು ನಾವು ಇನ್ನೂ ಕರಗತಮಾಡಿಕೊಂಡಿಲ್ಲ ಸ.ಪ್ರ. (ಪು-೧೧)**

**ಅಜ್ಞಾನಿ ಮಾನವ ಮಾತ್ರ ಮುಳ್ಳಿನ ಹಾಸಿಗೆ, ಮುಳ್ಳಿನ ಸಂಸಾರ ಎಂದು ಅಪೂರ್ವವಾದ ಮುಳ್ಳಿನ ಪ್ರಪಂಚಕ್ಕೆ ಅವಮಾನವೆಸಗಿದ್ದಾನೆ. ಸ.ಪ್ರ. (ಪು-೫೪)**

**ಮಾನವನ ಸ್ವಾರ್ಥಕ್ಕೆ ಕೊನೆ ಮೊದಲೇ ಇಲ್ಲವೆ?" ಎಂದು ಛಾಯಾಚಿತ್ರಕಾರನು ನೊಂದುಕೊಳ್ಳುವದಲ್ಲದೇ ಹೆಚ್ಚಿನದನ್ನು ಮಾಡುವಂತಿರಲಿಲ್ಲ. ಪ.ಪ.ಪ್ರ (ಪು-೦೬)**

**ಆದರೆ ಯಾವ ಪ್ರಾಣಿಯೂ ಸ್ವನಾಶಕ್ಕೆ ಈ ರಾಸಾಯನಿಕ ಅಸ್ತ್ರ ಬಳಸುವುದಿಲ್ಲ.  ಮಾನವನು ಮಾತ್ರ ಅಂಥ ಕ್ರೂರ ಕೃತ್ಯ ಮಾಡಬಲ್ಲ. ಪ.ಪ.ಪ್ರ (ಪು-೬೪)**

**ಕಾಡಿಗೆ ..........................ಅವನು ಮಾಡುತ್ತಿರುವ ಅನ್ಯಾಯಗಳ ಬಗ್ಗೆ ವಿಚಾರಣೆ ಮಾಡುವಂತಹ 'ಕೋರ್ಟು, ಕಚೇರಿ, ಮಾನವನ ಸಾಮ್ರಾಜ್ಯದಲ್ಲಿ ಒಂದಾದರೂ ಇದೆಯೇ? ಪ.ಪ.ಪ್ರ (ಪು-೧೦೬)**

**ಮಾನವನಂಥ ಕೃತಘ್ನ ಪ್ರಾಣಿ ಇನ್ನಿರಲಾರದು ! ಪ.ಪ.ಪ್ರ (ಪು-೮೧)**

ಉದಾಹರಣೆಗಳು ಸ್ವಲ್ಪ ಹೆಚ್ಚೆನಿಸಿದರೂ ಅವಶ್ಯಕ. ಕಾಮತರಿಗೆ ತಮ್ಮ ಗುಂಪಿನ ಪ್ರಾಣಿಗಳ ಮೇಲೆ ಇಷ್ಟು ಕೋಪ, ಎಷ್ಟೊಂದು ರೀತಿಯಲ್ಲಿ ವ್ಯಕ್ತವಾಗಿರುವುದು ಆಶ್ಚರ್ಯ ಹುಟ್ಟಿಸುತ್ತದೆ. ನಿಸರ್ಗದಲ್ಲಿ ನಡೆಯುವ ಉಪಯುಕ್ತ ಮತ್ತು ನಿರುಪದ್ರವಿ ಚಟುವಟಿಕೆಗಳನ್ನು ಬೆಳಕಿನಡಿಗೆ ತರುವ ಮೂಲಕ; ಮನುಷ್ಯ ಕಟ್ಟಿಕೊಂಡಿರುವ ಕಟ್ಟುಪಾಡುಗಳು, ಸಮಾಜ, (ಅ)ನೀತಿ ನಿಯಮಗಳನ್ನು ಮತ್ತು ಅನುಸರಿಸುತ್ತಿರುವ ಕ್ರಮಗಳನ್ನು ಖಂಡಿಸುತ್ತಾರೆ. ಒಬ್ಬ ಛಾಯಾಚಿತ್ರಗಾರನಾಗಿ ಎದುರಿಸಬೇಕಾದ ಕಷ್ಟಗಳು, ವಿದ್ಯಾರ್ಥಿದೆಸೆಯಲ್ಲಿನ ಅನುಭವಗಳು ಅವರನ್ನು ಹೀಗೆ ಹೇಳುವಂತೆ ಮಾಡಿರಬಹುದು. ಕೆಲವು ಕಡೆ ನಮ್ಮ 'ಹೇಳುವುದೊಂದು–ಮಾಡುವುದು ಇನ್ನೊಂದು' ಬುದ್ಧಿಯನ್ನು ನೇರವಾಗೇ ವ್ಯಂಗ್ಯ ಮಾಡುತ್ತಾರೆ. ಇದು ಕೇವಲ ಹಾಸ್ಯಕ್ಕಾಗಿ ಮಾತ್ರ ಎಂದು ಭಾವಿಸಿದರೆ ಅಲ್ಲಿ ಬೆಳವಣಿಗೆಗೆ ಅವಕಾಶವಿರುವುದಿಲ್ಲ. ಇಂದಿನ ವಿದ್ಯಾರ್ಥಿಗಳ ಬಗ್ಗೆ, ರಾಜಕಾರಣಿಗಳ ಬಗ್ಗೆ, ಕಾನೂನು (ಸು)ವ್ಯವಸ್ಥೆ ಬಗ್ಗೆ (ಹತ್ತು ವರ್ಷಗಳಲ್ಲಿ ಯಾವ

ಅಭಿವೃದ್ಧಿಯೂ ಸಾಧ್ಯವಾಗದಿರುವುದು ದುರದೃಷ್ಟಕರವೇ?) ತೀವ್ರವಾದ ಅಸಮಾಧಾನವನ್ನು ವ್ಯಕ್ತಪಡಿಸುತ್ತಾರೆ. ತಮ್ಮ ಮಗನಿಗೆ ಬರೆದ ಪತ್ರವೊಂದರಲ್ಲಿ ವಿದ್ಯಾರ್ಥಿ ಮನಸ್ಸಿನ ಬಗ್ಗೆ ..... today's generation wants to acquire all skills overnight without hardwork or dedication ಎಂದು ಹೇಳುತ್ತಾ ನಿಟ್ಟುಸಿರಿಡುತ್ತಾರೆ.

ಕೃಷ್ಣಾನಂದರದು ಯಾವ ರೀತಿಯ ವ್ಯಕ್ತಿತ್ವ? ಎಂದು ಹುಡುಕುವಲ್ಲಿ ಅವರ ಮನುಷ್ಯನ ಬಗೆಗಿನ ದೃಷ್ಟಿಕೋನ ಮತ್ತು ಅವರ ಜೀವನದ ಕೆಲವು ಘಟನೆಗಳು ಉಪಯುಕ್ತ ಮಾಹಿತಿ ಕೊಡುತ್ತವೆ. ಏನೇ ಆದರೂ ಕಷ್ಟಪಟ್ಟರೆ ಫಲವಿದ್ದೇ ಇದೆ ಎಂಬ ನಂಬಿಕೆ ಅವರಿಗೆ ಮೊದಲಿನಿಂದಲೂ ಸ್ಫೂರ್ತಿಯಾಗಿದ್ದಿತೆಂದೆನಿಸುತ್ತದೆ.

## ಕೃಷ್ಣಾನಂದರ ಹಾಸ್ಯಪ್ರಜ್ಞೆ

ನಾನು ಉಲ್ಲೇಖಿಸಿರುವ ಬಹುಪಾಲು ಉದಾಹರಣೆಗಳಲ್ಲಿ ಅವರ ಹಾಸ್ಯಪ್ರಜ್ಞೆಯ ಪರಿಚಯವಾಗುತ್ತದೆ. ಇವು ಹೊಟ್ಟೆ ಹುಣ್ಣಾಗಿಸುವಂತೆ ನಗಿಸುವುದಿಲ್ಲ. ಓದುಗ ತನಗೆ ಗೊತ್ತಿಲ್ಲದಂತೆಯೇ ಖುಷಿಪಡುವಂತೆ ಮಾಡುತ್ತವೆ. ಹಕ್ಕಿಗಳನ್ನು ಓಡಿಯಹೋದ ಕ್ಯಾಮೆರಾ ಕಣ್ಣು ಬರೀ ನೀಲಿ ಆಕಾಶವನ್ನು ತಬ್ಬಿ ತೃಪ್ತಿಪಟ್ಟುಕೊಳ್ಳುವುದು, ಝೀಬ್ರಾಗಳು ತಮ್ಮ ಬಾಲದಿಂದ ಕಾಟಕೊಡುವ ಹುಳುಹುಪ್ಪಡಿಗಳನ್ನು ಯಮಸದನಕ್ಕೆ ಅಟ್ಟುವುದು, ಗಂಡು ಓಂಗಿಲೆಗಳ ತ್ಯಾಗಕ್ಕೆ ವೀರಗಲ್ಲುಗಳನ್ನು ನಿಲ್ಲಿಸುವುದು, ಒಂಟಿಸಲಗಕ್ಕೆ ತೆಂಗಿನಕಾಯಿ ಕೊಡಹೋದವರ ತಲೆಯನ್ನೇ ಅದು ಜಜ್ಜಿ ಬಜ್ಜಿ ಮಾಡುವುದು,.........

– ಹೀಗೆ ಪಟ್ಟಿ ಬೆಳೆಯುತ್ತಲೇ ಹೋಗುತ್ತವೆ. ಚಿಕ್ಕ ಮಕ್ಕಳು ಬಳಸುವ ಶಬ್ದಗಳನ್ನು ಚಮತ್ಕಾರಿಕವಾಗಿ ಬಳಸಿಕೊಂಡಿರುವುದು ವಿಶೇಷ. ಬಹುಶಃ ಅವರಲ್ಲಿ ಚಿಕ್ಕಂದಿನಿಂದ ಚಿಕ್ಕ ಕೃಷ್ಣಾನಂದನೊಬ್ಬ ಇದ್ದಿದ್ದರಿಂದಲೋ ಏನೋ ಅವರಿಗೆ ಈ ವಿಶೇಷವನ್ನೂ, ಹೊಸತನವನ್ನೂ ಸಾಧಿಸುವುದು ಸಾಧ್ಯವಾಯಿತು.

## ಕೃಷ್ಣಾನಂದರ ಪ್ರಶ್ನೆಗಳು

**ಹೀಗೇಕೆ ಎಂದು ಪ್ರಶ್ನಿಸುವ ಗೋಜಿಗೆ ಹೋಗುವವರು ತೀರ ಅಪರೂಪ** **ಸ.ಪ್ರ (ಪು-೫೪)**

'ಪ್ರಶ್ನಿಸುವ ಗುಣ' ಅವರಿಗೆ ಸಿಕ್ಕ ವರಗಳಲ್ಲೊಂದು. ಎರಡೂ ಪುಸ್ತಕಗಳಲ್ಲಿ ಬಹಳ ಕಡೆ ಕುತೂಹಲಿಗಳಾಗಿ, ಅನುಮಾನಿತರಾಗಿ, ಮನಃಪೂರ್ವಕವಾಗಿ ಪ್ರಶ್ನೆಗಳನ್ನು ಕೇಳುತ್ತಾರೆ. ಮುಖ್ಯವಾಗಿ ಕೇಳಿಕೊಳ್ಳುತ್ತಾರೆ.

ನಮ್ಮ, ಅಂದರೆ ಮನುಷ್ಯನ ಪೂರ್ವಜರ ಬಗ್ಗೆ ನಮಗೆ ಸಿಕ್ಕಿರುವ ಮಾಹಿತಿ ಅತ್ಯಲ್ಪ. ಅಂತೆಯೇ ಜೀವನ ಉಗಮದ ಬಗ್ಗೆ ಗೊತ್ತಿರುವುದು 'ಗೊತ್ತಿಲ್ಲ' ಎಂಬುದು ಮಾತ್ರ. ಕಾಮತರು ಈ ವಿಚಾರದಲ್ಲಿ, ಶುರುವಿನಲ್ಲಿಯೇ ಪ್ರಶ್ನೆಯನ್ನು ಉಳಿಸುವುದರ ಜೊತೆಗೆ ಬೆಳೆಸುವ ಕೆಲಸವನ್ನೂ ಮಾಡುತ್ತಾರೆ.

ಹೆಜ್ಜಾರ್ಲೆಗಳ ಮತ್ತು ಬೆಳ್ಳೂರಿನ ಮಧ್ಯಣ ನಂಟು ಅವರಿಗೆ ಬಿಡಿಸಲಾರದ ಒಗಟಾಗಿ ಕಾಣುತ್ತದೆ. ಇಂದಿಗೂ ಸಹ ಹಕ್ಕಿಗಳ ವಲಸೆಗೆ ಕಾರಣವಾದ ಹಲವಾರು ಅಂಶಗಳು ವಿಜ್ಞಾನಿಗಳಿಗೇ ಕಗ್ಗಂಟಾಗೇ ಉಳಿದಿದೆ.

ಪ್ರಶ್ನೆಗಳನ್ನು ತೊಡಕಿಲ್ಲದೆ ಕೇಳಬೇಕಾದರೆ, ಕಾಮತರಲ್ಲಿ ಏನೋ ನಂಬಿಕೆ ಇರಲೇ ಬೇಕೆಂಬ ನನ್ನ ನಂಬಿಕೆಗೆ ಅದೇ ಪುಸ್ತಕದಲ್ಲಿ ಒತ್ತು ಸಿಗುತ್ತದೆ.

**ನಮ್ಮವರು ಹೊಸತನವನ್ನು ಒಪ್ಪುತ್ತಿಲ್ಲ ಎಂಬ ಮಾತಿನಲ್ಲಿ ಹುರುಳಿಲ್ಲ** **ಪ.ಪ.ಪ್ರ (ಪು-೯೬)**

ಹೊಸಹೊಸ ವಿಷಯಗಳನ್ನು ತಿಳಿಯಬೇಕೆಂಬ ಆಸೆ ಮತ್ತು ಅಂತಹ ವಿಷಯಗಳಿಗೆ ಯಾವತ್ತೂ ಬೆಲೆ ಇದ್ದೇ ಇರುತ್ತದೆಂಬ ನಂಬಿಕೆಯು ಕೃಷ್ಣಾನಂದರ ನಿಲ್ಲದ ಪ್ರಶ್ನೆಗಳಿಗೆ ಕಾರಣವಾಗಿದ್ದಿರಬಹುದು. ಒಬ್ಬ 'ಜಾಣ' ಓದುಗನನ್ನು ಹಿಡಿದಿಡುವಲ್ಲಿ ಈ ಪ್ರಶ್ನೆಗಳು ಸಹಕಾರಿಯಾಗಿ ಕಂಡುಬರುತ್ತವೆ.

## ಕೃಷ್ಣಾನಂದರ ಇನ್ನೊಂದು ಮನಸ್ಸು?!

ನನಗೆ ಕಾಮತರ ಎರಡೂ ಪುಸ್ತಕಗಳಲ್ಲಿ ಕಂಡದ್ದೆಲ್ಲಾ ಹಸಿರೇ ಆದರೂ ಅವರು ತಮ್ಮ ಸ.ಪ್ರ. ಪುಸ್ತಕದ ೬೩ನೇ ಪುಟದಲ್ಲಿ ಬಳಸುವ ಒಂದೇ ಒಂದು ಮಾತು ವಿಚಿತ್ರವೆನಿಸಿತು. ಅವರು ಯಾವ ಉದ್ದೇಶದಿಂದ ಈ ಮಾತನ್ನು ಹೇಳಿದ್ದರೂ, ಅವರ ರೀತಿ-ನೀತಿಗಳಿಗಿಂತ ಬಹು ಭಿನ್ನವಾಗಿ ಅದು ಕಾಣಿಸುತ್ತದೆ.

**ಹೂವುಗಳದು ಕ್ಷಣಿಕ ಸೌಂದರ್ಯ**

ಒಂದು 'ಕ್ಷಣ ಹೌದೇ?' ಎಂದು ಬಾಯಿಯ ಮೇಲೆ ಬೆರಳಿಟ್ಟುಕೊಂಡ ಓದುಗನಿಗೆ ಈ ಮಾತು ತಪ್ಪಾಗಿ ಕಂಡುಬರುತ್ತದೆ. ಛಾಯಾಚಿತ್ರಣದಲ್ಲಿ ಸುದೀರ್ಘವಾದ ಅನುಭವ ಪಡೆದ ಕಾಮತರು ಹೀಗೆ ಹೇಳುತ್ತಾರೆಂದರೆ ಅದರಲ್ಲಿ ಏನೋ ಇರಲೇಬೇಕು, ಎಂದು "ಹುಡುಕಿದಾಗ" ಉತ್ತರ ಸಿಕ್ಕಿತು. "ಕಷ್ಟಪಟ್ಟರೇ ಫಲ, ಯೋಚಿಸಿದರೇನೇ ಉತ್ತರ" ಇದು ಕಾಮತರ ಪುಸ್ತಕಕ್ಕೂ ಅನ್ವಯಿಸುತ್ತದೆ.

ಕೃಷ್ಣಾನಂದರು ಬದುಕಿದ ಅವಧಿ ಈ ಭೂಮಿಯ ವಯಸ್ಸನ್ನು ತೆಗೆದುಕೊಂಡರೆ ಒಂದು ಕ್ಷಣಕ್ಕಿಂತ ಕಡಿಮೆ. ಇಷ್ಟು ಕಡಿಮೆ ಅವಧಿಯಲ್ಲಿ ಅವರು ಸಾಧಿಸಿದ್ದು ಬಹಳ. ಬದುಕಿದ್ದಾಗ ಅವರ ಮೌಲ್ಯವನ್ನರಿತವರೆಷ್ಟೋ... ಅವರ ನಂತರ 'ಅರಿವು' ಪಡೆವವರು ಇನ್ನೂ ಹೆಚ್ಚಾಗುವುದರಲ್ಲಿ ಅನುಮಾನವಿಲ್ಲ. ಕೃಷ್ಣಾನಂದರ ಸಹವರ್ತಿಗಳೆಲ್ಲಾ ಅವರ ಸಂಕೋಚ ಮತ್ತು ಮುಗ್ಧತೆಗಳನ್ನು ನೆನೆಸಿಕೊಳ್ಳುತ್ತಾರೆ. ಖಂಡಿತಾ ಅದು ನಿಜ. ಇದರ ಜೊತೆಗೆ ನಾನು ಅವರನ್ನು ನೋಡದೇ ಕಂಡ ಇನ್ನೊಂದನ್ನು ಸೇರಿಸಬಯಸುತ್ತೇನೆ. ಅದು ಉತ್ಕೃಷ್ಟಗುಣಮಟ್ಟದ ಸ್ವಾಭಿಮಾನ. ಅದು ಇಂದಿನ ದಿನಗಳಲ್ಲಿ ಅಪರೂಪವಾದರೂ ಅವರಲ್ಲಿತ್ತೆಂದು ಕಾಣುತ್ತದೆ.

–ಇಲ್ಲಿ ಹೂವು ಮತ್ತಾರೂ ಅಲ್ಲದೇ ಕೃಷ್ಣಾನಂದರೇ ಆಗಿದ್ದಾರೆ. ತನ್ನ ಬಗ್ಗೆ ತಾನೇ ಮಾತನಾಡುತ್ತಿರುವ ಹೂವು ಇಲ್ಲಿದೆ. (ಅದೂ ಮೂರೇ ಪದಗಳಲ್ಲಿ!)

ನನ್ನ ಈ ಕಲ್ಪನೆಯ, ಕೃಷ್ಣಾನಂದರ ಕಾಮತರಲ್ಲಿ ಕಸುವಿದ್ದಿರಲೇಬೇಕು. ಏಕೆಂದರೆ,

**ಯಾವುದೇ ನೆಲದಲ್ಲಿ ಜೀವಕಳೆ ಪುಟಿಯಬೇಕಾದರೆ ಮಣ್ಣಿನಲ್ಲಿ ಕಸುವು ಇದ್ದರೆ ಮಾತ್ರ ಸಾಧ್ಯ.** ಸ.ಪ್ರ. (ಪು-೩೦)

❑



# ದರ್ಶನ ನೀಡದ ಗುರು

**ಡಿ. ಜಿ. ಮಲ್ಲಿಕಾರ್ಜುನ**

ಕಣ್ಣಿಗೆ ಕಾಣದ ನೋಡದ ಗುರು ಡಾ॥ ಕೃಷ್ಣಾನಂದ ಕಾಮತರು. ಏಕೆಂದರೆ ಅವರನ್ನು ನೋಡಲು, ಮಾತನಾಡಲು ನನಗೆ ಸಾಧ್ಯವಾಗಲೇ ಇಲ್ಲ.

ಡಾ॥ ಕಾಮತರ ಪ್ರವಾಸ ಕಥನಗಳಾದ, 'ನಾನೂ ಅಮೇರಿಕೆಗೆ ಹೋಗಿದ್ದೆ' ಮತ್ತು 'ವಂಗದರ್ಶನ'ದ ಬಗ್ಗೆ ಓದಿದ್ದೆ. ಆದರೆ ಈ ಪುಸ್ತಕಗಳು ದೊರಕದೆ ಓದಿರಲಿಲ್ಲ. ಅವರ ಪರಿಚಿತರು, ಅಭಿಮಾನಿಗಳೆಲ್ಲರೂ ಸಾಮಾನ್ಯವಾಗಿ ಅವರ ಪುಸ್ತಕಗಳನ್ನು ಓದುತ್ತಾ ಬಂದವರಾಗಿದ್ದು ನಂತರ ಡಾ॥ ಕಾಮತರ ಸಾಹಸ ವಿಜಯವಾದ www.kamat.com ಅನ್ನು ನೋಡಿರುತ್ತಾರೆ. ಆದರೆ ನಾನು ಮೊದಲು ನೋಡಿದ್ದು ಅವರ ವೆಬ್‌ಸೈಟ್. ನಂತರ ಅದರಲ್ಲಿ ದೊರೆತ ಮಾಹಿತಿಯಿಂದ ಅವರ ಪುಸ್ತಕಗಳನ್ನು ಪಡೆಯಲು ಓದಲು ಆಸಕ್ತಿ ಹೊಂದಿದೆ.

ಒಮ್ಮೆ ಡಾ॥ ಕಾಮತ್ ದಂಪತಿಗಳ ಸಂದರ್ಶನವು ಉದಯ ಟೀವಿಯ 'ಪರಿಚಯ' ಕಾರ್ಯಕ್ರಮದಲ್ಲಿ ಬಂದಿತು. ಅದರಲ್ಲಿ ಅವರ ಅಗಾಧ ಸಾಧನೆಗಳ ಕಿರುಪರಿಚಯವಾಯಿತು. ಹಾಗೂ ಮೊದಲ ಬಾರಿ ಈ ಅಪರೂಪದ ಅನ್ಯೋನ್ಯ ದಂಪತಿಯನ್ನು ನೋಡುವ ಹಾಗಾಯ್ತು. ಆ ದಿನ ಡಾ॥ ಕಾಮತರ ವಿವಿಧ ರೀತಿಯ ಆಸಕ್ತಿಕರ ಹವ್ಯಾಸಗಳನ್ನು ನೋಡಿ ಅಚ್ಚರಿಗೊಂಡಿದ್ದೆ. ಅಂದು ಡಾ॥ ಕಾಮತರು ಸ್ವತಃ ಚಿತ್ರಗಳನ್ನು ಬಿಡಿಸಿದ್ದ ಅಂದವಾದ ರೇಷ್ಮೆ ಸೀರೆಯನ್ನು ಡಾ॥ ಜ್ಯೋತ್ಸ್ನಾ ಕಾಮತರು ಉಟ್ಟಿದ್ದರು. ಆ ಕಾರ್ಯಕ್ರಮದಿಂದಲೇ ಅವರ ವೆಬ್‌ಸೈಟ್ ವಿಚಾರ ನನಗೆ ತಿಳಿದದ್ದು.

ಡಾ॥ ಕಾಮತರಿಗೆ ನಾನು ಮೊದಲು ಪತ್ರ ಬರೆದದ್ದು ೨೦೦೧ರ ಡಿಸೆಂಬರ್ ತಿಂಗಳಿನಲ್ಲಿ. ಅವರ ಪುಸ್ತಕಗಳ ಬಗ್ಗೆ ವಿವರ ಕೋರಿ ಪತ್ರ ಬರೆದಿದ್ದೆ. ಅವರು ಅದಕ್ಕೆ ಉತ್ತರವಾಗಿ ಮನೋಹರ ಗ್ರಂಥಮಾಲಾರವರ ವಿಳಾಸ ಕೊಟ್ಟರು. ಅವರ ಒಟ್ಟು 22 ಪುಸ್ತಕಗಳು ಬೇರೆ ಬೇರೆ ಪ್ರಕಾಶಕರಿಂದ ಪ್ರಕಟವಾದುದರಿಂದ ಎಲ್ಲ ಪ್ರಕಾಶಕರ ವಿಳಾಸ ಕೋರಿ ಮತ್ತೊಂದು ಪತ್ರ ಬರೆದೆ. ಈ ಬಾರಿ ಅವರಿಂದ ಬಂದ ಪತ್ರವಂತೂ ಸೊಗಸಾಗಿತ್ತು. ಹೊಸವರ್ಷದ ಆಗಮನಕ್ಕೆ (೨೦೦೨) ಇನ್ನೂ ಮೂರು ದಿನಗಳಿದ್ದುದರಿಂದ Happy New Year 2002 ಎಂದು ಅಂದವಾಗಿ ಸ್ಕೆಚ್ ಪೆನ್‌ನಿಂದ ಬರೆದಿದ್ದರು. ಅವರಿಂದ ನಾನು ಕಲಿತ ಮೊದಲ ಪಾಠವೇ ಕಾಗದ ಬರೆಯುವುದರಲ್ಲಿನ ಈ ಶಿಸ್ತು ಮತ್ತು ಕಲಾತ್ಮಕತೆ. ಅವರ ಕಾಗದಗಳಲ್ಲಿ ನಾನು ಕಂಡುಕೊಂಡ ಸಾಮ್ಯತೆಗಳೆಂದರೆ ಕಾಗದದ ಶುರುವಿನಲ್ಲಿ ಅವರ ಹೆಸರು ವಿಳಾಸ ಮತ್ತು ತಾರೀಖನ್ನು ಟೈಪ್ ಮಾಡಿರುತ್ತಿದ್ದರು. ಕಾಗದ ಬರೆಯಲು ಬಾಂಡ್ ಪೇಪರನ್ನೇ ಬಳಸುತ್ತಿದ್ದರು ಮತ್ತು ಕಾಗದದ ಮೊದಲಲ್ಲಿ 'ತಮ್ಮ ಇಂತಹ ತಾರೀಖಿನಂದು ಬರೆದ ಪತ್ರ ತಲುಪಿತು' ಎಂದು ಅವರಿಗೆ ಬರೆದವರ ಪತ್ರದ ದಿನಾಂಕವನ್ನು ಬರೆಯುತ್ತಿದ್ದರು. ಹನಿ ಹನಿಗೂಡಿದರೆ ಹಳ್ಳವೆನ್ನುವಂತೆ. ಈ ತರಹದ ಅವರ ಸಣ್ಣ ಪುಟ್ಟ ಶಿಸ್ತುಗಳನ್ನು ನಾವು ರೂಢಿಸಿಕೊಂಡರೆ ಅದೇ ದೊಡ್ಡದಾಗುತ್ತದೆಂದೆನಿಸುತ್ತದೆ.

ಮಾಹಿತಿ, ನನಗೆ ಬೇಕಾದುದರಿಂದ ನಾನು ಬರೆದ ಎರಡು ಪತ್ರಗಳ ಜೊತೆಯೂ ನನ್ನ ವಿಳಾಸವಿರುವ ಕಾರ್ಡ್ ಮತ್ತು ಕವರನ್ನು ಕಳಿಸಿದ್ದೆ. ಡಾ॥ ಕಾಮತರು ಅದಕ್ಕೆ ಇನ್ನೂ ಏನಾದರೂ ಮಾಹಿತಿ ಬೇಕಿದ್ದರೆ ತಿಳಿಸಿ. ಖಂಡಿತ ಕಳಿಸಿಕೊಡುತ್ತೇನೆ. ಇದಕ್ಕಾಗಿ ಸ್ವವಿಳಾಸದ ಕಾರ್ಡು/ಕವರು ಕಳಿಸಬೇಕಾಗಿಲ್ಲ!! ಎಂದು ಬರೆದಿದ್ದರು.

ನಂತರ ಡಾ॥ ಜ್ಯೋತ್ಸ್ನಾಕಾಮತರನ್ನು ಭೇಟಿಯಾದಾಗ ತಿಳಿದುಬಂದ ಇನ್ನೊಂದು ವಿಷಯವೇನೆಂದರೆ ನನಗೆ ಕಾಗದ ಬರೆದಿರುವ ಹಸ್ತಾಕ್ಷರವು ಡಾ॥ ಕಾಮತರದಲ್ಲವೆಂದು. ಡಾ॥ ಕಾಮತರು ಯಾರಿಗೇ ಪತ್ರ ಬರೆಯುವುದಿರಲಿ ಅದನ್ನು ಮೊದಲು ತಮ್ಮ ಡೈರಿಯಲ್ಲಿ ಬರೆದಿಡುತ್ತಿದ್ದರಂತೆ. ಅವರ ಹಸ್ತಾಕ್ಷರವು ತುಂಬಾ ಸಣ್ಣದಾಗಿದ್ದುದರಿಂದ ಓದುವವರಿಗೆ ತೊಂದರೆಯಾಗಬಹುದೆಂದು ಡಾ॥ ಜ್ಯೋತ್ಸ್ನಾ ಕಾಮತರು ಪೇಪರ್‌ಗೆ ಕಾಪಿ ಮಾಡುತ್ತಿದ್ದರಂತೆ. ಕವರ್ ಮೇಲೆ ವಿಳಾಸವನ್ನು ಅವರೇ ಟೈಪ್ ಮಾಡಿ ಊರಿನ ಹೆಸರ ಕೆಳಗೆ ಕೆಂಪು ಶಾಯಿಯಿಂದ ಗೆರೆಯೆಳೆದಿರುವುದನ್ನು ನೋಡಿ ಅವರ ಈ ಅಚ್ಚುಕಟ್ಟುತನ ಅನುಕರಣೀಯವೆನಿಸಿತು. ಅವರ ಮಗ ವಿಕಾಸ ಕಾಮತರೊಂದಿಗೆ ಈ ವಿಷಯದ ಬಗ್ಗೆ ಮಾತನಾಡಿದಾಗ ಅವರು 'ನಿಮಗೆ, ಕೊಂಡಿರುವ ಕವರಿನಲ್ಲಿ ಕಾಗದವನ್ನಿಟ್ಟು ಪೋಸ್ಟ್

ಮಾಡಿದ್ದಾರೆ. ನನಗೆ ಅಮೇರಿಕೆಗೆ ಯಾವಾಗಲೂ ಅವರೇ ಸ್ವತಃ ಪೇಪರ್‌ನಿಂದ ತಯಾರಿಸಿದ ಕವರ್‌ನಲ್ಲಿಟ್ಟು ಪೋಸ್ಟ್ ಮಾಡುತ್ತಿದ್ದರು' ಅಂದರು.

ಅವರ ಪತ್ರದಲ್ಲಿ, ಅವರ ಕೆಲವು ಪುಸ್ತಕಗಳು ದೊರಕದೆ ಇರುವುದರ ಬಗ್ಗೆ ವಿಷಾದ ವ್ಯಕ್ತಪಡಿಸಿದ್ದರು ಹಾಗೂ ಕೆಲವು ಪ್ರಕಾಶಕರುಗಳ ವಿಳಾಸವನ್ನೆಲ್ಲಾ ಕೊಟ್ಟರು. ನನ್ನ ಪತ್ರದಲ್ಲಿ ಚಿತ್ರಕಲೆ ಮತ್ತು ಛಾಯಾಗ್ರಹಣ ಕಲಿಸುತ್ತೀರಾ ಎಂದು ಕೇಳಿದ್ದೆ. ಅದಕ್ಕವರು ಇಂಟರ್‌ನೆಟ್‌ಗೆ ಪ್ರತಿವಾರವೂ ಸಚಿತ್ರ ಲೇಖನಗಳನ್ನು ಕಳಿಸುತ್ತಲೇ ಇರಬೇಕಾದ್ದರಿಂದ ಇನ್ನಿತರ ಚಟುವಟಿಕೆಗಳಿಗೆ ಬಿಡುವು ಸಿಗುವುದಿಲ್ಲವೆಂದು ಉತ್ತರಿಸಿದ್ದರು.

ಮನೋಹರ ಗ್ರಂಥಮಾಲಾರವರಿಂದ ಡಾ॥ ಕಾಮತರ ಕೆಲವು ಪುಸ್ತಕಗಳನ್ನು ತರಿಸಿಕೊಂಡೆ. ನಾನು ಓದಿದ ಅವರ ಮೊದಲನೆಯ ಪುಸ್ತಕ 'ಪ್ರೇಯಸಿಗೆ ಪತ್ರಗಳು'. ಪತ್ರ ಬರೆಯುವುದರ ಬಗ್ಗೆ ಆಸಕ್ತಿಯಿದ್ದ ನನಗೆ ಈ ಪುಸ್ತಕ ಆಸಕ್ತಿಕರವಾಗಿ ಮತ್ತು ಅರ್ಥಪೂರ್ಣವಾಗಿ ಕಂಡಿತು. ಫೋನಾವೃತಗೊಂಡಿರುವ ಈಗಿನ ಕಾಲದಲ್ಲಿ ಪತ್ರಗಳು ತಮ್ಮ ಮಹತ್ವವನ್ನೇ ಕಳೆದುಕೊಳ್ಳುತ್ತಿದೆಯೆನಿಸುತ್ತಿದೆ. ಸಾಧಾರಣವಾಗಿ ಪತ್ರಗಳು ವೈಯಕ್ತಿಕವಾಗಿರುತ್ತವೆ. ಆದರೆ ಡಾ॥ ಕಾಮತರ ಪತ್ರಗಳು ಸಾರ್ವಕಾಲಿಕ ಮತ್ತು ಒಂದು ರೀತಿಯಲ್ಲಿ ಉಪಯುಕ್ತ ಸಾಹಿತ್ಯ. ಈ ಪುಸ್ತಕವನ್ನು ಓದಿದವನೇ ಅವರಿಗೆ ನನ್ನ ಅನಿಸಿಕೆಗಳನ್ನು ತಿಳಿಸಿ ಪತ್ರ ಬರೆದೆ. ಜೊತೆಗೆ ಸಂಕ್ರಾಂತಿಗೆ ನಾನೇ ತಯಾರಿಸಿದ ಶುಭಾಶಯ ಪತ್ರವನ್ನು ಸಹ ಕಳಿಸಿದೆ. ಈ ನನ್ನ ಪತ್ರಕ್ಕೆ ಉತ್ತರವಾಗಿ ಡಾ॥ ಕಾಮತರು ಬಹಳ ಸಂತೋಷಪಟ್ಟು ಪತ್ರ ಬರೆದಿದ್ದರು. ಈಗಿನ ಯುವ ಜನತೆಯೂ ಅದನ್ನು ಇಷ್ಟಪಟ್ಟಿರುವುದಕ್ಕೆ ಸಂತಸ ವ್ಯಕ್ತಪಡಿಸಿದ್ದರು. ಅವರು ಈ ಪತ್ರಗಳನ್ನು ಬರೆಯುತ್ತಿದ್ದ ದಿನಗಳಲ್ಲಿ ಒಂದೇ ಒಂದು ಶಬ್ದ / ಅಕ್ಷರವನ್ನು ಎಲ್ಲೂ ಪ್ರಕಟಿಸಿರಲಿಲ್ಲವಂತೆ. ಅಲ್ಲದೆ ಅವರಿಂದ ಸಾಹಿತ್ಯ ನಿರ್ಮಾಣ ಸಾಧ್ಯ ಎಂತಲೂ ತಿಳಿದಿರಲಿಲ್ಲವಂತೆ! ಹಾಗೆಂದು ಅವರ ಪತ್ರದಲ್ಲಿ ಬರೆದಿರುವುದವನ್ನು ನೋಡಿ ಅವರ ಈ 'ಎಲೆ ಮರೆಯಕಾಯಿ'ಯ ಗುಣವನ್ನು ನಾವೂ ಕಲಿಯಬೇಕೆನಿಸಿತು. ಈ 'ಪ್ರೇಯಸಿಗೆ ಪತ್ರಗಳು' ಪುಸ್ತಕದಲ್ಲಿರುವುದು ಅವರು ತಮ್ಮ ವಿವಾಹದ ಮೊದಲೈದು ವರ್ಷಗಳಲ್ಲಿ ಬರೆದ ಪತ್ರಗಳು ಮಾತ್ರ. ಉಳಿದ ಅವರ ಪತ್ರಗಳ ಸಂಗ್ರಹವನ್ನೂ ನಮ್ಮಂತಹ ಓದುಗರಿಗಾಗಿ ಪ್ರಕಟಿಸಿ ಎಂದು ಕೂಡ ಪತ್ರದಲ್ಲಿ ಬರೆದಿದ್ದೆ. ನನಗಂತೂ ಪತ್ರಗಳನ್ನು ಹೀಗೂ ಅರ್ಥಪೂರ್ಣವಾಗಿ ಆಸಕ್ತಿಕರವಾಗಿ ಬರೆಯಬಹುದಲ್ಲವಾ! ಎಂದು ಹೊಸ ದೃಷ್ಟಿಕೋನ ಸಿಕ್ಕಿದಂತಾಗಿತ್ತು. ಈ ಪುಸ್ತಕದಿಂದ ಕೊಂಚ ಅವರ ಜೀವನಶೈಲಿಯೂ ನೋಡುವಂತಾಯ್ತು. ಅವರು ನನಗೆ ಬರೆದ ಪತ್ರದಲ್ಲಿ 'ಈ ಪತ್ರಗಳನ್ನು ಬರೆದ ೩೫ ವರ್ಷಗಳ ಬಳಿಕವೂ ಅಲ್ಲಿ ಉಲ್ಲೇಖಿತ ಜೀವನವನ್ನೇ ನಡೆಸುತ್ತಿದ್ದೇವೆ. ಇಂದಿಗೂ ನಮ್ಮಲ್ಲಿ ರೆಫ್ರಿಜರೇಟರ್, ಟೆಲಿವಿಜನ್. ಕಂಪ್ಯೂಟರ್, ಅಥವಾ ಯಾವುದೇ ವಾಹನ ಇಲ್ಲ. ನಾನು ಎಲ್ಲಿಗೆ ಕಾಲುನಡಿಗೆಯಿಂದಲೇ ಹೋಗಿಬರುತ್ತೇನೆ, ಎಂದು ಬರೆದಿದ್ದನ್ನು ಓದಿ ಅವರ ನಿರಾಡಂಬರ ವ್ಯಕ್ತಿತ್ವ ನೋಡಿ ಅಚ್ಚರಿಪಟ್ಟೆ. ಈ ಕಾಲದಲ್ಲಿಯೂ ಇಂತಹವರೂ ಇದ್ದಾರೆಯೇ ಅನ್ನಿಸಿತು. ಆಗಲೇ ನನಗೆ ಅವರನ್ನು ನೋಡಿ ಭೇಟಿ ಮಾಡಿ ಮಾತನಾಡಿಸಬೇಕೆಂಬ ಆಸೆಯಾಯಿತು. ನಾನು ನನ್ನ ಪತ್ರದಲ್ಲಿ ಅವರ ವೈಜ್ಞಾನಿಕ ಛಾಯಾಗ್ರಹಣದ ಬಗ್ಗೆ ಪ್ರಶ್ನಿಸಿದ್ದೆ. ಅದಕ್ಕುತ್ತರವಾಗಿ ಅವರ ಈ ವೃತ್ತಿ/ಸೇವೆಯ ಬಗ್ಗೆ ಪತ್ರದಲ್ಲಿ ಬರೆದಿದ್ದರು. ೧೯೭೧ ರಲ್ಲಿ ಪ್ಲಾಸಿಯ ಕೆಲಸದ ನಂತರ ಬೆಂಗಳೂರಿಗೆ ಬಂದು ಯಾವುದೇ ತರಬೇತಿ ಅನುಭವಗಳಿರದಿದ್ದರೂ ಧೈರ್ಯದಿಂದ ಈ ವೈಜ್ಞಾನಿಕ ಛಾಯಾಗ್ರಹಣವನ್ನು ವೃತ್ತಿ/ಸೇವೆಯೆಂದು ಪ್ರಾರಂಭಿಸಿ ಹಗಲು ರಾತ್ರಿ ದುಡಿದು ಯಶಸ್ಸನ್ನು ಸಾಧಿಸಿದರಂತೆ. ಬೆಂಗಳೂರಿನ ಅನೇಕ ಸಂಶೋಧನಾಲಯಗಳು ಅವರ ನೆರವನ್ನು ಪಡೆದಿವೆ. ಕೆಲವೊಮ್ಮೆ ಮೈಸೂರು, ತಿರುಪತಿ, ಮುಂಬಯಿಗಳಿಂದಲೂ ಬೇಡಿಕೆ ಬಂದದ್ದುಂಟಂತೆ. ಕಾಲು ಶತಮಾನದ ನಂತರ ಈ ಸೇವೆಗೆ ೧೯೯೫ರಲ್ಲಿ ಮಂಗಳ ಹಾಡಿದರಂತೆ. 'ಸುಂದರ ಹಸ್ತಾಕ್ಷರ, ಚಿತ್ರಕಲೆ, ಛಾಯಾಗ್ರಹಣದಲ್ಲಿ ಆಸಕ್ತಿ ಮುಂತಾದವುಗಳಿರುವುದರಿಂದ ನೀವು ಬರಹಗಾರನಾಗಲು ಪ್ರಯತ್ನಿಸಿ' ಎಂದು ಬರೆದಿದ್ದರು. ಅದರ ಜೊತೆಯಲ್ಲಿ ಕನ್ನಡ ಬರಹಗಾರನಿಗೆ ಆದಾಯದ ಅಥವಾ ಪ್ರತಿಫಲದ ಆಸೆ ಇರಲೇಕೂಡದು ಎನ್ನುವ ಕಿವಿಮಾತು ಕೂಡ ಹೇಳಿದ್ದರು.

ಡಾ. ಕಾಮತರ ಕೆಲವು ಲೇಖನಗಳು ಸ್ಪಾನಿಶ್, ಜರ್ಮನ್, ರಶಿಯನ್, ಸಂಸ್ಕೃತ ಭಾಷೆಗಳಲ್ಲೂ ಅನುವಾದಗೊಳ್ಳುತ್ತಿವೆ. ಇದರಿಂದಾಗಿ ಮತ್ತು ಇಂಟರ್‌ನೆಟ್‌ನಿಂದಾಗಿ ಅವರು ನಿಜಕ್ಕೂ ವಿಶ್ವಮಾನವರು.

ಅವರಿಗೆ ಸಂಕ್ರಾಂತಿಗೆ ನಾನೇ ಚಿತ್ರ ಬಿಡಿಸಿರುವ ಶುಭಾಶಯಪತ್ರವನ್ನು ಕಳಿಸಿರುವುದನ್ನು ಮೆಚ್ಚಿಕೊಂಡು ಪ್ರತಿವರ್ಷ ದೀಪಾವಳಿಗೆ ಹಾಗೂ ಹೊಸವರ್ಷಕ್ಕೆ ಅವರು ಸ್ವರಚಿತ ಶುಭಾಶಯದ ಹಾರೈಕೆಗಳನ್ನು ರಚಿಸುತ್ತ ಬಂದಿರುವುದನ್ನು ತಿಳಿಸಿದ್ದರು. ಇದರಿಂದ ನಾನು ಪ್ರಭಾವಿತನಾಗಿ ಇನ್ನು ಮುಂದೆ ಅಂಗಡಿಯಲ್ಲಿ ಕೊಳ್ಳದೇ ಶುಭಾಶಯಪತ್ರಗಳನ್ನು ನಾನೇ ತಯಾರಿಸಿ ಕಳಿಸಬೇಕೆಂದು ತೀರ್ಮಾನಿಸಿದ್ದೇನೆ. ಅವರ ಪತ್ರದಲ್ಲಿ ಬೆಂಗಳೂರಿಗೆ ಬಂದಾಗ ನಮ್ಮ ಮನೆಗೂ ಬನ್ನಿ. ಬರುವ ಮುನ್ನ ಫೋನ್ ಮಾಡಿ ಬನ್ನಿ ಎಂದು ಫೋನ್ ನಂಬರು ಕೊಟ್ಟಿದ್ದರು. ರೋಗಿ ಬಯಸಿದ್ದೂ ಹಾಲೂ ಅನ್ನ, ವೈದ್ಯ ಹೇಳಿದ್ದೂ ಹಾಲೂ ಅನ್ನ!

ಫೆಬ್ರವರಿ ೨೩ರಂದು ಡಾ॥ ಕಾಮತ್ ದಂಪತಿಗಳ ವಿವಾಹ ವಾರ್ಷಿಕೋತ್ಸವ. ಇದು ನನಗೆ ಅವರ ಪ್ರೇಯಸಿಗೆ ಪತ್ರಗಳು ಮುಖಾಂತರ ತಿಳಿದುಬಂದದ್ದು. ಅವರಿಗೆ ಶುಭಾಶಯಗಳನ್ನು ತಿಳಿಸುತ್ತಾ ಒಂದು ಪತ್ರವನ್ನು ಬರೆದೆ. ಅಷ್ಟರ ಹೊತ್ತಿಗೆ ನಾನವರ 'ಮರುಪಯಣ' ಓದಿದ್ದೆ ಅದರ ಬಗ್ಗೆ ನನಗನಿಸಿದ್ದನ್ನು ಬರೆದೆ. ಪರಿಸರ ನಾಶ, ಭಾರತದ ಈಗಿನ ಸ್ಥಿತಿಗತಿ ಬಗ್ಗೆ ಪ್ರವಾಸಕಥನದ ಶೈಲಿಯಲ್ಲಿ ಬರೆದಿರುವುದರಿಂದ ಮನಸ್ಸನ್ನು ಚಿಂತನೆಗೆ ಹಚ್ಚುತ್ತಾ serious ಆದಂತಹ ವಿಷಯಗಳನ್ನು ಕೊಂಚವೂ ಬೇಸರವಾಗದಂತೆ ಬರೆದಿದ್ದಾರೆ. ಅವರ ವೆಬ್‌ಸೈಟ್‌ನಲ್ಲಿ ನನಗಿಷ್ಟವಾದ ಅಂಕಣಗಳ ಬಗ್ಗೆಯೂ ನನ್ನ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದೆ. ಮಾರ್ಚ್ ೧೧ರಂದು ಬೆಂಗಳೂರಿಗೆ ಹೋಗಬೇಕಾದ್ದರಿಂದ ಆ ದಿನ ಅವರ ಮನೆಗೆ ಹೋಗುವ ಆಸೆ ವ್ಯಕ್ತಪಡಿಸಿ ಪತ್ರ ಬರೆದಿದ್ದೆ.

ಫೆಬ್ರವರಿ ೨೬ರಂದು ಪೇಪರ್‌ನಲ್ಲಿ ಡಾ॥ ಕೃಷ್ಣಾನಂದ ಕಾಮತರ ನಿಧನದ ಸುದ್ದಿ ಮತ್ತು ಅವರ ಕಣ್ಣುಗಳನ್ನು ಇಬ್ಬರು ಅಂಧರಿಗೆ ದಾನಮಾಡಿರುವ ವಿಷಯವನ್ನು ಓದಿ ದಿಗ್ಭ್ರಮೆಯಾಯಿತು. ಒಂದು ಕ್ಷಣ ಏನೂ ತೋಚಲಿಲ್ಲ. ನಿಧನದ ದಿನಾಂಕ ನೋಡಿದರೆ ಫೆಬ್ರವರಿ ೨೦ ಅಂದಿತ್ತು. ಅಂದರೆ ಅಂದಿಗಾಗಲೇ ೬ ದಿನಗಳು ಕಳೆದಿವೆ. ಸ್ವಲ್ಪ ಚೇತರಿಸಿಕೊಂಡ ನಂತರ ಅವರ ಮನೆಗೆ ಫೋನ್ ಮಾಡಿದೆ. ಡಾ॥ ಜ್ಯೋತ್ಸ್ನಾ ಕಾಮತರು ಮತ್ತು ವಿಕಾಸ್ ಕಾಮತರು ಮಾತನಾಡಿದರು. ನನ್ನ ಸಂತಾಪ ವ್ಯಕ್ತ ಪಡಿಸಿದೆ. ಡಾ॥ ಕಾಮತರು ತೀರಿಕೊಂಡ ದಿನವೇ ನನ್ನ ಪತ್ರ ತಲುಪಿತ್ತಂತೆ. ಅದನ್ನವರು ಓದಿ ತುಂಬಾ ಸಂತೋಷಪಟ್ಟಿದ್ದರಂತೆ. ನನ್ನ ಪತ್ರಕ್ಕುತ್ತರವಾಗಿ ಅವರ ಡೈರಿಯಲ್ಲಿ ಒಂದು ಸಾಲನ್ನು ಕೂಡ ಬರೆದಿದ್ದರು. ನನ್ನ ದುರದೃಷ್ಟ! ಅವರನ್ನು ನೋಡಲು ಆಗಲೇ ಇಲ್ಲ. ನನ್ನ ಪತ್ರಕ್ಕೆ ಅಂಟಿಸಿದ್ದ ಅಂಚೆಚೀಟಿಗಳು ಚೆನ್ನಾಗಿದ್ದುದರಿಂದ ಅದನ್ನು ನೀರಿನಲ್ಲಿ ನೆನೆಸಿ ಹುಷಾರಾಗಿ ತೆಗೆದಿಟ್ಟರಂತೆ. ಇದು ಸಾಧಾರಣವಾಗಿ ಅಂಚೆಚೀಟಿ ಸಂಗ್ರಹಣಕಾರರು ಮಾಡುವ ಕೆಲಸ. ಅವರ ಚಟುವಟಿಕೆಗಳು ಅಪಾರ.

ಡಾ॥ ಜ್ಯೋತ್ಸ್ನಾ ಕಾಮತರ ಪುಸ್ತಕಗಳಾದ "ನಗೆಕೇದಿಗೆ" 'ಸಂಸಾರದಲ್ಲಿ ಸ್ವಾರಸ್ಯ' ಮತ್ತು 'ಹೀಗಿದ್ದೆವು ನಾವು'ಗಳಿಂದ ಅವರ ದಾಂಪತ್ಯದ ರಸಮಯಕ್ಷಣಗಳು, ಡಾ॥ ಕಾಮತರ ಚಟುವಟಿಕೆಗಳು, ಅಭಿರುಚಿಗಳು ಸ್ವಲ್ಪ ಮಟ್ಟಿಗೆ ತಿಳಿಯುವಂತಾಯ್ತು. ಅವರ ಬಗ್ಗೆ ಕೇಳಿದಾಗ ಬರೆದಿರುವ ರೀತಿಯಲ್ಲೇ ಜೀವನವನ್ನೂ ನಡೆಸಿದ್ದೇವೆ ಎಂದರು ಡಾ॥ ಜ್ಯೋತ್ಸ್ನಾ ಕಾಮತ್‌ರವರು. ನಿಜಕ್ಕೂ ಇಂತಹ ಅನ್ಯೋನ್ಯ ದಾಂಪತ್ಯದಿಂದ ಕಲಿಯುವುದು ಸಾಕಷ್ಟಿದೆ.

ಅಡಿಗೆ ಮಾಡುವುದಲ್ಲೂ ಡಾ॥ ಕಾಮತರು ನಿಷ್ಣಾತರು. ಅವರ 'ನಾನೂ ಅಮೇರಿಕೆಗೆ ಹೋಗಿದ್ದೆ' ಪುಸ್ತಕದಲ್ಲಿ ಅಮೇರಿಕೆಯಲ್ಲಿ ಮಾಡುವ ಅಡಿಗೆಯ ಬಗ್ಗೆ ಬರೆದಿದ್ದಾರೆ. ಹಾಗೂ 'ವಂಗದರ್ಶನ'ದಲ್ಲಿ ಬೆಂಗಾಲಿ ಅಡಿಗೆಗಳ ಬಗ್ಗೆಯೂ ಬರೆದಿದ್ದಾರೆ. ಉಪ್ಪಿನಕಾಯಿ ತಯಾರಿಸುವುದರಲ್ಲಂತೂ ಅವರನ್ನು ಮೀರಿಸುವವರು ಇಲ್ಲದಷ್ಟು ಪ್ರಾವೀಣ್ಯತೆ ಪಡೆದಿದ್ದರಂತೆ. ನೆಂಟರು, ಸ್ನೇಹಿತರುಗಳಿಂದ ಬಹಳ ಬೇಡಿಕೆಯ ವಸ್ತುವಾಗಿತ್ತಂತೆ ಕಾಮತರ ಉಪ್ಪಿನಕಾಯಿ. ಅವರ ಮಗನ ಸ್ನೇಹಿತರೊಬ್ಬರು ಅಮೇರಿಕೆಗೆ ಹೊರಡುತ್ತಿದ್ದುದರಿಂದ ಅಲ್ಲಿರುವ ಅವರ ಮಗ ಸೊಸೆಗೆ ಏನಾದರೂ ಒಯ್ಯಲು ಇದ್ದರೆ ಕೊಡಿ ಎಂದು ಕೇಳಿದ್ದರಂತೆ. ಡಾ. ಕಾಮತರು ತಮ್ಮ ಸೊಸೆಗೆ ಇಷ್ಟವೆಂದು ಹೆರಳೆಕಾಯಿಯ ಉಪ್ಪಿನಕಾಯಿ, ಕೆಮ್ಮಿಗೆ ದಿವ್ಯೌಷಧಿಯಾದ ಅತಿಮಧುರವನ್ನು ಅಚ್ಚುಕಟ್ಟಾಗಿ ಪ್ಯಾಕ್ ಮಾಡಿಟ್ಟು ಅದರ ಮೇಲೆ ವಿಕಾಸನ ವಿಳಾಸ ಮತ್ತು ಫೋನ್ ನಂಬರನ್ನು ಸ್ಪುಟವಾಗಿ ಬರೆದಿಟ್ಟಿದ್ದರಂತೆ. ಆದಿನ ಡಾ॥ ಕಾಮತರು ನಿಧನರಾದ ತಕ್ಷಣ ಅಮೇರಿಕೆಯಲ್ಲಿರುವ ಅವರ ಮಗ ವಿಕಾಸರಿಗೆ ಫೋನ್ ಮಾಡಿ ತಿಳಿಸಲು ಸಹಾಯ ಮಾಡಿದ್ದೇ ಈ ಪೊಟ್ಟಣವಂತೆ. 'ನನಗೆ ವಿಕಾಸನ ಫೋನ್ ನಂಬರು ತಿಳಿದಿರಲಿಲ್ಲ. ಆ ದಿನ ಗಾಬರಿಯಲ್ಲಿ ವಿಕಾಸನಿಗೆ ಫೋನ್ ಮಾಡಿ ತಿಳಿಸಲು ಸಹಾಯ ಮಾಡಿದ್ದೇ ಈ ಉಪ್ಪಿನಕಾಯಿ ಪೊಟ್ಟಣ. ಅದರ ಮೇಲೆ ಅವರು ಬರೆದಿಟ್ಟಿದ್ದ Phone ನಂಬರಿನಿಂದಾಗಿ ತಕ್ಷಣ ವಿಕಾಸನಿಗೆ ತಿಳಿಸುವಂತಾಯ್ತು' ಎಂದು ಡಾ॥ ಜ್ಯೋತ್ಸ್ನಾ ಕಾಮತರು ಹೇಳಿದ್ದರು.

'ಪ್ರೇಯಸಿಗೆ ಪತ್ರಗಳು' ಪುಸ್ತಕದ ಮುನ್ನುಡಿಯಲ್ಲಿ ಡಾ॥ಜ್ಯೋತ್ಸ್ನಾ ಕಾಮತರು ಕತ್ತರಿಯ ವಿಷಯ ಪ್ರಸ್ತಾಪಿಸುತ್ತಾರೆ. 'ಬಂದ ಪತ್ರಗಳನ್ನು ಅಷ್ಟಾವಕ್ರವಾಗಿ ಹರಿಯಬಾರದು, ನೀಟಾಗಿ ಕತ್ತರಿಸಲು ಆಜ್ಞೆಯಿತ್ತ ಅವರು ಕತ್ತರಿಯೊಂದನ್ನು ಇದಕ್ಕಾಗಿಯೇ ಖರೀದಿಸಿ ಕಾಣಿಕೆಯಾಗಿ ಇತ್ತರು', ಎಂದು ಬರೆಯುತ್ತಾರೆ. ತಮಾಷೆಯೆಂದೆನಿಸಿದರೂ ಇದರಿಂದ ಅವರ ಶಿಸ್ತು ತಿಳಿಯುತ್ತದೆ. ನಾನವರ ಮನೆಗೆ ಹೋದಾಗ ಟೇಬಲ್ ಮೇಲಿದ್ದ ದೊಡ್ಡ ಕತ್ತರಿಯನ್ನು ಗಮನಿಸಿದ್ದೆ. ನಂತರ ನಾನು ಕೂಡ ಒಂದು ಕತ್ತರಿಯನ್ನು ಕೊಂಡು ಯಾವುದೇ ಪತ್ರ ಬಂದರೂ ನೀಟಾಗಿ ಕತ್ತರಿಸಿ ನೋಡುವ ಪರಿಪಾಠವನ್ನು ಶುರುಮಾಡಿಕೊಂಡಿರುವೆ.

ಅವರ ಮನೆಗೆ ಹೋದಾಗ ಡಾ॥ ಜ್ಯೋತ್ಸ್ನಾ ಕಾಮತರು ಡಾ॥ ಕಾಮತರು ಚಿತ್ರ ಬಿಡಿಸಿರುವ ರೇಷ್ಮೇ ಸೀರೆಗಳನ್ನು ತೋರಿಸಿದರು. ನಿಜಕ್ಕೂ ಆ ಚಿತ್ರಗಳು ಅದ್ಭುತ ಮತ್ತು ಸೀರೆಯಂತೂ ಅತ್ಯದ್ಭುತ. ಪತಿಯಾದವರು ಪತ್ನಿಗೆ ಇದಕ್ಕಿಂತ ಉತ್ತಮವಾದ ಉಡುಗೊರೆ ಕೊಡಲು ಸಾಧ್ಯವೇ ಇಲ್ಲ ಅನ್ನಿಸಿತು. ಡಾ॥ ಕಾಮತರು ಅವರ ಮನೆಯ ಕಿಟಕಿಯ ಗಾಜಿನ ಮೇಲೂ ಚಿತ್ರ ಬಿಡಿಸಿರುವರು. ಅವರಿರುವ ಅಪಾರ್ಟ್‌ಮೆಂಟಿನ ಮುಂದಿನ ರಸ್ತೆಯಲ್ಲಿ ನಿಂತು ಗಮನಿಸಿದರೆ ಅವು ಸುಂದರವಾಗಿ ಕಾಣುತ್ತವೆ.

ಅತ್ಯುತ್ತಮ ಛಾಯಾಚಿತ್ರಕಾರರಾಗಿ ಡಾ॥ ಕಾಮತರ ಬಳಿ ೨ ಲಕ್ಷಕ್ಕೂ ಹೆಚ್ಚು ಅವರು ತೆಗೆದಿರುವ ಛಾಯಾಚಿತ್ರಗಳ ಸಂಗ್ರಹವಿದೆ. ಅವರ ವೆಬ್‌ಸೈಟ್‌ನಿಂದಾಗಿ ಅವರ ಛಾಯಾಚಿತ್ರಗಳು ಪ್ರಪಂಚದಾದ್ಯಂತ ನೋಡುವಂತಾಗಿದೆ. ನನಗೆ ಇಷ್ಟವಾದದ್ದು ಪ್ರತಿಯೊಂದು ಛಾಯಾಚಿತ್ರಕ್ಕೂ ಅವರು ಕೊಡುವ ವಿವರಣೆಗಳು. ಅವರ ಅನೇಕ ಕೌಶಲ್ಯಗಳಲ್ಲಿ ಇದೂ ಸಹ ಒಂದು.

ಅಮೆರಿಕೆಯಲ್ಲಿ ಕ್ರಿಶ್ ಆಗಿ, ಬಂಗಾಲದಲ್ಲಿ ಕಾಮಟಬಾಬು ಆಗಿ, ಯಾವುದೇ ಸ್ಥಳದಲ್ಲಿದ್ದರೂ ಅಲ್ಲಿನವರೇ ಆಗಿಬಿಡುವ ಅವರ ಈ ಗುಣದಿಂದಾಗಿ ಅವರು ಬರೆದಿರುವ ಪ್ರವಾಸಕಥನಗಳಾದ 'ನಾನೂ ಅಮೇರಿಕೆಗೆ ಹೋಗಿದ್ದೆ' 'ಮಧ್ಯಪ್ರದೇಶದ ಮಡಿಲಲ್ಲಿ' 'ವಂಗದರ್ಶನ', 'ಬಸ್ತರ ಪ್ರವಾಸ' ಇತ್ಯಾದಿಗಳನ್ನೆಲ್ಲ ಅನುಭವ ಕಥನವೂ ಅನ್ನಬಹುದೆನಿಸುತ್ತದೆ. ಅವರು ಬರೆದಿರುವುದೆಲ್ಲ ಅವರ ಅನುಭವಗಳೇ.

ನಾನು ಅವರಿಗೆ ಬರೆದ ಕಡೆಯ ಪತ್ರದಲ್ಲಿ ಆರು ಆವೃತ್ತಿಗಳನ್ನು ಕಂಡಿರುವ ಅವರ ನಾನೂ ಅಮೇರಿಕೆಗೆ ಹೋಗಿದ್ದ ಪುಸ್ತಕವು ಈಗ ಪ್ರತಿಗಳು ಮುಗಿದಿರುವುದರಿಂದ ಸಿಗುತ್ತಿಲ್ಲವೆಂದು ಬರೆದಿದ್ದೆ. ಅದನ್ನೋದಿದ ಅವರು ನಾನು ಅವರ ಮನೆಗೆ ಹೋದಾಗ ನನಗೆ ಆ ಪುಸ್ತಕ ಕೊಡೋಣವೆಂದು ಅವರ ಪತ್ನಿಯವರೊಡನೆ ಹೇಳಿದ್ದರಂತೆ. ಆದರೆ ನಾನವರ ಮನೆಗೆ ಹೋದದ್ದು ಅವರ ನಿಧನದ ನಂತರ. ಆದರೂ ಡಾ। ಜ್ಯೋತ್ಸ್ನಾ ಕಾಮತರು ಅವರ ಹಸ್ತಾಕ್ಷರದೊಂದಿಗೆ 'ನಾನೂ ಅಮೇರಿಕೆಗೆ ಹೋಗಿದ್ದೆ' ಪುಸ್ತಕವನ್ನು ಕೊಟ್ಟರು. ವಿಕಾಸ ಕಾಮತರ 'The Timeless theatre' ಸಿಡಿರಾಮ್ ಕೊಟ್ಟರು. 'ನಾನೂ ಅಮೇರಿಕೆಗೆ ಹೋಗಿದ್ದೆ' ಪುಸ್ತಕವನ್ನು ಓದಿದಾಗ ನನಗನಿಸಿದ್ದು ೩೦ ವರ್ಷಕ್ಕೂ ಮುಂಚಿನ ಪುಸ್ತಕವಾದರೂ ಈಗಲೂ ಪ್ರಸ್ತುತವೆನಿಸುತ್ತದೆ. ಅಮೆರಿಕೆಯ ಒಳ್ಳೆಯ ಗುಣಗಳ ಜೊತೆ ಭಾರತದ ಒಳ್ಳೆಯ ಗುಣಗಳನ್ನು ಸಮನ್ವಯಿಸುತ್ತಾ ಕೆಟ್ಟಗುಣಗಳು ಭಾರತದ್ದೇ ಆದರೂ ಅಮೆರಿಕೆಯದ್ದೇ ಆದರೂ ಖಂಡಿಸುತ್ತಾ ತಮ್ಮ ಹೊರದೇಶದಲ್ಲಿನ ಅನುಭವಗಳನ್ನು ತುಂಬಾ ಚೆನ್ನಾಗಿ ಬರೆದಿದ್ದಾರೆ. ಇದನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದಿದ್ದರೆ ನಿಜಕ್ಕೂ ಪ್ರಪಂಚದಾದ್ಯಂತ ಮೆಚ್ಚುಗೆ ಪಡೆಯುತ್ತಿತ್ತೆನ್ನುವುದರಲ್ಲಿ ಸಂಶಯವಿಲ್ಲ, ಏಕೆಂದರೆ ಹೊರದೇಶದವರಿಗೆ ಭಾರತದ ಬಗ್ಗೆ ಭಾರತೀಯರ ಬಗ್ಗೆ ಇರುವ ನಾನಾ ಪ್ರಶ್ನೆಗಳು, ಸಂಶಯಗಳಿಗೆ ಸಮರ್ಪಕವಾದ ಉತ್ತರವನ್ನು ಈ ಪುಸ್ತಕದಲ್ಲಿ ಡಾ॥ ಕಾಮತರು ಕೊಡುತ್ತಾರೆ.

ಮಧ್ಯಪ್ರದೇಶದ ಮಡಿಲಲ್ಲಿ ಪುಸ್ತಕವನ್ನು ಓದಿ ಇಷ್ಟೊಂದು ಕಷ್ಟಕರವಾದ ಪ್ರವಾಸವನ್ನು ಅವರು ಹೇಗೆ ಮಾಡಿರಬಹುದು ಎಂದು ಆಶ್ಚರ್ಯಪಟ್ಟು ತಡೆಯಲಾಗದೇ ಡಾ॥ ಜ್ಯೋತ್ಸ್ನಾಕಾಮತರನ್ನು ಕೇಳಿದೆ. ದಟ್ಟ ಕಾಡುಗಳಲ್ಲಿದ್ದ ಕುಗ್ರಾಮಗಳಿಗೆ ಯಾವ ವಾಹನವಾಗಲಿ ಹೋಗದಲ್ಲಿ ಅನ್ನ-ನೀರುಗಳಾಗಲಿ ಸಿಗದೇ ಇದ್ದರೂ ದಿನವೂ ಕಾಲುನಡಿಗೆಯಲ್ಲಿ ಇಪ್ಪತ್ತೈದರಿಂದ ಮೂವತ್ತು ಕಿಲೋಮೀಟರು ಹೋಗಿ ಬರುತ್ತಿದ್ದರಂತೆ. ಬಾಯಾರಿಕೆ ತಡೆಯದಾದಾಗ ಹಳ್ಳಿಗರ ಹೊಂಡದ ನೀರು ಕುಡಿಯುತ್ತಿದ್ದರಂತೆ. ಮಧ್ಯಪ್ರದೇಶದ ಪ್ರವಾಸ ಮುಗಿಸಿಕೊಂಡು ಬಂದ ನಂತರ ಎಷ್ಟೋ ದಿನಗಳು ಅವರ ಆರೋಗ್ಯ ಸರಿಯಾಗಿಯೇ ಇರಲಿಲ್ಲವಂತೆ. ತಿಂದದ್ದು ಸರಿಯಾಗಿ ಜೀರ್ಣವಾಗುತ್ತಿರಲಿಲ್ಲವಂತೆ. ನಂತರ ಕ್ರಮೇಣ ಸುಧಾರಿಸಿಕೊಂಡರಂತೆ. ಪುಸ್ತಕವನ್ನು ಓದಿ ಆನಂದಿಸಿ ಕುಳಿತಲ್ಲೇ ಮಧ್ಯಪ್ರದೇಶ, ಬಂಗಾಲ, ಅಮೇರಿಕವನ್ನೆಲ್ಲಾ ನೋಡಿ ಬಿಡುವ ನಮಗೆ ಅದರ ಹಿಂದಿನ ಅವರ ಶ್ರಮ, ಕಷ್ಟಗಳು, ತಿಳಿಯುವುದಿಲ್ಲವೇನೋ!

ಕಾಗೆಗಳ ಬಗ್ಗೆ ಅಧ್ಯಯನ, ಅದರ ಚಟುವಟಿಕೆಗಳ ಬಗ್ಗೆ ಗಮನ ಮತ್ತು ಅದನ್ನು ಅಭ್ಯಸಿಸಿ ಅವರು ಬರೆದಿರುವ ಲೇಖನಗಳು ಮತ್ತು 'ಕಾಗೆಯ ಕಾಯಕ' ಪುಸ್ತಕದಿಂದಾಗಿ ಡಾ। ಕಾಮತರು 'ಕಾಗೆ ಕಾಮತ್' ಎಂದೂ ಗುರುತಿಸಲ್ಪಡುತ್ತಾರೆ. ಸ್ವಾನುಭವದಿಂದ ಬರೆದಿರುವ 'ಕಾಗೆಯ ಕಾಯಕ' ಪುಸ್ತಕ, ನಾನು ನೋಡಿ ತಿಳಿದಂತೆ ಕಾಗೆಯ ಬಗ್ಗೆ ಮೊದಲನೆ ಪುಸ್ತಕ. ಕಾಗೆಯನ್ನು ಅಸ್ಪೃಶ್ಯವೆಂದು ಬಗೆದು ಅದನ್ನು ಮುಟ್ಟಬಾರದೆಂಬ ಮೂಢನಂಬಿಕೆಗಳನ್ನೆಲ್ಲಾ ಬಿಟ್ಟು ಒಂದು ಕಾಗೆಯ ಮರಿಯನ್ನು ಅವರ ಮನೆಯಲ್ಲಿ ಸಾಕಲು ಪ್ರಯತ್ನಿಸಿದ್ದರಂತೆ. ಆ 'ಕರಿಯ'ನ ಸಾಕಷ್ಟು ಫೋಟೋಗಳನ್ನು ತೆಗೆದಿದ್ದರಂತೆ. ಆದರೆ expose ಆಗಿರುವ ರೋಲನ್ನು ತಿಳಿಯದೇ ಉಪಯೋಗಿಸಿದ್ದುದರಿಂದ ಅಷ್ಟೂ ಛಾಯಾ ಚಿತ್ರಗಳು ಹಾಳಾಗಿ ಆ ಕರಿಯನ ಒಂದು ಫೋಟೋವಿಲ್ಲದೆ ತುಂಬಾ ವ್ಯಥೆಪಟ್ಟರಂತೆ.

ಡಾ॥ ಕಾಮತರು ಕಾವಿಕಲೆಯ ಬಗ್ಗೆ ವ್ಯಾಪಕವಾಗಿ ಅಧ್ಯಯನ ಮಾಡಿ ನೂರಾರು ಛಾಯಾಚಿತ್ರ, ವರ್ಣಪಾರದರ್ಶಿಕೆಗಳನ್ನು ಸಂಗ್ರಹಿಸಿ ಮಾಡಿರುವ ಪುಸ್ತಕವಂತೂ ಅದ್ಭುತವಾಗಿದೆ.

ವೈಜ್ಞಾನಿಕ ಛಾಯಾಚಿತ್ರಕಾರರೋ, ಪರಿಸರ ಪ್ರೇಮಿಯೋ, ಪ್ರವಾಸ ಕಥನಕಾರರೋ, ಸಾಹಿತಿಯೋ, ಕೀಟಶಾಸ್ತ್ರಪಂಡಿತರೋ, ಪತ್ರಮಿತ್ರರೋ, ಚಿತ್ರಕಾರರೋ, ಪಾಕಪ್ರವೀಣರೋ, ವಿದೇಶದಲ್ಲಿ ಅತ್ಯುತ್ತಮ ಅವಕಾಶಗಳಿದ್ದೂ ಓದಿ ಭಾರತಕ್ಕೇ ಬಂದ ದೇಶಭಕ್ತರೋ, ಹೀಗೆ ಎಲ್ಲವೂ ಆಗಿರುವ ಅವರ ಒಟ್ಟು ವ್ಯಕ್ತಿತ್ವದಿಂದ ನಾನು ಪ್ರಭಾವಿತನಾಗಿ ಮಾರುಹೋಗಿ ಅವರ ಅಭಿಮಾನಿಯಾಗಿರುವೆನು. ನನ್ನ ಜೀವನದಲ್ಲಿ ಮುಂದೆ ಯಾವುದೇ ರೀತಿಯ ಉತ್ತಮ ಸಾಧನೆಗಳಾದರೂ ಅದಕ್ಕೆ ಪರೋಕ್ಷವಾಗಿ ಡಾ॥ ಕೃಷ್ಣಾನಂದ ಕಾಮತರೂ ಸಹ ಕಾರಣರು ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತೇನೆ. ಅವರು ತಮ್ಮ ಕೃತಿಗಳಿಂದಾಗಿ ಮತ್ತು ಇಬ್ಬರು ಅಂಧರಿಗೆ ಕೊಟ್ಟ ಅವರ ಕಣ್ಣಿನಿಂದಾಗಿ ಇನ್ನೂ ನಮ್ಮೊಂದಿಗಿದ್ದಾರೆ.

❑



# ಕಾಮತರಿಂದ ಕಲಿತ 'ಕ್ಲಿಕ್ಕಿಂಗ್'

**ಡಾ|| ಕೆ. ಸೋಮಶೇಖರ್**

ನಾನು ಕೃಷ್ಣಾನಂದ ಕಾಮತರನ್ನು ಸಂಧಿಸಿದ್ದು ಆಕಸ್ಮಿಕವಾಗಿ. ಆದರೆ ಆ ಭೇಟಿ, ಮುಂದೆ ಹಲಕಾಲ ಅವರು ನನ್ನ ಛಾಯಾಗ್ರಹಣದ ಆಸಕ್ತಿಗೆ ನೀರೆರೆದು ಬೆಳೆಸಲು ನಾಂದಿಯಾದೀತು! ಎಂದು ಊಹಿಸಿರಲೇ ಇಲ್ಲ.

೧೯೭೧-೭೩ ರ ಸುಮಾರಿಗೆ ನಾನು ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದೆ. ಫೋಟೋಗ್ರಾಫಿಯನ್ನು ಹವ್ಯಾಸವಾಗಿ ಬೆಳೆಸಿಕೊಂಡಿದ್ದೆ. ಒಂದು ಕ್ಯಾಮರಾ ಹೊಂದಿಸಿಕೊಂಡು ಆಗೀಗ ಕ್ಲಿಕ್ಕಿಸುವದು, ಅಲ್ಲೇ ಪರಿಚಿತ ಸ್ಟುಡಿಯೋ ಒಂದರಲ್ಲಿ ಡೆವಲಪ್, ಪ್ರಿಂಟ್ ಮಾಡಿಸಿ ನಾನೊಬ್ಬ ಫೋಟೋಗ್ರಾಫರ ಆಗ್ತಾ ಇದ್ದೀನಿ! ಅನ್ನುವ ವಿಶ್ವಾಸ ಬೆಳೆಸಿಕೊಂಡಿದ್ದೆ.

ಒಮ್ಮೆ ಕುಟುಂಬದ ಕಾರ್ಯವೊಂದರಲ್ಲಿ ಸೇರಿದ ಸದಸ್ಯರೆಲ್ಲರ ಫೋಟೋಗಳನ್ನು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಸೆರೆಹಿಡಿದೆ. ಬೆಂಗಳೂರಿಗೆ ಬಂದಿದ್ದೆ, ಉತ್ತಮ ಫಲಿತಾಂಶಕ್ಕೆ 'ಬೆಂಗಳೂರ ಫೋಟೋ' ಸ್ಟುಡಿಯೋನೇ ಸರಿ! ಎಂದು ಹುಡುಕಿಕೊಂಡು ಹೋದೆ. ಅದು ಆ ಸಮಯಕ್ಕೇ ಮುಚ್ಚಿತ್ತು. ಉಪಾಯವಿಲ್ಲದೇ ಮಲ್ಲೇಶ್ವರದ ಮಾರ್ಗೋಸಾ ರಸ್ತೆಯಲ್ಲಿರುವ ಅಂಗಡಿಗಳ ಬೋರ್ಡು ನೋಡುತ್ತ ಹೊರಟಿದ್ದೆ. **ಡಾ|| ಕಾಮತರ ವೈಜ್ಞಾನಿಕ ಹಾಗೂ ಛಾಯಾಗ್ರಹಣದ ಲ್ಯಾಬೋರೇಟರಿ** ಬೋರ್ಡು ಕಂಡೊಡನೆ ಒಳಹೊಕ್ಕೆ. ಧಡೂತಿ ಆಸಾಮಿಯೋರ್ವರು, ಬರೆಯುತ್ತ ಟೇಬಲ್ ಬಳಿ ಕುಳಿತಿದ್ದರು. ನಸುನಕ್ಕು ಸ್ವಾಗತಿಸಿದರು. ನನ್ನನ್ನು ಪರಿಚಯಿಸಿಕೊಂಡು, ಆವಶ್ಯಕತೆಯನ್ನು ವಿವರಿಸಿ, ರೋಲ್ ಕೊಟ್ಟು, ಅವಸರವಿದ್ದುದರಿಂದ ಶೀಘ್ರವೇ ಪ್ರಿಂಟ್‌ಗಳನ್ನು ಕೊಡುವಂತೆ ಹೇಳಿ ಬಂದೆ.

ನಿಗದಿತ ಸಮಯಕ್ಕೆ ಹೋಗಿ, ಸಂಭ್ರಮದಿಂದ ನನ್ನ ಕಲಾಕೃತಿಯನ್ನು ಪಡೆದು ನೋಡಿದಾಗ ಭೂಮಿಗಿಳಿದು ಹೋದೆ! ಚಿತ್ರಗಳೆಲ್ಲ ಅಧ್ವಾನವಾಗಿದ್ದವು. ಎಲ್ಲ ವ್ಯಕ್ತಿಗಳ ಮುಖ ಕಪ್ಪು ಹಾಗೂ ಕೂದಲು ಬೆಳ್ಳಗೆ ಮೂಡಿದ್ದವು. ಐದುವರ್ಷದ ಮಗುವಿನ ತಲೆಕೂದಲು ಬೆಳ್ಳಂ ಬೆಳ್ಳಗೆ ಬರುವದುಂಟೇ? ಇದು 'ಪ್ರಿಂಟಿಂಗ್ ಮಿಸ್ಟೇಕ್' ಎನ್ನುವದರಲ್ಲಿ ನನಗೆ ಸಂದೇಹವೇ ಉಂಟಾಗಲಿಲ್ಲ. ನನ್ನ ಶ್ರಮವನ್ನೆಲ್ಲ ಈ ನಕಲಿ ಛಾಯಾಗ್ರಾಹಕ ತಪ್ಪು ಡೆವಲಪ್ ಹಾಗೂ ಪ್ರಿಂಟ್ ಮಾಡಿ ವ್ಯರ್ಥಗೊಳಿಸಿದ! ಎಂದು ಸಿಟ್ಟೇರಿತು. ಕಾರಿಕೊಳ್ಳಲು ಸುತ್ತ ನೋಡಿದೆ. ಇನ್ನಾವ ಸಹಾಯಕನಾಗಲಿ, ವ್ಯಕ್ತಿಯಾಗಲಿ ಕಣ್ಣಿಗೆ ಬೀಳಲಿಲ್ಲ. ಲ್ಯಾಬ್ ಮಾಲಿಕರತ್ತ ದುರುಗುಟ್ಟಿ ನೋಡಿದೆ. ಅವರು ನಿರ್ವಿಕಾರವಾಗಿ ಕುಳಿತಿದ್ದರು.

"ನನ್ನ ನಿರೀಕ್ಷೆ ಪ್ರಕಾರ, ನೀವು ಪ್ರಿಂಟ್ ತೆಗೆದಿಲ್ಲ!" ಇದ್ದುದರಲ್ಲೇ ತಾಳ್ಮೆ ತಂದುಕೊಂಡು ನುಡಿದೆ.

"ನನ್ನ ನಿರೀಕ್ಷೆ ಪ್ರಕಾರ, ಒಂದೂ ಫ್ರೇಮು ನೀವು ಕ್ಲಿಕ್ಕಿಸಿಲ್ಲ!" ನಗುಮುಖದಿಂದ ಆದರೆ ಗಂಭೀರ ಧ್ವನಿಯಲ್ಲಿ ಆತ ಉತ್ತರಿಸಿದರು. ಹೆಚ್ಚು ವಿವರಿಸಲು ಹೋಗಲಿಲ್ಲ.

ನಾನು ದಿಙ್ಮೂಢನಾಗಿ ಕುಳಿತುಬಿಟ್ಟಿದ್ದೆ. ಕಾಮತರು ಸಾಂತ್ವನದ ಧ್ವನಿಯಲ್ಲಿ ನನ್ನ ಕಲಾಕೃತಿಗಳಿಗೆಲ್ಲ ಹುಟ್ಟಿನಲ್ಲೇ ರೋಗ ಕಾಣಿಸಿಕೊಂಡಿದೆ! ತನ್ನ ಮೇಲು ಚಿಕಿತ್ಸೆ ಪರಿಣಾಮಕಾರಿ ಆಗಲು ಸಾಧ್ಯವಿರಲಿಲ್ಲ ಎಂದು ಹೇಳಿದರು. ಫೋಟೋ ಲ್ಯಾಬ್ ನಡೆಸುತ್ತಿದ್ದ ಈ ಡಾಕ್ಟರು, ನನ್ನ ಛಾಯಾಚಿತ್ರ ಕಲೆಯ 'ಡಾಯಗ್‌ನೋಸಿಸ್' ಹೇಳಿಬಿಟ್ಟಿದ್ದರು.! ವಿವರಗಳನ್ನೆಲ್ಲ ನನ್ನಿಂದಲೇ ಹೊರಡಿಸುವ ಎಚ್ಚರಿಕೆ ವಹಿಸಿದ್ದರು.

"ನೀವು ಫೋಟೋ ತೆಗೆದದ್ದು ಯಾವ ಸಮಯದಲ್ಲಿ?"

"ಬೆಳಿಗ್ಗೆ... ಅಲ್ಲ! ಮಧ್ಯಾಹ್ನವೆಂದು ಕಾಣುತ್ತದೆ!

"ಅಜಮಾಸ ಯಾವ ವೇಳೆ?"

"ಸುಮಾರು ೧೨ ರಿಂದ ೧ ಗಂಟೆಯಾಗಿತ್ತು"

"ಅಲ್ಲವೇ? ಅದಕ್ಕೆ ಹೀಗಾ ಗಿದೆ! ನಡು ಮಧ್ಯಾಹ್ನದ ವೇಳೆ, ಕ್ಲಿಕ್ಕಿಸಲು ಸೂಕ್ತ ಸಮಯವಲ್ಲ........ಹೋಗಲಿ! ಸೂರ್ಯನ ಬೆಳಕು ಯಾವ ಕಡೆಯಿಂದ ಬರುತ್ತಿತ್ತು?"

ನಾನು ತಡವರಿಸಿದೆ. "ಅದೆ ತಡೆಯಿಲ್ಲದ ನೇರ ಬೆಳಕಿನಲ್ಲೇ ಜನರನ್ನು ನಿಲ್ಲಿಸಿದ್ದೆ?" ರೈಲು ಬಿಟ್ಟೆ.

“ನೋಡಿ! ಸೂರ್ಯನೆತ್ತಿಯ ಮೇಲಿದ್ದಾಗ ಕ್ಲಿಕ್ಕಿಸಿದ್ದೀರಿ! ಬೆಳಕು ಕ್ಯಾಮರಾದಲ್ಲಿ ರಿಫ್ಲೆಕ್ಟ್ ಆಗಿದೆ! ಸಹಜವಾಗಿ ಮುಖ ಕಪ್ಪು ಬಂದಿದೆ. ಸೂರ್ಯನ ಬೆಳಕು ವ್ಯಕ್ತಿಯ ಹಿಂದೆ ಇದ್ದಾಗ ಮುಖದ ಪ್ರತಿಬಿಂಬ ಸರಿಯಾಗಿ ಮೂಡಲು ಹೇಗೆ ಸಾಧ್ಯ? ಮಗುವಿನ ತಲೆಗೂದಲು ಕೂಡ ಬಿಳಿದಾಗಲು ಕಾರಣ ಯೋಚಿಸಿದಿರಾ?.... ಈ ಫ್ರೇಮ್ ನೋಡಿ. ಫೋಕಸ್ ಮಾಡಬೇಕಾದ ವಸ್ತು ಯಾವುದು? ಎಂದು ಪೂರ್ವನಿರ್ಧಾರ ಮಾಡಿದ್ದಿರಾ?.... ಇಲ್ಲಿ ಖಾಲಿಜಾಗ ಬಾರದಂತೆ ಕ್ಯಾಮರಾ ಕೋನ ನಿಗದಿಪಡಿಸಿದ್ದಿರಾ?” ಶಾಂತವಾಗಿ, ನುರಿತ ಶಿಕ್ಷಕನೊಬ್ಬ ಹೊಸದಾಗಿ ಸ್ಕೂಲು ಸೇರಿದ ಹುಡುಗನಿಗೆ ಪ್ರಾತ್ಯಕ್ಷಿಕೆ ನೀಡುವ ತೆರದಲ್ಲಿ ಪ್ರಶ್ನೆ ಕೇಳುತ್ತ ಉತ್ತರ ಪಡೆಯುತ್ತ ನಡೆದರು. ಜೊತೆಗೆ ಛಾಯಾಗ್ರಹಣದ ಕೆಲ ಮೂಲತತ್ವಗಳನ್ನು ತಿಳಿಯಪಡಿಸಿದರು.

ನನ್ನ ಸಿಟ್ಟು ಝರ್ರನೆ ಇಳಿದು ಹೋಯಿತು. ಕ್ಲಿಕ್ಕಿಸುವಲ್ಲಿ ಮಾಡಿದ ಯಾವತ್ತೂ ತಪ್ಪುಗಳನ್ನು ನಾನಾಗಿಯೇ ಮನಗಾಣುವಂತೆ, ಧ್ವನಿ ಏರಿಸದೇ, ನೋಯಿಸದೇ ತೋರಿಸಿಕೊಟ್ಟಿದ್ದರು. ಅಪರೂಪದ ಸ್ಟುಡಿಯೋ ವ್ಯಕಿಯ ಬಗ್ಗೆ ಗೌರವಾದಾರಗಳು ಹುಟ್ಟಿದವು.

“ಯೋಚಿಸಬೇಡಿ! ನಿಮಗೆ ಈ ಕಲೆಯಲ್ಲಿ ಆಸಕ್ತಿ ಇದೆ. ಮುಂದಿನ ಬಾರಿ ನೆಳಲು–ಬೆಳಕುಗಳ ಆದ್ಯತೆಯ ಬಗ್ಗೆ ಹೆಚ್ಚಿನ ನಿಗಾ ವಹಿಸಿ! ಖಂಡಿತ ಒಳ್ಳೆಯ ಪರಿಣಾಮ ಸಿಗುತ್ತದೆ!” ಹುರಿದುಂಬಿಸಿದರು. ಅವರಬಳಿ, ಇದ್ದ ಎರಡು ರೋಲ್ ಕೊಟ್ಟರು. ಉಪಯೋಗಿಸುವ ವಿಧಾನ ಹೇಳಿದರು.

ಅವರ ಲ್ಯಾಬ್ ಕೇವಲ ವ್ಯಾಪಾರದ, ಕೊಡು–ಕೊಳೆಯ ಸ್ಥಳವಾಗಿರದೇ, ನನ್ನಂಥ ಹವ್ಯಾಸಿ ಫೋಟೋಗ್ರಾಫರಗಳಿಗೆ ಕಲಿಕೆಯ ಕೇಂದ್ರವೂ ಆಗಿದೆಯೆಂದು ಬೇಗನೇ ತಿಳಿದುಕೊಂಡೆ. ಸಾಧ್ಯವಿದ್ದಾಗಲೆಲ್ಲ ಕ್ಲಿಕ್ಕಿಸುವ, ಕೈಚಳಕದ ತಂತ್ರ ಅವರಿಂದ ಅರಿಯಲಾರಂಭಿಸಿದೆ. ಅವರೂ ಮುಕ್ತಮನಸ್ಸಿನಿಂದ, ಆಸಕ್ತಿಯಿಂದ, ನನ್ನ ಸಂದೇಹಗಳನ್ನು ನಿವಾರಿಸುತ್ತಿದ್ದರು. ಹೊಸ ವಿಧಾನಗಳನ್ನು ಹೇಳಿಕೊಡುತ್ತಿದ್ದರು.

ವೈದ್ಯಕಿಯ ವಿದ್ಯಾರ್ಥಿಯಾಗಿ ಕೊನೆಯ ವರ್ಷದ ಅಭ್ಯಾಸದ ಒತ್ತಡಗಳ ನಡುವೆಯೂ ನನ್ನ ಕ್ಲಿಕ್ಕಿಸುವ ಚಪಲ ಜಾರಿ ಇತ್ತು. ನನ್ನ ದೊಡ್ಡಪ್ಪನ ಮಗನ ಮದುವೆ ಮೈಸೂರಲ್ಲಿ ಏರ್ಪಟ್ಟಿತ್ತು. ಇನ್ನಿಬ್ಬರು ಉತ್ಸಾಹಿಗಳು ನನ್ನೊಂದಿಗೆ ಕ್ಲಿಕ್ಕಿಸುವ ಕಾರ್ಯಕ್ರಮದಲ್ಲಿ ಪಾಲ್ಗೊಂಡರು. ನಾನು ಐದುರೋಲ್ ಮುಗಿಸಿದೆ. ಇನ್ನಿಬ್ಬರು ಮೈಸೂರಲ್ಲೆ ಡೆವಲಪ್, ಪ್ರಿಂಟ್ ವ್ಯವಸ್ಥೆ ಮಾಡಿದರೂ ನಾನು ರೋಲುಗಳನ್ನು ಹೊತ್ತು ತಂದು ಕಾಮತರ ಕೈಗಿತ್ತೆ. ಅವರೂ ಶೀಘ್ರವೇ ಡೆವಲಪ್ ಹಾಗೂ ಪ್ರಿಂಟ್ ಮಾಡಿ ಚಿತ್ರಗಳನ್ನು ಪೂರೈಸುವ ಆಶ್ವಾಸನೆ ಇತ್ತರು.

ಆದರೆ ನನಗೆ ಆತನಕ ಕಾಯುವ ತಾಳ್ಮೆ ಇರಲಿಲ್ಲ. ರಾತ್ರೆಯಿಡೀ ನನ್ನ ಕಲ್ಪನೆಯ ಕ್ಲಿಕ್ಕುಗಳೆಲ್ಲ ಮೈದಾಳಿ ಕಣ್ಣೆದುರು ಕುಣಿಯುತ್ತಿದ್ದವು.! ಬೆಳಿಗ್ಗೆ ಕಾಮತರ ಲ್ಯಾಬಿಗೆ ಹೋಗಿ ಡಾರ್ಕ್‌ರೂಂ ಹೊಕ್ಕು ಇನ್ನೂ ರಾಸಾಯನಿಕಗಳಲ್ಲಿ, ನೀರಿನಲ್ಲಿದ್ದ ನೆಗೆಟಿವ್‌ಗಳನ್ನು ನೋಡಿ, ನೋಡಿ ನಲಿದೆ. ಒಂದಕ್ಕಿಂತ ಒಂದು ಸ್ಫುಟವಾಗಿದ್ದವು. ೨೦೭ ಫ್ರೇಮುಗಳಲ್ಲಿ ಯೋಗ್ಯವೆನಿಸಿದವುಗಳನ್ನು enlarge ಮಾಡಿಕೊಡಿ! ಎಂದು ಹೇಳಿ ಹೊರಬಿದ್ದೆ. ಮೈಸೂರಲ್ಲೇ ರೋಲ್ಸ್ ಕೊಟ್ಟವರಿಗೆ ಘೋರ ನಿರೀಕ್ಷೆ ಕಾದಿತ್ತು. ನಿಗದಿತ ವೇಳೆಗೆ ಹೋಗಿ ಪ್ರಿಂಟ್‌ಗಳನ್ನು ನೋಡಿ, ಖುಷಿಯಿಂದ ಕುಣಿದಾಡುವಂತಾಗಿತ್ತು. you have done a wonderful job Kamat ! ಎಂದೆ. ಆ ಫೋಟೋಗಳು ಮದುಮಗನಿಗೆ, ಕುಟುಂಬದ ಇತರ ಸದಸ್ಯರಿಗೆ ನೀಡಿದ ಓಗ್ಗು, ಸಂತೋಷಗಳನ್ನು ವರ್ಣಿಸಲು ಸಾಧ್ಯವಿಲ್ಲ. ಕೆಲವು ರಿಪ್ರಿಂಟ್ ಅರ್ಜೆಂಟಾಗಿ ಬೇಕೆಂದು ಮೈಸೂರಿನ ಸ್ಟುಡಿಯೋಗೆ ಹೋದಾಗ ಕಾಮತರ ಕೆಲಸಕ್ಕೂ ಅದರ ರೇಟಿಗೂ ಮೈಸೂರಿನದಕ್ಕೂ ಇದ್ದ ಮಹದಂತರವನ್ನು ಎಲ್ಲರೂ ಅರಿಯುವಂತೆ ಆಯಿತು.

ಈ ನಡುವೆ ನಡೆದ ಸ್ವಾರಸ್ಯಕರ ಘಟನೆಯೊಂದನ್ನು ಹೇಳಲೇಬೇಕು. ಕಾಮತರ ಪರಿಚಯ ನಿಕಟವಾಗಿ, ಅವರ ಲ್ಯಾಬಿಗೆ ಎಡತಾಕುತ್ತಲೇ ಇದ್ದೆ. ಒಂದು ದಿನ ಅವರ ಟೇಬಲ್ ಮೇಲೆ ದುರ್ಗಾಮಾತೆಯ ಸುಂದರ ಚಿತ್ರವೊಂದು ಬಂಗಾಲದ ನಕಾಶೆಯಲ್ಲಿ ರೂಪತಾಳಿ ನಿಂತಿತ್ತು. ‘ವಂಗದರ್ಶನ’ ಎಂಬ ತಲೆಬರಹ ಹಾಗೂ ಕೃಷ್ಣಾನಂದ ಕಾಮತ್ ಎಂದು ಲೇಖಕರ ಹೆಸರುಗಳಿದ್ದವು. ಸುಂದರ ಬಣ್ಣ – ವಿನ್ಯಾಸದವು.

“ಕೃಷ್ಣಾನಂದ ಕಾಮತ್? I have read this fellow's other book. ಅಂದ ಹಾಗೆ ಈ ಚಿತ್ರ ಇಲ್ಲಿ ಹೇಗೆ ಬಂದಿತು?” ಎಂದು ಕಾಮತರನ್ನು ಕೇಳಿದೆ. ಅವರು ಮುಗುಳ್ನಕ್ಕರು. ಮಾತನಾಡಲಿಲ್ಲ.

“ಸರ್, ನಿಮ್ಮ ಪೂರ್ಣ ಹೆಸರನ್ನು ನಾನು ಕೇಳಲಿಲ್ಲ! ಕೆ. ಎಲ್. ಕಾಮತ್ ಎಂದಿಷ್ಟೇ ಹೇಳಿದ್ದಿರಿ!” ಪ್ರಶ್ನಾರ್ಥಕವಾಗಿ ಅವರತ್ತ ನೋಡಿದೆ. ಕಾಮತ ಹೆಸರು ಕೊಂಕಣಿಗರಲ್ಲಿ ಸಾಮಾನ್ಯ..... ನಿಮ್ಮ ಮೊದಲ ಹೆಸರೇನು?” ಆಗಲೂ ಕಾಮತರು ಸುಮ್ಮನಿದ್ದರು. ತುಂಟನಗೆ ಮಿಂಚಿ ಮಾಯವಾದಂತೆನಿಸಿತು.

ನನಗೆ ಒಮ್ಮೆಲೇ ಏನೋ ಹೊಳೆದಂತಾಯ್ತು! "ನೀವು ಕೃಷ್ಣಾನಂದ ಕಾಮತರೇ?" ಕಾಮತರು ಸಮ್ಮತಿ ಸೂಚಕವಾಗಿ ತಲೆಯಲ್ಲಾಡಿಸಿದರು.

ನಾನು ಎರಡನೆ ಬಾರಿ ಕುಸಿದು ಬಿದ್ದೆ! ಭೂಮಿ ಬಾಯ್ತೆರೆದಂತಾಗಿತ್ತು! ದಿಗ್ಗನೆ ಎದ್ದುನಿಂತೆ. ಕೃಷ್ಣಾನಂದ ಕಾಮತರ 'ನಾನೂ ಅಮೇರಿಕಗೆ ಹೋಗಿದ್ದೆ' ಪುಸ್ತಕವನ್ನು ಓದಿ, ಆನಂದಿಸಿ, ಪ್ರವಾಸಕಥನ ಬರೆದರೆ ಹೀಗೆ ಬರೆಯಬೇಕು! ಎಂದು ಸ್ನೇಹಿತರಿಗೆಲ್ಲಾ ಓದಲು ಶಿಫಾರಸು ಮಾಡಿದ್ದೆ.

ಈಗ ಅದೇ ನಾನು ಮೆಚ್ಚಿಕೊಂಡ ಲೇಖಕ, ಎದುರಿಗೆ ಕುಳಿತಿದ್ದರು! ಛಾಯಾಚಿತ್ರಕಾರರಾಗಿ ನನಗಾಗಿ ನೂರಾರು ಚಿತ್ರಗಳನ್ನು ಮಾಡಿಕೊಟ್ಟಿದ್ದರು. ವೇಳೆ ವೇಳೆಗೆ ಮಾರ್ಗದರ್ಶನ ಮಾಡಿದ್ದರು. ಸ್ನೇಹಿತರಾಗಿದ್ದರು. ಆದರೆ ಅಜ್ಞಾತರಾಗಿ ಉಳಿದಿದ್ದರು! ಪೆಚ್ಚಾಗಿ ನಿಂತುಬಿಟ್ಟೆ.

ಕಾಮತರೀಗ ಮನಸ್ವೀ ನಕ್ಕರು. "ಕೂತುಕೊಳ್ಳಿ! ಸೋಮಶೇಖರ್. ಆರಾಮ ಮಾಡ್ರಿ ಎಂದರು" ಪೆಕರನಂತೆ ನಿಂತವನನ್ನು. ಆಗ ನನ್ನ ಮುಖದ ಮೇಲೆ ಮೂಡಿದ ದಿಗ್ಭ್ರಮೆ, ಆಶ್ಚರ್ಯ, ಆನಂದಗಳನ್ನು ಸೆರೆ ಹಿಡಿಯಲು ಕೈಯಲ್ಲಿ ಕ್ಯಾಮರಾ ಇರಲಿಲ್ಲ! ಎಂದು ಆ ಬಳಿಕ ಪತ್ನಿಯ ಬಳಿ ಪೇಚಾಡಿದರಂತೆ!

ಕಾಮತರು ಅಪೂರ್ವದ ಭಾವಚಿತ್ರಕಾರ (ಪೋರ್ಟ್ರೇಟ್ ಕಲಾವಿದ)ರಾಗಿದ್ದರು. ವಿವಿಧ ಮೂಡ್‌ಗಳನ್ನು ಸೆರೆಹಿಡಿಯುವದರಲ್ಲಿ ಮಿಗಿಲಾಗಿದ್ದರು. ಅವರ ದೃಷ್ಟಿಯಲ್ಲಿ ಮನುಷ್ಯ ಜೀವನದ ಎರಡು ಅವಸ್ಥೆಗಳು ಸಹಜ ಸುಂದರ ಭಾವಗಳಿಗೆ ಎಡೆಮಾಡಿಕೊಡುತ್ತಿದ್ದವು. ೫ ವರ್ಷದ ಒಳಗಿನ ಮಕ್ಕಳವು ಹಾಗೂ ಎಪ್ಪತ್ತು ವರ್ಷ ಮೀರಿದ ವೃದ್ಧರವು! "ಅಲ್ಲಿ ಕೃತ್ರಿಮತೆಗೆ ಅವಕಾಶವಿಲ್ಲ. They are self-expressive" ಎನ್ನುತ್ತಿದ್ದರು.

ಕಾಮತರು ಈಗ ಇನ್ನೂ ಹತ್ತಿರದವರಾದರು. ಅವರ ಬಿಚ್ಚು ಮನಸ್ಸಿನ ಸಲಹೆಗಳನ್ನು ಪಡೆಯುತ್ತ ನನ್ನ ಛಾಯಾಗ್ರಹಣವನ್ನು ಸಾಕಷ್ಟು ಸುಧಾರಿಸಿಕೊಂಡಿದ್ದೆ. ಕ್ರಮೇಣ ವಿವಿಧ ಫಿಲ್ಮ್‌ಗಳ ಉಪಯುಕ್ತತೆ, ಕ್ಯಾಮರಾ ಮೇಲಿನ ಕೈಹಿಡಿತ, ಬೆಳಕಿನ ಮಹತ್ವ, ತಾಂತ್ರಿಕ ಅಡಚಣೆಗಳು, ಅರೆಸೆಕೆಂಡು ವೇಳೆಯ ಮಹತ್ವ, ವಿವಿಧ ಕೋನಗಳ ಸೂಕ್ಷ್ಮಭೇದಗಳನ್ನೆಲ್ಲ ಹೇಳಿಕೊಟ್ಟರು. ನಾನಾಗ 400 ASA ಬಳಸುತ್ತಿದ್ದೆ. 100 ASA ಫಿಲ್ಮ್ ಹೆಚ್ಚು ಉಪಯುಕ್ತವೆಂದು ತಮ್ಮ ಬಳಿ ಇದ್ದ ರೋಲ್ ಕೊಟ್ಟರು. ಮಿತವ್ಯಯಕ್ಕಾಗಿ ಚಲಚ್ಚಿತ್ರಗಳಿಗೆ ಬಳಸುತ್ತಿದ್ದ ದೊಡ್ಡ ರೋಲುಗಳ ಕ್ಯಾನ್ ಖರೀದಿಸುವಂತೆ ಅವರೇ ಸೂಚಿಸಿದರು. ನಾಲ್ಕನೆಯ ವರ್ಷದ ಓದು ಮುಗಿಸಿ ನಿಶ್ಚಿಂತೆಯಾದ ಮೇಲೆ ಲಾಲಬಾಗಕ್ಕೆ ಹೋಗಿ ಕಾಮತರ ಸಲಹೆಯಂತೆ ಕ್ಲಿಕ್ಕಿಸಿದ ಪರ್ಣ-ಪುಷ್ಪಗಳ ಚಿತ್ರಗಳೆಲ್ಲ ಚೆನ್ನಾಗಿ ಮೂಡಿಬಂದವು. ಅವರಲ್ಲಿದ್ದ ಹೊಯ್ಸಳ ಶಿಲ್ಪಗಳ ಚಿತ್ರಸಂಪತ್ತು ನೋಡಿ ಮರುಳಾಗಿ, ನಾನೂ ಬೇಲೂರು-ಹಳೇಬೀಡು ಯಾತ್ರೆ ಕೈಕೊಂಡು ಮನಸಾರೆ ಕ್ಲಿಕ್ಕಿಸಿದೆ.

ಆದರೆ ಪ್ರಕೃತಿಚಿತ್ರಗಳ ಕೈಚಳಕ ಇಲ್ಲಿ ನಡೆಯಲಿಲ್ಲ! ಸುಂದರ ಶಿಲಾಬಾಲಿಕೆಯರೆಲ್ಲ ಕುಬ್ಜರೂಪ ತಾಳಿದ್ದರು! ಕೆಲವು ಚಿತ್ರಗಳಲ್ಲಿ ಗುರುತೇ ಹತ್ತದ ಉದ್ದ ಕೃಶಾಂಗಿಯರಾಗಿದ್ದರು. ಪುನಃ ಕಾಮತರ ಬಳಿ ಸಹಾಯಕ್ಕೆ ಧಾವಿಸಿದೆ. Bracket figure ಗಳ ಉತ್ತಮ ಚಿತ್ರ ಪಡೆಯಲು ನಾವು ದೇಹವನ್ನು ನಾನಾ ಬಗೆಯಲ್ಲಿ ಬಗ್ಗಿಸಿ, ಕೆಲವೊಮ್ಮೆ ಅರ್ಧ, ಪೂರ್ಣ ಮಲಗಿ ಕ್ಲಿಕ್ಕಿಸಬೇಕೆಂದು ಹೇಳಿದರು. "eye to eye" ಕ್ಯಾಮರಾವನ್ನು ಸಮಾನಾಂತರದಲ್ಲಿ ಹಿಡಿಯಬೇಕು 1/25 ದಷ್ಟು ಅಂತರ ಬಂದರೂ ಚಿತ್ರ ಹಾಳಾಯಿತೆಂದೇ ಲೆಕ್ಕ! ಎಂದೆಲ್ಲ ಹೇಳಿಕೊಟ್ಟರು. ಆ ಬಳಿಕ ಮೂರುಬಾರಿ ಬೇಲೂರಿಗೆ ಹೋಗಿ ಬಂದೆ. ಕೆಲಚಿತ್ರಗಳಿಗೆ ಕಾಮತರ ಮೆಚ್ಚುಗೆ ಪಡೆದೆ. ದರ್ಪಣ ಸುಂದರಿಯ ಚಿತ್ರವನ್ನು ಮನಸಾರೆ ಇಷ್ಟಪಟ್ಟು, ನನ್ನ ಅನುಮತಿ ಕೇಳಿ ಒಂದು ಪ್ರತಿ ಇಟ್ಟುಕೊಂಡರು. ಕತ್ತಿ-ಕುಂಬಳಕಾಯಿ ಅವರ ಕೈಯಲ್ಲೇ ಇದ್ದವು. ನನ್ನ ಅನುಮತಿಯ ಆವಶ್ಯಕತೆ ಇರಲೇ ಇಲ್ಲ. ಚಿಕ್ಕ ವಿಷಯಗಳಲ್ಲೂ ಅವರ ಪಾರದರ್ಶಕತೆ, ಪ್ರಾಮಾಣಿಕತೆಗಳು ಎದ್ದು ಕಾಣುತ್ತಿದ್ದವು. ಜೋಗ್‌ಫಾಲ್ಸ್ ಪೂರ್ಣ ವೈಭವದಲ್ಲಿದ್ದಾಗ ಕ್ಲಿಕ್ಕಿಸಿದ ವರ್ಣಚಿತ್ರವನ್ನು ಬೀಗುತ್ತ ಅವರಿಗೆ ತೋರಿಸಿದ್ದೆ. 'ಫೋಟೋ ಚೆನ್ನಾಗಿದೆ. ಪ್ರಿಂಟ್ ಸರಿಯಾಗಿಲ್ಲ!' ಎಂದರು. ಸೂಕ್ಷ್ಮದೋಷಗಳನ್ನೂ ತೋರಿಸಿಕೊಟ್ಟರು.

ಕಾಮತರು ಛಾಯಾಚಿತ್ರದಂತೆಯೇ sketches ಕೂಡ ತುಂಬ ಚೆನ್ನಾಗಿ ಮಾಡುತ್ತಿದ್ದರು. ಇದರಿಂದಾಗಿ ಮೂಲಕೃತಿಯ ಐಬುಗಳನ್ನು ಹಲವು ಬಾರಿ ಸರಿಪಡಿಸಿದ್ದುಂಟು. ಅವರು ಹುಟ್ಟು ಕಲಾವಿದರು. ಕಲಾತ್ಮಕತೆ, ಚಿಕ್ಕಪುಟ್ಟ ಕೈಗೆಲಸಗಳಲ್ಲೂ ಕಂಡುಬರುತ್ತಿತ್ತು. ನನ್ನ ಕೆಲ ಚಿತ್ರಗಳು artistically superb! ಎಂದು ಹೇಳಿದ್ದನ್ನು ಎಂದೂ ಮರೆಯಲಾರೆ!

ಹಳೇ ಚಿತ್ರಗಳ ಬಗ್ಗೆ ಅವರಿಗೆ ವಿಶೇಷ ಒಲವು ಇತ್ತು. ನನ್ನ ತಾಯ್ತಂದೆಗಳ ಮೂವತ್ತು ವರ್ಷಗಳ ಹಿಂದಿನ ಚಿತ್ರಗಳನ್ನು ಮೆಚ್ಚಿ ತಿದ್ದಿ, ಕ್ಲಿಕ್ಕಿಸಿ ಪುನಃ ಹೊಸದಾಗಿ ಪ್ರಿಂಟ್ ಹೊಡೆದು ಕೊಟ್ಟಿದ್ದು, ಅಮೋಘವಾಗಿವೆ. ಅವರ ಕೈಚಳಕ ಸಾರುತ್ತವೆ.

ತಮ್ಮ ಛಾಯಾಚಿತ್ರ ಪರಿಣತಿಗೆ ಅವರು ಎಂದೂ ಪ್ರಚಾರ ಬಯಸಿದವರಲ್ಲ. ತಮ್ಮ ಚಿತ್ರಗಳನ್ನು ಮಾರಿ ಹಣಗಳಿಸುವ ಯೋಚನೆಯೇ ಅವರಿಗಿರಲಿಲ್ಲ. ಕಲೆಯನ್ನು ದುಡ್ಡಿನಲ್ಲಿ ಅಳೆಯಲಾಗದು. ಪರಿಶ್ರಮದಿಂದ ಕಲೆ ಸಾಧ್ಯ; ಪರಿಣತಿ ಸಾಧ್ಯ. ಯಾರೇ ಇಷ್ಟಪಟ್ಟು ಫೋಟೋಗ್ರಾಫಿ ಕಲಿಯಲು ಬಂದರೆ ಉಚಿತವಾಗಿ ಕಲಿಸಲು ಸಿದ್ಧ! ಆದರ ಪರಿಶ್ರಮ ರೂಢಿಸಿಕೊಂಡವರು ಬರುತ್ತಿಲ್ಲವಲ್ಲ! ಅನ್ನುತ್ತಿದ್ದರು.

ಸ್ವತಃ ಚಿತ್ರಗಳನ್ನು ಮಾರದವರು ನನಗೆ ಮಾತ್ರ ಆ ದಿಕ್ಕಿನಲ್ಲಿ ತುಂಬ ಪ್ರೋತ್ಸಾಹಿಸಿದರು. ಅವರ ಸಲಹೆಯಂತೆ ಅದೆಷ್ಟೋ ಚಿತ್ರಗಳನ್ನು ಅವರಿಂದ ಪ್ರಿಂಟ್ ಮಾಡಿಸಿ, ಕೆಲಬಾರಿ ಅವರೇ ಸೂಚಿಸಿದ ಶೀರ್ಷಿಕೆಗಳೊಂದಿಗೆ 'ಡೆಕ್ಕನ್ ಹೆರಾಲ್ಡ್' ಪತ್ರಿಕೆಗೆ ಕಳಿಸಿದೆ. ಕಳಿಸಿದ್ದೆಲ್ಲವೂ ಅಚ್ಚಾದವು. ಒಳ್ಳೆಯ ಹಣವೂ ಬಂದಿತು.

"ಇಷ್ಟೊಂದು ಕಲೆಗಳ ಆಗರವಿದ್ದೀರಿ! ನಾಲ್ಕು ಜನರಿಗೆ ತಲುಪಲು ಸಿದ್ಧರಿಲ್ಲವಲ್ಲ! ನಿಮ್ಮನ್ನು ನೋಡಿದರೆ, ಒಳ್ಳೆಯ ತಿಂಡಿ ತಯಾರಿಸಿ ಡಬ್ಬಿಯಲ್ಲಿ ಹಾಕಿ ಮುಚ್ಚಿಟ್ಟು ಬಿಟ್ಟ ಹಾಗೆ ಅನಿಸುತ್ತೆ! ಯಾರಿಗೂ ಸಿಗೋಲ್ಲ" ನಾನು ಉದ್ಗರಿಸಿದ್ದೆ.

"ಒಳ್ಳೆ ತಿಂಡಿಯ ಪರೀಕ್ಷೆ ಇದ್ದವರು ಬರ್ಲಿ! ಕೇಳಿದಷ್ಟು ಎತ್ತಿ ಕೊಡ್ತೀನಿ. ಆದರೆ ದುಡ್ಡಿಗಲ್ಲ!" ಎಂದಿದ್ದರು.

'ಸೋಮಶೇಖರ್, ಸದ್ಯಕ್ಕೆ ಫೋಟೋಗ್ರಾಫಿಯಲ್ಲಿ ಸಾಕಷ್ಟು ಪರಿಶ್ರಮ ಸಾಧಿಸಿದ್ದೀರಿ. ಚಿಕ್ಕಪ್ರಮಾಣದಲ್ಲಿ ನೀವೇ ಡೆವಲಪ್ ಪ್ರಿಂಟ್ ಪ್ರಾರಂಭಿಸಿ! ನಿಮ್ಮ ಕಲೆಗೆ ಹೊಸ ಆಯಾಮ ದೊರೆಯುತ್ತದೆ.!' ಒಂದೆರಡು ಬಾರಿ ಸೂಚಿಸಿದರು.

"ಮೊದಲು ಡಾಕ್ಟರ್ ವೃತ್ತಿ ಪ್ರಾರಂಭ ಮಾಡ್ತೀನಿ. ನಾಲ್ಕು ಕಾಸು ಸಂಪಾದಿಸ್ತೀನಿ! ಆಮೇಲೆ ಬ್ಲಾಕ್ ಅಂಡ್ ವೈಟ್........ಕಲರ್ ಕೂಡ!" ಕನಸು ಕಂಡೆ.

"But priorities change. They go on changing ಈಗ ನಿಮಗಿರುವ ಸ್ವಾತಂತ್ರ್ಯ, ನೆಮ್ಮದಿ-ವಿರಾಮಗಳು ಮುಂದುವರಿಯುತ್ತವೆ ಎನ್ನಲಾಗದು!" ಎಂಬುದು ಅನುಭವಿ ಕಾಮತರ ನುಡಿಯಾಗಿತ್ತು.

ಅವರು ನುಡಿದದ್ದು ನಿಜವಾಯ್ತು. ವೃತ್ತಿಯಲ್ಲಿ ಮುಳುಗಿಹೋದೆ. ಮದುವೆಯಾಯಿತು. ಮಕ್ಕಳು ಬಂದವು. ಸಂಸಾರದ ಗೋಜಲಿನಲ್ಲಿ, ಆ ತನಕ ಅಷ್ಟು ಪ್ರೀತಿಯಿಂದ ಬೆಳೆಸಿಕೊಂಡು ಬಂದ ಹವ್ಯಾಸವನ್ನು ಮುಂದುವರಿಸಿಕೊಂಡು ಹೋಗಲಾಗಲಿಲ್ಲ. ಬರುಬರುತ್ತ ಕಾಮತರನ್ನು ಕಾಣುವದೂ ವಿರಳವಾಯಿತು. ವೃತ್ತಿ, ಕ್ರಮೇಣ ಹವ್ಯಾಸವನ್ನು ಹಿಮ್ಮೆಟ್ಟಿಸಿಬಿಟ್ಟಿತು!

ಇಂದು ಕಾಮತರು ನಮ್ಮೊಂದಿಗಿಲ್ಲ. ಆದರೆ ಹಿಂದೊಮ್ಮೆ ಅವರು ವಿಶೇಷ ಆಸ್ಥೆ ವಹಿಸಿ ಮಾಡಿಕೊಟ್ಟ ಚಿತ್ರಗಳ ೧೪-೧೫ ಆಲ್ಬಂಗಳು ನನ್ನ ಬಳಿ ಇವೆ. ೨೦೦೦ ಅಡಿಯಷ್ಟು ಡೆವಲಪ್ ಮಾಡಿದ, (ಮುದ್ರಿಸಲಾಗದ!) ಫಿಲ್ಮ್ ಇದೆ. ORWO-NP-55. ಮೂವತ್ತು ವರ್ಷಗಳ ಬಳಿಕವೂ ಆ ಚಿತ್ರಗಳೆಲ್ಲ ಜೀವಕಳೆಯಿಂದ ನಳನಳಿಸುತ್ತವೆ. ಎಣೆಯರಿಯದ ಕಾಮತರ ಪರಿಶ್ರಮದ ಪ್ರತೀಕವಾಗಿವೆ. Total commitment ಎಂಬ ಪದವನ್ನು ಬಳಸುವುದುಂಟು. ಅದು ಸಾಕಾರವಾದುದನ್ನು ಕಾಮತರಲ್ಲಿ ಕಂಡೆ. ಕೈಕೊಂಡ ಕೆಲಸವನ್ನು ಅಚ್ಚುಕಟ್ಟಾಗಿ ಪೂರ್ಣಗೊಳಿಸುವ ತನಕ ಎಂಥ ಶ್ರಮವನ್ನೂ ಅವರು ಲೆಕ್ಕಿಸುತ್ತಿರಲಿಲ್ಲ.

ನನಗೆ ಕಾಲಕಾಲಕ್ಕೆ ಮಾರ್ಗದರ್ಶನ ನೀಡಿ, ನನ್ನಲ್ಲಿ ಅಡಗಿದ್ದ ಕಲಾಕಾರನನ್ನು ಪತ್ತೆ ಹಚ್ಚಿ ಹೊರತಂದು ಅರಳುವಂತೆ ಮಾಡಿದವರು, ಕಾಮತರು. ನಾನು ಕ್ಲಿಕ್ಕಿಸಿದ ಅವರ ಒಂದೇ ಒಂದು ಚಿತ್ರ ಅಭಿಮಾನದ ಗಣಿಯಾಗಿ ನನ್ನ ಬಳಿ ಉಳಿದಿದೆ. ಅವರಿಂದ ಪಡೆದ ತರಬೇತಿ ಬದುಕುಳಿದಿದೆ. Empowerment ಅಥವಾ ಸಬಲೀಕರಣವೆಂಬುದು ಸಾಕಾರವಾಗುತ್ತಿದ್ದರೆ ನನ್ನ ಸಬಲೀಕರಣಕ್ಕೆ ಅವರೇ ಕಾರಣರಾಗಿದ್ದಾರೆ.

❑

# ನನ್ನ ಆಪ್ತ ಮಿತ್ರ ಬಾಪ್ಪ

**ವಿಕಾಸ ಕಾಮತ**

ಪೂಜ್ಯ ಪಿತೃ ಕೃಷ್ಣಾನಂದ ಕಾಮತರನ್ನು (ಪ್ರೀತಿಯಿಂದ ಕರೆದಿದ್ದು 'ಬಾಪ್ಪಾ' ಎಂದು) ನಾನು 'ಮಿತ್ರ'ನೆಂದು ಸಂಬೋಧಿಸುವುದು ಅಸಮಂಜಸ ಎಂದು ಅನೇಕರಿಗೆ ಎನಿಸಬಹುದು. ಆದರೆ ಸತ್ಯದ ಸಂಗತಿ ಎಂದರೆ ನಾನು ಪ್ರಾಯಕ್ಕೆ ಬಂದಾಗಿನಿಂದ ಬಾಪ್ಪಾರು ನನಗೆ ಗೆಳೆಯನಂತೆಯೇ ನಡೆಸುತ್ತಿದ್ದರು. ಈ ಕೆಳಗೆ ಕೆಲವು ಘಟನೆಗಳ ಮುಖಾಂತರ ಬಾಪ್ಪಾರ ಆಳ ವ್ಯಕ್ತಿತ್ವದ ಕಿರುಪರಿಚಯ ಮಾಡಲು ಯತ್ನಿಸಿದ್ದೇನೆ. ಅವರು 'ತಂದೆ' ಯಾಗಿ ಬೋಧಿಸಿದ ಕೆಲ ಪಾಠಗಳನ್ನು ದಾಖಲಿಸಿದ್ದೇನೆ.

## ಸರ್ವರ ಗೌರವ - ಸರ್ವರಿಗೂ ಮಿತ್ರ

ದಿನಂಪ್ರತಿ ಹಾಲು ತಂದು ಕೊಡುವ ಹುಡುಗನಿಂದ ಹಿಡಿದು 'ಸೀಳು ತೆಂಗಿನಕಾಯಿ' ಮಾರುವ ಮುದುಕಜ್ಜಿಯವರೆಗೂ ಎಲ್ಲರೂ ಬಾಪ್ಪಾರ ಆಪ್ತರೇ. ಕಾರಂತ-ಅಡಿಗ-ಮಾಸ್ತಿಯವರಂಥ ಮೇಧಾವಿಗಳನ್ನು ಅರಿಯಲು ಅವರು ಯಾವ ರೀತಿಯಲ್ಲಿ (ಛಾಯಾಚಿತ್ರಗಳಲ್ಲಿ ಮತ್ತು ಮಾತುಕತೆಯಲ್ಲಿ) ಯತ್ನಿಸುತ್ತಿದ್ದರೋ, ಅಷ್ಟೇ ಶ್ರದ್ಧೆಯಿಂದ ಬೆಟ್ಟದ ಕುರುಬರನ್ನೂ, ಕುಷ್ಠರೋಗಿಗಳನ್ನೂ, ತರಕಾರಿ ಮಾರುವ-ಮನೆಕಟ್ಟುವ ಶ್ರಮ ಜೀವಿಗಳನ್ನೂ ಗೌರವಿಸುತ್ತಿದ್ದರು.

ಬಾಪ್ಪಾರು ತಮಗಿಂತ ಕಿರಿಯರಾದ ಉತ್ಸಾಹೀ ತರುಣರಿಂದ ಕಲಿಯಲು ಎಂದೂ ಹಿಂಜರಿಯಲಿಲ್ಲ. ಅವರೋ ಪ್ರತಿಭೆಯ ಸಾಗರ! ಆದರೆ ತೀರಾ 'ಸಾದ' ಅಥವಾ 'ಎಳಸು' ಮನುಷ್ಯನಾದ ನನ್ನನ್ನು ತನ್ನ ಸರಿ-ಸಮಾನನಂತೆ ನೋಡುತ್ತಿದ್ದುದು ಎಂಥಾ ಮಹಾಗುಣ!

## "ಕಾಯಕವೇ ಕೈಲಾಸವಯ್ಯ"

ನಾವು 'ಕಾಯಕವೇ ಕೈಲಾಸ' ಎಂದು ಪ್ರಚಾರ ಮಾಡುತ್ತೇವೆಯೇ ಹೊರತು ಪಾಲಿಸುವವರ ಸಂಖ್ಯೆ ಎಷ್ಟು? ಬಾಪ್ಪಾರು ತಾವು ಮಾಡುವ ಪ್ರತಿಯೊಂದು ಕೆಲಸದಲ್ಲೂ ಪೂಜೆ ಮಾಡುವ ಮಡಿವಂತಿಕೆ ತೋರಿಸಿದರು. ತಮಗೆ 'ಸರಿಯಾಗಲಿಲ್ಲ' ಎಂದೆನಿಸಿದರೆ ಪುನರಾರಂಭಿಸಲು ಒಂದು ಕ್ಷಣವೂ ಯೋಚಿಸಲಿಲ್ಲ. ಮಾಡಿದ್ದ ಕೆಲಸವನ್ನೇ ಮತ್ತೆ ಮತ್ತೆ ಮಾಡಲು ಎಂದೂ ಬೇಸರಿಸಲಿಲ್ಲ. ಕಾಯಕದ ವಿಷಯದಲ್ಲಿ ಬಾಪ್ಪಾರ ನಿಷ್ಠುರತೆ ತುಂಬಾ ಕಠೋರವಾಗಿತ್ತು.

ಬಹಳ ವರ್ಷಗಳ ತನಕ ನಮ್ಮ ಮನೆಯಲ್ಲಿ ಕಸ ವಿಸರ್ಜನೆಯ ವ್ಯವಸ್ಥೆ ಇರಲಿಲ್ಲ. ಬಾಪ್ಪಾರೇ ದಿನನಿತ್ಯದ ದುರ್ಗಂಧದ ಕಸ ಎತ್ತಿಕೊಂಡು ಇನ್ನಷ್ಟು ಹೊಲಸಿನ ಸಾರ್ವಜನಿಕ ಕಸದ ಬುಟ್ಟಿಯಲ್ಲಿ ಕೈಯಾರೆ ಒಯ್ದು ಎಸೆಯುವುದು ವಾಡಿಕೆ. ಕೆಲವೊಮ್ಮೆ ಮೀನು ಇತ್ಯಾದಿ ಪದಾರ್ಥ ತಯಾರಿಸಿದಾಗ ಮನೆಯಲ್ಲಿನ ವಾಸನೆ ನಿವಾರಿಸಲು ಕಸ ನಿವಾರಣೆಯ ಜವಾಬ್ದಾರಿ ನನ್ನದಾಗುತ್ತಿತ್ತು. ಹದಿಹರೆಯದ ಬಾಲಕನಿಗೆ ಅದೇನೂ ಆಹ್ಲಾದಕರ ಬಿಟ್ಟಿ ಕೆಲಸವಾಗಿರಲಿಲ್ಲ, ಆದರೆ ಹಿರಿಯರ ಮಾತನ್ನು ಅಲ್ಲಗಳೆಯದೇ ನಾನು ಆ ಕಾರ್ಯ ಮಾಡುತ್ತಿದ್ದೆ. "ನೀನು ಕಸ ಎತ್ತಿ ಎಸೆಯುವಾಗ ನಿನ್ನ ಮಿತ್ರ-ಮೈತ್ರಿಣಿಯರು ಕಂಡರೆ ನಿನಗೆ ಮರ್ಯಾದೆ ಹೋಗುತ್ತದೆಯೋ?" - ಒಮ್ಮೆ ನನ್ನ ತಾಯಿಯವರು ನನಗೆ ಕೇಳಿದರು. ಅತೀ ಸಹಜ ಮತ್ತು ಕಳಕಳಿಯ ಪ್ರಶ್ನೆಯಾಗಿತ್ತು ಅದು, ಮತ್ತು ಅಮ್ಮಾರು ನನ್ನನ್ನು ಅರ್ಥೈಸಿಕೊಂಡಿದ್ದಕ್ಕೆ ಸಂತೋಷವಾಗಿತ್ತು ನನಗೆ!

ಆದರೆ ನಾನು ಉತ್ತರಿಸುವ ಮುನ್ನವೇ ಬಾಪ್ಪಾ ಗರ್ಜರಿಸಿದ್ದರು. " ಅಲ್ಲ ಜ್ಯೋತ್ನಾ, ನಮ್ಮ ಮನೆಯೊಳಗಿನ ಕಸಕಡ್ಡಿಗಳನ್ನು ನಾವು ಹೊರಗೆ ಹೊಯ್ದೆಸೆಯುವದರಲ್ಲಿ ಮರ್ಯಾದೆಯ ವಿಷಯವೇಕೆ ಬಂತು? ಸ್ವ-ಸಹಾಯದಲ್ಲಿ ವಿಕಾಸನು ಹದಿಹರೆಯರ ವರ್ಗದಲ್ಲಿ ಮುಂದಾಳು ಎಂಬುದು ಅವನಿಗೆ ಹೆಮ್ಮೆಯ ವಿಷಯವು!"

ಆ ಒಂದು ವಾಕ್ಯದಲ್ಲಿ ನನ್ನಲ್ಲಿ, ಆ ಒಂದು ನಿಮಿಷದಲ್ಲಿ ಜೀವನದ ಬಹುದೊಡ್ಡ ಪಾಠದ ಬೋಧನೆ ನನಗಾಯಿತು. ಇಂದಿಗೂ ಕೂಡ ನಾನು "ಅವರೇನೆಂದುಕೊಂಡಾರು" ಎಂದುಕೊಂಡು ನನ್ನ ಕರ್ತವ್ಯ ಮಾಡಲು ಹಿಂಜರಿಯುವುದಿಲ್ಲ.

ಬಾಪ್ಪಾರು ನನ್ನ ಚಿಕ್ಕತನದಿಂದಲೇ ನನ್ನಲ್ಲಿ ಕಾಯಕಶ್ರದ್ಧೆ ಬೆಳೆಸಲು ಯತ್ನಿಸಿದರು. ನಾನು ಒಂಭತ್ತು ವರ್ಷದವನಾಗಿದ್ದಾಗಿಲಿಂದ ನನ್ನನ್ನು ಅಂಗಡಿಯಲ್ಲಿ ಕೆಲಸಕ್ಕೆ ಹಚ್ಚಿದರು. ಅಂಚೆ-ಬ್ಯಾಂಕು-ಗಿರಣಿಗಳ ವ್ಯವಹಾರ ಬಾಲ್ಯದಲ್ಲಿಯೇ ನನಗೆ ಗೊತ್ತಿತ್ತು. ಹಾಗೆಂದು ಬಾಪ್ಪಾರು ಸಮಂಜಸ-ಅಸಮಂಜಸ ಕಿರುಕುಳಗಳ ನಡುವೆ ಭೇದಿಸದೇ ಇರಲಿಲ್ಲ. ನಾನು ಹದಿನಾಲ್ಕು ವರ್ಷದವನಿದ್ದಾಗ, ಒಮ್ಮೆ ಗೋಪಾಲಕೃಷ್ಣ ಅಡಿಗರು ಬಾಪ್ಪಾರ ಲ್ಯಾಬಿಗೆ ಬಂದಾಗ, ಅಡಿಗರು ನನಗೆ ಒಂದು ರೂಪಾಯಿ ಕೊಟ್ಟು ಸಿಗರೇಟು ಖರೀದಿಸಿ ತರಲು ವಿನಂತಿಸಿದರು. ಕೂಡಲೇ ಬಾಪ್ಪಾರು ಎದ್ದು ನಿಂತು "ವಿಕಾಸ, ನೀನು ಪ್ರೊಫೆಸರರೊಂದಿಗೆ ಮಾತಾಡಲ್ಲಾ" ಎಂದು ಅಂಗಡಿಯನ್ನು ನನ್ನ ಪಾಲಿಗೆ ವಹಿಸಿ ತಾನೇ ಹೋಗಿ ಸಿಗರೇಟು ತಂದರು. ಬಾಪ್ಪಾರ ಪಾಲಿಗೆ ಅಡಿಗರು ಗುರುಗಳು. ಆದರೆ, ಗುರುಗಳಿಗಾಗಿಯೂ ತಂಬಾಕು ತರಲು ಮಗನನ್ನು ಕಳಿಸಲು ಅವರ ಆತ್ಮ ಒಪ್ಪಿರಲಿಲ್ಲ!

## ಸರಣಿ ಪತ್ರಗಳ ಮಿಥ್ಯ

ನಮ್ಮದು ಸಾಂಪ್ರದಾಯಿಕ ಸಮಾಜ. ಸಾವಿರಾರು ದೇವರು-ಭೂತ-ಕಂದಾಚಾರಗಳ ನಡುವೆಯೇ ವಿಜ್ಞಾನ-ಸತ್ಯ-ಮಿಥ್ಯಗಳ ತುಲನೆ ಮಾಡುತ್ತೇವೆ. ನಾನು ಸುಮಾರು ಹದಿನೈದು ವರ್ಷದ ಪ್ರಾಯದವನಾಗಿದ್ದಾಗ ನನಗೆ ದೇವರಲ್ಲಿ ಅಪಾರ ಭಯ-ಭಕ್ತಿ ಇತ್ತು. ಅದು ಎಷ್ಟರಮಟ್ಟಿಗೆ ಇತ್ತೆಂದರೆ ಸದಾಚಾರ-ಕಂದಾಚಾರಗಳಲ್ಲಿನ ಅಂತರ ಗೊತ್ತಿರಲೇ ಇಲ್ಲ. ಮೂಢನಂಬಿಕೆಗಳ ಆಗರವಾಗಿದ್ದೆ ನಾನು! ಎಲ್ಲರಿಗೂ ಇರುವಂತೆ ಒಮ್ಮೆ ಬಾಪ್ಪಾರಿಗೂ ಒಂದು ಸರಣಿ-ಪತ್ರ (Chain-letter) ಬಂತು, " ತಿರುಪತಿಯ ತಿಮ್ಮಪ್ಪ" ನಿಂದ. ಆ ಪತ್ರದ ಇಪ್ಪತ್ತೈದು ಪ್ರತಿಗಳನ್ನು ಮಾಡಿ ಇತರರಿಗೆ ಕಳಿಸದಿದ್ದರೆ ಅಪಾರ ಹಾನಿ ಎಂದು ಬೆದರಿಸಿತ್ತು! "ತಮ್ಮ ಹೆಸರನ್ನು ನಮೂದಿಸದೇ ದೇವರ ಹೆಸರಿನಲ್ಲಿ ಪತ್ರ ಬರೆಯುತ್ತಾರೆ ಮೂರ್ಖ ಶಿಖಾಮಣಿಗಳು" ಎಂದು ಬಾಪ್ಪಾ ಆ ಪತ್ರವನ್ನು ಕಡೆಗಣಿಸಿದರು. ದೇವರ ಭೀತಿಯಿಂದ ನಾನು ಅವರನ್ನು ಪ್ರಶ್ನಿಸಲು – ತೀರ ಸರಳ ರೀತಿಯಲ್ಲಿ ನನಗೆ ಭಕ್ತಿ ಮತ್ತು ಮೂರ್ಖ ಭೀತಿಗಳನ್ನು ವಿವರಿಸಿದ್ದಲ್ಲದೇ ಬಾಪ್ಪಾರು ನನ್ನ ಮುಂದಿನ ಜನ್ಮಪೂರ್ತಿ ಮೂಢನಂಬಿಕೆಗಳಿಂದ ಮುಕ್ತಿ ಕೊಟ್ಟರು!

ದೇವ-ನಂಬಿಕೆಯಂತಹ ಬಹುಮುಖ್ಯ ವಿಷಯದಲ್ಲಿ ನನ್ನ ತಂದೆ-ತಾಯಂದಿರು ನನಗೆ 'ಆತ್ಮದರ್ಶನ ದಾರಿ' (conscience) ಯಲ್ಲಿ ನಡೆಯಲು ತೋರಿಸಿಕೊಟ್ಟದ್ದು ಅವರುಗಳು ನನಗೆ ನೀಡಿದ ಬಹುದೊಡ್ಡ ಕಾಣಿಕೆ ಎಂದು ನಾನು ನಂಬಿದ್ದೇನೆ.

## ಹರಿದು ಹೋದ ರೇಶನ್ ಕಾರ್ಡು

೧೯೮೦ರ ದಶಕ ಅದು ; ಸಕ್ಕರೆ, ಎಣ್ಣೆ ಮತ್ತಿತರ ಸಾಮಗ್ರಿಗಳು ಸಕಾಲಕ್ಕೆ, ಸುಬೆಲೆಗೆ ಸಿಗುತ್ತಿರಲಿಲ್ಲ. ಕಷ್ಟಪಟ್ಟು ನಮ್ಮ ಪಾಲಿನ ರೇಶನ್ ಕಾರ್ಡು ಸಂಪಾದಿಸಿದ್ದೆವು. ಒಮ್ಮೆ ಸಕ್ಕರೆ ತರಲು ನನ್ನನ್ನು ಕಳಿಸಲಾಗಿತ್ತು. ಸರದಿಯಲ್ಲಿ ನಿಂತು, ಕೊಂಡ ಸಕ್ಕರೆಯನ್ನು ರೇಶನ್ ಕಾರ್ಡ್ ಇದ್ದ ಕೈಚೀಲದಲ್ಲಿಯೇ ಸುರಿಸಿಕೊಂಡು ಬಿಟ್ಟಿದ್ದೆ. ಮನೆಗೆ ಬಂದಾಗ "ರೇಶನ್ ಕಾರ್ಡ್ ಎಲ್ಲಿ?" ಎಂದಾಗ ಅಘಾತವಾಗಿ, ಬಹುಶಃ ಚೀಲದಲ್ಲಿಯೇ ಇರಬಹುದು! ಎಂದು ಆವೇಶದಲ್ಲಿ ಕೆದಕಿ-ಕೆದಕಿ ಹುಡುಕಿದ್ದೆ. ಆ ಆವಾಂತರದಲ್ಲಿ ರೇಶನ್ ಕಾರ್ಡು ಹರಿದು ಚೂರಾಗಿಬಿಟ್ಟಿತ್ತು. ಆ ದುಬಾರಿಯ ದಿನಗಳಲ್ಲಿ, ಲಂಚಕೋರರೊಂದಿಗೆ ಒಡನಾಗಿ ಬದಲೀ ಕಾರ್ಡು ಪಡೆಯುವ ಪ್ರಶ್ನೆಯೇ ಇರಲಿಲ್ಲ. ಬಾಪ್ಪಾರು ಕೋಪಿಸಿಕೊಳ್ಳಲಿಲ್ಲ, ಧೃತಿಗೆಡಲಿಲ್ಲ, ಬದಲಾಗಿ ರೇಶನ್ ಕಾರ್ಡಿನ ಬಣ್ಣದ ಹ್ಯಾಂಡ್‌ಬಿಲ್ಲೊಂದನ್ನು ಹುಡುಕಿ ತೆಗೆದರು. ಆ ಬಣ್ಣದ ಕಾಗದವನ್ನು ೧. ಸೆಂ. ಮೀ. ಚೂರುಗಳಾಗಿ ಕತ್ತರಿಸಿ, ಹರಿದು ಹೋದ ರೇಶನ್ ಕಾರ್ಡನ್ನು ದುರಸ್ತಿ ಮಾಡಿದರು –ಸರಕಾರದ "ಅಧಿಕೃತ" ಗೆರೆಗಳನ್ನು ಅಳಿಸದೇನೇನೆ! ಚಿಂದಿಯಾಗಿದ್ದ ಆ ರೇಶನ್ ಕಾರ್ಡನ್ನು ಸರಿಪಡಿಸಲು ಬಾಪ್ಪಾರಿಗೆ ಸಂಪೂರ್ಣ ಒಂದು ವಾರ ಹಿಡಿದಿತ್ತು. ಈಗಲೂ ಆ ಪುಸ್ತಿಕೆಯನ್ನು ಕಂಡಾಗ ಬಾಪ್ಪಾರ ತಾಳ್ಮೆಯ-ಸಂಯಮದ-ಕ್ರಿಯಾಶೀಲತೆಯ ನೆನಪಾಗಿ ಮನ ಮುದಗೊಳ್ಳುತ್ತದೆ.

## ಲೈಂಗಿಕ ಶಿಕ್ಷಣ

ಬೆಳೆಯುತ್ತಿದ್ದ ನನ್ನ ದೇಹದಲ್ಲಿನ ಬದಲಾವಣೆ ಗುರುತಿಸಿ ಬಾಪ್ಪಾ "ನೀನು ಅಶ್ಲೀಲ ಪುಸ್ತಕಗಳಿಂದ, ಪೋಲಿ ಗೆಳೆಯರಿಂದ ಕಲಿಯುವದು ಬದಲಾಗಿ ನನ್ನಿಂದ ಕಲಿತರೆ ಒಳಿತು" ಎಂದು ನನಗೆ ಲೈಂಗಿಕ ಶಿಕ್ಷಣದ ಅವಶ್ಯ ಮಾಹಿತಿ ತಿಳಿಹೇಳಿದ್ದರು. ಅಮೀಬಾದಿಂದ ಹಿಡಿದು ಮನುಕುಲದ ವರೆಗಿನ ಸಂತಾನೋತ್ಪತ್ತಿಯ ನೈಸರ್ಗಿಕ ನಿಯಮಗಳನ್ನು ವಿವರಿಸಿದ್ದರು.

ತೀರ ಹತ್ತಿರದ ಸಂಬಂಧಿಗಳ ವಿವಾಹ ಪದ್ಧತಿಗೆ ಬಾಪ್ಪಾರ ವಿರೋಧವಿತ್ತು. ಅವರ ಮೇಲ್ಪಂಕ್ತಿಯನ್ನು ಅನುಸರಿಸಿ ಸೋದರ-ವಿವಾಹಗಳನ್ನು ಧಿಕ್ಕರಿಸಿದ ಅನೇಕರು ನಮ್ಮ ಕುಟುಂಬದಲ್ಲಿ ಸಿಗುತ್ತಾರೆ.

## ಛಾಯಾಗ್ರಹಣದ ವಿದ್ಯಾರ್ಥಿ

ಮೈಸೂರಿನ ಕುಕ್ಕರಹಳ್ಳಿಯ ಪಕ್ಷಿಗಳ ಛಾಯಾಗ್ರಹಣಕ್ಕೆಂದು ಒಂದು ದಿನ ಬಾಪ್ಪಾರೂ, ನಾನೂ ಉಪಕರಣಗಳೊಂದಿಗೆ ತೆರಳಿದೆವು- "ನನಗೆ ಬರೀ ಕತ್ತಲ ಖೋಲಿಯ ಪಾಠ ಕಲಿಸಿದ್ದೀಯಾ, ನಾನು ಫೋಟೋ ತೆಗೆಯಲು ಕಲಿಯುವುದು ಯಾವಾಗ?" ಎಂಬ ನನ್ನ ದೂರಿನ ಮೇಲೆ. "ಅತ್ಯುತ್ತಮ" ಎನಿಸಿಕೊಳ್ಳುವ ಚಿತ್ರ ಹಿಡಿಯುವ ಅವಕಾಶ ನಮಗೆ ಬರಲಿಲ್ಲ. ಕಾದು ಕಾದು ಬೇಸತ್ತು ಕೊನೆಗೆ ನಾನು ಒಂದು ಉಪಾಯ ಹೂಡಿದೆ. ತಮ್ಮಷ್ಟಕ್ಕೆ ತಾವು ಊಟಮಾಡಿಯೋ-ಆಟಮಾಡಿಯೋ ವಿಹರಿಸಿಕೊಂಡಿದ್ದ ಪಕ್ಷಿಗಳ ಗುಂಪಿನಲ್ಲಿ ಕಲ್ಲೊಂದನ್ನು ಎಸೆದೆ. ಅವೆಲ್ಲ ಒಮ್ಮೆಲೇ ಹಾರಿದಾಗ ಚಂದದ ಚಿತ್ರ ಹಿಡಿದೆ.

ತೀಕ್ಷ್ಣ ದೃಷ್ಟಿಯಿಂದ ಬಾಪ್ಪಾ ನನಗೆಂದರು – "ನಿನಗೆ ನಿಸರ್ಗದ ಬಗ್ಗೆ ಕಳಕಳಿ – ಗೌರವವಿಲ್ಲದಿದ್ದರೆ, ನೀನು ನಿಸರ್ಗದ ಉಪಾಸಕ ಹೇಗಾದೀಯಾ? ಪಾಠ ಮುಗಿಯಿತು. ಉಪಕರಣಗಳನ್ನು ಮಡಚಿ ಮನೆಗೆ ಹೋಗು!"

## ಭಾರತೀಯ ಸಂಸ್ಕೃತಿಯ ಮಾಯಾಜಾಲ

"ಭಾರತೀಯ ಸಂಸ್ಕೃತಿಯನ್ನು ಸಂಪೂರ್ಣವಾಗಿ ಒಂದು ಸಂಪುಟದಲ್ಲಾಗಲಿ ವೆಬ್ ಸೈಟಿನಲ್ಲಾಗಲೀ ಮೂಡಿಸುವುದು ದುಸ್ಸಾಧ್ಯ. ಕಾಮತರೇನೂ ನಮ್ಮ ಸಂಸ್ಕೃತಿಯ ವಿಶ್ವರೂಪಕ್ಕೆ ಕನ್ನಡಿ ಹಿಡಿದು, ಬಲೆಯಲ್ಲಿ ಪಳಗಿಸುವ ಭಾರೀ ಯೋಜನೆ ಹಾಕಿಕೊಳ್ಳಲಿಲ್ಲ; ಆದರೆ ಯಾರೂ ನಿರೀಕ್ಷಿಸದ–ಎಲ್ಲರನ್ನೂ ಮಿಕ್ಕಿಸಿದ ಭಾರೀ ಯಶಸ್ಸು ಅವರದಾಗಿದೆ !"–ಎಂದು ಪತ್ರಕರ್ತರೊಬ್ಬರು ಬರೆದಿದ್ದಾರೆ (Rediff, ಜನವರಿ ೮, ೨೦೦೧). ಬಾಪ್ಪಾರ ಜೀವಮಾನದಲ್ಲಿ ಅವರು ಮಾಡಿಟ್ಟ ಚಿತ್ರ–ಛಾಯಾಚಿತ್ರ–ಪತ್ರ–ಲೇಖನಗಳ ಆಗರ ಕಂಡಾಗ ಆ ಭಾವನೆ ಬರುವುದು ಸಹಜ. ಸಾಮಾನ್ಯ ಮನುಷ್ಯರಿಂದ ಅಂತಹ ಅಗಾಧ ಸಂಕಲನ ಅಸಾಧ್ಯವೇ!

ತಮ್ಮ ಅಗಲಿಕೆಯ ಕೊನೆಯ ದಿನದವರೆಗೂ, ಕೊನೆಯ ತಾಸಿನವರೆಗೂ ಬಾಪ್ಪಾರು ಹೊಸ-ಹೊಸ ಯೋಜನೆಗಳನ್ನು ಹಾಕಿಕೊಳ್ಳುತ್ತಲೇ ಇದ್ದರು. ತಮ್ಮ ಅಂತ್ಯದ ಐದು ವರ್ಷಗಳಲ್ಲಿ ಬಾಪ್ಪಾರು ನೂರಾರು ಜನಗಳುಳ್ಳ ಸಂಸ್ಥೆಗಳಿಂದ, ಬಂಡವಾಳಶಾಹಿಗಳ ಬೆಂಬಲವುಳ್ಳ DOTCOM ಗಳಿಂದ ಅಥವಾ ಸಾರ್ವಜನಿಕ ದುಡ್ಡನ್ನು ವ್ಯಯಿಸುವ ಸರ್ಕಾರೀ ಪ್ರಾಧಿಕಾರಗಳಿಂದ ಸಾಧ್ಯವಾಗದ ಮಹಾಕಾರ್ಯವನ್ನು ತಾವೊಬ್ಬರೇ, ತಮ್ಮ ಅಲ್ಪ ಉಳಿತಾಯದಲ್ಲಿ ಸಾಧಿಸಿ ತೋರಿಸಿದ್ದಾರೆ.

ಬಾಪ್ಪಾರ ಜೀವನದ ಪಯಣವನ್ನು ಒಂದೇ ಒಂದು ವಾಕ್ಯದಲ್ಲಿ ಹೇಳುವುದಾದರೆ ಹೀಗೆ: ಒಬ್ಬ ತೀರಾ ಸಾಮಾನ್ಯ ವ್ಯಕ್ತಿ ಹೇಗೆ ಕಾರ್ಯಭಕ್ತಿ ಮತ್ತು ಶ್ರದ್ಧೆಯಿಂದ ಅಸಾಮಾನ್ಯ ಆಗಬಹುದು, ಸಾದಾ ನಾಗರಿಕರು ಯಾವುದೇ ಬಗೆಯ ವ್ಯವಸ್ಥೆ-ಅನುಕೂಲಗಳಿಲ್ಲದಿದ್ದರೂ ಅಸಾಮಾನ್ಯ ಸಾಧನೆಗಳನ್ನು ಮಾಡಬಹುದು ಎಂಬುದಕ್ಕೆ ಅವರು ನಿದರ್ಶನ.

## ಮನ ತಟ್ಟುವ ಕರುಣಾಮಯಿ

ಒಮ್ಮೆ ನನ್ನ ಮಡದಿಗೆ ತೀರ ಬೆಳಿಗ್ಗೆಯೇ ಎಚ್ಚರವಾಯಿತಂತೆ. ಆಕೆಯು ಮಲಗುವ ಕೊಠಡಿಯಿಂದ ಹೊರಬರಲು ಬಾಪ್ಪಾರು ತಾವು ಕಾಫಿ ಸವಿಯುತ್ತ ತಮ್ಮ ಪುಸ್ತಕದ ('ಪ್ರವಾಸಿಯ ಪ್ರಬಂಧಗಳು') ಕೆಲಸದಲ್ಲಿ ಮಗ್ನರಾಗಿದ್ದರಂತೆ. ಸೊಸೆಯನ್ನು ಕಂಡ ಕೂಡಲೇ ನಿದ್ದೆ ಸರಿಯಾಗಿ ಆಯಿತೇ? ಎಂದು ವಿಚಾರಿಸಿ ಕಾಫಿ ಮಾಡಿ ಕೊಡಲೇ? ಎಂದು ಕೇಳಿದರಂತೆ. (ಅನ್ಯ ಜಾತಿಯ) ಸೊಸೆಗೆ ಬೆಳಗ್ಗಿನ ಜಾವದ ನಾಲ್ಕು ಗಂಟೆಗೆ ಕಾಫಿ ತಯಾರಿಸಿ ಕೊಡುವ ಮಾವಂದಿರ ಸಂಖ್ಯೆ ಜಗತ್ತಿನಲ್ಲಿ ಹೆಚ್ಚಿರಲಾರದು!

ಛಾಯಾಚಿತ್ರಣ ಕಲಿಯುವ ಆತುರತೆಯಲ್ಲಿ ನಾನು ಬಾಪ್ಪಾರ ವ್ಯಾಪಾರಕ್ಕೆ ಅತ್ಯವಶ್ಯವಾದ 'ಡೆವಲಪರ್ ಟ್ಯಾಂಕ'ನ್ನು ಒಂದುದಿನ ಒಡೆದುಹಾಕಿಬಿಟ್ಟೆ. ಬಾಪ್ಪಾರು ಕಷ್ಟಪಟ್ಟು ಜರ್ಮನಿಯಿಂದ ತರಿಸಿದುದಾಗಿತ್ತು ಅದು ಮತ್ತು ಅದನ್ನು ರಿಪೇರಿ ಮಾಡುವ ಸಾಧ್ಯತೆ ಇರಲಿಲ್ಲ. ನಾನು ಬಾಪ್ಪಾರಿಂದ ಬೈಯಿಸಿಕೊಳ್ಳಲು ಕಾದೂ ಕಾದೂ ಬೇಸತ್ತು ಕೊನೆಗೆ ಅವರನ್ನು ಕೇಳಿದೆ "ಬಾಪ್ಪಾ, ನಾನು ಈ ಪ್ರಮುಖ ವಸ್ತುವನ್ನು ಹಾಳು ಮಾಡಿದ್ದಕ್ಕೆ ಏಕೆ ತರಾಟೆಗೆ ತೆಗೆದುಕೊಳ್ಳುವುದಿಲ್ಲ?" ಎಂದು.

"ನೀನು ನಿನ್ನ ಉದಾಸೀನತೆಯಿಂದ ಅದನ್ನು ಮುರಿದಿದ್ದರೆ ನಿನ್ನನ್ನು ಖಂಡಿತವಾಗಿ ದಂಡಿಸುತ್ತಿದ್ದೆ. ಆದರೆ ಕಗ್ಗತ್ತಲೆಯಲ್ಲಿ ಎಡವಿ ಬೀಳುವುದು ನಿಸರ್ಗದ ನಿಯಮ. ನಾನು ಕೋಪಿಸಿಕೊಂಡರೆ ಆ ಟ್ಯಾಂಕೇನು ಸರಿಯಾಗುವುದಿಲ್ಲವಲ್ಲ? ನಿನ್ನ ಕೈಯಿಂದಾದ ಅಪಘಾತ ನನ್ನ ಕೈಯಿಂದಾಗುವ ಸಾಧ್ಯತೆ ಇದ್ದೇ ಇತ್ತಲ್ಲ!"

## ನಿಸರ್ಗಕ್ಕೆ ಪೂರಕವಾದ ಜೀವನ

ಬಾಪ್ಪಾರದು ನಿಸರ್ಗಕ್ಕೆ ಹತ್ತಿರದ, ನಿಸರ್ಗಕ್ಕೆ ಅನುರೂಪವಾದ ಜೀವನ. ಕಲ್ಮಶಜನಕ ಕಾರು-ಮೋಟಾರುಗಳಿಲ್ಲದೇ ಎಲ್ಲಾ ಕಡೆ ನಡೆದುಕೊಂಡೇ ಹೋಗುವ ಅಭ್ಯಾಸ. ಮಣ್ಣಿನ ಮಡಕೆಯೇ ಅವರ ತಂಪು ನೀಡುವ ಫ್ರಿಜ್! ಕಾಗದ-ಶಾಯಿ-ತಯಾರಿತ ವಸ್ತುಗಳ ಬಳಕೆಯಲ್ಲೂ ಉಳಿತಾಯವೇ- ನಾನು ಅಮೇರಿಕೆಯಿಂದ ಕಳಿಸಿದ ಕಾಗದದ ಲಕೋಟೆಯನ್ನು ಕತ್ತರಿಸಿ, ಹೊರಗಿನ ಕವಚ ಒಳಗೆ ಹೋಗುವಂತೆ ಅದನ್ನು ಪರಿವರ್ತಿಸಿ ಪುನಃ ಅದನ್ನು ಉಪಯೋಗಿಸುತ್ತಿದ್ದರು!

ಸೂರ್ಯನಂತೆ ಎಡಬಿಡದ ನಿಯಮಿತತನ (regularity) ಅವರದಾಗಿತ್ತು. ದೂರದಲ್ಲಿರುವ ಪತ್ನಿಗೆ ಪ್ರತಿದಿನ ಅವರು ಪತ್ರ ಬರೆಯಲೇಬೇಕು. ಪರದೇಶದಲ್ಲಿರುವ ಮಗನಿಗೆ ಪ್ರತಿವಾರ 'ಮಾಹಿತಿಯ ಕಂತು' ಕಳಿಸಲೇಬೇಕು. ಆರು ಗಂಟೆಗೆ ಅಂಗಡಿಯ ಬಾಗಿಲು ತೆಗೆಯಲೇಬೇಕು. ಹಾಲು ಮಾರುವವನ ವೇಳೆ ಉಳಿಸಲು ಅವನಿಗೆ ಕೊಡುವ ಸರಿಯಾದ ಚಿಲ್ಲರೆಯನ್ನು ಮೊದಲ ದಿನ ರಾತ್ರಿಯೇ ಕೂಡಿಡಬೇಕು.

ಬಾಪ್ಪಾರು ಸಿನೆಮಾ-ಟೀವಿಗಳಿಂದ ದೂರವಿದ್ದು ನಮ್ಮ ಮನೆಯ ಬಾಲ್ಕನಿಯಿಂದಲೇ ಜೀವನದ ಆಗೋಪಗಳ ರಂಜನೆ ಪಡೆದರು. ಗಂಟೆಗಟ್ಟಲೇ ಮೋಡಗಳನ್ನು ಕಂಡು ಆನಂದಿಸಬಲ್ಲವರಾಗಿದ್ದರು. ಕೀಟಗಳಂತೆಯೇ ಸ್ವಾವಲಂಬನದ ಸ್ವತಂತ್ರ ಜೀವನ ನಡೆಸಿದರು.

## ತೃಪ್ತ ಮನಸ್ಸಿನ ತಪಸ್ವಿ

ಬಾಪ್ಪಾರದು ಅಸಾಧಾರಣ ವ್ಯಕ್ತಿತ್ವ. ಅವರಿಗೆ ಸಂದ ಅನ್ಯಾಯಗಳ ಸಂಖ್ಯೆಗೆ ಲೆಕ್ಕವಿಲ್ಲ, ಆದರೆ ತಮ್ಮ ಶತ್ರುಗಳಿಗೂ ಕೆಡಕು ಬಗೆಯದಂಥ ಮಹಾನುಭಾವರು. ಅವರ ಸರಳತೆ-ವಿನಯ-ನಮ್ರತೆ-ಪ್ರೀತಿಗಳಿಗೆ ಮೇರೆ ಇರಲಿಲ್ಲ. ಬಾಪ್ಪಾರ ಅಜ್ಞಾತವಾಸದಿಂದಾಗಿ ಅವರ ವ್ಯಕ್ತಿತ್ವದ ಪ್ರಕಾಶ ಸಾರ್ವಜನಿಕರಿಗೆ ಒದಗಲಿಲ್ಲ. 'ದೀನಬಂಧು', 'ಕರ್ಮಯೋಗಿ', 'ಕ್ರಿಯಾಶೀಲ ತಪಸ್ವಿ', 'ಮಹಾಪುರುಷ', 'ಡಾ॥ ಕೈಮಾಟ', 'ಕಮ್ಮಟಿಗ', 'ಬಡವರ ಸಾಮಿ' ಎಂದೆಲ್ಲ ಪರಿಚಯದವರು ಬಾಪ್ಪಾರನ್ನು ಸಂಭೋದಿಸಿದ್ದುಂಟು. ಆದರೆ ಬಾಪ್ಪಾ ಅದೆಲ್ಲವೂ ಆಗಿದ್ದರು ಎಂಬುದು ಅವರನ್ನು ದೀರ್ಘವಾಗಿ ಅರಿತ ಕೆಲವರಿಗಷ್ಟೇ ಗೊತ್ತಿತ್ತು. ಅದೆಷ್ಟು ವಿಚಾರಗಳು ನನ್ನ ಬಾಪ್ಪಾರ ಮನಸ್ಸಿನಲ್ಲಿ! ಅದೆಷ್ಟು ಹುಮ್ಮಸ್ಸು! ಅದೆಷ್ಟು ಪ್ರೀತಿ ಅವರಲ್ಲಿ ಪತ್ನಿಯ ಮೇಲೆ, ಪುತ್ರನ ಮೇಲೆ, ತಾಯ್ನೆಲದ ಮೇಲೆ!

ಪ್ರತಿಯೊಬ್ಬನ ಜೀವನದಲ್ಲಿ ಒಮ್ಮೆಯಾದರೂ 'ನಾನು ಹುಟ್ಟಿದ್ದು ಸಾರ್ಥಕ' ಎಂಬ ಭಾವನೆ ಬರುತ್ತದೆ; ಬರಬೇಕು. ಬಾಪ್ಪಾರ ಬಗ್ಗೆ ನನ್ನ ಒಲುಮೆಯು ಉತ್ಕಟಗತಿಗೇರಿದ್ದು ಅವರ ಶ್ರಾದ್ಧದ ಕ್ರಿಯೆಯ ಶೋಕಾವೇಶದಲ್ಲಿ :-

"ಅಸ್ಮತ್ ಪಿತುಹು ಕೃಷ್ಣಾನಂದ ಶರ್ಮಣಃ

ಪ್ರೇತಸ್ಯ ಪ್ರೇತತ್ವ ನಿವೃತ್ತಿ ದ್ವಾರಾ ಶಾಶ್ವತಃ ಸದ್ಗತಿ ಪ್ರಾಪ್ತ್ಯರ್ಥಂ"

ಬಾಪ್ಪಾರಂಥ ಮಹಾತ್ಮನ ಉತ್ತರಕ್ರಿಯೆ ಮಾಡುವ ಭಾಗ್ಯ ನನ್ನದಾಯಿತಲ್ಲ! ಎಂದು ದುಃಖದ ಸಾಗರದಲ್ಲಿ ನಾನೂ ಸಮಾಧಾನದಿಂದ ತೇಲಾಡಿದೆ. **"ನಾನು ಹುಟ್ಟಿದ್ದು ಇಂದು ಸಾರ್ಥಕ"** ಎಂದು ಧನ್ಯಪಟ್ಟೆ.



# MEMORIES OF BAPPA

**Hiryoung Kim Kamat**

Anyone who sees the Grand Canyon immediately realizes that it's impossible to caputure the magnificence of it in any measure. That's how I feel about Bappa, especially for someone who spent time with him less than five weeks.

Since Bappa loved the nature, I feel at ease in describing him in terms of nature.

**Rain : Man of affection**

He started his day with giving massage to amma's fingers. I call it "Early morning romance". That simple action, soft and gentle continuous touch was like a sweet spring shower. Then amma got the energy for whole day, and poured her affection on us.

One morning when I came out of the room barely opening my half-awaken eyes, Bappa asked, "Shall I make coffee for you?" I was so touched that I even forgot that he was my-father-in-law!

Till I visited India, I've never seen or tried Papaya. On the way to Bangalore from Mumbai, I tried it for the first time in the airplane, and was fascinated by the exotic taste. The day that I mentioned about my liking papaya, Bappa brought it along with his daily grocery purchase. He, then, carefully (without cutting off excessively) peeled and arranged beautiful orange colored succulent pieces on a plate. All for me! Bappa was suffering from the cuts on his fingers due to extreme dryness. And some days it got much worse. Even on those days, Bappa still peeled the papayas for his daughter-in-law.

Bappa was a very simple man. Luxury is far from Bappa. While we were visiting India, Bappa had given us generous lump sum of pocket money. With it, we roamed around every nook of Bangalore in auto-rickshaw, which Bappa rarely rode. Bappa covered most of distance on foot. May be bus, once in a while. Bappa never questioned how we spent the money that he and amma saved through their frugal lifestyle.

**Sun : Man of discipline**

The sun never fails to rise. Bappa is the most reliable disciplined person that I know. Each night before going to bed, Bappa prepared exact change for the milkman and left it right by the door. During our visit, he didn't forget to order extra milk as well as extra change.

Our family website 'www. kamat.com' has been on for more than seven years. All those years, Bappa provided us the content through the weekly mails. There were times more than often that we were disappointed by the mails that did not come. But each week, when all other mail failed to come, there was the loner in our mailbox: Bappa's envelope with familiar unique looks that Bappa himself made! We almost took it for granted, but it was too precious to take it automatically. We understood all his efforts behind it.

Bappa spent a great deal of time with the tribals in Madhya Pradesh, during which he sketched hundreds of pages on them. While I was going through them, I told Bappa that some of them were not crisp enough to scan since they were sketched with a pencil. Bappa said "No problem," and immediately started working on them with a pen. It required a lot of time and patience, but he knew he had to finish during our stay so that we could take them with us. He finished it two days before our departure.

**Clouds : Man of independence**

Bappa loved to watch the clouds. He could gaze them for hours together to calm himself down when he was upset or simply to entertain himself.

Bappa was a very self-sufficient man from kitchen, his lab, and to his work. He could make the best bitter-gourd 'podi' and had all the remedies to keep the leftovers fresh based on his knowledge in chemistry that he used in his photography lab as well! All Bappa's work had no or very little help from others, and yet he could accomplish so much by his resourcefulness and passion.

I once asked why he didn't travel as much. He said since the last car accident several years before, he reduced the traveling substantially. He was most afraid that he might end-up imposing himself on others in his late age. An independent man, I can understand that the idea of depending on others must have been most dreadful for him. He wanted to remain as a floating cloud, independent of everything, and he did.

**Earth : Man of down-to-earth**

One day we decided to follow Bappa to observe his activities in the market. It was such an honour for me to trace the soil that Bappa walked everyday. We went through the cow gate noting the donkeys and free-minded dogs gingerly wandered around. To the contrast of the garbage pile on the left, I admired the beautifully drawn *rangoli* on the cleanly swept yard. I was like a complete child over the excitement when Bappa took us to the photo shop that he frequented to develop all his photos. I was pleasantly greeted by the familiar faces of vegetable vendors of whom Bappa took the photos. It was unbelievable that I was there, in real place with real faces!

Bappa was a down-to-earth man. No bullshitting! though he gave us so much affection, it was never false or hypocritical. That's why Bappa's photos emanate such honesty and innocence. No embellishments.

**Ocean : Man of depth**

I never saw Bappa complain out of his frustaration. No matter what the situation was, he always dealt with his calmness and control. In American expression, "he was cool".

The day we had to leave for America came quicker than anyone hoped. The arranged taxi never showed up. As the departure time was closing in, we were frustrated and angry at the unreliable service. Finally, with the neighbor's help, we got hold of another taxi. As we were in such hurry, we hardly had time to bid goodbye to Bappa. I knew Bappa was very frustrated and helpless about the situation. But he never showd or tried not to show his sadness or worries. I never forget Bappa's standing alone and fading in the distance. That was the last time we saw Bappa.

He was like a big ocean that swallows everything into its big waves. Sometimes, I could feel Bappa's loneliness who had to stand as a tall tree, a giving tree without expectation.

**Rainbow : Bappa, our hope**

After I came back to America, I found a papaya in a store, but didn't get it. The memory of Bappa associated with papaya was so strong, I felt it might spoil the taste if I eat it in America. I will wait till my next visit to India. I will relish it in my home-in-law. The anticipation is my rainbow. Bappa is gone now, but he will be with us forever.

❑

# ನನ್ನ ಅಣ್ಣ ಕೃಷ್ಣಾನಂದ

**ಸುಮಿತ್ರಾ ಶಾನಭಾಗ**

ಹೆಸರು ಕೃಷ್ಣಾನಂದನಾದರೂ ಅವರು ನಮಗೆಲ್ಲಾ ಬರೀ ಅಣ್ಣ. ಅಣ್ಣನೆಂದು ನಾವೆಲ್ಲರೂ ಕರೆಯುತ್ತಿದ್ದರೂ ಅವರು ನಮ್ಮೆಲ್ಲರ ಗುರು, ಮಾರ್ಗದರ್ಶಿ; ಭಯ, ಗೌರವ, ವಾತ್ಸಲ್ಯದ ಜೊತೆಗೆ ಅಷ್ಟೇ ಸಲುಗೆ ಕೂಡ ಇತ್ತು.

ಅಣ್ಣನವರು ಹೊನ್ನಾವರ ಊರು ಬಿಟ್ಟಾಗ ಅಂದರೆ ೧೯೫೩ರಲ್ಲಿ ಎಸ್.ಎಸ್.ಸಿ. ಪಾಸಾಗಿ ಕಾಲೇಜಿಗೆ ಸೇರುವಾಗ ನಾನು ಇನ್ನೂ ಆರು ವರ್ಷದವಳು. ಅದಕ್ಕಿಂತ ಮೊದಲು ಅವರು ನನ್ನನ್ನು ಎಷ್ಟು ಎತ್ತಿ ಆಡಿಸಿದ್ದರೋ ಅದರ ನೆನಪು ನನಗೆ ಮಸುಕು-ಮಸುಕು. ಆದರೆ ಆ ನಂತರ ಅವರು ಪ್ರತಿಯೊಂದು ಸಲ ಊರಿಗೆ ಬಂದಾಗ ನಮ್ಮೊಡನೆ ಕಳೆದ ದಿನಗಳೆಲ್ಲ ಅಚ್ಚ-ಹಸುರು. ಪ್ರಾರಂಭದ ವರ್ಷಗಳಲ್ಲಿ ಅಂದರೆ ನಾನು ಪ್ರಾಥಮಿಕ ಶಾಲೆಯಲ್ಲಿ ಕಲಿಯುತ್ತಿರುವಾಗ, ಚಿಕ್ಕ ಮಕ್ಕಳಂತೆ ನಮ್ಮೊಟ್ಟಿಗೆ ಆಡುತ್ತಿದ್ದರು. ಅವರು ಮಾಡಿಕೊಡುತ್ತಿದ್ದ ಬಣ್ಣ-ಬಣ್ಣದ ಕಾಗದಗಳಿಂದ ತಯಾರಿಸಿದ ಗಾಳೀಪಟಗಳನ್ನು ಹಾರಿಸುವದೆಂದರೆ ನನಗೆ ತುಂಬ ಇಷ್ಟವಾಗಿತ್ತು. ಪತ್ರಿಕೆಗಳಲ್ಲಿ ಬಂದಂಥ ವಿಮಾನ, ವಿಧ-ವಿಧದ ಕಾರುಗಳು, ಪ್ರಾಣಿ-ಪಕ್ಷಿಗಳ ಚಿತ್ರಗಳನ್ನೆಲ್ಲ ತಂದು ಕೊಡುವುದು; ಹಾಗೆಯೇ ನಮ್ಮ ಬಟ್ಟೆ ಅಂಗಡಿಯಿಂದ ಬಟ್ಟೆಗಳ ಟಾಕೆಗೆ ಅಂಟಿಸಿದ ಬಂಗಾರದ ಬಣ್ಣದ ಗಣಪತಿ, ಲಕ್ಷ್ಮೀ ಮುಂತಾದ ದೇವರ ಚಿತ್ರಗಳನ್ನು ತಂದು ಕೊಡುವದು ಮಾಡುತ್ತಿದ್ದರು. ನಾನು ಅವನ್ನೆಲ್ಲ ಜೋಪಾನವಾಗಿ ಇಡುತ್ತಿದ್ದೆ. ದೀಪಾವಳಿ ಬಂತೆಂದರೆ ಚಂದ-ಚಂದದ ಆಕಾಶಗೂಡುಗಳನ್ನು ಮಾಡುತ್ತಿದ್ದರು. ಆ ಕಲೆ, ಅಂಥ ಅಭಿರುಚಿ ನಮ್ಮಲ್ಲಿ ಇನ್ನಾರಿಗೂ ಇಲ್ಲದ್ದರಿಂದ ಆಗಿನಿಂದಲೇ ಅಣ್ಣನವರೆಂದರೆ ನಮಗೆಲ್ಲ ಒಬ್ಬ ನಾಯಕ (Hero) ರಾಗಿದ್ದರು.

ಮನೆಯಲ್ಲಿ ಅಷ್ಟೊಂದು ಮಾತು, ತಮಾಷೆ, ಆಟ ಆಡುತ್ತಿದ್ದ ಅಣ್ಣನವರು ಹೊರಗೆ ಹೋದಾಗ ಮಾತ್ರ ನಾವು ಅವರೊಡನೆ ಮಾತನಾಡುವಂತಿಲ್ಲ. ಸಹಪಾಠಿಗಳೊಡನೆ ರಸ್ತೆಯಲ್ಲಿ ಅವರು ಹೋಗುತ್ತಿದ್ದರೆ ಅಪರಿಚಿತರಂತೆ ಅವರೆಡೆಗೆ ನೋಡದೇ ನಮ್ಮಷ್ಟಕ್ಕೆ ನಾವು ಹೋಗಬೇಕಿತ್ತು!

ನಾನು ಮಾಧ್ಯಮಿಕ ಶಾಲೆಯಲ್ಲಿ ಕಲಿಯುತ್ತಿರುವಾಗಲೇ ಹೆಚ್ಚಿನ ವ್ಯಾಸಂಗಕ್ಕಾಗಿ ಅಣ್ಣನವರು ಅಮೆರಿಕಾಕ್ಕೆ ತೆರಳಿದ್ದರು. ಆ ೪-೫ ವರ್ಷ ಅವರೊಡನೆ ಬರೀ ಪತ್ರ ವ್ಯವಹಾರ ಮಾತ್ರ; ಆದರೆ ಪತ್ರಗಳ ಮುಖಾಂತರವೇ ಅವರು ನಮ್ಮೊಡನೆ ಇದ್ದಾರೇನೋ ಎನ್ನುವಷ್ಟು ವಿವರವಾದ ಪತ್ರಗಳು. ಅಲ್ಲಿಯ ಕೆಲಸದ ಗಡಿಬಿಡಿ (Busy Schedule)ಯಲ್ಲಿ ಅದ್ಹೇಗೆ ಸಮಯವನ್ನು ಹೊಂದಿಸಿಕೊಳ್ಳುತ್ತಿದ್ದರೋ ಏನೋ! ಅವರು ಬರೆಯುತ್ತಿದ್ದ ಪತ್ರಗಳನ್ನು ಓದುತ್ತಿದ್ದರೆ ನಾವೇ ಅಮೇರಿಕೆಯಲ್ಲಿ ಇದ್ದೇವೆನೋ ಅನಿಸುತ್ತಿತ್ತು. ಆಗಿನ ದಿನಗಳಲ್ಲಿ ನಮ್ಮಣ್ಣ ಅಮೇರಿಕಾದಲ್ಲಿ ಇದ್ದಾರೆಂದು ಹೇಳುವುದೇ ಒಂದು ಹೆಮ್ಮೆಯ ವಿಷಯವಾಗಿತ್ತು. ಅದೂ Air Mail ನಲ್ಲಿ ಪತ್ರ ಬರೆಯುವದನ್ನು ನೋಡಿ ನನ್ನ ಗೆಳತಿಯರಿಗೆಲ್ಲ ಒಂದು ರೀತಿಯ ಅಸೂಯೆ. "ನಿನ್ನಂಥ ಆಲಸಿಗಳನ್ನು ಅಮೇರಿಕಾಕ್ಕೆ ತಂದು ಬಿಡಬೇಕು" ಎಂದು ಅವರು ಬರೆದ ಒಂದು ಮಾತಿನಿಂದಾಗಿಯೇ ನಾನು ನನ್ನಲ್ಲಿದ್ದ ಆಲಸ್ಯವನ್ನು ಹಂತ-ಹಂತವಾಗಿ ಬಿಡುವಂತಾಯಿತು

ಅಣ್ಣನವರು ಅಮೇರಿಕಾದಿಂದ ತಿರುಗಿ ಬಂದಾಗ ನಾನು ಕಾಲೇಜಿನಲ್ಲಿ ಓದುತ್ತಿದ್ದೆ. ಅವರು ಅಮೇರಿಕಾದಿಂದ ನಮಗೆ ತಂದ ಉಡುಗೊರೆಗಳಿಗಿಂತ ಅಲ್ಲಿಯ ವಿಷಯಗಳನ್ನು ಕೇಳುವದರಲ್ಲಿಯೇ ಆಸಕ್ತಿ. ಎಷ್ಟೊತ್ತಿಗೂ ಅವರನ್ನು ಕೆದಕಿ-ಕೆದಕಿ ಕೇಳುತ್ತಿದ್ದೆವು. ಎಲ್ಲರಿಗೆ ಅಲ್ಲಿಯ ವಿಷಯಗಳನ್ನು ಹೇಳುತ್ತಲೇ ಅದೇ ವಿಷಯಗಳನ್ನು ಬರೆದರೆ ಎಲ್ಲರಿಗೂ ಓದುವಂತಾಗುವದು ಎಂಬ ವಿಚಾರ ಬಂದು ಅವರು "ನಾನೂ ಅಮೆರಿಕೆಗೆ ಹೋಗಿದ್ದೆ." ಎಂಬ ಪುಸ್ತಕ ೧೯೬೯ರಲ್ಲಿ ಬರೆಯುವಂತಾಯಿತಲ್ಲದೇ ಅದು ತುಂಬಾ ಜನಪ್ರಿಯವಾಗಿ ಅಣ್ಣನವರಿ ಹೆಸರನ್ನು ತಂದುಕೊಟ್ಟಿತು. ಆ ನಂತರದಲ್ಲಿಯೇ ಅವರು ತುಂಬಾ ಲೇಖನಗಳನ್ನೂ, ಬಹಳಷ್ಟು ಪುಸ್ತಕಗಳನ್ನು ಬರೆದು ನಿಜವಾದ ಸಾಹಿತಿ ಎನಿಸಿಕೊಂಡರು.

೧೯೬೯ರಲ್ಲಿ ನನ್ನ ಮದುವೆ ನಿಶ್ಚಯವಾದಾಗ ನಾನು ಧಾರವಾಡದಲ್ಲಿ ಎಂ. ಎ. ವ್ಯಾಸಂಗ ಮಾಡುತ್ತಿದ್ದೆ. ಅಣ್ಣನವರು ಪಶ್ಚಿಮ ಬಂಗಾಲದ ಪ್ಲಾಸಿಯಲ್ಲಿ ಕೆಲಸ ಮಾಡುತ್ತಿದ್ದರು. ಹುಡುಗನ ವಿವರಗಳನ್ನು ಬರೆದು ತಿಳಿಸಿದ್ದೆ. ಅಣ್ಣ ನನಗೆ ಪತ್ರ ಬರೆದು "ಯಾವದೆ

ವಿಷಯದಲ್ಲಿ ಆ ಹುಡುಗನು ನಿನಗೆ ಅಯೋಗ್ಯನೆನಿಸಿದರೆ ಬರೆ. ನಾನು ಅದನ್ನು ತಡೆಯುತ್ತೇನೆ" ಅಂತ ನನಗೆ ಆಶ್ವಾಸನೆ ಕೊಟ್ಟರು. ಯಾವ ಅಣ್ಣ ತಾನೆ ತಂಗಿಗೆ ಇಷ್ಟೊಂದು ಸ್ವಾತಂತ್ರ್ಯವನ್ನು ಕೊಡುತ್ತಾರೆ?

ಎಲ್ಲ ರೀತಿಯಿಂದ ಅನುರೂಪನಾಗಿದ್ದರಿಂದ ಅದೇ ಹುಡುಗನೊಟ್ಟಿಗೆ ಮೇ ೧೯೬೯ರಲ್ಲಿ ನನ್ನ ಮದುವೆಯಾಯಿತು. ರಜೆ ಸಿಗದ ಕಾರಣ ಅಣ್ಣನವರಿಗೆ ಮದುವೆಗೆ ಬರಲಾಗಲಿಲ್ಲ. ಆದರೆ ತಮ್ಮ ಹೃದಯ ಮಂಥನದಲ್ಲಿ ಉಕ್ಕಿ ಬಂದ ವಿಚಾರಗಳನ್ನೆಲ್ಲ ಪತ್ರದಲ್ಲಿ ತುಂಬಿ ಕಳಿಸಿದ್ದರು. "ಜೀವನದಲ್ಲಿ ಸುಖ-ದುಃಖ, ತೃಪ್ತಿ-ಅತೃಪ್ತಿ ಎಲ್ಲವೂ ಇವೆ. ಜೀವನ ನೆಮ್ಮದಿಯಾಗಿ ನಡೆಯಬೇಕಾದರೆ ತ್ಯಾಗಬೇಕು. ಒಬ್ಬರಿಗಾಗಿ ಇನ್ನೊಬ್ಬರು ತ್ಯಾಗ ಮಾಡಬೇಕು. ಪತಿಯಾಗಿ ನಿನ್ನ ಕೈ ಹಿಡಿದವನಿಗೆ ತ್ಯಾಗಮಾಡಲು ಕೇಳುವ ಅಧಿಕಾರ ನನಗೆ ಒಂದಿಷ್ಟು ಇಲ್ಲ. ಆದರೆ ಪತ್ನಿಯಾಗಿ ಹೋಗುವ ನನ್ನ ತಂಗಿಗೆ ಕೇಳುವ ಸಂಪೂರ್ಣ ಅಧಿಕಾರ ನನಗೆ ಇದೆ ಎಂದು ನಂಬಿದ್ದೇನೆ. ನೀವಿಬ್ಬರೂ ಜೀವನದಲ್ಲಿ ಹಾಸು-ಹೊಕ್ಕಾಗಿ ಸುಖ ಬಾಳನ್ನು ಬಾಳಬೇಕು. ಸವಿನೆನಹುಗಳನ್ನು ನೆನಹಬೇಕು. ಅತ್ತೆ-ಮಾವರಿಗಾಗಿ ಎಲ್ಲಿಲ್ಲದ ಕಾಳಜಿ ವಹಿಸಬೇಕು." ಹೀಗೆ ನನ್ನ ಮದುವೆಯ ಸಂದರ್ಭದಲ್ಲಿ ನಾನು ಅವರು ತೆಗೆಯುವ ಫೋಟೋಗಳನ್ನು ತಪ್ಪಿಸಿಕೊಂಡೆನೇ ಹೊರತು ಅವರ ಹಿತವಚನಗಳಿಂದ ವಂಚಿತಳಾಗಲಿಲ್ಲ.

ನನ್ನ ಮದುವೆಯಾದ ನಂತರ ನಾನು ಅವರು ಸಿಕ್ಕಿದ ಸಂದರ್ಭಗಳು ತುಂಬಾ ಕಡಿಮೆ. ಅಕ್ಕ-ತಂಗಿಯರ ಮನೆಯಲ್ಲಿ ಉಳಿಯಲು ಹೋಗುವದು ಅವರಿಗೆ ಸೇರುತ್ತಿರಲಿಲ್ಲ. ತುಂಬಾ ಚಟುವಟಿಕೆಯಲ್ಲಿ ಇದ್ದ ಅಣ್ಣನವರಿಗೆ ನೆಂಟರಮನೆಗೆ ಹೋಗಿ ಉಂಡು ತಿಂದು ಪಟ್ಟಾಂಗ ಹೊಡೆಯುವದರಲ್ಲಿ ಏನೂ ಅರ್ಥವಿಲ್ಲ. ಹೀಗಾಗಿ ಅಪರೂಪಕ್ಕೊಮ್ಮೆ ಭೇಟಿಕೊಡಲಷ್ಟೇ ಅವರು ಬರುತ್ತಿದ್ದುದು.

ಹತ್ತಾರು ಹವ್ಯಾಸಗಳಿದ್ದದ್ದರಿಂದ ಒಂಟಿತನ, ಏಕಾಂತ ಅವರಿಗೆ ತುಂಬಾ ಸೇರುತ್ತಿತ್ತು. ಆದ್ದರಿಂದ ಯಾರಲ್ಲಿಯೂ ಹೋಗದೇ ಮನೆಯಲ್ಲಿ ಇರುತ್ತಿದ್ದರು. ಪತ್ರ, ಲೇಖನಗಳನ್ನು ಬರೆಯುವದಿರಲಿ, ದಿನಚರಿ ಬರೆಯುವದಿರಲಿ, ಅಡಿಗೆ ಮಾಡುತ್ತಿರಲಿ, ಛಾಯಾಗ್ರಹಣವನ್ನೇ ಮಾಡುತ್ತಿರಲಿ ಅವರು ಅದರಲ್ಲೇ ಮೈಮರೆತುಬಿಟ್ಟಿರುತ್ತಿದ್ದರು. ಯಾವದೇ ಕಾರಣಕ್ಕೂ ಮನಸ್ಸಿನ ನೆಮ್ಮದಿ ಕೆಡಿಸಿಕೊಳ್ಳುತ್ತಿರಲಿಲ್ಲ, ಕೈತುಂಬಾ ಕೆಲಸ ಹಚ್ಚಿಕೊಂಡರೆ ಮನಸ್ಸಿನ ನೆಮ್ಮದಿ ಉಳಿಯುತ್ತದೆ ಎಂಬ ನಿಲುವು ಅವರದು. ಅವರ ಬುದ್ಧಿಶಕ್ತಿ, ಜ್ಞಾಪಕಶಕ್ತಿ, ಪಟ್ಟು ಹಿಡಿದು ಕೆಲಸ ಮಾಡುವದು ಇವೆಲ್ಲ ಅವರು ಅಭಿವದ್ಧಿ ಹೊಂದಲು ಪೂರಕಗಳಾದವು. ಇದರ ಜೊತೆಗೆ ಎಷ್ಟು ಕಷ್ಟ ಬಂದರೂ ಧೃತಿಗೆಡುತ್ತಿರಲಿಲ್ಲ. ಯಾರ ಹಂಗಿಗೂ ಒಳಗಾಗದಂತೆ ಇರುವ ಸ್ವತಂತ್ರ ಪ್ರವೃತ್ತಿ ಅವರದು. ಹೀಗಾಗಿ ಮಗ ವಿಕಾಸ ಅಮೇರಿಕಾಕ್ಕೆ ಬನ್ನಿ ಎಂದು ಕರೆದರೂ ಅವರು ಹೋಗಲಿಲ್ಲ.

ಅಣ್ಣನವರು ತುಂಬಾ ಸರಳವಾಗಿರುತ್ತಿದ್ದರು, ಭಾರತದಲ್ಲಿ ಅವರು ಸೂಟು ಹಾಕಿದ್ದೇ ಇಲ್ಲ, ಟೈ ಕಟ್ಟಿದ್ದೂ ಇಲ್ಲ. ಒಂದು ಪ್ಯಾಂಟು ಒಂದು ಶರ್ಟು ಇವಿಷ್ಟೇ ಅವರ ಉಡುಗೆ. ಮನೆಯಲ್ಲಿ ಇದ್ದಾಗಲಂತೂ ಅವರು ಧರಿಸುವುದು ಒಂದು ಬಿಳೀ ಬನಿಯನ್ ಹಾಗೂ ಪಟ್ಟೆ ಪಟ್ಟೆ ಇದ್ದ ಚಡ್ಡಿ. ಎಂಥಾ ಅಭ್ಯಾಗತರು ಬಂದರೂ ಅದೇ ಪೋಷಾಕಿನಲ್ಲಿಯೇ ಅವರನ್ನು ಎದುರುಗೊಳ್ಳುತ್ತಿದ್ದರು. ಆ ರೀತಿಯಲ್ಲಿ ಅವರನ್ನು ನೋಡಿದವರು ಇವರೇನಾ ಡಾ. ಕೃಷ್ಣಾನಂದರ ಕಾಮತರು ಎಂದು ಅಚ್ಚರಿಪಡುತ್ತಿದ್ದರು.

ಅಣ್ಣನವರಿಗೆ ಅಭಿರುಚಿ ಇಲ್ಲದ ವಿಷಯಗಳೇ ಇರಲಿಲ್ಲ. ಗೃಹಕೃತ್ಯ, ಪಾಕಶಾಸ್ತ್ರ, ಪೇಂಟಿಂಗ್, ಚಿತ್ರಕಲೆ, ಹೊಲಿಗೆ, ಸಾಹಿತ್ಯ, ಫೋಟೋಗ್ರಾಫಿ ಒಂದೇ ಎರಡೇ............ ಅಮೇರಿಕಾದಲ್ಲಿ ಇದ್ದಾಗಲೂ ಅವರದೇ ಅಡಿಗೆ. ಅತ್ತಿಗೆಯವರು ಕೆಲಸದ ನಿಮಿತ್ತ ಬೇರೆ ಬೇರೆ ಕಡೆ ಇದ್ದುದರಿಂದ ಪ್ಲಾಸಿ, ಜೊಬನೇರದಲ್ಲಿ ಇದ್ದಾಗಲೂ ಅವರದೇ ಕೈ ಅಡಿಗೆ. ಚಪಾತಿ ಹಾಗೂ ಬಗೆ ಬಗೆಯ ದೋಸೆಗಳನ್ನು ಮಾಡುವದರಲ್ಲಿ ಅವರು ತುಂಬಾ ನಿಷ್ಣಾತರು. ಮೀನಿನ ವಿಷಯದಲ್ಲಂತೂ ಅವರು ತುಂಬಾ ನುರಿತವರು. ಅದಕ್ಕೆ ಮಸಾಲೆ ಹಚ್ಚುವದರಿಂದ ಹಿಡಿದು ಸಣ್ಣ ಉರಿಯಲ್ಲಿ ಕೆಂಪಗೆ ಹುರಿಯುವದರಲ್ಲಿ ಅವರನ್ನು ಬಿಟ್ಟು ಬೇರೆಯವರಿಲ್ಲ. ಬಗೆ-ಬಗೆಯ ಉಪ್ಪಿನಕಾಯಿಗಳನ್ನು ಮಾಡುವದರಲ್ಲಿ ಅವರದು ಪಳಗಿದ ಕೈ. ಎಲ್ಲರೂ ಊರಿನಿಂದ ಉಪ್ಪಿನಕಾಯಿ ಬಿಡಾರಕ್ಕೆ ಒಯ್ದರೆ, ಇವರು ತಮ್ಮ ಬೆಂಗಳೂರಿನ ನಿವಾಸದಿಂದ ಬಗೆ-ಬಗೆಯ ಉಪ್ಪಿನಕಾಯಿಗಳನ್ನು ಮಾಡಿ ಊರಿಗೆ ಕಳಿಸುತ್ತಿದ್ದರು! ನನ್ನ ತಮ್ಮ ತುಳಸೀದಾಸನ ಹೆಂಡತಿ ವಿಜಯಾಳಿಗಂತೂ ಊಟಕ್ಕೆ ಅವರೇ ಮಾಡಿದ ಉಪ್ಪಿನಕಾಯಿ ಬೇಕಿತ್ತು.

ಫೋಟೋಗ್ರಾಫಿ ಅವರಿಗೆ ಅಂಟಿಕೊಂಡ ನಂಟು; ಕೆಮರಾ ಒಂದು ಅವರ ಕೊರಳಲ್ಲಿ ಯಾವಾಗಲೂ ತೂಗಾಡುತ್ತಲೇ ಇರಬೇಕಿತ್ತು. ಯಾವಾಗ ಫೋಟೋ ತೆಗೆಯುತ್ತಾರೆಂದು ಗೊತ್ತೇ ಆಗುತ್ತಿರಲಿಲ್ಲ. ಫೋಟೋ ತೆಗೆಯುವದಲ್ಲದೇ ಸಂದರ್ಭಕ್ಕೆ ಅನುಸಾರವಾಗಿ

ಜೋಡಿಸಿ ಆಲ್ಬಂ ಮಾಡಿ ಕಳಿಸುತ್ತಿದ್ದರು. ನನ್ನ ತಮ್ಮನ ಹೆಂಡತಿ ವಿಜಯಾಳಿಗೆ ಫೋಟೋದ ಹುಚ್ಚು ಅಷ್ಟಿಷ್ಟಲ್ಲ. ಪ್ರತಿ ಬಾರಿ ಊರಿಗೆ ಬಂದಾಗಲೂ ಫೋಟೋ ತೆಗೆದು ಕಳಿಸುತ್ತಿದ್ದರು. ಕಳೆದ ವರ್ಷ ಆಗಸ್ಟ್ (ಹೊನ್ನಾವರಕ್ಕೆ ಅವರ ಕೊನೆಯ ಭೇಟಿ)ನಲ್ಲಿ ಬಂದಾಗಲಂತೂ ಅವಳ ೨೮ ಸೀರೆಗಳಲ್ಲಿ ೨೮ ಬಗೆಯ ಫೋಟೋಗಳನ್ನು ತೆಗೆದು ಕಳಿಸಿದ್ದರು.

ಸಾದಾ ಬಟ್ಟೆಗಳನ್ನು ತಂದು ಅದರ ಮೇಲೆ ಸುಂದರ ಪೇಂಟಿಂಗ್ ಮಾಡಿ ತಲೆದಿಂಬಿನ ಕವರಗಳು, ಮೇಜಿನ ಮೇಲೆ ಹಾಸುವ ಬಟ್ಟೆಗಳನ್ನು ತಯಾರಿಸುತ್ತಿದ್ದರಲ್ಲದೇ ತಮ್ಮ ಹೆಂಡತಿ ಜ್ಯೋತ್ಸ್ನಾರಿಗೆ ಸಾದಾ ಸೀರೆಗಳನ್ನು ತಂದು ಇಡೀ ಸೀರೆಯನ್ನು ಪೇಂಟಿಂಗ್ ನಿಂದ ವಿನ್ಯಾಸಗೊಳಿಸಿಕೊಡುತ್ತಿದ್ದರು. ದಿನಚರಿ ಬರೆಯುವುದು ಹಾಗೂ ಪತ್ರಗಳನ್ನು ಬರೆಯುವುದು ಅವರ ಅತ್ಯಂತ ಪ್ರೀತಿಯ ಕೆಲಸ. ಜ್ಯೋತ್ಸ್ನಾ ಅತ್ತಿಗೆಯವರು ಬೇರೆ ಬೇರೆ ಕಡೆ ಇದ್ದಾಗ ಅವರಿಗೆ ತಪ್ಪದೇ ನಿಯಮಿತವಾಗಿ ಪತ್ರಗಳನ್ನು ಬರೆಯುತ್ತಿದ್ದರು. ಆ ಪತ್ರಗಳನ್ನು ಜೋಡಿಸಿಯೇ 'ಪ್ರೇಯಸಿಗೆ ಪತ್ರಗಳು' ಎನ್ನುವ ಪುಸ್ತಕ ಬರುವಂತಾಯಿತು. ಅತ್ತಿಗೆಯವರಿಗೆ ಅಣ್ಣನವರು ಪ್ರತಿಯೊಂದು ವಿಷಯದಲ್ಲಿಯೂ ಮಾರ್ಗದರ್ಶಿಯಾಗಿದ್ದರು. ತಾನು ಇತಿಹಾಸದಲ್ಲಿ ಸಂಶೋಧನೆ ಮಾಡಲು; ಲೇಖನ, ಪುಸ್ತಕಗಳನ್ನು ಬರೆಯಲು; ಸಭೆ-ಸಮಾರಂಭಗಳಿಗೆ ಹೋಗಿ ಭಾಷಣ ಮಾಡಲು ಎಲ್ಲದಕ್ಕೂ ಅಣ್ಣನವರೇ ಕಾರಣೀಭೂತರು ಎಂದು ಹೇಳುತ್ತಿರುತ್ತಾರೆ.

ನನ್ನ ಮದುವೆಯಾಗಿ ೨೫ ವರ್ಷಗಳು ಮುಗಿಯುತ್ತಿದ್ದಂತೆ ನನ್ನ ಯಜಮಾನರು ಅಕಾಲ ಮರಣವನ್ನಪ್ಪಿದರು. ನನ್ನ ಮಕ್ಕಳಿಬ್ಬರೂ ಪರಸ್ಥಳಗಳಲ್ಲಿದ್ದುದರಿಂದ ಒಂಟಿತನ ನನ್ನನ್ನು ತುಂಬಾ ಬಾಧಿಸತೊಡಗಿತ್ತು. ಆಗೆಲ್ಲ ಮಾನಸಿಕವಾಗಿ ಧೈರ್ಯತುಂಬಿದವರು ಅಣ್ಣನವರೇ! ಕೇವಲ ಅವರ ಪತ್ರಗಳನ್ನು ಓದಿಯೇ ನನ್ನಲ್ಲಿ ಸ್ವಲ್ಪ ಲವ-ಲವಿಕೆ ಉಂಟಾಗಿತ್ತು. ಅವರು ಅಷ್ಟೊಂದು ಪ್ರೋತ್ಸಾಹಿಸಿದ್ದರಿಂದ ನಾನೂ ಕೆಲವು ಲೇಖನಗಳನ್ನು ಬರೆದು ಪತ್ರಿಕೆಗಳಿಗೆ ಕಳಿಸುವಂತಾಯಿತು. ನಾನು ಮಾಡಬಹುದಾದಂಥ ಅನೇಕ ಕೆಲಸಗಳನ್ನು ಮನವರಿಕೆಯಾಗುವಂತೆ ಬರೆಯುತ್ತಿದ್ದರು. ನನ್ನ ಬುದ್ಧಿಗೆ ಜಂಗು ಹತ್ತಿದೆ 'ಎಂದರೆ, ಇಂದಿನ ಯುಗದಲ್ಲಿ ಎಂಥ ಜಂಗನ್ನು ನಿವಾರಿಸಲು ರಾಸಾಯನಗಳು ಸಿಗುತ್ತವೆ' ಎಂದಿದ್ದರು.

ಒಮ್ಮೊಮ್ಮೆ ಜೀವನದಲ್ಲಿಯ ಜಿಗುಪ್ಸೆಯಿಂದ ನನಗೆ ಯಮಧರ್ಮರಾಯನಿಂದ ಟಿಕೇಟು ಯಾವಾಗ ಬರುತ್ತದೆ ಎಂತ ಕಾಯುತ್ತಿದ್ದೇನೆ ಎಂದು ಬರೆದ ಕಾಗದಕ್ಕೆ ಅವರು ಬರೆದ ಪ್ರತ್ಯುತ್ತರ ತುಂಬಾ ಮಾರ್ಮಿಕವಾಗಿತ್ತು. "ಆಧುನಿಕ ಜೀವನದ ಒತ್ತಡ, ಘರ್ಷಣೆ, ವಿರೋಧಾಭಾಸಗಳಿಂದಾಗಿ ನಿನ್ನಂತೆ ಅನೇಕರು ಮೃತ್ಯು ಲೋಕಕ್ಕೆ ಕೊಂಡೊಯ್ಯುವ ಸೂಪರ್ ಫಾಸ್ಟ್ ರೈಲಿಗಾಗಿ ಹಾತೊರೆಯುತ್ತಾರೆ. ಆದರೆ ನಿರಾಯಾಸವಾಗಿ ಅದರಲ್ಲಿ ಸೇರ್ಪಡೆಯಾಗುವದು ಸುಲಭದ ಮಾತಲ್ಲ. ನಾನು ಇದಾಗಲೇ ಅರವತ್ತು ವರ್ಷಗಳ ಸುದೀರ್ಘವಾದ, ಅರ್ಥಪೂರ್ಣವಾದ ಜೀವನ ನಡೆಸಿದ್ದೇನೆ. ಆದ್ದರಿಂದ ಕೈ-ಕಾಲು, ಬುದ್ಧಿ ಗಟ್ಟಿ-ಮುಟ್ಟಾಗಿ ಇರುವಾಗಲೇ ಯಮಧರ್ಮರಾಯನ ಸೂಪರ್ ಫಾಸ್ಟ್ ರೈಲು ಹತ್ತಲು ಸದಾ ಸಿದ್ಧವಾಗಿಯೇ ಇದ್ದೇನೆ. ಆದರೆ ಕಾಕಾ (ನಮ್ಮ ತಂದೆಯವರಿಗೆ ನಾವು ಕಾಕಾ ಎಂದು ಕರೆಯುತ್ತಿದ್ದು ಅವರು ತಮ್ಮ ೬೬ನೇ ವಯಸ್ಸಿನಲ್ಲಿ ಹೃದಯ ಸ್ತಂಭನವಾಗಿ ತೀರಿಕೊಂಡಿದ್ದರು)ರಂತಹ ಮರಣ ಎಲ್ಲರಿಗೂ ಬರಲು ಸಾಧ್ಯವೇ?" ಅಣ್ಣನವರೇ ಭಾಗ್ಯಶಾಲಿಗಳು ಆ ಸೂಪರಫಾಸ್ಟ್ ರೈಲಿನಲ್ಲಿ ಸುಲಭವಾಗಿಯೇ ಟಿಕೇಟು ದೊರೆತು ಪಯಣಿಸಿಯೇ ಬಿಟ್ಟರು.

ಅಣ್ಣನವರ ಮಾತುಗಳು, ನಡತೆ, ನಿರಹಂಕಾರ ಪ್ರವೃತ್ತಿ, ಕೊನೆಯ ತನಕ ದುಡಿಯುವ ಸ್ವಭಾವ ಮುಂತಾದ ಗುಣಗಳು ನನ್ನ ಮನಸ್ಸಿನಲ್ಲಿ ಅಚ್ಚಳಿಯದಂತೆ ಇವೆ. ಈಗಲೂ ಅವರು ತಮ್ಮ ಬೆಂಗಳೂರಿನ ನಿವಾಸದಲ್ಲಿಯೇ ಇದ್ದಾರೆಂದು ಭಾಸವಾಗುತ್ತದೆ. ಅವರು ದಾನ ಮಾಡಿದ ಕಣ್ಣುಗಳಿಂದಲೂ ಅಮರರಾಗಿದ್ದಾರೆ. ಅಂತೆಯೇ ಅವರು ಬರೆದ ಲೇಖನಗಳು, ಪುಸ್ತಕಗಳು, ತೆಗೆದ ಲಕ್ಷಾಂತರ ಫೋಟೋಗಳು, ಕಾಮತ ಪೊಟಪುರಿ ಎಂಬ ಅವರ ವೆಬ್‌ಸೈಟಿನ ಮೂಲಕ ಅವರ ನೆನಪು ಅಚ್ಚ-ಹಸುರಾಗಿ ಇರಲೆಂದು ಹಾರೈಸುತ್ತೇನೆ.

❑

# ಅಣ್ಣನೊಟ್ಟಿಗೆ ಒಂದು ದಿನ

**ಗಜಾನನ ಕಾಮತ**

ನನ್ನ ದೊಡ್ಡಣ್ಣನ ಜೀವಿತಾವಧಿಯಲ್ಲಿ, ಪತ್ನಿ ಬಿಟ್ಟರೆ, ಅವರೊಟ್ಟಿಗೆ ಹೆಚ್ಚು ಸಮಯ ಕಳೆದವನು ನಾನು ಎಂದರೆ ಅತಿಶಯೋಕ್ತಿ ಆಗಲಾರದು. ಏಕೆಂದರೆ ಅವರೊಟ್ಟಿಗೆ ಅತೀ ಹೆಚ್ಚು ತಿರುಗಿದವನು ನಾನೇ!

ಒಂದು ದಿನ ಕಾವಿಕಲೆ ಮತ್ತು ಹಾಲಕ್ಕಿ ಒಕ್ಕಲಿಗರ ಜನಜೀವನ ಹತ್ತಿರದಿಂದ ನೋಡಲು, ನಾವಿಬ್ಬರೂ ಬೈಕಿನಲ್ಲಿ ಹೊನ್ನಾವರದಿಂದ ಬೆಳಿಗ್ಗೆ ಹೊರಟೆವು. ಹೆಬ್ಬಾನಕೇರಿಯ ಒಂದು ಹಳೇ ಮನೆಯಲ್ಲಿ ಕಾವಿಕಲೆ ವೀಕ್ಷಿಸಿ ಫೋಟೋ ತೆಗೆದು, ಮುಂದೆ ಕೆಕ್ಕಾರದಲ್ಲಿ ಅಪರೂಪದ ಸ್ತಂಭ (ವೀರಗಲ್ಲು) ನೋಡಿ, ಚಂದಾವರದ ವಡಗೆರೆಗೆ ಹೋದೆವು. ಅಲ್ಲಿ ಹಾಲಕ್ಕಿ ಜನಾಂಗದವರ ವೇಷಭೂಷಣ, ಮಣಿ ಸರಗಳು, ಹೂದಂಡೆ, ತುಳಸಿ, ಕಟ್ಟೆ, ಮುಂತಾದ ಫೋಟೋಗಳನ್ನು ತೆಗೆದೆವು. ಹಾಲಕ್ಕಿಯವರ ಫೋಟೋ ತೆಗೆಯುವಾಗ ಬಂದೂಕು ಎದುರಿಗೆ ಹಿಡಿದವರಂತೆ ಮುಖಕ್ಕೆ ಗಂಟುಹಾಕಿ ನಿಲ್ಲುತ್ತಿದ್ದರು. ಆಗ ಅಣ್ಣನವರು ನನ್ನ ಕಿವಿಯಲ್ಲಿ ನೀನು ಅವರನ್ನು ನಗಿಸು, ನಾನು ಅವರ ಚಿತ್ರ ಸೆರೆಹಿಡಿಯುತ್ತೇನೆಂದು ಪಿಸುಗುಟ್ಟಿದರು. ನಾನು ಅವರನ್ನು ಮಾತಿನಲ್ಲಿ ಮುಗ್ಧರನ್ನಾಗಿಸಿದಾಗ, ಅವರ ಸಹಜ ಭಾವದಲ್ಲಿ ಚಿತ್ರವನ್ನು ತೆಗೆದರು.

ನಮಗಿಬ್ಬರಿಗೂ ನೀರಡಿಕೆ ಆಗಿತ್ತು. ಕುಡಿಯಲು ನೀರು ಕೇಳಿದಾಗ, ಹಾಲಕ್ಕಿ ಗೌಡತಿಯರು ಆಶ್ಚರ್ಯ ವ್ಯಕ್ತಪಡಿಸಿದರು. ತಾವು ನಮ್ಮ ಮನೆಯ ನೀರು ಕುಡಿಯುತ್ತೀರೋ! ಎಂದರು. ನೀರಿಗೆ ಜಾತಿ ಇಲ್ಲವೆಂದು ಅಣ್ಣನವರು ಹೇಳಿದಾಗ, ಮನೆಯೊಳಗಿದ್ದ ನೀರು ಕೊಡದೇ, ಕೊಡಪಾನ ತಿಕ್ಕಿ, ಬಾವಿಯಿಂದ ನೀರು ಸೇದಿ, ಬರಿ ನೀರು ಕೊಡದೇ, ಅಟ್ಟದ ಮೇಲಿದ್ದ ತೆಳು ಬೆಲ್ಲದ ಹೊಸ ಗಡಿಗೆಯ ಮೆತ್ತು (ಸೀಲು) ಒಡೆದು ಬೆಲ್ಲ ಮತ್ತು ನೀರು ಕುಡಿಯಲು ಕೊಟ್ಟರು.

ಅಲ್ಲಿಂದ ಚಂದಾವರ ಮಾರ್ಗವಾಗಿ ಕುಮಟಾಕ್ಕೆ ಬಂದರೆ, ಆ ದಿನ ಯಾವುದೋ ಕಾರಣಕ್ಕೆ ಉತ್ತರಕನ್ನಡ ಜಿಲ್ಲೆ ಬಂದ್ ಎಂದು ತಿಳಿಯಿತು. ಹೊಟ್ಟೆಯಲ್ಲಿ ಕಾಗೆ ಕೂಗಲು ಆರಂಭವಾಗಿತ್ತು. ಒಂದೂ ಹೋಟೆಲು ತೆರೆದಿರಲಿಲ್ಲ. ಅಲ್ಲಿ ಕುಡಿದ ನೀರು ಬೆಲ್ಲದ ಬಲದ ಮೇಲೆ ಮುಂದೆ ಸಾಗಿದೆವು. ಹೀರೆಗುತ್ತಿಯ 'ಸಣ್ಣ ಹೊಸಬ' ಮಾದನಗೇರಿಯ 'ಹಿರೆ ಹೊಸಬ' 'ಬಳಗಾ ದೇವಿ' ದೇವಸ್ಥಾನ, ತೊರಕೆ ದೇವರಬಾವಿ 'ಕೆಂಗಳ ಪರಮೇಶ್ವರಿ' ದೇವಸ್ಥಾನದಲ್ಲಿ ಕಾವಿ ಕಲೆಗಳ ಚಿತ್ರ ತೆಗೆದು, ಅಂಕೋಲಾ ತಲುಪಿದೆವು.

ಅಂಕೋಲಾದಲ್ಲಿ ಮುಚ್ಚಿದ ಹೋಟೇಲಿನ ಬಾಗಿಲುಗಳು ನಮ್ಮನ್ನು ಸ್ವಾಗತಿಸಿದವು. ಬೇರೆ ಉಪಾಯವಿಲ್ಲದೇ, ಹಸಿವೇರಾಯನ ಶರಣ ಹೋಗಿ, ನಮ್ಮ ನೆಂಟರ ಮನೆಗೆ ಹೋಗಬೇಕಾಯಿತು ಅವರು ನಮ್ಮ ಕಷ್ಟ (ತಿಳಿದರೂ) ತಿಳಿಯುವ ಗೋಜಿಗೆ ಹೋಗದೇ, ನಮಗೆ ಮಂಡಕ್ಕಿ (ಚುರಮುರಿ) ಮತ್ತು ಕಷಾಯ ಕೊಟ್ಟು ತಮ್ಮ ಆದರವನ್ನು ತೋರಿದರು.

ಹೊಟ್ಟೆಯಲ್ಲಿ ತಳಮಳ ಹಾಗೇ ಇದ್ದರೂ, ನಾವು ನಮ್ಮ ಪ್ರವಾಸವನ್ನು ಮೊಟಕುಗೊಳಿಸಲಿಲ್ಲ. ಅಲ್ಲಿಂದ ನಾವು ಅಮ್ಮನವರ ದೇವಸ್ಥಾನ, ಶಿರೂರ (ಅಂಕೋಲಾ) ನೋಡಿ, ಅಲ್ಲಿಂದ ಲಕ್ಷ್ಮೀನಾರಾಯಣ ದೇವಸ್ಥಾನ ಅವರ್ಸಾಕ್ಕೆ ಹೋದೆವು. ಅಲ್ಲಿ ಕಾವಿಕಲೆ ವೀಕ್ಷಿಸಿದ ನಮಗೆ ಶ್ರೀ ದೀನಾನಾಥ ಕುಲಕರ್ಣಿಯವರ ಮನೆಯಲ್ಲಿ ಕಾವಿಕಲೆ ಇದ್ದ ಬಗ್ಗೆ ಮಾಹಿತಿ ಲಭಿಸಿತು. ಅವರ ಮನೆ ಇದ್ದ 'ದೇಸಾಯಿ ವಾಡಾ'ಕ್ಕೆ ಹೋದರೆ, ಮನೆಯ ದ್ವಾರದ ಗೋಡೆಯ ಮೇಲೆ 'ಬಂದೂಕು ಹಿಡಿದ ಸೇವಕ' ನಮ್ಮನ್ನು ಸ್ವಾಗತಿಸಲು ನಿಂತಿದ್ದನು. ಅತೀ ಅಪರೂಪದ ಕಾವಿ ಕಲೆಯ ಫೋಟೋ ತೆಗೆದು, ಮನೆ ಪ್ರವೇಶ ಮಾಡುತ್ತಿದ್ದಂತೆ, ದೀನಾನಾಥರ ಮಡದಿ ಶಿಕ್ಷಕಿ ಶ್ರೀಮತಿ ಕೃಷ್ಣಾಬಾಯಿಯವರು ನಮ್ಮನ್ನು ಸ್ವಾಗತಿಸಿದರು. ಬಂದ ವಿಷಯ ತಿಳಿದು, ನಮ್ಮನ್ನು ಉಪಚರಿಸಿದರು. ನೆಂಟರಿಗಿಂತ ಅಪರಿಚಿತರೇ ಒಳ್ಳೆಯವರಂತೆ ಕಂಡರು. ಡಾ। ಕೃಷ್ಣಾನಂದ ಕಾಮತರು ತಮ್ಮ ಮನೆಗೆ ಬಂದಿದ್ದಾರೆಂದರೆ ನಮಗೇ ನಂಬಲು ಸಾಧ್ಯವಿಲ್ಲ! ಎಂದು ಉದ್ಗರಿಸಿದರು. ಅವರಿಬ್ಬರೂ ಅಣ್ಣನವರ ಲೇಖನ ತಪ್ಪದೇ ಓದುತ್ತಿದ್ದರಂತೆ!

ಅಪರಿಚಿತರ ಆದರ ಸತ್ಕಾರವನ್ನು ಮೆಲಕು ಹಾಕುತ್ತಾ ಬಂದಾಗ ಹೊನ್ನಾವರಕ್ಕೆ ತಲುಪಿದ್ದೇ ತಿಳಿಯಲಿಲ್ಲ. ಅಷ್ಟರಲ್ಲಿ ಕತ್ತಲಾಗಿತ್ತು. ಮಧ್ಯಾಹ್ನದ ಹಸಿವು ಮರೆತು, ರಾತ್ರಿಯ ಊಟ ಮಾಡಿ, ನಿದ್ರೆಯ ಮೊರೆ ಹೊಕ್ಕೆವು.

❑

# ಅಂಚೆ ಘರಾಣಾ ಶಶಿಕಿರಣ

## ಪೋಸ್ಟ್ : ಮಲ್ಲೇಶ್ವರಂ, ಪಿನಕೋಡ - ೫೬೦ ೦೫೫

ಪ್ರಕಾಶ ಬುರ್ಡೆ

ಸುಮಾರು ೪೫ ವರ್ಷಗಳ ಹಿಂದಿನ ಮಾತು. ಅದೇ ತಾನೇ ಆಗಿನ ಇಂಟರ್ ಸೈನ್ಸ್ ಪರೀಕ್ಷೆ ಕೆನರಾ ಕಾಲೇಜು, ಕುಮಟಾದಿಂದ ಮುಗಿಸಿ ಲಂಗುಲಗಾಮಿಲ್ಲದೇ ತಿರುಗುವ ದಿನಗಳು. ಕುಮಟಾದಿಂದ ಧಾರವಾಡಕ್ಕೆ ಬಂದೆ. ತಂದೆಯವರ ವರ್ಗವಾಗುವದರಲ್ಲಿತ್ತು. ಗೆಳೆಯ ವಸಂತನೊಂದಿಗೆ ಬೆಂಗಳೂರಿನ ಪ್ರಯಾಣದ ಚಕ್ಕರು ತಲೆಯಲ್ಲಿ ಒಂದೇಸಮನೇ ಸುಳಿಯಲಾರಂಭಿಸಿತು. ನನ್ನಕ್ಕ ಜ್ಯೋತ್ಸ್ನಾ ಮತ್ತು ಹಿರಿಯಕ್ಕ ಉಷಾ ಇವರ ಕವಿತೆಯ ಪುಸ್ತಕದೊಳಗಿನ "ಅಲಸೂರಿನ ಕೆರೆ ಸುಂದರ, ನೆಲವು, ಚೆಲುವುಗಳ ಮಂದಿರ" ಎಂಬ ಕವನವೂ ಮೆದುಳು ಕೊರೆಯುತ್ತಿತ್ತು. ಸರಿ ಧಾರವಾಡದಿಂದ ರಾತ್ರಿಯ ರೈಲು ಹಿಡಿದು ಮರುದಿನ ಮುಂಜಾನೆ ಬೆಂಗಳೂರು ತಲುಪಿದೆವು. ಮುಂಬಯಿ ಕರ್ನಾಟಕದಲ್ಲಿ ಹುಟ್ಟಿ ಬೆಳೆದ ನಮಗೆ ಕತೆ-ಕಾದಂಬರಿಗಳಿಂದಲೇ ಬೆಂಗಳೂರು ಪರಿಚಿತವಾದದ್ದು. ಕುತೂಹಲ ಮಿಶ್ರಿತ ಆನಂದದಿಂದ ನಾವಿಬ್ಬರೂ ಇಳಿದು ನಿಲ್ದಾಣದಿಂದ ಹೊರಗೆ ಬಂದೆವು. ಈಗ ಸಿಟಿ ಬಸ್ಸುಗಳ ಗಜಿಬಿಜಿ ಸ್ಥಾನವಿದೆಯಲ್ಲ, ಅಲ್ಲಿ ಒಂದು ಅತಿ ವಿಶಾಲ ನೀರಿಲ್ಲದ ಕೆರೆಯಂತಿತ್ತು. ಎಡಭಾಗದಲ್ಲಿ ಟೂರಿಂಗ್ ಟಾಕೀಸಿನಂತೆ ಕಾಣುವ ಒಂದು ಛಪ್ಪರದ ಥಿಯೇಟರು. ನಡೆದುಕೊಂಡೇ ಮಲ್ಲೇಶ್ವರದಲ್ಲಿಯ ನಮ್ಮಕ್ಕನ ಮನೆ ಸೇರಿದೆವು. ಅಕ್ಕನ ಆರೈಕೆಯ ಸಲುವಾಗಿ ಮೊದಲೇ ಬಂದ ಜ್ಯೋತ್ಸ್ನಾ ನಮ್ಮಿಬ್ಬರನ್ನು ನೋಡಿ ಸಿಡಿಮಿಡಿಗೊಂಡು ಸ್ವಲ್ಪ ಬಲಾತ್ಕಾರದ ಸತ್ಕಾರ ಮಾಡಿದ್ದೂ ಆದಮೇಲೆ ಈ ಸಿಡಿಮಿಡಿಗೊಳ್ಳುವ ಕಾರಣ ಬೆಂಗಳೂರು ನೋಡಲು ಬಂದ ಮತ್ತಿಬ್ಬರು ಅನಪೇಕ್ಷಿತ ಅತಿಥಿ ದೇವರುಗಳು ಎಂದು ತಿಳಿದು ಬಂದಿತು. ಕೊನೆಗೆ ನಾವೆಲ್ಲ ಕಬ್ಬನ್ ಪಾರ್ಕ್, ಲಾಲ್‌ಬಾಗ್ ನೋಡಿ ವಿಸ್ಮಯಪಟ್ಟು "ಅಲಸೂರು ಕೆರೆ" ನೋಡಿ (ಅದಕ್ಕೆ "ಹೊಲಸೂರುಕೆರೆ" ಎಂದು ಹೊಸ ನಾಮವಿತ್ತು) ಧಾರವಾಡಕ್ಕೆ ಮರಳಿಯೂ ಆಯಿತು.

ಉತ್ತರಾದಿ ಸಂಗೀತದಲ್ಲಿ ಘರಾಣೆ ಇದ್ದ ಹಾಗೆ ನಮ್ಮದು, ಬುರ್ಡೆಯವರದು "ಅಂಚೆ ಘರಾಣೆ" ಅಥವಾ ಟಪ್ಪಾಲು ಘರಾಣೆ! ೧೮೬೮ರಲ್ಲಿ ಹುಟ್ಟಿದ ಬುರ್ಡೆವಿಶ್ವೇಶ್ವರ ರಾಯರು ಅಂದರೆ ನಮ್ಮಜ್ಜ ತನ್ನ ೨೦ನೇ ವಯಸ್ಸಿನಲ್ಲಿಯೇ ದಕ್ಷಿಣಕನ್ನಡ ಜಿಲ್ಲೆಯ (ಆಗಿನ ಮದ್ರಾಸ ಪ್ರೆಸಿಡೆನ್ಸಿ) ಹೆಮ್ಮಾಡ ಊರಲ್ಲಿಯ ತಮ್ಮ ಮಾವನ ಕೃಪೆಯಿಂದ ಮದ್ರಾಸಿಗೆ ತೆರಳಿ ಮೆಟ್ರಿಕ್ಯುಲೇಶನ್ 'ಪದವಿ' ೧೮೮೮ರಲ್ಲಿ ಸಂಪಾದಿಸಿ ಅಂಚೆಖಾತೆ ಸೇರಿಕೊಂಡು ೧೯೨೯ರಲ್ಲಿ "ಅಂಚೆಸೇವಾ ಪ್ರಶಸ್ಥ"ರೆಂದು ಸೇವಾನಿವೃತ್ತರಾದರು. ಮೋಟರಗಾಡಿ ಸಹ ಇಲ್ಲದ ಕಾಲದಲ್ಲಿ ಕೇವಲ ಚಕ್ಕಡಿಗಾಡಿಗಳಲ್ಲಿ ಸಾಮಾನ ಹೇರಿ ಊರಿಂದೂರಿಗೆ ತಮ್ಮ ಅತಿ ವಿಶಾಲ ಕುಟುಂಬದೊಂದಿಗೆ (ಏಳು ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು ಮತ್ತು ವಿಧವೆ ಮಗಳ ಪರಿವಾರ) ಪ್ರವಾಸ ಮಾಡುತ್ತಿದ್ದ ದಿನಗಳವು. ಆ ದಿನಗಳ ರಸವತ್ತಾದ ಕತೆಗಳನ್ನು ಕೇಳುವ ಮೊಮ್ಮಕ್ಕಳಾದ ನಮಗೆ ತವಕ "ಅಜ್ಜಾ ಕತೆ ಹೇಳೋ, ಅಜ್ಜಾ ಕತೆ ಹೇಳೋ" ಎಂದು ಪೀಡಿಸುತ್ತಿದ್ದೆವು. ಸದ್ಯ ಈ ಕಾಟ ಬೇಡ ಎಂದು ನಮಗೆ ಸತ್ಯಕಥೆಗಳನ್ನು ಹೇಳುತ್ತಿದ್ದರು. ಆಗಿನ ಕಾಲದ ಸಂಪರ್ಕ ಸಾಧನಗಳ ಮಂದಗತಿಯಿಂದ ಪ್ಲೇಗು ಹಾವಳಿಯಲ್ಲಿ ಕಿತ್ತೂರಿಗೆ ವರ್ಗವಾದಾಗ, ಅವರಿಗೆ ಕಳಿಸಿದ Transfer order ಏಳು ದಿನಗಳ ಉಪರಾಂತ ಸಿಕ್ಕಿದುದರಿಂದ ಅವರ ಬದಲಿಗೆ ಮತ್ತೊಬ್ಬರು ಹೋಗಿ, ಅವರ ಕುಟುಂಬ ಪ್ಲೇಗು ಹಾವಳಿಯಲ್ಲಿ ತುತ್ತಾದದ್ದು ತಾವು ಮತ್ತು ತಮ್ಮ ಕುಟುಂಬ ಸುರಕ್ಷಿತವಾಗಿ ಉಳಿದದ್ದು ಶ್ರೀ ಭವಾನಿಶಂಕರನ ಕೃಪೆ ಎಂದು ಆಗಾಗ ಹೇಳುತ್ತಿದ್ದರು. ಅವರ ನಾಲ್ಕನೇ ನಂಬರಿನ ಮಗ, ನಮ್ಮ ತಂದೆ ಗಣೇಶರಾಯರು ಕುಮಟೆಯ ಗಿಬ್ಬ ಹಾಯಸ್ಕೂಲಿನಲ್ಲಿ 'ಸ್ವಾತಂತ್ರ್ಯ ಚಳುವಳಿ' ಎಂದುಕೊಂಡೋ ಅಥವಾ ಗಣಿತಕ್ಕೆ ಹೆದರಿಕೊಂಡೋ ಒಂದೆರಡು ಸಲ ಡುಮಕಿ ಹೊಡೆದು ಕೊನೆಗೆ ಮ್ಯಾಟ್ರಿಕ್ ಪಾಸಾಗಿ ಎಲ್ಲರಂತೆ ಮುಂಬಯಿಗೆ ಹೋಗಿ ಪಂಜಾಬಿ ಸಿಂಧ ಬ್ಯಾಂಕಿನಲ್ಲಿ ೩೦ರೂ ತಿಂಗಳ ಸಂಬಳದ ಕೆಲಸಕ್ಕೆ ಸೇರಿಕೊಂಡರು. ಒಂದೆರಡು ವರ್ಷಗಳಲ್ಲಿಯೇ ತಂದೆಯವರ ಫರ್ಮಾನು "ಇನ್ನು ಕೆಲವೇ ತಿಂಗಳಲ್ಲಿ ನಾನು ರಿಟಾಯರ ಆಗ್ತಾ ಇದ್ದೇನೆ. ಸಾಹೇಬರ ಹತ್ತಿರ ನಿನ್ನ ಬಗ್ಗೆ ಮಾತಾಡಿದ್ದೇನೆ. ಮರಳಿ ಬಾ, ಗಣೇಶ ಸುಂದರನೇ ಮರಳಿ ಬಾ", ಎಂಬರ್ಥದ ಪಲ್ಲವಿಯ ಕಾರ್ಡುಗಳನ್ನು ಕಳಿಸಲಾರಂಭಿಸಿದರು. ಕೊನೆಗೆ ಪಾಕೇಟಿಗೆ ಅಂಚೆ ಟಿಕೇಟು ಅಂಟಿಸಿದಂತೆ ಗಣೇಶರಾಯರನ್ನು ೨೦ರೂ ಸಂಬಳ ಅಂದರೇ ೧೦ರೂ. ಕಡಿಮೆಯ ನೌಕರಿಗೆ ಅಂಟಿಸಿಯೇಬಿಟ್ಟರು. ಕುಮಟೆ ಅಂಚೆಯ ಆಫೀಸಿನ ಒಂದು ಕೋಣೆಗೆ ಮತ್ತು ವರಾಂಡವಿದ್ದ ಬ್ರಿಟೀಷರ

ಕಾಲದ ಹಿಂದಿನ ಬಂಗಲೆಯ ಹಿಂಬದಿಯಲ್ಲಿ ರಾಯರು ಅಂಚೆಯ ಎರಡನೇ ತಲೆಮಾರಿನ ವಂಶಾವಳಿ ಪ್ರಾರಂಭಿಸಿ ಕೊನೆಗೆ ೩೭ ವರ್ಷಗಳ ದೀರ್ಘ ಸೇವೆಯಿಂದ ೧೯೬೭ರಲ್ಲಿ ನಿವೃತ್ತರಾದರು. ಅಜ್ಜ ಹಚ್ಚಿದ್ದು ಮಾಮೂಲಿ ಅಂಟಲ್ಲ, ಫೆವಿಕೋಲ್ ಫಿಕ್ಸಿಂಗ್! ಹೀಗೆ ಆಜ್ಞಾಧಾರಕನಾದ ನಾಲ್ಕನೇ ಮಗ ಮುಂದೆ ಊರು ಊರು ಸುತ್ತಿ ೧೯೫೭ರ ಸುಮಾರಿಗೆ ಧಾರವಾಡಕ್ಕೆ ಮರಳಿ ಬಂದರು.

ಅಕ್ಕ ಜ್ಯೋತ್ಸ್ನಾ ಸಂಸ್ಕೃತ ಮತ್ತು ಇತಿಹಾಸ ವಿಷಯಗಳಲ್ಲಿ ಬಿ. ಎ. (ಆನರ್ಸ್) ಪಡೆದು ಕುಮಟೆಯ ಕೆನರಾ ಕಾಲೇಜಿನಿಂದ ಮುಂದೆ ಧಾರವಾಡದ ವಿಶ್ವವಿದ್ಯಾಲಯದಲ್ಲಿ ಇತಿಹಾಸ ಕಲಿಯುವ ಹುಮ್ಮಸವಿದ್ದವಳು. ನಾನೂ ಅದೇ ಕಾಲೇಜಿನಿಂದ ಇಂಟರ್ ಸಾಯನ್ಸ್ ದಲ್ಲಿ ಮೂರನೇ ತರಗತಿಯಲ್ಲಿ ಪಾಸಾಗಿ ಸಸ್ಯಶಾಸ್ತ್ರ ಮತ್ತು ರಸಾಯನಶಾಸ್ತ್ರ ಎಂದುಕೊಂಡು ಕರ್ನಾಟಕ ಕಾಲೇಜು ಸೇರಿಕೊಂಡೆ. ನಮ್ಮೊಂದಿಗೆ ಕುಮಟೆಯಿಂದ ಬಂದ ನಾಲ್ಕಾರು ಗೆಳೆಯರೂ ಇದ್ದರು. ನಾನು ಕೃಷ್ಣಾನಂದರನ್ನು ಮೊಟ್ಟಮೊದಲು ನೋಡಿದ್ದು ಧಾರವಾಡದ ಕರ್ನಾಟಕ ಕಾಲೇಜಿನ ವಸತಿಗೃಹವಾದ ನ್ಯೂ ಬ್ಲಾಕ್‌ನಲ್ಲಿಯೇ. ಆಗ ಅವರಿದ್ದುದು ಲಿಬರ್ಟಿ ಬ್ಲಾಕ್ ವಸತಿಗೃಹದಲ್ಲಿ. ಬಹುಶಃ ಎಂ.ಎಸ್ಸಿಯ ಮೊದಲನೇ ವರ್ಷ ಮುಗಿಸಿ ಎರಡನೇ ವರ್ಷಕ್ಕೆ ಕಾಲಿಟ್ಟವರು. ಜತೆಗೆ ಟ್ಯೂಟರರೆಂದೂ ನೇಮಕ ಕೂಡ ಪಡೆದವರು.

ಸ್ವಾತಂತ್ರ್ಯ ಸಿಕ್ಕಿ ಒಂದೇ ದಶಮಾನ ಆಳಿದ ಕಾಲ. ಮಹಾತ್ಮಾಗಾಂಧಿಯವರ ಬೇಸಿಕ್ ಟ್ರೈನಿಂಗ್ ಪ್ರಣಾಳಿಕೆ ಇನ್ನೂ ಚಾಲತಿ ಇತ್ತು! Graduates Basic Training College ದಲ್ಲಿ ಡಿ. ಎಡ್. ಪಡೆದು ಒಂದು ಸರ್ಟಿಫಿಕೇಟ್ ಕೂಡ ದೊರೆಯುವಂತಿತ್ತು. ಮೇಲಾಗಿ, ಏನೂ ಇಲ್ಲದಿದ್ದರೂವೇ ಒಂದು ಖಾಯಂ ಶಿಕ್ಷಕಿಯ ನೌಕರಿಗೆ ಬಾಧೆ ಇರಲಿಲ್ಲ. ಜ್ಯೋತ್ಸ್ನಾ ಅದೇ ವಿಚಾರದಿಂದ GBTC ಸೇರಿಕೊಂಡಳು. ಅವಳ ಎಂ. ಎ. ಮೊದಲ ಭಾಗ ಆಗಿನ ಇತಿಹಾಸದ ಮೇಧಾವಿ ಡಾ. ಬಿ.ಎ. ಸಾಲೇಟೋರ ಅವರಲ್ಲಿ ಹಜೇರಿ ತಂಡ ಪ್ರಾರಂಭವಾಯಿತು! ಅಂದಿನ ಆಕೆಯ GBTC ಮತ್ತು ಎಂ.ಎ. ಯ ಗೆಳತಿ-ಗೆಳೆಯರೆಂದರೆ ಪದ್ಮಾ ಕುಲಕರ್ಣಿ, ಎನ್ನಿ ಶಾಂತಾ (ಕೊಡಗಿನ ಶಾಂತಾ-ಜಯಚಾಮರಾಜೇಂದ್ರ ಒಡೆಯರನ್ನು ಎಂದೂ ಹೆಸರಿನಿಂದ ಸಂಭೋದಿಸದೇ His Highness ಎನ್ನುವಾಕೆ), ನೂರಜಹಾನ ನಾಗರಕಟ್ಟಿ, ಶಾರದಾ ಮಡಿಮನ ಮತ್ತು ಕೃಷ್ಣಾನಂದ ಕಾಮತ. ಹೆಸರಿಗೆ ತಕ್ಕಂತೆ ಎಲ್ಲ ಗೋಪಿಯರೊಂದಿಗೆ ಒಬ್ಬ ಕೃಷ್ಣ! ಮುಂದೆ ಗೋವಾ ರಾಜ್ಯದ ಮುಖ್ಯಮಂತ್ರಿಯಾಗಿ ಮೆರೆದ ಶಶಿಕಲಾ ಕಾಕೋಡಕರ (ಆಗಿನ ಬಾಂದೋಡಕರ) ಇವರೂ ನಮ್ಮಲ್ಲಿ ಹಲವು ಸಲ ಬಂದು ಆತಿಥ್ಯ ಪಡೆದದ್ದು ಇದೆ.

ಅಂದಿನ ಕೃಷ್ಣಾನಂದರ ಬಗ್ಗೆ ಏನು ಬರೆಯಲಿ? ಸ್ತ್ರೀದಾಕ್ಷಿಣ್ಯದ ಮನುಷ್ಯ. ತಂತಾನೇ ಎಲ್ಲರಿಗೂ ಬೇಕಾದಂಥವ. ನಮ್ಮಲ್ಲಿ ಆಗಿಂದಾಗ ರಾತ್ರಿಯ ಊಟದ ಕಾರ್ಯಕ್ರಮ ನಡೆದಾಗ ಎಲ್ಲರನ್ನು ಮನೆಗೆ ತಲುಪಿಸಿ ತನ್ನ ರೂಮು ಸೇರಿಕೊಳ್ಳುವ, ಎಲ್ಲರ ಅಪೂರ್ಣ ಕೈಗಾರಿಕೆಯ ಕೆಲಸಗಳನ್ನು ವಿನಂತಿಸುವ ಮೊದಲೇ ಅರಿತು ಅದರಂತೆ ಪೂರ್ಣಗೊಳಿಸುವ 'ತನ್ನ ಕೈಯಿಂದ ಆಗಲಾರದಕ್ಕೆ ಕೈಗಾರಿಕೆ ಎನ್ನುತ್ತಾರೆ' ಎಂಬ ನಿರೂಪಣೆಯಲ್ಲಿಯೇ ಮುಳುಗಿದ್ದ ಜ್ಯೋತ್ಸ್ನಾಳ ಕೈಗಾರಿಕೆ ಕೃಷ್ಣಾನಂದರೇ ಮಾಡಿಕೊಟ್ಟಿರಬಹುದೆಂದು ನನ್ನ ಊಹೆ! ಹೀಗಾಗಿ "ಡಿಪೆಂಡಬಲ್ ಕಾಮತ್" ಎಂಬ ಉಪಾಧಿ ಅವರಿಗೆ ಸಿಕ್ಕಿತ್ತು.

ಸರಿ, GBTC ಯ ಒಂದು ವರ್ಷದ Diploma course ಮುಗಿಯಿತು. ಬೇಕಾದರೆ ಶಾಲಾಮಾಸ್ತರರೆಂದು ಎಲ್ಲಿಯೂ ತಮ್ಮ ಜೀವನರೇಖೆ ಪ್ರಾರಂಭಿಸಬಹುದಾಗಿತ್ತು. ಜ್ಯೋತ್ಸ್ನಾ, ಸರೋಜಿನಿ ಮಹಿಷಿಯವರ ಅಧ್ಯಕ್ಷತೆಯಲ್ಲಿ ನಡೆದ ಭಾಗೀರಥಿ ಪುರಾಣಿಕರು ಪ್ರಾರಂಭಿಸಿದ ವನಿತಾ ಸಮಾಜದಲ್ಲಿ ಶಿಕ್ಷಕಿ ಎಂದು, ಕ್ರಮೇಣ ಓದುತ್ತಿದ್ದ ವೆಚ್ಚವನ್ನು ನಿಯಂತ್ರಿಸಲು ಸೇರಿದಳು. "ಕ್ಷ" ಸಂಬಳಕ್ಕೆ ಸಹಿ ಹಾಕಿ "ಯ" ಸಂಬಳ ಪಡೆಯುವ ಕಾಲ. ಕಾಮತರ Tutorials ಅಲ್ಲಿ ನಡದೇ ಇತ್ತು! ಕೊನೆಗೊಮ್ಮೆ GBTC ಮುಗಿಸಿ Syrause University ಯಲ್ಲಿ ಕಲಿಯಲು ಸಿಕ್ಕ ಸಮಾಚಾರ ನಮಗೆಲ್ಲ ತಿಳಿದದ್ದು ಅವರು ಎಂ.ಎಸ್ಸಿ. ಮುಗಿಸಿ, ಕಲಿಸುವಿಕೆ ಪ್ರಾರಂಭವಾದಾಗಲೇ!

ಕೃಷ್ಣಾನಂದರ ಮುಂದಿನ ಪ್ರವಾಸ ಕನ್ನಡ-ಓದು ಬರೆಯುವವರಿಗೆಲ್ಲರಿಗೂ "ನಾನೂ ಅಮೇರಿಕೆಗೆ ಹೋಗಿದ್ದೆ" ಮುಖೇನ ಪರಿಚಿತವಾಗುವ ಮುಂಚಿನ ಹಂತದ ಕತೆ ಮೂಡಿಸುವ ಮೊದಲು ಬುರ್ಡೆ ವಂಶಾವಳಿ, ಜ್ಯೋತ್ಸ್ನಾ, ಹಿರಿಯಕ್ಕ ಉಷಾ, ತಂಗಿ ಸುಷಮಾ ಹಾಗೂ ನನ್ನ ಬಗ್ಗೆ ಕೆಲ ಮಾತುಗಳನ್ನು ಹೇಳಬಯಸುತ್ತೇನೆ.

ಹಿಂದೆ ನಮ್ಮಜ್ಜನ ಕತೆ ಹೇಳಿದ್ದೆನಲ್ಲ, ಕುಮಟೆಯಲ್ಲಿ ತಾವೇ ಕಟ್ಟಿಸಿದ ದೇಶೀ ಹೆಂಚಿನ ಮನೆಯಲ್ಲಿ ತನ್ನ ೬೫ನೇ ವರ್ಷಕ್ಕೆ ನಮ್ಮಜ್ಜ ಇ ಇಹಲೋಕದ ಪ್ರವಾಸ ಮುಗಿಸಿದರು. ಮನೆಕಟ್ಟಲು ನಿವೃತ್ತಿ ವೇತನದ ಅರ್ಧಾಂಶ ಮೊದಲೆ ಪಡೆದುದರಿಂದ ಅವರಿಗೆ ಪ್ರತಿ ತಿಂಗಳು

ಸಿಗುವ ಮೊತ್ತ ೩೨-೮-೦ ಇತ್ತು." ೩೪ ವರ್ಷ ನನ್ನ ಅರ್ಧ ಪೆನ್‌ಷನ್‌ಅನ್ನು ಸರಕಾರಕ್ಕೆ ಬಿಟ್ಟುಕೊಟ್ಟೆ" ಎಂದು ಹಾಸ್ಯ ಮಾಡುತ್ತಿದ್ದರು. ಈ ಹಣ ಅವರು ತಮ್ಮ ಆಯುರ್ವೇದ, ಹೋಮಿಯೋ ಔಷಧಿಗಳಿಗಾಗಿ ವೆಚ್ಚ ಮಾಡುತ್ತಿದ್ದರು. ಬಾಕಿ ಹಣ ತಮ್ಮ ಚಂಚಿನಲ್ಲಿಟ್ಟು ಕಾಲೇಜಿಗೆ ಹೋಗುವ ನಮಗೆ ಆಗಿಂದಾಗ ಪಾಕೀಟ ಮನಿಯೆಂದು ಕೊಡುತ್ತಿದ್ದರು. ಕಣ್ಣು ಕಾಣಿಸದಿದ್ದರೂ ಶಿಸ್ತು ಮತ್ತು ಸಂಯಮ ಪಾಲಿಸುವ ಅವರ ಸ್ವಾವಲಂಬಿತನ ಬಂದು ಭೆಟ್ಟಿಯಾಗುವವರಿಗೆಲ್ಲ ಅಚ್ಚರಿ ಪಡೆಯುವಂತೆ ಆಗುತ್ತಿತ್ತು. ಅವರ ನಾಲ್ಕನೇ ಮಗ ನಮ್ಮ ತಂದೆ, ಇದೇ (೨೦೦೨) ಜೂನ್ ಆರರಂದು ೯೭ನೇ ವರ್ಷದಲ್ಲಿ ಕಾಲಿಟ್ಟರು! ಯಾವಾಗಲೂ ಪುಸ್ತಕದ ಸಾನ್ನಿಧ್ಯದಲ್ಲಿಯೇ ಕಾಲಕಳೆಯುತ್ತಿದ್ದ ಬುರ್ಡೆ ಗಣೇಶರಾಯರು ನಮ್ಮನ್ನೆಲ್ಲಾ ಮುಂಜಾನೆ ಎಬ್ಬಿಸಿ ಐದು ಗಂಟೆಗೇನೇ ಚಹ ಮಾಡಿ, ನಮಗೆ ಕುಡಿಸಿ, ತಾವೂ ಕುಡಿದು, ಸ್ವತಃ ನಾಸ್ತಿಕರಾದರೂ ಸಹ ಕಡ್ಡಾಯದಿಂದ "ಭಗವದ್ಗೀತೆ" ಓದಲು, ಓದಿಸಲು ಪ್ರಾರಂಭಿಸುತ್ತಿದ್ದರು. ಈ ಸಾಮೂಹಿಕ ಗೀತಾ ಪಠಣ ಅನ್ವಯಾರ್ಥಗಳೊಂದಿಗೆ ಒಂದು ತಾಸು ನಡೆಯುತ್ತಿತ್ತು! ತರಗತಿಯ ಅಭ್ಯಾಸದ ಹೊರತೆ ತಮ್ಮದಲ್ಲ, ಆದರೆ ಸಾಹಿತ್ಯ, ಕಲೆ, ಇತಿಹಾಸ ಓದುವದು ಓದಿಸುವದು ಒಂದು ನಿತ್ಯಕ್ರಮವಾಗಿತ್ತು. ಹೀಗಾಗಿ ಅಭ್ಯಾಸದ ವಿಷಯಬಿಟ್ಟು ಮಿಕ್ಕಿವೆಲ್ಲದರಲ್ಲಿ ನಮ್ಮದೆಲ್ಲರದು ಎತ್ತಿದಕೈ! ೧೯೩೩ರಲ್ಲಿ ಶ್ರೀ ಜಿ. ಬಿ. ಜೋಶಿ ಮನೋಹರ ಗ್ರಂಥಮಾಲೆ ಪ್ರಾರಂಭಿಸಿದ ಕೂಡಲೆ ಯಾವಾಗಲೂ ಹಣದ ಜಂಜಾಟದಲ್ಲಿದ್ದರೂ ಸಹ ನಮ್ಮ ತಂದೆ ಅವರ ಮೊದಲ ಚಂದಾದಾರರಾಗಿದ್ದರು. ಅಲ್ಲಿಂದ ಇಲ್ಲಿಯತನಕ ಚಂದಾದಾರ ಪ್ರಕಾಶಕ ಸಂಬಂಧ. ಮುಂದೆ ಕೆಲವು ದಶಕಗಳಲ್ಲಿಯೇ ಲೇಖಕ-ಪ್ರಕಾಶಕ ಸಂಬಂಧದಲ್ಲಿ ಮಾರ್ಪಾಡಾಯಿತು! Matric ನಂತರ ಪ್ರೀವಿಯಸ್ ಪರೀಕ್ಷೆ ಪಾಸಾಗದೇ ಸದಾ ಸರ್ವದಾ ಅಂಚೆಖಾತೆಯಲ್ಲಿ ಕೆಲಸಕ್ಕಿದ್ದ ಬುರ್ಡೆಯವರು ಮಿಕ್ಕಿದ ವೇಳೆಯಲ್ಲಿ ಓದುತ್ತಲೇ ಇರುತ್ತಿದ್ದರು, ಬರೆಯುತ್ತಲೇ ಇರುತ್ತಿದ್ದರು. ಹೊಸ ಹೊಸ ಭಾಷೆ ಅರಿತುಕೊಳ್ಳುವ ಹವ್ಯಾಸ ಬೇರೆ. ಹೈದರಾಬಾದಿಗೆ ಹೋಗುವ ಪ್ರಸಂಗ ಬರಬಹುದೆಂದು ತಾವು ಉರ್ದು ಕಲಿತರು; ನಮಗೆಲ್ಲಾ ಉರ್ದು ಕಲಿಸಿದರು ಕೂಡ! ತನ್ನ ೭೭ನೇ ವಯಸ್ಸಿನಲ್ಲಿ ರವೀಂದ್ರನಾಥರ ಗೀತಾಂಜಲಿ ಬಂಗಾಲಿಯಲ್ಲಿ ಓದಬೇಕೆಂಬ ಛಲದಿಂದ ಮುಂಬಯಿಯಲ್ಲಿ ಬಂಗಾಲಿ ಕ್ಲಾಸಿಗೆ ಹೋಗಿ ಒಂದೇ ಸಮನೇ ಗಂಟೆಗಟ್ಟಲೆ ಕುಳಿತು ಬಂಗಾಲಿ ಅಕ್ಷರಗಳನ್ನು ಅಭ್ಯಾಸ ಮಾಡುತ್ತಿದ್ದರು. ನಿವೃತ್ತರಾದ ಮೇಲೆ ದಿನಕ್ಕೆ ೧೨-೧೪ ತಾಸು ಓದು-ಬರಹಗಳಲ್ಲಿ ಕಳೆಯುತ್ತಿದ್ದರು. ೧೯೪೬ರಲ್ಲಿ ನಮ್ಮನೆಲ್ಲಾ ಕಟ್ಟಿಕೊಂಡು ಹುಬ್ಬಳ್ಳಿಯ ಸಾಹಿತ್ಯ ಸಮ್ಮೇಳನ (ಆಗ ನನಗೆ ೮ವರ್ಷ!) ಕ್ಕೆ ಹೋದದ್ದು, ಗುಬ್ಬಿ ವೀರಣ್ಣ, ಗರೂಡ ಸದಾಶಿವರಾಯರು ಮತ್ತು ಪಂಚಾಕ್ಷರಿಯವರ ನಾಟಕಗಳನ್ನು ನೋಡಿದ್ದು ಕೆಲವು ಬಾಲ್ಯದ ಸವಿನೆನಪುಗಳು.

ಇದೆಲ್ಲ ಸವಿಸ್ತಾರವಾಗಿ ಬರೆಯುವ ಕಾರಣವೆಂದರೆ, ಜ್ಯೋತ್ಸ್ನಾ ಬುರ್ಡೆ-ಕೃಷ್ಣಾನಂದ ಕಾಮತರ ಮೊದಲ ಭೇಟಿಯ ಮೊದಲು, ಇತಿಹಾಸ, ಸಾಹಿತ್ಯ, ಕಲೆ, ಇವೆಲ್ಲದರ ಬಗ್ಗೆ ನಮ್ಮಲ್ಲಿ ಒಂದು ವಿಶೇಷ ಆಸಕ್ತಿ, ಕುತೂಹಲ ಇದ್ದೇ ಇತ್ತು. ಜ್ಯೋತ್ಸ್ನಾ ಬಿಡುವಾಗಿದ್ದಾಗ ಏನಾದರೂ ಓದುತ್ತಲೇ ಇರುತ್ತಿದ್ದಳು. ಹಿರಿಯಕ್ಕ ಮದುವೆ ಆಗಿ ತನ್ನ ಬಿಡಾರ ಟೂರಿಂಗ್ ಟಾಕೀಸಿನಂತೆ ಮುಂಬಯಿ, ಪುಣೆ, ಔರಂಗಾಬಾದ್, ಹುಬ್ಬಳ್ಳಿ, ಮಾರ್ಗವಾಗಿ ಬೆಂಗಳೂರಲ್ಲಿ ೧೯೫೬ರಲ್ಲಿ ಆಗಮಿಸಿ ಕೊನೆಗೆ ಬೆಂಗಳೂರಿನಲ್ಲಿಯೇ ತನ್ನ ಯಜಮಾನರೊಂದಿಗೆ ಸ್ವಂತ ಮನೆಕಟ್ಟಿಸಿ ಹಾಯಾಗಿ ಉಳಿದಳು. ಜ್ಯೋತ್ಸ್ನಾ ಎಂ.ಎ. ಮುಗಿಸಿದಳು. ನಾನು ಆದಾಗಲೇ ನನ್ನ ಮಟ್ಟಿಗೆ ಅಭ್ಯಾಸ ಬದಿಗಿಟ್ಟು ಎರಡು ಪುಸ್ತಕಗಳನ್ನು ಕನ್ನಡದಲ್ಲಿ ಬರೆದು "ಸಾಹಿತಿ"ಯಾಗಿಬಿಟ್ಟಿದ್ದೆ. ಮುಂದೆ ೩೫ ವರ್ಷ ಕನ್ನಡ ಮರೆತ ಕನ್ನಡಿಗ ಧೀರ! ೧೯೫೬ರಲ್ಲಿ ಬಿ.ಎಸ್‌ಸಿ. ಮುಗಿಸಿ ನೌಕರಿಗಾಗಿ ಮುಂಬಯಿಗೆ ಹೋಗಿ ಕೆಲಕಾಲ ಪುಣೆಯಲ್ಲಿದ್ದ ಬಳಿಕ ದೊಡ್ಡ ಔಷಧ ಕಂಪನಿಯ ಪ್ರತಿನಿಧಿಯೆಂದು ಭೋಪಾಳ, ಜಬಲಪೂರ, ನಾಗಪೂರ, ಠಾಣೆ ಮುಂಬಯಿ ಎಂದು ಓಡಾಡುತ್ತಲೇ ಇದ್ದೆ! "ಕಂಪನಿಯವರು ಪ್ರಕಾಶನಿಗೆ ಸಂಬಳ ಕೊಡುವದು ಅವನ ಟಿಪ್-ಟಾಪ್ ಡ್ರೆಸ್ಸಿಗಾಗಿಯೇ" ಎಂದು, ಟಾಯ್ ಧರಿಸದೇ ಎಂದೂ ಹೊರಗೆ ಹೋಗದ ನನ್ನನ್ನು ಕುರಿತು ಕೃಷ್ಣಾನಂದರು ಗೇಲಿಮಾಡುತ್ತಲೇ ಇರುತ್ತಿದ್ದರು.

ನನಗೆ ಗೊತ್ತಿದ್ದ ಮಟ್ಟಿಗೆ ಕೃಷ್ಣಾನಂದ ಕಾಮತರ ಮನೆತನದಲ್ಲಿ ಸಾಹಿತ್ಯದ ಸಹವಾಸ ಅಷ್ಟಕ್ಕಷ್ಟೆ. ಅವರೂ ಚಿಕ್ಕಂದಿನಿಂದಲೂ ಛಾಯಾ-ಚಿತ್ರಗಳ ಬಗ್ಗೆ ವಿಶೇಷ ಆಸ್ಥೆ ಇಟ್ಟುಕೊಂಡವರು. ಈಗಲೂ ಕೃಷ್ಣಾನಂದ ಕಾಮತರು ಬರೆದ ಪುಸ್ತಕಗಳನ್ನು "ಅಣ್ಣ ಬರೆದ ಪುಸ್ತಕ" ಎಂದುಕೊಂಡು ಅತಿ ಅತಿ ವಿಶಾಲ ಕಾಮತ ಕುಟುಂಬದವರು ಓದುತ್ತಾರೋ ಇಲ್ಲವೋ ಎಂಬ ಭ್ರಮೆ ನನಗೆ! ಕಾಮತರು Via ಕೆನರಾ ಕಾಲೇಜು (ನಮ್ಮಂತೆ!) ಧಾರವಾಡಕ್ಕೆ ಬರುವತನಕ ಛಾಯಾಚಿತ್ರಕಾರರೆಂದು ತಮ್ಮ ಕುಟುಂಬದಲ್ಲಿ ಜ್ಞಾತರಾಗಿದ್ದರು. ಬಹುಶಃ ಓದು ಬರವಣಿಕೆಯಲ್ಲಿ ನಮ್ಮಂತೆ ಪರಿಶ್ರಮವಿರಲಿಲ್ಲ. ಅಭ್ಯಾಸದ ವಿಷಯಬಿಟ್ಟು ಬೇರೆಕಡೆ ಹಾಯುವ "ಮನವೆಂಬ ಮರ್ಕಟವನ್ನು" ಹತೋಟಿಯಲ್ಲಿಟ್ಟು ಏಕಾಗ್ರತೆಯಿಂದ ಅಭ್ಯಾಸ ಮಾಡುತ್ತಿದ್ದ ಆದರ್ಶ ವಿದ್ಯಾರ್ಥಿಯಾಗಿರಬೇಕೆಂದು ನನ್ನ ಊಹೆ.

೧೯೬೧ರ ಸುಮಾರಿಗೆ ಕರ್ನಾಟಕ ವಿಶ್ವವಿದ್ಯಾಲಯದ ಪರವಾಗಿ ಸ್ವಾತಂತ್ರ್ಯ ಹೋರಾಟದ ಇತಿಹಾಸ ಬರೆಯಲು ಜಿ. ಎಸ್. ಹಾಲಪ್ಪನವರ ನೇತೃತ್ವದಲ್ಲಿಯ ಸಂಶೋಧನೆಯ ಪಂಗಡವನ್ನು ಜ್ಯೋತ್ಸ್ನಾ ಸೇರಿಕೊಂಡಳು. ಒಂದೆರಡು ವರ್ಷದ ಕಾಲಾವಧಿ ಇರಬೇಕು. ಅಲ್ಲಿಯ ತನಕ ಎಂ.ಎ., ಡಿ.ಎಡ್ ಡಿಗ್ರಿಗಳು ಬಂದಿದ್ದವು. ಅದೇ ಸುಮಾರಿಗೆ ಅಮೆರಿಕೆಯ ಅಂಚೆಚೀಟಿ ಹಚ್ಚಿದ ಒಂದು ಲಕೋಟೆ ಧಾರವಾಡದಲ್ಲಿಯ ಶಾಸ್ತ್ರಿಚಾಳಿನಲ್ಲಿದ್ದ ನಮ್ಮ ಮನೆಗೆ ಜ್ಯೋತ್ಸ್ನಾಳ ಹೆಸರಿನಲ್ಲಿ ಬರೆದದ್ದು, ಮಸೇನಸಾಬಿ ಪೋಸ್ಟಮನ್ ಹಾಕಿ ಹೋದ. ಅಂದಿನಿಂದ ಪ್ರಾರಂಭವಾದ ಪತ್ರಗಳ ಸುರಿಮಳೆ ನಡೆದೇ ಇತ್ತು! ಈ ಪತ್ರಗಳ ಸುರಿಮಳೆಯೇ "ನಾನೂ ಅಮೇರಿಕೆಗೆ ಹೋಗಿದ್ದೆ"ಯ ನಾಂದಿಯಾಯಿತು.

ಕೃಷ್ಣಾನಂದರ ಕೈಬರೆಹವೆಂದರೆ ಅದರಲ್ಲಿದ್ದ ಪುಟ್ಟ ಬಿಳಿಕಾಗದದ ಮೇಲೆ ಇರುವೆಗಳ ಸಾಲುಗಳಿಗೆ ಕಪ್ಪುಶಾಯಿ ಹಚ್ಚಿಬಿಟ್ಟರೆ ಮೂಡಿಬರುವಂತಹ ಅಕ್ಷರಗಳ ಸಾಲುಗಳು! ಅವರ ಅಕ್ಷರ ಜ್ಯೋತ್ಸ್ನಾ ಮತ್ತು ಬ್ರಹ್ಮದೇವರೇ ಓದಬಲ್ಲರು! ಹೀಗಾಗಿ ಅವರ ಆಗಿನ ಪತ್ರ ಪ್ರಪಂಚದ ಸಾರ್ವಜನಿಕ ಓದುವಿಕೆ, ಸರ್ವಾನುಮತದಿಂದ ಓದಬಲ್ಲವರಿಗೇ ಬಿಟ್ಟುಕೊಡಲಾಯಿತು! ಇದರರ್ಥ ಇಷ್ಟೆ, Censorship ಮತ್ತು Reading ಒಬ್ಬರಿಗೇ ಬಿಟ್ಟುಕೊಟ್ಟಿದ್ದರಿಂದ ರಾತ್ರಿಯ ಊಟದ ಮೇಜಿನ ಸುತ್ತಲೂ ಕುಳಿತು ಜ್ಯೋತ್ಸ್ನಾಳ ಪತ್ರಪಠಣ ಪ್ರಾರಂಭವಾಯಿತು. ಕೇಳುವವರೆಲ್ಲ ನಾವುಗಳು. ಗಣೇಶರಾಯರ ಸಾರಥ್ಯದಲ್ಲಿ ಈ "ಪತ್ರಾವಲೋಕನ" ನಡೆದೇ ಇತ್ತು!

ಈ ಮಧ್ಯೆ ಜ್ಯೋತ್ಸ್ನಾ UPSC ಪರೀಕ್ಷೆಯಲ್ಲಿ ಉತ್ತೀರ್ಣಳಾಗಿ ೧೯೬೪ರಲ್ಲಿ Programme Executive ಎಂದು ಆಕಾಶವಾಣಿಗೆ ಸೇರಿಕೊಂಡಳು. ಮಾರನೇ ವರ್ಷವೇ ಕೃಷ್ಣಾನಂದರು ಕೀಟಶಾಸ್ತ್ರ ಪರಿಣಿತರಾಗಿ ಡಾಕ್ಟರೇಟ್ ಪದವಿ ಪಡೆದು ಇಡೀ ಅಮೇರಿಕಾ ಸುತ್ತಾಡಿ ೧೯೬೫ರಲ್ಲಿ ಭಾರತ-ಪಾಕಿಸ್ತಾನ ಯುದ್ಧದ ಮುಹೂರ್ತಕ್ಕೆ ಸರಿಯಾಗಿ ಸ್ವಲ್ಪ ಧಾಂಧಲೆಯಲ್ಲಿಯೇ ಭಾರತಕ್ಕೆ ಮರಳಿದ್ದರು. ನಾನಾಗ ಇದ್ದದ್ದು ಭೋಪಾಳದಲ್ಲಿ.

ಮನೋಹರ ಗ್ರಂಥಮಾಲೆ ಪ್ರಕಟಿಸಿದ "ಪ್ರೇಯಸಿಗೆ ಪತ್ರಗಳು" ಪುಸ್ತಕದಲ್ಲಿ ಕೃಷ್ಣಾನಂದರು ತಮ್ಮ ವಧುವಿಗೆ ಬರೆದ ಮೊದಲ ಪತ್ರ ೧೭-೧೨-೬೫ರಲ್ಲಿಯದು ಮತ್ತು ಕೊನೆಯದು. ಪ್ಲಾಸಿಯಿಂದ ೧೧-೧೧-೧೯೬೦ರಲ್ಲಿ ಬರೆದದ್ದು, ೨೨-೨-೧೯೬೬ರಲ್ಲಿ ಕೃಷ್ಣಾನಂದ ಲಕ್ಷ್ಮಣಕಾಮತ ಮತ್ತು ಜ್ಯೋತ್ಸ್ನಾ ಗಣೇಶ ಬುರ್ಡೆಯವರ ವಿವಾಹ ಕುಮಟೆಯಲ್ಲಿ ನಮ್ಮಜ್ಜ ಕಟ್ಟಿದ್ದ ದೊಡ್ಡ ಮನೆಯ ಮುಂದೆ ಮಂಟಪಹಾಕಿ ನಡೆದ ವಿವಾಹದ ಮುಂಚೆ ಬರೆದ ಪತ್ರ. ಅದೆ ಪ್ರಥಮ ಪತ್ರ ನಿಶ್ಚಿತಾಂಬೂಲವಾದ ಮೇಲೆಯೇ ಬರೆದದ್ದು ("ನಾನು ನಲ್ಲೆಯೆಂದು ಕರೆಯಲೇ, ಪ್ರೇಯಸಿಯೆಂದು ಕರೆಯಲೇ")

ವಿವಾಹದ ಮಾರನೇ ದಿನವೇ ಜ್ಯೋತ್ಸ್ನಾ-ಕೃಷ್ಣಾನಂದರು ತಮ್ಮ ಹನಿಮೂನಿಗೆ ಕಾಶ್ಮೀರಕ್ಕೆ ಹೊರಟುಹೋದರು. ಏತನ್ಮಧ್ಯೆ ದಿಲ್ಲಿ ಸರಕಾರದವರು ವಿದೇಶದಲ್ಲಿ ಪದವಿ ಪಡೆದವರನ್ನು Brain drain ನಿಲ್ಲಿಸಲು Scientific Pool Office ಎಂದು ಒಂದು ವಿಭಾಗವನ್ನು ಸ್ಥಾಪಿಸಿ ವಿದೇಶದಿಂದ ಭಾರತೀಯತ್ವವನ್ನು ಉಳಿಸಿಕೊಂಡು ಇಲ್ಲಿಯೇ ಇರಬೇಕೆಂಬ ಭಾವನೆಯಿಂದ ಕೃಷ್ಣಾನಂದರಂತಿದ್ದ ಸ್ವದೇಶಪ್ರೇಮಿ ವೈಜ್ಞಾನಿಕರನ್ನು ಆಕರ್ಷಿಸಲಾರಂಭಿಸಿದರು. ಕೃಷ್ಣಾನಂದರು Pool Officer ಎಂದು ಅದಷ್ಟೆ ರಾಜಸ್ಥಾನದಲ್ಲಿಯ ಜೋಬನೇರದಲ್ಲಿಯ ದೊಡ್ಡ ಕೃಷಿ ವಿದ್ಯಾಲಯದಲ್ಲಿ ಕೀಟಶಾಸ್ತ್ರಜ್ಞರೆಂದು ರುಜುವಾದರು. ಇಬ್ಬರು ತಮ್ಮ ಹನಿಮೂನ ಮುಗಿಸಿ ಜೋಬನೇರದಲ್ಲಿ ಬಿಡಾರ ಹೂಡಿದರು. ನೌಕರಿ ಬಿಡುವ ಇಚ್ಛೆ ಪ್ರಕಟಿಸಿದ ಜ್ಯೋತ್ಸ್ನಾಳನ್ನು ಅತ್ಯಂತ ಕುಶಲತೆ, ಚಾಣಾಕ್ಷತೆಯಿಂದ ಮತ್ತು ಸರ್ವತೋಪರಿ ದೂರದೃಷ್ಟಿತ್ವದಿಂದ ಕೃಷ್ಣಾನಂದರೇ ಅವಳ ಪರವಾಗಿ ಪತ್ರವ್ಯವಹಾರ ನಡೆಸಿ, ಕೊನೆಗೊಮ್ಮೆ ಸಂಬಳವಿಲ್ಲದ ರಜೆಯ ಮೇಲಿದ್ದವಳು ಸಂಬಳಪಡೆದು ಸಮೀಪದ ಜಯಪುರ ಆಕಾಶವಾಣಿಯಲ್ಲಿ ಕಾರ್ಯಕ್ರಮದ ನಿರ್ವಾಹಕಳೆಂದು ಮರಳಿ ಸೇರಿಸಿದರು. ಮುಂದೆ ಉನ್ನತ ಹುದ್ದೆ, ಬೆಂಗಳೂರು ಆಕಾಶವಾಣಿಯ ನಿರ್ದೇಶಕಿಯಾಗಿ ನಿವೃತ್ತರಾದ ಜ್ಯೋತ್ಸ್ನಾ ಕಾಮತರ ಸೇವೆ ಸಿಕ್ಕಿದ್ದು ಕೃಷ್ಣಾನಂದರ ಕೃಪೆಯಿಂದಲೇ!

ಜಯಪುರ-ಜೋಬನೇರ ಅಂತರ ೨೦-೨೨ ಮೈಲಿ ಆದರೂ ಆಗಿನ ರಸ್ತೆ-ವಾಹನ ಇತ್ಯಾದಿಗಳ ಅನಾನುಕೂಲತೆಯಿಂದ ಕೃಷ್ಣಾನಂದರೇ ಮುಂದಾಳುತನ ವಹಿಸಿ ಜಯಪುರದಲ್ಲಿ ಆಕಾಶವಾಣಿಯ ಪಕ್ಕದಲ್ಲೇ ಒಂದು ಮನೆ ಬಾಡಿಗೆಗೆ ಕೊಂಡರು. ಜ್ಯೋತ್ಸ್ನಾ ಮದುವೆಯಾದರೂ ತನ್ನ 'ಅಪೂರ್ಣ' ಸಂಸಾರ ಹೂಡಿದಳು. ಈ ಸಂಸಾರ ಪೂರ್ಣವಾದದ್ದು ಪತ್ರಗಳಿಂದಲೇ ಮತ್ತು ಶನಿವಾರ ರವಿವಾರದ ಅವರ ಜಯಪುರ-ಜೋಬನೇರ ವಾಸ್ತವ್ಯದಲ್ಲಿಯೇ. ಈ ಪತ್ರ ಸಂಸಾರಕ್ಕೆ ಪೂರ್ಣ ವಿರಾಮ ಸಿಕ್ಕಿದ್ದು ಬಹುಶಃ ೧೯೬೭ರಲ್ಲಿ

ಜ್ಯೋತ್ಸ್ನಾ ಬೆಂಗಳೂರು-ಆಕಾಶವಾಣಿಯ ನಿರ್ದೇಶಕಿಯೆಂದು ಬಂದಾಗಲೇ! ಮಧ್ಯದ ಕೆಲವು ಕಾಲ ಧಾರವಾಡ, ಮೈಸೂರಿನಲ್ಲಿದ್ದಾಗ ಅಲ್ಪವಿರಾಮ ಸಿಕ್ಕಿದ್ದಷ್ಟೆ. ಇದರರ್ಥ ೨೬ ವರ್ಷಗಳ ಕಾಲ ಸತತವಾಗಿ ಪ್ರತಿನಿತ್ಯ ಭಾನುವಾರ ಬಿಟ್ಟು ಅವರಿಬ್ಬರ ಸರಸ ಸಲ್ಲಾಪ ನಡೆದದ್ದು ಬುರ್ದೆಯವರ "ಟಪ್ಪಾಲು ಫರಾಸೆ" ಯಿಂದಲೇ! ಕನ್ನಡ ಸಾಹಿತ್ಯದಲ್ಲಿ ಅಜರಾಮರ ದಂಪತಿ "ಮುದ್ದಣ-ಮನೋರಮೆ" ಮುಳಿಯ ತಿಮ್ಮಪ್ಪಯ್ಯನವರ ಕಲ್ಪನಾ ವಿಲಾಸದ ಅಮರಕೃತಿ ಆದರೆ, ಜ್ಯೋತ್ಸ್ನಾ-ಕೃಷ್ಣಾನಂದ ಇವರ ಪತ್ರ ಸಂಸಾರ, ಸಾಹಿತ್ಯ ಸಹವಾಸ ಬಹುಶಃ ಕನ್ನಡ ಮತ್ತು ಮರಾಠಿ ಸಾಹಿತ್ಯದಲ್ಲಿಯೇ ಅಪರೂಪದ್ದು ಎಂದು ನಿಶ್ಯಂಕವಾಗಿ ಹೇಳಬಹುದು. ಕೃಷ್ಣಾನಂದರು ಬರೆದ ಮನೋಹರ ಗ್ರಂಥಮಾಲೆ ಪ್ರಕಟಿಸಿದ "ಪ್ರೇಯಸಿಗೆ ಪತ್ರಗಳು" ಪುಸ್ತಕದ ಮುನ್ನುಡಿಯಲ್ಲಿ ಜ್ಯೋತ್ಸ್ನಾ "ಹೇಳಿದ್ದು" -ಪತ್ರಸಾಹಿತ್ಯ ಉತ್ತಮ ಸಾಹಿತ್ಯವಾಗುವ ಯೋಗ್ಯತೆ ಇದ್ದರೂ ಉತ್ತಮ ಸಾಹಿತ್ಯವೆಂದು ಸಂರಕ್ಷಿಸಿಕೊಳ್ಳಲಾಗಲಿಲ್ಲವೆಂದು ಅನಕೃ ಅವರು ತಮ್ಮ ಆತ್ಮಕಥೆಯಲ್ಲಿ ಮರುಗಿದ್ದಾರೆ" ಎಷ್ಟು ನಿಜ ಎಂದು ಕಾಮತರ ಪತ್ರಗಳನ್ನು ಓದಿ ಪುನಃ ಪ್ರತ್ಯಯಕ್ಕೆ ಬರಬೇಕಾಗುತ್ತದೆ. ಅದೇ ಪುಸ್ತಕದಲ್ಲಿಯ ಒಂದು ಮಾತು. ".....ಅವಕಾಶ ಸಿಕ್ಕರೆ ಇನ್ನಿತರ ಪತ್ರಗಳನ್ನು ಸಂಪಾದಿಸಿ ಪ್ರಕಟಿಸುವ ವಿಚಾರವಿದೆ.... ಪತ್ರಸಾಹಿತ್ಯದ ಕೊರತೆ, ಪ್ರವಾಸ-ಸಾಹಿತ್ಯದ ಕೊರತೆ ಕನ್ನಡದಲ್ಲಿದೆ ಎಂದು ಸಾರ್ವಜನಿಕ ಭಾಷಣಗಳಲ್ಲಿ ಘೋಷಿಸಿದರೂ ಇಂತಹ ಪುಸ್ತಕಗಳು ಪ್ರಕಟವಾದಾಗ ಹಣಕೊಟ್ಟು ಓದುವವರ ಕೊರತೆ ಸಾಕಷ್ಟಿದೆ" ಎಂದು ಹಿನ್ನೆಲೆಯಾಗಿ ಕಾಮತರು ಮರುಗಿದರೂ ಜಾಗತಿಕ ಹಿನ್ನೆಲೆಯಲ್ಲಿ ವೀಕ್ಷಿಸಿದಾಗ ಈ ಪತ್ರಸಾಹಿತ್ಯ ಅಮೂಲ್ಯ ಸಂಪತ್ತು ಎಂದು ಗೊತ್ತಾಗುತ್ತದೆ. ೧೭ನೇ ಶತಮಾನದಿಂದ ೨೦ನೇ ಶತಮಾನದ ಹಿಂದೂಸ್ಥಾನದಲ್ಲಿಯ ಆಗು-ಹೋಗುಗಳ ಇತಿಹಾಸ-ಇಲ್ಲಿಯ ಅಂದಿನ ಊರು ಊರುಗಳ ವರ್ಣನೆ ಎಲ್ಲ ಸಿಕ್ಕಿದ್ದು ಇಂಗ್ಲಿಷು 'ಪ್ರೇಯಸಿ'ಯರು ತಮ್ಮ 'ಪ್ರಿಯತಮನಿ'ಗೋ ಗೆಳೆಯನಿಗೋ ಅಥವಾ ಗೆಳತಿಗೋ ಬರೆದ ಪತ್ರಗಳಿಂದಲೇ ಎಂಬ ಮಾತು ಮನದಟ್ಟಾಗುವದು ಈ ಪತ್ರಗಳ ಪುಸ್ತಕಗಳನ್ನು ಓದಿದಾಗಲೇ. ಇಷ್ಟೇಕೆ, ಸ್ವಲ್ಪ ವಿಷಯಾಂತರವಾದರೂ ಇಂತಹ ಪತ್ರ-ಸಾಹಿತ್ಯಕ್ಕೆ ಒಂದು ವಿಶಿಷ್ಟ ಸ್ಥಾನವಿದೆ – ಎಂದು ಎದೆತಟ್ಟಿ ಹೇಳುವ ಪ್ರಸಂಗ ಇತ್ತೀಚೆಗೆ ಒದಗಿತು. ಮತ್ತು ಈ ಪತ್ರಗಳ ಪಠಣ ಆಗಿಂದಾಗ ನಾನು ಮಾಡುತ್ತಿರುವುದನ್ನು ಹೇಳುವ ಅಗತ್ಯವಿದೆ. ನೆರೆಯ ಮಹಾರಾಷ್ಟ್ರದಲ್ಲಿ ನಾನು ಮುಂಬಯಿಯಲ್ಲಿದ್ದಾಗ ನನ್ನ ಶಸ್ತ್ರಕ್ರಿಯೆಯ ಉಪರಾಂತ ಓದಲು ಎರಡು ದಪ್ಪವಾದ ಪುಸ್ತಕಗಳನ್ನು ನನಗೆ ಮರಾಠಿ ಮಿತ್ರರೊಬ್ಬರು ಕೊಟ್ಟರು. ನೋಡಿದ ಹೆಸರು "ವಿಶ್ರಬ್ಧಶಾರದಾ" ಸಂಪಾದಕರು ಹ.ವಿ. ಮೋಟೆ. ಮೊದಲ ಸಂಪುಟ ಇತಿಹಾಸ, ಸಾಹಿತ್ಯ, ರಾಜಕಾರಣ, ಧರ್ಮಕಾರಣ, ಧರ್ಮಾಂತರದ ವಿಶ್ಲೇಷಣೆ, ಏನಿಲ್ಲ ಅದರಲ್ಲಿ? ಎರಡನೇ ಸಂಪುಟ ಮರಾಠಿ ರಂಗಭೂಮಿ ಮತ್ತು ಮಹಾರಾಷ್ಟ್ರದಲ್ಲಿಯ ಸಂಗೀತಕ್ಕೆ ಮೀಸಲಾದದ್ದು. ಮೊದಲನೇ ಭಾಗದ ಸಂಪಾದಕರು ಪು. ಲ. ದೇಶಪಾಂಡೆಯಾದರೆ ಎರಡನೇಯದಕ್ಕೆ ಶರಚ್ಚಂದ್ರ ಗೋಖಲೆ. ಶನಿವಾರವಾಡೆಯ ಹಸ್ತಾಂತರದ ಕ್ಷಣಗಳ ಪತ್ರಗಳು, ಪುಣೆ ಮುಂಬಯಿ ರೇಲ್ವೆ ಲಾಯಿನು ಹಾಕುವ ಪ್ರಕ್ರಿಯೆ, ವಿಕ್ಟೋರಿಯಾ ಟರ್ಮಿನಸ್ಸು ಕಟ್ಟುವಾಗ ಅಲ್ಲಿಯ ಜಾಗದ ಸಲುವಾಗಿ ಜಗನ್ನಾಥ ಸಂಕರ ಶೇಠರು ಮಾಡಿದ ಖಟಪಟೆ ಇತ್ಯಾದಿ ವಿವಿಧ ವಿಷಯಗಳ ಪತ್ರಗಳ ಸಮೂಹವನ್ನೇ ಓದುಗರಿಗಾಗಿ ತೆರೆದಿಟ್ಟಿದ್ದಾರೆ. ನಿರಕ್ಷರ ಕುಕ್ಷಿಗಳಾದ ಆದರೆ ಸಂಗಿತದಲ್ಲಿಯೇ ಧ್ರುವತಾರೆಯಂತೆ ಮಿನುಗುವ ಹಿಂದಿನ ಉಸ್ತಾದರ ಬಗ್ಗೆ ಅವರ ಶಿಷ್ಯ ಪ್ರಪಂಚ ಬರೆದ ಪತ್ರಗಳೂ "ವಂದೇಮಾತರಂ"ದ ಸಂಗೀತದ ಬಗ್ಗೆ ಕೊಟ್ಟ ಪತ್ರಗಳಲ್ಲಿ ಮೂಡಿದ ವಿಶ್ಲೇಷಣೆ ಇವೆಲ್ಲ ನೋಡಿದರೆ ಪತ್ರ ಪ್ರಪಂಚ ಅತ್ಯಂತ ಉನ್ನತ ಸ್ಥಾನದ್ದು ಎಂಬುದಕ್ಕೆ ಬೇರೆ ಮಾತಿಲ್ಲ. ಖಾಸಗೀ ವಿಚಾರಗಳಿಗೆ ತಿಲಾಂಜಲಿ ಕೊಟ್ಟು, ಓದುಗರ ಆಸಕ್ತಿ ಇದ್ದಲ್ಲಿ 'ಶಕ್ಯತೋಪರಿ' ಕತ್ತರೀ ಪ್ರಯೋಗ ನಡೆಸಿ ಓದುಗರ ಕುತೂಹಲವನ್ನು ಶಾಸ್ತ್ರೀಯ ಸಂಗೀತದ ಭಾಷೆಯಲ್ಲಿ ಹೇಳುವದಾದರೆ 'ತಾರಷಡ್ಜ' ಹಚ್ಚಿದ್ದನ್ನು ಕೇಳುವ ಅತ್ಯಂತ ತನ್ಮಯತೆಯ ಪ್ರಯೋಗವನ್ನು ಸಲೀಸಾಗಿ ಮಾಡಬಹುದು ಎಂದು ಅನಿಸುತ್ತದೆ. ಕಿಟ್ಟೆಲರಂತಹ ಮಹಾಮೇಧಾವಿಗಳ ಪತ್ರಸಂಚಯ ಎಷ್ಟಿರಬಹುದು? ಇಂಗ್ಲಿಷ್-ಕನ್ನಡ ಕೋಶಕಾರ ಝಿಗ್ಲರ್ ಅವರ ಪತ್ರಗಳು ಇಲ್ಲಿ ಮತ್ತು ಜರ್ಮನಿಯಲ್ಲಿ ಎಷ್ಟಿರಬಹುದು? ನಮಗೆ ಅತಿ ಹತ್ತಿರದ ತರಾಸು, ಅನಕೃ, ಮಾಸ್ತಿ, ಶಿವರಾಮ ಕಾರಂತ, ಪುಟ್ಟಪ್ಪ, ತೀನಂಶ್ರೀ, ಬಿಎಂಶ್ರೀ. ಇವರೆಲ್ಲರ ಪತ್ರಗಳು ಅವರಿಗೆ ಇತರರು ಬರೆದ ಪತ್ರಗಳನ್ನು ಸಂದರ್ಭೋಚಿತವಾಗಿ ಕೂಡಿಹಾಕಿದರೆ ಇದೊಂದು ಕನ್ನಡದಲ್ಲಿಯೇ ಅಮೂಲ್ಯ "ಶಾರದಾ" ಆಗುವ ಸಂಭವವಿದೆಯಲ್ಲ? ಆದರೆ ಇದಕ್ಕೆ ಹ.ವಿ. ಮೋಟೆಯವರಂತಹ "ಝುಕಾನೇವಾಲ ಚಾಹಿಯೇ" ಬೇಕಾದದ್ದೂ ಎಂಬುದೂ ಅಷ್ಟೇ ನಿಜ.

ನನಗೆ ಕೆಲವೇ ತಿಂಗಳುಗಳಲ್ಲಿ ಭೋಪಾಲದಿಂದ ಮುಂಬಯಿಗೆ ವರ್ಗವಾಯಿತು. ಕೆಲದಿನಗಳಲ್ಲಿ ಜೋಬನೇರಿಗೆ ಹೋದೆ-ಅರ್ಥಾತ್ ವಯಾ ಜಯಪೂರ. ಕೃಷ್ಣಾನಂದರ ಆತಿಥ್ಯ ಪೂರ್ಣತಃ ಅನುಭವಿಸಿದೆ. ಕಾಮತ ಹೆಸರಿಗೆ ಬಾಧೆ ಬರದಂತೆ ಚೆನ್ನಾಗಿ ಅಡುಗೆಮಾಡಿ ಬಡಿಸಿ ಕೊನೆಗೆ ರಾಜಸ್ಥಾನದ ಚಿಕ್ಕಪುಟ್ಟ ಊರುಗಳ ಸಂದರ್ಶನಗಳೊಂದಿಗೆ ಜಯಪೂರಿನಲ್ಲಿಯ ಅವರ ಆತಿಥ್ಯ ನಾನೆಂದೂ

ಮರೆಯಲಾರೆ. ಅವರಲ್ಲಿಯ ಛಾಯಚಿತ್ರಕಾರನ Candid Camera ಅತ್ಯಂತ ಪ್ರಭಾವಶಾಲಿಯಾಗಿತ್ತು. ಅವರ ಅಳತೆಯ ಫ್ರೇಮುಗಳನ್ನೂ, ಕೋನಗಳನ್ನು ಕೊಂಚ ದೂರದಿಂದಲೇ ನಾನೂ ನೋಡಿ ಅವರಂತೆ ಕೆಲವು ಚಿತ್ರಗಳನ್ನು ಕ್ಲಿಕ್ಕಿಸುವ ಪ್ರಯೋಗ ಜೋಬನೇರದಲ್ಲಿ ನಡೆಸಿದೆ. ಡೆವಲಪ್ಪಾಗಿ ಬಂದಾಗ ಕಾಮತರು ತೆಗೆದ ಫೋಟೋಗಳು Original ಗಿಂತ ಚೆನ್ನಾಗಿ ಕಾಣಿಸಿದರೆ ನಾನು ತೆಗೆದವುಗಳಲ್ಲಿ ಕೃತಿಗಳೇ ಮಾಯವಾಗಿದ್ದವು! ಇದೆಲ್ಲಾ Instant camera ಬರುವ ಮೊದಲಿನ ಮಾತುಗಳು. ಮಧ್ಯೆ ನಾನು ಧಾರವಾಡಕ್ಕೆ ರಜೆಯಲ್ಲಿ ಬಂದಾಗ ಕೃಷ್ಣಾನಂದರೊಡನೆ ಬಾದಾಮಿ, ಪಟ್ಟದಕಲ್ಲು ದೇವಾಲಯಗಳನ್ನು ಸುತ್ತಿಹಾಕಿ ಬರುವ ಪ್ಲಾನು ಮಾಡಿ ನಾವಿಬ್ಬರೂ ಧಾರವಾಡದಿಂದ ಬಸ್ಸು ಹಿಡಿದು ಹೋದದ್ದುಂಟು. ಎರಡು ದಿನಗಳ ವಾಸ್ತವ್ಯ, ಅವರ ಛಾಯಾ ಚಿತ್ರಣ ನಮಗೆಲ್ಲ ಬರಿಗಣ್ಣಿಗೆ ಕಾಣಿಸದಂತಹ ಕೆಲವು ವಾಸ್ತುಗಳ special effect ಕಾಮತರ ಸೂಕ್ಷ್ಮದರ್ಶಕ ಚಕ್ಷುಗಳಿಗೇ ಮೀಸಲಾಗಿದ್ದಂತೆ ತೋರುತ್ತಿದ್ದವು. ಪಟ್ಟದಕಲ್ಲಿನ ದೇವಾಲಯದ ಮಧ್ಯಭಾಗದಲ್ಲಿ ನಿಂತು ಮೇಲೆ ನೋಡಿದಾಗ ಅವರಿಗೆ ಎಂತಹ ಫ್ರೇಮು ಸಿಕ್ಕಿತೋ ಏನೋ, ಕೂಡಲೇ ಅಲ್ಲಿಯೇ ಸ್ವಲ್ಪ ಝಾಡಿಸಿ ಅಂಗಾತ ಮಲಗಿ ತಮ್ಮ ಜರ್ಮನ್ ಕ್ಯಾಮರಾ ಬೇರೆ ಬೇರೆ ಕೋನಗಳಿಂದ ಕ್ಲಿಕ್ಕಿಸುತ್ತಾ ಒಂದರ್ಧ ಘಂಟೆ ಕಳೆದರು! ವಿದೇಶಿಯ ಕಂಪನಿಯ ಪ್ರತಿನಿಧಿ ಎಂದು ಶರ್ಟ್ ಪ್ಯಾಂಟುಗಳ ಮಡಿಸಿದ್ದ ಇಸ್ತ್ರೀರೇಷೆ ಅತ್ತಿತ್ತ ಆಗಬಾರದೆಂದು ಕಾಳಜಿ ವಹಿಸುವ ನಾನೂ ಸಹ ಅವರಂತೆ ಮಲಗಿ ಮೇಲೆ ನೋಡಲಾರಂಭಿಸಿದೆ. ನನಗೇನು ಕಾಣುತ್ತದೆ ಮಣ್ಣು? ನಡೆದೂ ನಡೆದೂ ಸುತ್ತಿ ಸುತ್ತಿ ದಣಿದು ಬಳಲಿದವನಿಗೆ "ಒಂದೀಟು" ವಿಶ್ರಾಂತಿ ಸಿಕ್ಕಿತಷ್ಟೆ! ಅಂದಿನ ದಿನಗಳಲ್ಲಿ ಬಾದಾಮಿ ಬಿಟ್ಟು ಈ ಪಟ್ಟದಕಲ್ಲು ದೇವಾಲಯಗಳ ಕಾಂಪ್ಲೆಕ್ಸಿನಲ್ಲಿ ಒಂದೂ ಸಹ ಚಹದ ಅಂಗಡಿ ಇರಲಿಲ್ಲ! ನನ್ನಲ್ಲಿದ್ದ ಸಿಗರೇಟುಗಳು ಅದಾಗಲೇ ಬೂದಿಯಾಗಿಬಿಟ್ಟಿದ್ದವು. ಹೀಗೆ ಸುತ್ತಾಡಿ ೪-೫ ಮೈಲು ನಡೆದು (ದಣಿದಾಗ ೧ಕಿಮೀ. ಕೂಡ ೧ ಮೈಲಿನಂತೆ ಭಾಸವಾಗುತ್ತದೆ!) ಬಾದಾಮಿಗೆ ಹೋಗುವ ಒಂದು "ಲಾಲಾಡಬ್ಬಾ"ದಲ್ಲಿ ಕುಳಿತೆವು. ಸಂಜೆ ೭ರ ಸುಮಾರಿಗೆ ಬಾದಾಮಿ ತಲುಪಿದಾಗ ಹುಸ್ಸೆನಿಸಿತು. ಅಲ್ಲಿಯೇ ಒಂದು ಲಿಂಗಾಯತರ ಖಾನಾವಳಿಯಲ್ಲಿ ಭಕ್ರಿ, ಬದನೇಕಾಯಿ ಪಲ್ಯ, ಗಟ್ಟಿತೊಪ್ಪೆ ಮತ್ತು ಮೊಸರು ಹೊಡಿದದ್ದೆ ಹೊಡೆದದ್ದು! ಹೀಗೆ ಅಲ್ಲಿಯೇ ವಿಶ್ರಮಿಸಿ ಮರುದಿನ ಮುಂಜಾನೆ ಬಾದಾಮಿಯ ಅಳಿದುಹೋದ, ಈಗ ಹೆಸರಿಗಷ್ಟೆ ಇರುವ ಭಿತ್ತಿಚಿತ್ರಗಳನ್ನು ನೋಡಿದೆವು. ಕಣ್ಣುಗಳಿಗೆ ಕಾಣುವಂತಹ ಮತ್ತಿತ್ತರ ನಕ್ಷೆಗಳನ್ನು ಕೃಷ್ಣಾನಂದರು ಕ್ಲಿಕ್ಕಿಸುತ್ತಾ ಇದ್ದರು! ನನಗಂತೂ ಬಾದಾಮಿಯಲ್ಲಿ ಗೋಲ್ಡು ಫ್ಲೇಕ್ ಎಲ್ಲಿ ಸಿಗಬೇಕು? ಜಾನಿವಾಕರ ವ್ಹಿಸ್ಕಿ ಸಿಗದವನಿಗೆ ಕಂಟ್ರಿ ಅರಾಕ್ ಸಿಕ್ಕಂತೆ ನನ್ನ ತಲಬನ್ನು "ಪಿವಳಾಹಾಥಿ"ಯ ಮೇಲೇಯೇ ನಿಭಾಯಿಸಿದೆ. ನನ್ನಷ್ಟಕ್ಕೆ ನಾನು ಕೆಲ ಶಿಲಾಮೂರ್ತಿಗಳನ್ನೂ ಅಳಿದುಳಿದ ರಂಗಚಿತ್ರಗಳನ್ನೂ ದಿಟ್ಟಿಸಿ ನೋಡಿ ಕಾಲಕಳೆದೆ. ಧಾರವಾಡಕ್ಕೆ ಬಂದು ಡೆವಲಪ್ಪು ಮಾಡಿ ನೋಡಿದಾಗ ಆಹಾ, ಅವುಗಳು ಇಷ್ಟು ಮೋಹಕವಾಗಿದ್ದಾವೇಯೇ ಎಂದು ನನಗೆ ನಾನೇ ಅಚ್ಚರಿ ಪಡುವಂತಾಯಿತು!

ಕಾಮತರಿಗೆ, ಈ ಕೀಟಶಾಸ್ತ್ರದ ಪಂಡಿತರಿಗೆ ಈ ಗತವೈಭವದ ತುರಿ ಹೇಗುಂಟಾಯಿತು? ನನ್ನ ಮಟ್ಟಿಗೆ ಹೇಳುವದಾದರೆ ಇವಕ್ಕೆ ಮೂರು ಕಾರಣಗಳು ಇವೆ. ಮೊದಲನೆಯದಾಗಿ ಇತಿಹಾಸ ಸಂಸ್ಕೃತಿ ಕುರಿತ ಅದರಲ್ಲಿ ರುಚಿ ಇಟ್ಟುಕೊಂಡವಳನ್ನು ಹೆಂಡತಿಯೆಂದು ಪಡೆದದ್ದು. ಇಸಕ್ಕೆ ಪೂರಕವಾಗಿ ಅದೇ ದಿನಗಳಲ್ಲಿ ಜ್ಯೋತ್ಸ್ನಾ ತನಗೆ ಬಂದ ಪತ್ರಸಂಚಯವನ್ನು ತನ್ನ ನೀಟಾದ ನೇರವಾದ ಕೈಬರೆಹದಲ್ಲಿ ಪರಿಷ್ಕರಿಸಿದ ಆವೃತ್ತಿಯನ್ನು ಮನೋಹರ ಗ್ರಂಥಮಾಲೆಯ ಜಿ.ಬಿ. ಜೋಶಿಯವರನ್ನು ಸಂಪರ್ಕಿಸಿ ಕಾಮತರ ಮೊದಲ ಪುಸ್ತಕ ಹೊರಬರಲು ಸಹಾಯ ಮಾಡಿದ್ದು. ಜ್ಯೋತ್ಸ್ನಾಳ ತೆರೆಯಮರೆಯ ಸಹಾಯ ನಿಜಕ್ಕೂ ಅಮೂಲ್ಯವಾದದ್ದು. ಮುದ್ರಿತ ಅಕ್ಷರಗಳಲ್ಲಿ ಲೇಖಕನಿಗೆ ತನ್ನ ಹೆಸರನ್ನೇ ಓದುವದು ಒಂದು ರೀತಿಯ ಇಂಗ್ಲಿಷು 'ಹಾಯ್' ಎಂದು ಅನ್ನಿಸುವದು ಬರೆದು ಓದಿದವರಿಗೇ ಗೊತ್ತು! ಕಾಮತರು ಕೂಡ ಇದಕ್ಕೆ ಅಪವಾದವಲ್ಲ. ಎರಡನೆಯದಾಗಿ ಅವರು ಜೋಬನೇರದಲ್ಲಿದ್ದಾಗ ಮತ್ತು ಅನಂತರ ಪ್ಲಾಸಿ ಹಾಗೂ ಮಧ್ಯಪ್ರದೇಶದ ಮಡಿಲಲ್ಲಿ ತಿರುಗುತ್ತಿದ್ದಾಗ ಅವರಿಗೆ ಸಿಕ್ಕಿದ್ದ ನನ್ನ ತಂದೆಯವರ ಅದೃಶ್ಯ ಸಾನ್ನಿಧ್ಯ! ೧೯೬೭ ರಿಂದ ೧೯೭೫ರ ತನಕ ಪಿತಾ-ಪುತ್ರರ ಸಂಬಂಧಕ್ಕಿಂತ ಮಾವ-ಅಳಿಯನ ಸಂಬಂಧ ಒಂದು ತರಹದ ರೇಶಿಮೇ ನೂಲಿನಿಂದ ಕಟ್ಟಿಹಾಕಿದಂತೆ ಇತ್ತು! ಇದಕ್ಕೆ ಕಾರಣ ವಿಕಾಸನ ಜನ್ಮ ಮತ್ತು ಆತನ ಜಯಪೂರಿನಲ್ಲಿಯ ಬಾಲ್ಯಾವಸ್ಥೆಯ ಬೆಳವಣಿಗೆ. ಅಜ್ಜ ಹೇಳಿದ ಕತೆಗಳು ಅವೆಷ್ಟೋ! ಬರೆದು ಇಟ್ಟಿಲ್ಲವಾದ್ದರಿಂದ ಅರ್ಧಕ್ಕರ್ಧ "ವಿಕಾಸನ ಕತೆಗಳು" ಆಲಿಸುವ ಮೊಮ್ಮಗ ಮತ್ತು ರಚಿಸಿ ಹೇಳುವ ಅಜ್ಜ ಇಬ್ಬರ ನೆನಪಿನ ದೋಣಿ ಮುಳುಗಿದ್ದರಿಂದ ಹಲವಾರು ಕತೆಗಳು ನಾಮಶೇಷವಾದವು. ಮಿಕ್ಕದ್ದು ಆಮೇಲೆ ನೆನಪಿನಿಂದ ಬರೆದವುಗಳಲ್ಲಿ ಆ ಮೊದಲಿನ ಸುಸೂತ್ರತೆ ಇಲ್ಲವಾದರೂ ವಿಕಾಸನ ಬಾಲ್ಯಾವಸ್ಥೆಯ ಹಂತ, ಕತೆಗಳ ಮೂಲಕ ತಿಳಿದುಕೊಳ್ಳಬಹುದು. ಮೂರನೆಯದಾಗಿ ಕೃಷ್ಣಾನಂದರ ಸ್ವಯಂಭೂ ಸೃಜನಶೀಲತೆ ಹಾಗೂ ಗುಣಗ್ರಾಹಕತೆ. ಗಣೇಶರಾಯರಂತೆ ಖಾಯಂ ಪುಸ್ತಕಗಳ ಅಧೀನರಾಗದೆ ತಮಗೆ ಸಿಕ್ಕಿದ ವೇಳೆಯಲ್ಲಿ ಸ್ವಲ್ಪವೇ

ಓದಿ ಅದನ್ನೇ ಚಿಂತನ-ಮನನ ಮಾಡುವ ಅಭ್ಯಾಸವಿಟ್ಟುಕೊಂಡವರು. ಶಿವನಿಗೆ ಮೂರು ಕಣ್ಣಾದರೆ ಕಾಮತರಿಗೂ ಕೂಡ ಮೂರು ಕಣ್ಣು. ಮೂರನೇ ಕಣ್ಣೆಂದರೆ ಕ್ಯಾಮರಾ ಲೆನ್ಸ್! ಕರ್ನಾಟಕದ ಗತವೈಭವದ ಅಭ್ಯಾಸ ಜ್ಯೋತ್ಸ್ನಾ ತನ್ನ Ph.d. ಸಲುವಾಗಿ ನಡೆಸಿದಾಗ ಅವಳನ್ನು ಹುರಿದುಂಬಿಸಿ ನೆರವು ಇತ್ತವರು ಕೃಷ್ಣಾನಂದರೇ! ಹೀಗೆ ಕೀಟಶಾಸ್ತ್ರ ಪಂಡಿತನು ಕಾಪಿಕಲೆಯಂತಹ ವಸ್ತುವಿನ ಬಗ್ಗೆ ಬರೆಯುವ ಒಬ್ಬ ನಿಷ್ಣಾತ ಸಂಶೋಧಕ, ಇತಿಹಾಸದ ಪ್ರಜ್ಞೆಯುಳ್ಳ ಸೃಜನಶೀಲ ಬರೆಹಗಾರನಾದ!

ಕೇಂದ್ರ ಸರಕಾರದ "ಪೂಲ್ ಆಫೀಸರ" ಪ್ರಕ್ರಿಯೆ ವಿದೇಶದಿಂದ ಮರಳಿದ ಸ್ವದೇಶದಲ್ಲಿಯೇ ಉಳಿಯಲು ಹಾಕಿಕೊಟ್ಟ ಮೊದಲ ಮೆಟ್ಟಿಲು. ಇದು ಅತ್ಯಂತ ಸ್ತುತ್ಯವಾದದ್ದು. ಇದರಲ್ಲಿದ್ದವರು ಕಾಲಾಂತರದಲ್ಲಿ ತಮ್ಮ ಉಮೇದುವಾರಿಕೆಯನ್ನು ಮುಗಿಸಿ ತಾವು ಪ್ರಾವೀಣ್ಯಗಳಿಸಿದ ವಿಷಯದಲ್ಲಿ CSIR ಅಥವಾ CSAR (Council for Scientific Agricultural Research) ಅಥವಾ ಆಗಿನ ಹದಿನೆಂಟು ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಯ ಕೆಲಸವೋ ಹೊಸಪೀಳಿಗೆಯ ಶಾಸ್ತ್ರಜ್ಞರನ್ನು ದಾರಿತೋರಿಸುವರೆಂದೋ ಸೇರಿಕೊಳ್ಳುತ್ತಿದ್ದರು. ಪಂಚವಾರ್ಷಿಕ ಯೋಜನೆಯಲ್ಲಿ ಹೊಸ ಹೊಸ ಸ್ಥಿತ್ಯಂತರಗಳಲ್ಲಿ ಕೀಟಶಾಸ್ತ್ರಜ್ಞನೆಂದು ಕಾಮತರಿಗೆ ಎಲ್ಲಿಯೂ ಕೆಲಸ ಸಿಗಬಹುದಾಗಿತ್ತು. ಆದರೆ ಕೇಂದ್ರ ಸರಕಾರ Propose ಮಾಡಿದರೆ ರಾಜ್ಯಸರಕಾರದ Disposal ಬೇರೆಯೇ! ತಮ್ಮ ತಮ್ಮ ರಾಜಕಾರಣಿಗಳ ಅನುಕೂಲತೆಯಂತೆ Disposal ಮಾಡುವದು ಒಂದು ಸಂಪ್ರದಾಯವೇ ಆಗಿಬಿಟ್ಟಿದೆ! "ವಿಶ್ವವಿದ್ಯಾಲಯದಲ್ಲಿಯೇ ಒಂದು ನೌಕರಿಗಿಟ್ಟಿಸಿ ಅಲ್ಲಿಯೇ (ಜಯಪೂರ-ಜೋಬನೇರದಲ್ಲಿಯೇ) ನೆಲೆಸುವ" ವಿಚಾರವಿಟ್ಟುಕೊಂಡ ಕಾಮತರು ಮತ್ತೊಂದು ಪತ್ರದಲ್ಲಿ "…..ಕರ್ನಾಟಕ ರಾಜ್ಯದಲ್ಲಿಯೇ ಒಂದು ಹುದ್ದೆ ಖಾಲಿ ಇದೆ. ಅಲ್ಲಿ ಪ್ರಯತ್ನಿಸುತ್ತೇನೆ" ಎಂದು ಬರೆದಿದ್ದಾರೆ. ಅದೇ ಸುಮಾರಿಗೆ ಬೆಂಗಳೂರಿನ ಕೃಷಿ ಕಾಲೇಜಿನಲ್ಲಿ ಅರಣ್ಯ ವಿಭಾಗ ಪ್ರಾರಂಭಿಸಿತು. ಕಾಮತರು ಅದರಲ್ಲಿಯೇ ಕೀಟಶಾಸ್ತ್ರ ಮುಖ್ಯಸ್ಥರ ಹುದ್ದೆಗಾಗಿ ಅರ್ಜಿ ಸಲ್ಲಿಸಿದರು, ನಿರೀಕ್ಷಿಸಿದಂತೆ 'ಸಂದರ್ಶನ'ದ ಗಾಳಿ ಬೇರೆ ಕಡೆಯಲ್ಲಿಯೇ ಬೀಸುತ್ತಿತ್ತು. ಸಂದರ್ಶಕ ಮಂಡಳಿಯಲ್ಲಿ ಅರಣ್ಯಖಾತೆಯ ದೊಡ್ಡಹುದ್ದೆಯ ಅಧಿಕಾರಿಗಳಿದ್ದರು. ಆಡಳಿತವನ್ನಷ್ಟೇ ಅರಿತವರು. ನ್ಯೂಯಾರ್ಕ್‌ನಲ್ಲಿ ನಾಲ್ಕು ವರ್ಷ ಅರಣ್ಯಶಾಸ್ತ್ರ ಓದಿದವನಿಗೆ ಯಾವ ರೀತಿಯ ಪ್ರಶ್ನೆ ಕೇಳಬೇಕೆಂಬ ಪ್ರಜ್ಞೆ ಇರದವರು ಅದು ಹೇಗೆ ಕಾಮತರನ್ನು ಸೇರಿಸಾರು? ಅರಣ್ಯಶಾಸ್ತ್ರ, ಕೀಟಶಾಸ್ತ್ರ ಗೊತ್ತಿಲ್ಲದವ ಆದರೆ ಕಾಮತರಲ್ಲಿಯೇ ಧಾರವಾಡದಲ್ಲಿ ಕೆಲಕಾಲ ವಿದ್ಯಾರ್ಥಿ ಎಂದು ಸುರಿತವನನ್ನು ಆರಿಸಿದರು! ಇಂತಹ ಒಬ್ಬನನ್ನು ಆರಿಸಿದುದಕ್ಕೆ ಆಗ ಮುಂಬಯಿಯಲ್ಲಿದ್ದ ನನಗೆ ಎಲ್ಲಿಲ್ಲದ ಸಿಟ್ಟುಬಂದಿತ್ತು! ಭಾರತದಲ್ಲಿಯೇ ಉಳಿಯುವ ಆಸೆ ಇಟ್ಟುಕೊಂಡು ಸ್ವದೇಶಕ್ಕೆ ಮರಳಿದ ಶಾಸ್ತ್ರಜ್ಞರನ್ನು ಹೀಗೆ ಗಾಳಿಯಲ್ಲಿಯೇ ತೂರಿಬಿಟ್ಟವರು ಅನೇಕರು ಇರಬಹುದು. ಕರ್ನಾಟಕ ರಾಜ್ಯದ ಮಟ್ಟಿಗೆ ಹೇಳುವುದಾದರೆ ಆಗ ಕೀಟಶಾಸ್ತ್ರ-ಅರಣ್ಯಶಾಸ್ತ್ರದಲ್ಲಿ ಪರಿಣತರಾದ ಕಾಮತರನ್ನು ಬಿಟ್ಟುಕೊಟ್ಟದ್ದು ಎಂದೂ ತುಂಬಿಬರದ ಹಾನಿಯೆಂದು ನಾನು ತಿಳಿದುಕೊಂಡಿದ್ದೇನೆ. ಈಗ ಬೆಂಗಳೂರು ಗಣಕಶಾಸ್ತ್ರದಲ್ಲಿ ಅಂತರರಾಷ್ಟ್ರೀಯ ಹೆಸರು ಪಡೆದಂತೆ ಅರಣ್ಯ ಸಂಶೋಧನೆಯಲ್ಲಿಯೂ ಅಂತಹ ಉಚ್ಚಮಟ್ಟದ ಸ್ಥಾನ ಕೃಷ್ಣಾನಂದ ಕಾಮತರಂತಹ ನಿಸರ್ಗ ಪ್ರೇಮಿಗಳಿಂದ ಗಿಟ್ಟಿಸಬಹುದಾಗಿತ್ತು. ಆದರೆ ದೈವ ದುರ್ವಿಲಾಸ ಅಷ್ಟೆ. ಪ್ಲಾಸಿಯ ನಿಸರ್ಗ ನಿಯಂತ್ರಣ ಖಾತೆಯಲ್ಲಿ ಕೀಟಶಾಸ್ತ್ರಜ್ಞನೆಂದು ಕಾಮತರು ಕೊನೆಗೆ ಹೋದರು. ಒಂದೆರಡು ವರ್ಷ ಅಲ್ಲಿ ಇದ್ದಾಗಲೇ ಕೃಷ್ಣಾನಂದ ಕಾಮತರ ಹೆಸರು ಮನೆಮಾತಾಯಿತು. ಅವರ ಮೊದಲ ಕೃತಿಯೇ ಪಠ್ಯಪುಸ್ತಕವಾಗಿ ಕರ್ನಾಟಕದಲ್ಲಿ, ಮುಂಬಯಿಯಲ್ಲಿ ಪರಿಣಮಿಸಿತು! ಆದರೂ ಕನ್ನಡದಲ್ಲಿ ಬರೆದು ಉದರ ನಿರ್ವಹಣೆ ಮಾಡುವ ಲೇಖಕರಲ್ಲ, ಕಾಮತರು. ಹೀಗಾಗಿ ಉದರಂಭರಣದ ಇತರ ಉಪಾಯಗಳನ್ನು ಕುರಿತು ಯೋಚಿಸುತ್ತಾ ಕಾಮತರು ಮುಂಬಯಿಯಲ್ಲಿದ್ದ ನಮ್ಮಲ್ಲಿ ಬಂದು ತಲುಪಿದರು.

ನಾಗಪೂರದಲ್ಲಿ ಮೊದಲ ಕಮಿಷನ್ನರಾಗಿದ್ದ ಕೃಷ್ಣಾನಂದರ ಸೋದರ ಮಾವ ಮಧು ಮಾಮಾ (ಡಾ. ಎಂ. ಎಸ್. ದೇಸಾಯಿ IAS) ಮುಂಬಯಿಯ ಮಹಾನಗರಪಾಲಿಕೆಯ ಕಮೀಷನರಾಗಿ ಬಂದಕಾಲ. ನಾಗಪೂರದಲ್ಲಿದ್ದಾಗ ಕೃಷ್ಣಾನಂದರು ಮಧುಮಾಮಾನನ್ನೂ ಭೆಟ್ಟಿಯಾಗಿದ್ದುಂಟು. ಖಾಸಾ ಸೋದರಮಾವನಲ್ಲವೇ?, ಅವರಲ್ಲಿ ಕೆಲಕಾಲ ಉಳಿದುಕೊಂಡಿದ್ದೂ ಇದೆ. ಮೊದಲೇ ಭಿಡಸ್ತ ಸ್ವಭಾವದ ಕಾಮತರಿಗೆ ನಮ್ಮಲ್ಲಿಯ ವಾತಾವರಣ ಹೆಚ್ಚು ಸೇರುತ್ತಿತ್ತು ಎಂದು ಬೇರೆ ಹೇಳಬೇಕಾಗಿಲ್ಲ. "ಈಗ ಏನು ಮಾಡಬೇಕಂತೀಯಾ"? ಎಂದರು ದೇಸಾಯಿ ಸಾಹೇಬರು. "ನೋಡಬೇಕು, Scientific Photography ಮಾಡೋಣ ಎಂದುಕೊಂಡಿದ್ದೇನೆ" ಎಂದರು, ಕೃಷ್ಣಾನಂದ. ಅದರಲ್ಲೇನಿದೆ ಮಣ್ಣು? ನಿನ್ನದು ವ್ಯಾಪಾರಸ್ಥ ಕುಟುಂಬ, ವ್ಯಾಪಾರ ಮಾಡು. ಬೇಕಾದರೆ ನಿನಗೆ dealership ಕೊಡಿಸುತ್ತೇನೆ. Hindustan Petroleum Gas Dealership ಅಥವಾ Soft drink agency. ಇಲ್ಲಿಯೇ (ಮುಂಬಯಿಯಲ್ಲಿ) ಇರು. ಹಾಯಾಗಿ ನೋಟುಗಳ ಕಂತು ಎಣಿಸುತ್ತ ಕೂತುಬಿಡು" ಎಂದು ತಾವೇ ನಕ್ಕರು. ನಾವೆಲ್ಲ ಎಂದರೆ ನಾನು, ನನ್ನ ಸಣ್ಣ

ಉದ್ಯೋಗಸ್ಥ ಮಾವ ಮತ್ತು ಕೃಷ್ಣಾನಂದ, ಜರೂರಿ ಇಲ್ಲದಿದ್ದರೂ ದೇಸಾಯರ ಮಾತನ್ನು ಕೂಡಲೇ ಅನುಮೋದಿಸಿದೆವು. "ನನ್ನ ಬಳಿ ಗ್ರಾಂಟ್ ರೋಡ್ ಸ್ಟೇಶನದ ಹತ್ತಿರ ೨೮೦೦ square feet ಜಾಗವಿದೆ, ಏನಾದರೂ ಮಾಡಬಹುದು" ಅಂದರು. ನನ್ನ ಮಾವ, ಕೃಷ್ಣಾನಂದ ಏನೂ ಹೇಳಲಿಲ್ಲ.

ಅದು ಇನ್ನೂ ಅಂತುಲೆ ಮುಖ್ಯಮಂತ್ರಿಯಾಗಿ ಬರುವ ಮೊದಲಿನ ಕಾಲ. ಮುಂಬಯಿಯ ಸ್ಥಳ – ಕಾಲ ಇನ್ನೂ ತೇಜಿಗೆ ಬಂದಿರಲಿಲ್ಲ. ಜ್ಯೋತ್ಸ್ನಾ, ಕೃಷ್ಣಾನಂದ ಮುಂಬಯಿಯಲ್ಲಿ ಆ ದಿನಗಳಲ್ಲಿ ಹಾಯಾಗಿ ಇರಬಹುದಾಗಿತ್ತು. ಮುಂಬಯಿಯಲ್ಲೇ ಬದುಕಬಹುದಾಗಿತ್ತು. ಆದರೆ ಕೃಷ್ಣಾನಂದರ ಮನಸ್ಸು ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನೆಡೆ ಧಾವಿಸುತ್ತಿತ್ತು. ಇಂತಹ ಬಂಗಾರದ ಕ್ಷಣವನ್ನು ಬಿಟ್ಟುಕೊಟ್ಟು, ಬೆಂಗಳೂರಿಗೆ ಬಂದು ತಮ್ಮ Scientific Photo lab ಮಲ್ಲೇಶ್ವರದ ಮಿಲ್ ಕಾರ್ನರ್ ಬಳಿ ತೆರೆದರು.

ಕಾಮತರ ವಿದ್ವಾರ್ಹತೆಗೆ ಅನುಗುಣವಾದ ಕೆಲಸ ಸಿಗದಿದ್ದಕ್ಕೆ ನಾವೆಲ್ಲಾ ತುಂಬಾ ಬೇಸರಿಸಿಕೊಂಡೆವು. ಜ್ಯೋತ್ಸ್ನಾ ಕೂಡ ಇದಕ್ಕೆ ಅಪವಾದವಲ್ಲ. "ಧನಾರ್ಜನೆಯ ಸಲುವಾಗಿಯೇ ವಿದ್ಯಾಭ್ಯಾಸ ಎಂಬುದು ಎಲ್ಲರಿಗೂ ಗೊತ್ತಿದ್ದ ವಿಷಯ. ಆದರೆ ಆ ವಿದ್ಯಾರ್ಜನೆಯನ್ನ ಒಂದಿಲ್ಲ ಒಂದು ತರಹದಿಂದ ಸಮಾಜಕ್ಕೆ ಉಪಯುಕ್ತವಾಗಿ ಬಳೆಸಿಕೊಳ್ಳುವ ಚಾತುರ್ಯಬೇಕು. ಸುಖ-ಸಂಪತ್ತುಗಳಿಗಿಂತ ಆತ್ಮಗೌರವ ಹೆಚ್ಚು ನೆಮ್ಮದಿ ಕೊಡುತ್ತವೆ" ಎಂದು ಕಾಮತರೇ ತಮ್ಮ ಪತ್ನಿಗೆ ಒಂದು ಪತ್ರದಲ್ಲಿ ಉಪದೇಶಿಸುತ್ತಾರೆ. ವೈಜ್ಞಾನಿಕ ಛಾಯಾಗ್ರಹಣ ಕೇವಲ ಬೆಂಗಳೂರಿನಂತಹ ದೊಡ್ಡ ಊರುಗಳ ಸಲುವಾಗಿಯೇ ಎಂದು ಅರಿತ ಕಾಮತರು ಈ ಹೊಸ ವ್ಯವಸಾಯ ಪ್ರಾರಂಭಿಸಿದರು. ಟಾಟಾ ಇನ್‌ಸ್ಟಿಟ್ಯೂಟ್ ರಿಸರ್ಚ್ ವಿದ್ಯಾರ್ಥಿಗಳು ಅವರ ವೈಜ್ಞಾನಿಕ ಛಾಯಾಗ್ರಹಣಕ್ಕೆ ಮಾರುಹೋಗಿ ಅವರಿಂದ ನೂರಾರು Slides ಮಾಡಿಸಿಕೊಂಡಿದ್ದೂ ಇದೆ, ಚಿತ್ರಗಳನ್ನು, ಬೃಹದಾಕಾರದಲ್ಲಿ ಮಾಡಿಸಿಕೊಂಡಿದ್ದೂ ಇದೆ. ಇಷ್ಟೆ ಅಲ್ಲ, ಬೋರ್ಡು ಓದಿ ಕೆಲ ನವದಂಪತಿಗಳು ತಮ್ಮಲ್ಲಿ ಫೋಟೊ ಕ್ಲಿಕ್ಕಿಸಿಕೊಳ್ಳಲು ಬಂದವರ ಬಗ್ಗೆ ತಮ್ಮದೇ ವಿಶಿಷ್ಟ ರೀತಿಯಲ್ಲಿ ಇಂತಹ ಅನುಭವಗಳನ್ನು ಹೇಳಿ ನಗೆಚಟಾಕಿಗಳನ್ನು ಹಾರಿಸಿದ್ದೂ ಇದೆ! ಅವರ ಈ ಎರಡೂ ಕೆಲಸಗಳು ಅಂದರೆ ಕನ್ನಡದಲ್ಲಿಯ ಲೇಖನ ಮತ್ತು ಛಾಯಾಗ್ರಹಣ ಇವುಗಳಿಂದ ಆದಾಯವಾದದ್ದು ಅಷ್ಟಕ್ಕಷ್ಟೆ. ಮನೋಹರ ಗ್ರಂಥಮಾಲೆಯವರು ಇಡೀ ಕರ್ನಾಟಕ ಮಹಾರಾಷ್ಟ್ರದಲ್ಲಿ ಖ್ಯಾತ ಪ್ರಕಾಶಕರೆಂದು ಹೆಸರು ಪಡೆದರೂ ಅವರ ಮಾಲೆಯಲ್ಲಿ ಪೋಣಿಸಿದ ಪುಸ್ತಕ ಪುಷ್ಪಗಳಿಗೆ ಮಾನಧನ ಕೊಡುವ ಬಗ್ಗೆಯೂ ಅಷ್ಟೇಖ್ಯಾತಿ ಪಡೆದಿದ್ದಾರೆ! ನಿಮ್ಮ ಗಲ್ಲ ಭರ್ತಿಯಾಗದೇ ಇದ್ದರೂ ಚಿಂತೆಯಿಲ್ಲ, ಆದರೆ ಕೀರ್ತಿ ಮತ್ತು ಸ್ಫೂರ್ತಿ ಬೇಕಾದಲ್ಲಿ ಮನೋಹರ ಗ್ರಂಥಮಾಲೆಯ ಹೊರತು ಮತ್ತೊಂದು ಇಲ್ಲ ಎಂಬುದೂ ಅಷ್ಟೇ ನಿಜ. Simple living and high thinking ತತ್ವವನ್ನು ಮನೋಭಾವೇ ಅರಿತ ಕಾಮತರೂ ಈ ಕಡೆ ದುರ್ಲಕ್ಷ್ಯ ಮಾಡಿದರು. ೧೯೩೩ರಿಂದ ಮನೆಮನೆಯಲ್ಲಿ ಚಂದಾದಾರನ್ನಾಗಿ ಮಾಡಿದ ಜಿ.ಬಿ.ಜೋಷಿ ಮತ್ತು ಅಷ್ಟೇ ಕುಶಲತೆಯಿಂದ ಅವರ ಮಗ ರಮಾಕಾಂತ ಕಲ್ಲಿದ್ದಲಿನ ರಾಶಿಯಿಂದ ವಜ್ರ ಹುಡುಕುವ ಕಾರ್ಯ ಕನ್ನಡದಲ್ಲಿ ಈಗಲೂ ಅವಿರತವಾಗಿ ನಡೆಸಿದ್ದಾರೆ ಎಂಬುದೇ ಹೆಮ್ಮೆಯ ಮಾತು.

ಆದಾಯ ಕಡಿಮೆ ಇದ್ದರೂ ಕಾಮತರ ವ್ಯವಹಾರ ಕುಶಲತೆ, ಚಾಣಾಕ್ಷತೆ ಅಚ್ಚುಕಟ್ಟಾದದ್ದು. ಹಾಸಿಗೆ ನೋಡಿ ಕಾಲು ಚಾಚುವ ಅಭ್ಯಾಸ ಶಾಲೆಯ ದಿನಗಳಿಂದಲೇ ಇಟ್ಟುಕೊಂಡಿದ್ದ ಕಾಮತರು ಶ್ರೀಮತಿಯವರ ಮತ್ತು ತನ್ನ ಅರ್ಥಾರ್ಜನೆ ಅತ್ಯಂತ ಕುಶಲತೆಯಿಂದ ನೋಡಿಕೊಂಡರಷ್ಟೆ ಅಲ್ಲ, ಹೊತ್ತು ಬಂದಾಗ ಆಪ್ತೇಷ್ಟರಿಗೆ ಧನಸಹಾಯ ಮಾಡಲು ಹಿಂಜರಿಯಲಿಲ್ಲ. ಶ್ರೀಮಂತ ಕುಟುಂಬದಲ್ಲಿ ಮೊದಲನೇ ಮಗನಾಗಿ ಜನ್ಮಿಸಿದರೂ ವ್ಯಾಪಾರ-ಧನಕಾಸು ಒಟ್ಟು ಹಾಕುವ ಮಾರ್ಗದಿಂದ ದೂರವೇ ಉಳಿದರು.

ಕಾಮತರ ಸಂಸಾರ ಒಂದು ತೆರೆದಿಟ್ಟ ಪುಸ್ತಕದಂತೆ. ಅದಕ್ಕೆ ತಿಳಿಹಾಸ್ಯದ ನಿಜಘಟನೆಗಳ ಒಗ್ಗರಣೆ ಕೊಟ್ಟಿದ್ದು ಜ್ಯೋತ್ಸ್ನಾ. ಸಮಗ್ರ ಕಾಮತ ಸಾಹಿತ್ಯ ಓದಿದರೆ ಸ್ತ್ರೀ-ಪುರುಷ ಸಮಾನತೆಯ ಒಂದು ಹೊಸ ಪರ್ವವನ್ನೇ ಕಾಮತ ದಂಪತಿಗಳು ಅಂದು ಪ್ರಾರಂಭಿಸಿದ್ದರು ಎಂಬ ಮಾತು ಸಂಪೂರ್ಣವಾಗಿ ಅರ್ಥವಾಗುತ್ತದೆ. ಕಾಸಿಲ್ಲದೇ ಲೇಖಕನ ಲೇಖನಿ ಓಡಬೇಕಲ್ಲವೇ? ಇದರ ಉತ್ತರ "ಪ್ರೇಯಸಿಗೆ ಪತ್ರಗಳು" ಪುಸ್ತಕದಲ್ಲಿಯ ೧೧-೧೧-೧೯೭೦ರಂದು ಪ್ಲಾಸ್ಸಿಯಿಂದ ಬರೆದ ಕಾಗದ ಓದಿದರೆ ಗೊತ್ತಾಗುತ್ತದೆ.

ಕಾಮತರು ಜೀವಂತವಾಗಿರುವತನಕ, ಈಗಲೂ ಜ್ಯೋತ್ಸ್ನಾ, ಕಾಮತರ ಬಗ್ಗೆ ಅವರ ಪುಸ್ತಕಗಳ ಬಗ್ಗೆ, ಅವರ "ಬಹುರಂಗೀ, ಬಹುಢಂಗೀ" ವ್ಯಕ್ತಿತ್ವದ ಬಗ್ಗೆ ಮಾತಾಡುತ್ತಲೇ ಇರುತ್ತಾಳೆ. ಆದರೆ ನನ್ನೊಂದಿಗೆ ಈ ತನಕ, ಅಂದರೆ ೨೦೦೨ರ ಫೆಬ್ರವರಿ ೨೦ರ ತನಕ ಜ್ಯೋತ್ಸ್ನಾ ಕಾಮತಳ ಲೇಖನ, ಸಂಶೋಧನೆ, ಅವಳು ಆಕಾಶವಾಣಿಯಲ್ಲಿ ಪಡೆದ ಉನ್ನತ ಹುದ್ದೆ, ಅವಳು ಮೈಸೂರು

ಆಕಾಶವಾಣಿಯಲ್ಲಿ ಅಥವಾ ಕಲಕತ್ತಾದಲ್ಲಿ ಭೆಟ್ಟಿಮಾಡಿದ, ಮಾಡಿಸಿದ ಲೇಖಕರ ಪರಿಚಯ ಅವರೊಂದಿಗೆ ಮಾಡಿದ ಛಾಯಾಗ್ರಹಣ ಅವಳ ಯೋಗದಾನ ಇವುಗಳ ಬಗ್ಗೆ ಒಂದು ಸಾರಿಯಾದರೂ ನನ್ನಲ್ಲಿ ಕೌತುಕ ಮಿಶ್ರಿತ ಆದರ ಭಾವದಿಂದ ಹೊಗಳುವದನ್ನು ಬಿಡಿ, ಅವುಗಳ ಬಗ್ಗೆ ಕಾಮತರು ಪಿಟ್ಟೆಂದು ಮಾತಾಡಿದ್ದೂ ಇಲ್ಲ. ಈ ಮುದ್ದಣ ತನ್ನ ಮನೋರಮೆಯ ಬಗ್ಗೆ ಮುದ್ದು ಮುದ್ದಾದ ಭಾವನೆಗಳನ್ನು ಲೇಖನಗಳಲ್ಲಿ ಅಷ್ಟೇ ಸೀಮಿತವಾಗಿಟ್ಟಿದ್ದು ಯಾಕೆ ಎಂದು ಈ ಪ್ರಶ್ನೆ ಕಳೆದ ೪೦ ವರ್ಷಗಳಿಂದ ನನ್ನ ಪೀಡಿಸುತ್ತಲೇ ಇದೆ. ಕಾಮತರು ಇದ್ದಾಗ ಕೇಳಲಿಲ್ಲ. ಕೇಳುವ ಧೈರ್ಯವೂ ಇರಲಿಲ್ಲ ಅನ್ನಿ. ೧೯೮೦ರ ನಂತರದ ಕಾಮತರ ವ್ಯಕ್ತಿತ್ವದಲ್ಲಿ ನಾನು ಮಹತ್ವದ ಬದಲಾವಣೆಗಳನ್ನು ನೋಡಿದ್ದೇನೆ. ಜ್ಯೋತ್ಸ್ನಾ-ಕೃಷ್ಣಾನಂದರ ಸಂಸಾರ, ವಿಕಾಸನ ಅಮೇರಿಕೆಯ ಪ್ರಯಾಣ ಅವನ ಮತ್ತು ಪಿರಿಯೊಂಗಳ ಮದುವೆ ಇವೆಲ್ಲ ಇಬ್ಬರ ಪುಸ್ತಕಗಳಲ್ಲಿ ಸಾಕಷ್ಟು ಓದಲು ಸಿಗುತ್ತದೆ. ಹೀಗಾಗಿ ಅವರದು "ತೆರೆದಿಟ್ಟ ಪುಸ್ತಕ"ದ ಸಂಸಾರವೆಂದು ಮೊದಲೇ ಹೇಳಿದ್ದೇನೆ. ಆದರೆ ಎಲ್ಲಿಯೂ ಈ ಪ್ರಶ್ನೆಗೆ ಉತ್ತರ ಸಿಗುವುದಿಲ್ಲ.!

ಕಾಮತರ ಕೊನೆಯ ಪುಸ್ತಕ "ಮರುಪಯಣ" ಅವರ ಕೊನೆಯ ಪ್ರವಾಸದ ಭರತವಾಕ್ಯವಾಗಿತ್ತೇ? ಅವರ ಶೋಕ ಸಭೆಯಲ್ಲಿ ಸಂದರ್ಭೋಚಿತವಾಗಿ ಕೆಲವರು ಈ ಬಗ್ಗೆ ಮಾತನಾಡಿದರು. ನಾನಂತೂ ಹಾಗೆ ಕಾಣೆ. ಅತ್ಯಂತ ಚಟುವಟಿಕೆ, ಹುಮ್ಮಸ್ಸು ತುಂಬಿ ತುಳುಕುತ್ತಿದ್ದ ವ್ಯಕ್ತಿತ್ವ ಪಡೆದ ಮತ್ತು ಪ್ರತಿಯೊಂದು ಕೆಲಸವನ್ನೂ ಅತಿಸೂಕ್ಷ್ಮವಾಗಿ ನೆರವೇರಿಸುವ ಛಲವಿಟ್ಟುಕೊಂಡ ಕಾಮತರನ್ನು ನಾನು ಹಣ್ಣು-ಹಣ್ಣು ಮುದುಕನಂತೆ ಎಂದೂ ಕಲ್ಪಿಸಲಾರೆ. ಇಷ್ಟೆ, ನಾಲ್ಕಾರು ವರ್ಷ ಇನ್ನೂ ಬಾಳಬಹುದಾಗಿತ್ತು. ಈ ಇಹಲೋಕ ಬಿಡಲು ಎಪ್ಪತ್ತರ ಗಡಿಯೇ ಸರಿ ಎಂದು ಅನಿಸುತ್ತದೆ.

❑



# ನನ್ನ ಭಾವ

**ಸುಷಮಾ ಆರೂರ್**

ನಮ್ಮ ತಂದೆಯವರಿಗೆ ಅಂಚೆ ಖಾತೆಯಲ್ಲಿ ನೌಕರಿ ಇರುವದರಿಂದ ವರ್ಗಾವರ್ಗಿಯ ತಾಪತ್ರಯ ಜಾಸ್ತಿ ಇತ್ತು. ಹೀಗಾಗಿ ಶಿಕ್ಷಣಕ್ಕೋಸ್ಕರ ಧಾರವಾಡದಲ್ಲಿ ಜ್ಯೋತ್ಸ್ನಾ ಅಕ್ಕ ಹಾಗೂ ನಾನು ಬಿಡಾರ ಹೂಡಿದ್ದೆವು. ಬಾಬಾ (ನಮ್ಮ ತಂದೆ) ಆಗ ಅಮ್ಮನ ಕೂಡ ರಾಯಚೂರಿನಲ್ಲಿದ್ದರು. ನಾನಾಗ ಹತ್ತು ವರ್ಷದವಳಿರಬೇಕು. ಆಗಿನ ಅಲ್ಪಸ್ವಲ್ಪ ನೆನಪುಗಳನ್ನು ಇಲ್ಲಿ ನೆನಸಿಕೊಂಡಿದ್ದೇನೆ. ನಮ್ಮಲ್ಲಿ ವಯಸ್ಸಿನ ಅಂತರ ಹೆಚ್ಚಿಗೆ ಇದ್ದದ್ದರಿಂದ ಮೊದಲಿಂದಲು ಅಕ್ಕನನ್ನು ಕಂಡರೆ ಸ್ವಲ್ಪ ಭಯ. ಅವಳೋ ಬಹು ಧಡಪಡಿ, ಒಂದೇ ಸಮಯದಲ್ಲಿ ನಾಲ್ಕಾರು ಕೆಲಸಗಳನ್ನು ಯಶಸ್ವಿಯಾಗಿ ಮಾಡಿದ್ದಾಳೆ. ಜೆಬಿಟಿಸಿ ಟ್ರೈನಿಂಗ್ ಮಾಡಿ ಶಾಲೆಯಲ್ಲಿ ಕಲಿಸುತ್ತಿದ್ದಳು. ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಮಾಡಿದ್ದಳು. ಅದೇ ಸಮಯದಲ್ಲಿ ತನ್ನ ಹವ್ಯಾಸಗಳಲ್ಲಿ ಒಂದಾದ ನಾಟಕಗಳನ್ನು ಆಡ್ತಾ ಇದ್ದಳು. ಒಟ್ಟಿನಲ್ಲಿ ಯಾವಾಗಲೂ ಚಟುವಟಿಕೆಗಳಲ್ಲಿ ತೊಡಗಿದ್ದನ್ನು ನೋಡಿದ್ದೇನೆ. ಶ್ರೀ ಹಾಗೂ ಶ್ರೀಮತಿ ಹಾವನೂರು ಮತ್ತು ಶ್ರೀ ರಾಜಪುರೋಹಿತ ಇವರೆಲ್ಲ ಕೂಡಿ ಕರ್ನಾಟಕ ಕಲೋದ್ಧಾರಕ ಸಂಘದ ಪರವಾಗಿ ನಾಟಕಗಳನ್ನು ಆಡಿದ್ದು ನೆನಪಿದೆ. ಆಮೇಲೆ ನಾನು ಕೂಡ ಕಾಲೇಜು ಮುಗಿಸಿದ ಮೇಲೆ ಇದೇ ಸಂಘದ ಪರವಾಗಿ ಎರಡು ನಾಟಕಗಳನ್ನು ಆಡಿದ್ದೇನೆ. ಅದೇ ಸುಮಾರಿಗೆ ಅಕ್ಕ ಯುಪಿಎಸ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣಳಾಗಿ ಆಕಾಶವಾಣಿಗೆ ಸೇರಿಕೊಂಡಳು. ೧೯೬೩ರ ಸುಮಾರಿಗೆ ಎಂ.ಎ. ಮುಗಿಸಿ ಭಾರತ ಸರಕಾರದ ನೌಕರಿಯನ್ನು ತನ್ನ ಬುದ್ಧಿಮತ್ತೆಯಿಂದ ಗಿಟ್ಟಿಸಿದಳು.

ಆಗಿನ ಅಕ್ಕನೇ ಬೇರೆ, ಬಾಲ್ಯದ ನೆನಪುಗಳಲ್ಲಿ ಪ್ರತಿ ಭಾನುವಾರ ನಾವು ಧಾರವಾಡ ರೆಸ್ಟೊರೆಂಟ್‌ಗೆ ಬೆಳಗ್ಗಿನ ಉಪಹಾರಕ್ಕೆ ಹೋದದ್ದು ಈಗಲೂ ನೆನಪಿಗೆ ಬರುತ್ತದೆ. ಬರ್ತಾ ಪೇಟೆಗೆ ಹೋಗಿ ಸಾಮಾನು ಖರೀದಿ ಮಾಡ್ತಿದ್ವು. ಮನೆಯಲ್ಲಿ ಹೊರಗಿನ ಕೆಲಸಕ್ಕೆ ಹಾಗೂ ಅಡಿಗೆಗೆ ಬೇರೆ ಬೇರೆ ಕೆಲಸದವರಿದ್ದರು. ಆದರೆ ಮದುವೆ ಆದ ಮೇಲೆ ಅವಳಲ್ಲಿ ಎಷ್ಟು ಬದಲಾವಣೆ ಆಯ್ತು! ನಾವಿಬ್ರೆ ಇದ್ದುದರಿಂದ ನನಗೆ ಅವಳೇ ಜಗತ್ತಾಗಿದ್ದಳು. ಅವಳಿಗೂ ಮದುವೆ ಆಗತ್ತೆ ಅನ್ನೊ ವಿಚಾರ ಆಗ ನನ್ನ ಮನಸ್ಸಿಗೆ ಹೊಳಿಲೇ ಇಲ್ಲ.

ಅಕ್ಕನಿಗೆ ಅಮೆರಿಕೆಯಿಂದ ಪತ್ರಗಳು ಬರ್ತಾ ಇದ್ದದ್ದು ನೆನಪಿದೆ. ಓ ಅಕ್ಕನಿಗೆ ಅಮೇರಿಕೆಯ ವರ! ಎಂದು ಜ್ಞಾನೋದಯ ಆಯಿತು. ಮನೆಯಲ್ಲಿ ಮದುವೆ ಸಂಭ್ರಮ ಶುರುಆಯ್ತು. ಅಕ್ಕ ನನ್ನನ್ನು ಬದಿಗೆ ಕರೆದು ತಾನು ಮದುವೆ ಆಗೊ ವಿಚಾರ ಹೇಳಿದಳು. ನನ್ನ ಹುಚ್ಚು ಬುದ್ಧಿಗೆ ಅವಳು ನನ್ನಿಂದ ದೂರ ಹೋಗುವ ಯೋಚನೆಯಿಂದ ಮನಸ್ಸು ಪರಿತಪಿಸಿತು. ಅತ್ತು ಕರೆದು, ರಂಪ ಮಾಡಿದ್ದಾಯಿತು. ಈಗ ನೆನೆಸಿಕೊಂಡರೆ ನಗು ಬರುತ್ತದೆ. ಮದುವೆ ಕುಮಟೆಯ ನಮ್ಮ ತಾತನ ಮನೆಯಲ್ಲಿ ಆಯ್ತು. ವರ ಪಕ್ಷದ ಊರಿನ ಹೊನ್ನಾವರದವರಾದ್ದರಿಂದ ಊರಿನ ಪದ್ಧತಿಯ ಪ್ರಕಾರ ೩ ದಿನಗಳ ತನಕ ಸಾಂಗ್ಯವಾಗಿ ನಡೆಯಿತು. ಇದಿನ್ನೂ ನನ್ನ ಮನಸ್ಸಲ್ಲಿ ಚೆನ್ನಾಗಿ ನಿಂತಿದೆ. ಭಾವ ವಿದೇಶಿ ಸ್ನಾತಕೋತ್ತರರಾದರೂ ಬಹಳ ಸಾದಾ ಮನುಷ್ಯನೆಂಬ ಅರಿವಾಯ್ತು. ಇವರು ಬಂದಿದ್ದು ದೊಡ್ಡ ಕುಟುಂಬದಿಂದ, ಇವರ ಕೆಳಗೆ ಏಳೆಂಟು ತಮ್ಮ ತಂಗಿಯರು ಇದ್ದದ್ದರಿಂದ ತಮಾಶೆ ನಗೆಚಟಾಕೆಗಳು ಇವರಲ್ಲಿ ಸ್ವಾಭಾವಿಕವಾಗಿತ್ತು. ನಾನಾಗ ಹದಿಮೂರು ವರ್ಷದವಳು. ಹೀಗಾಗಿ ಅವರ ಈ ಸ್ವಭಾವಕ್ಕೆ ನಾನು ಮಾರು ಹೋದದ್ದರಲ್ಲಿ ಏನು ಆಶ್ಚರ್ಯವಿಲ್ಲ, ಮದುವೆಯ ನಂತರ ಭಾವ ಅಕ್ಕ ದೂರದ ರಾಜಸ್ಥಾನದ ಮರಳಿನಲ್ಲಿ ಜೊಬನೇರ ಹಾಗೂ ಜಯಪೂರಿನಲ್ಲಿ ತಮ್ಮ ಸಂಸಾರ ಪ್ರಾರಂಭಿಸಿದರು. ಧಾರವಾಡದ ದಿನಗಳಿಂದ ಶುರುವಾದ ಪತ್ರವ್ಯವಹಾರ ಈ ಮೇಲೆ ಹೇಳಿದ ಊರುಗಳ ಮಧ್ಯ ಅವಿರತವಾಗಿ ನಡೆದು ಮುಂದೆ 'ಪ್ರೇಯಸಿಗೆ ಪತ್ರಗಳಿಗೆ ನಾಂದಿಯಾಯಿತು. ಧಾರವಾಡದಲ್ಲಿದ್ದ ನನಗೂ ಸಾಕಷ್ಟು ಪತ್ರಗಳನ್ನು ಬರೆದಿದ್ದಾರೆ. ಕಾಶ್ಮೀರಕ್ಕೆ ಹೋದ, ಹಾಗೂ ಜಯಪೂರಿನಲ್ಲಿ ತೆಗೆದ ಛಾಯಾಚಿತ್ರಗಳನ್ನು ನನಗೆ ಕಳಿಸುತ್ತಿದ್ದರು. ವಿಕಾಸನು ಹುಟ್ಟಿದ ಮೇಲೆ ಛಾಯಾಗ್ರಾಹಕನ ಹುರುಪು ಹುಮ್ಮಸ್ಸಿಗೆ ಎಣೆಯಿಲ್ಲದಾಗೆ ಆಯ್ತು.

೧೯೬೭ರಲ್ಲಿ ನನ್ನ ಹದಿಮೂರನೇ ವರ್ಷದಲ್ಲಿ ಮೆಟ್ರಿಕ್ ಪರೀಕ್ಷೆ ಮುಗಿಸಿ ತಂದೆಯವರ ಜೊತೆ ಮುಂಬೈಗೆ ಹೋದೆ, ಅಲ್ಲಿಂದ ಜಯಪೂರಿಗೆ ಪ್ರವಾಸ ಕೈಗೊಂಡೆವು. ಅದು ನನ್ನ ಮೊದಲ ದೊಡ್ಡ ಪ್ರವಾಸ. ಜಯಪೂರಿಗೆ ಸೇರಿದ ಮೇಲೆ ಅಕ್ಕನಿಗೆ ಹುಶಾರಿಲ್ಲದ್ದು ಗೊತ್ತಾಗಿದ್ದು. ಅವಳಿಗೆ ಸೀರಿಯಸ್ ಗಾಯ್ನಿಕ್ ಸಮಸ್ಯೆ ಬಂದಿತ್ತು. ಆಗ ವಿಕಾಸ ಕೇವಲ ಒಂದು ವರ್ಷದವನು, ಮಾರನೇ ದಿನ ಅಕ್ಕನಿಗೆ

ಆಸ್ಪತ್ರೆಗೆ ಸೇರಿಸಲಾಯ್ತು. ಮನೆಯಲ್ಲಿ ಊರಿಂದ ತಂದ ಒಂದು ಹುಡುಗಿ ವಿಕಾಸನನ್ನು ನೋಡಿಕೊಳ್ಳಲು ಇದ್ದಳು. ಭಾವ ಬಂದವನನ್ನು ನೋಡಿಕೊಂಡು, ಮನೆಯನ್ನು ಸಂಭಾಳಿಸಿ ಆಸ್ಪತ್ರೆಯಲ್ಲಿರುವ ಹೆಂಡತಿಯ ಜವಾಬ್ದಾರಿಯನ್ನು ಸಲೀಸಾಗಿ ನಿರ್ವಹಿಸಿದರು. ಅಕ್ಕನ ಸ್ಥಿತಿ ನಾಜೂಕಾಗಿತ್ತು. ಅವಳನ್ನು ನೋಡಲು ಹೋದಾಗ ಡಾಕ್ಟರರ ತಂಡ ಸುತ್ತಲೂ ನಿಂತು ಗಂಭೀರ ಆಲೋಚನೆಯಲ್ಲಿತ್ತು. ಅವಳ ದೇಹದ ಪ್ರತಿಯೊಂದು ಭಾಗವೂ ವಾಯರ್‌ಗಳಿಂದ ಕಟ್ಟಿಹಾಕಿದ ಹಾಗೆ ಆಗ ನನಗೆ ಭಾಸವಾಯಿತು. ರಕ್ತದ ಬೋಟಲ್ಲುಗಳು ಒಂದುಕಡೆ, ಗ್ಲೂಕೋಸ್ ಇನ್ನೊಂದು ಕಡೆಗೆ, ಹಾಗೂ ಆಕ್ಸಿಜನ್ ಮಗದೊಂದು ಕಡೆಯಿಂದ ಕೊಡ್ತಾ ಇದ್ದದ್ದನ್ನು ನೋಡಿ ಎದೆ ಧಸ್ಸೆಂದಿತು. ಜಯಪೂರಿನಲ್ಲಿ ಆಗ ಸರಕಾರಿ ಆಸ್ಪತ್ರೆಗಳೇ ಚೆನ್ನಾಗಿದ್ದವು, ಖಾಸಗಿ ಆಸ್ಪತ್ರೆಗಳು ಇರಲೇ ಇಲ್ಲ. ನಿಷ್ಣಾತ ಡಾಕ್ಟರುಗಳು ಮತ್ತು ಕೇರಳದ ನರ್ಸ್‌ಗಳ ಕೃಪೆಯಿಂದ ಅಕ್ಕ ಸಾವಿನ ದವಡೆಯಿಂದ ಪಾರಾಗಿ ಬಂದಳು. ಮುಂದೆ ಭಾವನ ಶುಶ್ರೂಷೆಯಲ್ಲಿ ಅಕ್ಕ ಮುಂಚಿನ ತರಹ ಆದಳು.ಶುಶ್ರೂಷೆಯಲ್ಲಿ ಭಾವ ಪರಿಣಿತರೆಂದು ಆಗ ಕಂಡುಕೊಂಡೆ. ತಾವೇ ನಿಂತು ಮಾಡಿದ ತಿಂಡಿ ಕಾಫಿ, ಸೂಪಗಳು, ಹಣ್ಣಿನ ರಸ ಅದೆಷ್ಟು ಅಕ್ಕರೆಯಿಯಿಂದ ತಿನಿಸಿ ಕುಡಿಸುತ್ತಿದ್ದರೊ ಆ ದೃಶ್ಯ ನೋಡುವ ಹಾಗಿತ್ತು. ಈ ರೀತಿ, ಭಾವನ ವಾತ್ಸಲ್ಯ ಸ್ವಭಾವದ ಪರಿಚಯವಾಯಿತು. ಎದುರಿಗೆ ಬಂದ ತಾಪತ್ರಯಗಳನ್ನು ಸಂಯಮದಿಂದ ಎದುರಿಸುವ ಧೈರ್ಯ ಅವರಲ್ಲಿತ್ತು. ಇಷ್ಟೆಲ್ಲ ತಾಪತ್ರಯಗಳು ಇದ್ದಾಗಲೂ ಕೂಡ ಭಾವ ನನ್ನನ್ನು ಜಯಪೂರು ತೋರಿಸಲು ಹಾಗೂ ಬಟ್ಟೆಬರೆ ಕೊಡಿಸಲು ಕರೆದುಕೊಂಡು ಹೋದರು. ಇಲ್ಲಿ ಅವರ ಇನ್ನೊಂದು ಗುಣದ ಪರಿಚಯವಾಯಿತು. ಯಾವುದೇ ಸಾಮಾನು ಕೊಳ್ಳುವಾಗ ಮೂರು ನಾಲ್ಕು ಕಡೆಗೆ ಬೆಲೆ ವಿಚಾರಿಸಿ ಕಡಿಮೆ ಬೆಲೆಯಲ್ಲಿ ಒಳ್ಳೆ ಸಾಮಾನು ಕೊಳ್ಳುವ ಅವರ ಪದ್ಧತಿಯನ್ನು ನಾನು ಅರಿತುಕೊಂಡೆ. ಕೊನೆಯ ಗಳಿಗೆಯಲ್ಲಿ ಕೂಡ ಬೇಕಾದ ಅಗತ್ಯದ ಆವಶ್ಯಕತೆಗಳನ್ನು ಒಳ್ಳೆಯ ಗೃಹಿಣಿಗಿಂತಲೂ ಚೆನ್ನಾಗಿ ಪೂರೈಸಿದ್ದನ್ನು ಆಮೇಲೆ ಬೆಂಗಳೂರಿನಲ್ಲಿ ನೋಡಿದ್ದೇನೆ.

ಅಕ್ಕನಿಗೆ ಧಾರವಾಡ ಆಕಾಶವಾಣಿಗೆ ವರ್ಗವಾಯಿತು ಹಾಗೂ ಭಾವ ಜೋಬನೇರಿನ ತಮ್ಮ ನೌಕರಿಗೆ ರಾಜೀನಾಮೆ ಕೊಟ್ಟು ಅಲ್ಲಿಯೇ ಸ್ವಲ್ಪ ದಿನ ಇದ್ದರು. ನಾನಾಗ ಸ್ನಾತಕೋತ್ತರಳಾಗಿದ್ದೆ. ನೌಕರಿಗೋಸ್ಕರ ಪ್ರಯತ್ನ ಮಾಡುತ್ತಿದ್ದು, ಮನೆಯಲ್ಲಿದ್ದೆ. ಹೀಗಾಗಿ ಭಾವನನ್ನು ಹತ್ತಿರದಿಂದ ನೋಡುವ, ಅರಿತುಕೊಳ್ಳುವ ಅವಕಾಶ ಸಿಕ್ಕಿತು. ಗಂಟೆಗಟ್ಟಲೆ ಯಾವ ವಿಷಯದ ಮೇಲೂ-ಅಡಿಗೆಯಿಂದ ವಿಜ್ಞಾನ, ಕಲೆಯಿಂದ ಹಿಡಿದು ಜೀವನದಲ್ಲಿ ಬರುವ ಸಮಸ್ಯೆಗಳು ಇತ್ಯಾದಿ ಎಲ್ಲ ವಿಷಯದ ಮೇಲೆ ಚರ್ಚಿಸುತ್ತಿದ್ದರು. ಇಷ್ಟು ವಿಶ್ವಾಸದಿಂದ, ಸರಳತೆಯಿಂದ ಆತ್ಮೀಯತೆಯಿಂದ ಕಾಣುವ ಭಾವ ನನಗೆ ಅತೀ ಪ್ರಿಯರಾದರು. ನನ್ನ ಮದುವೆಯಾದ ಮೇಲೆ ನನ್ನ ಪತಿದೇವರು ಕೂಡ ಈ ವಿಷಯದ ಮೇಲೆ ತಮಾಷೆ ಮಾಡಿದ್ದುಂಟು. ನನಗೆ ಗಂಡು ತೋರಿಸಲು ಮುಂದೈಗೆ ಅಕ್ಕ, ಭಾವರೇ ಕರೆದುಕೊಂಡು ಹೋಗಿದ್ದರು. ಆದರೆ ನಿಶ್ಚಿತಾರ್ಥಕ್ಕೆ ಅವರು ಉಳಿದುಕೊಳ್ಳಲಿಲ್ಲ. ಅವರು ಮಧ್ಯಪ್ರದೇಶದ ಪ್ರವಾಸ ಕೈಕೊಂಡಿದ್ದರು. ಮುಂಚೆಯಿಂದಲೂ ಅವರು ಸಂಬಂಧಿಕರ ಮನೆಗೆ ಯಾವ ಕಾರ್ಯಕ್ರಮಗಳಿಗೂ ಹೋಗುವ ವಾಡಿಕೆ ಇರಲಿಲ್ಲ. ಅದೇ, ನಿಯಮವನ್ನು ತಮ್ಮ ತಂಗಿಯಂದಿರಿಗೂ ಅನ್ವಯಿಸಿದ್ದಾರೆ. ಹೀಗಾಗಿ ನಮ್ಮ ಮದುವೆಗೆ ಇಬ್ಬರೂ ಬರಲಿಲ್ಲ. ನಾನು ಅವರನ್ನು ಅರ್ಥಮಾಡಿಕೊಂಡಿದ್ದೆ, ಹೀಗಾಗಿ ನನಗೆ ಬೇಜಾರಾಗಲಿಲ್ಲ. ನಾಗಪೂರಿನಲ್ಲಿ ನಮ್ಮ ಹೊಸ ಸಂಸಾರವನ್ನು ಹೂಡಿದೆವು. ಆಗ ಭಾವ ಮಧ್ಯಪ್ರದೇಶದ ಬಸ್ತರನಲ್ಲಿದ್ದರು, ನಾಗಪೂರಿನ ನಮ್ಮ ಮನೆಗೆ ಬಂದು ಹೋಗಿ ಮಾಡುತ್ತಿದ್ದರು. ಇದರಿಂದ ನಮ್ಮವರು ಭಾವನನ್ನು ಹತ್ತಿರದಿಂದ ಅರಿಯುವ ಹಾಗಾಯ್ತು. ಆಗ ನಮ್ಮವರು ಔಷಧಿ ಕಂಪನಿಯಲ್ಲಿ ಇದ್ದದ್ದರಿಂದಲು, ಹಾಗೂ ಸ್ವಭಾವದಿಂದಲೇ ಸ್ನೇಹಜೀವಿ ಇರುವದರಿಂದ ಅವರಿಗೆ ಬಹಳ ಮಿತ್ರರು. ಇಡೀ ನಾಗಪೂರಿನಲ್ಲಿ ಅರ್ಧದಷ್ಟು ಜನ ಇವರಿಗೆ ಪರಿಚಯವಿದ್ದವರು. ಮನೆಗೆ ಬಂದು ಹೋಗುವ ಜನ ಕೂಡ ಜಾಸ್ತಿ. ಭಾವ ಎಲ್ಲರ ಹತ್ತಿರ ಸಂಕೋಚವಿಲ್ಲದೆ ಮಾತಾಡುತ್ತಿದ್ದರು. ನಮ್ಮ ಭಾವ ಎಲ್ಲರ ಭಾವ ಆಗಿದ್ದರು. ನಮ್ಮ ಜೊತೆ ಇವರ ಪರಮ ಮಿತ್ರರೊಬ್ಬರಿದ್ದರು. ಭಾವ ಅವರನ್ನು ಎಷ್ಟು ಮೆಚ್ಚಿಕೊಂಡರೆಂದರೆ ಅವರು ತೆಗೆದ ಕೆಲ ಛಾಯಾಚಿತ್ರಗಳು ಮುಂದೆ ಬಹು ಉಪಯೋಗಕ್ಕೆ ಬಂದವು. ಆ ಮಿತ್ರರು ಹರೆಯ ವಯಸ್ಸಿನಲ್ಲಿಯೇ ಮಿದುಳಿನ ಕ್ಯಾನ್ಸರ್‌ಗೆ ತುತ್ತಾಗಿ ಮರಣ ಹೊಂದಿದರು. ಅವರ ನೆನಪಿನಲ್ಲಿ ನಮ್ಮಿಂದ ಹಾಗೂ ತಾವು ತೆಗೆದ ಛಾಯಚಿತ್ರಗಳನ್ನು ಸೇರಿಸಿ ಉತ್ತಮವಾದೊಂದು ಆಲ್ಬಂ ತಯಾರಿಸಿ ಅವರ ತಂದೆ ತಾಯಿಗೆ ಕೊಟ್ಟು ಕಳಿಸಿದರು. ಹೋದ ಮಗ ತಿರುಗಿ ಬರದಿದ್ದರೂ, ಛಾಯಚಿತ್ರಗಳ ಮೂಲಕ, ಅವನನ್ನು ತಿರುಗಿ ಪಡೆದ ಅನುಭವ ಆಗಿರಲು ಸಾಕು. ಇದರಿಂದ ಭಾವನ ಹೆಂಗರುಳಿನ ಮನಸ್ಸಿನ ಪರಿಚಯವಾಯ್ತು.

ಚಿಕ್ಕ ಹುಡುಗಿಯಿಂದ ಮದುವೆಯಾಗುವ ತನಕ ಭಾವನನ್ನು ಅತಿ ಹತ್ತಿರದಿಂದ ನೋಡಿ, ಅರಿತ ನನಗೆ ಕೊನೆಕೊನೆಯಲ್ಲಿ ಅವರಲ್ಲಿ ಆದ ಬದಲಾವಣೆಯನ್ನು ಕಂಡು ಅತಿಯಾಗಿ ಆಶ್ಚರ್ಯವಾಗಿದ್ದುಂಟು. ಚಿಕ್ಕವರ ಜೊತೆ ಚಿಕ್ಕವರಂತೆ, ಯುವ ಪೀಳಿಗೆಯ ಜೊತೆ

ಯುವಕರಂತೆ, ಹಿರಿಯರೊಂದಿಗೆ ಆದರದಿಂದ ನಡೆದುಕೊಂಡವರು ಕೊನೆಕೊನೆಗೆ ತಮ್ಮದೆ ಆದ ವ್ಯೂಹದಲ್ಲಿ ಸಿಕ್ಕಿ ಹಾಕಿಕೊಂಡರು. ಕೆಲ ಜನರನ್ನು ಬಿಟ್ಟರೆ ಉಳಿದವರನ್ನು ದೂರ ಸರಿಸಿದರು. ಅದಕ್ಕೆ ಸೂಕ್ತ ಕಾರಣಗಳು ಇಲ್ಲದಿಲ್ಲ. ಸಮಯ ತುಂಬ ಕಡಿಮೆ ಇದೆ, ಮಾಡುವ ಕೆಲಸ ಜಾಸ್ತಿ, ಒಣ ಹರಟೆಗೆ ಸಮಯವೇ ಇಲ್ಲ ಎಂಬ ಮುಂದಾಲೋಚನೆ ಅವರಿಗೆ ಆಗಲೇ ಬಂದಿತ್ತೆ? ಅವರ ದೈನಂದಿನ ಜೀವನ ಪದ್ಧತಿ ನೋಡಿದಾಗ ಗೊತ್ತಾಗುತ್ತದೆ. ಅತೀ ನಿಯಮಿತತನ, ಶಿಸ್ತು, ಸಮಯದ ಅಪವ್ಯಯವಾಗದ ಹಾಗೆ ಕಾಳಜಿ ವಹಿಸುತ್ತಿದ್ದರು. ಕೊನೆ ಗಳಿಗೆಯ ತನಕ ಕೆಲಸ ಮಾಡಿದ ಕರ್ಮಯೋಗಿ ಎನ್ನೋಣವೇ?

ಅಕ್ಕ ಕೂಡ ತನ್ನ ಮೊದಲಿನ ಸ್ವಾವಲಂಬಿ, ಸ್ವತಂತ್ರ ಜೀವನದೊಂದಿಗೆ ರಾಜಿ ಮಾಡಿ, ಭಾವನ ಕಟ್ಟುನಿಟ್ಟಿನ ಶಿಸ್ತಿಗೆ ಸ್ವಸಂತೋಷದಿಂದ ಹೊಂದಿಕೊಂಡು ಹೋದಳು. ಮುಂಚೆಯೆಲ್ಲ ಕೆಲಸಕ್ಕೆ, ಅಡಿಗೆಗೆ ಕೆಲಸದವರನ್ನು ಇಟ್ಟುಕೊಂಡು ಅಭ್ಯಾಸವಿತ್ತು. ಆದರೆ ಭಾವನಿಗೆ ಇಷ್ಟವಿಲ್ಲವೆಂದು ಆಕಾಶವಾಣಿಯ ನಿರ್ದೇಶಕಳಾದರೂ ಮನೆಯ ಒಳ ಹೊರಗಿನ ಕೆಲಸ ಮುಗಿಸಿ ಹೋಗುತ್ತಿದ್ದಳು. ಭಾವ ಯಾವ ಕೆಲಸ ಮಾಡಲು ಹಿಂಜರಿಯುತ್ತಿರಲಿಲ್ಲ. ಇಬ್ಬರು ಒಬ್ಬರಿಗೊಬ್ಬರು ಪೂರಕ ಶಕ್ತಿಯಾಗಿದ್ದರು. ತಾನೆ ಕೊಟ್ಟ ದೂರದರ್ಶನ ಸಂದರ್ಶನವನ್ನು ವೀಕ್ಷಿಸಲು ಮನೆಯಲ್ಲಿ ಟೀವಿಯಿಲ್ಲ. ಮನೆಗೆ ಮಿಕ್ಸರ್ ಹೇಗೆ ಬಂತೆಂದು ತನ್ನ ಹಾಸ್ಯಲೇಖನದಲ್ಲಿ ಹೇಳಿಕೊಂಡಿದ್ದಾಳೆ. ಮಗ ಸೊಸೆ ಇಬ್ಬರೂ ಕಂಪ್ಯೂಟರಿನಲ್ಲಿ ಪರಿಣಿತರು. ತಮ್ಮದೆ ಆದ ವೆಬ್ ಸೈಟ್ ಇಟ್ಟುಕೊಂಡಿದ್ದಾರೆ. ಮಗ ತಂದುಕೊಟ್ಟ ಕಂಪ್ಯೂಟರ್‌ನ್ನು ಮುಟ್ಟದೆ ವಾಪಸು ಕಳಿಸಿ ಕೊಟ್ಟಿದ್ದುಂಟು. ಸ್ವತಃ ವಿಜ್ಞಾನಿಯದರೂ ಯಾಂತ್ರಿಕರಣದ ವಿರುದ್ಧವಾಗಿದ್ದರೇ? ಭಾರತದಲ್ಲಿ ಅದೆಷ್ಟು ಊರುಗಳನ್ನು ಸುತ್ತಿದ್ದರೋ ಆದೆಲ್ಲಾ ನಮ್ಮ ಸರಕಾರಿ ಕೆಂಪು ಬಸ್ಸುಗಳಲ್ಲಿ, ಇಲ್ಲವೆ ಮೂರನೇ ಕ್ಲಾಸು ಟ್ರೈನಿನಲ್ಲಿ. ಬೆಲೆಬಾಳುವ ಕ್ಯಾಮರಾಗಳನ್ನು ಗೋಣಿಚೀಲದಲ್ಲಿ ತಮ್ಮ ಬಟ್ಟೆಗಳೊಂದಿಗೆ ಒಯ್ಯುತ್ತಿದ್ದರು. ಕಳ್ಳಕಾಕರಿಂದ ದೂರವಿರುವ ಒಂದು ವಿಧಾನವೆಂದು ತಮಾಷೆ ಮಾಡುತ್ತಿದ್ದರು. ಇಂತಹ ಜಾಗದಲ್ಲಿಯೆ ಅವರಿಗೆ ನಿಜ ಜೀವನದ ಪರಿಚಯವಾಗಿರಲು ಸಾಕು. ಯಾವಾಗಲೂ ಅವರು ತಮ್ಮ ಬರವಣಿಗೆಯಲ್ಲಿ ಬರೆದ ಹಾಗೇ ನಡೆದಿದ್ದಾರೆ. ಹೀಗಾಗಿ ವಾಚಕರಿಗೆ ಲೇಖಕ ಕಾಮತ ಮತ್ತು ವ್ಯಕ್ತಿ ಕಾಮತನಲ್ಲಿ ಭೇದ ಕಾಣಿಸಲಿಕ್ಕಿಲ್ಲ. ನಾನು ಅವರನ್ನು ಹತ್ತಿರದಿಂದ ನೋಡಿ, ಅವರ ಪುಸ್ತಕಗಳನ್ನೂ ಓದಿದ್ದಕ್ಕೆ ಈ ಮಾತನ್ನು ಹೇಳುತ್ತಿದ್ದೇನೆ.



# ಕೃತಿ - ವ್ಯಕ್ತಿ : ಡಾ|| ಕೃಷ್ಣಾನಂದ ಕಾಮತ

ಬಾಲಸುಬ್ರಮಣ್ಯ. ಜಿ.

ಕ್ಷಣವಮೂರ್ತಾನಂತ ಕಾಲದುಪಕೃತಿ ಮೂರ್ತಿ ।
ಕಣವಮೇಯಾದಿ ವಸ್ತುವಿನಮೇಯಮುಖ ॥
ಕ್ಷಣಿಕವನುಪೇಕ್ಷಿಪೆಯ ? ಗಮಕವದನಂತಕ್ಕೆ ।
ಅಣು ಮಹತ್ಪ್ರತಿನಿಧಿಯೊ - ಮರುಳ ಮುನಿಯ ॥

ಕೃಷ್ಣಾನಂದ ಕಾಮತರ ಬಗೆಗೆ ಆಗಾಗ್ಗೆ ನನ್ನ ತಂದೆ ಹೇಳುತ್ತಲೇ ಇರುತ್ತಾರೆ. ನಿರಾಡಂಬರ ಜೀವನ ಶೈಲಿ, ಸೌಜನ್ಯ ಗುಣ, ವಿದ್ವತ್ತು ಹಾಗೂ ಛಾಯಾಚಿತ್ರಕಲೆಯ ಬಗ್ಗೆ ಮಾತು ಬಂದಾಗಲೆಲ್ಲಾ ಕೃಷ್ಣಾನಂದ ಕಾಮತರ ಹೆಸರು ಬರುತ್ತಿತ್ತು. ಎರಡು ವರ್ಷಗಳ ಮುಂಚೆ ಕೃಷ್ಣಾನಂದ ಕಾಮತರು ಕರ್ನಾಟಕ ಇತಿಹಾಸ ಅಕಾದೆಮಿಯ ಹದಿನೈದನೆಯ ವಾರ್ಷಿಕ ಸಮ್ಮೇಳನದ ಸಂದರ್ಭದಲ್ಲಿ ನನ್ನ ತಂದೆಯ ಫೋಟೋವನ್ನು ಕ್ಲಿಕ್ಕಿಸಿದ್ದರಂತೆ. ಕೆಲವು ದಿನಗಳ ನಂತರ ಫೋಟೋವನ್ನು ಕೃಷ್ಣಾನಂದ ಕಾಮತರ ಪತ್ನಿ ಹಾಗೂ ಅದೇ ಇತಿಹಾಸ ಸಮ್ಮೇಳನದ ಅಧ್ಯಕ್ಷ ಸ್ಥಾನದಲ್ಲಿದ್ದ ಜ್ಯೋತ್ಸ್ನಾ ಕಾಮತರು ಅಂಚೆ ಮುಖಾಂತರ ಮನೆಗೆ ತಲುಪಿಸಿದರು. ಅಂದು ಕೃಷ್ಣಾನಂದ ಕಾಮತ್ ಹಾಗೂ ಜ್ಯೋತ್ಸ್ನಾಕಾಮತರ ಬಗೆಗೆ ಗೌರವ ಭಾವ ಮೂಡಿತ್ತು. ಇತ್ತೀಚೆಗೆ ಕೃಷ್ಣಾನಂದ ಕಾಮತರ ಮಗ ವಿಕಾಸ್ ಕಾಮತರು ಸೃಜಿಸಿರುವ www. kamat.com ಎಂಬ ಅಂತರ್ಜಾಲಕ್ಕೆ ಭೇಟಿಕೊಟ್ಟಾಗ ಮತ್ತಷ್ಟು ಹೆಮ್ಮೆಯೂ, ಸಂತೋಷವೂ ಆಯಿತು. ಅನೇಕ ಮಹತ್ವದ ವಿಷಯಗಳಿರುವ ಈ ಅಂತರ್ಜಾಲವನ್ನು ಕೃಷ್ಣಾನಂದ ಕಾಮತರು ಸಂಗ್ರಹಿಸಿಟ್ಟಿದ್ದ ಕಲಾತ್ಮಕ ಬದುಕಿನ ವಿವಿಧ ಆಯಾಮಗಳ ಮೂಲಕ ಸೃಷ್ಟಿಸಲಾಗಿದೆ. ಹೀಗೆ ಕಾಮತರ ಕುಟುಂಬ ಸಮಾಜದಲ್ಲಿ ಬಹು ಮುಖ್ಯ ಪಾತ್ರವನ್ನು ವಹಿಸುತ್ತಿದೆ ಎಂದರೆ ಉತ್ಪ್ರೇಕ್ಷೆಯಾಗಲಾರದು.

ಸಂಶೋಧನಾ ಕ್ಷೇತ್ರದಲ್ಲಿನ ಪತ್ನಿ, ಇಂಜಿನಿಯರಿಂಗ್ ಕ್ಷೇತ್ರದಲ್ಲಿನ ಮಗ ಶ್ರೇಷ್ಠ ಸಾಧನೆಗಳನ್ನೇ ಮಾಡಿದ್ದಾರೆ. ಕೃಷ್ಣಾನಂದ ಕಾಮತರು ಬಹುಮುಖ ಪ್ರತಿಭೆಯ ಸೃಜನಶೀಲ ವ್ಯಕ್ತಿ. ಅವರು ವಿಜ್ಞಾನಿ, ಛಾಯಾಗ್ರಾಹಕ, ಲಲಿತ ಪ್ರಬಂಧಕಾರ, ಹಾಸ್ಯ ಬರಹಗಾರ, ಜನಾಂಗೀಯ ಅಧ್ಯಯನ ವಿದ್ವಾಂಸ ಹಾಗೂ ಪ್ರವಾಸಿಯಾಗಿ ಅನೇಕ ಕಥನಗಳನ್ನು ಹಾಗೂ ಅನುಭವಗಳನ್ನೂ ದಾಖಲಿಸಿದ್ದಾರೆ. 'ನಾನೂ ಅಮೇರಿಕೆಗೆ ಹೋಗಿದ್ದೆ' ಯಿಂದ 'ಬಸ್ತರ್ ಯಾತ್ರೆ' ಯವರೆಗಿನ ಅವರ ಪ್ರವಾಸ ಕಥನಗಳಿಗೆ ಅನೇಕ ಪ್ರಶಸ್ತಿಗಳು ಲಭಿಸಿವೆ. ಮೂರು ಬಾರಿ ಕರ್ನಾಟಕ ಸಾಹಿತ್ಯ ಅಕಾದೆಮಿ ಪ್ರಶಸ್ತಿ ಗಳಿಸಿರುವ ಕೃಷ್ಣಾನಂದ ಕಾಮತರು ಸರಳ ಶೈಲಿಯ ಮೂಲಕ ಓದುಗರ ಮೇಲೆ ಪರಿಣಾಮವನ್ನು ಉಂಟುಮಾಡುತ್ತಾರೆ. 'ಇರುವೆಯ ಇರುವು', 'ಪ್ರಾಣಿ ಪರಸರ' ಇತ್ಯಾದಿ ವೈಜ್ಞಾನಿಕ ಕೃತಿಗಳು 'ಮಾದರಿ' ಬರವಣಿಗೆಗಳೆಂದು ಪ್ರಸಿದ್ಧವಾಗಿವೆ. ಕೊಂಕಣಿಯಲ್ಲಿ ಕೃತಿ ರಚನೆ ಮಾತ್ರವಲ್ಲದೇ, ಕನ್ನಡದಲ್ಲಿ ಒಂದು ಕಾದಂಬರಿಯನ್ನೂ ಕೃಷ್ಣಾನಂದ ಕಾಮತರು ಬರೆದಿದ್ದಾರೆ.

ಸಾಮಾನ್ಯವಾಗಿ ಚಿಕ್ಕ ವಯಸ್ಸಿನಲ್ಲಿ ವಿದೇಶಕ್ಕೆ ಹೋದವರು, ಮರಳಿ ಭಾರತಕ್ಕೆ ಬರುವುದು ವಿರಳ. ಮರಳಿ ಬಂದವರಿಗೆ ಅಹಂಕಾರವಿರುತ್ತದೆ ಎಂಬ ಮಾತಿದೆ. ಕೃಷ್ಣಾನಂದ ಕಾಮತರು ಡಾಕ್ಟರೇಟ್ ಪದವಿ ಪಡೆಯಲು ನ್ಯೂಯಾರ್ಕಿಗೆ ಹೋಗಿದ್ದರು. ಕೀಟಶಾಸ್ತ್ರ ಅವರ ಸಂಶೋಧನಾ ವಿಷಯ. ಸಾಕಷ್ಟು ಅಧ್ಯಯನ ಮಾಡಿ, ಡಾಕ್ಟರೇಟ್ ಪದವಿ ಪಡೆದು, ಅಪಾರ ಜ್ಞಾನ ಪಡೆದ ಕೃಷ್ಣಾನಂದ ಕಾಮತರಿಗೆ ಕಿಂಚಿತ್ತೂ ಅಹಂ ಇರಲಿಲ್ಲ, ದೇಶ ಸುತ್ತುತ್ತಾ, ಕೋಶ ಓದುತ್ತಾ ಪರಿಸರದಲ್ಲಿನ ರಸಘಳಿಗೆಗಳನ್ನು ಕೃಷ್ಣಾನಂದ ಕಾಮತರು ಆಸ್ವಾದಿಸಿದ್ದಾರೆ. ಹೀಗಾಗಿ ದೇಶ-ಕೋಶಗಳ ಪ್ರಭಾವ ಕೃಷ್ಣಾನಂದ ಕಾಮತರ ವ್ಯಕ್ತಿತ್ವದ ಮೇಲೆ ಗಾಢವಾಗಿ ಆಗಿರುವುದು ಅವರ ಕೃತಿಗಳಿಂದ ತಿಳಿಯುತ್ತದೆ.

ಕನ್ನಡದಲ್ಲಿ ಅನೇಕರು ಪ್ರವಾಸ ಕಥನಗಳನ್ನು ಬರೆದಿದ್ದಾರೆ. ಬಿ.ಜಿ.ಎಲ್. ಸ್ವಾಮಿ, ವಿ. ಕೃ. ಗೋಕಾಕ್ ಮೊದಲಾಗಿ ಅನೇಕರು ಪ್ರವಾಸಾನುಭವಗಳನ್ನು ದಾಖಲಿಸಿದ್ದಾರೆ. ಅವರದೇ ಆದ ವಿಶಿಷ್ಟ ಶೈಲಿಯಲ್ಲಿ ಸ್ವದೇಶಿ-ವಿದೇಶಿ ಪ್ರವಾಸದ ಸಂದರ್ಭಗಳಲ್ಲಿನ ಹಲವಾರು ಅನುಭವಗಳನ್ನು ಕೃಷ್ಣಾನಂದ ಕಾಮತರು ಲಲಿತ ಪ್ರಬಂಧಗಳಲ್ಲಿ ಸ್ವಾರಸ್ಯಕರವಾಗಿ ದಾಖಲಿಸಿದ್ದಾರೆ. ಇಂತಹ ಹಲವು ಪ್ರಬಂಧಗಳು ಕನ್ನಡದ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಹೀಗೆ ಪ್ರಕಟಗೊಂಡಿರುವ ಲಲಿತ ಪ್ರಬಂಧಗಳ ಸಂಗ್ರಹವೇ 'ಪ್ರವಾಸಿಯ ಪ್ರಬಂಧಗಳು'.

ಕೃಷ್ಣಾನಂದ ಕಾಮತರೇ ಹೇಳುವಂತೆ ಇಲ್ಲಿ 'ಹಾಸ್ಯ ಪ್ರಬಂಧಗಳಿಂದ ಪ್ರಾರಂಭಿಸಿ ವಿಚಾರಮಂಥನದತ್ತ ಎಳೆದೊಯ್ಯುವ ಪ್ರಯತ್ನ ಇದೆ'. ಈ ಪ್ರಬಂಧಗಳ ಅವಲೋಕನ ಕಷ್ಟದ ಕೆಲಸ. ಮಾಣಿಕ್ಯದ ಬೆಲೆ ಕಟ್ಟುವುದು ಸುಲಭವಲ್ಲ!

ಉನ್ನತ ವಿದ್ಯಾಭ್ಯಾಸಕ್ಕೆಂದು ಅಮೇರಿಕೆಗೆ ತೆರಳಿದ್ದ ಲೇಖಕರು ಹಾಗೂ ಅಲ್ಲಿನ ಅವರ ಭಾರತೀಯ ಸಹಪಾಠಿಗಳು ಹಜಾಮತಿಯ ಸಮಸ್ಯೆಯನ್ನು ಪರಿಹರಿಸಿಕೊಳ್ಳುವ ಸಲುವಾಗಿ ಕೈಗೊಂಡ ಕ್ರಮಗಳು, ಅವುಗಳಿಂದ ಉಂಟಾದ ಸಮಸ್ಯೆಗಳನ್ನು 'ಅಮೇರಿಕೆಯಲ್ಲಿ ಹಜಾಮತಿ' ಎಂಬ ಹಾಸ್ಯ ಪ್ರಬಂಧದಲ್ಲಿ ತಿಳಿಸುತ್ತಾರೆ. ಭಾರತದಲ್ಲಿ ಒಂದೆರಡು ರೂಪಾಯಿ ಖರ್ಚಿನಲ್ಲಿ ಮುಗಿಯುತ್ತಿದ್ದ ಹಜಾಮತಿಗೆ ಅಮೇರಿಕೆಯಲ್ಲಿ ಎರಡು ಡಾಲರ್ (ಕೃಷ್ಣಾನಂದ ಕಾಮತರು ಅಮೇರಿಕೆಗೆ ಹೋಗಿದ್ದಾಗ ಒಂದು ಡಾಲರ್‌ನ ಬೆಲೆ 5 ರೂಪಾಯಿ!) ವೆಚ್ಚವಾಗಿ, ಇಂತಹ ದುಂದು ವೆಚ್ಚಗಳನ್ನು ಪರಿಹರಿಸಿಕೊಳ್ಳಲು ಗೆಳೆಯರು ಯೋಚಿಸಿ, ತಾವೇ ಇನ್ನು ಮುಂದೆ ಹಜಾಮತಿ ಕಾರ್ಯವನ್ನು ಕೈಗೊಳ್ಳುವುದಾಗಿ ತೀರ್ಮಾನಿಸಿದರಂತೆ. ಮೊಟ್ಟಮೊದಲ ಪ್ರಯೋಗ ಕಪೂರನ ಮೇಲೆ ಆದ ಪರಿಣಾಮ ಬೋಳುತಲೆ ನಿರ್ಮಾಣವಾಗಿತ್ತಂತೆ. ಇದರಿಂದ ಕಪೂರ ಅನುಭವಿಸಿದ ಫಜೀತಿ ಸ್ವಾರಸ್ಯಕರವಾಗಿದೆ. ನಂತರ ೫೦ ಸೆಂಟಿಗೆ ಹಜಾಮತಿಶಾಲೆಯವರು ಅಗ್ಗದಲ್ಲಿ ವಿದ್ಯಾರ್ಥಿಗಳಿಂದ ಕೇಶಕರ್ತನ ಮಾಡಿಸುತ್ತಾರೆ ಎಂದು ತಿಳಿದ ಸ್ನೇಹಿತರು ಮರು ತಿಂಗಳಿನಿಂದ ಅಲ್ಲಿಯೇ ಹೋಗುತ್ತಿದ್ದುದಾಗಿಯೂ, ಅಲ್ಲಿ ಕಪೂರನು ವಿದ್ಯಾರ್ಥಿನಿಯೊಬ್ಬಳ ಚೆಲುವಿಗೆ ಮನಸೋತು ಮತ್ತೊಮ್ಮೆ ಬೇಸ್ತು ಬಿದ್ದ ಪ್ರಸಂಗವನ್ನು ಲೇಖಕರು ತಿಳಿಸಿದ್ದಾರೆ.

ಸಣ್ಣ-ಪುಟ್ಟ ಮಾತುಗಳನ್ನೇ ದೊಡ್ಡದು ಮಾಡಿ, ಕಲಹಗಳನ್ನು ಸೃಷ್ಟಿಸುವ ಬಂಗಾಲಿಗಳ ಬಗೆಗಿನ ವಿಡಂಬನಾತ್ಮಕ ಲೇಖನ 'ಬಂಗಾಲಿಗಳ ಕಲಹ'. ಬಂಗಾಲಿಗಳು ವಂಗದೇಶವನ್ನು ಜಾಗೃತ ರಾಜ್ಯವೆಂದು ಹೇಳಿಕೊಳ್ಳುತ್ತಾರೆ. ಆದರೆ ಅಧಿಕಾರಕ್ಕಾಗಿ ಬಡಿದಾಡುವ ಜನ ಬಂಗಾಲಿಗಳು. ಬೌದ್ಧಿಕವಾಗಿ ಹೆಮ್ಮೆಯ ರಾಜ್ಯವಾದ ಬಂಗಾಲ ಇಂದು ಕೊಲೆ, ಸುಲಿಗೆಗಳಲ್ಲೂ ಹೆಮ್ಮೆಯ ರಾಜ್ಯವಾಗಿರುವುದು ವಿಷಾದನೀಯ! ಕಲಹಗಳ ಆರಂಭ ಮೋಜಿಗಾದರೂ, ಪರಿಣಾಮ ಮಾತ್ರ ಭೀಕರ. ರಾಜಕೀಯ ಸ್ವರೂಪ ಪಡೆಯುವ ಕಲಹಗಳು ಸಾವು-ನೋವುಗಳಿಂದ ಅಂತ್ಯ ಪಡೆಯುತ್ತವೆ. ದರೋಡೆ, ರಾಜಕಾರಣ, ಅಂತಃಕಲಹಗಳೆಲ್ಲಾ ಬಾಂಬುಗಳಿಂದಲೇ ನಿರ್ಧರಿಸಲ್ಪಡುತ್ತವೆ. ಒಂದು ಬಾಳೇಹಣ್ಣಿನ ವ್ಯಾಪಾರದ ಸಂದರ್ಭದಲ್ಲಿ ಆರಂಭಗೊಂಡ ಕಲಹ ಮಾರ್ಕ್ಸ್‌ವಾದೀ ಹಾಗೂ ಕಮ್ಯೂನಿಸ್ಟ್ ಪಾರ್ಟಿಗಳ ನಡುವಿನ ತಿಕ್ಕಾಟಕ್ಕೆ ಕಾರಣವಾಯಿತಂತೆ! ಅಪಘಾತದಲ್ಲಿ ಆಡಿನ ಮರಿಯೊಂದು ಸತ್ತರೆ ಆಕ್ರೋಶಗೊಳ್ಳುವ ಜನ ಮಗುವೊಂದು ಸತ್ತರೆ ಏನು ಮಾಡುತ್ತಿದ್ದರೋ ಎಂದು ಲೇಖಕರು ಭಯಪಡುತ್ತಾರೆ. ಹೀಗೆ ಲೇಖಕರು ಪ್ರಾಸಂಗಿಕವಾಗಿ ಜನ-ಜೀವನವನ್ನು ಪರಿಚಯಿಸುತ್ತಾರೆ.

ಕನ್ನಡದ ಕವಿಗಳು ಹೆಣ್ಣಿನ ಸೌಂದರ್ಯವನ್ನು ಹಾಡಿ ಹೊಗಳಿದ್ದಾರೆ. ತನ್ನ ಹೆಂಡತಿಯಾಗುವಾಕೆ 'ಹೀಗೆಯೇ ಇರಬೇಕು' ಎಂಬ ಆಸೆಯನ್ನು ಹೊತ್ತ ಲೇಖಕರು ಸ್ತ್ರೀ ಸೌಂದರ್ಯವನ್ನು ಶೋಧಿಸಿದ ರೀತಿ, ಶೋಧಿಸುವಾಗ ಬೇಸ್ತುಬಿದ್ದ ಘಟನೆಗಳನ್ನು 'ಸ್ತ್ರೀ ಸೌಂದರ್ಯದ ಶೋಧನೆಯಲ್ಲಿ' ಎಂಬ ಲೇಖನದಲ್ಲಿ ವಿವರಿಸುತ್ತಾರೆ. ಅಮೇರಿಕಾ, ಲಂಡನ್, ಪ್ಯಾರಿಸ್, ಬರ್ಲಿನ್, ಹಾಲೆಂಡ್, ಗ್ರೀಸ್, ರೋಮ್, ಕಾಯ್‌ರೋ, ಕರಾಚಿ, ಕಾಶ್ಮೀರ, ಶ್ರೀನಗರ, ಬಂಗಾಲ, ರಾಜಸ್ಥಾನ, ಕರಾವಳಿ ಕರ್ನಾಟಕ ಮೊದಲಾದ ಸ್ಥಳಗಳಲ್ಲೆಲ್ಲಾ ಹುಡುಕಾಟವನ್ನು ನಡೆಸಿದ ಲೇಖಕರು ಕೊನೆಗೆ ಮದುವೆ ಆದದ್ದು ಉತ್ತರ ಕನ್ನಡದ ಹೆಣ್ಣನ್ನು. ಲೇಖಕರು ತಮ್ಮ ಮಗನಿಗಾಗಿ ಕನ್ಯೆಯನ್ನು ಶೋಧಿಸುವಾಗ ನಡೆದ ಪ್ರಸಂಗಗಳನ್ನು ವಿವರಿಸುತ್ತಾರೆ. ಆಧುನಿಕತೆಯು ಮನುಷ್ಯನ ಸುಂದರ ಭಾವನಾತ್ಮಕ ಜೀವನದ ದಿಕ್ಕನ್ನು ಬದಲಾಯಿಸಿದೆ ಎಂಬುದನ್ನು ತೀರ ಸೂಕ್ಷ್ಮವಾಗಿ 'ಕಾಲ ಬದಲಾಗಿದೆ!' ಎಂದು ಒಂದೇ ಮಾತಿನಲ್ಲಿ ಲೇಖಕರು ತಿಳಿಸುತ್ತಾರೆ.

ಭಾರತವನ್ನು ಬ್ರಿಟೀಷರು ಬಿಟ್ಟುಹೋಗಿರಬಹುದು. ಆದರೆ ಅವರ ಇಂಗ್ಲೀಷ್ ಮಾತ್ರ ಹೋಗಿಲ್ಲ. ತಪ್ಪು!, ಭಾರತೀಯರು. ಇಂಗ್ಲಿಷನ್ನು ಹೋಗಲು ಬಿಡುವುದಿಲ್ಲ. ಬೆಂಗಳೂರಿನಲ್ಲಿ ಈ 'ಇಂಗ್ಲಿಷ್ ಭೂತದ ಹಾವಳಿ ಸ್ವಲ್ಪ ಹೆಚ್ಚೆಂದೇ ಹೇಳಬಹುದು. ಕನ್ನಡವನ್ನು ಇಂಗ್ಲಿಷಿನಲ್ಲಿ ಮಾತಾಡುವ ಕನ್ನಡಿಗರ ಪರಿಚಯವನ್ನು ಲೇಖಕರು 'ನಾ ಕಂಡ ಬೆಂಗಳೂರು' ಪ್ರಬಂಧದಲ್ಲಿ ಮಾಡಿಸುತ್ತಾರೆ. ಬೆಂಗಳೂರಿನ ಕನ್ನಡ ಹಾಗೂ ಉತ್ತರ ಕನ್ನಡದ ಕನ್ನಡಕ್ಕೂ ಇರುವ ವೈವಿಧ್ಯವನ್ನು ಪರಿಚಯಿಸುವ ಲೇಖಕರು ಬೆಂಗಳೂರಿನ ಕಿಂಗ್ಲಿಷ್ ಮಾತುಗಳಿಗೆ ದೃಷ್ಟಾಂತಗಳನ್ನು ನೀಡುತ್ತಾರೆ. 'ಡಾಕ್ಟರೇ, ನಿಮ್ಮ ವೆಲ್ ವಾಟರ್ ಯೂಜ್ ಮಾಡಬಹುದಾ?' ಎಂಬ ಮಾತಿಗೆ ಮತ್ತೊಬ್ಬರ ಪ್ರತಿಕ್ರಿಯೆ ಹೀಗೆ: 'ನಾವೆಲ್ಲ ಹಾಗೆ ಮಿಕ್ಸ್ ಮಾಡೋಲ್ಲ ಸಾರ್. ಓಲ್ಡ್ ಮೈಸೂರಿನವರು ಮಾತಾಡೋದು ಪ್ಯೂರ್ ಕನ್ನಡ'. ಜಾಗ ಇದ್ದ ಕಡೆ ದೇವಸ್ಥಾನಗಳು ಹುಟ್ಟಿಕೊಳ್ಳುವ ಬೆಂಗಳೂರಿನಲ್ಲಿ ಜನರಿಗೆ ದೈವ ಎಂದರೆ ಅಪಾರ ಭಕ್ತಿ. 'ಚೌಚೌ ಬಾತ್' ಪ್ರಸಂಗ ಕೂಡ ಸ್ವಾರಸ್ಯಕರವಾಗಿದೆ. ಮಲ್ಲೇಶ್ವರದ ಹೋಟೇಲು, ಅಂಗಡಿ, ಹಾಲಿನ ಡೈರಿ ಮೊದಲಾದ ಸ್ಥಳಗಳನ್ನು ವರ್ಣಿಸುವ ಲೇಖಕರು ಬೆಂಗಳೂರಿನ ಸ್ಥಿತಿಯನ್ನು ವ್ಯಂಗ್ಯದ ಕನ್ನಡಿಯಲ್ಲಿ ನೋಡಿದ್ದಾರೆ.

ಪರಕೆ ಪದದ ಅರ್ಥ, ವ್ಯಾಪ್ತಿ, ಪ್ರಕಾರ್ಯಗಳನ್ನು ಲೇಖಕರು 'ಪರೋಪಕಾರಿ ಪರಕೆ' ಪ್ರಬಂಧದಲ್ಲಿ ವಿವರಿಸುತ್ತಾರೆ. ಪರಕೆಯ ವೈವಿಧ್ಯತೆಗಳನ್ನು ಪರಿಚಯಿಸುವ ಕಾರ್ಯವನ್ನು ಲೇಖಕರು ಸಮರ್ಥವಾಗಿ ನಿರ್ವಹಿಸಿದ್ದಾರೆ.

ಛಿಂದವಾಡದಲ್ಲಿ ನಡೆಯುವ ಅಪರೂಪದ ಸ್ಪರ್ಧೆ 'ಚಕಡಾ ಓಟ'ವನ್ನು ವರ್ಣಿಸುವ ಲೇಖಕರು ಮನುಷ್ಯರ ಭಾವನೆಗಳಿಗೆ ಮಾತ್ರವೇ ಅಲ್ಲದೇ, ಪ್ರಾಣಿಗಳ ಭಾವನೆಗಳನ್ನು ಅರ್ಥಮಾಡಿಕೊಂಡಿದ್ದಾರೇನೋ ಎನಿಸುತ್ತದೆ. ಕರಾವಳಿಯ ದೋಣಿ ಸ್ಪರ್ಧೆ, ಹೊನ್ನಾವರದ ಸೈಕಲ್ ಸ್ಪರ್ಧೆ, ಬೆಂಗಳೂರಿನ ಕುದುರೆ ಸ್ಪರ್ಧೆಗಳಿಗಿಂತ ಭಿನ್ನವಾದ ಆಟವನ್ನು ನಾವೂ ಒಮ್ಮೆ ನೋಡಬೇಕೆಂದು ಆಸೆಯಾಗುತ್ತದೆ.

ಅಮೇರಿಕೆಯಲ್ಲಿ ನೈಸರ್ಗಿಕ ವೈಪರೀತ್ಯಗಳಿಂದ ಜೀವನ ಅಸ್ತವ್ಯಸ್ತವಾಗುವ ರೀತಿಯನ್ನು ಲೇಖಕರು 'ಹಿಮ ವೃಷ್ಟಿ' ಪ್ರಬಂಧದಲ್ಲಿ ವರ್ಣಿಸುತ್ತಾರೆ. ಹೂವಿನ ಹಾಸಿಗೆ ಎಂದು ನಂಬಿರುವ ಅನೇಕರಿಗೆ ಅಮೇರಿಕೆಯ ಕಡುಚಳಿಗಾಲವನ್ನು ಎದುರಿಸುವಾಗ ಮುಳ್ಳಿನ ಹಾಸಿಗೆಯ ಅನುಭವವಾಗುವುದು. ಸೆಪ್ಟೆಂಬರ್, ಅಕ್ಟೋಬರ್ ತಿಂಗಳಿನಲ್ಲೇ ಚಳಿಗಾಲ ಪ್ರಾರಂಭವಾಗುತ್ತದೆ. ನವೆಂಬರ್‌ನಲ್ಲಿ ಮಾರುತನು ತಾಂಡವವನ್ನಾಡುತ್ತಾನೆ. ಹಿಮವು ಸಂಚಕಾರವನ್ನು ತಂದೊಡ್ಡುತ್ತದೆ. ಕಾರುಗಳಿದ್ದವರಿಗೂ ಹಿಮದ ಮೇಲೆ ನಡೆಸುವುದು ಕಷ್ಟವೇ. ಎಷ್ಟೇ ತೊಂದರೆಗಳಿದ್ದರೂ, ಜನರ ದಿನಚರಿಯಲ್ಲಿ ಮಾತ್ರ ವ್ಯತ್ಯಾಸಗಳಿರುವುದಿಲ್ಲ. ಶಾಲೆ, ಕಾಲೇಜು, ಪಾಠ, ಪರೀಕ್ಷೆಗಳು ಸಹಜವಾಗಿಯೇ ನಡೆಯುತ್ತವೆ. ಪರಿಶ್ರಮೀ ವಿದ್ಯಾರ್ಥಿಗಳ ಮೇಲಂತೂ ಎಳ್ಳಷ್ಟೂ ಪರಿಣಾಮವಾಗುವುದಿಲ್ಲ. ಅಮೇರಿಕನ್ನರ ದೈನಂದಿನ ಜೀವನದಲ್ಲಿ ಹಿಮ ಒಂದು ಭಾಗವಾಗಿರುತ್ತದೆ. ಮಗುವಾಗಿದ್ದಾಗಿನಿಂದಲೇ ಹಿಮದ ಸಹವಾಸದಲ್ಲಿ ಬೆಳೆಯುವ ಮಕ್ಕಳು ದೊಡ್ಡವರಾಗಿ ಶಾಲಾ–ಕಾಲೇಜುಗಳಲ್ಲಿ ನಡೆಯುವ ಹಿಮಶಿಲ್ಪದ ಸ್ಪರ್ಧೆಯಲ್ಲಿ ಭಾಗವಹಿಸುತ್ತಾರೆ. ಭಾರತದ ಪರಿಸರಕ್ಕೆ ಹೊಂದುವಂತಹ ಕ್ರೀಡೆಗಳನ್ನು ಇಲ್ಲಿ ಸೃಷ್ಟಿಸಿಕೊಂಡಿರುವಂತೆ ಅಮೇರಿಕದಲ್ಲಿ ಹಿಮ ಕ್ರೀಡೆಯು ಪ್ರಸಿದ್ಧವಾಗಿದೆ. ಹಿಮ ಹಾಕಿ, ಹಿಮ ಬ್ಯಾಲೆ ಮೊದಲಾದ ಆಟಗಳು ನಡೆಯುತ್ತಲೇ ಇರುತ್ತವೆ.

'ಕ್ರಾಂತಿಕಾರ' ಮನೋಭಾವದ ಒನಿಲ ಬೊಶು ಎಂಬ ನಿರುದ್ಯೋಗಿ ಯುವಕನು ಕಲ್ಕತ್ತೆಯಲ್ಲಿ ಪ್ರಾರಂಭಿಸಿದ 'ರೇಲ್ವೇ ತಿಕೀಟರಹಿತ ಸಂಘ' ಅಥವಾ 'ರೇತಿಸ' ಹುಟ್ಟಿಕೊಂಡು, ಬೆಳೆದ ರೀತಿಯನ್ನು ಸ್ಪಷ್ಟವಾಗಿ ಲೇಖಕರು ಚಿತ್ರಿಸಿದ್ದಾರೆ. ಟಿಕೇಟಿಲ್ಲದೇ ಪ್ರತಿ ದಿನವೂ ರೈಲಿನಲ್ಲಿ ಪ್ರಯಾಣ ಮಾಡುವ ಬಡವರಿಗೆ, ಅದರಲ್ಲೂ ವ್ಯಾಪಾರ ನಡೆಸಲು ಬರುವ ಮಹಿಳೆಯರಿಗೆ ಎಂಬ ಉದ್ದೇಶದಿಂದ ರೇತಿಸ ಪ್ರಾರಂಭವಾಗಿದ್ದು. ಯಾವುದೇ ಸಂಘ–ಸಂಸ್ಥೆ ರಾಜಕೀಯದಲ್ಲಿ ಸೇರಿಕೊಳ್ಳುವಂತೆ, ರೇತಿಸ ಕೂಡ ಸೇರಿಕೊಂಡಿತು. ಚುನಾವಣೆಯಲ್ಲಿ ಗೆದ್ದ ಒನಿಲ ಬೊಶು ಸಾರಿಗೆ ಮಂತ್ರಿ ಪದವಿಯನ್ನು ಅಲಂಕರಿಸಿದ್ದನು.

'ಕರಾವಳಿಯ ಮಳೆಗಾಲ'ದ ನೆನಪುಗಳನ್ನು ಮಾಡಿಕೊಳ್ಳುವ ಲೇಖಕರ ಮನಸ್ಸು ಚಿಕ್ಕಂದಿನಿಂದಲೇ ಬಾಹ್ಯ ಪ್ರಪಂಚದ ಆಗುಹೋಗುಗಳಿಗೆ ಸ್ಪಂದಿಸುವುದನ್ನು ಕಂಡುಕೊಳ್ಳಬಹುದು. ಈ ಪ್ರಬಂಧದಲ್ಲಿ ಅವರು ಉಪಮೆಗಳನ್ನು ಸೂಕ್ತವಾಗಿ ಬಳಸುತ್ತಾರೆ. 'ಮಳೆರಾಯನ ಆಗಮನ, ಯಕ್ಷಗಾನದ ಕಟ್ಟುವೇಷ, ರಂಗಪ್ರವೇಶವನ್ನು ಮಾಡುವ ಆರ್ಭಟದಂತೆ...... ಇಷ್ಟೆಲ್ಲಾ ಆರ್ಭಟ ನಡೆದರೂ ಮಳೆರಾಯ ಕೂಡಲೇ ಪ್ರತ್ಯಕ್ಷ ಆಗಲೊಲ್ಲ! ಬರೀ ವಾಕರಿಕೆ ತೆಗೆಯುವ ನವಗರ್ಭಿಣಿಯಂತೆ!' ಎಂಬ ಮಾತುಗಳು ಅನುಭವಕ್ಕೆ ಬಂದಿರುವ ವಿಚಾರಗಳ ತೀವ್ರತೆಯನ್ನು ಪ್ರತಿಫಲಿಸುತ್ತವೆ. ಜನ–ಜೀವನದಲ್ಲಿ ಮಳೆಯೂ ಹೇಗೆ ಒಂದು ಅವಿಭಾಜ್ಯ ಅಂಗವಾಗಬಹುದು ಎಂಬ ಅಂಶವನ್ನು ಲೇಖಕರು ಓದುಗರ ಮುಂದಿಡುತ್ತಾರೆ.

'ಬೆಂಗಳೂರಿನ ಅನುಭವಗಳು' ವಿಸ್ತಾರವಾದ ಪ್ರಬಂಧ. ಬೆಂಗಳೂರಿನ ಜನರ ನಯವಂಚನೆ (ಆಟೋ ಚಾಲಕನಿಂದ), ಬೇರೆ ಊರುಗಳಿಗಿಂತ ಭಿನ್ನವಾದ ಕನ್ನಡ ಭಾಷಾ ಪ್ರಯೋಗ, ವ್ಯಾವಹಾರಿಕ ರೀತಿ–ನೀತಿಗಳು ಮೊದಲಾದ ವಿಷಯಗಳನ್ನು ಗಮನಿಸಿ, ವ್ಯಂಗ್ಯವಾಗಿ ಈ ಪ್ರಬಂಧದಲ್ಲಿ ಬರೆದಿದ್ದಾರೆ. ಬೆಂಗಳೂರಿನ ಬೀದಿಗಳಲ್ಲಿ ಮಾರಲಾಗುವ ಹಣ್ಣುಗಳ, ಹೊಟೇಲುಗಳಲ್ಲಿ ದೊರೆಯುವ ತಿಂಡಿಗಳ ಹೆಸರುಗಳ ಅಧ್ಯಯನವನ್ನು ಲೇಖಕರು ಮಾಡಿದ್ದಾರೆ. ಹೊಟೆಲ್ ಬೇರರ್‌ಗಳಿಗೆ ಚಹಾ ಎಂದರೆ ಗೊತ್ತಿರುವುದಿಲ್ಲ. ಟೀ ಮಾತ್ರ ಗೊತ್ತಿರುವುದು. ಬೆಂಗಳೂರಿನಲ್ಲಿ ಬಾಡಿಗೆಗೆ ಮನೆಗಳನ್ನು ಹುಡುಕುವುದು ದುಸ್ತರದ ಕೆಲಸ. ಅದರಲ್ಲೂ ಮಾರ್ಗದರ್ಶಿ ಅಥವಾ ದಲ್ಲಾಳಿಗಳ ಮೂಲಕ ಮನೆ ಹುಡುಕಿದರೆ ಜೇಬಿನ ಹಣ ಖಾಲಿಯಾಗುವುದು ಖಂಡಿತ. ಪರಿಚಯದವರೊಬ್ಬರು ಲೇಖಕರಿಗೆ ಹೇಳಿರುವ ಮಾತು ಹೀಗಿದೆ. 'ಬೆಂಗಳೂರಿನಲ್ಲಿ ಧನಿಕನಾಗಬೇಕಾದರೆ ರಸ್ತೆಯ ಮಧ್ಯೆ ಮಾರುತಿ ಇಲ್ಲವೇ ಗಣೇಶನ ದೇವಸ್ಥಾನ ಸ್ಥಾಪಿಸು, ಇಲ್ಲವೇ ಇಂಗ್ಲೀಷ್ ಮಾಧ್ಯಮ ಸ್ಕೂಲು ಪ್ರಾರಂಭಿಸು, ಇಲ್ಲವೇ ಎಸ್ಟೇಟು ಏಜನ್ಸಿ ಮಾಡು' ಎಂದು ಕನ್ನಡಕ್ಕೆ ಇಂಗ್ಲೀಷ್ ಬೆರೆಸಿ ಮಾತುಗಳಾಡಿದರೆ

ಮಾನ ಗೌರವಗಳು ಹೆಚ್ಚಬಹುದು ಎಂಬ ಭಾವನೆ ಬೆಂಗಳೂರಿನಲ್ಲಿ ಕನ್ನಡಿಗರಿಗಿದೆ. ಹಾಲಿನವನು ಇಂಗ್ಲೀಷ್‌ನಲ್ಲಿ 'ಫಾಯ್ವ್ ಕ್ಲಾಕಿಗೆ ಮಿಲ್ಕ್ ಟ್ರಕ್ ಬಂದ್ಬಿಡುತ್ತದೆ. ಕ್ಯಾಶ್‌ಮನಿ ಕೊಡಬೇಕಾಗುತ್ತದೆ! ಎಮ್ಟಿ ಬಾಟಲ್ ರೆಡಿಯಾಗಿಟ್ಟಿರಿ. ಎಕ್ಸ್‌ಟ್ರಾ ಮಿಲ್ಕ್ ಸಪ್ಲಾಯ್ ಮಾಡಲ್ಲ, ಮಂತ್ಲಿ ಡೆಲಿವರಿ ಛಾರ್ಜಸ್ ಫಸ್ಟಿಗೇ ಪೇ ಮಾಡಬೇಕು!' ಎಂದು ಹೇಳಿದರೆ, ಮನೆಗೆಲಸದಾಕೆ 'ಮೊರ್ನಿಂಗ್ ಒಸಿ ಜಾಗ್ರತೆ ಬಂದ್ಬಿಟ್ಟು ರೂಮ್ಸು ಕ್ಲೀನ್ ಮಾಡಿಕೊಡ್ತೀನಿ. ಬಟ್ಟೆಯೆಲ್ಲಾ ಸೋಪು ಹಾಕಿ ಇಟ್ಬಿಡಿ. ಸಂಜೆಗೆ ಬಂದು ವಾಶ್ ಮಾಡ್ತೀನಿ. ಎರಡೂ ಹೊತ್ತು ಟಿಫಿನ್ನು ಕಾಫಿ ಕೊಡ್ಬೇಕು. ಒಂದಿನಾನೂ ಮಿಸ್ ಮಾಡಲ್ಲಾ, ವರಿ ಮಾಡ್ಕಬೇಡಿ' ಎಂಬ ಪೊಗರಿನ ಮಾತುಗಳನ್ನಾಡುತ್ತಾಳೆ. ಕಬ್ಬಿನ ಹಾಲು ಸಿಗದ ಜ್ಯೂಸ್ ಅಂಗಡಿಯಲ್ಲಿ ಪ್ಯೂರ್ ಶುಗರ್‌ಕೇನ್ ಜ್ಯೂಸ್ ಸಿಗುವುದು ವಿಶೇಷ. ಲೇಖಕರ ಹೆಸರನ್ನೇ ತಪ್ಪಾಗಿ ಬಳಸಬಹುದೆಂದು ಅಂಗಡಿಯವನೊಬ್ಬ ಕಾಮತ ಎಂಬುದರ ಬದಲು ಕಾಮತ್ ಎಂದು ಬಳಸುವುದು ಸರಿ ಎಂದು ಸೂಚಿಸಿದನಂತೆ. ಹೀಗೆ ಬೆಂಗಳೂರಿನ ಅನುಭವಗಳನ್ನು ಹಂಚಿಕೊಳ್ಳುತ್ತಾ, ಧಾರವಾಡ-ಬೆಂಗಳೂರಿನ ಭಿನ್ನತೆಗಳನ್ನು ಪರಿಚಯಿಸುವ ರೀತಿ ಉತ್ತಮವಾಗಿದೆ. ಇವು ಪ್ರವಾಸಿಗಿರಬೇಕಾದ ಗುಣಗಳು.

ತಲೆ ನೋವು ಬಂದಾಗ ಸೇವಿಸುವ 'ಚಹಾ' ಎಂಬ ಅಮೋಘ ಪೇಯದ ಸರ್ವ ವ್ಯಾಪಕತೆಯನ್ನು, ಚಹಾ ತಯಾರಿಸುವ ವಿಧಾನ, ಬೇಕಾಗಿರುವ ಸಾಧನಗಳು, ವಿವಿಧ ರೀತಿಯ ಚಹಾಗಳು, ಪ್ರಪಂಚದಾದ್ಯಂತ ದೊರೆಯುವ ಚಹಾಗಳ ವೈಶಿಷ್ಟತೆಗಳನ್ನು ಲೇಖಕರು ತಿಳಿಸುತ್ತಾರೆ. ಪಾನೀಯಗಳ ರಾಜ ಎಂದು ಕರೆಸಿಕೊಳ್ಳುವ ಉತ್ತಮ ಚಹಾಗೆ ಮುಂಬೈನಲ್ಲಿ ಗುಲಾ, ನಾಸಿಕದಲ್ಲಿ ಗೋಲ್ಡನ್ ಹಾಗೂ ಬೆಂಗಳೂರಿನಲ್ಲಿ ಟೀ ಎಂಬ ಹೆಸರುಗಳಿವೆ. ಕಾಶ್ಮೀರದಲ್ಲಿ ಮಲ್ಲಿಗೆ, ಜಾಜೀ ಸುವಾಸನೆಯ ಡಿಕಾಕ್ಷನ್ ಚಹಾ ಕುಡಿಯುತ್ತಾರೆ. ಜರ್ಮನಿಯ ಚಹಾದ ಮಹತ್ವವನ್ನು ವಿವರಿಸುತ್ತಾರೆ. ಲಂಡನ್ನಿನ ಬ್ರಿಟಿಷ್ ಮಹಿಳೆಯೊಬ್ಬಳು ತಾನು ತಯಾರಿಸಿದ ಚಹಾವನ್ನು ಸವಿಯಲು ಲೇಖಕರನ್ನು ಕರೆದಿದ್ದಳಂತೆ. ಚೆನ್ನಾಗಿ ಬಿಸಿಯಾದ ಚಹ ಸಿಗಬೇಕೆಂದು ಶ್ರಮವಹಿಸಿದರೂ, ಸಕ್ಕರೆ ಸೇರಿಸಿ ಸವಿಯುವ ಹೊತ್ತಿಗೆ ಅದು ತಣ್ಣಗಾಗಿತ್ತಂತೆ. ಆಗ ಲೇಖಕರೇ ಆಕೆಗೆ ರಾಜಸ್ಥಾನಿ ಪದ್ಧತಿಯಂತೆ ಚಹಾ ತಯಾರಿಸುವ ವಿಧಾನವನ್ನು ಹೇಳಿಕೊಟ್ಟರಂತೆ.

ಭಾರತದ ಆದಿವಾಸಿಗಳ ಜನವಸತಿಯಲ್ಲಿ ತೃತೀಯ ಸ್ಥಾನ ಆಕ್ರಮಿಸಿ ಕೊಂಡವರು ಭಿಲ್ಲರು. ಇವರು ಆಚರಿಸುವ ಹಬ್ಬ 'ಭಿಲ್ಲರ ಹೋಳಿ' ಸಾಂಸ್ಕೃತಿಕವಾಗಿ ಮಹತ್ವ ಪಡೆಯುತ್ತದೆ. ಗಂಡು-ಹೆಣ್ಣುಗಳ ಸಮ್ಮಿಲನಕ್ಕೆ ಒಂದು ವೇದಿಕೆಯಾಗಿ ಪರಿಣಮಿಸುವ ಹಬ್ಬಕ್ಕೆ ಯುವಕ-ಯುವತಿಯರು ವರ್ಷವಿಡೀ ಎದುರು ನೋಡುತ್ತಿರುತ್ತಾರೆ. ಯುವಕ-ಯುವತಿಯರ ವೇಷ-ಭೂಷಣಗಳು, ಯುವತಿಯು ಪ್ರೀತಿಯನ್ನು ವ್ಯಕ್ತಪಡಿಸುವುದನ್ನು ಹೇಳುತ್ತಾ, ಯುವಕನು ಪ್ರೀತಿಯನ್ನು ಒಪ್ಪಿಕೊಳ್ಳುವುದು ಹೇಗೆ ಎಂಬುದನ್ನು ತಿಳಿಸುತ್ತಾರೆ. ಬೆಲ್ಲ-ಭಂಗಿ(ಭಾಂಗ್) ಸೇರಿಸಿ ತಯಾರಾದ ಹಸಿರು ಮಿಠಾಯಿಯನ್ನು ತರುಣ ತರುಣಿಗೆ ಕೊಟ್ಟರೆ ಆಕೆಯ ಪ್ರೀತಿಯನ್ನು ಒಪ್ಪಿಕೊಂಡಂತೆ. ಆಕೆ ಅದನ್ನು ಗೆಳತಿಯರೊಂದಿಗೆ ಸೇವಿಸಿದರೆ ನಿಶ್ಚಯ-ತಾಂಬೂಲ ಆದಂತೆಯೇ. ಮಡಿವಂತಿಕೆಯಿಂದ ಹೊರ ಬಂದು, ಸ್ವೇಚ್ಛೆಯಿಂದ ಹಬ್ಬವನ್ನು ಆಚರಿಸುವ ರೀತಿಯೇ ವಿಶಿಷ್ಟ. ಯುವಕನು ಸಂಪತ್ತಿಗೆ ಅನುಸಾರವಾಗಿ ವಧುದಕ್ಷಿಣೆಯನ್ನು ಕೊಡಬೇಕಾಗುತ್ತದೆ. ವೈವಾಹಿಕ ಜೀವನದಲ್ಲಿಯೂ ಬೇರೊಬ್ಬನಲ್ಲಿ ಅನುರಾಗ ಮೂಡಿದರೆ, ನವಪ್ರೇಮಿಯು ಮಾಜೀ ಪತಿ ಕೊಟ್ಟಷ್ಟು ವಧುದಕ್ಷಿಣೆ ಹಿಂದಿರುಗಿಸಿ ಆಕೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಸೌಲಭ್ಯವಿರುವುದು ಮತ್ತೊಂದು ವಿಶೇಷ. ಹಬ್ಬದಲ್ಲಿ ಕುಡಿತ, ಹಾಡುಗಾರಿಕೆ, ನೃತ್ಯಗಳು ಕ್ರಮವಾಗಿ ಅಮಲು, ಅಶ್ಲೀಲ ಹಾಡು ಹಾಗೂ ಕಾಮುಕ ಅಭಿದಾನಗಳಿಗೆ ದಾರಿಮಾಡಿಕೊಡುತ್ತವೆ. ಗಂಡು-ಹೆಣ್ಣುಗಳ ಸಾನ್ನಿಧ್ಯವಿರುವ ಇಲ್ಲಿ ಪರಿಚಯ, ಆತ್ಮೀಯತೆ, ಸಲಿಗೆ, ಮುಂದುವರೆದು ಪ್ರಣಯಚೇಷ್ಟೆಗಳೂ ನಡೆಯುತ್ತವೆ. ಜನರಲ್ಲಿ ಸುರತದಿಂದ ಸ್ನೇಹ ದೃಢವಾಗುತ್ತದೆ ಎಂಬ ನಂಬಿಕೆಯಿದೆ. ಈ ಸಂಪ್ರದಾಯದ ಹೆಸರಿನಲ್ಲಿ ಭಿಲ್ಲರ ಹೆಂಗಸರನ್ನು ಹರಾಜಿನಲ್ಲಿ ಮಾರಾಟ ಮಾಡಿ ದೈಹಿಕವಾಗಿ ಹಿಂಸೆಗೆ ಗುರಿ ಮಾಡಿರುವ ಭೀಕರ ಘಟನೆಯನ್ನು ಇತ್ತೀಚಿನ The Week ವಾರಪತ್ರಿಕೆಯು ವರದಿ ಮಾಡಿದೆ. ಸಂಪ್ರದಾಯ ಅತಿಯಾದಾಗ ಇಂತಹ ಅನೈತಿಕ ಕೃತ್ಯಗಳು ನಡೆದಿರುವುದು ಐತಿಹಾಸಿಕ ಸತ್ಯ.

ಲೇಖಕರು ಈ ಸಂದರ್ಭದಲ್ಲಿ 'ಕನ್ಯೆಯರನ್ನು ಕ್ಯಾಮರಾದಲ್ಲಿ' ಸೆರೆ ಹಿಡಿಯುವ ರೀತಿಯನ್ನೂ, ಸಂದರ್ಭದಲ್ಲಿ ಕನ್ಯೆಯರ ನಡವಳಿಕೆಯನ್ನೂ ವಿವರಿಸುತ್ತಾರೆ. ಇವರ ಈ ಕಾರ್ಯಕ್ಕೆ ಪತ್ನಿಯೇ ಮೊದಲ ಮಾಡೆಲ್ ಆಗಿ, ಅದರಿಂದ ಆದ ಅವಾಂತರವನ್ನು ಹಾಸ್ಯದಲ್ಲಿ ತೇಲಿಸುತ್ತಾರೆ. ಗರ್ಭಿಣಿಯರು ಆದರ್ಶ ವಸ್ತುಗಳಾಗಿ ಕ್ಯಾಮರಾದಲ್ಲಿ ಸೇರಿದ್ದು. ಈ ನಡುವೆ ತಾವು ಕಂಡ ಆಧುನಿಕತೆಯ

ಜಾಲದಲ್ಲಿ ಸಿಲುಕಿರುವ ತಾಯಂದಿರು, ದುಡಿವ ಹೆಂಗಳೆಯರ ಬಗ್ಗೆಯೂ ಲೇಖಕರು ಬರೆಯುತ್ತಾರೆ. ಬಡ ಹೆಂಗಳೆಯರು, ಕೂಲಿ ಕಾರ್ಮಿಕರು, ಕಾರ್ಖಾನೆಗಳಲ್ಲಿ ದುಡಿವ ಹೆಂಗಸರು, ಮನೆಗೆಲಸದವರು ಮತ್ತು ಸರಕು ಹೊತ್ತು ಅಲೆಮಾರಿ ಜೀವನ ನಡೆಸುವ ಹೆಂಗಸರ ಬಗ್ಗೆಯೂ ಲೇಖಕರು ಬರೆಯುತ್ತಾರೆ. ಇವರಲ್ಲಿ ಸರಕು ಹೊತ್ತು ಅಲೆಮಾರಿ ಜೀವನ ನಡೆಸುವ ಹೆಂಗಸರು ಛಾಯಾಗ್ರಹಣಕ್ಕೆ ಹೇಳಿ ಮಾಡಿಸಿದವರು ಎಂಬ ಅಭಿಪ್ರಾಯ ಅವರದು.

ಎಳೆಯರ ವ್ಯಕ್ತಿತ್ವವನ್ನು ಅದುಮಿ ಬಿಡುವುದರಲ್ಲಿ ಯಶಸ್ಸನ್ನು ಕಾಣುವ ಹಿರಿಯರ ಬಗೆಗೆ 'ಮಕ್ಕಳ ಬೆಳವಣಿಗೆ'ಯಲ್ಲಿ ಬರೆಯುತ್ತಾ ಮೊಮ್ಮಕ್ಕಳನ್ನು ಪಡೆದ ತಾತನಿಗೆ  ಮಗ ಇನ್ನೂ ಮಗುವಾಗಿಯೇ ಇರುತ್ತಾನೆ! ಎನ್ನುತ್ತಾರೆ. ಶ್ರೀಮಂತರು ಹೇರಳ ಹಣದಿಂದ, ಮಧ್ಯಮ ವರ್ಗದವರು ಅತಿಯಾದ ವೈಯಕ್ತಿಕ ಲಕ್ಷ್ಯ ಹಾಗೂ ಮುದ್ದಿನಿಂದ ಮತ್ತು ಬಡವರು ದುಡಿಮೆಯಿಂದ ಮಕ್ಕಳ ಬೆಳವಣಿಗೆಯನ್ನು ದೈಹಿಕವಾಗಿ ಮಾತ್ರವಲ್ಲ ಮಾನಸಿಕವಾಗಿಯೂ ಕುಂಠಿತಗೊಳಿಸುತ್ತಾರೆ. ಅಮೇರಿಕನ್ನರು ಹಾಗೂ ಭಾರತೀಯರಲ್ಲಿ ಮಕ್ಕಳನ್ನು ಬೆಳೆಸುವ ರೀತಿಯನ್ನು ತುಲನಾತ್ಮಕವಾಗಿ ಲೇಖಕರು ಕಂಡಿದ್ದಾರೆ.

ಕೈಲಾಸನಿವಾಸಿ ಶಿವನಿಂದಲೇ ಪ್ರಾರಂಭವಾಗುವ 'ಭಿಕ್ಷಾಟನೆಯ ಪರಂಪರೆ'ಯು ಧಾರ್ಮಿಕ ಹಿನ್ನೆಲೆಯಿಂದಾಗಿ ಗೌರವದ ಸ್ಥಾನವನ್ನು ಪಡೆದುಕೊಂಡಿದೆ. ಅನೇಕ ದೇವಾಲಯಗಳಲ್ಲಿ ಭಿಕ್ಷಾಟನೆಯ ಶಿಲ್ಪಗಳಿವೆ. ಬೌದ್ಧ ಭಿಕ್ಷುಗಳ, ಜೈನ ಸವಣ-ಸವಣೆಯರು ಭಿಕ್ಷಾಟನೆಯ ಕಾರ್ಯದಲ್ಲಿ ತೊಡಗಿದ್ದಾರೆ. ಸಾತ್ವಿಕ ಆಹಾರವನ್ನು ಮಾತ್ರ ತಿನ್ನುವ ಇವರು ವಂಶಪಾರಂಪರ್ಯದ ವೃತ್ತಿಯಾಗಿ ಭಿಕ್ಷಾಟನೆಯನ್ನು ಮಾಡಿಕೊಂಡಿರುತ್ತಾರೆ. ಜಾನಪದ ಹಿನ್ನೆಲೆಯನ್ನೂ ಹೊಂದಿರುವ ಭಿಕ್ಷಾಟನೆಯ ವೃತ್ತಿಯು ಯಲ್ಲಮ್ಮನ ಭಕ್ತಾದಿಗಳಲ್ಲಿ ಜೋಗಪ್ಪ, ಜೋಗವ್ವನ ದೀಕ್ಷೆಯನ್ನು ಪಡೆಯುವಾಗ ಸಾಂಕೇತಿಕವಾಗಿಯಾದರೂ ಕಡ್ಡಾಯವಾಗಿದೆ. ಉತ್ತರ ಭಾರತದ ಸಾಮಾಜಿಕ ಜೀವನದಲ್ಲಿ ಹಿಜಡಾಗಳಿಗೆ ವಿಶಿಷ್ಟ ಸ್ಥಾನವಿದೆ. ಧರ್ಮಶಾಲೆಗಳೇ ಭಿಕ್ಷುಕರ ತಂಗುದಾಣಗಳು. ಶಿರಸಿಯ ಮಾರಿಕಾಂಬಾ ದೇವಾಲಯವು ಹಿಂದೊಮ್ಮೆ ಭೇದ-ಭಾವ ತೊರೆದು ಎಲ್ಲ ಭಿಕ್ಷುಕರ ಆಲಯವಾಗಿತ್ತು ಎಂದು ತಿಳಿಯುತ್ತದೆ. ವೃದ್ಧಾಪ್ಯ, ಅನಾಥ ಮನೋಭಾವ, ಅಂಗವಿಕಲತೆ, ಹರಕೆ ಮೊದಲುಗೊಂಡು ಅನೇಕ ಅನಿವಾರ್ಯ ಕಾರಣಗಳಿಂದಲೂ ಭಿಕ್ಷಾಟನೆ ನಡೆಸುವವರಿದ್ದಾರೆ. ಮಕ್ಕಳನ್ನು ಕದ್ದು, ಹೆದರಿಸಿ, ತಿರುಕ ವೃತ್ತಿಗೆ ಅಟ್ಟುವ ತಿರುಕವರೇಣ್ಯರೂ ಸಮಾಜದಲ್ಲಿ ಇರುವುದು ದುರದೃಷ್ಟಕರ. ಮಹಮ್ಮದೀಯ ಫಕೀರರು, ದಾಸಯ್ಯಂದಿರಾದಿಯಾಗಿ ವಿನೋದವೃತ್ತಿಯ ಹಲವಾರು ಭಿಕ್ಷಾ ತಂಡಗಳಿವೆ. ಇಂತಹ ರಸ್ತೆ-ಸಂಸ್ಕೃತಿಗೆ ನಿರ್ಬಂಧ ಸಾಧ್ಯವೇ ಎಂದು ಪ್ರಶ್ನಿಸುತ್ತಲೇ ಪ್ರತಿಬಂಧ ಅಸಾಧ್ಯವೆನ್ನುವ ಲೇಖಕರು ಮೂಲವಾಗಿ ಶಿಸ್ತು, ಸ್ವಚ್ಛತೆಯ ಅರಿವು ಮೂಡಿಸುವುದು ಮುಖ್ಯ ಎಂಬ ಅಂಶವನ್ನು ಹೇಳುತ್ತಾರೆ.

ಕೈ, ಬಾಯಿಗೆ ಕೆಲಸವಿಲ್ಲದಿದ್ದಾಗ ಹದ್ದುಗಳ ವೀಕ್ಷಣೆ ಆಕರ್ಷಕ ಎನ್ನುವ ಲೇಖಕರು 'ಮೇರೆಯನ್ನೇ ಅರಿಯದ ಹದ್ದುಗಳು ನೆರೆಮನೆಯ ಕೋಳಿಮರಿಯನ್ನು ಹೊತ್ತೊಯ್ದ ಪ್ರಸಂಗವನ್ನು ವರ್ಣಿಸುತ್ತಾರೆ. ವಸಂತ ಋತುವಿನಲ್ಲಿ ಗೂಡು ಕಟ್ಟಿ ಸಂತಾನೋತ್ಪತ್ತಿ ಮಾಡುವ ಹದ್ದುಗಳು ತಮ್ಮ ಮರಿಗಳಿಗೆ ಎರಡು ಮೂರು ತಿಂಗಳಲ್ಲಿ ತರಬೇತಿಯನ್ನು ನೀಡಿ ಹೊರಗಟ್ಟಿಬಿಡುತ್ತವೆ. ಹದ್ದು-ಕಾಗೆಗಳು ಆಜನ್ಮ ವೈರಿಗಳೆಂದು ಖ್ಯಾತಿ ಪಡೆದಿವೆ. ಹದ್ದಿನ ಶಕ್ತಿ ಎಷ್ಟೇ ಪ್ರಬಲವಾದರೂ ಕಾಕಸಮೂಹದ ಆಕ್ರಮಣದ ಮುಂದೆ ಸಪ್ಪೆಯಾಗುತ್ತದೆ. 'ಒಂದೇ ಕಡೆ ಸ್ಥಾಯಿಯಾಗಿದ್ದು, ನಾಲ್ಕೂ ದಿಕ್ಕುಗಳಲ್ಲಿ ನೋಡಬಲ್ಲ ಹದ್ದಿನ ಕಣ್ಣುಗಳು ಮಾನವನಿಗೂ ಇದ್ದಿದ್ದರೆ ಅದೆಷ್ಟು ಸಹಾಯವಾಗುತ್ತಿತ್ತು!' ಎಂದು ಆಶ್ಚರ್ಯಪಡುವ ಲೇಖಕರಿಗೆ, ರಾಜಾಸ್ಥಾನದ ಜೈಪುರದ ವ್ಯಾಪಾರಿಗಳು ಪಕೋಡ, ಭಜ್ಜಿಗಳನ್ನು ಖರೀದಿಸಿ ಹದ್ದುಗಳಿಗೆ ನಾಶ್ತಾ ಎಂಬಂತೆ ನೀಡುವ ರೀತಿ ಮತ್ತಷ್ಟು ಆಶ್ಚರ್ಯವನ್ನು ಉಂಟುಮಾಡುತ್ತದೆ. ಕಣ್ಣಿಗೆ ಹಬ್ಬವನ್ನು ಉಂಟುಮಾಡುವ ಹದ್ದುಗಳ ಹಾರಾಟವನ್ನು ಲೇಖಕರು ಮೆಚ್ಚಿದ್ದಾರೆ. ಕ್ರಿಸ್ತಪೂರ್ವದಲ್ಲೇ ಹದ್ದನ್ನು ಚಿಹ್ನೆಯಾಗಿ ಸುಮೇರಿಯನ್ ನಗರವಾದ ಲಾಗರಕದಲ್ಲಿ ಬಳಸಲಾಗುತ್ತಿತ್ತು. ಈ ಪಕ್ಷಿ ಅನೇಕ ರಾಷ್ಟ್ರಗಳಲ್ಲಿ ವೈವಿಧ್ಯಮಯವಾಗಿ ಬಳಕೆಯಾಗುತ್ತಿದೆ. ಇವುಗಳ ಅಧ್ಯಯನ ಹಾಗೂ ರಕ್ಷಣೆಯ ಆವಶ್ಯಕತೆಯನ್ನು ಸೂಚ್ಯವಾಗಿ ಲೇಖಕರು ಹೇಳುತ್ತಾರೆ.

ಸ್ವಂತ ಲಾಭಕ್ಕಾಗಿ ದುಡಿಯುವ ಜನ, ಸಾರ್ವಜನಿಕರ, ಸಮಾಜದ, ದೇಶದ ಹಿತ ನಮ್ಮದಲ್ಲವೆಂಬಂತೆ ಅಲಕ್ಷಿಸುತ್ತಾರೆ. ಇಡಿಯಾಗಿ ಈ ವ್ಯವಸ್ಥೆಯೇ ಅವರನ್ನು ಅಯೋಗ್ಯರನ್ನಾಗಿ ಮಾಡಿಬಿಡುತ್ತದೆ. ವಿದ್ಯಾರ್ಥಿಗಳಿಗೆ ಕಷ್ಟಪಟ್ಟು ಓದುವುದು ಮುಖ್ಯವಲ್ಲ, ತಂದೆ ಮಾಡಿಟ್ಟಿರುವ ಹಣ ಪೋಲಾದರೆ ತಾನು ಏನು ಬೇಕಾದರೂ ಆಗಬಹುದು ಎಂಬ ನಂಬಿಕೆ ಅವರದು. ಪ್ರತಿಭೆಗೆ ತಕ್ಕಂತೆ ಪುರಸ್ಕಾರವೂ

ಮೊರೆತರೆ ಖಂಡಿತ ಯುವಶಕ್ತಿಯ ಏಳಿಗೆ ಸಾಧ್ಯವಿದೆ. ಸರ್ಕಾರಿ ನೌಕರರ ದಿನಚರಿಯ, ಅವರ ಮನಸ್ಥಿತಿಗಳ, ಅವರಿಗಿರುವ ರಜಾ ಸೌಕರ್ಯಗಳ ಬಗ್ಗೆಯೂ ಲೇಖಕರು ಹೇಳುತ್ತಾರೆ. ವಿವಿಧ ಕಾರ್ಖಾನೆಗಳಲ್ಲಿನ ಕಾರ್ಮಿಕ ವರ್ಗಗಳಿಗೆ ಮುಷ್ಕರಗಳೇ ಹೆಚ್ಚು ಪ್ರಿಯ. ತಮ್ಮ 'ಮನೆ ಚೊಕ್ಕಟ'ವಾಗಿಟ್ಟು 'ದೇಶ ಹೊಲಸು' ಮಾಡುತ್ತಿರುವ ಜನರ ಬಗೆಗೆ ಲೇಖಕರು ಕಠಿಣವಾಗಿಯೇ ಬರೆಯುತ್ತಾರೆ.

ದಕ್ಷಿಣ ಹಾಗೂ ಉತ್ತರ ಕನ್ನಡ ಜಿಲ್ಲೆಗಳ ವೈಭವವನ್ನು, ಪ್ರಾಚೀನತೆಯನ್ನು ವಿವರಿಸುತ್ತಲೇ ಅವು ಬೆಳೆದು ಬಂದ ರೀತಿಯನ್ನು ಲೇಖಕರು ತಿಳಿಸುತ್ತಾರೆ. ಜಿಲ್ಲೆಗಳ ಅಭಿವೃದ್ಧಿಯಿಂದ ಒಮ್ಮೆ ಹೆಮ್ಮೆಪಡುವ ಲೇಖಕರು ಮತ್ತೊಮ್ಮೆ ಅವುಗಳ ಪತನವನ್ನು ಕಾಣುತ್ತಾರೆ. ಇದರಿಂದ ಹಲವಾರು ಬಾರಿ ದುಃಖ ಪಡುತ್ತಾರೆ. ಪಂಪನು ಮೋಹಿಸಿದ ಬನವಾಸಿಯನ್ನು ಕಾಶ್ಮೀರದಿಂದ ಕರ್ನಾಟಕಕ್ಕೆ ಬಂದ ಬಿಲ್ಹಣನು ವರ್ಣಿಸಿರುವುದನ್ನು ನೆನಪಿಸಿಕೊಳ್ಳುತ್ತಾ ೧೪ನೆಯ ಶತಮಾನದ ಅರಬ್ ಪ್ರವಾಸೀ ಇಬನ್‌ಬತೂತ ಹೊನ್ನಾವರವನ್ನು ಸುತ್ತಿ ವರ್ಣಿಸಿರುವುದನ್ನು ತಿಳಿಸುತ್ತಾರೆ. ಭಟ್ಕಳವು ವಿಜಯನಗರ ಕಾಲದಲ್ಲಿ ವಾಣಿಜ್ಯ ಕೇಂದ್ರವಾಗಿ ಪ್ರಸಿದ್ಧವಾಗಿತ್ತು ಎಂಬುದನ್ನೂ ತಿಳಿಸುತ್ತಾರೆ. ಶ್ರೀಮಂತಿಕೆಯಲ್ಲಿ ಸಮನಾದ ಜಿಲ್ಲೆಗಳಲ್ಲಿ ಇಂದು ಆಕಾಶ-ಪಾತಾಳಗಳ ಅಂತರವನ್ನು ಲೇಖಕರು ಕಂಡಿದ್ದಾರೆ. ದಕ್ಷಿಣ ಕನ್ನಡದ ಬೆಳವಣಿಗೆಯನ್ನು ಉತ್ತರ ಕನ್ನಡದಲ್ಲಿ ನೋಡಲು ಸಾಧ್ಯವಿಲ್ಲ. ಶಿಕ್ಷಣ, ವಾಣಿಜ್ಯ ಹಾಗೂ ಸಾಹಿತ್ಯದಲ್ಲಿ ದಕ್ಷಿಣ ಕನ್ನಡ ಅಪಾರವಾದ ಸಾಧನೆ ಮಾಡಿದೆ. ಆದರೆ ಉತ್ತರ ಕನ್ನಡದ ದುಸ್ಥಿತಿಗೆ ಕಾರಣವನ್ನು ಹುಡುಕುವ ಪ್ರಯತ್ನವನ್ನು ಲೇಖಕರು ಮಾಡುತ್ತಾರೆ. ರಾಜ್ಯದ ನೂರಾರು ಕಾರ್ಖಾನೆಗಳು ಉಸಿರಾಡುತ್ತಿರುವುದು ಉತ್ತರ ಕನ್ನಡದ ಕಾಳಿ, ಶರಾವತಿಯಂತಹ ಬೃಹದ್ ವಿದ್ಯುತ್ ಯೋಜನೆಗಳಿಂದ ಎಂದು ಹರ್ಷ ವ್ಯಕ್ತಪಡಿಸುತ್ತಲೇ, ಜಿಲ್ಲೆಯಲ್ಲಿ ರಾಜ್ಯದ ಶೇಕಡಾ ೧೦ರಷ್ಟು ಉದ್ದಿಮೆಗಳು ಇಲ್ಲವೆಂದು ಮರುಗುತ್ತಾರೆ. ಜೋರ್ಡನ್ ನದಿಯ ಕೊಳ್ಳದ ಪ್ರದೇಶ ಇಂದು ಮರುಭೂಮಿಯ ಹೃದಯಸ್ಥಾನವಾಗಿರುವಂತೆ ಕಾಲಾಂತರದಲ್ಲಿ ಉತ್ತರ ಕನ್ನಡ ಜಿಲ್ಲೆಯು ಬಂಜರಾಗಬಾರದು, ಇದಕ್ಕಾಗಿ ಕಾರ್ಯೋನ್ಮುಖರಾಗಬೇಕು ಎಂಬುದನ್ನು ಸೂಚಿಸುತ್ತಾರೆ. ಅನಾವೃಷ್ಟಿ ಹಾಗೂ ಅತಿವೃಷ್ಟಿಯ ಪರಿಸ್ಥಿತಿಗಳನ್ನು ಅರಗಿಸಿಕೊಳ್ಳಲಾರದೆ ಹಾನಿಯುಂಟಾಗುತ್ತಿರುವ ನಾಡಿನಲ್ಲಿ ವನ್ಯ ಜೀವನವೂ ಕೂಡ ನಾಶವಾಗಿರುವುದು ದುಃಖಕರ. ಹೈಸ್ಕೂಲುಗಳಲ್ಲಿಯೇ ಇರಬೇಕಾದ ಪ್ರಾಥಮಿಕ ವ್ಯವಸ್ಥೆಗಳು ಇಲ್ಲದಿರುವ ಪರಿಸ್ಥಿತಿಯಲ್ಲಿ ಹಳ್ಳಿಗೊಂದು ಕಾಲೇಜು ಎಂಬ ಕಾರ್ಯಕ್ರಮವನ್ನು ಪ್ರಾರಂಭಿಸುವ ಹುಚ್ಚು ಹುನ್ನಾರವನ್ನು ಶಿಕ್ಷಣ ತಜ್ಞರು ನಡೆಸಿದ್ದಾರೆ. ನಿರುದ್ಯೋಗ ಹೆಚ್ಚಿಸುವ ಕೇಂದ್ರಗಳಾಗಿ ಹೋಗುವ ಇಂತಹ ಶಾಲಾ-ಕಾಲೇಜುಗಳ ಬದಲಿಗೆ ಪ್ರತಿ ಊರುಗಳಲ್ಲಿ ಒಂದೊಂದು ಬಗೆಯ ತಾಂತ್ರಿಕ ಕಾಲೇಜುಗಳನ್ನು ಪ್ರಾರಂಭಿಸಿ, ವಿದ್ಯಾರ್ಥಿಗಳ ಭವಿಷ್ಯಕ್ಕೆ ಸಹಾಯವಾಗುವಂತೆ ಮಾಡಬಹುದು ಎಂದೂ ಸೂಚಿಸುವ ಲೇಖಕರು ಉತ್ತರ ಕನ್ನಡದವರು ತಾವು ಹಿಡಿದ ಅಲ್ಪ ಪ್ರಮಾಣದ ಮೀನನ್ನು ಮಲ್ಪೆಯ ಸಾಹುಕಾರನಿಗೆ ಮಾರಿ ಕೃತಾರ್ಥರಾಗುತ್ತಾರೆ ಎಂದು ವ್ಯಂಗ್ಯವಾಗಿ ತಿಳಿಸುತ್ತಾರೆ. ಇಂಥದ್ದನ್ನೆಲ್ಲ ಅರಿಯಬಲ್ಲ ಅತಿರಥ-ಮಹಾರಥಿಗಳಿಗೆ ಕೊರತೆಯಿಲ್ಲದಿದ್ದರೂ, ಅವರ ಅತಿಬುದ್ಧಿ ಕೂಡ ಕೇಡಿಗೆ ಮೂಲವಾಗಬಲ್ಲುದು ಎಂಬ ಎಚ್ಚರವನ್ನು ವಹಿಸಬೇಕಿರುವುದು ಮುಖ್ಯ. ಸ್ವಾತಂತ್ರ್ಯದ ನಂತರವೂ ಮೋಸ, ವಂಚನೆ, ವಿಶ್ವಾಸ ದ್ರೋಹಗಳು ನಡೆಯುತ್ತಿರುವುದು ಅಕ್ಷಮ್ಯ. ಸಂಪದ್ಭರಿತವಾಗಿದ್ದರೂ ಸ್ವಾರ್ಥಿಗಳಾಗಿ, ಮತ್ತಾರೂ ಸುಖವಾಗಿರಬಾರದು ಎಂದು ಭಾವಿಸಿ ಬಾಳ್ವೆ ನಡೆಸುತ್ತಿರುವುದೇ ಇವಕ್ಕೆಲ್ಲ ಮುಖ್ಯ ಕಾರಣಗಳು. ಇನ್ನೂ ಕಾಲ ಮೀರಿಲ್ಲ, ನಮ್ಮ 'ಬತ್ತಿದ ಭೂಮಿ' ಯ ಅಭಿವೃದ್ಧಿಯಲ್ಲಿ ಕೈಗೂಡಿಸಿದರೆ ಪಂಜಾಬಿಗಳನ್ನೂ ಮೀರಿಸುವ ಶಕ್ತಿ ನಮಗಿದೆ.

'ನಮ್ಮ ಶಿಕ್ಷಣ'ದ ಬಗ್ಗೆ ಹಲವಾರು ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುವ ಪ್ರಯತ್ನವನ್ನು ಲೇಖಕರು ಮಾಡುತ್ತಾರೆ. ಆತ್ಮಶೋಧನೆಯ ಸಂದಿಗ್ಧ ಪರಿಸ್ಥಿತಿಯಲ್ಲಿರುವ ನಮ್ಮ ಶಿಕ್ಷಣದ ಸ್ವರೂಪವೇನು? ಮಾನದಂಡವೇನು? ಶಿಕ್ಷಿತ ಎಂದರೆ ಯಾರು? ಎಂದು ಪ್ರಶ್ನಿಸುವ ಲೇಖಕರು ಪ್ರತಿಭೆಗೆ, ಓದಿಗೆ ತಕ್ಕ ಪುರಸ್ಕಾರ ದೊರೆಯುತ್ತಿಲ್ಲವೆಂದು ಮರುಗುತ್ತಾರೆ. ಅಮೇರಿಕೆಯಲ್ಲಿನ ವಿದ್ಯಾವಂತರು ಹಾಗೂ ಸುಶಿಕ್ಷಿತರಿಗೂ ಭಾರತೀಯರಿಗೂ ಇರುವ ಅಂತರವನ್ನು ಅಳೆಯುತ್ತಲೇ, ಶಿಕ್ಷಣ ಕ್ಷೇತ್ರದ ಆಳವಾದ ಅರಿವು ಇಲ್ಲದ ಅಧಿಕಾರಿಗಳೇ ಶೈಕ್ಷಣಿಕ ಭವಿಷ್ಯದ ನಿರ್ಧಾರಕರಾದರು ಎಂದು ರಾಜಕೀಯವನ್ನು ದೂಷಿಸುತ್ತಾರೆ. "ಹಿಂದಿನ ಶಿಕ್ಷಕರನ್ನು ವಿದ್ಯಾರ್ಥಿಗಳು ತಮ್ಮ ಕೊನೆಯುಸಿರು ಎಳೆಯುವ ತನಕ ಗೌರವದಿಂದ, ಕೃತಜ್ಞತಾ ಭಾವದಿಂದ ನೆನೆಯುತ್ತಾರೆ. ಆದರೆ ಇಂದು ಗುರುವೃಂದದ ಕಿವಿಮಾತನ್ನು ಯಾರೂ ಕೇಳದ್ದರಿಂದ ಅವರ ಧ್ವನಿ ಕ್ಷೀಣವಾಗಿ ಕ್ರಮೇಣ ಮಾಯವಾಗಿದೆ. ಅಷ್ಟೇ ಅಲ್ಲದೆ ಧನ ಸಹಾಯ, ವಿದೇಶ ಪ್ರಯಾಣ, ಮುಂಬಡ್ತಿ ಮುಂತಾದುವುಗಳನ್ನು ಸುಲಭವಾಗಿ ಗಿಟ್ಟಿಸಬಹುದೆಂಬ ಲೆಕ್ಕಾಚಾರದಲ್ಲಿ ತೊಡಗಿ ರಾಜಕಾರಣಿಯಾಗಬಯಸುವ ಶಿಕ್ಷಕರಿಂದ ವಿದ್ಯಾರ್ಥಿಗಳ ನಿರೀಕ್ಷೆ ತೀರ ಅಲ್ಪವಾಗಿರುತ್ತದೆ. ಇಂತಹ ಶಿಕ್ಷಕರ, ವಿದ್ಯಾರ್ಥಿಗಳ ಸಂಪೂರ್ಣ ಲಾಭವನ್ನು ಪಡೆದುಕೊಳ್ಳಲು ರಾಜಕಾರಣಿಗಳು ಎಂದಿಗೂ ಹಿಂಜರಿಯುವುದಿಲ್ಲ. ಇಂದು ಶಿಕ್ಷಣ ಸಂಸ್ಥೆಗಳು ಬಂಡವಾಳವಿಲ್ಲದೇ ಧನ ಸಂಪಾದನೆಯ ಸುಲಭೋಪಾಯ

ಅಥವಾ ವೃತ್ತಿಯಾಗಿ ಪರಿಣಮಿಸಿರುವುದು ತೀರ ಶೋಚನೀಯ. ಪಾಲಕರು ಶಿಕ್ಷಣ ಹಾಗೂ ಆಡಳಿತ ವರ್ಗದವರಿಂದ ತಲೆ ಬೋಳಿಸಿಕೊಂಡು ಮಕ್ಕಳನ್ನು ಶಾಲೆ-ಕಾಲೇಜುಗಳಿಗೆ ಸೇರಿಸಿ ಯಾಂತ್ರಿಕ ಬದುಕಿನ ದಾರಿ ತೋರಿದರೂ ಕೂಡ ಆ ಮಗುವಿಗೆ ರುಚಿಸುವುದು ಹತ್ತು ಪೈಸೆಯ ಸೀಬೆ ಹಣ್ಣು-ಕಡಲೇಕಾಯಿಗಳೇ! ಸಮಾಜದಲ್ಲಿನ ತಾತ್ಕಾಲಿಕ ಆಕರ್ಷಣೆಗಳಿಗೆ ಮಾರು ಹೋಗುವ ವಿದ್ಯಾರ್ಥಿಗಳು ಪಾಲಕರ ಹಣವನ್ನು ದೋಚುತ್ತಾರೆ. ಇದಕ್ಕೆ ಪಾಲಕರ-ಶಿಕ್ಷಕರ ಪೋಷಣೆ ಕೂಡ ದೊರೆಯುತ್ತಿರುವುದು ದೌರ್ಭಾಗ್ಯವಷ್ಟೆ! ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ವಿದ್ಯಾರ್ಥಿಗಳು ವಾಮಮಾರ್ಗವನ್ನು ಅನುಸರಿಸುತ್ತಿರುವುದು, ಇದಕ್ಕೆ ತಕ್ಕಂತೆ ಶಿಕ್ಷಕ-ಪಾಲಕರ ಆಶೀರ್ವಾದವೂ ಇರುವುದು ದುಷ್ಕೃತ್ಯಗಳಿಗೆ ದಾರಿ ಮಾಡಿಕೊಟ್ಟಂತಾಗುತ್ತದೆ. ಸಮಾಜದಲ್ಲಿ ಕಳಪೆತನ ಹರಡದಂತೆ ಮಾಡಲು ಯಾವ ಯತ್ನವೂ ನಡೆಯಲಿಲ್ಲ ಎಂಬುದು ಮತ್ತಷ್ಟು ಶೋಚನೀಯ" ಎಂದು ಲೇಖಕರು ಅವಕಾಶವಂಚಿತರನ್ನು ನೆನದು ಮರುಗುತ್ತಾರೆ.

ಸಫಲ ಪ್ರಯೋಗಗಳನ್ನು ಮಾಡದೆ ಸಂಶೋಧನೆ ಕುರಿತು ವರದಿ ಮಾಡುವುದರಲ್ಲಿಯೇ ಭಾರತೀಯ ವಿಜ್ಞಾನಿಗಳು ಕಾಲ ಕಳೆಯುತ್ತಾರೆ ಎಂದು ದೂಷಿಸುವ ಲೇಖಕರು, ಕೆಲವೊಮ್ಮೆ ಪ್ರಮಾದಕ್ಕೆ ಆಸ್ಪದವಾಗುವಂತಹ ಸಂದರ್ಭಗಳೂ ಈ ವಿಜ್ಞಾನಿಗಳಿಂದ ಒದಗಿರುವುದನ್ನು ನೆನೆಯುತ್ತಾರೆ. ರಾಜಕಾರಣಿಗಳ ಮನವೊಲಿಸುತ್ತಾ, ಅಧಿಕಾರಿಗಳ ಕೃಪೆಗೆ ಪಾತ್ರರಾಗುತ್ತಾ, ವಿದೇಶ ಸಂಚಾರದಲ್ಲೇ ಕಾಲ ಕಳೆಯುವ ಅನೇಕ ವಿಜ್ಞಾನಿಗಳು ಭಾರತದಲ್ಲಿದ್ದಾರೆ. ಲಕ್ಷಾಂತರ ರೂಪಾಯಿ ಪೋಲಾದರೂ ಅವರ ಸಂಶೋಧನೆ ಮಾತ್ರ ಕಾಗದದಿಂದ ಕೆಳಗಿಳಿಯುವುದೇ ಇಲ್ಲ. ವಿಜ್ಞಾನಿ ಎನಿಸಿಕೊಂಡವನಿಗೆ ಸಾಮಾಜಿಕ ಕಳಕಳಿಯೂ ಇಲ್ಲದಂತಾಗಿದೆ. ಅವರ ತೀರ್ಮಾನಗಳೆಲ್ಲ ನಗೆಹನಿ ಎನಿಸುವಷ್ಟು ರೋಚಕವಾಗಿರುತ್ತವೆ. ಉದಾಹರಣೆಗೆ, ಇಡ್ಲಿಗಳು ಹೃದ್ರೋಗವನ್ನು ತಡೆಗಟ್ಟುತ್ತವೆ. ಇದೇ ಸಮಯದಲ್ಲಿ ಪ್ರನಾಳ ಶಿಶುಗಳ ಜನನದ ಬಗೆಗೆ ವದಂತಿಗಳು ಹಬ್ಬುತ್ತಿವೆ. ಗೊಡ್ಡು ನಂಬಿಕೆಗಳಿಂದ ಹೊರಬರಲಾರದೆ ವಿಜ್ಞಾನಿಗಳು ರಾಹುಕಾಲಕ್ಕೆ ಹೆದರಿ ಅಂತರಿಕ್ಷ ಯಾನವನ್ನೇ ಮುಂದೂಡುತ್ತಾರೆ. ಪರಿಶ್ರಮವಿಲ್ಲದೆ ಮುಂಬಡ್ತಿ ಪಡೆಯಲು ಸತ್ಯನಾರಾಯಣ ವ್ರತ ಆಚರಿಸುವ 'ಇವರೂ ನಮ್ಮ ವಿಜ್ಞಾನಿಗಳೇ' ಅಲ್ಲವೇ?

ಗೆಳೆಯನ ಊರು, ಮಾವಿನಕುರ್ವೆ, ಇಲ್ಲಿನ ನೆರೆಯ ಊರಾದ ಕುಮಟೆಯ ಹೆಣ್ಣು ಮಗಳನ್ನು ಮದುವೆಯಾದ ಲೇಖಕರು ಪತ್ನಿಯೊಡನೆ 'ಮಾವನೂರಲ್ಲದ ಮಾವಿನಕುರ್ವೆ'ಗೆ ಹೋಗಿದ್ದ ದಿನಗಳ ಬಗೆಗೆ ಬರೆಯುತ್ತಾರೆ. ಹೊನ್ನಾವರದ ಓಮ್ಯಾಬಂದರಿನಿಂದ ಹಾಯಿದೋಣಿಯ ಮೂಲಕ ಬರುವ ಅತಿಥಿಗಳನ್ನು ಸ್ವಾಗತಿಸಲು ಇಡೀ ಕುಟುಂಬ ನದಿದಂಡೆಯಲ್ಲಿ ಸೇರಿ ತೋರಿದ್ದ ಅತ್ಯಾದರದ ಆತ್ಮೀಯತೆಯನ್ನು ಎಂದಿಗೂ ಮರೆಯಲಾರರೇನೋ! ಅಲ್ಲಿಯ ಶಿಯಾಳ (ಎಳನೀರು), ಕುರ್ವೆಯ ಬೆಲ್ಲ, ಪರಿಸರ, ಮಾವಿನಕುರ್ವೆಯ ಬೀಗಗಳನ್ನು ಲೇಖಕರು ನೆನೆಯುತ್ತಾರೆ. ವೈದ್ಯಕೀಯ ಸವಲತ್ತುಗಳೇ ಇಲ್ಲದ ಕಡೆ, ಜಾತ್ರೆಯ ಸಂದರ್ಭಗಳಲ್ಲಿ ಜನಬಲಕ್ಕೆ ಯಾವ ಕೊರತೆಯೂ ಇರುವುದಿಲ್ಲ ಎನ್ನುವ ಲೇಖಕರು ಸೌಂದರ್ಯವನ್ನು ಸಾಕಷ್ಟು ಸವಿದಿದ್ದಾರೆ.

ಇತಿಹಾಸಾಸಕ್ತರಾಗಿ ೧೯೮೨ರ ಬೇಸಿಗೆಯಲ್ಲಿ ಮೊಟ್ಟಮೊದಲ ಬಾರಿಗೆ ಮುರ್ಡೇಶ್ವರಕ್ಕೆ ಭೇಟಿಯಿತ್ತ ಲೇಖಕರು ಕಾಲುನಡಿಗೆಯಿಂದ ದೇವಾಲಯ ತಲುಪಿದ್ದನ್ನು ನೆನಪಿಸಿಕೊಳ್ಳುತ್ತಾರೆ. ಮತ್ತೊಮ್ಮೆ ೧೯೮೯ರಲ್ಲಿ 'ಮುಕ್ಕಣ್ಣನ ಮುರ್ಡೇಶ್ವರ'ವನ್ನು ನೋಡಬಂದಾಗ ಆಗಿದ್ದ ಪರಿವರ್ತನೆಯನ್ನು ಕಂಡು ಕುತೂಹಲವನ್ನು ವ್ಯಕ್ತಪಡಿಸುತ್ತಾರೆ. ಮುರ್ಡೇಶ್ವರದ ಇತಿಹಾಸ ಹಾಗೂ ಜಾನಪದಗಳ ವಿವರಗಳನ್ನು ನೀಡುತ್ತಾರೆ. ಹಣದ ಹೊಳೆ ಹರಿಸಬಲ್ಲ ಪ್ರವಾಸಿಗರನ್ನು ಲಕ್ಷ್ಯದಲ್ಲಿಟ್ಟುಕೊಂಡು ಮುರ್ಡೇಶ್ವರವು ಬದಲಾಗಿದೆ. ಪುರಾತನ ದೇವಾಲಯಗಳ ಅವಶೇಷಗಳನ್ನು ಕಾಣಬಹುದಾದ ಇಲ್ಲಿ ಪುನರುತ್ಥಾನಗೊಂಡ ದೇವಾಲಯವನ್ನು, ವಿವೇಕಾನಂದ ಸ್ಮಾರಕವನ್ನೂ ಹಾಗೂ ಕೆಲವು ಗುಡಿಗಳನ್ನು ನೋಡಬಹುದಾಗಿದೆ ಎಂದು ಲೇಖಕರು ತಿಳಿಸುತ್ತಾರೆ.

ನಿಸರ್ಗ ಸೌಂದರ್ಯದಲ್ಲಿ ಅದ್ವಿತೀಯ ಎನಿಸಿಕೊಂಡಿರುವ 'ಹೊನ್ನಾವರದ ಹಿರಿಮೆ'ಯ ಬಗೆಗೆ ಬರೆಯುತ್ತಾ ಲೇಖಕರು ಎರಡು ಸಹಸ್ರ ವರ್ಷಗಳ ಇತಿಹಾಸವಿರುವ ನಗರವೆಂದು ತಿಳಿಸುತ್ತಾರೆ. ಹಿನಾವ್ರ್, ಮನೋರ್, ಹೊನೋರ್, ಒನೇರ್ ಹಾಗೂ ಸುವರ್ಣಪುರ ಎಂಬ ಹೆಸರುಗಳಿಂದ ಕರೆಸಿಕೊಂಡಿರುವ ಹೊನ್ನಾವರದಲ್ಲಿ ಆದ ಯುದ್ಧಗಳನ್ನೂ, ಹಾನಿಯನ್ನೂ, ತದನಂತರದ ಬೆಳವಣಿಗೆಗಳನ್ನೂ ತಿಳಿಸುತ್ತಾ, ಹೊನ್ನಾವರದ ಮಹತ್ವ ಕುಗ್ಗಿದ್ದು ಏಕೆಂದೂ ತಿಳಿಸುತ್ತಾರೆ. ಪ್ರಾಥಮಿಕ ಸವಲತ್ತುಗಳೂ ಇಲ್ಲದ ಹೊನ್ನಾವರದ ಐತಿಹಾಸಿಕ ಮಹತ್ವವನ್ನು ಹೇಳುತ್ತಲೇ, ಕೋಟ್ಯಂತರ ರೂಪಾಯಿಗಳ ಸರಕು ಸುಟ್ಟುಹೋದುದನ್ನು ನೆನೆದು ದುಃಖಿಸುತ್ತಾರೆ.

ಒಂದು ಉತ್ತಮ ಕೃತಿಯಲ್ಲಿ ಏನೆಲ್ಲವನ್ನೂ ಓದಬಹುದೋ ಅದಕ್ಕಿಂತಲೂ ಮಿಗಿಲಾಗಿ ಚಿತ್ರಗಳನ್ನು ಕಣ್ಣೆದುರಲ್ಲಿ ಕಟ್ಟುವಂತೆ ಹೇಳುವುದೂ ಕಲೆಯೇ. ಕೃಷ್ಣಾನಂದ ಕಾಮತರಿಗೆ ಅಂತಹ ಕಲೆ ಸಿದ್ಧಿಸಿತ್ತು ಎಂದರೆ ತಪ್ಪೇನಿಲ್ಲ. ರಾಜ್ಯದ, ರಾಷ್ಟ್ರದ ಪ್ರತಿನಿಧಿಯೇ ಎನಿಸುವಷ್ಟರ ಮಟ್ಟಿಗೆ ಅಮೇರಿಕೆಯಲ್ಲಿ ಭಾರತೀಯತೆಯನ್ನು, ಕನ್ನಡತನವನ್ನು ಪ್ರದರ್ಶಿಸುವುದು ಮಾತ್ರವಲ್ಲದೆ, ವಿದೇಶಿಯರಿಗೂ ನಮ್ಮ ಸಂಸ್ಕೃತಿಯ ತುಣುಕುಗಳನ್ನು ಅಭ್ಯಸಿಸುವಂತೆ ಮಾಡಿರುವ ಕೃಷ್ಣಾನಂದ ಕಾಮತರು ಅಂತಹ ಕೆಲವು ಅನುಭವಗಳನ್ನು 'ನಾನೂ ಅಮೇರಿಕೆಗೆ ಹೋಗಿದ್ದೆ' ಕೃತಿಯಲ್ಲಿ ಅತಿ ಸೊಗಸಾಗಿ ತಿಳಿಸುತ್ತಾರೆ. ಅಮೇರಿಕನ್ನರಿಗೆ ಕರ್ನಾಟಕದ ಕೆಲವು ಅಡುಗೆಗಳನ್ನು ಮಾಡಿ ಬಡಿಸುವುದು, ಹೇಳಿಕೊಡುವುದು ಕಾಮತರ ಹವ್ಯಾಸವಾಗಿದ್ದಿರಬಹುದು! ಅವರ ರಚನಾಶೈಲಿಗೆ ಕೂಡ ಈ ಕೃತಿ ಉತ್ತಮ ಉದಾಹರಣೆಯಾಗಿದೆ.

ದುರದೃಷ್ಟವಶಾತ್ ಡಾ॥ ಕೃಷ್ಣಾನಂದ ಕಾಮತರು ನಮ್ಮನ್ನೆಲ್ಲಾ ಅಗಲಿದ್ದಾರೆ. ಅವರ ನೆನಪುಗಳು, ಅನುಭವಗಳು, ಸಾಧನೆಗಳು ಮಾತ್ರ ಅಚ್ಚಳಿಯವು. ಹಿರಿದಾದ ಸಾಧನೆ ತೋರಿದ ಧೀಮಂತ ಚೇತನ ಕೃಷ್ಣಾನಂದ ಕಾಮತರ ಕಾರ್ಯವನ್ನು ಮುಂದುವರೆಸಿಕೊಂಡು ಹೋಗುವ ಯುವಶಕ್ತಿರೂಪುಗೊಳ್ಳಲಿ ಎಂದು ಹಾರೈಸುವುದು ಸೂಕ್ತ.

ಅಣು ಭೂತ ಭೂಗೋಲ ತಾರಾಂಬರಾದಿಗಳ ।<br>
ನಣೆಮಾಡಿ ಬಿಗಿದು ನಸು ಸಡಿಲವನುಮಿರಿಸಿ ॥<br>
ಕುಣಿಸುತಿರುವನು ತನ್ನ ಕೃತಿಕಂತುಕವನದರೊ ।<br>
ಳಣಗಿದ್ದು ಪರಬೊಮ್ಮ – ಮಂಕುತಿಮ್ಮ ॥

❑



# ಡಾ|| ಕೃಷ್ಣಾನಂದ ಕಾಮತರ 'ಮರುಪಯಣ'

**ಡಾ|| ರಮಾಕಾಂತ ಜೋಶಿ**

ಡಾ|| ಕೃಷ್ಣಾನಂದ ಕಾಮತರು ೨೦೦೨ರ ಫೆಬ್ರವರಿ ೨೦ ರಂದು ರಾತ್ರಿ ಅನಿರೀಕ್ಷಿತವಾಗಿ ಯಾರಿಗೂ ಯಾವುದೇ ರೀತಿಯ ಮುನ್ಸೂಚನೆಯನ್ನೂ ನೀಡದೆ ಏಕಾಏಕಿ ಈ ಜಗತ್ತನ್ನು ತ್ಯಜಿಸಿದ ಸುದ್ದಿ ೨೧ರ ಬೆಳಿಗ್ಗೆ ತಿಳಿದಾಗ ನಂಬಲು ಸಾಧ್ಯವಾಗಲಿಲ್ಲ. ನಂಬದೆ ಇರುವಂತೆಯೂ ಇರಲಿಲ್ಲ. ತಕ್ಷಣದ ಪ್ರತಿಕ್ರಿಯೆಯೆಂದರೆ ಜೀವನದ ನಶ್ವರತೆಯ ಪ್ರತ್ಯಕ್ಷ ಪ್ರಮಾಣ. ಆ ಆಘಾತದಿಂದ ಚೇತರಿಸಿಕೊಂಡು ಆತ್ಮಾವಲೋಕನ ಮಾಡಿಕೊಂಡಾಗ, ಅವರ ಜೀವನದ ಪುಟಗಳನ್ನು ಹೊರಳಿ ನೋಡಿದಾಗ, ನನ್ನ ಮೇಲೆ ಅವರ ಜೀವನ ದೃಷ್ಟಿಯಿಂದಾದ ಪ್ರಭಾವಗಳನ್ನು ಹಾಗೂ ಅವರ ಜೀವನ ದೃಷ್ಟಿಕೋನದ ವಿಚಾರಗಳನ್ನು ನನ್ನಲ್ಲಿಯೇ ಉಳಿಸಿಕೊಳ್ಳದೇ, ಇತರರೊಂದಿಗೆ ಹಂಚಿಕೊಂಡು ಋಣಪರಿಹಾರ ಮಾಡಿಕೊಳ್ಳುವುದೇ ಸೂಕ್ತ ಎನಿಸಿತು. ಈ ಮಾತುಗಳನ್ನು, ನನಗೆ ತಿಳಿದ ವಿಷಯಗಳನ್ನು ಬರೆಯದೆ ಇದ್ದರೆ ಅವರಿಗೇನೂ ನಷ್ಟವಿಲ್ಲ. ನಷ್ಟವಾಗುವುದು ನಮಗೆ ಕನ್ನಡಿಗರಿಗೆ, ಸಾರಸ್ವತ ಲೋಕಕ್ಕೆ.

ಕೃಷ್ಣಾನಂದ ಕಾಮತರು ಹೊನ್ನಾವರದಿಂದ ಬಂದವರಾದರೂ ಧಾರವಾಡದ ನಂಟು ಅವರಿಗೆ ಮನೋಹರ ಗ್ರಂಥಮಾಲೆಯನ್ನು ಪರಿಚಯಿಸಿತು. ಅವರ ಧರ್ಮಪತ್ನಿಯಾದ ಶ್ರೀಮತಿ. ಜ್ಯೋತ್ಸ್ನಾ ಕಾಮತರು ಧಾರವಾಡದಲ್ಲಿ ಬೆಳೆದವರು. ಕರ್ನಾಟಕ ಹಾಯ್ ಸ್ಕೂಲಿನ ಎದುರಿಗಿರುವ ಶಾಸ್ತ್ರಿ ಚಾಳಿನಲ್ಲಿದ್ದ ಶ್ರೀ ಬುರ್ಡೆ ಮಾಸ್ತರರ ಮಗಳು – ಜ್ಯೋತ್ಸ್ನಾ. ಜ್ಯೋತ್ಸ್ನಾ – ಕೃಷ್ಣಾನಂದರ ಮದುವೆ ಕೂಡ ಅತ್ಯಂತ ವಿಶಿಷ್ಟವಾದ ರೀತಿಯಲ್ಲೇ ಹೊಂದಾಣಿಕೆಯಾದದ್ದು. ಕೃಷ್ಣಾನಂದರು ಅಮೆರಿಕೆಯಲ್ಲಿ ಕೀಟಶಾಸ್ತ್ರದಲ್ಲಿ ಉನ್ನತ ಪದವಿ ಪಡೆದು ಭಾರತಕ್ಕೆ ಮರಳಿದಾಗ ಅವರಿಗೆ ಸ್ವಾಗತ ನೀಡಿದ್ದು – ಯೋಗ್ಯತೆಗೆ ತಕ್ಕ ಕೆಲಸವಿಲ್ಲದ್ದಕ್ಕೆ ಸಿಗುವ ಪೂಲ್ ಆಫೀಸರ ನೌಕರಿ. ಆದರೆ ಕೃಷ್ಣಾನಂದರದು ಎಂದೂ ತಕರಾರು ಮಾಡುವ ಸ್ವಭಾವವಲ್ಲ. 'ಬಂದದ್ದೆಲ್ಲ ಬರಲಿ, ಗೋವಿಂದನ ದಯವೊಂದಿರಲಿ' ಎಂಬಂತೆ ಸಿಕ್ಕಿದ್ದನ್ನು ಮನಃಪೂರ್ವಕವಾಗಿ ನಿಷ್ಠಾಪೂರ್ವಕವಾಗಿ ಮಾಡುವ ಸ್ವಭಾವದವರು. ಎಲ್ಲೆಲ್ಲಿಯೋ ಕೆಲಸ ಮಾಡುತ್ತ ತಮ್ಮ ಪ್ರಾರಂಭದ ದಾಂಪತ್ಯ ಜೀವನವನ್ನು ಕೆಲವು ವರ್ಷಗಳ ಕಾಲ ಬೇರೆ ಬೇರೆಯಾಗಿ ಇದ್ದು ಜೀವಿಸಿದವರು. ಶ್ರೀಮತಿ. ಜ್ಯೋತ್ಸ್ನಾ ಕಾಮತರು ಜಿ. ಬಿ. ಜೋಶಿಯವರಿಗೆ ಒಂದು ಪತ್ರ ಬರೆದು ಕೃಷ್ಣಾನಂದರ ಅಮೆರಿಕೆಯ ಪ್ರವಾಸ ಕಥನವನ್ನು ಗ್ರಂಥಮಾಲೆಯಿಂದ ಪ್ರಕಟಿಸಲು ಸಾಧ್ಯವೇ ಎಂದು ಕೇಳಿದರು. ನಂತರ ಹಸ್ತಪ್ರತಿ ತಯಾರಿಸಿ ಕಳಿಸಿದರು. ಇದು ಬಹುಶಃ ೧೯೬೭ರ ಪ್ರಾರಂಭದ ತಿಂಗಳು. ಕೃಷ್ಣಾನಂದರ ಮೊದಲನೆಯ ಹಾಗೂ ಎರಡನೆಯ ಪತ್ರ ಒಂದು ವಾರದ ಅಂತರದಲ್ಲೇ ಬಂದವು. ಅವರ ಹಾಗೂ ಜಿ. ಬಿ. ಯವರ ಪತ್ರವ್ಯವಹಾರದ ಮೊದಲ ಪತ್ರಗಳನ್ನು ಓದುಗರ ಕಣ್ಣಿಗೆ ಹಾಕುವುದು ಅಗತ್ಯ.

ಕೃಷ್ಣಾನಂದ ಕಾಮತರ ಎರಡನೆಯ ಪತ್ರ : ೨ ಮಾರ್ಚ್ ೧೯೬೭

ಸನ್ಮಾನ್ಯ ಜ್ಯೋಶಿಯವರೆ,

ಕಳೆದ ಸೋಮವಾರ ನಿಮಗೆಂದು ಪತ್ರ ಬರೆದಿದ್ದೆ. ಇಷ್ಟರಲ್ಲಿ ಅದು ತಮ್ಮ ಕೈ ಸೇರಿರಬೇಕೆಂಬ ಸಂತಸದಲ್ಲಿ ಇದ್ದೆ. ಆದರೆ ಇಂದು ಆಕಸ್ಮಿಕವಾಗಿ, ಆ ಪತ್ರ ಅಂಚೆಯನ್ನು ಸೇರಲೇ ಇಲ್ಲವೆಂದು ತಿಳಿದು ಬಹಳ ಕಸಿವಿಸಿಯಾಯಿತು. ಅಂತೆಯೇ ಇನ್ನೊಂದು ಪತ್ರ ಬರೆಯುತ್ತಿದ್ದೇನೆ.

ಶ್ರೀಮತಿ ಕಾಮತರ ಮುಖಾಂತರ ತಮ್ಮ ಪರಿಚಯ ಆತ್ಮೀಯತೆ, ವಿಶ್ವಾಸಗಳು ಬೆಳೆದು ಬಂದರೂ, ನಾನು ನಿಮಗೊಂದು ಪತ್ರ ಬರೆಯುವ ಗೋಜಿಗೆ ಹೋಗಿರಲಿಲ್ಲ. ಹೇಳಿಕೇಳಿ ನಾನೊಬ್ಬ ವಿಜ್ಞಾನ ವಿದ್ಯಾರ್ಥಿ. ನನಗೂ ಸಾಹಿತ್ಯಕ್ಕೂ ಬಲುದೂರ ಎಂದು ತಿಳಿದಿದ್ದೆ. ಆದರೆ ಜ್ಯೋತ್ಸ್ನಾ ಕಾಮತರು ಮೇಲಿಂದ ಮೇಲೆ ನನ್ನಲ್ಲಿ ಸಾಹಿತ್ಯ ಗಿಡ ಬೆಳೆಯಲು ಯೋಗ್ಯವಾದ ಸೂಸುಮಣ್ಣು ಇದೆಯೆಂದು ಹೇಳುತ್ತಲೇ ಬಂದರು. ಅಂತೆಯೇ ಎರಡು ಮೂರು ಲೇಖನ ಬರೆಯಲು ಯತ್ನಿಸಿ ಬರೆದು ಮುಗಿಸಿದೆ. ಅವು ಅದಾಗಲೇ ಪ್ರಸಿದ್ಧಿಯಾದವು. ಲೇಖನಗಳು ಪ್ರಕಟವಾದ ಹೆಮ್ಮೆ ಶ್ರೀಮತಿ ಕಾಮತರ ಹುರುಪು, ತಾವು ನೀಡಿದ ಆದರ, ಆತ್ಮೀಯತೆ, ವಿಶ್ವಾಸಗಳು

ಇಂದು ಪುಸ್ತಕರೂಪ ತಾಳಿ ನಿಂತಿದೆ. ಪುಸ್ತಕ ಒಂದನ್ನು ಬರೆಯಬೇಕೆಂಬ ಸಂಕಲ್ಪ ಮಾಡಿಕೊಂಡರೂ, ಬರೆಯುವದು ಸಂಕಲ್ಪದಷ್ಟು ಸುಲಭವಾಗಿ ಬರಲಿಲ್ಲ. ಇದಕ್ಕೆ ಮೂಲಕಾರಣವೆಂದರೆ, ಅತೃಪ್ತತೆ. ಬರೆದದ್ದನ್ನೇ ತಿದ್ದಿ ಬರೆದರೂ, ಹೇಳುವುದನ್ನೇ ತಿದ್ದಿ ಹೇಳಿದರೂ ಯಾಕೊ ಮನಸ್ಸಿಗೆ ಬಾರದು. ಅಂತೆಯೇ ವಾರಗಟ್ಟಲೆ ತಿಂಗಳಗಟ್ಟಲೆ ವಿಚಾರಿಸಿ ಕೆಲವು ಅಧ್ಯಾಯಗಳನ್ನು ಬರೆಯಬೇಕಾಯಿತು. ಕಳೆದ ೭-೮ ತಿಂಗಳಲ್ಲಿ ದೊರೆತ ವಿರಾಮ-ವಿಶ್ರಾಂತಿಗಳೆಲ್ಲ ಪುಸ್ತಕಕ್ಕೆ ಮೀಸಲಾದವು ಈಗಲಾದರೂ ಕಳಿಸಿದ ಹಸ್ತಪ್ರತಿ ಎಲ್ಲ ದೃಷ್ಟಿಯಿಂದ ಉತ್ಕೃಷ್ಟ ಎಂದು ಹೇಳಲಾಗದು. ಈ ಹಸ್ತಪ್ರತಿಯ ಮೇಲೆ ತಮ್ಮ ಪಳಗಿದಕೈ ತಾಗಿದಾಗಲೇ ಓದುಗರ ಮನಸ್ಸಿಗೆ ಒಪ್ಪುವ ಪುಸ್ತಕವಾದೀತು.

ಇಷ್ಟರಲ್ಲಿ, ರಜಿಸ್ಟರ ಪಾರ್ಸಲ್ ಮಾಡಿ ಕಳಿಸಿದ ಹಸ್ತಪ್ರತಿ ತಮ್ಮ ಕೈ ಸೇರಿರಬಹುದು. ಅದನ್ನು ಕೂಲಂಕಶವಾಗಿ ಓದಿ ಅದರ ಬಗ್ಗೆ ತಮ್ಮ ವೈಯಕ್ತಿಕ ವಿಮರ್ಶೆಯನ್ನು ಬರೆಯುವಿರಾ? ತಮ್ಮ ಅಭಿಪ್ರಾಯ ಆತ್ಮೀಯದವರದ್ದಾಗಲಿ. ಇದಕ್ಕೂ, ಪುಸ್ತಕ ಪ್ರಕಟನೆ ಮಾಡುವ ವ್ಯಾಪಾರ ದೃಷ್ಟಿಗೂ ಯಾವ ಸಂಬಂಧವಿರದಿರಲಿ. ಪುಸ್ತಕ ಪ್ರಕಟಿಸುವದು ಬಿಡುವದು ತಮ್ಮ ವ್ಯಾಪಾರವದು. ಆದರೆ ಆತ್ಮೀಯರ ಅಭಿಪ್ರಾಯವನ್ನು ತಿಳಿಸಬಹುದಲ್ಲವೇ? ಇದು ನನ್ನ ಮೊದಲ ಕೃತಿಯಾದ್ದರಿಂದ ನಿಮ್ಮ ಅಭಿಪ್ರಾಯವನ್ನು ತಿಳಿಯಲು ಉತ್ಸುಕವಾಗಿದ್ದೇನೆ. ತಮ್ಮ ಮನಸ್ಸಿಗೆ ಬಂದರೆ, ಅದನ್ನು ಶ್ರೀಮಾನ್ ಕುರ್ತುಕೋಟಿಯವರಿಗೆ ಕಳಿಸಿಕೊಡಿ. ಅವರೂ ಒಪ್ಪಿದರೆ ಮುಂದಿನ ವಿಚಾರ. ಪುಸ್ತಕದಲ್ಲಿ ಸಣ್ಣ ದೊಡ್ಡ ದೋಷಗಳಿದ್ದರೆ ನೀವೇ ಸುಧಾರಿಸಿಕೊಳ್ಳಿ. ಬಹಳೊಂದು ಬದಲಿಸಬೇಕೆಂದಿದ್ದರೆ ನನಗೆ ಕಳಿಸಿಕೊಡಿ ತಿದ್ದಿ ವಾಪಸು ಕಳಿಸಿಕೊಡುತ್ತೇನೆ.

ಪುಸ್ತಕವನ್ನು ಮೂರು ಭಾಗದಲ್ಲಿ ವಿಂಗಡಿಸಿದ್ದೇನೆ. ಅಮೆರಿಕನ್ ಜೀವನವನ್ನು ಒಂದು ಪುಸ್ತಕದಲ್ಲಿಯಾಗಲಿ ನೂರು ಪುಸ್ತಕಗಳಲ್ಲಿಯಾಗಲಿ ಬರೆದು ಮುಗಿಸುವದು ಅಸಾಧ್ಯವಾದ ಮಾತೆಂದು ನನಗೆ ಗೊತ್ತು. ಆದರೂ ಒಂದೇ ಪುಸ್ತಕದಲ್ಲಿ ಅಮೇರಿಕನ್‌ರ ವೈವಿಧ್ಯವನ್ನು ಚಿತ್ರಿಸಲು ಪ್ರಯತ್ನಿಸಿದ್ದೇನೆ. ಮೊದಲ ಭಾಗದಲ್ಲಿ, ನಾನು ಆ ದೇಶಕ್ಕೆ ಹೋದಕೂಡಲೇ ನನಗೆ ಬಂದ ಅನುಭವಗಳು, ಬಂದ ವಿಚಾರಗಳು, ಎದುರಿಸಬೇಕಾದ ಹಾಸ್ಯಮಯ ಸನ್ನಿವೇಶಗಳನ್ನು ಸೇರಿಸಿದ್ದೇನೆ. ಎರಡನೇ ಭಾಗದಲ್ಲಿ ಅವರ ಜನ ಜೀವನ, ಸಂಸ್ಕೃತಿ, ಆಚಾರ, ವಿಚಾರಗಳ ಬಗ್ಗೆ ಅಮೆರಿಕನ್‌ರ ಬಾಯಿಂದಲೇ ಸಂಭಾಷಣೆಯ ಮೂಲಕ ಹೊರಗೆಳೆಯಲು ಯತ್ನಿಸಿದ್ದೇನೆ. ಮೂರನೇ ಭಾಗದಲ್ಲಿ ಅವರ ಸಮಸ್ಯೆ, ಅದರ ಉದಯ, ವ್ಯಾಪ್ತಿ ಮತ್ತು ಸಾಧ್ಯವಾದ ಪರಿಹಾರಗಳನ್ನು ಸೂಚಿಸಿದ್ದೇನೆ. ಹಸ್ತಪ್ರತಿ ವೈವಿಧ್ಯತೆಯಿಂದ ತುಂಬಿದ್ದರಿಂದ, ಅದು ವಿದ್ಯಾರ್ಥಿಗಳಿಂದ ವಿಮರ್ಶಕರವರೆಗೆ ಓದುವಂತಾಗಬಹುದುದೆಂದು ನಂಬಿದ್ದೇನೆ. ಪುಸ್ತಕವು ಸ್ವಾರಸ್ಯಮಯವಾಗಲಿ ಎಂದು ಸಾಧ್ಯವಿದ್ದಲ್ಲಿ ಭಾವಚಿತ್ರಗಳನ್ನು, ರೇಖಾಚಿತ್ರಗಳನ್ನು ಸೇರಿಸಿದ್ದೇನೆ. ಅಮೆರಿಕನ್ ಜನಜೀವನದ ಬಗ್ಗೆ ನನ್ನಲ್ಲಿ ಇನ್ನೂ ನೂರಾರು ಭಾವಚಿತ್ರಗಳಿವೆ. ಪುಸ್ತಕದಲ್ಲಿ ಇನ್ನೂ ಬೇಕೆಂದೆನಿಸಿದರೆ ಕಳಿಸಿಕೊಡುತ್ತೇನೆ. ರೇಖಾಚಿತ್ರಗಳನ್ನು ಇನ್ನೂ ಉತ್ತಮವಾಗಿ ತೆಗೆದು ಕಳಿಸಬೇಕೆಂದಿದ್ದೆ ಆದರೆ ವೇಳೆಯ ಅಭಾವದ ಮೂಲಕ ಆ ದಿನ ಬರಲೇ ಇಲ್ಲ. ಪುಸ್ತಕ ಪ್ರಕಟಣೆಗಾಗಿ ತೆಗೆದುಕೊಂಡರೆ ರೇಖಾಚಿತ್ರಗಳು ಮನಸ್ಸಿಗೆ ಬಂದರೆ, ಕಾಗದದ ಮೇಲೆ ಇಳಿಸಿದ ವಿಚಾರಗಳನ್ನು, ತಿರುಗಿ ಉತ್ತಮ ರೇಖಾಚಿತ್ರಗಳಿಗೆ ಪರಿವರ್ತಿಸಿ ಕಳಿಸಿಕೊಡುತ್ತೇನೆ. ನನಗೆ ಸಾಧ್ಯವಾಗದಿದ್ದರೆ, ಯಾವದಾದರೂ ಕಲಾಕಾರನ ಸಹಾಯ ತೆಗೆದುಕೊಳ್ಳುತ್ತೇನೆ. ನೀವೇ ಮಾಡಿಸುತ್ತೀರೆಂದರೆ ಬಹಳ ಆನಂದ.

ಹೆಚ್ಚೆಚ್ಚು ಓದುಗರನ್ನು ಆಕರ್ಷಿಸುವಂತೆ, ಪುಸ್ತಕದ ಹೆಸರಾಗಲಿ, ಇಲ್ಲವೇ ಬೇರೆ ಬೇರೆ ಶಿರೋನಾಮೆಗಳನ್ನು ಬದಲಿಸಿದರೆ ನನ್ನ ಯಾವ ಆಕ್ಷೇಪವೂ ಇಲ್ಲ. ಮುಖ ಪುಟ ಬಹಳ ಆಕರ್ಷಣೀಯ. ಇದ್ದರೆ ಬಹಳ ಓದುಗರನ್ನು ಬಲೆಯಲ್ಲಿ ಹಾಕಿಕೊಳ್ಳುವುದೆಂದು ಎಲ್ಲರೂ ಬಲ್ಲಮಾತು. ಆದ್ದರಿಂದ ಹೊರ ಪುಟದ ಮೇಲೆ ನ್ಯೂಯಾರ್ಕದಂತಹ ಶಹರದ ಫೋಟೋವನ್ನಾಗಲಿ ಅಥವಾ ಸುಂದರವಾದ ಹೂವಿನ ಫೋಟೋಗಳನ್ನಾಗಲಿ ಏಕೆ ಹಾಕಬಾರದು? ಹಸ್ತಪ್ರತಿಯ ಮುಖಪುಟದ ಮೇಲೆ ಹೂವುಗಳನ್ನು ಹೇಗೆ ಹಾಕಬಹುದೆಂಬ ಕಲ್ಪನೆ ಬರುವಂತೆ ಬಿಡಿಸಿ ಕಳಿಸಿದ್ದೇನೆ. ತಾವು ಮನಸ್ಸು ಮಾಡಿದರೆ ಅಮೆರಿಕನ್‌ರ ಹೂವಿನ ಸುಂದರ ಫೋಟೋ ನನ್ನ ಹತ್ತರವೇ ಇದೆ. ನೋಡಿ, ಈ ಹೂವುಗಳನ್ನು ಮುಖಪುಟದಲ್ಲಿ ಮೂಡಿಸಿದರೆ ಎಷ್ಟು ಸುಂದರವೆನಿಸುವದೆಂದು. ನಿಮ್ಮ ಪರಿಶೀಲನೆಗಾಗಿ ಹೂವಿನ ಒಂದು ಫೋಟೋವನ್ನು ಇದರ ಸಂಗಡವೇ ಕಳಿಸುತ್ತಿದ್ದೇನೆ. ಇವೆಲ್ಲ ನೀವು ಒಪ್ಪಿಕೊಂಡರೆ ನಂತರ ಮಾತಾಯಿತು. ಆದರ ಮೊದಲೇ ಹಸ್ತಪ್ರತಿ ಮನಸ್ಸಿಗೆ ಬಾರದಿದ್ದರೆ, ಅದನ್ನು ನನಗೆ ಕಳಿಸಿಕೊಟ್ಟುಬಿಡಿ. ಈ ಹಸ್ತಪ್ರತಿಯು ಇನ್ನೊಂದು ಪ್ರತಿಯನ್ನು ನಾವು ಇಟ್ಟುಕೊಂಡಿರದಿದ್ದರಿಂದ, ಅದು ಕಳೆದು ಹೋಗದಂತೆ ಜಾಗ್ರತೆ ವಹಿಸಿ. ಕಳೆದ ೩೦-೪೦ ವರ್ಷಗಳಿಂದ ಈ ವ್ಯಾಪಾರದಲ್ಲಿ ಇದ್ದವರಿಗೆ ಈ ಮಾತು ಹೇಳಬೇಕೆ? ಹಸ್ತಪ್ರತಿಯಲ್ಲೂ ಇದ್ದ ಹಸ್ತಾಕ್ಷರಗಳು ಶ್ರೀಮತಿ ಕಾಮತರವರದು. ನನ್ನ ಹಸ್ತಾಕ್ಷರಗಳನ್ನು ಓದಲು ತಮಗೆ ತೊಂದರೆಯಾಗಬಹುದೆಂದು ಅವರಿಂದಲೇ ಬರೆಸಿದ್ದೇನೆ. ಪಾಪ! ನವಮಾಸ ತುಂಬಿದ ಗರ್ಭಿಣಿಯಾದರೂ ಮುಂಜಾನೆ ಎದ್ದು, ಒಂದು ರಾತ್ರಿ ತನಕ ಜಾಗ್ರಣಮಾಡಿ ಹಸ್ತಪ್ರತಿಯನ್ನು ಪೂರ್ಣ ಮಾಡಿದ್ದಾರೆ. ಮಗಳ ಬಾಣಂತನಕ್ಕಾಗಿ ಶ್ರೀಮಾನ್ ಬುರ್ಡೆ ಮಾಸ್ತರರೇ ನಾಳೆ

ಇಲ್ಲಿ ಬರುವವರಿದ್ದಾರೆ. ಅವರಿಗೆ ತೋರಿಸಿಯೇ ಹಸ್ತಪ್ರತಿ ನಿಮಗೆ ಕಳಿಸಬೇಕೆಂದಿದ್ದೆ. ಆದರೆ ಇವಾಗಲೇ ಸಾಕಷ್ಟು ವೇಳೆಯಾಗಿದೆ. ಇನ್ನೂ ವೇಳೆಯಾಗುವದು ಬೇಡವೆಂದು ತಿಳಿದು ಒಂದು ಶುಭಮೂರ್ಹತದಲ್ಲಿ ಕಳಿಸಿಕೊಟ್ಟು ಬಿಟ್ಟೆ. ಇನ್ನು ಒಂದು-ಎರಡು ವಾರದಲ್ಲಿಯೇ ಮಗು ಒಂದನ್ನು ಪಡೆಯಲಿದ್ದೇವೆ ನಾವು. ಒಂದು ಗಂಡು ಮಗು ಮತ್ತು ಪುಸ್ತಕ ಪ್ರಕಟಿಸಲು ಒಪ್ಪಿಕೊಂಡ ಮಾತು ಏಕಕಾಲಕ್ಕೆ ಬಂದರೆ ನಮ್ಮಷ್ಟು ಸುದೈವಿಗಳು ಬೇರೊಬ್ಬರು ಇದ್ದಾರೆಯೇ?

ಪುಸ್ತಕ ಮುಟ್ಟಿದ ಬಗ್ಗೆ ಮತ್ತು ಇನ್ನಿತರ ಬಗ್ಗೆ ಪತ್ರ ಬರೆಯುತ್ತೀರೆಂದು ನಂಬಲೇ?

ನಿಮ್ಮ ಆದರ ವಿಶ್ವಾಸಗಳಿಗೆ ಪಾತ್ರವಾಗಬಯಸುವ

**ಕೃಷ್ಣಾನಂದ ಕಾಮತ**

ಅದಕ್ಕೆ ಜಿ.ಬಿ. ಯವರ ಉತ್ತರ : ೧೮ ಮಾರ್ಚ್ ೧೯೬೭

ಪ್ರಿಯ ಶ್ರೀ ಕೆ. ಎಲ್. ಕಾಮತರಿಗೆ-

ಸವಿನಯ ವಂದನೆಗಳು

ನಾನು ನಿಮಗೆ ಬರೆಯುತ್ತಿರುವುದು ಇದು ಮೊದಲನೆಯ ಪತ್ರ. ಮನಸು ಬಿಚ್ಚಿ ಬರೆಯುವಂತೆ ಮಾಡಿದ ನಿಮ್ಮ ಬರೆವಣಿಗೆಯೇ ಇದಕ್ಕೆ ಕಾರಣ ಎನ್ನಬಹುದು.

ವಿಷಯಕ್ಕೆ ಹೋಗುವ ಮೊದಲು ಸಾಂದರ್ಭಿಕ ಉಪಚಾರ ಅಷ್ಟು ಮುಗಿಸಿಬಿಡುತ್ತೇನೆ.

ತಡವಾಗಿ ಉತ್ತರ ಬರೆಯುತ್ತಿರುವುದಕ್ಕೆ ಮೊದಲು ಕ್ಷಮೆ ಕೇಳಿ ಆಮೇಲೆ ಕಾರಣ ಕೊಡುತ್ತೇನೆ.

ನಾನು ಕಳೆದ ತಿಂಗಳು ೨೫ಕ್ಕೆ ಇಲ್ಲಿಂದ ಮದ್ರಾಸಕ್ಕೆ ಹೋಗಿದ್ದವನು ಮೊನ್ನೆ ಮಧ್ಯಾಹ್ನ ತಾನೆ ತಿರುಗಿ ಬಂದೆ. ಬರುವುದರೊಳಗಾಗಿ ನಿಮ್ಮ ಎರಡು ಪತ್ರಗಳೂ (೨೭-೨-೬೭ ಮತ್ತು ೨-೩-೬೭) ಹಸ್ತಪ್ರತಿಯೂ ಫೋಟೋಗಳೂ ಬಂದು ಕಾದು ಕುಳಿತಿದ್ದವು.

ಬಂದ ಪತ್ರಗಳನ್ನೆಲ್ಲ ಬಿಟ್ಟು ಮೊದಲು ನೋಡಿದ್ದೇ ನಿಮ್ಮ ಪತ್ರ. ಹಸ್ತಪ್ರತಿಯನ್ನೂ ಕೈಗೆ ತೆಗೆದುಕೊಂಡೆ. ಓದಿಯೇಬಿಡಬೇಕೆಂಬ ಹಂಬಲ ಹುಟ್ಟಿತು. ಓದಿ ಮುಗಿಸಿಯೇ ನಿಮಗೆ ಬರೆದರಾಯಿತೆಂದು ತಡೆದೆ. ಸಾಯಂಕಾಲ, ಇಡೀ ರಾತ್ರಿ ಓದಿ ಮುಗಿಸಿದ್ದೇನೆ. ಈಗ ಬರೆಯುತ್ತಿದ್ದೇನೆ.

ಬರೆವಣಿಗೆಯನ್ನು ನಾನು ಮೆಚ್ಚಿದ್ದೇನೆ. ನಮ್ಮ ಮಾಲೆಯಲ್ಲಿ ಹಾಕಲು ಏನೂ ಅಡ್ಡಿ ಇಲ್ಲ ಎಂದು ಗೊತ್ತು ಮಾಡಿಕೊಂಡಿದ್ದೇನೆ. ಇದೇ ಬೇಸಿಗೆಯ ಸೂಟಿಯಲ್ಲಿ ಕುರ್ತಕೋಟಿಯವರು ಹೇಗೂ ಇಲ್ಲಿಗೇ ಬರಲಿದ್ದಾರೆ. ಅವರಿಗೆ ಹಸ್ತಪ್ರತಿ ಕೊಟ್ಟು ಓದಿಸಿ, ಅವರ ಅಭಿಪ್ರಾಯ ಸೂಚನೆಗಳನ್ನೂ ಪಡೆದು ನಿಮಗೆ ಮತ್ತೆ ಬರೆಯುತ್ತೇನೆ. ಆದರೆ ಹಸ್ತಪ್ರತಿ ಗ್ರಂಥಮಾಲೆಗಾಗಿ ಸ್ವೀಕೃತವಾಗಿದೆಯೆಂದು ನೀವು ತಿಳಿದುಕೊಳ್ಳಬಹುದು.

ಹಸ್ತಪ್ರತಿಯಲ್ಲಿ ಬಹಳೇನೂ ತಿದ್ದುವಂತಹದ್ದಿಲ್ಲದಿದ್ದರೂ ಕನ್ನಡ ಭಾಷೆಯ ದೃಷ್ಟಿಯಿಂದ ಕೆಲವೊಂದು ಕಡೆ (ಬಹಳ ಕಡೆ ಅಲ್ಲ) ಕೈಯಾಡಿಸಬೇಕಾದೀತು. ಕುರ್ತಕೋಟಿಯವರು ಓದಿದ ನಂತರ ಪ್ರೆಸ್ಸಿಗಾಗಿ ನಾನೇ ಹಸ್ತಪ್ರತಿಯನ್ನು ತಯಾರಿಸುತ್ತೇನೆ. ನಿಮ್ಮ ಒಪ್ಪಿಗೆಯಿದೆಯಷ್ಟೆ?

ಗ್ರಂಥದ ಹೆಸರು, ಒಳಗಿನ ಪ್ರಕರಣಗಳ ಹೆಸರುಗಳ ಬಗ್ಗೆ ವಿಚಾರಿಸಿ ನಿಮಗೆ ಮತ್ತೆ ಬರೆದು ತಿಳಿಸುತ್ತೇನೆ.

ನೀವು ಕಳಿಸಿದ ರೇಖಾಚಿತ್ರಗಳನ್ನು (ಫೋಟೋಗಳನ್ನಿಟ್ಟುಕೊಂಡು) ಇನ್ನೂ ಸರಿಯಾಗಿ ಇದಕ್ಕೂ ದೊಡ್ಡ ಆಕಾರದಲ್ಲಿ ಬಿಳಿ ಕಾರ್ಡಿನ ಮೇಲೆ ನೀವೇ ತೆಗೆದುಕಳಿಸುವುದಕ್ಕಾಗಿ ತಿರುಗಿ ಕಳಿಸಿದ್ದೇನೆ. ಅದಷ್ಟು ನಿಮ್ಮ ಅನುಕೂಲದಂತೆ ಅವನ್ನು ತಯಾರಿಸಿ ಕಳಿಸಿಕೊಡಿರಿ.

ಪ್ರಕಾಶನದ ವ್ಯವಹಾರದ ವಿಷಯವಾಗಿ ನಿಮಗೆ ಇನ್ನೊಮ್ಮೆ ಬರೆಯುವಾಗ ತಿಳಿಸುತ್ತೇನೆ.

ಹೊದಿಕೆಗಾಗಿ ನೀವು ಸೂಚಿಸಿದ ಫೋಟೋಗಳನ್ನು ಹಾಕುವ ಬಗ್ಗೆ ಇನ್ನೂ ವಿಚಾರಿಸಿಲ್ಲ. ನಮ್ಮ ಮಾಲೆಯ ಪುಸ್ತಕಗಳಿಗೆ ಒಂದು ವರ್ಷಕ್ಕೆ ಒಂದು design ಇರುತ್ತದೆ. ಆದ್ದರಿಂದ ಆ ಬಗ್ಗೆ ಇನ್ನೂ ವಿಚಾರಿಸಿ ತಿಳಿಸುತ್ತೇನೆ.

ಅಂತೂ ನಿಮ್ಮ ಮನೆಯವರಿಗೇ ಈ ಒಳ್ಳೆ ಕೃತಿ ಬರುವಂತೆ ಮಾಡಿದ ಶ್ರೇಯಸ್ಸು ಹೋಗುತ್ತದಲ್ಲವೇ?

ಗ್ರಂಥಮಾಲೆಯ ಬಗ್ಗೆ ಒಂದೆರಡು ಮಾತು ತಿಳಿಸಬೇಕೆನಿಸಿತು. ಅದೂ ನಿಮ್ಮ ಪತ್ರದಲ್ಲಿಯ ಕೆಲ ಮಾತುಗಳಿಂದ.

'ಪುಸ್ತಕಗಳನ್ನು ಪ್ರಸಿದ್ಧಿಸುವದು ವ್ಯಾಪಾರ ದೃಷ್ಟಿ' ಎಂಬುದು ಮಾಲೆಯ ಮಟ್ಟಿಗೆ ಬಹು ಅಂಶದಲ್ಲಿ ಕಡಿಮೆ ಇದೆಯೆಂದು ಹೇಳಬಯಸುತ್ತೇನೆ. ಮಾಲೆಗೆ 'ಗುಣ ಮುಖ್ಯ'. ಅದಕ್ಕಾಗಿಯೇ ಕೈಸುಟ್ಟುಕೊಂಡುದೂ ಉಂಟು. ಆದರೂ ಆ ತರಹದ ಪುಸ್ತಕಗಳನ್ನು ಪ್ರಕಟಿಸುವವರಲ್ಲಿ ಒಂದು ಸಾಹಸದ ಆನಂದವಿದೆ. ಅದನ್ನೇ ಈ ೩೩ ವರ್ಷ ಮಾಡುತ್ತ ಬಂದಿದ್ದೇನೆ. ನೀವು ಮಾಲೆಯನ್ನು ಬರಿ ವ್ಯಾಪಾರ ದೃಷ್ಟಿಯಿಂದ ನೋಡಬಾರದೆಂಬ ಒಂದು ಆಸೆಯಿಂದ ಇದನ್ನು ಬರೆದಿದ್ದೇನೆ. ದಯವಿಟ್ಟು ಅನ್ಯಥಾ ಭಾವಿಸಬೇಡಿ.

ನೀವು ೮-೧೦ ತಿಂಗಳು ಹಸ್ತಪ್ರತಿ ತಯಾರಿಸುವಲ್ಲಿ ಪಟ್ಟ ಶ್ರಮ ಸಾರ್ಥಕವಾಗಿದೆ. ನೀವು ಪಟ್ಟ ಕಷ್ಟ ಬರವಣಿಗೆಯಲ್ಲಿ ಫಲಪ್ರದವಾಗಿದೆ.

ನಿಮ್ಮ ಒಂದು ಫೋಟೋ ಕಳಿಸಿಕೊಡಿ. ಅವಶ್ಯಬೇಕು ಅದು. ನಿಮ್ಮ ಹತ್ತಿರ ಇದ್ದ ಅಮೆರಿಕೆಯ ಜೀವನದ ಉಳಿದ ಫೋಟೋಗಳನ್ನೂ ಕಳಿಸಿಕೊಡಿ. ಅಂದರೆ ನಮಗೆ ಆಯ್ದುಕೊಳ್ಳಲು ಅನುಕೂಲವಾಗುತ್ತದೆ. ಬೇಕಾದಷ್ಟನ್ನು ಆಯ್ದುಕೊಂಡು ಉಳಿದವನ್ನು ತಿರುಗಿ ಕಳಿಸಿಕೊಡುತ್ತೇನೆ.

ನೀವು ಅಭ್ಯಾಸ ಮಾಡಿದ ಕೀಟಶಾಸ್ತ್ರದ ಬಗ್ಗೇ ಈ ಬರೆವಣಿಗೆಯಲ್ಲಿ ಅಷ್ಟೊಂದು ಬಂದಂತೆ ತೋರಲಿಲ್ಲ. ಆ ಸಂಶೋಧನದ ಬಗ್ಗೆ, ಅದರ ಮಹತ್ವ, ಆ ಕೀಟಗಳ ರೇಖಾಚಿತ್ರಗಳು, ಪ್ರಯೋಗಶಾಲೆಯಲ್ಲಿ ನೀವು ಕೈಕೊಂಡ ಪ್ರಯೋಗಗಳು, ಆ ಬಗ್ಗೆ ಫೋಟೋಗಳು – ಈ ಬಗ್ಗೆ ಒಂದು ಪ್ರಕರಣ ಬರೆದಿದ್ದರೆ ಇನ್ನೂ ಒಳ್ಳೆಯದಾಗುತ್ತಿತ್ತೆಂದು ನನಗೆನಿಸಿತು. ಬಹಳ Technical ಆಗಬಹುದೆಂದು ನೀವು ಬಿಟ್ಟಿರಬಹುದು. ಆದರೂ ಆ ವಿಷಯಕ್ಕೆ ಬರೆಯುವುದೂ ನಮ್ಮ ಜನರಿಗೆ ಬೋಧಪ್ರದವಾದೀತೆಂದು ನನ್ನ ತಿಳಿವಳಿಕೆ. ಈಗಲೂ ನಿಮಗಿದು ಸಮರ್ಪಕವೆನಿಸಿದರೆ ನಿಮ್ಮ ಸಂಶೋಧನೆಯ ಬಗ್ಗೆಯೇ ಒಂದು chapter ಬರೆಯಬಹುದು. ನಮ್ಮಲ್ಲಿಯ ಕೀಟಗಳಿಗೂ ತುಲನೆಮಾಡಿ. ನನಗನಿಸಿದ್ದು ಸರಿಯೇ?

ನಿಮಗೆ ಬೇಡ ಎನಿಸಿದರೆ ಬಿಟ್ಟುಬಿಡಬಹುದು. ಆದರೆ ಕೀಟಗಳ ಬಗ್ಗೆಯೂ ನಮ್ಮಲ್ಲಿರುವ ಅಜ್ಞಾನ ಹೋಗಬೇಕಲ್ಲವೆ? ನಮ್ಮಲ್ಲಿಯ ರೈತನಿಗೂ ಅದು ಉಪಯೋಗವಾದೀತು. ವಿಚಾರಿಸಿ ನಿಮ್ಮ ಅಭಿಪ್ರಾಯ ತಿಳಿಸಿ.

ಶ್ರೀಮತಿ ಜ್ಯೋತ್ಸ್ನಾ ಅವರಿಗೆ ನನ್ನ ಆತ್ಮೀಯ ಮೆಚ್ಚಿಗೆಯನ್ನು ತಿಳಿಸಿ.

ಬರಲಿರುವ ಹೊಸಕಣ್ಣುಗಳಿಗೆ ದೀರ್ಘಾಯುಷ್ಯ ಕೋರಿ ಮುಗಿಸುತ್ತೇನೆ.

ನಿಮ್ಮ ಪತ್ರ ಬಂದ ನಂತರ ಮತ್ತೆ ಬರೆಯುತ್ತೇನೆ.

ಇಂತೀ ವಂದನೆಗಳು ನಿಮ್ಮ
**ಜಿ. ಬಿ. ಜೋಶಿ**

ಮೊದಲಿನ ಪತ್ರೋತ್ತರಗಳಲ್ಲಿಯೇ ಅಪರಿಚಿತ ಭಾವನೆ ಅಳಿಸಿಹೋಗಿ ಆತ್ಮೀಯತೆ ಮೂಡಿ ಬಂದಿತ್ತು. ಅವರ ಮೊದಲ ಪ್ರವಾಸಕಥನ ಒಪ್ಪಿಗೆಯಾದ ವಿಷಯ ತಿಳಿದು ಅವರು ಈ ರೀತಿ ಬರೆದರು :

ಮಾರ್ಚ ೨೬, ೧೯೬೭

ಪ್ರಿಯ ಜೋಶಿಯವರೆ,

ನಿಮ್ಮ ಪತ್ರ ನನ್ನಲ್ಲಿ ಎಷ್ಟೊಂದು ಆನಂದ, ಉತ್ಸಾಹಗಳನ್ನು ತಂದಿದೆ ಎಂದು ಬರವಣಿಗೆಯಲ್ಲಿ ವ್ಯಕ್ತಪಡಿಸಲು ಸಾಧ್ಯವಿಲ್ಲ. ಮನಸ್ಸು ಹುಚ್ಚೆದ್ದು ಕುಣಿದು ಬಿಟ್ಟಿತು. ನನ್ನ ಮೊದಲ ಪ್ರಯತ್ನವೇ ಪ್ರಕಾಶನಕ್ಕೆ ಬರಲಿದೆ! ಅದು ಮನೋಹರ ಗ್ರಂಥಮಾಲೆಯಂತಹ ಹೆಸರಾಂತ

ಪ್ರಕಾಶಕರು ನನ್ನ ಪುಸ್ತಕಕ್ಕೆ ಒಪ್ಪಿಗೆಯನ್ನು ಸೂಚಿಸಿದ್ದಾರೆ!! ಒಂದು ನಿಮಿಷ ನಾನು ನೆಲದ ಮೇಲೆಯೇ ಇರಲಿಲ್ಲ. ನನ್ನ ಪುಸ್ತಕ ನೀವು ಪ್ರಕಾಶನಕ್ಕೆ ಒಪ್ಪಬಹುದೆಂದು ನಾನೇ ನಂಬದಾಗ ನನ್ನ ಗೆಳೆಯರು, ಆಪ್ತರು ಹೇಗೆ ಒಪ್ಪಿಯಾರು? ನಾನು ಕನ್ನಡದಲ್ಲಿ ಪುಸ್ತಕ ಬರೆಯುತ್ತಿದ್ದೇನೆಂದು ನನ್ನ ತಂದೆಯವರಿಗೆ ತಿಳಿದಾಗ "ಅಮೆರಿಕೆಯ ಕನ್ನಡ ಯಾರಿಗೆ ಮನಸ್ಸಿಗೆ ಬಂದೀತು?" ಎಂದು ಗೇಲಿ ಮಾಡಿದ್ದರು. ನನ್ನ ಈ ಅಮೆರಿಕನ್ ಕನ್ನಡ, ಸಾಹಿತ್ಯಕ್ಕೆ ಹೊಂದುವ ಕನ್ನಡವಾಗಬೇಕಾದರೆ ನೀವು ಅದರಲ್ಲಿ ಕೈಯಾಡಿಸದೇ ಬೇರೆ ಮಾರ್ಗವೇ ಇಲ್ಲ. ಪ್ರೆಸ್ಸಿಗಾಗಿ ನೀವೇ ಹಸ್ತಪ್ರತಿಯನ್ನು ಸಿದ್ಧಮಾಡುವ ಜವಾಬ್ದಾರಿ ವಹಿಸಿದ್ದಕ್ಕೆ ಕೃತಜ್ಞತೆಗಳು.

ನಿಮ್ಮ ಈ ಪತ್ರ ಓದಿದವರು ನೀವು ವ್ಯಾಪಾರಿ ದೃಷ್ಟಿ ಉಳ್ಳವರು ಎಂದು ಯಾರೂ ಹೇಳಲಾರರು. ಪ್ರಕಟನೆ ವ್ಯಾಪಾರದ ದೃಷ್ಟಿ ಎಂದು ಹಿಂದಿನ ಪತ್ರದಲ್ಲಿ ಬರೆದ ಮಾತಿಗಾಗಿ ಕ್ಷಮೆ ಕೇಳುತ್ತೇನೆ. ಕಳೆದ ಮೂವತ್ತಾರು ವರ್ಷಗಳಿಂದ ಸಾಹಿತ್ಯಮಾಲೆಯ ಸಂಗಾತಿಯಾಗಿ ನಡೆದು ಬಂದ ಅರಳುವ ಸಾಹಿತಿಗಳಿಗೆ ಪ್ರೋತ್ಸಾಹನೆ ಕೊಟ್ಟ ಶ್ರೇಯಸ್ಸು ತಮಗೆ ಸೇರುತ್ತದೆ. ನಿಮ್ಮ ಈ ಸತತ ಸೇವೆಗಾಗಿ ಅಭಿನಂದನೆಗಳು.

❄ ❄ ❄ ❄ ❄ ❄ ❄ ❄ ❄ ❄ ❄

ಮೇಲಿನ ಪತ್ರವ್ಯವಹಾರವನ್ನು ಉದ್ಧರಿಸುವದಕ್ಕೆ ಕಾರಣ ಲೇಖಕ- ಪ್ರಕಾಶಕರ ಸಂಬಂಧವನ್ನು ಕೇವಲ ವ್ಯಾವಹಾರಿಕ ಸಂಬಂಧವನ್ನಾಗಿಸದೇ, ಎಲ್ಲ ಲೇಖಕರನ್ನು ತಮ್ಮ ಆಪ್ತಲೋಕದಲ್ಲಿ ಸೇರಿಸಿಕೊಳ್ಳುವ ದಿ. ಜಿ. ಬಿ. ಯವರ ಸಾಹಿತ್ಯ ಪ್ರೀತಿಯನ್ನು ಎತ್ತಿತೋರಿಸುವದಕ್ಕೋಸ್ಕರ. ಕೃಷ್ಣಾನಂದರ ಹಸ್ತಪ್ರತಿ ೧೯೬೭ರಲ್ಲಿಯೇ ಕೈಸೇರಿ ಒಪ್ಪಿಗೆ ಗಳಿಸಿದರೂ ಎರಡು ವರ್ಷ ಗರ್ಭಾವಸ್ಥೆಯಲ್ಲಿದ್ದು ೧೯೬೯ರಲ್ಲಿ ಪ್ರಕಟವಾಯಿತು. ಮೊದಲಿನ ತಲೆಬರಹ "ಅಮೆರಿಕೆಯ ನನ್ನ ಅನುಭವಗಳು" ಹಸ್ತಪ್ರತಿ ಅಚ್ಚಿಗೆ ಹೋಗಿ ಮುದ್ರಣವಾಗುವ ಹೊತ್ತಿಗೆ "ನಾನೂ ಅಮೆರಿಕೆಗೆ ಹೋಗಿದ್ದೆ" ಎಂದು ಬದಲಾಗಿ ಓದುಗರ ಕೈಸೇರಿತು.೧ ಈ ವೇಳೆಗಾಗಲೇ ಅವರ ಪುತ್ರ ವಿಕಾಸನ ಆಗಮನವಾಗಿತ್ತು. ಇಷ್ಟಾದರೂ ಲೇಖಕ ಪ್ರಕಾಶಕರ / ಸಂಪಾದಕರ ಮುಖಾಮುಖಿ ಭೆಟ್ಟಿಯೇ ಆಗಿರಲಿಲ್ಲ. ಕೃಷ್ಣಾನಂದರು ಡಿಸೆಂಬರ ೧೧, ೧೯೬೭ರ ಪತ್ರದಲ್ಲಿ ಹೀಗೆ ಬರೆಯುತ್ತಾರೆ :

ಮಾನ್ಯ ಜೋಶಿಯವರೆ,

ನಿಮ್ಮ ಪತ್ರ ಓದುತ್ತ ಹೋದಂತೆ ನಿಮ್ಮ ನೆನಪು ಮಸಕಾಗಿದೆ ಎಂದು ಮನದಟ್ಟಾಯಿತು! ಕೋಪಿಸಿಕೊಳ್ಳಬೇಡಿ. ನಿಮ್ಮ ಪತ್ರದಲ್ಲಿ ನಾನು ಮಾರ್ಚ್ ತಿಂಗಳಲ್ಲಿ ಬರೆದ ಪತ್ರದ ಉಲ್ಲೇಖನ ಮಾಡಿದ್ದೀರಿ. ಅದರ ನಂತರ ನಾನು ಬಹಳಷ್ಟು ಕಾರಭಾರ ಮಾಡಿದ್ದೇನ್ರಿ. ಮೊದಲನೇ ಕಾರ್ಯ ಎಂದರೆ ಜೂನ ತಿಂಗಳಲ್ಲಿ ಧಾರವಾಡಕ್ಕೆ ಬಂದು ನಿಮ್ಮ ಕಾರ್ಯಾಲಯವನ್ನು ನಿಮ್ಮ ಸುಪುತ್ರ ರಾಮಜೋಶಿಯವರನ್ನು ಭೆಟ್ಟಿಯಾದದ್ದು. ಇಲ್ಲಿಂದ ನಿಮ್ಮ ಕಾರ್ಯಾಲಯಕ್ಕೆ ಹೋದ ಸಂದರ್ಭ ಕುರಿತು ನಿಮಗೊಂದು ಪತ್ರ ಬರೆದಿದ್ದೆ. ಅದಕ್ಕೆ ನಿಮ್ಮ ಉತ್ತರವೂ ಬಂದಿದೆ....

❄ ❄ ❄ ❄ ❄ ❄ ❄ ❄ ❄ ❄ ❄

ಪ್ರತ್ಯಕ್ಷ ಭೆಟ್ಟಿಯ ಅವಶ್ಯಕತೆಯೇ ಇಲ್ಲದವರ ಹಾಗೆ. ಅತ್ಯಂತ ಸಮೀಪದ ಆಪ್ತರ ಜೊತೆಗೆ ವ್ಯವಹರಿಸುವವರ ಹಾಗೆ ಪತ್ರ ವ್ಯವಹಾರ ಸಾಗಿತ್ತು. ಎರಡು ಮನಸ್ಸುಗಳ ಹೊಂದಾಣಿಕೆ ಸಮಭಾವದ ಆಂತರಿಕ ಸ್ಪಂದನ ಮುಖ್ಯ। ಅಂದಿನಿಂದ ಪ್ರಾರಂಭವಾದ ಜಿ. ಬಿ. – ಕೃಷ್ಣಾನಂದರ ಪತ್ರವ್ಯವಹಾರ ಅನೇಕ ವರ್ಷಗಳವರೆಗೆ ಅವ್ಯಾಹತವಾಗಿ ನಡೆದಿತ್ತು. ಪತ್ರವ್ಯವಹಾರಗಳಲ್ಲಿಯ ವಿಷಯಗಳು ಯಾವಾಗಲೂ ಸಾರ್ವಜನಿಕ ಹಾಗೂ ಸಾಹಿತ್ಯಿಕ ಜಗತ್ತಿಗೆ ಸಂಬಂಧ ಪಟ್ಟವು.

೨೦೦೧ ಆಗಸ್ಟ್ ೧೫ಕ್ಕೆ ಅವರು ಧಾರವಾಡಕ್ಕೆ ಪತ್ನೀಸಮೇತ ಆಗಮಿಸಿ ಪುಸ್ತಕ ಬಿಡುಗಡೆಯ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಅವರು ಸಹಸಾ ಪ್ರಚಾರಪ್ರಿಯರಲ್ಲ. ವೇದಿಕೆಗೆ ಅವರು ಹಾತೊರೆದವರಲ್ಲ. ಇಷ್ಟು ವರ್ಷಗಳ ನಂತರ ನಮ್ಮೆಲ್ಲರ ಒತ್ತಾಯಕ್ಕೆ, ಜಿ. ಬಿ. ಯವರ ಋಣಸಂದಾಯಕ್ಕೆ, ಕಾರ್ಯಕ್ರಮದಲ್ಲಿ ಭಾಗವಹಿಸಲು ಬಂದಿದ್ದರು. ಮರುದಿನ ಮನೆಗೆ ಬಂದು ಹಳೆಯ ನೆನಪುಗಳನ್ನು ಮೆಲುಕು ಹಾಕಿ ಜಿ.ಬಿ. ಆತ್ಮಕ್ಕೆ ತೃಪ್ತಿ ನೀಡಿದರು.

೧೯೬೭ ರಿಂದ ೧೯೭೧ರ ತನಕ ಅಲ್ಲಿ ಇಲ್ಲಿ ಅಡ್ಡಾಡಿ, ಕೃಷ್ಣಾನಂದರು ಬೆಂಗಳೂರಿಗೆ ಬಂದು ನೆಲೆಸಿದರು. ನೌಕರಿಯ ಆಸೆಯನ್ನು ತೊರೆದು ಸ್ವತಂತವಾದ 'Scientific Photo Lab' ಎಂಬ ವಿಶೇಷ ಸ್ಟುಡಿಯೋ ಒಂದನ್ನು ಮಲ್ಲೇಶ್ವರದ ಸಂಪಿಗೆ ರಸ್ತೆಯಲ್ಲಿ ತೆಗೆದರು.

ಸಂಶೋಧನ ಪ್ರಬಂಧಗಳಿಗೆ ಹಾಗೂ ಇತರ ವಿಶೇಷ ಕಾರ್ಯಗಳಿಗಾಗಿ ಫೋಟೋ ತೆಗೆಯುವ ತಮ್ಮ ಕಾಯಕ ಮುಂದುವರಿಸಿದರು. ಅವರೆಂದೂ ವ್ಯಾಪಾರೀ ಫೋಟೋಗ್ರಾಫರ ಆಗಲಿಲ್ಲ! ಬೆಂಗಳೂರಿಗೆ ಬಂದು ನೆಲೆಸಲು ಕಾರಣಗಳು ಎರಡು; ಒಂದು- ಶ್ರೀಮತಿ ಜ್ಯೋತ್ಸ್ನಾರವರು, ಬೆಂಗಳೂರಿನ ಆಕಾಶವಾಣಿ ಕೇಂದ್ರಕ್ಕೆ ವರ್ಗವಾಗಿ ಬಂದದ್ದು; ಎರಡು ಬೆಂಗಳೂರಿನಲ್ಲಿ ಶಾಶ್ವತವಾಗಿ ಇರಲು ಸಾಧ್ಯವಾಗುವಂತೆ ಮಲ್ಲೇಶ್ವರದಲ್ಲೊಂದು ಸ್ವಂತ ಫ್ಲಾಟ್. ಅವರಿಗಿದ್ದ ಕ್ಯಾಮರಾ ಕಣ್ಣು ಬೇರೆಯವರಲ್ಲಿ ನಾನೆಂದೂ ಕಂಡಿಲ್ಲ. ಅವರು ಸಂಶೋಧನೆಗೆ ಬೇಕಾಗುವ ಹಾಗೂ ಇತರ ಲೇಖನಗಳಿಗೆ ಬೇಕಾಗುವ ಸಾಮಗ್ರಿಯನ್ನು ತಮ್ಮ ಕ್ಯಾಮರಾದಲ್ಲಿ ಸೆರೆ ಹಿಡಿದು ಪ್ರತಿಮಾಡಿ ಪೂರೈಸುತ್ತಿದ್ದರು.

ಮೊದಲೇ ಹೇಳಿದಂತೆ ಅವರೆಂದೂ ತಕರಾರು ಮಾಡಿದವರಲ್ಲ, ತಮ್ಮ ಶಿಕ್ಷಣಕ್ಕೆ ತಕ್ಕ ನೌಕರಿ ಭಾರತದಲ್ಲಿ ಸಿಗಲಿಲ್ಲ ಎಂದು ನೊಂದುಕೊಂಡವರಲ್ಲ. ಹಾಗೆಂದು ಅಮೇರಿಕಕ್ಕೆ ಹಾರಿ ಹೋಗಿ ಅಲ್ಲಿಯ ಶ್ರೀಮಂತಿಕೆಯನ್ನು ಪಡೆಯಬೇಕೆಂಬ ಹಂಬಲದವರಲ್ಲ. ಅವರು ಪ್ರತಿನಿತ್ಯ ೧೮ನೇ ಕ್ರಾಸಿನಲ್ಲಿರುವ ತಮ್ಮ ಮನೆಯಿಂದ ೩/೪ನೇ ಕ್ರಾಸಿನಲ್ಲಿರುವ ಅಂಗಡಿಗೆ ಸಾಯಕಲ್ ಮೇಲೆಯೇ ಅಡ್ಡಾಡಿದವರು. ಇತ್ತೀಚೆಗೆ ಸಾಯಕಲ್ ಬಿಟ್ಟು ಈ ಅಂತರವನ್ನು ಕಾಲ್ನಡಿಗೆಯಿಂದಲೇ ಪೂರೈಸುತ್ತಿದ್ದರು. ಕೃಷ್ಣಾನಂದರದು ಮೊದಲಿನಿಂದಲೂ ಸದಾ ಕಾರ್ಯನಿರತ ಜೀವ. ಇಂಥ ಕಾರ್ಯಮಾಡಬೇಕು; ಇಂಥದನ್ನು ಮಾಡಬಾರದು ಎಂಬ ವಿಧಿನಿಷೇಧ ಎಂದೂ ಹೇರಿಕೊಂಡವರಲ್ಲ. ಒಂದರ್ಥದಲ್ಲಿ, ಗಾಂಧೀಜಿ ಅಪೇಕ್ಷಿಸಿದ್ದ ಜೀವನವನ್ನು ನಡೆಸಿದವರು ಎಂದರೆ ಅತಿಶಯೋಕ್ತಿಯಲ್ಲ. ಕಾಯಕವೇ ಕೈಲಾಸ ಎಂಬುವದರಲ್ಲಿ ಪೂರ್ತಿ ನಂಬುಗೆ ಇದ್ದವರು.

ಕಳೆದ ೩೫ ವರ್ಷಗಳಿಂದ ಕೃಷ್ಣಾನಂದರ - ಜಿ. ಬಿ. ಜೋಶಿಯವರ ನಂಟಿನಗಂಟು ಬೆಳೆಯುತ್ತಲೇ ಹೋಯಿತು. ೧೯೯೩ರಲ್ಲಿ ಜಿ.ಬಿ. ಜೋಶಿಯವರು ನಿಧನರಾದಾಗ ಕೃಷ್ಣಾನಂದರು ಜಿ. ಬಿ. ಯವರ ಬಗ್ಗೆ ಬರೆದ ಲೇಖನ - ಅವರು ತೆಗೆದ ಭಾವಚಿತ್ರಗಳು ಕನ್ನಡಿಗರಿಗೆ ಹೊಸದೊಂದು ಲೋಕವನ್ನು ತೆರೆದು ತೋರಿಸಿದಂತಾಯಿತು. ಇನ್ನೊಂದು ಮಾತನ್ನು ಇಲ್ಲಿ ಹೇಳಲೇಬೇಕು. ೧೯೮೮ರಲ್ಲಿ ಮನೋಹರ ಗ್ರಂಥಮಾಲೆಯ ಸುವರ್ಣ ಸಂಪುಟಗಳಾದ "ಪುಟ ಬಂಗಾರ"ದ ೫ ಸಂಪುಟಗಳ ಬಿಡುಗಡೆ ಸಮಾರಂಭವನ್ನು ಭಾರತೀಯ ವಿದ್ಯಾಭವನ, ಬೆಂಗಳೂರು ಇವರ ಸಹಯೋಗದಿಂದ ಬೆಂಗಳೂರಿನಲ್ಲಿ ಏರ್ಪಡಿಸಿದಾಗ, ಮೊತ್ತ ಮೊದಲು "ಕನ್ನಡ ಲೇಖಕರ ಭಾವಚಿತ್ರ - ಹಸ್ತಪ್ರತಿ ಪ್ರದರ್ಶನ" ಏರ್ಪಡಿಸುವ ಯೋಜನೆಗೆ ಪುಷ್ಟಿ ಕೊಟ್ಟವರು ಕೃಷ್ಣಾನಂದರು. ನಮ್ಮ ಹತ್ತಿರವಿದ್ದ ಎಲ್ಲ ಕನ್ನಡ ಲೇಖಕರ ಭಾವಚಿತ್ರಗಳನ್ನು ಅವರಿಗೆ ಒಯ್ದು ತೋರಿಸಿದಾಗ, ಅವರು ಅವನ್ನೆಲ್ಲ ಒಂದೇ ಸೈಜಿನಲ್ಲಿ ಮರುಪ್ರತಿ ಮಾಡಿಕೊಡುವುದಾಗಿ ಹೇಳಿದರು. ಮತ್ತು ಹೇಳಿದ ಹೊತ್ತಿಗೆ ೧೦೦ ಲೇಖಕರ ಭಾವಚಿತ್ರಗಳನ್ನು ತಯಾರಿಸಿ ಇಟ್ಟಿದ್ದರು. ಆಗಿನ ಪ್ರದರ್ಶನದ ಯಶಸ್ಸಿಗೆ ಬಹುಪಾಲು ಕೃಷ್ಣಾನಂದರೇ ಕಾರಣ. ಆದರೆ ಅವರದು ಎಲೆಮರೆಯ ವ್ಯಕ್ತಿತ್ವ. ನಂತರ ಅವರನ್ನು ಭೆಟ್ಟಿಯಾಗಿ ಅವುಗಳ ಖರ್ಚಿನ ಬಗ್ಗೆ ಕೇಳಲಾಗಿ ಅವರು ಹೇಳಿದ ಮಾತು: "ನಿಮ್ಮ ತಂದೆ ಇಡೀ ಜೀವನವನ್ನೇ ಸಾಹಿತ್ಯಕ್ಕಾಗಿ ಮೀಸಲಿರಿಸಿದ್ದಾರೆ. ಈಗ ನಾನು ಮಾಡಿಕೊಟ್ಟಿರುವ ಕಾರ್ಯ ಅವರ ಮಹಾಸಮುದ್ರದಲ್ಲಿ ಒಂದು ಬೊಗಸೆ ಮಾತ್ರ ದಯವಿಟ್ಟು ನನ್ನ ಸೇವೆಯನ್ನು ಸ್ವೀಕರಿಸಿ". ಆಗ ನನ್ನ ಬಾಯಿ ಕಟ್ಟಿಹೋಗಿತ್ತು.

ಕೃಷ್ಣಾನಂದರು ಗ್ರಂಥಮಾಲೆಗಾಗಿ 'ನಾನೂ ಅಮೆರಿಕೆಗೆ ಹೋಗಿದ್ದೆ', 'ವಂಗದರ್ಶನ', 'ಪ್ರಾಣಿ ಪರಿಸರ', 'ಪ್ರೇಯಸಿಗೆ ಪತ್ರಗಳು', 'ಕಾಲರಂಗ' ಕೊನೆಯದಾಗಿ 'ಮರುಪಯಣ' ಗ್ರಂಥಗಳನ್ನು ರಚಿಸಿಕೊಟ್ಟಿದ್ದಾರೆ. ಅಲ್ಲದೆ, ಬೇರೆಯಾಗಿಯೂ ಅನೇಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಅವರೆಂದೂ ಹಸ್ತಪ್ರತಿ ತಯಾರಿಸಿ ಪ್ರಕಾಶಕರ ಕಡೆಗೆ ಹೋದವರಲ್ಲ. ಪ್ರಕಾಶಕರು ಬಂದು ಕೇಳಿದಾಗ ಅವರಿಗೆ ಯಾವ ರೀತಿ ಬೇಕೋ ಆ ರೀತಿಯಲ್ಲಿ ತಮ್ಮಲ್ಲಿದ್ದ ಸರಕನ್ನು ಹೊಂದಿಸಿಕೊಡುವವರು. ಅವರಿಗೆ ವೇಳೆಯ ಮಹತ್ವ ಗೊತ್ತಿತ್ತು.

ಜಿ.ಬಿ. ಯವರು ತೀರಿಕೊಂಡಮೇಲೆ, ಅವರನ್ನೊಮ್ಮೆ ಕಂಡಾಗ ಗ್ರಂಥಮಾಲೆಗೆ ಒಂದು ಕೃತಿಯನ್ನು ಕೊಡಲು ಕೇಳಿಕೊಂಡೆ. "ಈ ವರ್ಷ ಬಹಳ ಕೆಲಸಗಳಿವೆ. ಮುಂದಿನ ವರ್ಷ ಬರೆದುಕೊಡುತ್ತೇನೆ" ಎಂದರು. 'ಸರಿ' ಎಂದೆ. ಒಂದು ವರ್ಷ ಬಿಟ್ಟು ಅವರನ್ನು ನೆನಪಿಸಿದಾಗ, "ಓ! ನೀವು ಮರೆತಿದ್ದೀರಿ ಎಂದು ಭಾವಿಸಿದ್ದೆ" ಎಂದರು, ಅದಕ್ಕೆ ಕಾರಣ ನಾನೇ. ತಂದೆಯವರಂತೆ ಪತ್ರವ್ಯವಹಾರದಲ್ಲಿ ನಿಪುಣನಲ್ಲ ಹಾಗೂ ಮೇಲಿಂದ ಮೇಲೆ ನೆನಪಿಸಬೇಕಾದ ಲೇಖಕರು ಕೃಷ್ಣಾನಂದರಲ್ಲ. ಈ ಮಾತನ್ನು ಅವರಿಗೆ ಹೇಳಿದಾಗ ಅವರು "೨೦೦೧ ಫೆಬ್ರವರಿ ತಿಂಗಳ ಕೊನೆಗೆ ನಿಮಗೆ ಹಸ್ತಪ್ರತಿ ಕೊಡುತ್ತೇನೆ" ಎಂದರು. ಫೆಬ್ರವರಿ ೨೫ರ ಸುಮಾರಿಗೆ ನೆನಪಿಸಲೆಂದು ಫೋನ್ ಮಾಡಿದಾಗ, "ನಿಮ್ಮ ಹಸ್ತಪ್ರತಿ ತಯಾರಾಗಿದೆ. ಪ್ಯಾಕ್ ಮಾಡಿ ಇಟ್ಟಿದ್ದೇನೆ ಹೇಗೆ ಕಳಿಸಲಿ?" ಎಂದರು. ನಾನು "ನಾನೇ ಬಂದು ತೆಗೆದುಕೊಂಡು ಹೋಗುವದಾಗಿ ತಿಳಿಸಿದೆ". ಎರಡು ದಿನಗಳಲ್ಲಿ ಬೆಂಗಳೂರಿಗೆ ಹೋಗಿ ಇತರ ಕೆಲಸಗಳನ್ನೆಲ್ಲ ಮುಗಿಸಿ ಸಂಜೆಯ ಹೊತ್ತಿಗೆ ಅವರ ಮನೆಗೆ ಹೋದೆ. ಕೃಷ್ಣಾನಂದರು ಇಡೀ ದಿನ ನನ್ನ ದಾರಿ ಕಾಯ್ದು ಸಂಜೆಗೆ ಪೇಟೆಗೆ ಹೋಗಿದ್ದರು. ನಾನು ಬಂದರೆ ಹಸ್ತಪ್ರತಿ ಕೊಡಲು ಪ್ಯಾಕ್ ಮಾಡಿಟ್ಟ ಪ್ಯಾಕೆಟ್ ತಯಾರಿತ್ತು. ನಾನು ಅವರು ಬರುವವರೆಗೂ ದಾರಿಕಾಯ್ದು, ಅವರು ಬಂದ ಮೇಲೆ ಒಂದರ್ಥ ಗಂಟೆ ಹರಟೆ ಹೊಡೆದು ಹಸ್ತಪ್ರತಿ ತೆಗೆದುಕೊಂಡು ಹೊರಡುವಾಗ ಹೇಳಿದ ಮಾತುಗಳು: "ಹಸ್ತಪ್ರತಿ ಓದಿ ನೋಡಿ,

ಒಪ್ಪಿಗೆಯಾದರೆ ಪ್ರಕಟಿಸಿರಿ, ಇಲ್ಲವಾದರೆ ಬೇಡ. ನಿಮ್ಮ ಗ್ರಂಥಮಾಲೆಯ ಅಂತಸ್ತಿಗೆ ಕುಂದುಂಟಾಗುವದು ಬೇಡ". ಯಾವ ಕೃಷ್ಣಾನಂದರು ಗ್ರಂಥಮಾಲೆಯಿಂದ ಆಗಲೇ ೨೨ ಗ್ರಂಥಗಳನ್ನು ಪ್ರಕಟಿಸಿದ್ದಾರೋ, ಕನ್ನಡ ನಾಡಿನಲ್ಲಿ ಅಪರೂಪದ ಲೇಖಕರಾಗಿ ಹೆಸರು ಮಾಡಿದ್ದಾರೋ ಅಂಥವರ ಬಾಯಿಂದ ಬಂದ ಮಾತುಗಳಿವು! ಕೃಷ್ಣಾನಂದರ ವಿನಯಕ್ಕೆ ಬೇರೆ ನಿದರ್ಶನ ಬೇಕೇ? 'ಮರುಪಯಣ'ವನ್ನು ಪ್ರಕಟಿಸುವಾಗಲೇ ಅವರಿಂದ ಒಂದು ಭರವಸೆ ಪಡೆದಿದ್ದೆ. "ಏನೇ ಆದರೂ ಅವರು ಪುಸ್ತಕ ಬಿಡುಗಡೆಯ ಕಾರ್ಯಕ್ರಮಕ್ಕೆ ಬರಲೇಬೇಕು" ಎಂದು. ಆ ಪ್ರಕಾರ ಅವರು ಗಂಡ-ಹೆಂಡತಿ ಇಬ್ಬರೂ ಹೊನ್ನಾವರಕ್ಕೆ ಹೋಗಿ ಅಲ್ಲಿಂದ ಧಾರವಾಡಕ್ಕೆ ಬಂದರು. ಧಾರವಾಡದ ಗತನೆನಪುಗಳನ್ನೆಲ್ಲ ನೆನೆಸಿಕೊಂಡರು. ಮನೆಗೆ ಬಂದು ಜಿ. ಬಿ. ಯವರನ್ನು ನೆನೆಸಿಕೊಂಡರು. ಒಂದು ಗಂಟೆಯಲ್ಲಿ ಮೂರು ದಶಕಗಳ ಘಟನೆಗಳು ಮರುಕಳಿಸಿದವು. ಧಾರವಾಡದಲ್ಲಿಯ ಶಾಸ್ತ್ರಿ ಚಾಳಿನಲ್ಲಿರುವ ಜ್ಯೋತ್ಸ್ನಾ ಕಾಮತರ ಮನೆಯನ್ನು ಮಾರುವ ಉದ್ದೇಶಪಟ್ಟುಕೊಂಡು ಬಂದ ಕಾಮತ ದಂಪತಿಗಳು ಧಾರವಾಡದ ಸಂಬಂಧವನ್ನು ಕಳಚಿಕೊಳ್ಳಬಾರದೆಂದು ಮನೆ ಮಾರುವ ಯೋಚನೆಯನ್ನು ಬದಲಾಯಿಸಿ ಹಾಗೇ ತಿರುಗಿ ಹೋದರು.

"ಮರುಪಯಣ"ದ ನಂತರ ಅವರು ಏನು ರಚಿಸುತ್ತಿದ್ದರೋ ನನಗೆ ಗೊತ್ತಿಲ್ಲ. ಆದರೂ 'ಮರುಪಯಣ' ಅವರಿಗೆ ಮುನ್ಸೂಚನೆಯಾಗಿ ಮೂಡಿಬಂದಿತ್ತೇ ಎಂಬ ಅನುಮಾನ ಈಗ ಬರುತ್ತಿದೆ. ಕಾಲಗರ್ಭದಲ್ಲಿ ಹಿಂದಕ್ಕೆ ಹೋಗಲು ಅವಕಾಶವಿಲ್ಲ. ನೆನಪಿನ ಆಳದಲ್ಲಿ ಉಳಿಯುವದು ಭೂತಕಾಲಗರ್ಭದಲ್ಲಿ ಅವಿಸ್ಮರಣೀಯ ಘಟನೆಗಳು. ಅವೇ ಮುಂದಿನ ಜೀವನಕ್ಕೆ ಆಧಾರ.

ಕೃಷ್ಣಾನಂದರು ಎಂದೂ ಅತೃಪ್ತಿಗೊಂಡದ್ದನ್ನು ನಾನು ನೋಡಿಲ್ಲ. ಅವರಿಗೆ ಸಿಗಬೇಕಾದ ಮನ್ನಣೆ ಸಿಕ್ಕಿಲ್ಲ ಎಂದು ಇತರರು ಅನ್ನಬಹುದೇ ಹೊರತು ಅವರೆಂದೂ ಆ ರೀತಿ ವ್ಯಕ್ತಪಡಿಸಿಲ್ಲ. 'ತುಂಬಿದ ಕೊಡ ತುಳುಕುವುದಿಲ್ಲ' ಎಂಬ ಮಾತಿಗೆ ಕೃಷ್ಣಾನಂದರು ಸಾಕ್ಷಿ. ಅವರು ರಚಿಸಿದ ಅನೇಕ ಸಾಂಸ್ಕೃತಿಕ ನಿರೂಪಣೆಗಳು 'Kamat's Potpuri' ಎಂಬ ಶೀರ್ಷಿಕೆಯಲ್ಲಿ ಅಮೆರಿಕೆಯಲ್ಲಿ ಅವರ ಮಗ ವಿಕಾಸ ಕಾಮತರ ಸಹಭಾಗಿತ್ವದಲ್ಲಿ ಪ್ರಸಾರಗೊಂಡಿವೆ. ಶ್ರೀಮತಿ ಜ್ಯೋತ್ಸ್ನಾ ಕಾಮತರು, ಕಾಮತರಿಗೆ ಪೂರಕವಾಗಿ ಸಂಸಾರ ಸಾಗಿಸಿದರೂ ಅವರು ಸ್ವತಂತ್ರ ಸಾಹಿತಿಗಳು, ಇತಿಹಾಸ ತಜ್ಞರು. ಹೀಗಿದ್ದೂ ಅವರ ಸಂಸಾರ ಹಾಲು ಜೇನಿನ ಸಂಸಾರ. ಮಗ ವಿಕಾಸ ತಂದೆಯ ತತ್ವಜ್ಞಾನವನ್ನೇ ಮೈಗೂಡಿಸಿಕೊಂಡವನು.

ಬೇಂದ್ರೆಯವರು ಹೇಳಿದಂತೆ, "Mine is buta flower's wish / To leave some seeds behind". ಕಾಮತರು ತಮ್ಮ ಸಾಹಿತ್ಯಿಕ, ಸಾಂಸ್ಕೃತಿಕ ಬೀಜಗಳನ್ನು ಬಿತ್ತಿ ಹೋಗಿದ್ದಾರೆ.

❑



# ತೀರ್ಥರೂಪ

- ಡಾ॥ ಆರ್. ಶೇಷಶಾಸ್ತ್ರಿ

ನನ್ನ ಬದುಕನ್ನು ರೂಪಿಸಿದ, ತಿದ್ದಿತೀಡಿದ ಮಹನೀಯರುಗಳಲ್ಲಿ ಡಾ॥ ಕೃಷ್ಣಾನಂದ ಕಾಮತರು ಮುಖ್ಯರು. ಸುಮಾರು ಇಪ್ಪತ್ತೈದು ವರ್ಷಗಳ ಅವರೊಂದಿಗಿನ ಒಡನಾಟವನ್ನು ಕುರಿತು ಬರೆಯುವುದೆಂದರೆ ನನ್ನ ಬಗ್ಗೆಯೇ ಬರೆದುಕೊಂಡಂತಾಗುತ್ತದೆ. ಆ ಒಂದು ಅಪಾಯದಿಂದ ಪಾರಾಗುವುದಕ್ಕೆ ನಿರ್ವಂಚನೆಯಿಂದ ಪ್ರಯತ್ನಿಸಿದ್ದೇನೆ. ಅದೆಷ್ಟರ ಮಟ್ಟಿಗೆ ಸಾಧಿಸಿದ್ದೇನೆಯೋ ನೀವೇ ತೀರ್ಮಾನಿಸಬೇಕು. ಅವರಿಂದ ನಾನು ಪಡೆದ ಲೋಕಾನುಭವ, ಬದುಕಿನ ಬಗ್ಗೆ ನಾವು ತಾಳಬೇಕಾಗಿರುವ ಧೋರಣೆ, ಜೀವನವನ್ನು ಎದುರಿಸಬೇಕಾದ ವಿಧಾನ, ದಿಟ್ಟತನ, ಮೊದಲಾದ ಅಂಶಗಳು ನನ್ನಂತಹ ಬೋಳೇಶಂಕರರು ಯಾರಾದರೂ ಇದ್ದರೆ ಅವರಿಗೆ ಅನುಕೂಲವಾಗಲಿ ಎಂಬ ಕಾರಣದಿಂದ; ಅವರ ನಡೆ ನುಡಿಗಳು ಹೇಗೆ ಇಡಿಗಾಳಿನಂತೆ ಇದ್ದುವು ಎಂಬುದನ್ನು ಉನ್ಮೀಲನಗೊಳಿಸುವ ದೃಷ್ಟಿಯಿಂದ ತೀರಾ ತೀರಾ ಸ್ವಂತ ವಿಷಯಗಳನ್ನೇ ನೀಡಬೇಕಾದ ಅನಿವಾರ್ಯ ಎಂಬುದನ್ನು ಸ್ಥಿತಿ ನನಗೆ ಬಂದಿದೆ ನೀವು ಗ್ರಹಿಸುತ್ತೀರೆಂದು ನಂಬಿದ್ದೇನೆ.

ಡಾ॥ ಕೃಷ್ಣಾನಂದ ಕಾಮತರ ಪರಿಚಯ ಆದದ್ದು ತೀರಾ ಆಕಸ್ಮಿಕ. ಗೆಳೆಯನನ್ನು ನೋಡಲು ಬೆಂಗಳೂರು ಆಕಾಶವಾಣಿ ಕೇಂದ್ರಕ್ಕೆ ಹೋಗಿದ್ದೆ. ಆತನ ಕುರ್ಚಿಯ ಮುಂದೆ ಸುಮಾರು ಹೊತ್ತು ಕಾದು ಕುಳಿತೆ. ಅವನು ತನ್ನ ಕೆಲಸದಲ್ಲಿ 'ಬಿಸಿ'ಯಾಗಿದ್ದ. ಖಾದಿ, ದಟ್ಟಿ ಪಂಚೆ, ಷರ್ಟು, ಮೇಲೆ ಟವಲ್ ಹಾಕಿಕೊಂಡು ಸುಮ್ಮನೆ ಕುಳಿತಿದ್ದ ನನ್ನನ್ನು, ಅಲ್ಲೇ ಇದ್ದ ಡಾ॥ ಜ್ಯೋತ್ಸ್ನಾ ಕಾಮತರು ತುಂಬು ಸೌಜನ್ಯದಿಂದ ಕುತೂಹಲದಿಂದ "ನೀವು ಯಾರು? ಏನು ಮಾಡುತ್ತಾ ಇದ್ದೀರಿ" ಮುಂತಾಗಿ ವಿಚಾರಿಸಿದರು. ಆ ವೇಳೆಗೆ ಅವರು ಯಾರು ಎಂಬುದು ನನಗೆ ಗೊತ್ತಿರಲಿಲ್ಲ. ನನ್ನ ಮೌನ ಒಮ್ಮೆಲೆ ಒಡೆದು ಹೋಯಿತು. ನನ್ನ ಬಗ್ಗೆ ಒಂದಿಷ್ಟು ವಿವರಗಳನ್ನು ಬಿಡದೆ, ಅವರಿಗೆ ಬೇಕೆ ಬೇಡವೆ? ಎಂಬುದನ್ನು ವಿಚಾರ ಮಾಡದೆ ಸುಮಾರು ಅರ್ಧಗಂಟೆ ವಿವರಿಸಿದೆ. ನನಗೆ ಹೊತ್ತು ಕಳೆಯುವುದು ಬೇಕಿತ್ತು. ತುಂಬ ಸಹನೆಯಿಂದ ಪ್ರೀತಿಯಿಂದ, ನನ್ನ ಉತ್ಸಾಹಕ್ಕೆ ತಣ್ಣೀರು ಎರಚದೆ ಆಕೆ ಆಲಿಸಿದರು. (ಇಂದಿಗೂ ಡಾ॥ ಜ್ಯೋತ್ಸ್ನಾ ಕಾಮತರು ಅಷ್ಟೇ ಪ್ರೀತಿಯಿಂದ ಕುತೂಹಲದಿಂದ ಕೇಳುತ್ತಾರೆ) ನನ್ನ ಅಂದಿನ ಉತ್ಸಾಹ, ಆದರ್ಶ, ಒರಟುತನಗಳು, ಮೆಚ್ಚಿಗೆಯಾಗಿರಬೇಕು, ತಮ್ಮ ಪರಿಚಯ ಮಾಡಿಕೊಂಡರು. ನನ್ನನ್ನು ತಮ್ಮ ಮನೆಗೆ ಆಹ್ವಾನಿಸಿದರು. "ನಿಮ್ಮಂತಹ ಉತ್ಸಾಹಿಗಳನ್ನು ನಮ್ಮ ಯಜಮಾನರು ಡಾ॥ ಕೃಷ್ಣಾನಂದ ಕಾಮತರು ಭೇಟಿಯಾಗಲು ತುಂಬಾ ಇಷ್ಟಪಡುತ್ತಾರೆ" ಎಂದರು. ಆ ವೇಳೆಗೇ ನಾನೂ ಅಮೇರಿಕೆಗೆ ಹೋಗಿದ್ದೆ – ಎಂಬ ಡಾ॥ ಕಾಮತರ ಪುಸ್ತಕವನ್ನು ಓದಿದ್ದೆ, ಮೆಚ್ಚಿಕೊಂಡಿದ್ದೆ; "ಖಂಡಿತಾ ಬರುತ್ತೇನೆ ಭೇಟಿಯಾಗುತ್ತೇನೆ" ಎಂದು ಹೇಳಿದೆ. ಗೆಳೆಯನಿಗ ಅತ್ತಿತ್ತ ನೋಡಿದೆ. ಒಂದು ಗಂಟೆಯಾದರೂ ಅವನು ಬರುವ ಸೂಚನೆ ಕಾಣಲಿಲ್ಲ. ಈ ನಡುವೆ ನಾನು "ಬರುತ್ತೇನೆ" ಎಂದು ಹೊರಟೆ. "ಇರಿ ಸ್ವಲ್ಪ ಚಹಾ ಸೇವಿಸಿ ಹೋಗುವಿರಂತೆ" ಎಂದು ಡಾ॥ ಜ್ಯೋತ್ಸ್ನಾ ಅವರು ನನ್ನೊಂದಿಗೆ ಹೊರಕ್ಕೆ ಬಂದರು. ಆಯ್ತು ಮೇಡಂ ಎಂದು ಅವರನ್ನೇ ಹಿಂಬಾಲಿಸಿದೆ. ಆಗ ನನ್ನ ಜೇಬಿನಲ್ಲಿದ್ದದ್ದು ಕೇವಲ ಐದು ರೂಪಾಯಿ ಮಾತ್ರ. ಮನಸ್ಸಿಗೆ ಕಸಿವಿಸಿಯಾಯಿತು. ಹೇಗೆ ಇವರಿಂದ ತಪ್ಪಿಸಿಕೊಳ್ಳುವುದು ಎಂದು ಯೋಚಿಸಿ, ಅಲ್ಲೇ ಕ್ಯಾಂಟೀನ್‌ನಲ್ಲಿ ಟೀ ಕೊಡಿಸಬಹುದು, ಎಂದು ನೆಮ್ಮದಿ ತಂದುಕೊಂಡೆ. ಅವರು ನೇರವಾಗಿ ಹೋಟೆಲ್ ಪರಾಗ್‌ಗೆ ಕೊಂಡೊಯ್ದರು. ಇನ್ನು ನನ್ನ ಬಿಂಕ, ಬಿಗುಮಾನಗಳು ಕೆಲಸ ಮಾಡುವುದಿಲ್ಲ ಅನ್ನಿಸಿಬಿಟ್ಟಿತು. ತಾಯಿಯನ್ನೇ ಅನುಸರಿಸುವ ಮಗುವಿನಂತೆ ಅವರನ್ನು ಹಿಂಬಾಲಿಸಿದೆ. ಹೋಟೆಲ್‌ನಲ್ಲಿ ಕುಳಿತೆವು "ತಿಂಡಿ ಏನಾದರೂ ತಗೋತೀರಾ?" ಆತ್ಮೀಯವಾಗಿ ಕೇಳಿದರು. "ಇಲ್ಲ ಮೇಡಂ ಊಟಮಾಡಿಕೊಂಡು ಬಂದಿದ್ದೇನೆ" ಎಂದೆ. ಅದು ಸತ್ಯವೂ ಆಗಿತ್ತು. "ನಿಮಗೇನು? ಚಹಾನೋ ಕಾಫಿನೋ ಯಾವುದು ನಡೆದೀತು?" ಪ್ರಶ್ನಿಸಿದರು. "ಯಾವುದಾದರೂ ಪರವಾಗಿಲ್ಲ" ಎಂದವನೇ ಎರಡು ಲೋಟ ನೀರನ್ನು ಕುಡಿದೆ. ಮತ್ತೆ ಅವರು ನೀವು ಸಂಕೋಚ ಮಾಡಬೇಡ್ರಿ, ತಿಂಡಿ, ಏನಾದರೂ ತಗೊಳ್ಳಿ ಎಂದು ಮತ್ತೊಮ್ಮೆ ಅಷ್ಟೇ ಆತ್ಮೀಯತೆಯಿಂದ ಒತ್ತಾಯಿಸಿದರು. ನಾನು ಮಾತನ್ನು ಬೇರೆಯಕಡೆ ತಿರುಗಿಸಿ ನಾನು ತೆಗೆದ ವೀರಗಲ್ಲುಗಳ ಛಾಯಾಚಿತ್ರಗಳ ಬಗ್ಗೆ ಅವುಗಳ ಶಿಲ್ಪದ ಬಗ್ಗೆ ವಿವರಿಸತೊಡಗಿದೆ. ಸಮಾಧಾನವಾಗಿ ಕೇಳಿದರು. ಕಾಫಿ ಕುಡಿದು ಹೊರಬರುವಾಗ "ನಿಮ್ಮಂಥವರನ್ನು ಕಂಡರೆ ತುಂಬಾ ಇಷ್ಟಪಡುತ್ತಾರೆ" ಎಂದಷ್ಟೇ ಹೇಳುವುದರ ಮೂಲಕ "ನೀವು ಅವರನ್ನೇ ಆದಷ್ಟು ಬೇಗ ಭೇಟಿಯಾಗಿ" ಎಂಬುದನ್ನು ಸೂಚಿಸಿದರು. ಬಿಲ್ ಅವರೇ ನೀಡಿದರು. ನಾನು ಕೊಡುತ್ತೇನೆ ಎಂಬ ಮಾತು ನನ್ನ ಬಾಯಿಂದ ಬರಲೇ ಇಲ್ಲ ಅಥವಾ ಇದೇನು? ಇವನು

ಸೌಜನ್ಯಕ್ಕಾದರೂ ಬಿಲ್ ಕೊಡುತ್ತೇನೆ ಎಂದು ಹೇಳಲಿಲ್ಲವಲ್ಲ ಎಂಬ ಕಲ್ಪನೆಯ ಅವರ ಮನಸ್ಸಿನಲ್ಲಿ ಹೊಳೆಯಲಿಲ್ಲ. ಮಗನಿಗೆ ಕಾಫಿ ಕೊಡಿಸಿದ ತೃಪ್ತಿ ಅವರ ಮುಖದಲ್ಲಿತ್ತು. ಆ ಮಾತೃಹೃದಯ ವಾತ್ಸಲ್ಯದ ಸವಿಯನ್ನು ಅಂದಿನಿಂದ ಇಂದಿನವರೆಗೆ ನಿರಂತರವಾಗಿ ಪಡೆಯುತ್ತಲೇ ಬಂದಿದ್ದೇನೆ. ಪಡೆಯುತ್ತಲೇ ಇರುತ್ತೇನೆ.

ಒಂದು ದಿನ ಮಟ ಮಟ ಮಧ್ಯಾಹ್ನ ಮಲ್ಲೇಶ್ವರದ ದತ್ತಕೃಪಾ ಅಪಾರ್ಟ್‌ಮೆಂಟ್ಸ್‌ನ ಡಾ|| ಕಾಮತರ ಮನೆಯ ಬಾಗಿಲನ್ನೇ ಬಡಿದೆ. ಡಾ|| ಕಾಮತರೇ ಬಾಗಿಲನ್ನ ತೆರೆದರು. ನಾನು ನನ್ನ ಪರಿಚಯ ಮಾಡಿಕೊಂಡೆ "ಬನ್ನಿ , ಬನ್ನಿ" ಎಂದು ತುಂಬುಹೃದಯದಿಂದ ಸ್ವಾಗತಿಸಿದರು. ನನ್ನ ಬಗ್ಗೆ ಡಾ|| ಜ್ಯೋತ್ಸ್ನಾ ಅವರು ಹೇಳಿದ್ದಿರಬೇಕು. ನನ್ನನ್ನು ಚಿರಕಾಲದ ಮಿತ್ರನಂತೆ ಆದರಿಸಿ ಅಭಿಮಾನ ತೋರಿದರು. ಕುಡಿಯಲು ನೀರನ್ನು ಕೊಟ್ಟು, ನನ್ನೆದುರಿಗೆ ಕುಳಿತರು. ನನ್ನ ಸಂಶೋಧನೆಯ ವಿಷಯವನ್ನು, ನನ್ನ ಕ್ಷೇತ್ರ ಪರಿವೀಕ್ಷಣಾ ಕಾರ್ಯವನ್ನು ಆ ಸಂದರ್ಭದಲ್ಲಿ ನಾನು ತೆಗೆದ ವೀರಗಲ್ಲುಗಳ ಛಾಯಾಚಿತ್ರಗಳನ್ನು ಕುರಿತು ವಿವರಿಸತೊಡಗಿದೆ. ಅವರು ನಡುವೆ ಬಾಯಿ ಹಾಕಲಿಲ್ಲ. ತುಂಬಾ ಸಮಾಧಾನದಿಂದ, ನನಗೆ ಉತ್ತೇಜನವನ್ನ ನೀಡುವಂತೆ ಕೇಳತೊಡಗಿದರು. ನಡುವೆ ಎದ್ದು ಹೋಗಿ ನನಗೆ ತಿಂಡಿಯನ್ನು ತಂದುಕೊಟ್ಟರು. ಯಾವ ಮುಜುಗರವೂ ಇಲ್ಲದೆ ಅದನ್ನ ಮುಗಿಸಿದೆ. ಟೀ ಬಂತು ಮುಗಿಯಿತು. ಸುಮಾರು ಎರಡು ಮೂರುಗಂಟೆ ಕಳೆದಿರಬಹುದು ನನಗೆ ಮಾತಿನ ಸರಕು ಮುಗಿಲಿಲ್ಲ. ಅವರ ತೃಪ್ತ ಮುಖವನ್ನೇ ನೋಡಿದಂತೆ ನನಗೆ ಎಲ್ಲಿಲ್ಲದ ಹುಮ್ಮಸ್ಸು. ಈ ಹುಮ್ಮಸ್ಸನ್ನು ಕೊನೆಯವರೆಗೂ ಅವರು ನನ್ನಲ್ಲಿ ಉಳಿಸಿದರು, ಬೆಳೆಸಿದರು. "ನಿಮ್ಮ ನಿಬಂಧದ ಬರವಣಿಗೆ ಮುಗಿಯಿತೇ?" ಚುಟುಕದ ಪ್ರಶ್ನೆಯನ್ನು ಹಾಕಿದರು. ಮುಗಿದಿದೆ ಅದಕ್ಕೆ ಛಾಯಾಚಿತ್ರಗಳನ್ನು ತಯಾರುಮಾಡಿಸಬೇಕಷ್ಟೇ? ಎಂದೆ. "ನೀವು ತೆಗೆದ ಛಾಯಾಚಿತ್ರಗಳನ್ನೆ ನೋಡೋಣ ಒಂದು ದಿನ ತನ್ನಿ" ಎಂದರು. 'ಆಯಿತು ಸಾರ್' ಇನ್ನು ಬರ್ತೀನಿ ಎದು ಎದ್ದು ಹೊರಟೆ. ಅಂದು ಅವರು ತಮಗೆ ಛಾಯಾಗ್ರಹಣ ಕಲೆ ಬರುತ್ತದೆ ಎಂದಾಗಲೀ, ತಾವು ಲ್ಯಾಬ್ ಇಟ್ಟಿರುವ ವಿಷಯವನ್ನಾಗಲಿ ಏನೊಂದನ್ನು ಹೇಳಲಿಲ್ಲ.

ಕೆಲವು ದಿನಗಳ ನಂತರ, ನಾನು ಛಾಯಾ ಚಿತ್ರಗಳನ್ನು ಅಂಟಿಸಿ, ಅದಕ್ಕೆ ಸಂಬಂಧಿಸಿದ ಟಿಪ್ಪಣಿಗಳನ್ನು ಬರೆದ ಕಾರ್ಡುಗಳನ್ನು ಅವರ ಬಳಿಗೆ ಕೊಂಡೊಯ್ದೆ. ಇಲ್ಲಿ ಒಂದು ವಿಷಯವನ್ನು ಹೇಳಿಬಿಡುವುದು ಸೂಕ್ತ. ನಾನು ಎಂದೂ ಅವರ ಬಳಿಗೆಹೋಗುವಾಗ ಇಂಥ ದಿನ ಬರುತ್ತೇನೆ. ಇಷ್ಟು ಹೊತ್ತಿಗೆ ಬರುತ್ತೇನೆ ಎಂದು ನಿಗದಿ ಮಾಡಿಕೊಂಡು ಹೋದವನಲ್ಲ. ನನ್ನ ಮಟ್ಟಿಗೆ ಅವರ ಮನೆಯ ಬಾಗಿಲು ಸದಾ ತೆರದೇ ಇತ್ತು. ಈಗಲೂ ಅದೇರೀತಿ ಇದೆ. ಕೆಲವೊಮ್ಮೆ ಬರುತ್ತೇನೆ ಎಂದು ಹೇಳಿ, ಆದಿನ ಆ ಸಮಯಕ್ಕೆ ಹೋಗದೇ ಇದ್ದದ್ದೂ ಉಂಟು. ಆಗ ಅವರು ನನಗೆ ಕಾದಿದ್ದೂ ಉಂಟು. ಆದರೆ ಎಂದೂ ಅವರು ನೀನು ಯಾಕೆ ಬರಲಿಲ್ಲ ಎಂದು ಕೇಳಿದವರಲ್ಲ. ಒಮ್ಮೆ ಸಿಕ್ಕಿದ್ದರೆ ಸಾಕು, ನಾನು ಹೇಳಿದ ಸಮಯಕ್ಕೆ ಬರಲಾಗಲಿಲ್ಲ ಎಂದು ಹೇಳಿದ್ದಕ್ಕೆ. "ನೀವು ನೂರುಗುಡಿ ಪೂಜಾರಿ, ನನಗೆ ಗೊತ್ತು. ಪರವಾಗಿಲ್ಲ." ಎಂದು ಅಷ್ಟಕ್ಕೆ ಮಾತು ಮುಗಿಸಿ ಬರುತ್ತಿದ್ದರು. ನಾನು ಮಾತನ್ನು ಎಳೆಯದೆ ಬೇರೆಯ ವಿಷಯದತ್ತ ಹೊರಳಿಸುತ್ತಿದ್ದೆ.

ನನ್ನ ಛಾಯಾ ಚಿತ್ರಗಳನ್ನೆಲ್ಲ ನೋಡಿದರು ಅವುಗಳ ಬಗ್ಗೆ ನನ್ನ ಟಿಪ್ಪಣಿಗಳನ್ನು ಓದಿದರು. ನನ್ನ ವ್ಯಾಖ್ಯಾನವನ್ನು ಕೇಳಿದರು. ಎರಡು ಮೂರು ಗಂಟೆಗಳ ಕಾಲ ಅವುಗಳನ್ನ ಪರಿಶೀಲಿಸಿದ ನಂತರ "ಇವುಗಳನ್ನು ನಿಮ್ಮ ಥೀಸೀಸ್ ನಲ್ಲಿ ಹೇಗೆ ಕೊಡುತ್ತೀರಿ?"– ಎಂದು ನನ್ನತ್ತ ನೋಡಿದರು. ನಾನು ನಾನೇ ಮಹಾಪ್ರಜ್ಞನಂತೆ" ಏನಿದೆ? "ಇವುಗಳನ್ನು ನಾಲ್ಕು ನಾಲ್ಕು ಕಾಪಿ ಪ್ರಿಂಟ್ ಹಾಕಿಸಿ ಅನುಬಂಧದಲ್ಲಿ ಕೊಡುವುದು" ಎಂದೆ. ಒಂದು ರೀತಿ ಕನಿಕರದಿಂದ ನನ್ನನ್ನೆ ನೋಡಿದರು. "ಯಾಕೆ ಸಾರ್ ಆಗೋದಿಲ್ವೇ?" ಎಂದು ಅವರತ್ತ ಅಸಹಾಯಕವಾಗಿ ನೋಡಿದೆ.

"ನೋಡಿ ಶಾಸ್ತ್ರಿಗಳೇ, ನಿಮ್ಮ ಗೈಡ್ ಡಾ|| ಚಿದಾನಂದಮೂರ್ತಿಗಳು. ಅವರ ಬಗ್ಗೆ ನನಗೆ ತುಂಬಾ ಗೌರವವಿದೆ. ನೀವು ಶ್ರಮವಹಿಸಿ ಕೆಲ್ಸ ಮಾಡಿದಿರಿ. ನಿಮ್ಮ ಬಗ್ಗೆ ಅಭಿಮಾನವೂ ಇದೆ. ನೀವು ಅವರ ಒಪ್ಪಿಗೆಯನ್ನು ಸಲಹೆಯನ್ನು ಪಡೆದು, ಛಾಯಾಚಿತ್ರಗಳನ್ನು ಹೇಗೆ ಕೊಡುವುದು ಎಂಬುದರ ಬಗ್ಗೆ ಅವರೊಂದಿಗೆ ವಿಚಾರ ಮಾಡಿ ಬನ್ನಿರಿ. ಹಾಗೇ ನೀವು ಬರುವಾಗ ನಿಮ್ಮ

ಬಳಿ ಇರುವ ನೆಗೆಟೀವ್ಸ್‌ಗಳನ್ನು, ನಿಮ್ಮ ಥೀಸಿಸ್‌ನ ಪ್ರತಿಯನ್ನು ತನ್ನಿರಿ" ಎಂದರು. ನಾನು ಎರಡನೆಯ ಮಾತೇ ಇಲ್ಲ ಎಂಬುವಂತೆ, "ಇಲ್ಲಾ ಸಾರ್, ನಮ್ಮ ಮೇಷ್ಟ್ರು ಖಂಡಿತಾ ಒಪ್ಪಿಕೊಳ್ಳುತ್ತಾರೆ. ಮೇಲಾಗಿ ಸಂತೋಷಪಡುತ್ತಾರೆ. ನಾನು ನೀವು ಹೇಳಿದಂತೆ ಮಾಡ್ತೇನೆ. ಹೇಗೆ ಮಾಡೋದು ಹೇಳಿ ಎಂದು" ಆಗಲೇ ಕೆಲಸ ಮುಗಿಸಿಬರುವವನಂತೆ ತುದಿಗಾಲಿನ ಮೇಲೆ ನಿಂತು ಹೇಳಿದೆ. ಅವರು ನೆಮ್ಮದಿಯಾಗಿ "ಹಾಗಲ್ಲಾ, ಶಾಸ್ತ್ರಿಗಳೇ, ನೀವು ಅವರ ಸ್ಟೂಡೆಂಟು, ಅವರು ನಿಮ್ಮ ಗೈಡು, ಅವರಿಗೆ ಹೇಳಿ ಬನ್ನಿರಿ. ಅವರು ಖಂಡಿತಾ ಒಪ್ಪಿಕೊಳ್ತಾರೆ. ಅಂತ ನನಗನಿಸುತ್ತದೆ. ಆದರೆ ಕೆಲಸ ಮಾಡುವ ಮುನ್ನ ಅವರಿಗೆ ತಿಳಿಸಬೇಕಾದುದು ನಿಮ್ಮ ಕರ್ತವ್ಯ. ಅವರಿಂದಲೂ ನೂರಾರು ಸಲಹೆಗಳು ದೊರೆಯುತ್ತವೆ. ನೋಡಿ ಥೀಸಿಸ್ ವಿಷಯದಲ್ಲಿ ನಾವು ಯಾರೇ ಏನೇ ಹೇಳಿದರೂ ಅದು ನಿಮಗೆ ಒಪ್ಪಿಗೆಯಾದರೂ ನೀಮ್ಮ ಗೈಡ್ ಅವರ ಗಮನಕ್ಕೆ ತರದೆ ಏನೂ ಮಾಡುವುದು ಸೂಕ್ತವಲ್ಲ" ಎಂದು ನನ್ನನ್ನು ಎಚ್ಚರಿಸಿದರು.

"ನೋಡಿ, ಈಗಿರುವಂತೆಯೇ ಫೋಟೋಗಳನ್ನು ಪ್ರಿಂಟ್ ಮಾಡಿ ಕೊಡುವುದರಲ್ಲಿ ಯಾವ ಪ್ರಯೋಜನವೂ ಆಗೋದಿಲ್ಲ. ನೀವು ಯಾವ ವೀರಗಲ್ಲಿನ ಯಾವ ಅಂಶವನ್ನು ಹೈಲೈಟ್ ಮಾಡಿ ಹೇಳುತ್ತೀರಿ ಅದು ಚನ್ನಾಗಿ ಬರಬೇಕು. ಆದು ಇಂಥ ನಂಬರ್ ಫೋಟೋದಲ್ಲಿದೆ ಎಂಬುದಾಗಿ ಥೀಸಿಸ್ ಬಾಡೀನಲ್ಲಿ ಕೊಡಬೇಕು. ನೀವು ಫೋಟೋ ತೆಗೆಯುವಾಗಲೇ ಎಚ್ಚರವಹಿಸಬೇಕಾಗಿತ್ತು. ನೋಡಿ ಈ ವೀರಗಲ್ಲಿನಲ್ಲಿ ಕೋಟೆ ಚಿತ್ರದ ಬಗ್ಗೆ ಹೇಳ್ತೀರಿ. ಅದನ್ನು ಅಷ್ಟನ್ನೇ ನೀವು ಡೆವಲಪ್ ಪ್ರಿಂಟ್ ಮಾಡಬೇಕು. ಇಲ್ದೇ ಹೋದರೆ ನೋಡುವವರಿಗೆ ಏನೂ ಅರ್ಥ ಆಗೋಲ್ಲ" ಮುಂತಾಗಿ ವಿವರಿಸಿದರು. ನನಗಾಗಲೇ ಹೊಳೆದದ್ದು, ಹೇಗೆ ಕೊಡಬೇಕು ಛಾಯಾ ಚಿತ್ರಗಳನ್ನು ಎಂಬುದರ ಬಗ್ಗೆ. "ಸಾರ್ ಈಗೇನು ಮಾಡುವುದು ಮತ್ತೆ ಹೋಗಿ ಫೋಟೋ ತೆಗೆದುಕೊಂಡು ಬರುವುದೇ?" ಎಂದು ನಿಸ್ಸಹಾಯಕವಾಗಿ ಅವರತ್ತ ನೋಡಿದೆ. "ಏನೋ ಮಾಡೋಣ. ನೀವು ಹೋಗಿ ನಿಮ್ಮ ಗುರುಗಳ ಬಳಿ ಚರ್ಚೆಮಾಡಿ ಬನ್ನಿ" ಎಂದು ಮತ್ತೆ ಎಚ್ಚರಿಸಿದರು. "ಸರಿ ಸಾರ್, ಈಗಲೇ ಹೊರಟೆ." ಎಂದು ಹೊರಟೆ. ಅದೇ ದಿನ ಗುರುಗಳಾದ ಡಾ॥ ಎಂ. ಚಿದಾನಂದಮೂರ್ತಿಯವರನ್ನು ಕಂಡು ಎಲ್ಲ ವಿವರಗಳನ್ನು ತಿಳಿಸಿದೆ. ಅವರು ತುಂಬಾ ಸಂತೋಷಪಟ್ಟರು. "ಖಂಡಿತಾ, ಖಂಡಿತಾ, ನೀವು ಈ ವಿಷಯದಲ್ಲಿ ಅವರ ನೆರವನ್ನು ಪಡೆಯಿರಿ" ಎಂದು ಅನುಮತಿ ನೀಡಿದರು. ಈ ವಿಷಯವನ್ನು ತಡಮಾಡದೇ ಕಾಮತರಿಗೆ ತಿಳಿಸಿ ನನ್ನ ಹಳ್ಳಿಗೆ ಹಿಂತಿರುಗಿದೆ. ನೆಗೆಟೀವ್‌ಗಳನ್ನು ತೆಗೆದುಕೊಂಡು ಬರುತ್ತೇನೆಂದು ಹೇಳಿ ಹೋದವನು ಹದಿನೈದು ದಿನ ಅತ್ತ ತಲೆಯನ್ನು ಹಾಕಲಿಲ್ಲ. ಆಮೇಲೆ ಒಂದು ದಿನ ಅವರ ಮನೆಗೆ ಹೋದೆ. "ಎಲ್ಲಿ ನೆಗೆಟೀವ್‌ಗಳು ಥೀಸಿಸ್ ಕಾಪಿ ತಂದಿಲ್ಲವಾ?" ಎಂದು ಡಾ॥ ಕಾಮತರು ಕೇಳಿದಾಗ "ಇಲ್ಲ ಸಾರ್, ಈ ಸಲ ಬಂದಾಗ ತರುತ್ತೇನೆ". ಎಂದು ನನ್ನ ಎಂದಿನ ಬೇಜವಾಬ್ದಾರಿತನದಿಂದ ಹೇಳಿದೆ. ನನ್ನ ಈ ಬೇಜವಾಬ್ದಾರಿತನವನ್ನೇ ಡಾ॥ ಕಾಮತರು ಕೊನೆಯವರೆಗೂ ಸಹಿಸಿಕೊಂಡರು. ಎಂದೂ ಎಂಥಾ ಸಂದರ್ಭದಲ್ಲಿಯೂ ಅವರು ನನ್ನ ಬಗ್ಗೆ ಬೇಸರಗೊಂಡಿದ್ದಾಗಲೀ ರೇಗಿದ್ದಾಗಲೀ, ಇಲ್ಲ. ಕೆಲವೊಮ್ಮೆ ಡಾ॥ ಜ್ಯೋತ್ಸ್ನಾ ಕಾಮತರೂ ನನ್ನ ಮೇಲೆ ಸಿಟ್ಟಾಗುತ್ತಿದ್ದರು. (ಈಗಲೂ ಆಗುತ್ತಾರೆ) ಅದು ನಿಷ್ಕಲ್ಮಷವಾದ ಸಿಟ್ಟು. ಅಂಥ ಸಿಟ್ಟಿನ ಸವಿಯನ್ನೇ ಬಲ್ಲವರೇ ಬಲ್ಲರು. "ಯಾಕೆ ಶಾಸ್ತ್ರಿಗಳನ್ನು ಅಂತಿಯ, ಆತನಿಗೆ ಇರುವೆ ಕಡಿದ ಹಾಗೂ ಆಗೊಲ್ಲಾ" -ಎಂದು ಕಾಮತರು ಪದೇ ಪದೇ ಹೇಳುತ್ತಿದ್ದರು. ಡಾ॥ ಜ್ಯೋತ್ಸ್ನಾ ಕಾಮತರು ತಮ್ಮ ಮಗನ ಮೇಲೆ ರೇಗುತ್ತಾರೋ ಇಲ್ಲವೋ ತಿಳಿಯದು. ನನ್ನ ಮೇಲೆ ರೇಗುವ ಹಕ್ಕನ್ನು ಇಂದಿಗೂ ಉಳಿಸಿಕೊಂಡಿದ್ದಾರೆ. ನನ್ನ ಮೇಲೆ ರೇಗಿದ ಒಂದೆರಡು ಸಂದರ್ಭಗಳಲ್ಲಿ ಅವರು ನಂತರ ಪಶ್ಚಾತ್ತಾಪ ಪಟ್ಟದ್ದುಂಟು. ಆಗ ನಾನು. "ಇಲ್ಲ, ನೀವು ರೇಗಬೇಕು, ಸಿಟ್ಟಾಗಬೇಕು, ಅದು ನಿಮ್ಮ ಹಕ್ಕು" ಎಂದು ಹೇಳುವುದರ ಮೂಲಕ ನನ್ನ ಬೇಜಾವಾಬ್ದಾರಿತನವನ್ನು ಸಮರ್ಥಿಸಿಕೊಂಡಿದ್ದೇನೆ.

ಧೈರ್ಯಮಾಡಿ ನನ್ನ ಬಳಿಯಿದ್ದ ನೆಗೆಟೀವ್‌ಗಳನ್ನು, ನನ್ನ ನಿಬಂಧದ ಪ್ರತಿಯನ್ನು ತೆಗೆದುಕೊಂಡು ಹೋದೆ. ಮೊದಲು ನೆಗೆಟೀವ್ ಗಳನ್ನು ನೋಡಿದರು. ಅವುಗಳು ಇರುವ ಅವ್ಯವಸ್ಥೆಯನ್ನು ಕಂಡು ಅವರು ಗಾಬರಿಯಾದರು. ಒಂದು ಕ್ರಮ ಇಲ್ಲ, ಯಾವ ಫೋಟೋ ಎಲ್ಲಿ ತೆಗೆದಿದ್ದು ಎಂಬುದಕ್ಕೆ ವಿವರವಿಲ್ಲ. ಪುಣ್ಯಕ್ಕೆ ಎಲ್ಲ ಫೋಟೋಗಳನ್ನು ರಟ್ಟಿನ ಮೇಲೆ ಅಂಟಿಸಿ ವಿವರಗಳನ್ನು ಬರೆದಿದ್ದೆ. ಆದರೆ

ಅವುಗಳ ನೆಗೆಟೀವ್‌ಗಳ ವಿವರಗಳನ್ನು ಬರೆಯಬೇಕು ಎಂಬ ಆಲೋಚನೆ ನನಗೆ ಬರಲಿಲ್ಲ. ಕೆಲವು ನೆಗೆಟೀವ್‌ಗಳನ್ನು ಸರಿಯಾಗಿ ಕಾಪಾಡದೇ ಹೋದುದರಿಂದ ಹಾಳಾಗುವ ಸ್ಥಿತಿಯಲ್ಲಿದ್ದುವು. ಅವುಗಳನ್ನು ವ್ಯವಸ್ಥಿತವಾಗಿ ತೂಗಿ ಜೋಡಿಸುವುದಕ್ಕೆ ನನಗೆ ಸೂಚನೆಗಳನ್ನು ನೀಡಿದರು. ಅವರು ಹೇಳಿದ ಕೆಲಸವನ್ನು ಅರ್ಧಗಂಟೆಯಲ್ಲಿ ಮಾಡಿ ಮುಗಿಸಿದೆ. ಅವುಗಳನ್ನು ಪ್ರತ್ಯೇಕವಾದ ಕವರುಗಳಿಗೆ ಹಾಕಿ ಅವುಗಳ ಮೇಲೆ ವಿವರಗಳನ್ನು ಬರೆಯಿಸಿದರು. "ಈಗ ನನಗೆ ಕೆಲಸ ಸುಲಭವಾಯಿತು" – ಎಂದು ಹೇಳಿದರು. ನನ್ನಿಂದ ಅವರ ಕೆಲಸವಾಯಿತು ಎಂಬ ಭಾವನೆ ಆ ಮಾತುಗಳಲ್ಲಿತ್ತು. ನಿಬಂಧದ ಬರವಣಿಗೆಯನ್ನು ತೆಗೆದುಕೊಂಡರು. ಅದು ತುಂಬ ವ್ಯವಸ್ಥಿತವಾದ ರೀತಿಯಲ್ಲಿತ್ತು. ಅಧ್ಯಾಯಗಳ ಪ್ರಕಾರ ವಿಂಗಡಿಸಿ ಟೈಪ್ ಮಾಡುವುದಕ್ಕೂ ಸಿದ್ಧವಿದ್ದ ಶುದ್ಧ ಹಸ್ತ ಪ್ರತಿಯನ್ನೇ ನೋಡಿ ತೃಪ್ತಿಪಟ್ಟರು. "ಆಯಿತು. ನಿಮ್ಮ ನಿಬಂಧವನ್ನೇ ಓದಿ. ಅದಕ್ಕೆ ಪೂರಕವಾದ ಫೋಟೋಗಳನ್ನೂ ಪ್ರಿಂಟ್ ಮಾಡುತ್ತೇನೆ" – ಎಂದು ಅವರು ಅಂದಾಗ ನನಗೆ ಸ್ವರ್ಗಕ್ಕೆ ಎರಡೇ ಗೇಣು ಇತ್ತು. ಹಣದ ಪ್ರಸ್ತಾಪ ಅವರೂ ಮಾಡಲಿಲ್ಲ; ನಾನೂ ಮಾಡಲಿಲ್ಲ.

ಮತ್ತೆ ತಿಂಗಳ ನಂತರ ಹೋದೆ. ಬನ್ನಿ, ಹೋಗೋಣ ಎಂದು ನನ್ನನ್ನು ಮೊದಲ ಬಾರಿಗೆ ತಮ್ಮ ಲ್ಯಾಬಿಗೆ ಕರೆದೊಯ್ದರು. ತಾವು ಪ್ರಿಂಟ್ ಮಾಡಿದ್ದ ವೀರಗಲ್ಲುಗಳ ಛಾಯ ಚಿತ್ರಗಳನ್ನು ಒಂದೊಂದು ತೋರಿಸಿದರು. ನನ್ನನ್ನೇ ನಾನು ನಂಬದಾದೆ. ನಾನು ತೆಗೆದ ಫೋಟೋಗಳಲ್ಲಿನ ಅನಾವಶ್ಯಕವಾದ ಅಂಶಗಳನ್ನು ತೆಗೆದುಹಾಕಿ ವೀರಗಲ್ಲನ್ನು, ವೀರಗಲ್ಲಿನ ಒಂದು ಭಾಗವನ್ನು ಮಾತ್ರ, ಪ್ರಿಂಟ್ ಮಾಡಿದ್ದರು. ಒಂದೊಂದು ಫೋಟೋ ಪ್ರತಿಗಳನ್ನು ಮಾಡಿದ್ದರು. ಬೇಗೂರಿನ ವೀರಗಲ್ಲಿನ ಮೇಲೆ ಬೆರಳಿನ ಮುದ್ರೆ ಮೂಡಿತ್ತು. ಅದನ್ನು ತೋರಿಸುತ್ತಾ "ನೋಡಿ ನಿಮ್ಮ ಸುಣ್ಣದ ಹೆಬ್ಬೆರಳು" ಎಂದವರೇ ನೋಡಿ ಸುಣ್ಣದ ಬೆರಳುಗಳೆ ಹಲವಾರು ನೆಗೆಟೀವ್‌ಗಳನ್ನು ಕೆಡಿಸಿದೆ." – ಎಂದು ಹೇಳಿದರೇ ಹೊರತು ಅವರು ಎಂದೂ ನನ್ನ ಅಭ್ಯಾಸದ ಬಗ್ಗೆ ಒಂದು ಆಕ್ಷೇಪ ತೆಗೆದವರಲ್ಲ. ಸುಮಾರು ಎರಡು ತಿಂಗಳ ಅವಧಿಯಲ್ಲಿ ಫೋಟೋಗಳನ್ನು ತಯಾರುಮಾಡಿ, ಅವುಗಳ ಮೇಲೆ ಇಂಡಿಯನ್ ಇಂಕ್‌ನಿಂದ ಸಂಖ್ಯೆಯನ್ನು ನೀಡಿದ್ದರು. "ನೋಡಿ ನೀವು ಸೂಕ್ತ ಜಾಗದಲ್ಲಿ ಇವುಗಳ ಸಂಖ್ಯೆಯನ್ನು ಬರೆಯಿರಿ" ಎಂದು ನನ್ನ ನಿಬಂಧವನ್ನು ಹಿಂತಿರುಗಿಸಿದರು. ನನಗೆ ಮತ್ತೊಂದು ಆಶ್ಚರ್ಯವೆಂದರೆ ನನ್ನ ನಿಬಂಧದಲ್ಲಿ ಮಾರಿಯಾ ಜನಾಂಗದವರು ನಿರ್ಮಿಸುವ ಸ್ಮಾರಕ ಶಿಲೆಗಳ ಬಗ್ಗೆ ಬರೆದಿದ್ದೆ. ಆದರೆ ಅವುಗಳ ಚಿತ್ರಗಳು ಇರಲಿಲ್ಲ. ಡಾ॥ ಕಾಮತರು ತಮ್ಮ ಮಧ್ಯ ಪ್ರದೇಶದ ಪ್ರವಾಸಕಥನದಲ್ಲಿ ತೆಗೆದ ಮಾರಿಯ ಮತ್ತು ಇತರ ಆದಿವಾಸಿಗಳ ವಿವಿಧ ಸ್ಮಾರಕಗಳ ಚಿತ್ರಗಳನ್ನು ನೀಡಿದ್ದರು. ಒಂದು ನಿಬಂಧಕ್ಕೆ ಛಾಯಾ ಚಿತ್ರಗಳನ್ನು ಹೇಗೆ ನೀಡಬೇಕು ಎಂಬುದನ್ನು ವಿವರಿಸಿದರು. ನೋಡಿ ಶಾಸ್ತ್ರಿಗಳೇ ನಿಮ್ಮ ನಿಬಂಧವನ್ನು ಓದದೆಯೂ ಕೇವಲ ವೀರಗಲ್ಲುಗಳ ಫೋಟೋಗಳನ್ನು ನೋಡುವುದರಿಂದಲೇ ಅವರಿಗೆ ವೀರಗಲ್ಲುಗಳ ಬಗ್ಗೆ ಒಂದು ಸ್ಪಷ್ಟ ಚಿತ್ರ ಸಿಗುವಂತಾಗಬೇಕು. ಎಂದವರೇ ಚಿತ್ರಗಳನ್ನು ಕ್ರಮದಲ್ಲಿ ಜೋಡಿಸಿದರು. ಇದೀಗ ನನ್ನ ನಿಬಂಧವನ್ನು ಅವರು ಅದೆಷ್ಟು ಆಳವಾಗಿ ಓದಿದ್ದರು ಎಂಬುದು ಅದರಿಂದ ವೇದ್ಯವಾಯಿತು. ಅದರ ಸಂಪೂರ್ಣ ಯಶಸ್ಸು ಅವರಿಗೇ ಸಲ್ಲಬೇಕು. ಬಹುಶಃ ಅಷ್ಟು ವ್ಯವಸ್ಥಿತವಾದ ರೀತಿಯಲ್ಲಿ ಛಾಯಾಚಿತ್ರಗಳನ್ನು ನೀಡಿರುವ ಕನ್ನಡ ನಿಬಂಧಗಳಲ್ಲಿ ನನ್ನದೇ ಮೊದಲನೆಯದಾಗಿತ್ತು. ಅದೇ ಕ್ರಮವನ್ನು ಪುಸ್ತಕವನ್ನು ಮುದ್ರಿಸುವಾಗಲೂ ಅನುಸರಿಸಿದೆ.

ಮತ್ತೊಮ್ಮೆ ಹೋಗುವ ವೇಳೆಗೆ ಎಲ್ಲಾ ಫೋಟೋಗಳನ್ನು ಕರಿಯ ಕಾಗದದ ಮೇಲೆ ಅಂಟಿಸಿ ಅವುಗಳನ್ನು ಕ್ರಮದಲ್ಲಿ ಜೋಡಿಸಿ, ಐದು 'ಜತೆ'ಗಳಾಗಿ ಬೇರೆ ಬೇರೆ ಇಟ್ಟು ಈಗ ಇದನ್ನು ನಿಬಂಧದೊಂದಿಗೆ ಬೈಂಡ್ ಮಾಡಿಸಿ, ಚಿತ್ರಗಳು ಕೊನೆಯಲ್ಲಿ ಇರಲಿ, ಫೋಟೋಗಳ ಮೇಲೆ ಥಿನ್ ಶೀಟ್ ಹಾಕಿರಿ, ಸರಿ ಟೈಪಾಗಿರುವ ನಿಮ್ಮ ನಿಬಂಧವನ್ನು ನೋಡಬಹುದೇ ಎಂದರು. ತೆಗೆದುಕೊಂಡು ಹೋದೆ. ನಾನು ಕೊಟ್ಟಿರುವ ಛಾಯಾಚಿತ್ರಗಳ ಸಂಖ್ಯೆಗೂ, ವಿಷಯಕ್ಕೂ ತಾಳೆಯಾಗುವುದೇ ಎಂಬುದನ್ನು ತಾವು ತಾವೇ ನೋಡಿ "ಬೀಗೇ," ಎಂದು ದೀರ್ಘವಾಗಿ ಎಳೆದು ಹೇಳಿದರು. ನಾನೇನೋ ಅವರ ಕೆಲಸ ಮಾಡಿದವನಂತೆ ಮೆಚ್ಚಿಕೊಂಡರು.

ನಿಬಂಧವನ್ನು ಬೈಂಡ್ ಮಾಡಿಸಿ ತೆಗೆದುಕೊಂಡು ಹೋಗಿ ತೋರಿಸಿ. ತುಂಬಾ ತೃಪ್ತರಾದರು. ಆ ಫೋಟೋಗಳಿಗೆ ಎಷ್ಟು ಆಗುತ್ತದೆ. – ಎಂದು ಕೇಳಬೇಕು ಎನ್ನಿಸಿತು. "ಸಾರ್, ಈ ಫೋಟೋಗಳ ಬಾಬ್ತು. ನಿಮ್ಮ ಶ್ರಮಕ್ಕೆ ತಕ್ಕಷ್ಟು ಕೊಡಲಾರೆ. ಎಷ್ಟಾಗುತ್ತದೆ ಎಂಬುದನ್ನು ತಿಳಿಸಿದರೆ ಕೊಡುತ್ತೇನೆ" ಎಂದು ಜೇಬಿಗೆ ಕೈಹಾಕಿದೆ. ನನ್ನನ್ನು ತಡೆದು ನೋಡಿ, ನನಗೆ ವೀರಗಲ್ಲುಗಳ ಬಗ್ಗೆ, ನಿಮ್ಮ ಅಧ್ಯಯನ ಶ್ರದ್ಧೆಯ ಬಗ್ಗೆ ಅಭಿಮಾನ ಇರುವುದರಿಂದ ಮಾಡಿದ್ದೇನೆ. ನನ್ನದು 'ವೈಜ್ಞಾನಿಕ ಛಾಯಾಗ್ರಣ' ಅದರಲ್ಲಿ ನನಗೆ ಹಣ ಬರುತ್ತದೆ. ಇಟ್ಟುಕೊಳ್ಳಿ "ಎಂದು ಹೇಳಿ" ಒಳ್ಳೆಯದಾಗಲೀ ನಿಮಗೆ ಬೇಗ ಡಾಕ್ಟರೇಟ್ ಬರುವಂತಾಗಲೀ ಎಂದು ಹಾರೈಸಿದರು.

ನಾನು ಯಾವಾಗಲೂ ಕಾಮತರನ್ನು ನೋಡಲು ಅವರ ಲ್ಯಾಬಿಗೆ ಹೋದರೆ ಅಲ್ಲೇ ಕುಳಿತು ರಾತ್ರಿ ಎಂಟು ಗಂಟೆಯವರೆಗೆ ಅದೂ ಇದು ಮಾಡುತ್ತಾ ಕುಳಿತಿದ್ದು. ಅವರೊಂದಿಗೆ ಮಲ್ಲೇಶ್ವರಕ್ಕೆ ಹೋಗಿ – ನಡುವೆ ಕಬ್ಬಿನ ಹಾಲನ್ನು ಕೊಡಿಸುತ್ತಿದ್ದರು– ಅಲ್ಲಿ ಬಸ್ ಹತ್ತಿ ಮನೆಗೆ ಬರುತ್ತಿದ್ದೆ.

ಕೆಲವು ಆಡಳಿತಾತ್ಮಕ ಅಡಚಣೆಗಳಿಂದ ನನಗೆ ಪದವಿ ಬರುವುದು ತಡವಾಯಿತು. ಬಂತು, ಆ ದಿನ ಅವರ ಮನೆಗೆ ಹೋದೆ. ಆ ದಿನ ಕಾಮತ್ ದಂಪತಿಗಳಿಬ್ಬರೂ ಇದ್ದರು. ನಿಬಂಧದ ಮುನ್ನುಡಿಯಲ್ಲಿ ನಾನು ಡಾ॥ ಕಾಮತ ದಂಪತಿಗಳ ಪುತ್ರ ವಾತ್ಸಲ್ಯವನ್ನು ಕುರಿತು ಎರಡು ಮಾತು ಬರೆದಿದ್ದೆ. ಅದನ್ನು ಓದಿದ ಡಾ॥ ಜ್ಯೋತ್ಸ್ನಾ ಕಾಮತರು "ಡಾಕ್ಟರೇಟ್ ಪದವಿ ಪಡೆದ ಮಗನನ್ನು ಪಡೆದಿದ್ದೇವೆ ನಮಗೆ ಹೆಮ್ಮೆಯ ಸಂಗತಿ" ಎಂದು ನನ್ನನ್ನು ಅಭಿನಂದಿಸಿದರು. ಕಾಮತರು ತಮ್ಮ ಆತ್ಮೀಯ ನೋಟದಿಂದ ನನ್ನನ್ನು ಅಭಿನಂದಿಸಿದರು.

ಡಾಕ್ಟರೇಟ್ ಪದವಿ ಬಂದನಂತರ ಪುಸ್ತಕದ ಮುದ್ರಣದ ಬಗ್ಗೆ, ಎರಡು ಮೂರು ಕಡೆ ವಿಚಾರ ಮಾಡಿದೆ. ಎಲ್ಲೂ ಸಫಲವಾಗಲಿಲ್ಲ. ಸರಿ ನನ್ನ ಹಣೆಯ ಬರಹವೇ ಇಷ್ಟು ಎಂದು ಸುಮ್ಮನಾದೆ. ಈ ವಿವರಗಳನ್ನು ಡಾ॥ ಕಾಮತರಿಗೆ ತಿಳಿಸಿದೆ. ಅವರು "ನೋಡಿ ಶಾಸ್ತ್ರಿಗಳೇ ನೀವು ನಿಬಂಧವನ್ನು ಪದವಿಗಾಗಿ ಸಲ್ಲಿಸುವಾಗ ಬರೆಯುವ ವಿಧಾನ ಬೇರೆ, ಅದನ್ನೇ ಪುಸ್ತಕ ರೂಪದಲ್ಲಿ ಪ್ರಕಟಿಸುವಾಗ ಇರಬೇಕಾದ ರೀತಿ ಬೇರೆ. ಈಗ ನಿಮ್ಮ ಓದುಗರ ಸಂಖ್ಯೆ ಬೇರೆಯಾಗುತ್ತದೆ. ವಿಶಾಲವಾಗುತ್ತದೆ. ಈ ದೃಷ್ಟಿಯಿಂದ ನಿಮ್ಮ ನಿಬಂಧವನ್ನು ಪುನಃ ಪರಿಶೀಲಿಸಿ ಮತ್ತೆ ಸಿದ್ಧಪಡಿಸಿ ಇಟ್ಟುಕೊಂಡಿರಿ. ಹೇಗೂ ನಿಮಗೆ ಸಮಯವಿದೆ. ಆದಷ್ಟು ವಿವರಗಳನ್ನು ಅಪ್‌ಟುಡೇಟ್ ಮಾಡಿಡಿ" ಎಂದು ಎಚ್ಚರಿಸಿದರು. ಅವರ ಸಲಹೆಯಂತೆ ಅದನ್ನು ನನ್ನ ಮಿತ್ರರು ಸು. ರುದ್ರಮೂರ್ತಿಶಾಸ್ತ್ರಿ ಮತ್ತು ಕಣಗಾಲ ರಾಧಾಕೃಷ್ಣರಿಗೆ ಕೊಟ್ಟು ಕಾಮತರ ಸಲಹೆಯನ್ನು ತಿಳಿಸಿದೆ. ಅವರಿಬ್ಬರೂ ನಿಬಂಧವನ್ನು ತಿದ್ದಿದರು. ಅದು ಹಾಗೆಯೂ ಇತ್ತು. ಉತ್ತಮ ಪ್ರತಿಮಾಡಲಿಲ್ಲ.

ಈ ನಡುವೆ ನನ್ನ ಹಳ್ಳಿಯ ಬದುಕಿನಲ್ಲಿ ಹಲವಾರು ಬದಲಾವಣೆಗಳಾದುವು. ಯಾವ ಆದರ್ಶವನ್ನ ಹೊತ್ತು ನನ್ನ ಹಳ್ಳಿಗೆ ಹೋಗಿದ್ದೆನೋ ಅದು ಈಡೇರಲಿಲ್ಲ. ನನ್ನನ್ನು ಊರು ಬಿಡಿಸುವ ಪ್ರಯತ್ನಗಳು ನಡೆದುವು. ಅವುಗಳನ್ನು ಎದುರಿಸುವ ತಾಕೀತು ಅಂದು ಇರಲಿಲ್ಲ. ಊರು ಬಿಟ್ಟು ಬರಬೇಕಾಯಿತು. ಅನಂತರ ದೇವರದಯೆಯಿಂದ ಐ.ಸಿ.ಎ.ಆರ್. ನಲ್ಲಿ ಉದ್ಯೋಗ ದೊರೆಯಿತು. ಬೆಂಗಳೂರಲ್ಲಿಯೇ ಆರುನೂರು ರೂಪಾಯಿಗಳ ಕೆಲಸಕ್ಕೆ ಸಿಂತೆ. ಈ ಅವಧಿಯಲ್ಲಿ ಕಾಮತರ ಒಡನಾಟ ತುಂಬಾ ಇತ್ತು. "ನೋಡಿ ಶಾಸ್ತ್ರಿಗಳೇ ನೀವು ಯಾವುದಕ್ಕೂ ಎದೆಗುಂದಬೇಡಿರಿ. ಆದರ್ಶಗಳನ್ನು ಹೊತ್ತವರ ಬದುಕೇ ಇಷ್ಟು. ಅದು ನಮ್ಮ ತಪ್ಪಲ್ಲ, ಆದರ್ಶಗಳ ತಪ್ಪಲ್ಲ. ನೀವು ಸಂಯಮದಿಂದ ಇರಿ. ಯಾರನ್ನೂ ಅನ್ನಲು ಹೋಗಬೇಡಿ, ಅತೃಪ್ತರಾಗಬೇಡಿ. ನಿಮ್ಮ ಮನಸ್ಸನ್ನು ಬೇರೆಡೆಗೆ ತಿರುಗಿಸಿ ನೀವೇ ಶ್ರೀನಿವಾಸ ರಾಮಾನುಜಂ, ಐನ್‌ಸ್ಟೈನ್ ಅಂತ ತಿಳಿದುಕೊಂಡಿದ್ದೀರಾ? ಅಂಥವರಿಗೇ ಕೆಲಸ ಸಿಗಲಿಲ್ಲ. ಸಿಗೋವಾಗ ನೀವು ಹೋಗಲಿಲ್ಲ. ಒಳ್ಳೆಯ ಕೆಲಸಕ್ಕೆ ನೀವು ಹಿಂದೆಬಿದ್ದಿರಿ. ಅದು ಈಡೇರಲಿಲ್ಲ ನೋ ರಿಗ್ರೆಟ್ಸ್" ಎಂದು ಸಮಾಧಾನ ಮಾಡುತ್ತಿದ್ದರು. ಆಚಾರ್ಯ ಪಾಠಶಾಲಾ ಸಂಜೆ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕ ಹುದ್ದೆ ಹಂಗಾಮಿಯಾಗಿ ದೊರೆಯಿತು. ಸೇರಿಕೊಂಡೆ. ಅವಧಿ ಮುಗಿಯಿತು.ನನ್ನ

ಕೆಲಸ ಖಾಯಂ ಆಗಲಿಲ್ಲ. ಅಡ್ಡವಾರಿ ಹಿಡಿದಿದ್ದರೆ ಆಗಬಹುದಿತ್ತು. ನನ್ನ ಪರವಾಗಿ ನನ್ನ ಗುರುಗಳು ತಾವೇ ಬಂದು ಕಾಲೇಜಿನ ವ್ಯವಸ್ಥಾಪಕರಿಗೆ ಶಿಫಾರಸ್ಸು ಮಾಡಿದರೂ ಆಗಲಿಲ್ಲ. ಡಾ॥ ಕಾಮತರಿಗೆ ತಿಳಿಸಿದೆ. ಅವರು 'ನೋಡ್ರೀ ಕೆಲಸ ಸಿಗಲಿಲ್ಲ ಅಂತ ಬೇಸರಬೇಡ. ನಿಮ್ಮ ಪರವಾಗಿ ನಿಮ್ಮ ಗುರುಗಳೇ ಹೋಗಿ ಶಿಫಾರಸ್ಸು ಮಾಡಿದರಲ್ಲಾ, ಅದಕ್ಕೆ ನೀವು ಹೆಮ್ಮೆ ಪಡಿ. ಶಾಸ್ತ್ರಿಗಳೇ ಹಾಗೇ ಸಂಪಾದನೆ ಮಾಡಬೇಕು ಅಂದ್ರೆ, ಅಶ್ವತ್ಥಕಟ್ಟೆಮೇಲಿರೋ ನಾಗರಕಲ್ಲಿನ ಮುಂದೆ ಗಂಟೆ ಹಿಡಿದು ನಿಂತರೆ ಆಗಿಹೋಗುತ್ತೆ. ನಾವು ಯಾವಾಗಲೂ ಡೌನ್ ಟು ಅರ್ತ್ ಯೋಚನೆ ಮಾಡಬೇಕು" ಎಂದು ಧೈರ್ಯವನ್ನು ತುಂಬುತ್ತಿದ್ದರು. ಮೊದಲೇ ಹುಂಬ, ಈ ರೀತಿಯ ಪ್ರೋತ್ಸಾಹದ ಮಾತುಗಳು ನನ್ನಲ್ಲಿ ಮತ್ತಷ್ಟು ಉತ್ಸಾಹವನ್ನು ತುಂಬುತ್ತಿತ್ತು.

ಕೆಲಸವಿಲ್ಲದೆ ಖಾಲಿ ಅಲೆಯುತ್ತಿದ್ದ ನನ್ನನ್ನು "ನೋಡಿ ಶಾಸ್ತ್ರಿಗಳೇ ನಿಮ್ಮ ಹತ್ರ ಹಲ್ಲಿದೆ, ನನ್ನ ಹತ್ರ ಕಡಲೆ ಇದೆ. ನಿಮ್ಮ ಹತ್ರ ಕಡಲೇ ಇಲ್ಲ ಹಲ್ಲಿದೆ. ನೀವು ತಿನ್ನಿರಿ" ಎಂದರು, ನನಗೆ ತಲೆಬುಡ ಅರ್ಥವಾಗಲಿಲ್ಲ, "ನೋಡಿ ನಾವು ಯಾವಾಗಲೂ ರಿಸೋರ್ಸ್‌ಫುಲ್ ಆಗಿರಬೇಕು ನಿಮಗೆ ಈಗ ಕೆಲಸ ಇಲ್ಲ, ಮತ್ತೆ ಕಾಲೇಜು ತೆಗೆಯುವವರೆಗೆ ಕೆಲಸ ಎಲ್ಲೂ ಸಿಗೋಲ್ಲ. ಈ ಬೇಸಿಗೆಯಲ್ಲಿ ಕರ್ನಾಟಕದ ಭಾಗಗಳನ್ನು ಸುತ್ತಾಡಿಬನ್ನಿ. ನನ್ನ ಹತ್ರ ಸ್ವಲ್ಪ ಹಣ ಇದೆ ಕೊಡ್ತೇನೆ. ಫಿಲಂ ರೀಲುಗಳು ಕೊಡ್ತೇನೆ. ವೀರಗಲ್ಲು, ಮಾಸ್ತಿ ಕಲ್ಲು, ದೇವಸ್ಥಾನ, ಶಿಲ್ಪಗಳ ಫೋಟೋ ತೆಗೆದುಕೊಂಡು ಬಂದು ನಿಮ್ಮ ನಿಬಂಧವನ್ನು ಅಪ್‌ಟುಡೇಟ್ ಮಾಡಿರಿ. ನೋಡಿ ಕೆಲಸ ಸಿಕ್ಕ ಮೇಲೆ ನಿಮಗೆ ರಜೆ ಸಿಗೋದಿಲ್ಲ" ಎಂದರು. ಅದೇ ಸಂದರ್ಭದಲ್ಲಿ ಗೆಳೆಯ ಲಿಂಗರಾಜು ಅವರಿಂದ, 'ವಾರಾಹಿ ಕನ್ನಡ ಸಂಘದಲ್ಲಿ ಒಂದು ಉಪನ್ಯಾಸ ನೀಡಿ, ಅಲ್ಲಿ ಮುಳುಗಡೆಯಾಗಲಿರುವ ವೀರಗಲ್ಲು ಮಾಸ್ತಿಕಲ್ಲು, ದೇವಾಲಯಗಳ ಬಗ್ಗೆ ಒಂದು ಪುಟ್ಟ ವರದಿ ತಯಾರು ಮಾಡಿಕೊಡಿ ನಿಮಗೆ ಎಂಟುದಿನ ಊಟ ವಸತಿ ಮತ್ತು ಬಂದು ಹೋಗುವ ವೆಚ್ಚ ಕೊಡುತ್ತೇವೆ' ಎಂಬುದಾಗಿ ಪತ್ರಬಂತು. ಆ ಪತ್ರವನ್ನು ಹಿಡಿದು ಕೊಂಡು ಅದೇ ದಿನ ಸಂಜೆ ಕಾಮತರಲ್ಲಿ ಓಡಿದೆ. ವಿಷಯ ಕೇಳಿ ಅವರು "ಎಂಥ ಸದವಕಾಶ ರೀ, ನೀವು ತಪ್ಪಿಸಿಕೊಳ್ಳಬೇಡಿ, ಸಾಧ್ಯವಾದರೆ ನಾನು ಬರ್‍ತೇನೆ. ನಿಮಗೆ ಬೇಕಾಗುವಷ್ಟು ರೋಲುಗಳನ್ನು ಕೊಡುತ್ತೇನೆ. ನಿಮಗೆ ಇದು ಅಗತ್ಯ, ಅಧ್ಯಯನಕ್ಕೆ ಯೋಗ್ಯವಾದುದು ಎಂಬುದನ್ನು ಖಚಿತಪಡಿಸಿಕೊಂಡು ತೆಗೆಯಿರಿ. ಇದು ನನಗೆ ಉಪಯೋಗಕ್ಕೆ ಬರುತ್ತದೆಯೋ ಬೇರೆಯವರಿಗೆ ಬರುತ್ತದೆಯೋ ಎಂಬುದನ್ನು ಕುರಿತು ನೀವು ಚಿಂತಿಸಬೇಡಿ, ಹೋದರೆ ಒಂದೇ ಫ್ರೇಂ ಹೋಗುವುದು, ಅದನ್ನು ತೆಗೆಯದೆ ಬಂದು ಅದೇ ಅದು ಬೇಕಿತ್ತು ಎಂದರೆ ಮತ್ತೆ ಎಷ್ಟು ಶ್ರಮ, ಎಷ್ಟು ಹಣ ವ್ಯರ್ಥಮಾಡಬೇಕು?" ಎಂದು ಪ್ರವಾಸಕ್ಕೆ ನನ್ನನ್ನು ತಯಾರಿ ಮಾಡಿದರು. ನಾನು ಆಗತಾನೇ ಒಂದು ಕ್ಯಾಮರಾ ಕೊಂಡಿದ್ದೆ. ನೋಡೀ ನಿಮ್ಮ ಕ್ಯಾಮರಾ ಜೋಪಾನ, ಅದಕ್ಕೆ ಎಲೆ ಅಡಿಕೆ ಸುಣ್ಣ ಬಳೀಬೇಡಿ ಲೆನ್ಸ್ ಮೇಲೆ ನೀವು ಬೆರಳಿಟ್ಟಿದ್ದಿರಿ ಅದನ್ನೇ ಕ್ಲೀನ್ ಮಾಡಿದ್ದೇನೆ. ಮತ್ತೆ ಆರೀತಿ ಮಾಡಬೇಡಿ. ನೂರು ವಸ್ತುಗಳನ್ನು ಸಂಪಾದಿಸುವಾಗ ನಾವು ಪಡುವ ಆನಂದಕ್ಕಿಂತ ದುಪ್ಪಟ್ಟು ದುಃಖ ಅದನ್ನು ಕಳೆದುಕೊಂಡಾಗ ಆಗುತ್ತದೆ. ಜಾಗ್ರತೆ! ಕ್ಯಾಮರಾ ಯಾರಕೈಗೂ ನೀಡಬೇಡಿ" ಎಂಬ ಜಾಗ್ರತೆಯನ್ನೂ ನೀಡಿದರು. "ನೀವು ಹೊರಡುವುದಕ್ಕೆ ಎರಡು ಮೂರು ದಿನ ಮುಂಚೆ ಬನ್ನಿ, ನಿಮಗೆ ರೋಲ್‌ಗಳನ್ನು ಕೊಡುತ್ತೇನೆ. ನಾನು ಬರುವುದನ್ನೂ ತಿಳಿಸುತ್ತೇನೆ". ಎಂದು ಹೇಳಿ ಕಳಿಸಿದರು.

ಹೊರಡುವುದಕ್ಕೆ ಮೂರುದಿನ ಮುಂಚೆ ಅವರ ಮನೆಗೆ ಹೋದೆ. ಆ ವೇಳೆಗಾಗಲೇ ಇವರು ಫಿಲಂ ರೋಲುಗಳು ತುಂಬಿದ ಕಿರಿಯ ಡಬ್ಬಿಗಳನ್ನು ಸಿದ್ಧ ಮಾಡಿದ್ದರು. ಅವುಗಳಿಗೆ ಬಿಳಿಯ ಕಾಗದವನ್ನು ಅಂಟಿಸಿ ಅದರ ಮೇಲೆ ಸಂಖ್ಯೆಗಳನ್ನು ಬರೆದಿದ್ದರು. ನಾನು ಹೋದೆ. ಡಾ॥ ಕಾಮತರು ಎಂದಿನಂತೆ ಶಾಂತಚಿತ್ತರಾಗಿರಲಿಲ್ಲ. ಸ್ವಲ್ಪ ಧಾವಂತ ಅವರ ಮುಖದಲ್ಲಿತ್ತು. ನನ್ನೊಂದಿಗೆ ಮಾತಾಡುವಾಗ ಅದೂ ಮಾಯವಾಯಿತು. "ನೋಡಿ, ನನಗೆ ಬೇರೆ ಕೆಲ್ಸ ಬಿದ್ದಿದೆ, ನಾನು ಬರಲಿಕ್ಕೆ ಆಗೊಲ್ಲ. ಇಗೋ ನಿಮ್ಮ ಫಿಲಂ ರೋಲುಗಳು" ಎಂದು ಹತ್ತು ಹನ್ನೆರಡು ರೋಲುಗಳನ್ನು, ಒಂದು ಕವರಿನಲ್ಲಿ ನನಗೆ ನೀಡಿದರು. "ನೀವು ಯಾವ ಫೋಟೋ ಎಲ್ಲಿ ತೆಗೆದಿದ್ದು ಎಲ್ಲಾ ವಿವರಗಳನ್ನು ಬರೆದಿಡಬೇಕು. ನಿಮ್ಮ ನೆನಪಿನ ಶಕ್ತಿಯನ್ನೇ ನೆಚ್ಚಿಕೊಳ್ಳಬೇಡಿ. ಆಯಿತು ಹೋಗಿಬನ್ನಿ" ಎಂದರು. ನನಗೇ ಆಶ್ಚರ್ಯ

ಅವರೆಂದೂ ನನ್ನನ್ನು ಹತ್ತು ನಿಮಿಷಗಳಲ್ಲಿ ಕಳಿಸಿದವರೇ ಅಲ್ಲ. "ಸಾರ್, ಮೇಡಂ ಅವರು ಇಲ್ವಾ?" ಎಂದೆ. ಅವರು ಸಾವಧಾನದಿಂದ ಇಲ್ಲಾ, ಅಕೆ ನರ್ಸಿಂಗ್ ಹೋಂನಲ್ಲಿದ್ದಾರೆ. ಈಗ ಊಟ ತಗೊಂಡು ಹೋಗ್ತಾ ಇದೀನಿ. ನೀವೇನು ಚಿಂತೆ ಮಾಡಬೇಡಿ. ಗಾಬರಿ ಪಡಬೇಡಿ ಹೋಗಿಬನ್ನಿ" – ಎಂದು ನನ್ನನ್ನು ಕಳಿಸಿಕೊಟ್ಟರು.

ನನ್ನ ಪ್ರವಾಸವನ್ನು ಮುಗಿಸಿ, ಊರಿಗೆ ಬಂದವನೇ ಅವರ ಮನೆಯತ್ತ ಧಾವಿಸಿದೆ. ನನ್ನ ಪ್ರವಾಸದ ವಿವರಗಳನ್ನು ಹೇಳಿಬಿಡಬೇಕೆಂಬ ಕಾತುರ. ಅವರು ಹೇಳಿದಂತೆಯೇ ಆಯಾ ಸಂಖ್ಯೆ ರೋಲುಗಳನ್ನು ಆಯಾ ಡಬ್ಬಿಗಳಲ್ಲಿ ತುಂಬಿ ಇಟ್ಟಿದ್ದೆ. ಎಲ್ಲಿ ತೆಗೆದದ್ದು ಎಂದು ವಿವರಗಳ ಪಟ್ಟಿಯನ್ನು ನೀಡಿದೆ. ಆದಿನ ನನ್ನ ಮಾತುಗಳು ಮುಗಿಯುವ ವೇಳೆಗೆ ಎಂಟೂವರೆಯಾಗಿತ್ತು. ನನ್ನ ಪುರಾಣವೇ ಹೆಚ್ಚಾಯಿತು. ಸೂಚ್ಯರ್ಥದಲ್ಲಿ ಮೇಡಂ ಹೇಗಿದ್ದಾರೆಂದು ಕೇಳಲಿಲ್ಲವಲ್ಲಾ ಎಂದು ಹೊಳೆಯಿತು. ಕೂಡಲೇ ಕೇಳಿದೆ "ಹೂಂ ಅರಾಮವಾಗಿದ್ದಾರೆ, ಏನೂ ತೊಂದರೆ ಇಲ್ಲ" ಎಂಬ ಚುಟುಕಿನ ಉತ್ತರ ನೀಡಿದರು. ಕಾಮತರು ಎಂದೂ ಅವರು ತಮ್ಮ ದುಃಖ ದುಮ್ಮಾನಗಳನ್ನು ಬೇರೆಯವರಿಗೆ ತೋರಿಸಿಕೊಂಡವರಲ್ಲ, ಬೇರೆಯವರಲ್ಲಿ ತೋಡಿಕೊಂಡವರಲ್ಲ. ಅವುಗಳನ್ನು ಎದುರಿಸುವುದು ತಿಳಿದಿತ್ತೆ ವಿನಾ ಪ್ರದರ್ಶಿಸುವುದು ತಿಳಿದೇ ಇರಲಿಲ್ಲ.

ಅವರು ಮೊದಲು ರೋಲುಗಳನ್ನು ಡೆವಲಪ್ ಮಾಡಿಟ್ಟು ನೆಗೆಟೀವ್ ಅನ್ನು ನನಗೆ ತೋರಿಸುತ್ತಿದ್ದರು ನನ್ನ ಕೈಗೆ ಅವುಗಳನ್ನು ಕೊಡುತ್ತಲೇ ಇರಲಿಲ್ಲ. ನನ್ನ ಸುಣ್ಣದಕೈ ಎಂದರೆ ಅವರಿಗೆ ಅಷ್ಟು ಹೆದರಿಕೆ. "ನೀವು ತೆಗೆದ ಫೋಟೋಗಳು ಚೆನ್ನಾಗಿ ಬಂದಿವೆ. ಮೊದಲಿಗಿಂತಲೂ ಈಗ ನೀವು ಚೆನ್ನಾಗಿ ತೆಗೆದಿದ್ದೀರಿ" ಎಂದು ಬೆನ್ನು ತಟ್ಟಿದರು.

ನನ್ನ ಊಹೆಗೂ ಸಿಲುಕದ ಹಾಗೆ ನನ್ನ ಗುರುಗಳಾದ ಡಾ॥ ಹಂಪನಾ ಅವರು ನನಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಉದ್ಯೋಗ ಕೊಟ್ಟರು. ನನ್ನ ನಿಬಂಧವನ್ನು ಪ್ರಕಟಣೆಗೂ ಸ್ವೀಕರಿಸಿ ಹಸ್ತಪ್ರತಿ ಕೊಡು ಮುದ್ರಣಕ್ಕೆ ಕಳಿಸುತ್ತೇನೆ ಎಂದರು. ಇಂತಹ ಸಂತೋಷದ ಸುದ್ದಿಯನ್ನು ಹೇಳದಿರುವುದು ಹೇಗೆ ಸಾಧ್ಯ? ಕಾಮತರ ಬಳಿಗೆ ಹೋಗಿ ಹೇಳಿದೆ. "ಹೇಳಿರಲಿಲ್ಲವೇ ನೀವು ಹಸ್ತಪ್ರತಿ ರೆಡಿ ಮಾಡಿದ್ದೀರ?" ಎಂದರು, ಇಲ್ಲ ಎಂದೆ. ಆದಷ್ಟು ಬೇಗ ಮಾಡಿ. ನೋಡಿ ಥೀಸಿಸ್‌ಗೆ ಫೋಟೋ ಕೊಡುವ ಪದ್ಧತಿಯೇ ಬೇರೆ, ಪುಸ್ತಕಕ್ಕೆ ಬೇರೆ. ನೀವು ನಡುವೆ ತೆಗೆದ ನಿಬಂಧದಲ್ಲಿರುವುದಕ್ಕಿಂತ ಒಳ್ಳೆಯ ವೀರಗಲ್ಲುಗಳನ್ನು ಕೊಡೋಣ ಎಂದರು. ಯಾವ ಯಾವ ಚಿತ್ರಗಳನ್ನು ನೀಡುವುದು ಎಂಬುದನ್ನು ಅವರೇ ತೀರ್ಮಾನಿಸಿದರು. ಗೆಳೆಯ ಡಾ॥ ಕೆ. ಆರ್. ಗಣೇಶ್‌ರು ನಿಬಂಧದ ಉತ್ತಮ ಪ್ರತಿಯನ್ನು ತಯಾರು ಮಾಡಿದರು. ಗೆಳೆಯ ಅ. ಲ. ನರಸಿಂಹ ಚಿತ್ರಗಳನ್ನು ಹೇಗೆ ಮುದ್ರಿಸಿದರೆ, ಅದು ಹೇಗೆ ಪಡಿಯಚ್ಚಿನಲ್ಲಿ ಬರುತ್ತದೆ ಎಂಬುದನ್ನು ಸೂಚಿಸಿದ. ಅದರಂತೆ ಕಾಮತರು ಫೋಟೋಗಳನ್ನು ಪ್ರಿಂಟ್ ಮಾಡಿದರು. ಈಗಲೂ ಅವರು ಹಣ ಪ್ರಸ್ತಾಪ ತರಲಿಲ್ಲ. "ಕೆಲಸ ಆಗಲಿ" ಎಂಬುದಷ್ಟೇ ಅವರ ಧೋರಣೆ. ಅನಂತರದ ಕಾಲದಲ್ಲಿ ನಾನು ತೆಗೆದ ವೀರಗಲ್ಲುಗಳೊಂದಿಗೆ, ಪರಿಷ್ಕೃತ ಪಾಠದೊಡನೆ ನನ್ನ ಪುಸ್ತಕ 'ಕರ್ನಾಟಕದ ವೀರಗಲ್ಲುಗಳು' ಸರ್ವಾಂಗ ಸುಂದರವಾಗಿ ಮುದ್ರಣಗೊಂಡಿತು. ಆ ಸಂದರ್ಭದಲ್ಲಿ ಅವರು ನನಗೆ ನೀಡಿದ ಆತ್ಮ ಸ್ಥೈರ್ಯವನ್ನು ಇಂದಿಗೂ ಉಳಿಸಿ ಬೆಳೆಸಿಕೊಂಡಿದ್ದೇನೆ.

ಮುದ್ರಿತ ಪುಸ್ತಕವನ್ನು ಹೂವು ಹಣ್ಣುಗಳೊಂದಿಗೆ ಅವರಿಗೆ ಕೊಡಲು ಹೋದೆ. ಆ ದಂಪತಿಗಳಿಗಾದ ಆನಂದ ಅಷ್ಟು ಇಷ್ಟಲ್ಲ. ಮಗನ ಪುಸ್ತಕ ಮುದ್ರಣವಾದದ್ದು ನೋಡಿದ ಸಂತೋಷ ನಮ್ಮದು – ಎಂದು ಜ್ಯೋತ್ಸ್ನಾ ಅವರು ತುಂಬುಹೃದಯದಿಂದ ನುಡಿದರು. ಡಾ॥ ಕಾಮತರು ಎಂದಿನಂತೆ ತಮ್ಮ ಕಣ್ಣಿನಿಂದಲೇ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

ನನಗೆ ಇಂದಿಗೂ ಅರ್ಥವಾಗುತ್ತಿಲ್ಲ, ಈ ದಂಪತಿಗಳು ನನ್ನನ್ನು ಏಕೆ ಹೀಗೆ ಹಚ್ಚಿಕೊಂಡಿದ್ದಾರೆಂಬುದು. ನನ್ನ ಒರಟುತನವನ್ನು ಅಶಿಸ್ತನ್ನು, ಕೆಲವೊಮ್ಮೆ ದಡ್ಡತನವನ್ನೂ ಇವರೇಕೆ ಸಹಿಸಿಕೊಂಡರು? ನನ್ನಿಂದ ಅವರು ಬಯಸಿದ್ದು ಏನೂ ಇಲ್ಲ, ನೀಡಿದ್ದು ಅಪಾರ.

ಒಂದು ಉದಾಹರಣೆಯನ್ನು ಇಲ್ಲಿ ನೀಡುತ್ತೇನೆ. ಅವರೆಂಥಾ ಕ್ಷಮಾಮೂರ್ತಿ ಎಂಬುದನ್ನು ಸೂಚಿಸಲು. ನನ್ನ ಕಿರಿಯ ಮಿತ್ರ ಶ್ರೀಶಾಮರಾವ್ ಎಂಬುವರು ಹೊಸದಾಗಿ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸುವುದಾಗಿ ಆ ಪ್ರಕಾಶನದಲ್ಲಿ ತಾವು ಡಾ॥ ಕೃಷ್ಣಾನಂದ ಕಾಮತರ ಒಂದು ಪುಸ್ತಕವನ್ನು ಪ್ರಕಟಿಸಲು ಉತ್ಸುಕರಾಗಿರುವುದಾಗಿ “ಶಾಸ್ತ್ರಿಗಳೇ ನಿಮಗೆ ಡಾ॥ ಕೃಷ್ಣಾನಂದರು ಪರಿಚಿತರು, ಅವರಿಂದ ಒಂದು ಹೊಸ ಪುಸ್ತಕವನ್ನು ನೀವು ನನಗೆ ಕೊಡಿಸಿಕೊಡಿ” ಎಂದು ಕೇಳಿದರು, ಎರಡು ಮೂರು ಬಾರಿ ನನ್ನನ್ನೇ ಒತ್ತಾಯಿಸಿದರು. ನನ್ನ ಗಂಟು ಹೋಗುವುದೇನಿದೆ? ಆಗಲಿ ಡಾ॥ ಕಾಮತರನ್ನೇ ಕೇಳುತ್ತೇನೆ” ಎಂದು ಹೇಳಿದೆ. ಈ ವಿಷಯವನ್ನು ಡಾ॥ ಕಾಮತರಲ್ಲಿ ಪ್ರಸ್ತಾಪ ಮಾಡಿದೆ. ಆತನು ನಿಮಗೆ ಚೆನ್ನಾಗಿ ಪರಿಚಿತನೇ? ಪುಸ್ತಕ ಪ್ರಕಟ ಮಾಡುತ್ತಾನೆಯೋ? ಆತನ ಆರ್ಥಿಕ ಪರಿಸ್ಥಿತಿ ಹೇಗಿದೆ? ಈ ವೃತ್ತಿಗೆ ಹಳಬನೇ ಹೊಸಬನೇ, ನೀವು ಮೊದಲ ಪ್ರಯತ್ನ ಎಂಬುದಾಗಿ ಹೇಳಿದ್ದೀರಿ, ಆಯಿತು ಒಂದು ಪುಸ್ತಕವನ್ನು ಕೊಡುತ್ತೇನೆ. ಆತನು ನನಗೆ ರಾಯಲ್ಟಿ ಕೊಡಬೇಕಾಗಿಲ್ಲ. ನನ್ನಿಂದ ಉಪಕಾರವಾಗದೇ ಹೋದರೂ ಆತನಿಗೆ ಅಪಕಾರವಾಗಬಾರದು. ಇನ್ನು ಹದಿನೈದು ದಿನಗಳಲ್ಲಿ ಹಸ್ತಪ್ರತಿಯನ್ನು ಕೊಡುತ್ತೇನೆ. ನೀವು ಬನ್ನಿ” ಎಂದು ಸಹಜ ರೀತಿಯಲ್ಲಿ ಹೇಳಿದರು. ಈ ವಿಷಯವನ್ನು ಶಾಮರಾವ್ ಅವರಿಗೆ ತಿಳಿಸಿದೆ. ಹದಿನೈದು ದಿನಗಳ ನಂತರ ಶಾಮರಾವ್ ಅವರನ್ನೇ ಕರೆದುಕೊಂಡು ಕಾಮತರ ಲ್ಯಾಬಿಗೆ ಹೋದೆ. ಶಾಮರಾವ್‌ರನ್ನು ಪರಿಚಯಿಸಿದೆ. “ತುಂಬಾ ಸಂತೋಷ, ನಿಮ್ಮ ಪ್ರಯತ್ನ ಯಶಸ್ವಿಯಾಗಲೀ” ಎಂದವರೇ ತಮ್ಮ ಕೈಚೀಲದಿಂದ ಹಸ್ತಪ್ರತಿಯನ್ನು, ಅದರೊಂದಿಗೆ ಕೆಲ ರೇಖಾಚಿತ್ರಗಳನ್ನು ಆತನಿಗೆ ನೀಡಿದರು. ನಂತರ ನೋಡಿ ಈ ರೇಖಾ ಚಿತ್ರಗಳನ್ನು ಹಾಕುವುದರಿಂದ ವೆಚ್ಚ ಹೆಚ್ಚಾಗುತ್ತದೆ ಎಂದು ಅನ್ನಿಸಿದರೆ ಬೇಡ ನನ್ನ ಅಭ್ಯಂತರ ಇಲ್ಲ” ಎಂದು ಅವರು ವಿವರಿಸುತ್ತಿರುವಂತೆ ‘ಇಲ್ಲಾ. ಸಾರ್, ಖಂಡಿತಾ ಹಾಕುತ್ತೇನೆ’ ಎಂದು ತುಂಬು ಧೈರ್ಯದಿಂದ ಹೇಳಿದರು. ಅಲ್ಲಿಗೆ ವ್ಯವಹಾರ ಮುಗಿಯಿತು. ರಾಯಲ್ಟಿಯ ಬಗ್ಗೆ ಕಾಮತರೂ ಪ್ರಸ್ತಾಪಿಸಲಿಲ್ಲ. ಶಾಮರಾವ್ ಕೂಡ ಪ್ರಸ್ತಾಪಿಸಲಿಲ್ಲ. ಪುಸ್ತಕ ಮೂರು ತಿಂಗಳಿನಲ್ಲಿ ಹೊರತರುವುದಾಗಿ ಹೇಳಿ ಹೋದರು. ನಾನು ಲ್ಯಾಬ್‌ನಲ್ಲಿ ಉಳಿದೆ.

ಮೂರು ತಿಂಗಳಾಯಿತು. ಆರು ತಿಂಗಳಾಯಿತು. ವರ್ಷಕಳೆಯಿತು. ಶಾಮರಾಯರು ಪುಸ್ತಕವನ್ನೇ ಪ್ರಿಂಟಿಸಲಿಲ್ಲ. ಒಮ್ಮೆ ಮಾತ್ರ ಆ ಬಗ್ಗೆ ಕಾಮತರು. ನನ್ನಬಳಿ ಪ್ರಸ್ತಾಪಿಸಿದರು. ನಾನೂ ಆಗಾಗ ಶಾಮರಾಯ ಅವರನ್ನು ಅಯ್ಯಾ ಪುಸ್ತಕ ಪ್ರಕಟಣೆ ಏನಾಯಿತು ಎಂದು ಕೇಳುತ್ತಲೇ ಇದ್ದೆ. ಅಗೋ ಇಗೋ ಎಂದು ಉಡಾಫೆಯುತ್ತರ ನೀಡುತ್ತಿದ್ದರು. ಒಂದು ದಿನ ಕನ್ನಡ ಸಾಹಿತ್ಯ ಪರಿಷತ್ತಿನ ಬಳಿ ಸಿಕ್ಕವರು “ಹಸ್ತಪ್ರತಿ ಕಳೆದುಹೋಗಿದೆ” ಎಂದು ನಿರುಮ್ಮಳವಾಗಿ ತಿಳಿಸಿದರು. ನನಗೆ ಮೈ ಒಮ್ಮೆಲೆ ಧಗ್ ಎಂದು ಉರಿಯಿತು. ಬಾಯಿಗೆ ಬಂದಂತೆ ಬೈದೆ, ಆತನಿಗೆ ಇರುವೆ ಕಡಿದಂತೆಯೂ ಆಗಲಿಲ್ಲ. ಈ ವಿಷಯವನ್ನು ಕಾಮತರಿಗೆ ಹೇಗೆ ತಿಳಿಸುವುದು. ಒಂದಷ್ಟು ಕಾಲ ತಳ್ಳಿದೆ. ಕೊನೆಗೆ ಒಂದು ದಿನ ನಾನಾಗಿ ಈ ವಿಷಯವನ್ನು ಪ್ರಸ್ತಾಪಿಸಿ ಹೇಳಿದೆ. ಆಗ ಅವರ ಮುಖದಲ್ಲಿ ಬೇಸರವೆಂಬುದು ಸುಳಿಯಲೇ ಇಲ್ಲ. ನನ್ನನ್ನು ಕನಿಕರದಿಂದ ನೋಡಿ “ಶಾಸ್ತ್ರಿಗಳೇ ನಿಮ್ಮ ಅಂದಾಜಿನಲ್ಲಿ ಪರಿಪಾಟು ಆಗಿದೆ. ನಿಜ, ಬೇರೆಯವರಿಗೆ ನೆರವಾಗಬೇಕು. ನೆರವು ನೀಡುವ ಮುನ್ನ ಅವರು ಎಂಥವರೆಂಬುದನ್ನು ಅಂದಾಜು ಹಾಕಬೇಕು. ವಿಶಾಲ ಹೃದಯದೊಂದಿಗೆ ವಿವೇಕವೂ ಇರಬೇಕು. ಹಸ್ತಪ್ರತಿ ಕಳೆದು ಹೋದುದಕ್ಕೆ ಕಾಳಜಿ ಬೇಡ. ಇನ್ನು ಮೇಲೆ ಎಚ್ಚರಿಕೆಯಿಂದಿರಿ. ನಿಮ್ಮ ಹೃದಯವಂತಿಕೆಯನ್ನು ನಾನುಬಲ್ಲೆ. ನೀವು ಬೇಸರಪಡಬೇಡಿ. ಜೀವನದಲ್ಲಿ ಈ ರೀತಿ ನಡೆಯುತ್ತದೆ” ನನ್ನನ್ನು ಸಮಾಧಾನಪಡಿಸಿದರು. ನನ್ನ ಚಡಪಡಿಕೆಯನ್ನು ನೋಡಿ “ನೀವು ಮಾಡದ ತಪ್ಪಿಗಾಗಿ  ನೀವು ಪರಿತಪಿಸಬೇಕಾದುದಿಲ್ಲ.” ಎಂದು ನನ್ನ ಬೆನ್ನು ತಟ್ಟಿದರು. ಅಂದಿನಿಂದ ಶಾಮರಾಯರ ಪ್ರಸ್ತಾಪವನ್ನು ಅವರು ಮಾಡಲೇ ಇಲ್ಲ. ಶಾಮರಾವ್ ಆಗಾಗ ಸಿಗುತ್ತಾರೆ. ಆತನನ್ನು ನೋಡಿದಾಗಲೆಲ್ಲಾ ನನ್ನಿಂದ ಕಾಮತರಿಗೆ ಎಂಥ ಅನ್ಯಾಯವಾಯಿತು ಎಂಬುದು ನೆನಪಾಗಿ ಮನಸ್ಸಿಗೆ ನೋವಾಗುತ್ತದೆ. ಕೊನೆಗೂ ಶಾಮರಾವ್ ಕಾಮತರನ್ನು ಕಂಡು ನನ್ನಿಂದ ಇಂಥ ತಪ್ಪು ಆಗಿದೆ, ಕ್ಷಮಿಸಿ ಎಂದು ಕೇಳಲೇ ಇಲ್ಲ. ಹಸ್ತಪ್ರತಿ ಕೊಡುವವರೆಗೆ ತೋರಿದ ವಿನಯ, ಸಜ್ಜನಿಕೆ ಕರಗುತ್ತಾ ಹಸ್ತ ಪ್ರತಿ ಕಳೆದುಹೋದಂತೆ ಮಾನವೀಯ ಸ್ವಾರಸ್ಯವೂ ನಶಿಸಿಹೋಯಿತೇನೋ?

ನನ್ನ ಬಗ್ಗೆ ಅತೀವವಾದ ಅಭಿಮಾನವನ್ನು ಬೆಳೆಸಿಕೊಂಡಿದ್ದ ಡಾ॥ ಕಾಮತರು ನನ್ನ ಸ್ವಂತ ವಿಷಯಗಳಲ್ಲಿ ಎಂದೂ ಪ್ರವೇಶಿಸಿದವರಲ್ಲ. ಆದರೆ ಜೀವನದ ಉದ್ದಕ್ಕೂ ಜೀವನದಲ್ಲಿ ಉತ್ಸಾಹ ಸಂಶೋಧನೆಯ ಬಗ್ಗೆ ಆಸಕ್ತಿಯನ್ನು ಹೇಗೆ ಉಳಿಸಿಕೊಳ್ಳಬೇಕು ಎಂಬುದರತ್ತ ನನ್ನ ಗಮನ ಸೆಳೆಯುತ್ತಿದ್ದರು. ಹುಡುಗಿ ನನ್ನನ್ನು ನೋಡಲು ಅನಂತಪುರದಿಂದ ಬೆಂಗಳೂರಿಗೆ ಬಂದ ದಿನವೇ ನಾನು ಕಾಮತರೊಂದಿಗೆ ಡಾ॥ ಕೆ.ಎಸ್. ನರಸಿಂಹಸ್ವಾಮಿಯವರ ಛಾಯಾಚಿತ್ರಗಳನ್ನು ತೆಗೆಯಲು ಹೊರಟಿದ್ದೆ. ಅವರು ಬಂದು ನನಗಾಗಿ ಮಿನರ್ವ ಸರ್ಕಲ್ಲಿನಲ್ಲಿ ಐದು ಗಂಟೆಗೆ ಕಾದಿದ್ದರು. 'ವಧು' ನಾಲ್ಕೂವರೆಗೆ ಬಂದಳು. ನನ್ನನ್ನು ನೋಡಿದಳು ಎಂದು ಅಂದುಕೊಂಡು ಇನ್ನು ನಾನು ಹೊರಡಬಹುದೇ? ಎಂದು ಮಿನರ್ವಾ ಸರ್ಕಲ್ಲಿಗೆ ಹೋದೆ. ಇನ್ನು ಮಿನರ್ವಾ ಸರ್ಕಲ್ಲಿಗೆ ಹೋಗಿರಲಿಲ್ಲ, ಅಷ್ಟರಲ್ಲಿ ನನ್ನ ಅಣ್ಣನ ಮಗ ಲಕ್ಷ್ಮೀಶ ಬಂದು "ಆಕೆ ನಿನ್ನನ್ನು ಸರಿಯಾಗಿ ನೋಡಲಿಲ್ಲವಂತೆ ಬರಬೇಕು ಎಂದು ಅಮ್ಮ ಕರೆದರು" ಎಂದ. ನನ್ನನ್ನೇ ತೋರಿಸಿಕೊಳ್ಳುವುದೂ ಕರ್ತವ್ಯವೆಂಬಂತೆ ಮತ್ತೆ ಮನೆಗೆ ಹೋಗಿ ಸ್ವಲ್ಪ ಹೊತ್ತು ಇದ್ದು ಬಂದೆ. ಕಾಮತರು ಐದು ಗಂಟೆಯಿಂದ ನನಗಾಗಿ ಬಸ್‌ಸ್ಟಾಪ್‌ನಲ್ಲಿ ಕಾಯುತ್ತಿದ್ದರು. ನಾನು ಎಂದೂ ಹೇಳಿದ್ದ ಸಮಯಕ್ಕೆ ಹೋದವನಲ್ಲ. ನಾನು ತಡಮಾಡಿದುದಕ್ಕೆ ಕಾರಣ ತಿಳಿಸಿದಾಗ ನಕ್ಕರು. "ಅಗ್ನಿಬಿಡಿ" ಎಂದರು. ಆ ವಧುವಿನೊಂದಿಗೆ ನನ್ನ ಮದುವೆ ನಿಶ್ಚಿತವಾಯಿತು. ಲಗ್ನಪತ್ರಿಕೆ ಕೊಟ್ಟಾಗ ಸಂತೋಷಪಟ್ಟರು. ಆದರೆ ಮದುವೆಗಾಗಲೀ, ಆರತಕ್ಷತೆಗಾಗಲೀ ಅವರು ಬರಲಿಲ್ಲ. ಅವರು ಬರಲಿಲ್ಲವೆಂದು ನನಗೆ ಬೇಸರವಾಗಲಿಲ್ಲ. ಮಾರನೆಯ ದಿನವೇ ನನ್ನ ಹೆಂಡತಿಯನ್ನು ಕರೆದುಕೊಂಡು ಅವರ ಲ್ಯಾಬಿಗೆ ಹೋದೆ.

ಆಗಲೂ ನನ್ನ ಹುಡುಗಾಟವಾಡಿದೆ. ನಾನು ಜೊತೆಯಲ್ಲಿ ಹೋಗುವ ಮುನ್ನ ನನ್ನ ಹೆಂಡತಿಯನ್ನು ಕಳಿಸಿದೆ. ಆಕೆಗೆ ಆಗ ಕನ್ನಡ ಬರುತ್ತಿರಲಿಲ್ಲ. ಒಂದೆರಡು ಮಾತುಗಳನ್ನು ಕಲಿಸಿದ್ದೆ. ರೇಷ್ಮೆ ಸೀರೆಯುಟ್ಟು ಅಂಗಡಿಯನ್ನು ಪ್ರವೇಶಿಸಿದ ಅಪರಿಚಿತ ಮಹಿಳೆಯನ್ನು ನೋಡಿ ಕಾಮತರು ಸ್ವಲ್ಪ ಅವಾಕ್ಕಾದರು. ಇದು ನನ್ನ ಕೆಲಸವೇ ಎಂಬುದು ಅವರಿಗೆ ತಿಳಿದು ಹೋಯಿತು. ಆಮೇಲೆ ನಾನು ಹೋದೆ. ನಮ್ಮನ್ನು ನೋಡಿ ತುಂಬಾ ಸಂತೋಷಗೊಂಡರು. ಅಂದೇ ಅವರು ನನ್ನ ಹೆಂಡತಿಗೆ "ನಮ್ಮ ಶಾಸ್ತ್ರಿ ತುಂಬಾ ಒಳ್ಳೆಯವನು ಆದರೆ ತುಂಬಾ ಬೋಳಾಶಂಕರ, ಇವನ ಕಿವಿಯನ್ನು ಹಿಂಡಿ ಸಂಸಾರದ ಜವಾಬ್ದಾರಿಯನ್ನು ನೀನೇ ಹೊರಬೇಕು?" ಎಂದು ಕೆಲವು ಹಿತವಚನಗಳನ್ನು ಸಹಜವಾಗಿ ಹೇಳಿದರು. ಆನಂತರ ನಮ್ಮನ್ನು ಕಂಡ ಡಾ॥ ಜ್ಯೋತ್ಸ್ನಾ ಕಾಮತರು 'you are made for each other' ಎಂದು ಮನದುಂಬಿ ಹರಸಿದರು. ಅವರ ಆಶೀರ್ವಾದ ನಮ್ಮ ಬದುಕನ್ನು ಅರ್ಥಪೂರ್ಣಗೊಳಿಸಿದೆ.

ಮದುವೆಯಾದ ಒಂದು ವರ್ಷಕ್ಕೆ ಅನಂತಪುರದ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯದಲ್ಲಿ ನನಗೆ ಕೆಲಸ ಸಿಕ್ಕಿತು. ಕಾಮತರಿಗೆ ತಿಳಿಸಿದೆ. "ನೋಡಿ ಶಾಸ್ತ್ರಿಗಳೇ ಅನಂತಪುರ ನಿಮಗೆ ಹೆಣ್ಣನ್ನು ನೀಡಿತು, ಉದ್ಯೋಗವನ್ನೂ ನೀಡಿತು" ಎಂದರು. "ಸಾರ್, ನನ್ನ ಹೆಂಡತಿಗೆ ಈಗ ಬೆಂಗಳೂರಿಗೆ ವರ್ಗವಾಗಿದೆ. ನನಗೆ ಅನಂತಪುರದಲ್ಲಿ ಕೆಲಸ ಸಿಕ್ಕಿದೆ, ಈಗೇನು ಮಾಡುವುದು. ಅವಳು ಕೆಲಸಕ್ಕೆ ರಾಜೀನಾಮೆ ನೀಡಿದರೆ ಹೇಗೆ?" ಎಂದೆ. "ಅಂಥ ಹುಚ್ಚುತನ ಮಾಡಬೇಡಿ, ಒಂದೆರಡು ವರ್ಷ ಹೇಗೋ ಕಷ್ಟಪಡಿ, ಅಲ್ಲಿಗೆ ವರ್ಗವಾಗಬಹುದು". ಎಂದು ತಮ್ಮ ಜೀವನದ ಉದಾಹರಣೆಗಳನ್ನು ನೀಡಿದರು. ಎರಡು ವರ್ಷಗಳಿಗೆ ಮತ್ತೆ ನನ್ನ ಹೆಂಡತಿಗೆ ಅನಂತಪುರಕ್ಕೆ ವರ್ಗವಾಯಿತು. ನಾವು ಒಂದೇ ಕಡೆ ಇರುವುದನ್ನು ತಿಳಿದು ಕಾಮತ್ ದಂಪತಿಗಳು ಸಂತೋಷಗೊಂಡರು. ಆಮೇಲೆ ನಾನು ಕಾಮತರನ್ನ ಭೇಟಿಯಾಗುವುದು ತುಂಬಾ ಅಪರೂಪವೇ ಆಯಿತು. ಬೇಸಿಗೆಯ ರಜೆಯಲ್ಲಿ ಬಂದಾಗ ನನ್ನ ಮಕ್ಕಳನ್ನು ಕರೆದೊಯ್ಯುತ್ತಿದ್ದೆ. ಅವರ ಛಾಯಾಚಿತ್ರಗಳನ್ನು ತೆಗೆದು ಮತ್ತೊಮ್ಮೆ ಹೋದಾಗ ಅವುಗಳನ್ನು ಕೊಡುತ್ತಿದ್ದರು. ಇದರಿಂದ ನನ್ನ ಮಗಳಿಗೆ ಏನೋ ಖುಷಿಯಾಗುತ್ತಿತ್ತು. ಪ್ರತಿವರ್ಷ ದೀಪಾವಳಿಗೋ ಅಥವಾ ಜನವರಿಗೋ ಅವರು ಅಂಚೆಯ ಕಾರ್ಡಿನಲ್ಲಿ ತಾವೇ ಬರೆದ Happy new year ಎಂಬ ಶುಭಾಶಯ ಪತ್ರಗಳನ್ನು ಕಳಿಸಿಕೊಡುತ್ತಿದ್ದರು.

ನನಗೆ ಕರ್ನಾಟಕದಲ್ಲಿರಬೇಕು ಎಂಬ ಯೋಚನೆ ಮೂಡಿತು. ಅದಕ್ಕಾಗಿ ಒಂದೆರಡು ಕಡೆಗೆ ಕೆಲಸಕ್ಕಾಗಿ ಅರ್ಜಿಗಳನ್ನು ಹಾಕಿದೆ. ಅಂಥ ಸಂದರ್ಭದಲ್ಲಿ ಕಾಮತರು "ಶಾಸ್ತ್ರಿಗಳೇ ನೀವು ಇಲ್ಲದ ಆಸೆಗಳನ್ನು ಬೆಳೆಸಿಕೊಳ್ಳಬೇಡಿ. ನೀವು ಈಗಾಗಲೇ ಅಲ್ಲಿ ಸೆಟ್ಲ್ ಆಗಿದ್ದೀರಿ, ಮತ್ತೆ ಇಲ್ಲಿ ಸೆಟ್ಲ್ ಆಗುವುದು ಎಂದರೆ ತಾಪತ್ರಯ. ನೀವು ನಿಮ್ಮ ಹೆಂಡತಿ ಒಂದು ಕಡೆ ಇದ್ದು ಸಂಸಾರ ನಡೆಸಬೇಕಾದ ವಯಸ್ಸು ಇದು. ಮಕ್ಕಳಿಗೆ ವಿದ್ಯಾಭ್ಯಾಸದ ತೊಂದರೆಯಾಗುತ್ತದೆ. ಇಷ್ಟಕ್ಕೂ ನಿಮಗೆ ಇಲ್ಲಿಗೆ ಕರೆದು ಕೆಲಸ ಕೊಡುವವರು ಯಾರು? ನೀವು ಪದೇ ಪದೇ ಬೇರೆ ಕಡೆಗೆ ಅರ್ಜಿ ಹಾಕುತ್ತಿದ್ದರೆ. ಅಲ್ಲಿಯವರಿಗೆ ನಿಮ್ಮ ಬಗ್ಗೆ ಅಪನಂಬಿಕೆ ಬರಬಹುದು. ನೆಮ್ಮದಿಯಾಗಿದ್ದು ಬಿಡಿ"- ಎಂದು ಹೇಳಿದರು. ಅವರ ಮಾತು ಸರಿ ಎನ್ನಿಸಿತು. 'ಸರಿ ಸಾರ್, ಹಾಗೇ ಮಾಡ್ತೇನೆ' ಎಂದೆ. ಆಗ ಅವರು ನೀವು ಈ ವಿಷಯವನ್ನು ನಿಮ್ಮ ಶ್ರೀಮತಿಯವರೊಂದಿಗೆ ಚರ್ಚಿಸಿ ಎಂದು ಹೇಳುತ್ತಿದ್ದರು. ಅವರು ನನಗೆ ಯಾವುದೇ ರೀತಿಯ ಸಲಹೆಗಳನ್ನು ನೀಡಿದರೂ, ನನಗೆ ಮದುವೆಯಾದ ಮೇಲೆ ಈ ವಿಷಯವನ್ನು ನಿಮ್ಮ ಶ್ರೀಮತಿಯವರೊಡನೆ ಚರ್ಚಿಸಿ ತೀರ್ಮಾನಕ್ಕೆ ಬನ್ನಿ ಎಂಬ ವಾಕ್ಯವನ್ನು ತಪ್ಪದೇ ಹೇಳುತ್ತಿದ್ದರು.

ನಾನು ಅನಂತಪುರದಲ್ಲಿ ಮನೆಯನ್ನು ಕಟ್ಟಿಸಿದೆ. ಗೃಹಪ್ರವೇಶದ ಆಹ್ವಾನ ಪತ್ರಿಕೆಯನ್ನು ಕಳಿಸಿದೆ. ಶುಭಾಶಯ ಪತ್ರ ಬಂತು; ಬೆಂಗಳೂರಿಗೆ ಬಂದಾಗ, ನನ್ನ ಹೆಂಡತಿಯೊಡನೆ ಅವರ ಮನೆಗೆ ಹೋದೆ, ಅವರು ಮನೆಯನ್ನು ಕಟ್ಟಿಸಿದ್ದಕ್ಕೆ ನನ್ನ ಹೆಂಡತಿಯನ್ನು ಅಭಿನಂದಿಸಿದರು. ಆಗ ನಾನು "ಸಾರ್, ನಾನು ಬ್ಯಾಂಕ್ ಸಾಲ ಮಾಡಿ ಕಟ್ಟಿಸಿದ್ದು. ನೀವು ಅವಳನ್ನು ಅಭಿನಂದಿಸುತ್ತಿದ್ದೀರಿ" ಎಂದು ಆಕ್ಷೇಪಣೆ ತೆಗೆದಾಗ "ನಿಮ್ಮ ಕಿವಿಯನ್ನು ಹಿಂಡಿದವರು ಈಕೆ" ಎಂದು ಅವಳ ಪಕ್ಷವನ್ನೇ ವಹಿಸಿದರು. ಒಮ್ಮೆ ಅವರು "ನಿನಗೆ ಒಳ್ಳೆಯ ಹೆಂಡತಿ ಸಿಕ್ಕಿದ್ದಾಳೆ, ನನಗೆ ಚಿಂತೆಯಿಲ್ಲ ನನಗೆ ತೃಪ್ತಿ ತಂದಿದೆ" - ಎಂದು ಹೇಳಿ ಸಂತೋಷಪಟ್ಟಿದ್ದರು.

ನನ್ನ ಬಗ್ಗೆ ತೋರಿಸಿದ ಒಲವನ್ನು ನನ್ನ ಶ್ರೀಮತಿಯ ಬಗ್ಗೆ ನನ್ನ ಮಕ್ಕಳ ಬಗ್ಗೆಯೂ ಕಾಮತ ದಂಪತಿಗಳು ತೋರಿದರು. ಆಗಾಗ ಕರೆದೊಯ್ಯುತ್ತಿದ್ದ ನನ್ನ ಅಣ್ಣನ ಮಗ ಸಂಜಯನ ಬಗ್ಗೆ, ಅಕ್ಕನ ಮಗ ಮನೋಹರನ ಬಗ್ಗೆಯೂ ತೋರಿದರು. ಅದೇ ನಮ್ಮ ಪಾಲಿನ ಅದೃಷ್ಟ.

ಡಾ|| ಕಾಮತರು ಪೂರ ಸುಸಂಸ್ಕೃತರು . ಅವರು ಮಾಡುತ್ತಿದ್ದ ಪ್ರತಿಯೊಂದು ಕೆಲಸದಲ್ಲಿಯೂ ಅದು ಎದ್ದು ಕಾಣುತ್ತಿತ್ತು. ಡಾ|| ಕಾಮತರು ಹಲವಾರು ಛಾಯಾಚಿತ್ರಗಳನ್ನು ತೆಗೆದಿದ್ದಾರೆ. ಕ್ಯಾಮರಾದ ರೀಲುಗಳನ್ನು ಅವರು ನೀರಿನಂತೆ ಖರ್ಚುಮಾಡುತ್ತಿದ್ದರು ಆದರೆ ಅವರು ನೀರನ್ನು ಹಣದಂತೆ ಖರ್ಚುಮಾಡುತ್ತಿದ್ದರು ಎಂಬುದು ಅವರು ತಮ್ಮ ಲ್ಯಾಬಿನಲ್ಲಿ ಬಳಸುತ್ತಿದ್ದ ನೀರಿನ ವಿಧಾನವನ್ನು ನೋಡಿದವರಿಗೇ ಗೊತ್ತು. ಅವರು ಚಿತ್ರಗಳಲ್ಲಿ ತಮಗೆ ಇದು ಬೇಕು ಅನ್ನಿಸಿದಿದ್ದನ್ನು ತೆಗೆಯುತ್ತಿದ್ದರು. ಕೆಲವೊಮ್ಮೆ ಒಂದನ್ನೇ ಎರಡು ಮೂರು ತೆಗೆಯುತ್ತಿದ್ದರು. ಒಂದು ಉದ್ದೇಶಕ್ಕೆಂದು ಒಂದು ಸ್ಥಳಕ್ಕೆ ಹೋದಾಗ ಛಾಯಾಗ್ರಾಹಕ ಅಥವಾ ಸಂಶೋಧಕ ಆ ವಸ್ತುವನ್ನು ಕುರಿತು ಛಾಯಾಚಿತ್ರ ತೆಗೆದುಕೊಂಡು ಬರುತ್ತಾನೆ. ಆದರೆ ಕಾಮತರದ್ದು ಸಮಗ್ರ ದೃಷ್ಟಿ. ಒಮ್ಮೆ ಕೇಳಿದೆ "ಸಾರ್, ನೀವು ಯಾಕೆ, ಇದನ್ನೆಲ್ಲಾ ತೆಗೆಯುತ್ತೀರಿ" ಎಂದಾಗ, "ಅದು ನೋಡಿ ಶಾಸ್ತ್ರೀ ಈಗ ನನಗೆ ಖರ್ಚಾಗುವುದು. ಕೇವಲ ಒಂದೇ ಒಂದು ಫ್ರೇಂ ಅಷ್ಟೇ, ಆದರೆ ಎಂದೂ ಇದು ನನಗೆ ಬೇಕು ಅನ್ನಿಸಿದಾಗ ಇದು ಇರದೇ ಹೋಗಬಹುದು, ನನಗೆ ಬರಲು ಆಗದೇ ಹೋಗಬಹುದು. ಬಂದರೂ ನನಗಾಗುವ ಸಮಯ ಮತ್ತು ಹಣದ ಖರ್ಚಿನ ಮುಂದೆ ಇದೇನು ಮಹಾ ಅಲ್ಲವೇ?" ಎಂದರು, ಸರಿ ಎನ್ನಿಸಿತು. ಅನಂತರದ ನನ್ನ ಪ್ರಯಾಣಗಳಲ್ಲಿ ಡಾ|| ಕಾಮತರ ಈ ಪ್ರಯೋಗವನ್ನು ನಾನು ಮಾಡುತ್ತಾ ಬಂದಿದ್ದೇನೆ.

ಯಾರನ್ನೇ ಫೋಟೋ ತೆಗೆಯುವ ಮುನ್ನ, ಯಾವುದೇ ರಕ್ಷಿತ ದೇವಾಲಯಗಳ ಫೋಟೋ ತೆಗೆಯುವ ಮುನ್ನ ಅವರ ಅನುಮತಿಯನ್ನು ಪಡೆಯುತ್ತಿದ್ದರು. ಅನುಮತಿ ನೀಡದೇ ಹೋದರೆ ಬಂದ ದಾರಿಗೆ ಸುಂಕವಿಲ್ಲವೆಂದು ಕ್ಯಾಮರಾ ಬ್ಯಾಗು ಮುಚ್ಚಿ ಬಿಡುತ್ತಿದ್ದರು. ಒಮ್ಮೆ ಅವರನ್ನು ಕೇಳಿದೆ. "ಸಾರ್, ಕೆಲವು ಕಡೆ ನೀವು ಆರೀತಿ ಫೋಟೋಗಳನ್ನು ತೆಗೆಯುವ ಮುನ್ನ ಅನುಮತಿ

ಪಡೆಯುತ್ತೀರಿ ಸರಿ, "ಆದರೆ ನಿಮ್ಮ ಟೆಲಿಲೆನ್ಸ್ ಮೂಲಕ ತೆಗೆಯುವ ಛಾಯಾ ಚಿತ್ರಗಳಿಗೆ ನೀವು ಕೇಳುವುದಿಲ್ಲ. ಇದು ಸರಿಯೇ" – ಎಂದೆ. "ನೋಡಿ ನಾನು ಆ ರೀತಿ ಫೋಟೋಗಳನ್ನು ತೆಗೆಯುವ ಮುನ್ನ ಅವರ ಮುಖಗಳನ್ನು ತೆಗೆದು ಅದನ್ನು ಕೆಟ್ಟ ಉದ್ದೇಶಕ್ಕೂ ಬಳಸಬಹುದಲ್ಲ. ಮೇಲಾಗಿ ಅವರ ಮುಖ ತೆಗೆಯುವುದಕ್ಕಿಂತ ಅವರ ಪ್ರವೃತ್ತಿಯನ್ನು ಸೆರೆಹಿಡಿಯೋದರಲ್ಲಿ ನನ್ನ ಆಸಕ್ತಿಯಿರುತ್ತದೆ; ನೋಡಿ ಈ ಮುದುಕ ಬೆಳಗ್ಗೆ ವಾಕಿಂಗ್ ಬರುತ್ತಾನೆ. ತಪ್ಪದೇ ದಿನಾ ದೇವರ ಪೂಜೆ ಮಾಡುತ್ತಾರೆ. ಸರಿಯೇ! ಆ ದೇವರ ಪೂಜೆಗೆ ವಾಕಿಂಗ್‌ನಲ್ಲಿ ಬೇರೆ ಮನೆಯವರ ಅಂಗಳದ ಹೂಗಳನ್ನು ತಮ್ಮ ವಾಕಿಂಗ್ ಸ್ಟಿಕ್ ನೆರವಿನಿಂದ ಹೇಗೆ ಕದಿಯುತ್ತಾರೆ ನೋಡಿ" – ಎಂದು ಅಸಂಖ್ಯಾತವಾದ ಛಾಯಾ ಚಿತ್ರಗಳನ್ನು ತೋರಿಸಿದರು. "ನೋಡಿ ಶಾಸ್ತ್ರಿಗಳೇ, ಯಾವ ರೀತಿಯ ಛಾಯಾಚಿತ್ರ ನನ್ನ ಹೆಂಡತಿ, ನನ್ನ ಸೋದರಿಗೆ ತೆಗೆಯುವುದಿಲ್ಲವೋ ಆರೀತಿಯ ಛಾಯಾಚಿತ್ರಗಳನ್ನು ಬೇರೆಯ ಹೆಂಗಸರದ್ದು ಖಂಡಿತವಾಗಿ ತೆಗೆಯುವುದಿಲ್ಲ. ನೋಡಿ ನಮ್ಮ ಪಕ್ಕದ ಛಾಯಾಚಿತ್ರಗ್ರಾಹಕರು ಗಿರಿಜನರ ಛಾಯಾಚಿತ್ರಗಳಲ್ಲಿ ಪ್ರಕಟಿಸಿ ಅವರ ಅಂಗಾಂಗ ಸೌಂದರ್ಯವನ್ನು ಹೇಗೆ ಎಕ್ಸ್‌ಪ್ಲಾಯ್ಟ್

ಮಾಡ್ತಾರೆ. ಅದೇ ರೀತಿ ಚಿತ್ರ ಅವರು ತನ್ನ ಹೆಂಡತೀದು, ಮಗಳದ್ದು ತಂಗೀದೋ ತೆಗೆತಾರಾ? ಹೇಳಿ" – ಎಂದು ನೋವಿನ ದನಿಯಲ್ಲಿ ಹೇಳಿದರು. ಅವರು ಛಾಯಾಚಿತ್ರಗಳನ್ನು ತೆಗೆಯುವಾಗ, ತಾವು ಯಾರೆಂಬುದನ್ನು ಎಂಥ ಸಂದರ್ಭದಲ್ಲಿಯೂ ಹೇಳುತ್ತಿರಲಿಲ್ಲ. ಡಾ|| ಕೆ.ಎಸ್. ನರಸಿಂಹಸ್ವಾಮಿ, ಡಾ|| ಗೋರೂರು, , ಡಾ|| ಶಂಬಾ ಅವರ ಛಾಯಾಚಿತ್ರಗಳನ್ನು ತೆಗೆಯುವಾಗ ನಾನು ಅವರೊಂದಿಗಿದ್ದೆ. ನಾನು ಮಾತಾಡಿಸುತ್ತ ಇರುವಾಗ, ಅವರ ವಿವಿಧ ಭಂಗಿಗಳನ್ನು ಕಾಮತರು ಸೆರೆ ಹಿಡಿಯುತ್ತಿದ್ದರು. ಡಾ|| ಶಂಬಾ ಅವರದು ಗಂಭೀರ ಸ್ವಭಾವ. ಅವರೆಂದೂ ನಕ್ಕವರೇ ಅಲ್ಲವೇನೋ ಎಂಬಂತೆ ಅವರ ಛಾಯಾಚಿತ್ರಗಳಿವೆ. ಅವರು ನನ್ನೊಂದಿಗೆ ಮಾತಾಡುವಾಗ ಯಾವುದೋ ವಿಷಯದ ಪ್ರಸ್ತಾಪ ನಾನು ಮಾಡಿದಾಗ ಬಾಯ್ತುಂಬ ನಕ್ಕರು. ಕಾಮತರು ಆ ಭಂಗಿಯಲ್ಲಿ ಹಲವಾರು ಚಿತ್ರಗಳನ್ನು ಸೆರೆಹಿಡಿದೇ ಬಿಟ್ಟರು. ಡಾ|| ಗೋರೂರು ಅವರ ಛಾಯಾಚಿತ್ರಗಳನ್ನು ತೆಗೆಯುವ ಸಂದರ್ಭ ನನ್ನ ಮನದಲ್ಲಿ ಇಂದಿಗೂ ಹಸಿರಾಗಿಯೇ ಉಳಿದಿದೆ. ತಾವು ಯಾರು ಏನು ಎಂಬುದನ್ನು ಹೇಳಬಾರದು, ಕೇವಲ ನನ್ನ ಮಿತ್ರರು, ಛಾಯಾಗ್ರಾಹಕರು ಎಂದಷ್ಟೇ ಹೇಳಬೇಕು: ಗೋರೂರವರು ಕಲ್ಲನ್ನು ಮಾತನಾಡಿಸುವ ಪ್ರವೃತ್ತಿಯವರು. ಮಾತಿನ ನಡುವೆ ಕಾಮತರನ್ನು ಮಾತಿಗೆ ಎಳೆದರು. ಕೇವಲ ಮುಗ್ಧ ನಗುವೊಂದೇ ಅವರ ಉತ್ತರವಾಗಿತ್ತು.

ಐದಾರು ವರ್ಷಗಳ ಹಿಂದೆ ಅವರು ಬೆಂಗಳೂರಿನಲ್ಲಿ ನಡೆದ ಯಾವುದೋ ಸಮಾರಂಭದಲ್ಲಿ ಭಾಗವಹಿಸಿದ್ದ ಖೋಜಾ, ಹಿಜಡಾಗಳ ಛಾಯಾಚಿತ್ರಗಳನ್ನು ತೆಗೆದಿದ್ದರು. ಅವುಗಳನ್ನು ತುಂಬಾ ಪ್ರೀತಿಯಿಂದ ನನಗೆ ತೋರಿಸುತ್ತಾ, ಅವರ ಛಾಯಾಚಿತ್ರಗಳನ್ನು ತೆಗೆಯುವಾಗ ಜನ ತಮ್ಮನ್ನು ಹೇಗೆ ಚುಡಾಯಿಸಿದರೆಂಬುದನ್ನು ಸ್ವಾರಸ್ಯವಾಗಿ ಹೇಳಿ ಮುಗಿಸಿ "ನೋಡಿ ಈ ಖೋಜಾ ಹೆಸರು ಇದು ಇದು. ಇಗೋ ಇವಳು ಇದ್ದಾಳಲ್ಲಾ ಇವಳ ಜೊತೆ ಹೋಟೆಲ್‌ಗೆ ಹೋಗಿ ಕಾಫಿ ಕುಡಿದು ಬಂದೆ. ಆಕೆಗೆ ಅದೆಷ್ಟು ಸಂತೋಷವಾಯ್ತು ಗೊತ್ತೆ. "ನಮ್ಮನ್ನು ನೀವು ಮನುಷ್ಯರೆಂದು ಗುರುತಿಸಿ ಗೌರವಿಸಿದಿರಿ" – ಎಂದು ನನಗೆ ಥ್ಯಾಂಕ್ಸ್ ಹೇಳಿದಳು. ಅವಳ ವಿಳಾಸವೂ ಇದೆ. ಅವಳಿಗೆ ಚಿತ್ರಗಳನ್ನು ಕಳಿಸಿದ್ದೇನೆ. ಅವರು ಅನೇಕರ ಛಾಯಾಚಿತ್ರಗಳನ್ನು ತೆಗೆದು ಚೆನ್ನಾಗಿರುವುದನ್ನೆ ಅವರಿಗೆ ಕಳಿಸಿದ್ದಾರೆ. ಅವರಿಂದ ಎಂದು ಏನನ್ನೂ ಅಪೇಕ್ಷಿಸಿದವರಲ್ಲ. ಫೋಟೋ ತೆಗೆಸಿಕೊಂಡದಕ್ಕೂ ಕೃತಜ್ಞತೆ ಎಂಬಂತೆ ಕೊಡುತ್ತಿದ್ದರು.

ನನ್ನ ಕೆಲಸವಿದ್ದಾಗ, ನನಗೆ ಏನೂ ಕೆಲಸವಿಲ್ಲದಾಗ ಡಾ|| ಕಾಮತರನ್ನು ಕಾಣಲು ಹೋಗುತ್ತಿದ್ದೆ. ಅವರೆಂದೂ ನನಗೆ ನೀವು ಇಂಥ ದಿನ ಬನ್ನಿ. ಇಷ್ಟು ಹೊತ್ತಿಗೆ ಬನ್ನಿ ಎಂದವರಲ್ಲ. ನನಗೆ ಅವರ ಮನೆಯ ಮತ್ತು ಲ್ಯಾಬಿನ ಬಾಗಿಲು ಸದಾ ತೆರೆದೇ ಇತ್ತು. ನಾನು ಅನಂತಪುರದಲ್ಲಿ ಕೆಲಸಕ್ಕೆ ಸೇರಿದ ಮೇಲೆ ಆರು ತಿಂಗಳಿಗೋ, ಮೂರು ತಿಂಗಳಿಗೋ ಹೋಗಿಬರುತ್ತಿದ್ದೆ. ಬೇಸಗೆಯ ರಜೆಯಲ್ಲಿ ತಪ್ಪದೇ ಹೆಂಡತಿ ಮಕ್ಕಳೊಡನೆ ಹೋಗುತ್ತಿದ್ದೆ.. ಅವರು ತೀರಿಕೊಳ್ಳುವ ಮುನ್ನ ಆರೇಳು ತಿಂಗಳುಗಳ ಮೊದಲು, ನನ್ನ ಮದುವೆಯ ಆರತಕ್ಷತೆಯ ಛಾಯಾಚಿತ್ರಗಳನ್ನು ಮುದ್ರಿಸಿ ಕಂತು ಕಂತುಗಳಾಗಿ ಕಳುಹಿಸಿದರು. ಅವು ನನಗೆ ತಲುಪಿವೆ ಎಂಬ ಸೌಜನ್ಯದ ಪತ್ರ ಬರೆದ ಪಾಪಕ್ಕೂ ನಾನು ಹೋದವನಲ್ಲ. ಹಾಗೆಂದು ಅವರು ನನ್ನ ಛಾಯಾಚಿತ್ರಗಳನ್ನು ಕಳಿಸುವುದನ್ನು ಬಿಡಲಿಲ್ಲ. ಕರ್ನಾಟಕ ಇತಿಹಾಸ

ಅಕಾಡೆಮಿಯ ಸಮಾರಂಭಕ್ಕೆ ಬೆಂಗಳೂರಿಗೆ ಹೋಗಿದ್ದೆ. ಆ ಸಮಾರಂಭಕ್ಕೆ ಡಾ॥ ಜ್ಯೋತ್ಸ್ನಾ ಕಾಮತರು ಬಂದಿದ್ದರು. ಅವರು ನನ್ನನ್ನು ಕಂಡು ನೀವು ಮನೆಯ ಕಡೆ ಬರಲೇ ಇಲ್ಲ. ನಿಮ್ಮ ಛಾಯಾಚಿತ್ರಗಳನ್ನು ಕಳಿಸಿದ್ದಕ್ಕೆ ಉತ್ತರವೂ ಇಲ್ಲ. ನಿಮ್ಮ ಬಗ್ಗೆ ಸಿಟ್ಟಾಗಿದ್ದಾರೆ ಕಾಮತರು. ನೀವು ಇಲ್ಲಿ ಬರುವುದಾಗಿಯೂ ಅವರಿಗೆ ಗೊತ್ತು. ನಿಮ್ಮನ್ನು ಅವರು ಕರೆಯಲೂ ಇಲ್ಲ". ಎಂದು ತಮ್ಮ ಸಹಜ ನಿಷ್ಠುರ ಧೋರಣೆಯಲ್ಲಿ ಮಾತಾಡಿದರು. ಅವರ ಮಾತುಗಳ ಹಿಂದೆ ನೀನು ಇಂದು ಬಂದೇ ತೀರಬೇಕು ಎಂಬ ಧ್ವನಿಯಿತ್ತು. "ನೀವೇ ನನ್ನ ಮೇಲೆ ಸಿಟ್ಟುಮಾಡಿಕೊಂಡರೆ ಹೇಗೆ? ನಾನು ಇಂದು ಖಂಡಿತಾ ಸಂಜೆ ಬರುತ್ತೇನೆ" – ಎಂದು ಭರವಸೆಯಿತ್ತೆ. ನನ್ನ ಭರವಸೆಯ ಮೇಲೆ ಅವರಿಗೇನು ನನಗೇ ನಂಬಿಕೆಯಿರಲಿಲ್ಲ. ನೂರು ಗುಡಿಯ ಪೂಜಾರಿ ನಾನು. ನನಗೆ ಈ ಮಾತನ್ನು ತಿಳಿಸಿ ಅವರು ಮನೆಗೆ ಹೊರಟರು. ಗೆಳೆಯರಾದ ಶ್ರೀ ಗಣೇಶರಿಗೆ ಹೇಳಿದೆ. "ಗಣೇಶ್, ಇವತ್ತು ಆರು ನೂರಾಗಲೀ, ನೂರು ಆರಾಗಲೀ ಡಾ॥ ಕಾಮತರ ಮನೆಗೆ ಹೋಗಿಯೇ ತೀರಬೇಕು, ನೀವೂ ಬನ್ನಿ ಹೋಗೋಣ" ಎಂದೆ. ಅವರು ಎರಡು ನುಡಿಯಲಿಲ್ಲ. ನಡೀರಿ ಹಾಗಾದ್ರೆ ಹೋಗೋಣ – ಎಂದವರೆ ಸ್ಕೂಟರ್ ಹತ್ತಿಸಿಕೊಂಡು ಮಲ್ಲೇಶ್ವರದತ್ತ ಹೊರಟರು. ದಾರಿಯಲ್ಲಿ ಎರಡು ಮೂರು ಚಿಕ್ಕ ಚಿಕ್ಕ ಕೆಲಸಗಳನ್ನು ಮುಗಿಸಿಕೊಂಡು ಬಿಡೋಣ ಎಂದು ಹೇಳಿದೆ. "ಅದೆಲ್ಲಾ ಆಗಲ್ಲಾ, ಸುಮ್ಮನೇ ನಡೀರಿ ಅವರ ಮನೆಗೆ" ಎಂದು ನನ್ನ ಮೇಲೆ ಕೆರಳಿದರು.

ಸಂಜೆ ಐದು ಐದೂವರೆಗೆ ಅವರ ಮನೆಯ ಬಾಗಿಲು ತಟ್ಟಿದೆ. ಡಾ॥ ಕಾಮತರೇ, ಬಾಗಿಲು ತೆಗೆದು, ಬನ್ನಿ, ಬನ್ನಿ, ಎಂದು ಆತ್ಮೀಯತೆಯಿಂದ ಕರೆದರು. ಆಮೇಲೆ ಕಾಮತರ ಮಾತುಕತೆ ಮುಂದುವರೆಯಿತು. ನನ್ನ ಮತ್ತು ಗಣೇಶರ ಛಾಯಾಚಿತ್ರಗಳನ್ನು ತೆಗೆದರು. ಎಂದಿನಂತೆ ತಿಂಡಿ, ಕಾಫಿ, ಬಂದಿತು. ನಾನು ಅನಂತಪುರಕ್ಕೆ ಹೋಗಿದ್ದ ವಿಷಯ ತಿಳಿಸಿದೆ. ಡಾ॥ ಕಾಮತರು ನಾನು ಸೇರಿದಾಗ ಅವರು ಮಾತಾಡುವುದಕ್ಕಿಂತಲೂ ನಾನೇ ಮಾತಾಡಿರುವುದೇ ಹೆಚ್ಚು. ನಾನು ಏನಾದರೂ ಅಕಸ್ಮಾತ್ ಸರಿಯಾಗಿ ಹೇಳಿದಾಗ "ಹೌದು" ಎಂದು ತಮ್ಮ ಕೈಗಳನ್ನು ಹತ್ತಿರಕ್ಕೆ ತಂದು ಹೇಳುತ್ತಿದ್ದರು. ನನ್ನ ಮಾತುಗಳು ಅವರಿಗೆ ಹಿಡಿಸದೇ ಹೋದರೆ "ಚಿತ್ರಿ" ಎಂದು ತಮ್ಮ ಎರಡೂ ಕೈಬೆರಳುಗಳನ್ನು ಕೊಡವುತ್ತಿದ್ದರು. ಇನ್ನು ನನ್ನ ಬಳಿ ಸ್ಟಾಕ್ ಮುಗಿಯಿತೆಂದು ಖಚಿತವಾದ ಮೇಲೆ ಅವರು ಮಾತಾಡುತ್ತಿದ್ದರು. "ನಿಮಗೆ ಪುಸ್ತಕ ಕೊಡಬಾರದು. ಓದಿ ಆ ಬಗ್ಗೆ ಬರೆಯುವುದಿಲ್ಲ." ಎನ್ನುತ್ತಲೇ ತಮ್ಮ ಹೊಸ ಪ್ರಕಟಣೆಗಳನ್ನು ನೀಡುವುದು ವಾಡಿಕೆ. ಅಂದೂ ಸಹಾ ಅವರು ತಮ್ಮ ಹೊಸ ಕೃತಿ 'ಮರು ಪಯಣ' ವನ್ನೇ ನನಗೆ ನೀಡಿದರು. ಇದನ್ನೆಲ್ಲಾ ನೋಡುತ್ತಿದ್ದ ಡಾ॥ ಜ್ಯೋತ್ಸ್ನಾ ಕಾಮತರು, "ನೋಡಿ, ಈ ಶಾಸ್ತ್ರಿ ಇಲ್ಲದಾಗ, ನಾನು ಆತ ಬಂದರೂ ಮಾತಾಡಿಸುವುದಿಲ್ಲ. ಪುಸ್ತಕ ಕೊಡುವುದಿಲ್ಲ" ಎಂದು ಹೇಳುವುದು, ಈಗ ನೋಡಿ ಮಾತೂ ಆಡಿಸಿದರು, ಪುಸ್ತಕಾನೂ ಕೊಟ್ಟರು, ಫೋಟೋನೂ ತೆಗೆದರು" – ಎಂದರು. ಆಗ ಕಾಮತರು ನನ್ನನ್ನು ತಬ್ಬಿಕೊಂಡು "ಶೇಷಶಾಸ್ತ್ರಿ ನಮ್ಮ ಮಗ ಇದ್ದ ಹಾಗೇ" – ಎಂದು ಗಣೇಶರಿಗೆ ಹೇಳಿದರು. ಅವರ ಕಣ್ಣಲ್ಲಿ ನೀರಾಡಿತು. ಡಾ॥ ಕಾಮತರು ಭಾವುಕರಾದದ್ದು ಅದೇ ಮೊದಲು ಅದೇ ಕೊನೆಯಬಾರಿಗೆ ಕಂಡಿದ್ದು. ಮತ್ತೆ ಬರುವುದಾಗಿ ಹೇಳಿ ಹೊರಟೆವು. ಹೊರಡುವ ಮುನ್ನ ಉಡುಪಿಯಲ್ಲಿ ಡಾ॥ ಕಾಮತರು ತೆಗೆದ ಗಣೇಶರ ಛಾಯಾಚಿತ್ರಗಳನ್ನು ಅವರಿಗೆ ನೀಡಿದರು. ಆ ದಿನ ನೇರವಾಗಿ ಬಸ್ ಸ್ಟ್ಯಾಂಡಿಗೆ ಹೋದೆ. ಅನಂತಪುರದ ಬಸ್ಸು ಹತ್ತಿದೆ. ಮಾರ್ಗಮಧ್ಯದಲ್ಲಿ ಏನೋ ನೆನಪಾಗಿ ಅಣ್ಣನ ಮಗ ಸಂಜಯನಿಗೆ ಫೋನ್ ಮಾಡಿ, ನೋಡೋ ನಾಳೆ ನಾಡಿದ್ದು ಕಾಮತರ ಮನೆಗೆ ನೀನು ನಿನ್ನ ಹೆಂಡತಿ ಹೋಗಿ ಬನ್ನಿ" ಎಂದು ತಿಳಿಸಿದೆ. ಅವನು ಅವನ ಹೆಂಡತಿ ಹೋಗಿ ಬಂದರು.

ಅನಂತರ ಎಂಟೇದಿನ ಡಾ॥ ಕೃಷ್ಣಾನಂದ ಕಾಮತರು ತೀರಿಕೊಂಡರು ಎಂಬ ವಾರ್ತೆ ಸಿಡಿಲಿನಂತೆರಗಿತು. ಅದನ್ನು ಜೀರ್ಣಿಸಿಕೊಳ್ಳುವುದು ಆಗಲಿಲ್ಲ.

❑

# ಡಾ|| ಕೃಷ್ಣಾನಂದ ಕಾಮತರ ಕೃತಿಗಳನ್ನು ಕುರಿತು

# ಕನ್ನಡ ಪ್ರವಾಸ ಸಾಹಿತ್ಯಕ್ಕೆ ಡಾ। ಕೃಷ್ಣಾನಂದ ಕಾಮತರ ಕೊಡುಗೆ

ಡಾ।। ಎಂ. ಆರುಗ್ಗಂ

ಕನ್ನಡದಲ್ಲಿ ಕಾವ್ಯ, ಕಾದಂಬರಿ, ಕತೆ, ನಾಟಕ, ಭಾವಗೀತೆ.... ಇವೇ ಮೊದಲಾದ ಸಾಹಿತ್ಯ ಪ್ರಕಾರಗಳ ಬಗ್ಗೆ ನಡೆದಿರುವಷ್ಟು ಕೆಲಸಗಳು ಪ್ರವಾಸ ಸಾಹಿತ್ಯದ ಬಗ್ಗೆ ನಡೆದಿಲ್ಲವೆಂದು ಹೇಳಬಹುದು. ಈ ಎಲ್ಲಾ ಪ್ರಕಾರಗಳೂ ಸರಿ ಸುಮಾರು ಒಂದೇ ಕಾಲಘಟ್ಟದಲ್ಲಿ ಹುಟ್ಟಿ ಬೆಳೆಯುತ್ತಾ ಬಂದಿದ್ದರೂ, ಸುಮಾರು ಅರವತ್ತರ ದಶಕದವರೆವಿಗೂ ಸೃಷ್ಟಿಯಾದ ಪ್ರವಾಸ ಕೃತಿಗಳು ಅತ್ಯಲ್ಪವಾದ್ದರಿಂದ ಇಂತಹ ಸ್ಥಿತಿ ನಿರ್ಮಾಣವಾಗಿರಬಹುದು. ಈ ವಿರಳತೆಗೆ ಈ ಪ್ರಕಾರವು ಉಳಿದೆಲ್ಲಾ ಸಾಹಿತ್ಯ ಪ್ರಕಾರಗಳಿಗಿಂತ ಹೆಚ್ಚಿನದೊಂದು ಅನುಭವವನ್ನು ಅಪೇಕ್ಷಿಸುವುದಾಗಿದೆ. ಅದೇ ಪ್ರವಾಸಾನುಭವ, ಪ್ರಯಾಣ, ಪರಸ್ಥಳವಾಸ ಮತ್ತು ಕಥನ ರಚನಾ ಕಲೆ ಉಳಿದ ಘಟಕಗಳು.

ಪ್ರವಾಸ ಕೈಗೂಡಲು ಸೂಕ್ತ ಸಂದರ್ಭ, ಆರ್ಥಿಕಾನುಕೂಲ ಮತ್ತು ಸೌಲಭ್ಯ-ಸೌಕರ್ಯಗಳು ಒದಗಿ ಬರಬೇಕು. ಎಲ್ಲವೂ ಕೂಡಿ ಬಂದರೆ ಪ್ರವಾಸಿಯಾಗಬಹುದು. ಪ್ರವಾಸಿಗಳೆಲ್ಲರೂ ಸಾಹಿತ್ಯವನ್ನು ರಚಿಸಲಾರರು. ಪ್ರವಾಸಿಯು ಸೂಕ್ಷ್ಮಗ್ರಹಣಶಕ್ತಿಯನ್ನು ಹೊಂದಿದ್ದು ಚಿಕಿತ್ಸಕ ದೃಷ್ಟಿಯನ್ನು ಪಡೆದಿದ್ದರೆ ಮುಖಾಮುಖಿಯಾದ ಪರಸ್ಥಳ, ಸಮಾಜ ಮತ್ತು ಸಂಸ್ಕೃತಿಯನ್ನು ಜೀರ್ಣಿಸಿಕೊಳ್ಳಬಲ್ಲ. ಅಂತೆಯೇ ಗ್ರಹಿಸಿದ ಅನುಭವವನ್ನು ಸಮರ್ಥವಾಗಿ ಮತ್ತು ಅರ್ಥಪೂರ್ಣವಾಗಿ ಅಭಿವ್ಯಕ್ತಿಸುವ ಚಾತುರ್ಯವಿದ್ದಾಗ ಪ್ರವಾಸ ಕಥನ ಸೃಷ್ಟಿಯಾಗುತ್ತದೆ.

ಪ್ರವಾಸ ಸಾಹಿತ್ಯವನ್ನು ಪ್ರಮುಖ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ರೂಢಿಸಿಕೊಂಡವರು ವಿರಳ. ಅದರಲ್ಲೂ ಸಾಹಿತ್ಯ ಕೃಷಿಯನ್ನೇ ಪ್ರಮುಖ ವೃತ್ತಿಯನ್ನಾಗಿಸಿ ಕೊಂಡವರಿಗಿಂತ ಸಾಹಿತ್ಯೇತರ ವೃತ್ತಿಗಳಲ್ಲಿ ತೊಡಗಿಕೊಂಡಿದ್ದು, ಪ್ರವಾಸ ಸಾಹಿತ್ಯಕ್ಕೆ ಉತ್ತಮ ಕಾಣಿಕೆಯನ್ನು ನೀಡಿದ ಹಲವಾರು ಲೇಖಕರಿದ್ದಾರೆ. ಸಮಾಜದ ವಿವಿಧ ರಂಗಗಳಿಂದ ಬಂದು ಈ ಪ್ರಕಾರದ ಮೂಲಕ ಸಾಹಿತ್ಯದಲ್ಲಿ ತಮ್ಮತನವನ್ನು ಪಡಿಮೂಡಿಸಿದ್ದಾರೆ. ಈ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಅಲ್ಲದೆ ತಮ್ಮ ತಮ್ಮ ವೃತ್ತಿಕ್ಷೇತ್ರಗಳ ಹಲವಾರು ಸೂಕ್ಷ್ಮಗಳನ್ನು ಬಯಲುಗೊಳಿಸುತ್ತಾ ಸಾಹಿತ್ಯೀಕರಿಸುವುದನ್ನು ಕಾಣಬಹುದು.

ವಿಜ್ಞಾನಿಗಳು, ವೈದ್ಯರು, ರಾಜಕಾರಣಿಗಳು, ಪತ್ರಕರ್ತರೂ, ಕಲಾಸಕ್ತರೂ, ಕಾರ್ಮಿಕರು, ಇಂಜಿನಿಯರುಗಳು ಮತ್ತು ಮಠಾಧೀಶರುಗಳೂ.........ಹೀಗೆ ಸಮಾಜದ ವಿವಿಧ ಕ್ಷೇತ್ರಗಳ ಲೇಖಕರನ್ನು ಪ್ರವಾಸ ಸಾಹಿತ್ಯದಲ್ಲಿ ಕಾಣುತ್ತೇವೆ. ಕೃಷ್ಣಾನಂದ ಕಾಮತ್, ಬಿ. ಜಿ. ಎಲ್.ಸ್ವಾಮಿ, ಕು.ಶಿ. ಹರಿದಾಸ ಭಟ್ಟ, ಎಸ್. ವೆಂಕಟರಾಂ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎ.ಎನ್. ಮೂರ್ತಿರಾವ್, ಹೆಚ್.ಕೆ. ರಂಗನಾಥ, ವೈ.ಎನ್.ಕೆ., ಹೋ. ಶ್ರೀನಿವಾಸಯ್ಯ, ದೇನಾಶ್ರೀ, ರಂಜನಭಟ್ಟ, ಎಸ್. ಆರ್. ಗೌತಮ... ಹೀಗೆ ಇವರ ಪಟ್ಟಿಯನ್ನು ಬೆಳೆಸಬಹುದು.

ಈ ಕ್ಷೇತ್ರಕ್ಕೆ ಇನ್ನೂ ಬಹಳಷ್ಟು ಕಾಣಿಕೆಯನ್ನು ನೀಡಬಹುದಾಗಿದ್ದ ಡಾ. ಕೃಷ್ಣಾನಂದ ಕಾಮತರು ಪ್ರವಾಸ ಸಾಹಿತ್ಯಕ್ಕೆ ನೀಡಿರುವ ಕಾಣಿಕೆಯನ್ನು ಪರಿಶೀಲಿಸುವುದು ಪ್ರಸ್ತುತದ ಸಂಗತಿ. ಕಾಮತರು ಸೃಷ್ಟಿಸಿರುವ ಪ್ರವಾಸ ಕಥನಗಳು ಯಾವರೀತಿಯಲ್ಲಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ ಎಂಬುದು ಮುಖ್ಯ ವಿಚಾರ. ಈ ಸಂದರ್ಭದಲ್ಲಿ ಕೃತಿಗಳ ವಿಮರ್ಶೆಗಿಂತಲೂ ಸಮೀಕ್ಷೆ ಮತ್ತು ವಿಶ್ಲೇಷಣೆಗೆ ಹೆಚ್ಚಿನ ಒತ್ತನ್ನು ಕೊಡಲಾಗಿದೆ ಎಂಬುದನ್ನು ಮೊದಲಿಗೆ ಸ್ಪಷ್ಟಪಡಿಸುವುದು ಉಚಿತವೆಂದು ಭಾವಿಸುತ್ತೇನೆ.

ಪ್ರವಾಸ ಸಾಹಿತ್ಯವನ್ನೇ ಪ್ರಮುಖ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಮಾಡಿಕೊಂಡಿರುವವರಲ್ಲಿ ಕಾಮತರು ಪ್ರಮುಖರು ಎಂಬುದು ಉಲ್ಲೇಖನೀಯ. ಪ್ರವಾಸಿ ಕಾಮತರನ್ನು ಪ್ರತ್ಯೇಕವಾಗಿ ಓದುವುದು ನಿಜಕ್ಕೂ ಒಂದು ವಿಶಿಷ್ಟ ಅನುಭವ. ಈ ಕೃತಿಗಳ ಅಧ್ಯಯನವು ಕೇವಲ ಮನಸ್ಸಂತೋಷವನ್ನು ಮಾತ್ರವಲ್ಲದೆ ಜ್ಞಾನ ತೃಷೆಯನ್ನು ಇಂಗಿಸಬಲ್ಲವು. ಪ್ರವಾಸ ಸಾಹಿತ್ಯದಲ್ಲಿ ಕಾಮತರು ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಇವರ ಅಧ್ಯಯನ ಕ್ಷೇತ್ರ ಮತ್ತು ವೃತ್ತಿಗಳ ಪರಿಚಯವಿಲ್ಲದವರು ಕಾಮತರೊಬ್ಬ ಸಮಾಜ ವಿಜ್ಞಾನಿ ಅಥವ

ಮಾನವ ಶಾಸ್ತ್ರಜ್ಞನೆಂದು ತಿಳಿವದೆ ಆಶ್ಚರ್ಯಪಡುವಂತಹುದೇನಿಲ್ಲ. 'ಅದು ಮುಟ್ಟದ ಸೊಪ್ಪಿಲ್ಲ' ಎಂಬಂತೆ ಇವರ ಕೃತಿಗಳಲ್ಲಿ ದಾಖಲಾಗದ ವಿಚಾರಗಳು ಕಡಮೆ. ಭೂಗೋಳ, ಇತಿಹಾಸ, ರಾಜಕೀಯ, ಆರ್ಥಿಕ, ಧಾರ್ಮಿಕ, ಕಲೆ ಇವೇ ಮೊದಲಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದ ಬಹಳಷ್ಟು ವಿಚಾರಗಳು ಸೂಕ್ಷ್ಮ ಗ್ರಹಣೆಗೆ ಸಿಲುಕಿ ವಿಮರ್ಶೆಗೊಳಪಟ್ಟಿವೆ. ದೈನಂದಿನ ಸಾಮಾನ್ಯ ಸಂಗತಿಗಳಿಂದ ತೊಡಗಿ, ತೊಡಕಾದ ವೈಚಾರಿಕ ವಿಚಾರಗಳು ಇವರಿಗೆ ನಿಲುಕಿವೆ. ಗ್ರಹಿಸಿದ್ದನ್ನು ಅಷ್ಟೇ ಸಮರ್ಥವಾಗಿ ಸುಲಭ-ಸುಗಮ ಶೈಲಿಯಲ್ಲಿ ನಿರೂಪಿಸುವುದು ಆಕರ್ಷಣೀಯವಾದುದು. ನವಿರು ಹಾಸ್ಯಗಳಿಂದ ವಿನೋದ ಮತ್ತು ಗಾಂಭೀರ್ಯದಿಂದ ಕೂಡಿದ ಬರವಣಿಗೆಯು ನೀರಸವಾಗದೆ ಲವಲವಿಕೆಯಿಂದ ಕೂಡಿದೆ. ನಿರೂಪಿತ ವಿಚಾರಗಳಿಗೆ ಖಚಿತತೆಯನ್ನು ಒದಗಿಸುತ್ತಾ ಅಧಿಕೃತಗೊಳಿಸುವುದು ಕೃತಿಗಳಿಗೆ ಗಟ್ಟಿಯಾದ ನೆಲೆಯನ್ನು ನೀಡಿದೆ.

'ನಾನೂ ಅಮೇರಿಕೆಗೆ ಹೋಗಿದ್ದೆ' ಕಾಮತರ ಪ್ರಥಮ ಪ್ರವಾಸ ಕೃತಿ. ಸುಮಾರು ಮೂರು ದಶಕಗಳ ಹಿಂದೆ ಡಾಲರಿನ ಮೌಲ್ಯ ಈಗಿನದಕ್ಕಿಂತ ಹತ್ತು ಪಟ್ಟು ಕಡಿಮೆಯಾಗಿದ್ದಾಗಿನ ಅಮೇರಿಕದ ಚಿತ್ರಣವಿದೆ. ಉನ್ನತ ವ್ಯಾಸಂಗದ ಸಲುವಾಗಿ ಸುಮಾರು ನಾಲ್ಕು ವರ್ಷಗಳ ಕಾಲದ ಪರಸ್ಥಳದ ಅನುಭವವಾಗಿದೆ. ಮೂರು ಭಾಗಗಳ ಈ ಕೃತಿಯಲ್ಲಿ ಇಪ್ಪತ್ತು ಅಧ್ಯಾಯಗಳಲ್ಲಿ ಅಮೆರಿಕಾವನ್ನು ಸೆರೆ ಹಿಡಿದಿದ್ದಾರೆ.

ಹಡಗೆಂಬ ನೂತನ ಜಗತ್ತಿನೊಳಗೆ ಹೊಕ್ಕ ಕಾಮತರು ಹಡಗಿನ ರಚನೆ ಸ್ವರೂಪಗಳನ್ನು ವಿವರಿಸುತ್ತಾ ಶೌಚಾಲಯದ ಶುಚಿತ್ವಕ್ಕೆ ಮಂತ್ರಮುಗ್ಧರಾಗುತ್ತಾರೆ. ಊಟದ ಕೋಣೆಯು ಇಂದ್ರಲೋಕಕ್ಕೆ ಹೋಲಿಕೆಯಾಗುತ್ತದೆ. ತಮ್ಮ ನಾಮಾಂತರದ ಪ್ರಸಂಗದಲ್ಲಿ ಕಾಮತರು ಕೈಮಟ್, ಕ್ಯಾಮಟರಾಗಿ ಕೊನೆಗ ಕ್ರಿಸ್ ಆಗುವ ವಿದೇಶಿಯ ಭಾಷಾ ಉಚ್ಚಾರಣೆಯನ್ನು ನವಿರಾಗಿ ಮಂಡಿಸುತ್ತಾರೆ. ಕಣ್ಣಿನ ವೈದ್ಯರ ಅಚಾತುರ್ಯದಿಂದ ನೆಗಡಿ ಔಷಧ ಹಿಡಿದು ಬರುವ ಸಂಗತಿ ಮುಂದುವರಿದ ಜಗತ್ತಿನ ನ್ಯೂನತೆಯನ್ನು ಬಯಲಿಗಿಡುತ್ತದೆ. ಮಹಿಳೆಯರಿಗಂತೂ ಆಸ್ಪತ್ರೆ ತೌರುಮನೆ ಇದ್ದಂತೆ ಎನ್ನುತ್ತಾರೆ. ಅಮೇರಿಕನ್ನರ ನೆಲೆಯ ಬಗ್ಗೆ 'ರೂಪುಗೊಂಡಿದ್ದು ಕಾರಿನಲ್ಲಿ, ಹುಟ್ಟಿದ್ದು ಆಸ್ಪತ್ರೆಯಲ್ಲಿ. ಬೆಳೆದದ್ದು ಬೇಬಿ ಸಿಟ್ಟಿಂಗ್‌ನಲ್ಲಿ. ಆಟವಾಡಿದ್ದು ಕಿಂಡರ್ ಗಾರ್ಡನ್‌ನಲ್ಲಿ, ವಿದ್ಯಾಭ್ಯಾಸ ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ. ಮದುವೆಯಾದದ್ದು ಚರ್ಚಿನಲ್ಲಿ. ಈಗ ವಾಸಿಸುತ್ತಿರುವುದು ಟ್ರೇಲರ್ ಬಸ್ಸಿನಲ್ಲಿ' ಎಂದು ಮಾರ್ಮಿಕವಾಗಿ ಚಿತ್ರಿಸುವುದನ್ನು ಕಾಣಬಹುದು. ಅಮೇರಿಕೆಯು ಸ್ವತಂತ್ರಗೊಂಡ ದಿನಾಚರಣೆಯ ನೆಪದಲ್ಲಿ ಕಂಡ ಮುಕ್ತ ಕೇಳಿ ನವ್ಯಭೂತಗಳಲ್ಲಿ ಚಿತ್ರಿತವಾಗಿದೆ. ತಾವೇ ಕಳ್ಳತನಕ್ಕೆ ಒಳಗಾಗಿ ಇದೂ ಇದೆಯೇ ಎಂದು ಪ್ರಶ್ನಿಸುತ್ತಾರೆ. ಪ್ಯಾಂಟಿರೈಡ್ ಎಂಬ ಹುಚ್ಚಾಟದ ದಿನದ ಮೂಲಕ ಗಂಡು ಹೆಣ್ಣುಗಳ ಮತ್ತು ಯುವಜನತೆಯ ಒಳಗನ್ನು ಬಗೆಯುವ ಪ್ರಯತ್ನವಿದೆ. ಗಂಡು ಹೆಣ್ಣುಗಳನ್ನು ಗುರುತಿಸಲು ಸಹಾಯಕವಾಗುವ ಪಟ್ಟಿಯನ್ನು ನೀಡಿದ್ದಾರೆ. ಇವರ ಸ್ಥಾನಮಾನ ನಿರ್ಣಯಿಸುವ, ಸಾಮಾಜಿಕ ನಡವಳಿಕೆ ಮತ್ತು ಒಳಿತು-ಕೆಡಕುಗಳನ್ನು ಸೂಕ್ಷ್ಮವಾಗಿ ಬಯಲಿಗಿಡುತ್ತಾರೆ. ಬಾಲ್ಯದಲ್ಲಿಯೇ ಸಿಗುವ ಸ್ವಾತಂತ್ರ್ಯ, ನಿಷೇಧಿತವಲ್ಲದ ದೈಹಿಕ ಸಂಬಂಧ, ಡೇಟಿಂಗ್, ಅಪ್ರಾಪ್ತ ವಯಸ್ಸಿನ ತಾಯ್ತನ, ಕೌಟುಂಬಿಕ ಸಂಬಂಧಗಳ ಛಿದ್ರತೆ, ಹಿರಿಯರ ಅವಗಣನೆ, ಮಾದಕ ವಸ್ತುಗಳ ವ್ಯಸನಗಳ ಹಿನ್ನೆಲೆಯಲ್ಲಿ ಸ್ವಾವಲಂಬನೆ ಮತ್ತು ಆರ್ಥಿಕ ಸ್ವಾತಂತ್ರ್ಯದ ಕಾರಣಗಳನ್ನು ಹುಡುಕುತ್ತಾರೆ.

ಅಮೇರಿಕೆಯಲ್ಲಿ ಶಾಕಾಹಾರಿಯಾಗಿರುವುದು ಅಸಾಧ್ಯವಲ್ಲದಿದ್ದರೂ ಅಷ್ಟೇನೂ ಸುಲಭವಾಗಿರಲಿಲ್ಲ ಎಂದು ಕಂಡುಕೊಂಡು ಸ್ವಯಂಪಾಕದ ಚಿತ್ರಣವನ್ನು ಗೃಹವಿಜ್ಞಾನದಲ್ಲಿ ನೀಡುತ್ತಾರೆ. ಅಮೇರಿಕದ ಹೆಂಗಳೆಯರು ಭಾರತೀಯ ಸೀರೆ, ಕುಂಕುಮದ ಬಗೆಗಿನ ಕುತೂಹಲ ಮತ್ತು ಇವರ ಆಹಾರ ಕ್ರಮ ಹಾಗೂ ಹೊಗಳಿಕೆಯ ಸೌಜನ್ಯತೆಗಳನ್ನು ಗುರುತಿಸುತ್ತಾರೆ. ಅಮೇರಿಕನ್ ಕುಟುಂಬಗಳೊಂದಿಗೆ ಕಳೆದ ಸಮಯ, ಅವರ ನಡೆನುಡಿಗಳನ್ನು ಸೂಕ್ಷ್ಮವಾಗಿ ಗಮನಿಸಿದ್ದಾರೆ. ಇವರು ಭಾರತೀಯ ಸಮಾಜ ಮತ್ತು ಸಾಮಾಜಿಕ ಜನಜೀವನಗಳ ಬಗೆಗಿನ ತಿಳುವಳಿಕೆ ಕಲ್ಪನೆಯನ್ನೇ ಆಧರಿಸುವುದನ್ನು ದಾಖಲಿಸಿದ್ದಾರೆ. ಅವರ ಜ್ಞಾನವನ್ನು ವಿಸ್ತರಿಸುವ ಪ್ರಯತ್ನವಿದೆ. ನಮ್ಮಲ್ಲಿಯ

ನಿಶ್ಚಿತಾರ್ಥಕ್ಕೆ 'ನಿಮ್ಮ ದೇಶದಲ್ಲಿ ಚಿಕ್ಕವರ ಬದಲಾಗಿ ಹಿರಿಯರೇ ಡೇಟಿಂಗ್ ಮಾಡುತ್ತಾರೆ' ಎಂಬ ಅಜ್ಞಾನದಲ್ಲಿ ಕೇವಲ ಮುಗ್ಧತೆ ಮಾತ್ರವಿರದೆ, ವ್ಯಂಗ್ಯ ಕಟಕಿಗಳಿರುವುದನ್ನು ಗಂಭೀರವಾಗಿ ತೆಗೆದುಕೊಳ್ಳುತ್ತಾರೆ. ಪ್ರತಿಯೊಂದು ದೇಶದಲ್ಲೂ ಒಳ್ಳೆಯದು ಮತ್ತು ಕೆಟ್ಟದ್ದು ಎರಡೂ ಇರುತ್ತವೆ. ಆದರೆ ಹೀಗಿರುತ್ತವೆ ಎನ್ನುವ ವಿವೇಕ ಬಹುಮಟ್ಟಿಗೆ ನಿಮ್ಮಲ್ಲಿ ಇಲ್ಲ, ಎಂದು ಜಿಮ್‌ನಿಗೆ ಉತ್ತರಿಸುವಾಗ ಸಮತೂಕದ ಧೋರಣೆಯಿದೆ.

ಅಮೇರಿಕನ್ನರ ಸ್ವಹಿತಾಕಾಂಕ್ಷೆ, ವ್ಯಾಪಾರಿ ಮನೋವೃತ್ತಿ ಮತ್ತು ಹೊರಜಗತ್ತಿಗೆ ತೆರೆದುಕೊಳ್ಳದ ಸ್ವಪ್ರತಿಷ್ಠೆಯ ಗುಣಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾರೆ. ಹೆಮಲಿನ್ ಕುಟುಂಬದಲ್ಲಿ ಭಾರತೀಯ ಕೌಟುಂಬಿಕ ಜೀವನವನ್ನೂ ಮಾನವ ಸಹಜಗುಣ ಹಾಗೂ ವರ್ತನೆಗಳನ್ನೂ ಕಂಡು ಸಮಾಧಾನ ಪಡುತ್ತಾರೆ. ಲೇಖನಿಯ ಸ್ನೇಹಿತೆಯಲ್ಲಿ ಕಂಡಿರಿಸುವ ಜಿನ್‌ರೋಥ್‌ಳಲ್ಲಿ ನಮ್ಮದೇ ಹಳ್ಳಿಯ ಕೃಷಿಕ ಹೆಣ್ಣುಮಕ್ಕಳ ಹಲವಾರು ದಿನಚರಿಗಳಿವೆ.

'ಸಿರಿಯಿಲ್ಲದ ಸಿರಿವಂತ'ರ ಭಾಗದಲ್ಲಿ ಮಧ್ಯಮ ವರ್ಗವೇ ಸಮಾಜದ ಬೆನ್ನೆಲುಬು ಎನ್ನುತ್ತಾ 'ಇವರಿಗೆ ಬಡವರಂತೆ ಆಧುನಿಕ ಸಾಮಗ್ರಿಗಳಿಲ್ಲದೆ ಜೀವಿಸುವ ಮನಸ್ಸಿಲ್ಲ. ಮೇಲಿನ ವರ್ಗದವರಂತೆ ಜೀವನ ನಡೆಸುವ ತ್ರಾಣವಿಲ್ಲ' ಎಂಬ ಸಂಗತಿಯನ್ನು ಮನಗಾಣಿಸುತ್ತಾರೆ. ಬಡ್ಡಿ ವ್ಯಾಪಾರದ ವೈವಿಧ್ಯ, ಅನಿವಾರ್ಯ ಸಾಲದ ಬದುಕು, ವಿಮೆಯ ವಿರಾಟ್ ಸ್ವರೂಪ, ಅಮೇರಿಕನ್ನರ ಹೊಸತನದ ಗೀಳು ಅರ್ಥಪೂರ್ಣವಾಗಿ ಅಭಿವ್ಯಕ್ತಗೊಂಡಿದೆ. ಶೈಕ್ಷಣಿಕ ಕ್ಷೇತ್ರದಲ್ಲಿ ಸಾಧಿಸಿರುವ ಪ್ರಗತಿ ಮತ್ತು ನಾವಿನ್ಯತೆ, ನೂತನ ಅಧ್ಯಯನ ಕ್ರಮ, ಸಮರ್ಪಕ ಸವಲತ್ತು, ಶ್ರಮಪೂರ್ಣ ಕಠಿಣ ಅಧ್ಯಯನ ಮತ್ತು ಪರೀಕ್ಷಾ ವಿಧಾನ ಮೆಚ್ಚುಗೆಗೆ ಪಾತ್ರವಾಗಿದೆ. ದೇವರ ಮಕ್ಕಳೆನಿಸುವ ನೀಗ್ರೋಗಳನ್ನು ತಾರತಮ್ಯದಿಂದ ಕಾಣುವ ಕಾರಣಗಳನ್ನು ಹುಡುಕುತ್ತಾರೆ. ಇವರ ಕೊಳಕು ಜೀವನ, ಅನಕ್ಷರತೆ, ಅಸಭ್ಯ ವರ್ತನೆ, ಮತ್ತು ಒರಟುತನಗಳು ಈ ಸ್ಥಿತಿಯಲ್ಲಿರಿಸಿವೆ ಎನ್ನುತ್ತಾರೆ. ಅನಿವಾಸಿ ಭಾರತೀಯರ ಬದುಕು 'ಅಮೇರಿಕದಲ್ಲಿ ಭಾರತೀಯರು' ಭಾಗದಲ್ಲಿ ಚರ್ಚಿಸಲ್ಪಟ್ಟಿದೆ. ಇವರ ದ್ವಂದ್ವಮಯ ಸಂಘರ್ಷಗಳನ್ನು ಸೆರೆಹಿಡಿದಿದ್ದಾರೆ. ದಿನಕ್ಕೊಂದು ಡಾಲರಿನಲ್ಲಿ ತಾವು ಅಮೇರಿಕದಲ್ಲಿ ನಡೆಸಿದ ವಿವಿಧ ಸ್ಥಳಗಳ ಸುತ್ತಾಟವನ್ನು ನಮ್ಮೆದುರಿಗಿಡುತ್ತಾರೆ.

ಕಾಮತರ 'ವಂಗದರ್ಶನ' ಒಂದು ಸಾಮಾಜಿಕ ಪ್ರವಾಸ ಕಥನವಾಗಿದೆ. ಸಂಶೋಧನಾ ಕೇಂದ್ರದಲ್ಲಿ ಉದ್ಯೋಗಿಯಾಗಿ ಸುಮಾರು ಎರಡು ವರ್ಷಗಳ ಕಾಲ ಪಶ್ಚಿಮ ಬಂಗಾಲದಲ್ಲಿ ನೆಲೆಸಿದ ತಮ್ಮ ಅನುಭವಗಳನ್ನು ದಾಖಲಿಸಿದ್ದಾರೆ. ನಲ್ವತ್ತಾರು ಅಧ್ಯಾಯಗಳನ್ನು ಒಳಗೊಂಡ ತಮ್ಮ ದಿನಚರಿಯೊಂದಿಗೆ, ಬಂಗಾಲದ ಸಾಮಾಜಿಕ ಜನಜೀವನದ ವಿವರಗಳನ್ನು ಸಂಗ್ರಹಿಸಿದ್ದಾರೆ. ಬಂಗಾಲಿ ಜನಗಳ ಅಂತರ್ಯಗಳನ್ನು ಸೆರೆ ಹಿಡಿಯುವ ಪ್ರಯತ್ನವಿದಾಗಿದೆ.

ಭಾರತದ ಉತ್ತರ ಮತ್ತು ದಕ್ಷಿಣ ಸಮಾಜಗಳಲ್ಲಿ ಸಾಂಸ್ಕೃತಿಕವಾಗಿ ಅಜಗಜಾಂತರ ವೈರುಧ್ಯವಿಲ್ಲವಾದರೂ ಉಲ್ಲೇಖಿಸಬಹುದಾದ ಹಲವಾರು ವ್ಯತ್ಯಾಸಗಳಿವೆ. ಸಾಮಾಜಿಕ ಜನಜೀವನವು ಪ್ರಾಕೃತಿಕ ರಚನೆ, ನೈಸರ್ಗಿಕ ಸೌಲಭ್ಯ ಮತ್ತು ಹವಾಮಾನಗಳಿಗೆ ಹೊಂದಿಕೊಂಡು ಸಾಗುವುದರಿಂದ ಏಕರೂಪವಾಗದೆ ವೈವಿಧ್ಯಮಯವಾಗುತ್ತದೆ. ತಮ್ಮ ಸುತ್ತಮುತ್ತಲ ಜನರ ಸ್ವಭಾವ, ನಡೆ-ನುಡಿ, ಆಚಾರ-ವಿಚಾರ, ಆಹಾರ ಮತ್ತು ಧಾರ್ಮಿಕ ಜೀವನವನ್ನು ಸೂಕ್ಷ್ಮ ದೃಷ್ಟಿಯಿಂದ ಗಮನಿಸಿದ್ದಾರೆ. ಈ ಸಮಾಜದ ವಿವಿಧ ವರ್ಗಗಳ ಜನಜೀವನ, ಜೀವನಮಟ್ಟ ಮತ್ತು ಬದುಕಿನ ಸ್ವರೂಪಗಳು ಆಸಕ್ತಿ ಹುಟ್ಟಿಸುತ್ತವೆ.

ವಂಗ ಸಾಹಿತ್ಯದ ಕಿರು ಪ್ರಶಂಸೆಯೊಂದಿಗೆ ಗಂಗೆಯಲ್ಲಿ ಪಾಪದೊಂದಿಗೆ ಶರೀರದ ಕೊಳೆಯನ್ನು ತೊಳೆದುಕೊಂಡ ಅರೆನಗ್ನ ಹೆಂಗಳೆಯರ ಚಿತ್ರವನ್ನು ನವಿರಾಗಿ ಬಿಡಿಸುತ್ತಾರೆ. ಕಾವಿಪದ ಮತ್ತು ಮಹಾದೇವರ ವ್ಯಕ್ತಿ ಚಿತ್ರಗಳು ನೆನಪಿನಲ್ಲಿ ಉಳಿಯುವಂತಹುದು. ಬಾಲ್ಯದಿಂದಲೇ ಮೈಗೂಡಿಸಿಕೊಂಡಿರುವ ಉಢಾಳತನ, ಬೇಜವಾಬ್ದಾರಿ ನಡೆ ಮತ್ತು ಸೋಮಾರಿಗಳ ಜೀವನವು ಬದುಕಿನ ವಿವಿಧ ಹಂತಗಳವರೆಗೆ ಬೆಳೆದು, ನಿರ್ಲಜ್ಜತೆ ರಕ್ತಗತವಾಗಿರುವುದನ್ನು ಸೆರೆ ಹಿಡಿಯುತ್ತಾರೆ. ತಮ್ಮ ಕಛೇರಿ ಮತ್ತು ಸಕ್ಕರೆ ಕಾರ್ಖಾನೆಯ

ಕಾರ್ಯಚಟುವಟಿಕೆಗಳ ವಿವರಗಳೊಂದಿಗೆ ಹಲವು ವ್ಯಕ್ತಿಗಳ ಪೊಳ್ಳುಜೀವನ ಮತ್ತು ಕ್ಷುಲ್ಲಕ ಕೃತ್ಯಗಳನ್ನು ವಿಷಾದದಿಂದಲೇ ಚಿತ್ರಿಸುತ್ತಾರೆ. ಪ್ಲಾಸಿಯ ಇತಿಹಾಸ, ಮುರಶಿದಬಾದ್ ನಗರಗಳ ಪರಿಚಯವಿದೆ. ಬಂಗಾಲಿಗಳ ವೈವಿಧ್ಯಮಯ ಅಡುಗೆಯ ಚಿತ್ರಣಕ್ಕೂ ಕೆಲವು ಪುಟಗಳು ಮೀಸಲಾಗಿವೆ.

ನಮ್ಮ ಸಮಾಜದಲ್ಲಿ ಬಹುಕಡೆ ಕಂಡುಬರುವ 'ಚಂದಾ' (ಚೊಂದಾ) ಎಂಬ ಸಾಮಾಜಿಕ ಮಾರಿಯ ಚಿತ್ರಣ, ಕಂಪನಿಯ ಗಲಭೆ ಅದರ ಹಿಂದಿನ ಹುನ್ನಾರಗಳು, ವಿವಿಧ ಸಂಘಗಳ ಗೊಂದಲ, ಹೀನಕೃತ್ಯಗಳು ಮತ್ತು ಮೋಸದಾಟಗಳನ್ನು ಪರಿಣಾಮಕಾರಿಯಾಗಿ ದಾಖಲಿಸಿದ್ದಾರೆ. ವಿವಿಧ ವರ್ಗ ಮತ್ತು ಮಟ್ಟಗಳಲ್ಲಿ ತಾಂಡವವಾಡುತ್ತಿರುವ ಸ್ವಾರ್ಥ, ಮೋಸ ಮತ್ತು ಅಪ್ರಾಮಾಣಿಕತೆಗಳ ಕಾವು ದರ್ಶನ ಸಿಗುತ್ತದೆ. ಕವಿ ರವೀಂದ್ರರ ಶಾಂತಿನಿಕೇತನ ಮತ್ತು ರಾಮಕೃಷ್ಣರ ಮಿಶನ್‌ನ ಕಾರ್ಯಚಟುವಟಿಕೆ ಮತ್ತು ಸೌಂದರ್ಯಗಳು ವರ್ಣಿತವಾಗಿವೆ. 'ಈತ ಬಂಗಾಲಿ'ಯಲ್ಲಿ ಬಂಗಾಲಿ ಜನರ ವ್ಯಕ್ತಿತ್ವ, ಸ್ವಭಾವ ಮತ್ತು ಗುಣ-ದೋಷಗಳು, ವೈಚಿತ್ರ್ಯಗಳನ್ನು ಪಟ್ಟಿಮಾಡುತ್ತಾರೆ. ಎಷ್ಟೇ ಕುಂದು ಕೊರತೆಗಳನ್ನು ನೀಡಿದ್ದಾಗ್ಯೂ ಇಂತಹವರು ಶೇಕಡ ಎರಡು ಮಾತ್ರ ಎಂದು ಸಮತೋಲನ ಸಾಧಿಸಿದ್ದಾರೆ.

ಭಾರತೀಯ ಸಮಾಜದ ಉದ್ದಗಲಕ್ಕೂ ಕಾಣಸಬಹುದಾದ ಹಲವಾರು ಸಮಸ್ಯೆಗಳು ಬಂಗಾಳದಲ್ಲಿ ತ್ರಿವಿಕ್ರಮ ರೂಪದಲ್ಲಿ ರಾರಾಜಿಸುತ್ತವೆ. ಕಲಕತ್ತೆಯ ಹೊಲಸು ಜೀವನ, ರಾಜಕಾರಣಿಗಳ ಸಮಯ ಸಾಧಕತನ,. ಕಮ್ಯುನಿಸ್ಟರ ಅವ್ಯವಸ್ಥೆ ಮತ್ತು ಅಸಹ್ಯ ನಡವಳಿಕೆಗಳು ಜಿಗುಪ್ಸೆಯಿಂದಲೇ ಚಿತ್ರಿತವಾಗಿವೆ. ಸಮಾಜದ್ರೋಹಿಗಳ ಪೋಷಣೆಯೊಂದಿಗೆ ತಾನೂ ಸಮಾಜ ಕಂಟಕವಾಗಿರುವುದನ್ನು ಗುರುತಿಸುತ್ತಾರೆ. ನಕ್ಸಲೈಟರ ಸೃಷ್ಟಿಯ ಕಾರಣ, ಇವರಲ್ಲಿರುವ ಶಿಸ್ತು, ಸಂಘಟಿತ ಮತ್ತು ವ್ಯವಸ್ಥಿತ ಸಾಂಘಿಕ ಕಾರ್ಯಾಚರಣೆ ಉಲ್ಲೇಖಿತಗೊಂಡಿವೆ. ಯಾವುದೇ ಲಂಗುಲಗಾಮಿಲ್ಲದೆ ಬೆಳೆಯುತ್ತಿರುವ ಯುವ ಸಮುದಾಯ ಮತ್ತು ತುಕ್ಕು ಹಿಡಿದು ಹದಗೆಟ್ಟಿರುವ ನೌಕರಶಾಹಿ ಲೇಖನಿಗೆ ಗ್ರಾಸವಾಗಿದೆ. ನೌಕರಶಾಹಿಯ ಅಕಾರಣ ಮುಷ್ಕರಗಳು, ದಾಂಧಲೆಗಳು ಮತ್ತು ಮೃಗಳ್ಗತನಗಳು ಚಿತ್ರಿತವಾಗಿವೆ. ಸಮಾಜದ ಒಳಿತು-ಕೆಡುಕುಗಳ ಗ್ರಹಿಕೆಯಲ್ಲಿ ಸಾಧ್ಯವಾದಮಟ್ಟಿಗೆ ಸಮತೋಲನವನ್ನು ಕಾಯ್ದುಕೊಂಡು ಸಮಚಿತ್ತದಲ್ಲಿ ಬಂಗಾಲವನ್ನು ನಮ್ಮ ಕಣ್ಣೆದುರಿಗಿಡುವಾಗಲೂ ಅಸಹನೆ, ರೋಷ, ವಿಷಾದ ಮತ್ತು ಜಿಗುಪ್ಸೆಗಳು ಬಹಳಷ್ಟು ಸ್ಥಳವನ್ನು ಆಕ್ರಮಿಸಿವೆ. ಕಾಮತರಿಗೆ ಮುಖಾಮುಖಿಯಾದ ಸಂದರ್ಭ, ಸನ್ನಿವೇಶಗಳು ಮತ್ತು ಪರಿಸ್ಥಿತಿ ಈ ಅಂಶಗಳು ಪ್ರಾಧಾನ್ಯತೆಗಳಿಸಲು ಕಾರಣವಿರಬಹುದು ಎನಿಸುತ್ತದೆ.

'ನಾ ರಾಜಸ್ಥಾನದಲ್ಲಿ' ಇವರ ಮೂರನೇ ಪ್ರವಾಸ ಕಥನ. ಉದ್ಯೋಗ ನಿಮಿತ್ತ ಮೂರು ವರ್ಷಗಳ ಕಾಲ ಅಲ್ಲಿ ವಾಸಿಸಿದ ಅನುಭವವನ್ನು ಕೃತಿಗಿಳಿಸಿದ್ದಾರೆ. ಇದು ರಾಜಾಸ್ಥಾನದ ಜೋಬನೇರ ಮತ್ತು ಜಯಪುರ ಇವೆರಡು ಸ್ಥಳಗಳನ್ನು ಕೇಂದ್ರವಾಗಿಸಿಕೊಂಡಿದೆ. ಜೋಬನೇರದ ಕೃಷಿ ವಿಶ್ವವಿದ್ಯಾನಿಲಯದ ಆಂತರಿಕ ರಾಜಕಾರಣದ ಹಿನ್ನೆಲೆಯಲ್ಲಿ ರಾಜಾಸ್ಥಾನದ ಪರಿಕಲ್ಪನೆ ಮೂಡುತ್ತದೆ. ಇಲ್ಲಿಯ ಸಾಮಾಜಿಕ ಜನಜೀವನ ಮತ್ತು ವೈವಿಧ್ಯಮಯ ಬದುಕನ್ನು ಕಟ್ಟಿಕೊಡುತ್ತಾರೆ. ಇವರ ಬಾಳ್ವೆಯನ್ನು ಚಿತ್ರಿಸುತ್ತಲೇ ಇವರ ಒಳಿತು ಕೆಡುಕುಗಳು ಮತ್ತು ಗುಣದೋಷಗಳನ್ನು ಸೆರೆ ಹಿಡಿಯುತ್ತಾರೆ. ರಾಜಾಸ್ಥಾನದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ವಿಚಾರಗಳು, ಜೀವನ ಮೌಲ್ಯಗಳು ದಾಖಲಾಗಿವೆ. ಕೃತಿಯಲ್ಲಿಯ ವಸ್ತುಗಳು, ಘಟನೆಗಳು ಮತ್ತು ವ್ಯಕ್ತಿಗಳು, ಅವರ ಸ್ವಭಾವ ಮತ್ತು ನಡೆನುಡಿಗಳು ನಮ್ಮ ದೈನಂದಿನ ಜೀವನದಲ್ಲೂ ಮುಖಾಮುಖಿಯಾಗಿರುವ ಸಾಧ್ಯತೆಗಳಿಂದ ಕೃತಿ ಆಸಕ್ತಿ ಮೂಡಿಸುತ್ತಾ ಆತ್ಮೀಯವಾಗುತ್ತದೆ.

ವಿಶ್ವವಿದ್ಯಾನಿಲಯದ ಬುದ್ಧಿಜೀವಿಗಳ, ರಾಜಕೀಯ ಮುಖಂಡರುಗಳ ಮತ್ತು ವಿದ್ಯಾರ್ಥಿ ವೃಂದದ ತೃತೀಯ ದರ್ಜೆಯ ರಾಜಕಾರಣ ಮತ್ತು ಅಸಹ್ಯ ಚಟುವಟಿಕೆಗಳು ಎದ್ದುಕಾಣುತ್ತವೆ. ಗುಜರಾತಿ ಜನಗಳ ಅಂಗಸೌಷ್ಠವ, ಇಲ್ಲಿಯ ಶಾಲೆಗಳ ದುಸ್ಥಿತಿ ಮತ್ತು ವಿದ್ಯಾರ್ಥಿಗಳ ಸಮಸ್ಯೆಗಳು ಎಡೆಪಡೆದಿವೆ. ಇಲ್ಲಿಯ ಕೈಗಾರಿಕೆಯಲ್ಲಿ ಪ್ರಮುಖವಾಗಿ ಹಂದಿಯ ಕೂದಲ ಮಾರಾಟವನ್ನು ಕಾಣಬಹುದು. ಸಾಮಾಜಿಕ ಅನಿಷ್ಟಗಳಾದ ಬಾಲ್ಯವಿವಾಹ ಪದ್ಧತಿ ಇಂದಿಗೂ ಜೀವಂತವಿರುವುದು ಮನಸ್ಸನ್ನು ವೇದನೆಗೊಡ್ಡುತ್ತದೆ. ಇವುಗಳ ನಿಷೇಧಾತಿಯ

ಕಾನೂನುಗಳು ನಿರ್ವೀರ್ಯವಾಗಿರುವುದನ್ನು ಸೂಕ್ಷ್ಮವಾಗಿ ಬಗೆಯುತ್ತಾರೆ. ಊರಿನ ಜನಗಳ ಅನೈರ್ಮಲ್ಯದ ಬಗ್ಗೆ ಗಮನ ಸೆಳೆಯುತ್ತಾ, ಒಯ್ದು ನೀರು ಕಡಿಮೆ ಬಿದ್ದಾಗ ಅಥವಾ ನೀರೇ ಇಲ್ಲದಾಗ ಏನು ಮಾಡುವುದು ಎಂದು ಜನ ತಲೆ ಕೆಡಿಸಿಕೊಳ್ಳುವುದಿಲ್ಲ. ನಯವಾದ ಉಸುಕು ಯಾವತ್ತೂ ಇವರ ಸಹಾಯಕ್ಕೆ ಬರುವುದಲ್ಲ. ಮಕ್ಕಳ ಮಲವಿಸರ್ಜನೆಯ ನಂತರ ಮಳಲಿನಿಂದ ಸ್ವಚ್ಛ ಮಾಡಿ ಬಿಡುತ್ತಾರೆ ಎಂದು ಮಾರ್ಮಿಕವಾಗಿ ನುಡಿಯುತ್ತಾರೆ.

ರಾಜಸ್ಥಾನಿ ಜನಗಳ ವಿವಾಹ ಸಂಪ್ರದಾಯ ಅದರ ವೈಶಿಷ್ಟ್ಯಗಳನ್ನು ಸೆರೆಹಿಡಿಯುವುದರಲ್ಲಿದೆ. ರಾಜಕಾರಣಿಗಳು ಪ್ರತಿಯೊಂದು ಕ್ಷೇತ್ರದಲ್ಲೂ ನಡೆಸುವ ವ್ಯಾಪಕ ಹಸ್ತಕ್ಷೇಪವನ್ನು ಬಯಲಿಗೆಳೆಯುತ್ತಾರೆ. ವಿದ್ಯಾರ್ಥಿಗಳಲ್ಲಿ ತಾಂಡವವಾಡುತ್ತಿರುವ ಅಶಿಸ್ತು ಮತ್ತು ಬೇಜವಾಬ್ದಾರಿತನದ ಗುಣಗಳು ತಪ್ಪದೆ ಎಡೆಪಡೆದುಕೊಂಡಿವೆ. ವಿಸ್ತಾರ ಬದುಕಿನ ಮತ್ತು ಸಮಸ್ತ ರಾಜಸ್ಥಾನವನ್ನು ತೆಕ್ಕೆಸಿಕೊಳ್ಳದ ಕೃತಿಯಾದಾಗ್ಯೂ ಪ್ರಾದೇಶಿಕ ಪರಿಚಯದ ಸತ್ವಯುತ ಬರವಣಿಗೆಯಾಗಿದೆ.

ಕಾಮತರ 'ಕಾಲರಂಗ' ಕೃತಿಯು ಉಳಿದೆಲ್ಲಾ ಕೃತಿಗಳಿಗಿಂತ ಸ್ವಲ್ಪಮಟ್ಟಿಗೆ ಭಿನ್ನವಾದುದು. ಪರಿಮಿತ ವಸ್ತು ವಿಷಯಗಳನ್ನು ಆಧರಿಸಿ ಅಧ್ಯಯನ ಪೂರ್ಣವಾದ ವಿಸ್ತಾರ ವ್ಯಾಪ್ತಿಯುಳ್ಳದ್ದು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ವತಿಯಿಂದ ಮಧ್ಯಪ್ರದೇಶದ ಆದಿವಾಸಿ ಜನಗಳ ಜನಾಂಗಿಕ ಅಧ್ಯಯನ ನಡೆಸಿದ ಫಲವಾಗಿ ಮೂಡಿಬಂದಿದೆ. ಇಪ್ಪತ್ತೂಮ್ರು ಅಧ್ಯಾಯಗಳ ಈ ಕೃತಿಯಲ್ಲಿ ಆದಿವಾಸಿ ಬುಡಕಟ್ಟುಗಳ ಜನಜೀವನ ಅರ್ಥಪೂರ್ಣವಾಗಿ ಪ್ರಕಟವಾಗಿದೆ. ಗೊಂಡವನವೆಂದು ಕರೆಯಿಸಿಕೊಳ್ಳುವ ಛಿಂದವಾಡದಿಂದಲೇ ಗೊಂಡರ ವೇಷಭೂಷಣ ಮತ್ತು ಜೀವನ ಕ್ರಮದ ಬಗ್ಗೆ ನಿರೂಪಿಸುತ್ತಾರೆ. ಮಧ್ಯಪ್ರದೇಶದ ಸಾಮಾನ್ಯ ಜನರನ್ನು ಆರಾಮ ಶೂರರು. ಸೌಜನ್ಯತೆಯನ್ನು ತುಂಬಿಕೊಂಡವರು ಮತ್ತು ಸೌಹಾರ್ದತೆಯನ್ನು ತೋರುವವರು ಎಂದು ಪ್ರಶಂಸಿಸುತ್ತಾರೆ. ಇವರ ತಾಂಬೂಲದ ಚಟವನ್ನು ವಿವರಿಸುತ್ತ ವಿವಿಧ ರೀತಿಯ ಪಾನ್ ಬೀಡಾಗಳ ವಿಶ್ವರೂಪವನ್ನು ನಮ್ಮ ಮುಂದಿಡುತ್ತಾರೆ. ಆದಿವಾಸಿಗಳ ಕಡುಬಡತನ, ಕೇವಲ ಸಾಮಗ್ರಿಗಳ ಅದಲು ಬದಲಿನಲ್ಲಿ ಜೀವನ ಸಾಗಿಸುವ ವಿಧಾನವನ್ನು ಸಂತೆಯೊಳಗೆ ಗಮನಿಸುತ್ತಾರೆ. ಇವರನ್ನು ಮೋಸಗೊಳಿಸುವ ಆಧುನಿಕರನ್ನು ಗೇಲಿಮಾಡುತ್ತಾರೆ. ಮಧ್ಯಪ್ರದೇಶವು ಶೈಕ್ಷಣಿಕವಾಗಿ ತೀರಾ ಹಿಂದುಳಿದಿರುವುದನ್ನು ಮತ್ತು ಇಂಗ್ಲೀಷಿನ ಬಗೆಗಿನ ಅಜ್ಞಾನವನ್ನು ಬಯಲುಗೊಳಿಸುತ್ತಾ ಇದರ ಲಾಭವನ್ನು ಪಡೆದುಕೊಂಡವರ ಬಗ್ಗೆ ವಿವರಿಸುತ್ತಾರೆ.

ಸುಮಾರು ನಲ್ವತ್ತು ಪಂಗಡಗಳ ಆದಿವಾಸಿ ಗುಂಪುಗಳನ್ನು ಹೆಸರಿಸುತ್ತಾ ಇದರ ಬಗ್ಗೆ ಒಮ್ಮತವಿಲ್ಲದಿರುವುದನ್ನು ಸೂಚಿಸುತ್ತಾರೆ. ಇವರ ಬದುಕಿನ ರೀತಿ–ನೀತಿಗಳು, ಹಬ್ಬ ಹುಣ್ಣಿಮೆಗಳು, ನಂಬಿಕೆಗಳು ಮತ್ತು ಸಾಂಘಿಕ ಜೀವನವನ್ನು ಚಿತ್ರಿಸುತ್ತಾರೆ. ಮಧ್ಯಪ್ರದೇಶದ ಕಲಾಕಾರರು, ಚಿತ್ರಕಲೆಯನ್ನು ಪ್ರವೃತ್ತಿಯನ್ನಾಗಿಸಿಕೊಂಡು ಸಾಧಿಸಿರುವ ಔನ್ನತ್ಯವನ್ನು ಹೊಗಳುತ್ತಾರೆ. 'ಬಹುಶಃ ಅತಿ ಪುರಾತನ ಭಾರತೀಯ ಕಲಾಕಾರನು ಮಧ್ಯಪ್ರದೇಶದಲ್ಲಿಯೇ ಹುಟ್ಟಿರಬೇಕು ಎಂದರೆ ಅತಿಶಯೋಕ್ತಿಯಾಗಲಾರದು' ಎನ್ನುತ್ತಾರೆ. ಧೂಪಗಡದ ಪ್ರಾಕೃತಿಕ ಸೌಂದರ್ಯವನ್ನು ಮೋಹಕವಾಗಿ ಸೆರೆಹಿಡಿದಿದ್ದಾರೆ. ಶಿಲ್ಪ ಶಾಸ್ತ್ರಜ್ಞ ಡಾ. ವಾಕಣಕರರ ವ್ಯಕ್ತಿಚಿತ್ರ ಅರ್ಥಪೂರ್ಣವಾಗಿ ಮೂಡಿ ಬಂದಿದ್ದು ಅರವತ್ತರ ಪ್ರಾಯದಲ್ಲಿಯೂ ಅವರಲ್ಲಿ ಉಕ್ಕುತ್ತಿರುವ ತಾರುಣ್ಯ, ಶ್ರದ್ಧೆ ಶ್ರಮ ಸಹಿಷ್ಣುತೆ ಮತ್ತು ಸರಳತೆಯನ್ನು ಗಮನಿಸುತ್ತಾ ಅವರ ಕಾರ್ಯವೈಖರಿಯನ್ನು ನಮಗೆ ಬಣ್ಣಿಸುತ್ತಾರೆ.

ಖಜುರಾಹೋದ ಶಿಲ್ಪ ವೈಭವದ ಬಗೆಗಿನ ಚಿಂತನೆ ವಿಭಿನ್ನ ಬಗೆಯದಾಗಿದ್ದು ಆರೋಗ್ಯಪೂರ್ಣವಾಗಿದೆ. ಮಿಥುನ ಶಿಲ್ಪಗಳಲ್ಲಿ ಜಾಗೃತಗೊಳ್ಳುವುದು ಕಾಮುಕತೆಯಲ್ಲ 'ಸೌಂದರ್ಯಪ್ರಜ್ಞೆ' ಎಂಬ ವಿಚಾರಧಾರೆ ಗಮನ ಸೆಳೆಯುತ್ತದೆ. ಶಿಲ್ಪಗಳ ಕಲಾಚಾತುರ್ಯವನ್ನು ಬೆರಗುಗಣ್ಣುಗಳಿಂದ ವರ್ಣಿಸುತ್ತಾರೆ. ನೃತ್ಯಗುರು ಶೇಖ್‌ಗುಲಾಬ್‌ರ ಕೈಂಕರ್ಯದಲ್ಲಿ ಕೋಮುಸಾಮರಸ್ಯದ ಪ್ರತೀಕವನ್ನು ಕಾಣುತ್ತಾರೆ. ಇವರ ನಿಸ್ಪೃಹ, ಪ್ರಾಮಾಣಿಕ ಮತ್ತು ಕಠಿಣ ಪರಿಶ್ರಮಗಳನ್ನು ಪರಿಚಯಿಸುತ್ತಾರೆ. ಬಾಂಕೆರದ ಆದಿವಾಸಿಗಳು ಮತ್ತು ಇವರ ಶಿಕ್ಷಣ ಕೇಂದ್ರ ಘೋಟುಲದ ಕಾರ್ಯಚಟುವಟಿಕೆ ಮತ್ತು ವೈಶಿಷ್ಟ್ಯಗಳನ್ನು ನೀಡಿದ್ದಾರೆ. ಕಲ್ಲು, ಕೊರಡು ಕಡೆದು ಮೂರ್ತಿಮಾಡುವ ಕಲಾ

ನೈಪುಣ್ಯವನ್ನು ವಿವರಿಸಿದ್ದಾರೆ. ಚಮೇಲಿಯೆಂಬ ಸುಂದರ ಹಳ್ಳಿ, ಆ ಹಳ್ಳಿಗರ ನೈಸರ್ಗಿಕ ಪ್ರೇಮ, ಮಸಿರಿ ಮತ್ತು ಆದಿವಾಸಿಗಳ ಧಾರ್ಮಿಕ ಆಚರಣೆಗಳೊಂದಿಗೆ ಇವರ ಅತಿಥಿ ಸತ್ಕಾರದ ವಿಚಾರಗಳು ಸೂಕ್ಷ್ಮವಾಗಿದ್ದು ಆದಿವಾಸಿಗಳ ಪರಿಚಯಕ್ಕೆ ಸೂಕ್ತ ವೇದಿಕೆಯಾಗಿದೆ.

ಇವರ ಕೊನೆಯ ಪ್ರವಾಸ ಕಥನವಾಗಿ 'ಬಸ್ತರ ಪ್ರವಾಸ' ಕೃತಿಯನ್ನು ಚರ್ಚಿಸಬಹುದು. ಒಂದು ರೀತಿಯಲ್ಲಿ 'ಕಾಲರಂಗ' ಪ್ರವಾಸ ಕಥನದ ಮುಂದುವರಿಕೆಯಂತೆ ಕಂಡರೂ ಸ್ವತಂತ್ರ ಪ್ರವಾಸ ಕಥನವೆಂದು ಪರಿಗಣಿಸಲು ತೊಡಕಿಲ್ಲ. ಪ್ರವಾಸಾನುಭವೂ ಕಾಲರಂಗ ಕೃತಿಯ ಕಾಲದ್ದಾದರೂ ಮಹತ್ವದ ದೃಷ್ಟಿಯಿಂದ 'ಬಸ್ತರ ಪ್ರವಾಸ' ಬಹು ಮುಖ್ಯವಾದುದು. ಈ ಕೃತಿ ಸೂಕ್ಷ್ಮವಾದ ಗ್ರಹಣ ಶಕ್ತಿಯಿಂದ ಮತ್ತು ಅರ್ಥಪೂರ್ಣ ಅಭಿವ್ಯಕ್ತಿಯಿಂದ ಹೆಚ್ಚು ಆಕರ್ಷಣೀಯವಾಗಿದ್ದು ಪ್ರಾಮುಖ್ಯತೆ ಪಡೆಯುತ್ತದೆ.

ಛೋಟಿ ಡೊಂಗರದಿಂದ ತಮ್ಮ ಕಥನವನ್ನು ಆರಂಭಿಸುತ್ತ ಮುಂಡಾಟಿಕರದ ಇಂದ್ರಾವತಿನದಿಯ ಪ್ರಾಕೃತಿಕ ಸೌಂದರ್ಯವನ್ನು ಬಣ್ಣಿಸುತ್ತಾ ಹಳ್ಳಿಹಳ್ಳಿಯ ಮನೆಯ ಯಜಮಾನ ಕುರುಮ ಮತ್ತು ಅವರ ಕೌಟುಂಬಿಕ ಬದುಕನ್ನು ಸನಿಹದಿಂದ ಗಮನಿಸುತ್ತಾರೆ. ಅವರವರ ಕೆಲಸಗಳಲ್ಲಿ ತಲ್ಲೀನರಾದ ಜನ ಕುಲಕಸುಬುಗಳನ್ನು ವಂಶ ಪಾರಂಪರಿಕವಾಗಿ ಮುಂದಿನವರಿಗೆ ರವಾನಿಸುವ ಕ್ರಮವನ್ನು ಗ್ರಹಿಸುತ್ತಾರೆ. ಅಬುಜಮಾರದ ವಾನೋರ ಪಟೇಲನೊಂದಿಗೆ ಆಧುನಿಕ ಮತ್ತು ಅನಾಗರೀಕ ಬದುಕಿನಲ್ಲಿ ಕಾಣುವ ವೈರುಧ್ಯಗಳನ್ನು ಚರ್ಚಿಸುವಾಗ ಪ್ರಕಟವಾಗುವ ತೀರ್ಮಾನಗಳು ಕುತೂಹಲಕಾರಿಯಾಗಿವೆ. ಆದಿವಾಸಿಗಳ ನೈಸರ್ಗಿಕ ಸೌಂದರ್ಯ ಮತ್ತು ಪ್ರಕೃತಿಯೊಂದಿಗಿನ ಸಹಬಾಳ್ವೆಯ ಜೀವನ ಗಮನ ಸೆಳೆಯುತ್ತದೆ. ಆದಿವಾಸಿಗಳನ್ನು ಶೋಷಿಸುವ, ಕಾಮುಕ ಕಣ್ಣುಗಳಿಂದ ಕಾಣುವ ಆಸೆ-ಆಮಿಷ ಮತ್ತು ಬಲತ್ಕಾರಗಳಿಗೊಡ್ಡುವ ಆಧುನಿಕ ಛಾಯಾಗ್ರಾಹಕರು, ನೌಕರಶಾಹಿಗಳು ಮತ್ತು ಅಧಿಕಾರಿಗಳ ಒಳಗನ್ನು ಹೊರಗೆಡಹುವ ಪ್ರಯತ್ನವಿದೆ. ಆದಿವಾಸಿಗಳ ಸ್ವತಂತ್ರ, ಮುಗ್ಧ, ಸರಳ, ಸ್ವಚ್ಛಂದ ಬದುಕು ಆಧುನಿಕರೆನಿಸಿಕೊಂಡ ನಾಗರಿಕ ಜನಗಳಿಂದ ಕಲುಷಿತಗೊಳ್ಳುತ್ತಿರುವುದನ್ನು ಕಂಡು ಬೇಸರಿಸುತ್ತಾರೆ.

ಆದಿವಾಸಿಗಳ ಯುವ ಜನರ ಶೈಕ್ಷಣಿಕ ಕೇಂದ್ರ ಘೋಟುಲ್‌ನ ಅರ್ಥಪೂರ್ಣ ಚಿತ್ರಣವಿದೆ. ಆಧುನಿಕರಲ್ಲಿ ಕಾಣದ ಸಮಾನತೆ, ಸ್ವಾತಂತ್ರ್ಯ ಮತ್ತು ಬದುಕಿನ ಹೋರಾಟದಲ್ಲಿ ಹೆಣ್ಣುಗಂಡುಗಳು ಪಡೆಯಬೇಕಾದ ಶಿಕ್ಷಣವನ್ನು ಇಲ್ಲಿ ಪರಿಚಯಿಸುತ್ತಾರೆ. ವಿಕೃತವಾಗದ ಕಾಮ, ಕಲುಷಿತಗೊಳ್ಳದ ಮನಸ್ಸುಗಳನ್ನು ನಮ್ಮ ಮುಂದಿಡುತ್ತಾರೆ. ಪಾಶ್ಚಾತ್ಯರನ್ನು ಮೀರಿಸಿದ, ಮತ್ತೆ ಅವರೇ ಆದಿವಾಸಿಗಳಿಂದ ಕಲಿಯಬೇಕಾದ ಜೀವನ ಶಿಕ್ಷಣ ಕ್ರಮವನ್ನು ತೋರಿಸಿಕೊಡುತ್ತಾರೆ. ಆದಿವಾಸಿಗಳ ಪ್ರಭು ಪ್ರವೀಣಚಂದ್ರನ ಆಳ್ವಿಕೆ, ಆದಿವಾಸಿಗಳ ಬಗ್ಗೆ ಅವನಿಗಿದ್ದ ಜ್ಞಾನ ಮತ್ತು ಅರಸನನ್ನು ಆದಿವಾಸಿಗಳು ಪ್ರೀತಿಸುತ್ತಿದ್ದುದನ್ನು ವಿವರಿಸುತ್ತಾರೆ. ಕ್ಷುದ್ರ ರಾಜಕಾರಣ ಅರಸನನ್ನು ಬಲಿತೆಗೆದುಕೊಂಡ ಪರಿ ಕರುಣಾಜನಕವಾಗಿದೆ. ವೆರಿಯರ್ ಎಲ್ವಿನ್ನರು ಆದಿವಾಸಿಗಳ ಸಂರಕ್ಷಣೆಗಾಗಿ ದುಡಿದ ಪರಿಯು ಚಿತ್ರಿತವಾಗಿದೆ. ಆದಿವಾಸಿಗಳನ್ನು ಆಧುನಿಕ ಮಾನದಂಡಗಳಿಂದ ಬದಲಾಯಿಸುವ ಕಾರ್ಯ ತರಬಹುದಾದ ಅಪಾಯ ಮತ್ತು ಉಂಟಾಗಬಹುದಾದ ಸಮಸ್ಯೆಗಳ ಬಗ್ಗೆ ಸೂಕ್ಷ್ಮ ಒಳನೋಟವಿದೆ. ಮಾರಿಯರ ನಗೆನಲಿವಿನ ಬದುಕು, ಆದಿವಾಸಿಗಳ ಶಿಕ್ಷಣ ಹಾಗೂ ಆಕರ್ಷಣೆ ಕೊನೆಯ ಮೂರು ಅಧ್ಯಾಯಗಳಲ್ಲಿ ಚಿತ್ರಿತವಾಗಿದೆ.

ಸಮಗ್ರವಾಗಿ ಕಾಮತರ ಪ್ರವಾಸ ಕಥನಗಳನ್ನು ಅಧ್ಯಯನ ಮಾಡಿದಾಗ ಇವರ ಪ್ರತಿಭೆ ವಿಸ್ಮಯ ಮೂಡಿಸುತ್ತದೆ. ಕಾಮತರ ಶಿಸ್ತು, ಶ್ರದ್ಧೆ ಮತ್ತು ಶ್ರಮ ಎಂತಹವರನ್ನೂ ಬೆರಗುಗೊಳಿಸುತ್ತದೆ. ಅಮೇರಿಕಾದಲ್ಲಾಗಲಿ, ಆದಿವಾಸಿಗಳೊಂದಿಗಾಗಲಿ ನಡೆದುಕೊಂಡ ಕಟ್ಟುನಿಟ್ಟಿನ ಜೀವನ ಮಾದರಿಯಾಗುವಂತಹುದು. ಅಮೇರಿಕಾದಂತಹ ಅತ್ಯಂತ ಮುಂದುವರಿದ ಮತ್ತು ಆಧುನಿಕ ಸೌಲಭ್ಯಗಳಲ್ಲಿ ಬದುಕಿದಷ್ಟು ಸಹಜವಾಗಿ ಕಾಡು ಮೇಡುಗಳಲ್ಲಿ, ಗುಡಿಸಲುಗಳಲ್ಲಿ ಯಾವುದೇ ಗೊಣಗಾಟವಿಲ್ಲದೆ ಬದುಕುವುದು ಸುಲಭವಲ್ಲ. ಹಳ್ಳಿಯಲ್ಲಿಯೇ ಹುಟ್ಟಿಬೆಳೆದು ನಾಗರಿಕನಾದ ಪಟ್ಟಣಿಗ ತನ್ನವರನ್ನೇ ಪರಕೀಯರಂತೆ ಕಾಣುವ ಮತ್ತು ಅಸ್ಪೃಶ್ಯನಂತೆ ವರ್ತಿಸುವ ಜನರಿಗೆ ಕಾಮತರು ಮಾರ್ಗದರ್ಶಿಯಾಗುತ್ತಾರೆ. ಸುಸಂಸ್ಕೃತ, ಆಧುನಿಕ, ನಾಗರಿಕ ಮತ್ತು ಆತನ ಸಮಾಜವನ್ನು ನೋಡುವ ಬೆರಗುಗಣ್ಣುಗಳಿಂದಲೇ

ತೀರಾ ಹಿಂದುಳಿದ, ಆರ್ಥಿಕವಾಗಿ ದುರ್ಬಲನಾದ ಮಾನಸಿಕವಾಗಿ ಶ್ರೀಮಂತನಾದ ಆದಿವಾಸಿ ಜನಗಳನ್ನು ನೋಡುವುದು ಮೆಚ್ಚುಗೆ ಮೂಡಿಸುತ್ತದೆ. ಮನುಷ್ಯನನ್ನು ಮನುಷ್ಯನಾಗಿ ನೋಡುವ ಹೃದಯ ವೈಶಾಲ್ಯ ಓದುಗನನ್ನು ಎಚ್ಚರಿಸುತ್ತದೆ. ಪ್ರತಿಯೊಂದು ಬದುಕಿನ ಹಿಂದಿನ ಕಾರಣಗಳನ್ನು, ಸೂಕ್ಷ್ಮವಾಗಿ ಶೋಧಿಸುತ್ತಾರೆ. ಅವುಗಳಲ್ಲಿಯ ಗುಣಾವಗುಣಗಳನ್ನು ನಿರ್ಭಿಡೆಯಿಂದ ನಿರ್ದಾಕ್ಷಿಣ್ಯವಾಗಿ ನಮ್ಮ ಮುಂದಿರಿಸುತ್ತಾರೆ. ಒಳ್ಳೆಯ ಅಂಶಗಳನ್ನು ಗ್ರಹಿಸುವ ಮತ್ತು ಅಳವಡಿಸಿಕೊಳ್ಳುವ, ಉತ್ತೇಜಿಸುವ ಕಾಮತರು ದುರ್ಗುಣಗಳನ್ನು ವರ್ಜಿಸುವ ಬೋಧನೆಯನ್ನು ಮಾಡುತ್ತಾರೆ. ಉಢಾಳತನ, ಬೇಜವಾಬ್ದಾರಿ, ಸ್ವಾರ್ಥ, ಮೋಸ, ವಂಚನೆ, ಕುಟಿಲತೆ, ಸೋಮಾರಿತನ ಮತ್ತು ತೃತೀಯ ದರ್ಜೆಯ ನಡವಳಿಕೆಗಳಿಗೆ ಚಾಟಿಯೇಟು ನೀಡುವ ಕಾಮತರ ಧ್ವನಿಯು ಮುಗ್ಧತೆ, ನಿಸ್ವಾರ್ಥ, ಪ್ರಾಮಾಣಿಕತೆ, ಶ್ರದ್ಧೆ, ಕಠಿಣ ಪರಿಶ್ರಮ ಮತ್ತು ದಕ್ಷತೆ ಇವೇ ಮೊದಲಾದ ನಡವಳಿಕೆಗಳನ್ನು ಪ್ರಶಂಸೆಗೊಳಪಡಿಸುತ್ತವೆ. ಭವಿಷ್ಯ ಸಮಾಜದ ನಿರ್ಮಾತೃಗಳಾದ ಯುವ ಜನಾಂಗ ಇವರ ಕೃತಿಗಳಿಂದ ಬಹಳ ಪ್ರಯೋಜನ ಪಡೆಯಬಹುದು.

ಕಾಮತರಲ್ಲಿ ತುಂಬಿತುಳುಕುವ ಮಾನವೀಯ ಪ್ರಜ್ಞೆ ಕುತೂಹಲ ಉಂಟುಮಾಡುತ್ತದೆ. ಮೈಗೂಡಿಸಿಕೊಂಡಿರುವ ಸರಳತೆ ಸಾಮಾನ್ಯನಿಗೆ ಸಾಧ್ಯವಾಗಲಾರದು. ಇವರ ಪರಿಸರ ಪ್ರಜ್ಞೆಯಂತೂ ಅಪಾರ. ನೈಸರ್ಗಿಕವಾದುದನ್ನು ಅದರಷ್ಟಕ್ಕೆ ಬಿಡಬೇಕಾದ ಅಗತ್ಯವನ್ನು ಒತ್ತಿ ಹೇಳುತ್ತಾರೆ. ವನಸಿರಿಯಲ್ಲಿ ಜುಳುಜುಳು ಹರಿಯುವ ಶುಭ್ರ ನದಿ, ಸ್ವಚ್ಛಂದವಾಗಿ ಬದುಕುತ್ತಿರುವ ಪ್ರಾಣಿ ಪಕ್ಷಿ ಸಂಕುಲದ ಸೌಂದರ್ಯವನ್ನು ಆಸ್ವಾದಿಸುತ್ತಾರೆ. ಅಂತೆಯೇ ಆಧುನಿಕತೆ ಮತ್ತು ನಾಗರೀಕತೆಯಲ್ಲಿ ಮಲಿನಗೊಂಡ ಪ್ರಕೃತಿಯನ್ನು ಶೋಷಿಸುವಂತೆ ನಾಗರೀಕ ಆದಿವಾಸಿಗಳನ್ನು ಶೋಷಿಸುವುದನ್ನು ಕಂಡು ವಿಷಣ್ಣರಾಗುತ್ತಾರೆ.

ಸಾಹಿತ್ಯಿಕವಾಗಿ ಕಾಮತರು ಸರಳ ಗದ್ಯಲಯವನ್ನು ಅವಲಂಬಿಸಿದ್ದಾರೆ. ಇವರ ಗದ್ಯವು ಸರಳವಾಗಿರುವಂತೆ ಸುಗಮವೂ ಗ್ರಾಹ್ಯವೂ ಆಗಿದೆ. ಲವಲವಿಕೆಯಿಂದ ಕೂಡಿದ ಬರವಣಿಗೆ, ಸಂದರ್ಭ ಮತ್ತು ಸನ್ನಿವೇಶಕ್ಕೆ ಅನುಗುಣವಾಗಿ ತೀಕ್ಷ್ಣ ವಿಡಂಬನೆ, ರೋಷ ವಿಷಾದ ಮತ್ತು ಪ್ರಶಂಸೆಯನ್ನು ಸಮರ್ಥವಾಗಿ ಪ್ರಕಟಿಸುತ್ತದೆ. ವಸ್ತುನಿಷ್ಠವಾದ ವೈಚಾರಿಕ ನಿರೂಪಣೆಗಳು ಅಧ್ಯಯನ ಪೂರ್ಣವಾದುದರಿಂದ ಕೃತಿಗಳ ಮಹತ್ವವನ್ನು ಹಿಗ್ಗಿಸುತ್ತದೆ. ಚಿಂತನ-ಮಂಥನ ಮತ್ತು ತನ್ಮಯತೆಯ ನಿರೂಪಣೆಯ ತೀವ್ರತೆಯಲ್ಲಿ ಸಹೃದಯನ ಪ್ರಜ್ಞೆಯನ್ನು ವಿಕಸಿಸುವ ಸುಳಿಮಿಂಚಿನಂತಹ ಹಲವಾರು ಸಂದರ್ಭಗಳಿವೆ. ಓದುಗನ ಅಂತಃಪ್ರಜ್ಞೆಯ ಒಳಹೊಕ್ಕು ಭಾವನೆಗಳನ್ನು ಕೆದಕುವ ಚಿಂತನೆಗೆ ಪ್ರಚೋದಿಸುವ ಶಕ್ತಿ ಇವರ ಕೃತಿಗಳಿಗಿವೆ. ಇವರ ಕೃತಿಗಳು ಕೇವಲ ಮನಸ್ಸಂತೋಷಕ್ಕಾಗಿ ಮಾತ್ರವಾಗಿರದೆ ಹೃದಯವನ್ನು ವಿಕಸಿಸುವ, ಜ್ಞಾನತೃಷೆಯನ್ನು ಇಂಗಿಸುವ ಮತ್ತು ವಿಸ್ತಾರ ಜ್ಞಾನ ಪಡೆಯುವ ಸಾಧನಗಳಾಗಿವೆ ಎಂದರೆ ಅತಿಶಯೋಕ್ತಿಯಾಗಲಾರದು. ಪ್ರವಾಸ ಸಾಹಿತ್ಯ ಪ್ರಕಾರದಲ್ಲಿ ಸಾರ್ಥಕತೆಯನ್ನು ಪಡೆದಿರುವ ಈ ಕೃತಿಗಳ ನಿಮಿತ್ತ ಡಾ. ಕೃಷ್ಣಾನಂದ ಕಾಮತರು ಕನ್ನಡ ಸಾಹಿತ್ಯದಲ್ಲಿ ಚಿರಸ್ಥಾಯಿಯಾದ ಸ್ಥಾನ ಪಡೆದಿರುವರೆಂಬುದು ಸತ್ಯ.

❑



# ಪ್ರವಾಸ ಸಾಹಿತ್ಯ ೧೯೯೧

ಡಾ. ಎಸ್. ವಿದ್ಯಾಶಂಕರ

ಕನ್ನಡದಲ್ಲಿ ಪ್ರವಾಸ ಸಾಹಿತ್ಯಕ್ಕೆ ಒಂದು ಸಾಹಿತ್ಯ ಪ್ರಕಾರವಾಗಿ ಒಂದು ನಿಶ್ಚಿತ ನೆಲೆಯಾಗುವುದು ಅದರ ಒಂದು ನೂರು ವರ್ಷಗಳ ಗತ ಇತಿಹಾಸದಿಂದ ಸ್ಪಷ್ಟಗೊಳ್ಳುತ್ತಿದೆ. ಪ್ರತಿವರ್ಷ ಬರುತ್ತಿರುವ ಪ್ರವಾಸ ಸಾಹಿತ್ಯ ಕೃತಿಗಳನ್ನು ಗಮನಿಸುತ್ತ ಬಂದಾಗ ಬೇರೆ ಭಾಷೆಯಲ್ಲಿ ಸಾಧಿಸಲಾಗದಿರುವುದು ನಮ್ಮಲ್ಲಿ ಸಾಧ್ಯವಾಗಿರುವುದು ಕಂಡುಬರುತ್ತವೆ. ಇದು ಸಂತೋಷದ ಸಂಗತಿ.

1991ರಲ್ಲಿ ಬಂದಿರುವ ಪ್ರವಾಸ ಸಾಹಿತ್ಯ ಕೃತಿಗಳ ಸಂಖ್ಯೆ ಒಂಬತ್ತು. ಇವುಗಳಲ್ಲಿ ಎರಡು ಕೃತಿಗಳು ಜನಾಂಗಿಕ ಅಧ್ಯಯನವನ್ನು ಒಳಗೊಂಡಿವೆ. ವಿದೇಶಿ ಪ್ರವಾಸಾನುಭವವನ್ನು ಕುರಿತಂತೆ ನಾಲ್ಕು ಕೃತಿಗಳು ಹೊರಬಂದಿವೆ. ಪ್ರವಾಸ ಸಾಹಿತ್ಯದಲ್ಲಿ ಸಾಹಸ ಯಾತ್ರೆಯೂ ಒಂದು ಮುಖ್ಯ ಭಾಗವಾಗಿದ್ದು, ಅದನ್ನು ಕುರಿತಂತೆ ಒಂದು ಕೃತಿಯೂ ಹೊರಬಂದಿದೆ. ಶಬರಿಮಲೆ ಯಾತ್ರೆಯ ಬಗೆಗೂ ಒಂದು ಪುಸ್ತಕ ಬಂದಿದೆ. ವರ್ಷದ ಕೃತಿಗಳಲ್ಲಿ ಡಾ. ಕೃಷ್ಣಾನಂದ ಕಾಮತರ 'ಬಸ್ತರ ಪ್ರವಾಸ' ಹಾಗೂ ಹೀ.ಚಿ. ಬೋರಲಿಂಗಯ್ಯನವರ 'ಗಿರಿಜನ ನಾಡಿಗೆ ಪಯಣ' ಗಮನಾರ್ಹವಾದುವು.

ಡಾ. ಕೃಷ್ಣಾನಂದ ಕಾಮತ್‌ರವರ 'ಬಸ್ತರ ಪ್ರವಾಸ'ವು ಮಧ್ಯಪ್ರದೇಶದ ಅತೀ ಹಿಂದುಳಿದ ಜಿಲ್ಲೆಯಾದ ಬಸ್ತರ್‌ನ ದಟ್ಟವಾದ ಕಾಡುಗಳಲ್ಲಿ ಶತಶತಮಾನಗಳಿಂದ ಒಂದೇ ರೀತಿಯಲ್ಲಿ ಜೀವನ ನಡೆಸುತ್ತ ಬಂದಿರುವ ಆದಿವಾಸಿ ಜನಾಂಗವನ್ನು ತೀರಾ ಹತ್ತಿರದಿಂದ ಅಭ್ಯಸಿಸುವ ಏಕಮೇವ ಉದ್ದೇಶವನ್ನು ಹೊಂದಿದೆ. ಒಂದು ಜನಾಂಗಿಕ ಅಧ್ಯಯನವನ್ನು ಗಂಭೀರವಾಗಿ ಪರಿಗಣಿಸಿ ಕನ್ನಡದಲ್ಲೂ ಉನ್ನತ ಸಂಶೋಧನೆಯನ್ನು ಈಗಾಗಲೇ ವಿದ್ವಾಂಸರು ನಡೆಸಿರುವರು. ಈ ದಿಶೆಯಲ್ಲಿ 'ಬಸ್ತರ ಪ್ರವಾಸ'ವು ಸಾಗಿದ್ದರೂ ಉನ್ನತ ಸಂಶೋಧನೆಯ ಕಡೆಗೆ ಹೊರಳದೆ, ಲವಲವಿಕೆಯ ನಿರೂಪಣೆಯಿಂದಾಗಿ ಪ್ರವಾಸ ಸಾಹಿತ್ಯವಾಗಿ ಹೊರಳಿದೆ. ಲೇಖಕರು ಯಾವ ಪೂರ್ವ ನಿರ್ಧಾರಿತ ಧೋರಣೆಗಳನ್ನು ಹೊಂದಿರದೆ ಈ ಆದಿವಾಸಿ ಜನಾಂಗದವರ ಜೊತೆ ಆರಾಮವಾಗಿ ನಿಂತು ಅವರ ಜೀವನ ವಿಧಾನವನ್ನು, ನಂಬುಗೆಗಳನ್ನು, ಕಟ್ಟುಪಾಡುಗಳನ್ನು ಯಾವಾಗಲೂ ನೆಮ್ಮದಿಯನ್ನು ಕಂಡುಕೊಂಡಿರುವ ಅವರ ಹೃದಯ ಶ್ರೀಮಂತಿಕೆಯನ್ನು ಎಳೆಯರ ಮುಕ್ತ ಲೈಂಗಿಕ ಸಂಬಂಧಗಳನ್ನು, ಬದಲಾವಣೆಗೆ ತಮ್ಮನ್ನು ಒಡ್ಡಿಕೊಳ್ಳಲು ಅವಕಾಶವಿದ್ದರೂ ಅಡವಿಯ ಮಕ್ಕಳಾಗಿ ಅಲೆಮಾರಿ ಜೀವನವನ್ನೇ ಇಷ್ಟಪಡುವ ಅವರ ನಿಲುವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿರುವರು.

೧೬೦ಸೆಂ.ಮೀ ಗಿಂತಲೂ ಅಧಿಕವಾಗಿ ಸುರಿವ ಮಳೆಯಿಂದಾಗಿ ಬಸ್ತರ್ ಜಿಲ್ಲೆಯ ಶೇಕಡಾ ೭೦ರಷ್ಟು ಭೂಭಾಗ ದಟ್ಟವಾದ ಕಾಡಿನಿಂದ ಕೂಡಿದೆ. ಈ ಜಿಲ್ಲೆಯಲ್ಲಿ ಹರಡಿಕೊಂಡಿರುವ ಆದಿವಾಸಿ ಜನಾಂಗದ ಕೆಲವು ಗುಂಪುಗಳು ಅಲೆಮಾರಿಗಳಾಗಿ ಕಾಡಿನಲ್ಲಿ ಜೀವನ ನಡೆಯಿಸಿರುವರು. ತಾತ್ಕಾಲಿಕವಾಗಿ ನಿಂತ ಎಡೆಯಲ್ಲಿ ಕುಮರಿ ಬೆಳೆ ತೆಗೆದು ಕೆಲಕಾಲ ಅಲ್ಲಿದ್ದು ನಂತರ ಹೊಟ್ಟೆಪಾಡಿಗಾಗಿ ಮತ್ತೊಂದೆಡೆಗೆ ಸಾಗಿಹೋಗುವ ಇವರು ತಮ್ಮ ಚಲನಶೀಲ ಬದುಕಿನಲ್ಲೂ ನೆಮ್ಮದಿ ಕಂಡುಕೊಂಡಿರುವರು. ಜನಸಂಪರ್ಕದಿಂದ ದೂರವಿರುವ ಇವರು ಆದಿಮಾನವರ ರೀತಿಯಲ್ಲೆ ಉಡುಗೆ ತೊಡುಗೆ ಧರಿಸಿ ತಮ್ಮ ಹೊಟ್ಟೆಪಾಡಿಗೆ ಕಾಡನ್ನೇ ಆಶ್ರಯಿಸಿರುವರು. ಇವರಲ್ಲಿ ಸುಧಾರಣೆ ತರುವ ನೆಪವೊಡ್ಡಿ ಸರಕಾರದ ಅಧಿಕಾರಗಳು, ಪೋಲೀಸರು ಮೇಲಿಂದ ಮೇಲೆ ಇವರಿರುವ ಜಾಗಕ್ಕೆ ಧಾಳಿ ನಡೆಸಿ ಇವರ ಏಕಾಂತ ಜೀವನಕ್ಕೆ ಧಕ್ಕೆ ತಂದಿರುವರು. ಆದಿವಾಸಿಗಳಲ್ಲಿ ಕೆಲವರು ಕಾಡುಕಡಿದು, ನೆಲವನ್ನು ಸಮಮಾಡಿ ಸಾಗುವಳಿ ನಡೆಸಿರುವರು. ಅಕ್ರಮವಾಗಿ ಸಾಗುವಳಿ ಮಾಡುವರೆಂಬ ನೆಪವೊಡ್ಡಿ ಸರಕಾರಿ ಅಧಿಕಾರಿಗಳು ಇವರಿಗೆ ಕಿರುಕುಳ ಕೊಡುತ್ತಿರುವರು. ಈ ಜಮೀನನ್ನು ತಮ್ಮ ಹೆಸರಿಗೆ ಮಾಡಿಕೊಳ್ಳಲು ಇವರು ಮುಖಂಡರಿಗೆ, ಅಧಿಕಾರಿಗಳಿಗೆ ದುಂಬಾಲು ಬೀಳಬೇಕಾಗಿದೆ. ಹಣ ಕೊಡದೇ ಸರಕಾರದಲ್ಲಿ ತಮ್ಮ ಕೆಲಸವಾಗುವುದಿಲ್ಲವೆನ್ನುವ ತಿಳುವಳಿಕೆಯೂ ಈಗ ಈ ಮುಗ್ಧ ಜನರಿಗೆ ಬಂದಿದೆ.

'ನೀವೇಕೆ ಸರಕಾರ ಕೊಡುವ ಸವಲತ್ತುಗಳನ್ನು ನಿರಾಕರಿಸಿ ಕಾಡಿನ ಮರೆಯಲ್ಲಿ ಕಷ್ಟದ ಜೀವನ ನಡೆಸುವಿರಿ!' ಎಂದು ಲೇಖಕರು ಕೇಳಿದ್ದಕ್ಕೆ ಆದಿವಾಸಿಗಳ ಮುಖಂಡ ಕೊತುವಾಲನು ಹೀಗೆ ಹೇಳುವನು. "ಬಾಬು ನಾವು ಕಾಡಿನ ಮಕ್ಕಳು. ಕಾಡುಕೋಣ, ಕಾಡುಹಂದಿ,

ಕರಡಿಗಳಿಗೆ ಹೆದರಿ ಕಾಡು ತ್ಯಜಿಸಿ ನಾಡಿನಲ್ಲಿ ಸುಖವಾಗಿರಲು ಸಾಧ್ಯವೇ? ಅನಾದಿ ಕಾಲದಿಂದಲೂ ನಾವೆಲ್ಲ ಈ ಗುಡ್ಡ ಬೆಟ್ಟ, ನದಿ ಕೊಳ್ಳ, ಪಶು ಪಕ್ಷಿಯೊಂದಿಗೆ ಒಂದಾಗಿ ಬಾಳಿದ್ದೇವೆ. ನೀರು ಬಿಟ್ಟು ಬದುಕುಂಟೆ ? ಜಗದಲಪುರದಲ್ಲಿ ಅರಮನೆಯಲ್ಲಿ ಇರುವಂತೆ ಮಾಡುತ್ತೇವೆಂದರೂ ನಾವು ಮಾತ್ರ ಕಾಡಿನಿಂದ ಹೊರಬರಲು ಸಿದ್ಧರಿಲ್ಲ. ನನ್ನ ಈ ನಾಡಿನಲ್ಲಿ ಹುಟ್ಟಿದಾಗ ನಮ್ಮವರೆಲ್ಲ ಪೋಟಿಡೊಂಗರ, ನಾರಾಯಣಪುರಗಳ ಆಸುಪಾಸು (ಅಕ್ಕಪಕ್ಕ) ಗಳಲ್ಲಿ ಬೀಡುಬಿಟ್ಟಿದ್ದೆವು. ಆದರೆ ಅಲ್ಲಿ ರಸ್ತೆಗಳಾದವು. ಕಾರು, ಜೀಪುಗಳು ಓಡಾಡಲಾರಂಬಿಸಿದವು. ದಿನಂಪ್ರತಿ ಬೇರೆ ಬೇರೆ ಅಧಿಕಾರಗಳ ಕಿರುಕುಳ ಪ್ರಾರಂಭವಾಯಿತು. ನಿರುಪಾಯವಾಗಿ ಈ ತಾಣಕ್ಕೆ ಸೇರಿದೆವು.... ಕಾನೂನಿನ ಪ್ರಕಾರ ವರ್ಷಕ್ಕೊಮ್ಮೆ ಕರ ಕೇಳಿದರೆ ಹೇಗಾದರೂ ಕೊಡಬಹುದು. ಅದು ಬಿಟ್ಟು ಪ್ರತಿವಾರವೂ ಬಂದು ಕಾಳುಕಡ್ಡಿ, ಕುಕ್ಕುಟ, ಹುಲಿ ಹುಲ್ಲೆಗಳ ಚರ್ಮ, ಕೋಡು, ಕೋರೆಹಲ್ಲು, ಜೇನುತುಪ್ಪ, ಮದ್ಯ ಮೊದಲಾದವನ್ನು ಜಬರ್ದಸ್ತಿನಿಂದ ಕೇಳಿದರೆ ನಾವು ಎಲ್ಲಿಂದ ಕೊಡುವುದು? ನಾವು ಕಡುಬಡವರು ಬಾಬು...." (ಪು.೩೧-೩೨)

'ಈಗ ನೀವು ಆಯ್ದುಕೊಂಡ ತಾಣದಲ್ಲಿಯೇ ಕೃಷಿ ಮಾಡಿಕೊಂಡು ಆದಾಯ ಹೆಚ್ಚಿಸಿಕೊಳ್ಳಬಹುದಲ್ಲ' ಎಂಬ ಇನ್ನೊಂದು ಪ್ರಶ್ನೆಗೆ ಕೊತವಾಲನ ಉತ್ತರ ಹೀಗಿದೆ. "ಬಾಬುಜಿ. ಅದಕ್ಕಾಗಿ (ಕೃಷಿಗೆ) ದನಕರುಗಳು ಅತ್ಯವಶ್ಯ. ಕಾಡೆತ್ತುಗಳು ಪ್ರೇಮಿಯನ್ನು ಸೇರುವುದಕ್ಕಾಗಿ ಆಗಾಗ ನಮ್ಮ ದೊಡ್ಡಿಗಳ ಮೇಲೆ ಹಲ್ಲೆ ನಡೆಸುತ್ತವೆ. ಅವುಗಳ ಸಹವಾಸದಲ್ಲಿ ನಮ್ಮ ಹಸುಗಳು ಹಾಲು ಹಿಂಡಲು ನಿರಾಕರಿಸಿಬಿಡುತ್ತವೆ. ದನದ ಮಾಂಸಕ್ಕೆ ಆಸೆಪಟ್ಟು ಹೆಬ್ಬುಲಿಗಳು ಆಗಾಗ ಆಕ್ರಮಣ ನಡೆಸುತ್ತವೆ...... ಕೆಲವೊಮ್ಮೆ ನರಭಕ್ಷಕ ಹುಲಿಗಳ ಕಾಟ ಹೆಚ್ಚಾದಾಗ ನಾನೇ ವಾಸಸ್ಥಾನ ಬದಲಿಸಿಕೊಳ್ಳಬೇಕಾಗುತ್ತದೆ. ಕೃಷಿಗಾಗಿ ಎತ್ತುಗಳನ್ನು ಸಾಕಿದರಂತೂ ನಮ್ಮ ಸರ್ವನಾಶವಾಗುವದು ಖಂಡಿತ.'

'ಒಂದೆಡೆ ನಿಂತು ಕೃಷಿ ಮಾಡುವುದನ್ನು ಒಪ್ಪದಿದ್ದರೆ ಹೋಗಲಿ ಸರಕಾರ ಕೊಡಮಾಡುವ ಶಿಕ್ಷಣ ಔಷಧೋಪಚಾರಗಳನ್ನಾದರೂ ಸ್ವೀಕರಿಸಬಹುದಲ್ಲಾ?' ಎಂದು ಲೇಖಕರು ಬೇಕೆಂದೇ ಪ್ರಶ್ನೆ ಕೇಳಿದ್ದಕ್ಕೆ, ಕೊತವಾಲ ಕಾಡಿನ ಸಂತೃಪ್ತ ಜೀವನದ ಬಗೆಗೆ ಹೀಗೆ ಸಮಜಾಯಿಷಿ ನೀಡುವನು: "ಮಗನಿಗೆ ತಂದೆ, ಮಗಳಿಗೆ ತಾಯಿಗಿಂತ ದೊಡ್ಡ ಗುರುಗಳು ಯಾರಾದರೂ ಇದ್ದಾರೆಯೇ? ಬೇಟೆಯಾಡುವುದು, ಮೀನು ಹಿಡಿಯುವುದು, ಕಟ್ಟಿಗೆ ತರುವುದು, ಗುಡಿಸಲು ಕಟ್ಟುವುದು ಪೆಂಡಾ (ಕಾಡಿನ) ಕೃಷಿ ಮಾಡುವುದು ಮಹುವಾ ಮದ್ಯ ಮಾಡುವುದು, ವಾದ್ಯ ನುಡಿಸುವುದು, ನರ್ತಿಸುವುದು, ಎಲ್ಲವನ್ನೂ ನಮ್ಮ ಎಳೆಯರಿಗೆ ಚಾಚೂ ತಪ್ಪದೇ ಕಲಿಸುತ್ತೇವೆ, ಇನ್ನಿತರರಂತೆ ನಾವೂ ಬೆನ್ನು ಮುರಿ ದುಡಿಯುತ್ತೇವೆ. ಅಡುಗೆ ಮಾಡಿ ಉಣ್ಣುತ್ತೇವೆ. ಸುಖವಾಗಿ ನಿದ್ರಿಸುತ್ತೇವೆ. ಮದುವೆಯಾಗಿ ಮಕ್ಕಳನ್ನು ಪಡೆಯುತ್ತೇವೆ. ಶಾಲಾಶಿಕ್ಷಣವಿಲ್ಲದಿದ್ದರೂ ಜೀವನದಲ್ಲಿ ಯಾವ ಕೊರತೆಯನ್ನೂ ಮಾಡಿಕೊಂಡಿಲ್ಲ. ಕಾಡಿನ ಮಕ್ಕಳು ಗಟ್ಟಿಮುಟ್ಟಾಗಿದ್ದರೆ ಮಾತ್ರ ನಮಗೆ ಬದುಕು. ಸಣ್ಣಪುಟ್ಟ ಆರೋಗ್ಯದ ಸಮಸ್ಯೆಗಳಿದ್ದರೆ ನಾವೇ ಗಿಡಮೂಲಿಕೆ, ತೊಗಟೆ, ಬೇರು. ಪರ್ಣಗಳನ್ನು ಬಳಸಿ ಔಷಧೋಪಚಾರ ಮಾಡಿಕೊಳ್ಳುತ್ತೇವೆ. ಹೆಚ್ಚಿನ ಕಾಯಿಲೆಯಾದರೆ ಅದು ಭೂತ ಪ್ರೇತಗಳ ಬಾಧೆಯಿಂದಾಗಿ. ಅದಕ್ಕೆ ಪರಿಹಾರ ಸೂಚಿಸಲು ನಮ್ಮ ಮಂತ್ರವಾದಿ ಇದ್ದೇ ಇರುವ. ಮಕ್ಕಳ ಮನೋರಂಜನೆಗೆ ಘೋಟುಲು ಇದ್ದೇ ಇವೆ."

ಆದಿವಾಸಿ ಸ್ತ್ರೀಯರ ಪ್ರಕೃತಿದತ್ತವಾದ ದೇಹ ಸೌಂದರ್ಯ, ಕೇಶಾಲಂಕಾರ, ಉಡಿಗೆ, ತೊಡಿಗೆ, ಕ್ಯಾಮರಾ ಕಂಡರೆ ನಾಚಿ ಹೆದರಿ ಓಡಿಹೋಗುವ ಮನೋಭಾವ-ಇವುಗಳ ವಿವರಣೆಯನ್ನು ಲೇಖಕರು ಸಾಕಷ್ಟು ಚೆನ್ನಾಗಿಯೇ ಮೂಡಿಸಿರುವರು. ರಾಜಕಾರಣಿಗಳ ನಯವಂಚನೆಯಿಂದ ಅರಸೊತ್ತಿಗೆಯ ಅಧಿಕಾರವನ್ನು ಕಳೆದುಕೊಂಡ ಆದಿವಾಸಿಗಳ ಅರಸ ಪ್ರವೀಣ ಚಂದ್ರರ ಕರುಣಾಜನಕ ಕಥೆಯನ್ನು ಇಂದಿನ ರಾಜಕೀಯದ ವಿಡಂಬನೆಯಾಗಿ ಲೇಖಕರು ಬಳಸಿಕೊಂಡಿರುವರು. ಆದಿವಾಸಿಗಳ ಮುಗ್ಧತೆಯನ್ನು ತನ್ನ ಬಂಡವಾಳನ್ನಾಗಿ ಮಾಡಿಕೊಂಡು ಅವರಿಗೆ ದೀಕ್ಷೆ ಕೊಡುವ ನೆಪದಲ್ಲಿ ಅವರನ್ನು ಸುಲಿದ ಕಂಠೀಬಾಬಾನ ಚಿತ್ರವನ್ನು ಲೇಖಕರು ಚೆನ್ನಾಗಿ ಮೂಡಿಸಿರುವರು. ಕಂಠೀಬಾಬಾನ, ಪ್ರಭಾವಶಾಲೀ ವರ್ಚಸನ್ನು ಆದಿವಾಸಿಗಳ ಮತ ಗಳಿಸುವಲ್ಲಿ ಬಳಸಿಕೊಂಡ ರಾಜಕಾರಣಿಗಳು ತುರ್ತುಪರಿಸ್ಥಿತಿಯಲ್ಲಿ ಆತ ಸರಕಾರಕ್ಕೆ ಆದಾಯಕರ ಕೊಡದೇ ಸಂಪತ್ತನ್ನು ಕೂಡಿಹಾಕಿ ಮೋಸಮಾಡಿದ್ದಾನೆಂದು ಅವನ ಅಪಾರ ಸಂಪತ್ತನ್ನು ಜಪ್ತಿ ಮಾಡಿಸಿದ್ದಲ್ಲದೆ ಅವನನ್ನು ಶೋಧಿಸಿ ಕಾರಾಗೃಹದಲ್ಲಿರಿಸಿದ್ದು ರಾಜಕಾರಣಿಗಳ ಗೋಮುಖವ್ಯಾಘ್ರತನವನ್ನು ಲೇವಡಿ ಮಾಡಿದಂತಿದೆ.

ಪ್ರವಾಸ ಸಾಹಿತ್ಯವು ಸಾಮಾಜಿಕ ಅಧ್ಯಯನದತ್ತಲೂ ಮುಖಮಾಡಬಹುದೆಂಬುದಕ್ಕೆ ಇಲ್ಲಿ ಸಾಕಷ್ಟು ನಿದರ್ಶನಗಳು ಸಿಗುತ್ತವೆ. ಈ ಪ್ರವಾಸ ಸಾಹಿತ್ಯದಲ್ಲಿ ಬರುವ ಘೋಟುಲ್ ಸಾಮಾಜಿಕ ಜೀವನ ಕುತೂಹಲಕಾರಿಯಾಗಿದೆ. ಘೋಟುಲ್ ಕಿರಿಯರಿಗೆಂದೇ ಇರುವ ಜೀವಂತ ವಿದ್ಯಾಲಯ. ಹಳ್ಳಿಯ ಹೊರಗೆ ಊರ ಜನರು ಪ್ರತ್ಯೇಕ ಸ್ಥಳವನ್ನು ಮೀಸಲಿಡುವರು. ಇಲ್ಲಿ ಆರುವರ್ಷಕ್ಕಿಂತ ಮೇಲ್ಪಟ್ಟ

ಮಕ್ಕಳೆಲ್ಲಾ ಇವರ ಸದಸ್ಯರು. ಉರಿಯುತ್ತಿರುವ ಬೆಂಕಿಯ ಸುತ್ತ ಕುಳಿತು ಹಾಡು, ಕುಣಿತ, ವಾದ್ಯ ನುಡಿಸುವುದು-ಇವುಗಳ ಮೂಲಕ ಮನರಂಜನೆ ಪಡೆಯುವರು. ಕತೆ ಒಗಟು ಹೇಳುವುದು, ಒಬ್ಬರನ್ನೊಬ್ಬರು ಛೇಡಿಸಿ ಕೆರಳಿಸಿ ವಿನೋದವಾಡುವುದು ಮುಂದುವರಿಯುತ್ತದೆ. ಇಲ್ಲಿ ಗಂಡು-ಹೆಣ್ಣುಗಳಿಗೆ ಮುಕ್ತ ಸ್ವಾತಂತ್ರ್ಯ. ಅವರು ನಮಗೆ ಸರಿಕಂಡವರ ಜೊತೆ ಮಲಗುವರು. ಪ್ರಕೃತಿಯ ಮಡಿಲಲ್ಲಿ ಯಾವ ವಿಕೃತಿಗೂ ಆಸ್ಪದವಿಲ್ಲದೆ ಗಂಡು-ಹೆಣ್ಣು ಪರಸ್ಪರ ಆಕರ್ಷಿತರಾಗಿ ಸುಖಿಸುವರು. ಪ್ರತಿಯೊಬ್ಬ ಸುಂದರ ಆಕರ್ಷಕ ಯುವತಿ ಒಂದಿಲ್ಲೊಂದು ದಿನ ಪ್ರತಿಯೊಬ್ಬ ಗಂಡಿನ ಜೊತೆ ಕೂಡುವ ಅವಕಾಶವಿರುವುದರಿಂದ ಇಲ್ಲಿ ಪ್ರೇಮದಲ್ಲಿ ಅಸೂಯೇ, ವೈಮನಸ್ಯ, ನಿರಾಸೆಗಳಿಗೆ ಆಸ್ಪದವಿಲ್ಲ. ಘೋಟುಲದ ಚಟುವಟಿಕೆಗಳನ್ನು ಮನೋಜ್ಞವಾಗಿ ತಿಳಿಯಪಡಿಸುವ ಲೇಖಕರು ಕಾಡಿನ ಮಕ್ಕಳ ಅದ್ಭುತ ಜಗತ್ತೊಂದನ್ನು ಪರಿಚಯಿಸುವರು. ಘೋಟುಲದ ಗಂಡು-ಹೆಣ್ಣುಗಳು ಪರಸ್ಪರ ಕೆರಳಿಸುವ ಸಲುವಾಗಿ ಹಾಡುವ ಹಾಡುಗಳನ್ನು ಲೇಖಕರು ಸಂದರ್ಭೋಚಿತವಾಗಿ ಉಲ್ಲೇಖಿಸಿರುವರು. ಅವು ಸ್ವಾರಸ್ಯಪೂರ್ಣವಾಗಿವೆ, ಅರ್ಥಗರ್ಭಿತವಾಗಿವೆ.

ಈ ಪ್ರವಾಸ ಕಥನದ ಕೊನೆಯಲ್ಲಿ ಕಾಲು ಶತಮಾನಕ್ಕಿಂತಲೂ ಹೆಚ್ಚು ಕಾಲ ಆದಿವಾಸಿಗಳೊಂದಿಗೆ ಒಂದಾಗಿ ಬಾಳಿ ಬದುಕಿ ಅವರ ನೋವು ನಲಿವುಗಳನ್ನು ಅರ್ಥಮಾಡಿಕೊಂಡಿದ್ದ ವೆರಿಯರ್ ಎಲ್ವಿನ್‌ನ್ನರು ಕೇಂದ್ರ ಸರಕಾರಕ್ಕೆ ಆದಿವಾಸಿ ಕಲ್ಯಾಣ ಯೋಜನೆಗೆ ಕೆಲವು ಸಲಹೆಗಳನ್ನು ಕೊಟ್ಟಿದ್ದನ್ನು ವಿವರಿಸಲಾಗಿದೆ. ಆದಿವಾಸಿಗಳ ಆಧುನೀಕರಣಕ್ಕೆ ಸರಕಾರ ನಡೆಸಿರುವ ಹಲವು ಯೋಜನೆಗಳನ್ನು ತಿಳಿಯಪಡಿಸಿ, ಅವುಗಳ ಪ್ರಯೋಜನ-ಆದಿವಾಸಿಗಳಿಗೆ ಬರದೆ, ಅವರು ಅಧಿಕಾರಿಗಳ ದರ್ಪ, ದೌರ್ಜನ್ಯ, ಶೋಷಣೆಗೆ ಹೆದರಿ ದೂರವೇ ಉಳಿದುದನ್ನು ಮಾರ್ಮಿಕವಾಗಿ ಹೇಳಿರುವರು.

'ಬಸ್ತರ ಪ್ರವಾಸ', ಪ್ರವಾಸ ಸಾಹಿತ್ಯವಾಗಿ ಆದಿವಾಸಿ ಜನಾಂಗವೊಂದರ ಸಾಮಾಜಿಕ ಜೀವನ ವಿಧಾನವನ್ನು, ಸಂಸ್ಕೃತಿಯನ್ನು ಬಹಳ ಸೊಗಸಾಗಿ ಪರಿಚಯಿಸುತ್ತದೆ. ನಮ್ಮ ಪ್ರಜ್ಞೆಯ ಕ್ಷಿತಿಜವನ್ನು ವಿಸ್ತರಿಸುತ್ತದೆ.

(ರೇಡಿಯೋ ಭಾಷಣದ ಅವತರಣಿಕೆಗಳು - ಕೃಪೆ: ಆಕಾಶವಾಣಿ)

❑





# ಬಸ್ತರ ಪ್ರವಾಸ - ಒಂದು ವೈಯಕ್ತಿಕ ಪತ್ರರೂಪ ವಿಮರ್ಶೆ

ಉದಯಾದ್ರಿ

ದಿನಾಂಕ ೨-೬-೧೯೯೨ ರಿಂದ ದಿನಾಂಕ ೩೦-೬-೧೯೯೨ರವರೆಗೆ ಅಂದರೆ ಇಪ್ಪತ್ತೆಂಟು ದಿವಸ ನಾನು ನಿಮ್ಮೊಡನೆ ಮಧ್ಯಪ್ರದೇಶದ 'ಬಸ್ತರ ದುಸ್ತರ' ಬದುಕಿನ ಸತ್ಯದರ್ಶನವನ್ನು ವಿವಿಧ ಕೋನಗಳಿಂದ ಕಂಡು ಅನುಭವಿಸಿದೆ. ಪ್ರವಾಸದ ಕೊನೆಯ ಮೈಲಿಗಲ್ಲನ್ನು ದಾಟಿದ ನಂತರ ಕಣ್ಮುಚ್ಚಿ ಕನವರಿಸಿದ ಮನಸ್ಸಿನ ಮಾತುಗಳನ್ನು ಶಾಯಿಯ ಸಹಾಯದಿಂದ ಬಿಳಿಯ ಹಾಳೆಯ ಮೇಲೆ ಹರಡಬೇಕೆಂದು ಏಕೋ ಮನಸ್ಸು ಬಹುವಾಗಿ ಬಯಸಿತು. ಅದಕ್ಕಾಗಿ ಹಾಳೆಗಳನ್ನು ಎಳೆದುಕೊಂಡು ಬಸ್ತರನಾಡಿಗೆ ಮರುಪ್ರಯಾಣ ಆರಂಭಿಸಿದೆ. ನೀವಂದು ಮಧ್ಯಪ್ರದೇಶದ ಬಸ್ಸೊಂದನ್ನು ಹತ್ತಿ ಪ್ರವಾಸಕ್ಕೆ ನಾಂದಿ ಹಾಡಿದ ಪುಟದಿಂದ ಉತ್ತಮ ಸಂಪ್ರದಾಯಗಳನ್ನು ಜೋರೆಬ್ಬಿಸುವ ಭಾರತೀಯರ ವೈಶಿಷ್ಟ್ಯ ಎನ್ನುವ ವಾಸ್ತವ ವ್ಯಂಗ್ಯದ ಸಾಲುಗಳವರೆಗೆ ಹರಿಯುವ ನೂರ ಇಪ್ಪತ್ತೆಂಟು ಪುಟಗಳು ಓದುಗನ ಎದೆಯಲ್ಲಿ ಏರುಬ್ಬರ ಎಬ್ಬಿಸುವ ಅನುಭವದ ಅಲೆಗಳು. ಈ ಅಲೆಗಳ ಮೇಲೆ 'ಬಸ್ತರ ಪ್ರವಾಸ' ಪುಸ್ತಕದ ರಟ್ಟುಗಳನ್ನೇ ನೌಕೆ ಮಾಡಿಕೊಂಡು, ಪರಿಣಾಮಕಾರಿ ಬರಹವನ್ನೆ ಗಾಳಿಯಾಗಿಸಿ, ನಿಮ್ಮ ಸೂಕ್ಷ್ಮಪ್ರಜ್ಞ ಮನಸ್ಸನ್ನೇ ದಿಕ್ಸೂಚಿಯಾಗಿಸಿ ನಡೆಸಿದ ಪುನರ್ ಮಡಯಾತ್ರೆಯ ಆನಂದ ಅಮೋಘ. ಅದ್ಭುತಗಳನ್ನು ಈ ಮುಂದಿನ ಸಾಲುಗಳು ಹೇಳಬಹುದೇನೋ....?.. ಏಕೆಂದರೆ ಒಂದು ಉತ್ತಮ ಪುಸ್ತಕವನ್ನು ಓದಿದಾಗ, ಅಂದರೆ ತಕ್ಷಣ ಮನಸ್ಸಿನಲ್ಲಿ ಉಂಟಾಗುವ ಪ್ರಕ್ರಿಯೆಯನ್ನು ಯಥಾವತ್ತಾಗಿ ಹಿಡಿದಿಡುವುದು, ಅದೂ ಅಕ್ಷರಗಳಲ್ಲಿ ಕಷ್ಟ ಸಾಧ್ಯವಾದ ಮಾತು. ಅದಕ್ಕಾಗಿ ನಾವು "ಸುಲಭವಾಗಿ ಬರೆಯಲು ಪದಗಳೇ ಸಾಲವು" ಎಂದು ಮಿಕ್ಕದ್ದನ್ನು ಕಲ್ಪನೆಗೆ ಬಿಡುತ್ತೇವೆ. ಆದರೆ ನನಗೆ ಹಾಗೆ ಮಾಡುವುದು ಇಚ್ಛೆಯಿಲ್ಲ. ಈ ತರಹದ ಮಾತುಗಳನ್ನು ಆಡುವವರು ತಮ್ಮ ನೆನಪಿನ ಸಾಮರ್ಥ್ಯಕ್ಕೆ ಅಥವಾ ಕಲ್ಪನಾ ಸೀಮೆಗೆ ಈ ರೀತಿ ಗೆರೆಯೆಳೆದುಕೊಂಡು ಗಕ್ಕನೆ ಜಲಬಾಧೆಗಾಗಿ ಆಗಾಗ್ಗ ನಿಲ್ಲುವ ಮಧ್ಯಪ್ರದೇಶದ ಬಸ್ಸಿನಂತಾಗಿ ಬಿಡುತ್ತಾರೆ ಅನಿಸುತ್ತದೆ. ಉತ್ತಮವಾದುದನ್ನು ಓದಬೇಕು. ಮತ್ತೆ ಉತ್ತಮವಾದದ್ದು ಸಿಗುವವರೆಗೆ ಮತ್ತೊಮ್ಮೆ ಓದಿದ್ದನ್ನೇ ಓದಬೇಕು, ಜಗಿಯಬೇಕು, ಜಗಿದು ಮೆಲುಕು ಹಾಕಬೇಕು, ಗಂಟಲಿಗೆ ಹಾರಿಸಬೇಕು. ನಾಲಗೆಯಿಂದ ಮತ್ತೆ ಸೆಳೆದುಕೊಂಡು ದವಡೆಗೆ ಸಿಕ್ಕಿಸಿ ಜಗಿಯಬೇಕು. ನುಣ್ಣಗಾಗುವವರೆವಿಗೆ, ಸಣ್ಣಗಾದ ನಂತರ ಜೀರ್ಣಿಸಿಕೊಳ್ಳಬೇಕು. ಓದಿನ ಈ ಪಚನಕ್ರಿಯೆ ನಡೆದರೆ ಸಾಕು, ಅದು ರಕ್ತದಲ್ಲಿ ಬೆರೆತು ಮಿದುಳಿನಲ್ಲಿ ಮೂರ್ತಗೊಳ್ಳುತ್ತದೆ ಎಂದು ನನ್ನ ಕನ್ನಡ ಮಾಸ್ತರು ರಾಘವಾಚಾರರು ಹೇಳುತ್ತಿದ್ದ ಮಾತುಗಳನ್ನು ನಾನು ಪ್ರಯೋಗಿಸಿ ಫಲ ಪಡೆದುಕೊಂಡಿರುವೆ. ಹಾಗಾಗಿ 'ಬಸ್ತರ ಪ್ರವಾಸ'ವನ್ನು ಬಣ್ಣಿಸಲು ಪದಗಳೇ ಸಾಲದು ಎನ್ನುವುದಕ್ಕಿಂತ ಸಾಧ್ಯವಿರುವ ಪದಗಳಿಂದ ನಮ್ಮ ಪ್ರಾಮಾಣಿಕ ಗ್ರಹಿಕೆಯನ್ನು ಮುಂದಿಡುವುದು ಅತ್ಯಂತ ಸಮರ್ಥ ಪ್ರಯತ್ನ ಎಂದು ನಿರ್ಧರಿಸಿ ಮತ್ತೊಮ್ಮೆ ದೀರ್ಘಪತ್ರ ಬರೆಯುತ್ತಿರುವೆ...... ಕ್ಷಮೆಯಿರಲಿ......

ಬಸ್ತರ ಹಾದಿಯ ಮೊದಲ ಮೈಲುಗಲ್ಲಿನಲ್ಲೇ (ಪುಟಗಳನ್ನು ಮೈಲುಗಲ್ಲು ಎನ್ನುತ್ತಿರುವೆ) ಸಾರಿಗೆ ವ್ಯವಸ್ಥೆಯ ಕೊರತೆಗಳನ್ನು ಲಾಭಕ್ಕಾಗಿ ಬಳಸಿಕೊಳ್ಳುವ ಸಾಧ್ಯತೆಯ ಮಾತನ್ನು ಹೇಳಿದ್ದೀರಿ. ನಾನು ಓದಿದ ಹಲವು ಪ್ರವಾಸ ಕಥನಗಳಲ್ಲಿ ಯಾರೂ ಈ ಮಾತನ್ನು ಆಡಿಲ್ಲ ಮತ್ತು ಹಾಗೆ ಪ್ರಯತ್ನಿಸಿಲ್ಲ ಕೂಡ. ಈ ಸಾಲುಗಳ ಮೇಲೆ ಕಣ್ಣು ಹಾಯುತ್ತಿರುವಾಗಲೇ ನನಗೆ ನಿಮ್ಮ ಅಮೇರಿಕೆಯ ಪ್ರವಾಸಾನುಭವದ ಒಂದು ಘಟನೆ ನೆನಪಿಗೆ ಬಂತು. ಅದು ಜಹಜಿನಲ್ಲಿ ಸಂಡಾಸಿಗಾಗಿ ನಡೆಸಿದ ಹುಡುಕಾಟ. ಅದನ್ನು ನೆನೆದರೇ ತುಟಿಯರಳಿ ನಗು ಉಮ್ಮಳಿಸುತ್ತದೆ. 'ಜಂಟಲ್‌ಮನ್' ಎಂಬ ಫಲಕಹೊತ್ತ ಶೌಚಾಲಯದ ಬಗ್ಗೆ, ಒಬ್ಬ ಪ್ರಾಮಾಣಿಕ ಪ್ರವಾಸಿಯಾಗಿ ನೀವು ನಡೆದದ್ದನ್ನು ಬರೆದು 'ಉತ್ಕೃಷ್ಟ ಜಂಟಲ್‌ಮನ್‌ಶಿಪ್' ಪ್ರದರ್ಶಿಸಿದ್ದೀರಿ. ಹೀಗೆ ನನಗೊಂದು ಅನುಭವವಾದಾಗ ನಿಮ್ಮನ್ನು ನೆನೆದೆ. ಸ್ನೇಹಿತರೊಬ್ಬರ ಬಂಗಲೆಯಲ್ಲಿ PRIVATE ಎಂಬ ತಲೆಬರಹದ ಕೊಠಡಿ ಮಲಗುವ ಕೋಣೆಯಾಗಿತ್ತು. ಚಿತ್ರಮಂದಿರ ಒಂದರಲ್ಲಿ ಈ PRIVATE ತಲೆಬರಹ ಮ್ಯಾನೇಜರನ ರೂಮಾಗಿತ್ತು. ಒಂದು ಹವಾನಿಯಂತ್ರಿತ ಕಾರ್ಖಾನೆಯಲ್ಲಿ ನಾನು ಜಲಬಾಧೆ ನಿವಾರಣೆಗೆ ತಡಕಾಡುತ್ತಿದ್ದಾಗ ಅಲ್ಲಿಯವರೊಬ್ಬರು PRIVATE ಎಂಬ ಫಲಕದ ಕಡೆ ಕೈತೋರಿದಾಗ ಅಚ್ಚರಿಯಾಯಿತು. ಆತಂಕದಿಂದಲೇ ಬಾಗಿಲು ತೆರೆದರೆ ಝಗಮಗಿಸುವ ಶೌಚಾಲಯ ಅದಾಗಿತ್ತು. ಈ ಎಲ್ಲಾ ಭಿನ್ನ ಅನುಭವವನ್ನು ನೆನೆದರೆ, ಇಂದಿಗೂ ನಾನು ಕಕ್ಕಾಬಿಕ್ಕಿಯಾದ ಪರಿಸ್ಥಿತಿ ಪಕಪಕನೆ ನಗು ತರಿಸುತ್ತದೆ. ಇದಿಷ್ಟನ್ನು ನಾನು ಗೆಳೆಯರಿಗೆ ಹೇಳಿದರೆ 'ಏನಿವನು ಹಳ್ಳಿಯ ಗಮಾರನಂತೆ ಮಾತನಾಡುತ್ತಾನಲ್ಲ' ಎಂದುಕೊಳ್ಳುವ ಭಯದಿಂದ ನಾನು ಇಂದಿಗೂ ಯಾರಿಗೂ ಹೇಳಿಲ್ಲ. ಆದರೆ ನೀವು ಪ್ರವಾಸಕಥನದ ಮೊದಲ ಪುಟಗಳಲ್ಲೇ ದಾಖಲಿಸಿದ್ದೀರಿ. ಈ ಹಿಂದೆ ಸಮುದ್ರ ಲಂಘಿಸಿದವರು ಮುಚ್ಚು ಮರೆಯಲ್ಲಿ ಬರೆದದ್ದನ್ನೆ ಓದಿದ್ದ ನನಗೆ ನೀವು ಇಷ್ಟವಾಗುವುದು ಈ

ವಿಶಿಷ್ಟ ಬಗೆಯಿಂದಲೇ. 'ಕಿಟಕಿ ಹೋರಾಟ' ಓದುವುದಕ್ಕೆ ಮಜವೆನಿಸಿದರೂ ಒಂದು ಮಹತ್ವದ ಗಂಭೀರ ಸಂದೇಶವನ್ನು ಬೀರುತ್ತದೆ. ಅದೇ ಕಿಟಕಿಯನ್ನು ಒಬ್ಬಾತ 'ಪಿಚಕ್' ಎಂದು ಹೊರಗೆ ಉಗುಳುವ ಕ್ರಿಯೆಗೆ ಬಳಸಿಕೊಂಡರೆ, ಮತ್ತೊಬ್ಬಾತ ತಿಂದಿದ್ದನ್ನು ಕಾರಿಕೊಳ್ಳಲು ಉಪಯೋಗಿಸುತ್ತಾನೆ. ಆದರೆ ಸೂಕ್ಷ್ಮ ಮನಸ್ಸಿನ ಪಯಣಿಗನ ಬಸ್ಸಿನ ಕಿಟಕಿಯನ್ನು ಅನುಭವವೆಂಬ ಕನ್ನಿಕೆಯ ನರ್ತನ ದರ್ಶನಕ್ಕಾಗಿ ಬಳಸಿಕೊಳ್ಳುತ್ತಾನೆ. ಮೈಲಿಗಲ್ಲಿನ ಮೇಲೆ ಕೆಂಪು ತ್ರಿಕೋಣ ನಿರೋಧಶಿಲೆಯಾಗಿ ಕಂಡ ಹಾಸ್ಯ ಮಿಂಚ ವಿಚಾರ ಎಷ್ಟು ಜನರಿಗೆ ಬಂದೀತು? ಹಾಗಾಗಿ ನೀವು ಕಿಟಕಿಯ ಪಕ್ಕ ಸೀಟು ದೊರಕಿಸಿಕೊಂಡಿದ್ದಕ್ಕೆ ಮತ್ತು ಆ ಸೀಟಿನಿಂದ ನಿಮ್ಮನ್ನು ಯಾವ ತಪಸ್ವಿಯೂ ಎಬ್ಬಿಸದಿದ್ದಕ್ಕೆ, ಯಾರ ಕಣ್ಣು ನಿಮ್ಮ ಸೀಟಿನ ಮೇಲೆ ಬೀಳದಿದ್ದಕ್ಕೆ ಮಹಾರಾಷ್ಟ್ರದ  ಆವತ್ತಿನ ನಿಮ್ಮ ಸಹ ಪ್ರಯಾಣಿಕರಿಗೆ ಸಹಸ್ರ ವಂದನೆಗಳು. ಅವರೇನಾದರೂ ಎಬ್ಬಿಸಿಬಿಟ್ಟಿದ್ದರೆ 'ನಿರೋಧಶಿಲೆ'ಯಂತಹ ಹಾಸ್ಯದ ಜಲ್ಲಿಗಳು ವಾಚಕರಿಗೆ ಸಿಗುತ್ತಿರಲಿಲ್ಲ. ಬರಿಯ ಮೈಲಿಗಲ್ಲಿನ ಮೇಲೆ ಮಾತ್ರವಲ್ಲ ಚೀನಾದ ಮಹಾಗೋಡೆಯನ್ನು ತ್ರಿಕೋನಾಕಾರದಲ್ಲಿ ಕೆಂಪಾಗಿಸಿದರೂ ಏನು ಪ್ರಯೋಜನ. ಜನರ ಮನಸ್ಸುಗಳು ತ್ರಿಕೋನಗಳಾಗಬೇಕು ಎಂಬ ನಿಮ್ಮ ಅನಿಸಿಕೆಯನ್ನು ಪರಿಣಾಮಕಾರಿಯಾಗಿ ನೇರವಾಗಿ ಹೇಳದೆ ಪ್ರತಿಪಾದಿಸಿದ್ದೀರಿ.

ಬಸ್ಸಿನ ಬೋನೆಟಿನ ಮೇಲೆ ಕಾಲಿಡುವುದನ್ನು ಆಕ್ಷೇಪಿಸಿದ ಡ್ರೈವರ್ ಅದೇ ಅನ್ನದಾತ ಎಂಬ ನಂಬಿಕೆಯಿರುವವ. ಈ ಘಟನೆಯನ್ನು ಸೂಕ್ಷ್ಮವಾಗಿ ಆಲೋಚಿಸಿದರೆ ಸಾಕು, ಓದುಗರಿಗೆ "ನೀವು ನನ್ನೊಡನೆ ಬರುತ್ತಿರುವ ಬಸ್ತರನಾಡಿನ ಪ್ರಜೆಗಳು" ಇಂತಹ ನಂಬಿಕೆಗಳ ನಡುವೆ ಬದುಕುತ್ತಿರುವವರು, ಅವರನ್ನು ಪರಿಚಯಿಸಲು ನಿಮ್ಮ ಈ ಪುಸ್ತಕ ಪ್ರಯಾಣ, ಎನ್ನುವುದು ಮನದಟ್ಟಾಗುತ್ತದೆ. "ಘೋಟಿಡೊಂಗರದಲ್ಲಿ ನಾಗರಿಕರು ಬಯಸುವ ಯಾವ ಸವಲತ್ತುಗಳು ಇಲ್ಲ" ಎಂಬ ಎಚ್ಚರಿಕೆಯ ಮಾತಿಗೆ ನಿಮ್ಮ ಉತ್ತರ 'ಅದಕ್ಕಾಗಿ ಅಲ್ಲಿಗೆ ಹೊರಟಿದ್ದೇನೆ' ಎನ್ನುವುದು ಝಳಕಾಗಿ ರೋಮಗಳ ಬುಡಕ್ಕೆ ತಾಗಿ ವಾಚಕನನ್ನು ಚಿಂತೆಗೆ ಹಚ್ಚಿಸುತ್ತದೆ. ಈ ನಾಗರೀಕ ಸೌಲಭ್ಯಗಳು ನಮ್ಮನ್ನು ಎಷ್ಟು ಗುಲಾಮರನ್ನಾಗಿಸಿದೆ. ಸೌಲಭ್ಯಗಳ ಯಾಜಮಾನರಾಗಿ ನಮ್ಮನ್ನು ತೊಳಲಾಡಿಸುತ್ತಿರುವುದು ಸುಳ್ಳಲ್ಲ, ಹೀಗೆ ಸೌಲಭ್ಯ ವಂಚಿತ ನಾಡಿನ ನಾಗರಿಕರು ಎಲ್ಲದರಲ್ಲೂ ನಮಗಿಂತ ಮೇಲಲ್ಲವೆ ಎಂಬುದನ್ನು ಸೂಚ್ಯವಾಗಿಸುತ್ತವೆ ಮೊದಲ ಅಧ್ಯಾಯದ ಕೊನೆಯ ಸಾಲುಗಳು.

ವಿಶ್ರಾಂತಿಧಾಮಗಳು ಹೆಚ್ಚಾಗಿ ಆರಾಮಧಾಮಗಳಲ್ಲ ಎನ್ನುವುದನ್ನು ಪ್ರತಿ ಪ್ರವಾಸಿಗನೂ, ನಿಮ್ಮ ಅವಲಕ್ಕಿಯ ಉಪಹಾರದಿಂದ ಅರಿಯಬೇಕು. ಪ್ರವಾಸ ಮೋಜಿಗಾಗಿಯಷ್ಟೇ ಅಲ್ಲ, ಅದಕ್ಕೆ ಉದ್ದೇಶವೂ ಬೆಸೆದಿದ್ದರೆ ಇಂತಹ ಪ್ರಯಾಸಗಳು ಪ್ರವಾಸದಲ್ಲಿ ಗೌಣ ಎಂಬುದನ್ನು ಮನಗಾಣಬೇಕು. ದಂತೇಶ್ವರಿ ದೇವಾಲಯದ ಬಳಿ ನೀವು ಕಂಡ ವಿಗ್ರಹಗಳು ನಂತರ ಮತ್ತಷ್ಟು ವಿಗ್ರಹಗಳಿಗಾಗಿ ಕೆರೆಯದಂಡೆಗೆ ತೆರಳಿದ್ದು ಪ್ರವಾಸಿಗನ ಅನ್ವೇಷಕ ಬುದ್ಧಿಯಿಂದಲ್ಲವೇ? ಈ ಅನ್ವೇಷಣೆ, ಬದುಕಿನ ದಾರಿಯಲ್ಲಿ ಟಿಸಿಲೊಡೆದು ನಿಂತರೆ, ಆಳವಾದ ಸಂಶೋಧನೆಗಳು ಸಾಧ್ಯ ಎಂಬ ಫ್ರಾನ್ಸಿನ ವಿಜ್ಞಾನಿಯ ಮಾತು ಎಷ್ಟು ಸೂರ್ಯಸತ್ಯ. ವಾಸ್ಕೋಡಗಾಮನಂತಹ ವ್ಯಕ್ತಿಯಿಂದ ಹಿಡಿದು ಪ್ರಯೋಗ ಶಾಲೆಯಲ್ಲಿ ಸೂಕ್ಷ್ಮದರ್ಶಕದಲ್ಲಿ ಕಣ್ಣಿಟ್ಟ ವ್ಯಕ್ತಿಯವರೆವಿಗೆ ಉದ್ದೇಶ ಒಂದೇ 'ಅನ್ವೇಷಣೆ'. ಈ ಅರ್ಥ ಪುಸ್ತಕದ ಸಾಲು ಸಾಲುಗಳಲ್ಲಿ ನಿಚ್ಚಳವಾಗಿ ಪ್ರಕಟಗೊಳ್ಳುತ್ತದೆ. ತಿಳಿನೀರಿನ ಪುಷ್ಕರಣಿಯಲ್ಲಿ ಶ್ವೇತಕಮಲಗಳು ನಾಚುತ್ತ ಬಳುಕುತ್ತ ನಿಂತಿದ್ದನ್ನು ಸೆರೆಹಿಡಿಯಲು ನೀವು ಕ್ಯಾಮರಾ ಕೈಗೆ ತೆಗೆದುಕೊಂಡಿದ್ದಿರಬಹುದು. ಆದರೆ ಕಮಲಗಳ ನಡುವೆ ಮೀಯುತ್ತಿದ್ದ ಯುವತಿಯರನ್ನು ಮತ್ತು ಅವರ ನಾಚಿಕೆ ಕಂಡು, ಅವರ ಅಸಹಾಯಕತೆಯ ಲಾಭ ಪಡೆಯಬಾರದು ಎಂದು ನಿರ್ಧರಿಸಿದ್ದು ನಿಮ್ಮ ಮನಸ್ಸಿನ ದೊಡ್ಡಗುಣ. ಈ ಸಾಲುಗಳ ಮೇಲೆ ಕಣ್ಣು ಒಂದು ಕ್ಷಣ ನಿಂತು ಮುಂದುವರಿಯುತ್ತದೆ. ಆ ನಿಂತ ಕ್ಷಣದಲ್ಲಿ ಅನ್ನಿಸಿದ್ದು 'ಕ್ಯಾಮರಾದಲ್ಲಿ ಸೆರೆ ಹಿಡಿಯದಿದ್ದರೆ ಬೇಡವಾಯಿತು. ಕಣ್ಣಾರೆ ಕಂಡ ಆ ನಿಸರ್ಗ ಸುಂದರಿಯರ ವರ್ಣನೆಯನ್ನು ಒಂದೆರಡು ಸಾಲುಗಳಲ್ಲಿ ಇಳಿಸಬಹುದಿತ್ತಲ್ಲ.....' ಹೀಗೆ ಪ್ರತಿ ವಾಚಕನು ಬಯಸಿಯಾನು; ನನಗೆ ಹೀಗನ್ನಿಸಿದ್ದರಲ್ಲಿ ತಪ್ಪಿಲ್ಲ. ನಗರದ ಸುಂದರಿಯರ ಪೌಡರ್ ಸುಗಂಧ ತೈಲ ಲೇಪನ ನೆನದು ಬೇಸರಿಸಿದ ನನ್ನ ಮನಸ್ಸಿನದು ನಿಮಗೆ ತಿಳಿಸುತ್ತಿರುವ ತರುಣ ಮನಸ್ಸಿನದು.

'ಅರಸನಿಲ್ಲದ ಅರಮನೆ, ಮಾರಿಯಾ, ಜಗದಲಪುರದ ಸಂತೆ' ಅಧ್ಯಾಯಗಳೂ ಒಳಗೊಂಡಂತೆ ದೀರ್ಘ ಬಸ್ತರನಾಡಿನ ಸವಿ ಸವಿಯುತ್ತಾ ಬಂದಂತೆ ಪುಟ ಎಂಬತ್ತರ ಕೊನೆಯ ಸಾಲಿನ ಮೇಲೆ ದೃಷ್ಟಿ ನೆಟ್ಟಗೆ ನಿಂತುಬಿಟ್ಟು, ಮತ್ತೆ, ಮಗದೊಮ್ಮೆ ಓದಿದೆ. "ಹಣಕಾಸು ಇಲ್ಲದ ಆದಿವಾಸಿಗಳಿಗೆ ನೃತ್ಯಾಲಂಕಾರಗಳೇ ಸರ್ವಸ್ವ" ಈ ಸಾಲು ಬಾನುಲಿಯ ಕಾರ್ಯಕ್ರಮ ವಿಭಾಗದವರಿಗೂ ಎಷ್ಟು ಹತ್ತಿರ. ಬೇರೆ ಕಂಪನಿಗಳಷ್ಟು ಸಂಬಳ ದೊರೆಯದಿದ್ದರೂ ಪ್ರತಿದಿನ 'ಕಾರ್ಯಕ್ರಮ'ವೆಂಬ ಕಟ್ಟಡ ಕಟ್ಟುತ್ತಾ ಬದುಕುವುದು ಸ್ವರ್ಗಸುಖ ನೀಡುತ್ತದೆ. ಇತರೆ ಬೇಗುದಿಗಳನ್ನು ಇಲ್ಲವಾಗಿಸುತ್ತದೆ. ಆಕಾಶವಾಣಿಯಲ್ಲದೆ ಇತರೆ ಮಾಧ್ಯಮಗಳಲ್ಲಿ ಕೆಲಸ ಮಾಡುತ್ತಿರುವವರಿಗೂ ಪ್ರತಿಕ್ಷಣವನ್ನೂ ಕಲ್ಪನೆಯ ಸಾಗರದಲ್ಲಿ ಈಜಿ, ಸವಿಯುವ ಅವಕಾಶವಿದೆ. ಆದರೆ ಇವರು ಎಷ್ಟಾದರೂ ಬಸ್ತರನಾಡಿನವರಲ್ಲವಲ್ಲ. ಹೀಗಾಗಿ ಆಗಾಗ್ಗೆ ಸಾಂಸ್ಕೃತಿಕ ಮಾಧ್ಯಮವೆನಿಸಿಕೊಂಡ ಸಂಸ್ಥೆಯಲ್ಲೂ 'ಭ್ರಷ್ಟಾಚಾರ'ದ ಕೂಗು ಧ್ವನಿಸಿ, ಪ್ರತಿಧ್ವನಿಸುತ್ತಿದೆ.

ತಾವು ಎಂದೋ ಮುಂದಿನದನ್ನು ಕಲ್ಪಿಸಿ ಬರೆದಿದ್ದೀರೇನೋ ಎನ್ನುವ ಘಟನೆಗಳು ಅಚ್ಚರಿಪುಟ್ಟಿಸುತ್ತವೆ. ಅಂತಹ ಒಂದು ಘಟನೆ ಇತ್ತೀಚೆಗೆ ಕಾಡೆಂಬ ಕಡಲಿನಲ್ಲಿರುವ 'ಜಹಜುಗಳ್ಳ' ವೀರಪ್ಪನ್‌ನನ್ನು ಹುಡುಕುವ ನೆಪದಲ್ಲಿ ಸುತ್ತಮುತ್ತಲಿನ ಹಳ್ಳಿಗರನ್ನು ಬಡಿದು ಬಟ್ಟೆಯಾಗಿಸಿದ್ದನ್ನು ನೆನಪಿಸುತ್ತವೆ, (ಪುಟ.೮೮). ಮಾರಿಯ ಪಟೇಲ ಪುತ್ರಶೋಕದಿಂದ ಪರಿತಪಿಸುತ್ತಾ ಹೇಳಿದ ಪ್ರಕರಣ ಓದುತ್ತಾ ಹೋದಂತೆ ಮೈಯಲ್ಲಿನ ರಕ್ತವೆಲ್ಲಾ ಮುಷ್ಠಿಗೆ ನುಗ್ಗಿ ರೊಚ್ಚು ಹೆಚ್ಚಾಗುತ್ತವೆ. ಹುಣಿಸೇ ಮರದಲ್ಲಿ ನೇತಾಡಿದ, ನಿರಪರಾಧಿ ಮುಗ್ಧ ಹೆಣ್ಣು, ನಾಗರಿಕರೆನಿಸಿಕೊಂಡ ನರಭಕ್ಷಕರ ಕ್ರೌರ್ಯದ ಪರಮಾವಧಿಯ ಸಂಕೇತವಾಗಿ ಮೆತ್ತಗೆ ಮೌನವಾಗಿಬಿಟ್ಟಳಲ್ಲಾ, ಕರುಳು ಅಯ್ಯೋ ಎಂದು ಮಿಡಿಯಿಸುತ್ತವೆ. 'ತಾಯಿ'ಯನ್ನು ದೇವರೆನ್ನುತ್ತೇವೆ, ಗುರುವನ್ನು ದೇವರೆನ್ನುತ್ತೇವೆ, ಸತ್ಯವನ್ನು ದೇವರೆನ್ನುತ್ತೇವೆ ಆದರೆ ಶುದ್ಧ ಪ್ರಾಮಾಣಿಕತೆಯನ್ನು ಮಾಡಲೇಬೇಕಾದ ಕರ್ತವ್ಯವೆಂದುಬಿಡುತ್ತೇವೆ. ಸದಾಕಾಲ ಸತತವಾಗಿ ಸುಲಿಗೆಯನ್ನೇ ಅನುಭವಿಸದ ಕಾಡ ಮಕ್ಕಳಿಗೆ ಪ್ರೀತಿ, ಆತ್ಮೀಯತೆ ತೋರಿದ ನೀವು ದೇವರಾಗಿ ಕಂಡ ಸಂದರ್ಭ ಓದುಗರ ಗಂಟಲನ್ನೂ ಉಬ್ಬಿಸುತ್ತವೆ. ಹಣಕ್ಕಾಗಿ ಹೆಂಡ ತಯಾರಿಸದ ಜನರ ಮೇಲೆ ಗುತ್ತಿಗೆದಾರರು ಪೋಲೀಸರನ್ನು 'ಛೂ' ಬಿಟ್ಟು ಪಿಂಸಿಸಿದ್ದು, ಜೇನುಹುಟ್ಟುಗಳ ಮೇಲೂ ಅವರ ಅಧಿಕಾರ ಕಿತ್ತುಕೊಂಡಿದ್ದು ಬಸ್ತರದ ದುಸ್ತರ ಬದುಕಿನ ದುರಂತದ ತುಣುಕುಗಳಂತೆ ಕಂಡರೂ ನೋವಿನ ಎಳೆ ಕರುಳಬಳ್ಳಿಯಷ್ಟೇ ಉದ್ದವಾದದ್ದು. ಮಿಶನರಿಯ ಪಾದ್ರಿ ಮತಾಂತರಗೊಳಿಸುವ ಪ್ರಯತ್ನದಲ್ಲಿ ಯುವ ಆದಿವಾಸಿಯಿಂದ ಮುಖ ಕಿವಿಚಿಸಿಕೊಂಡದ್ದೂ, ಬಾಬಾ ಪ್ರತ್ಯಕ್ಷವಾಗಿ ಅವರ ಮನಗೆದ್ದದ್ದು ಇವೆಲ್ಲವೂ ಯಾವುದೋ ಕಾದಂಬರಿ ಓದುತ್ತಿರುವ ಅನುಭವ ನೀಡುತ್ತವೆ. ನಾಗರಿಕತನದ ಸೋಂಕು ತಗಲುತ್ತಲೆ ಅವರ ಕಾರ್ಪಣ್ಯ ಇಮ್ಮಡಿಸುತ್ತಾ ಹೋಗುವುದನ್ನು, ಪುಟಗಳಲ್ಲಿಯ ಅಕ್ಷರಗಳು ಶಬ್ದಗಳಾಗಿ, ಮನಸ್ಸೆಂಬ ತೆರೆಯ ಮೇಲೆ ಅಚ್ಚು ಹಾಕುತ್ತವೆ.

'ಅರಣ್ಯ ವಿದ್ಯಾಲಯ' – ಹೌದು, ಇಲ್ಲಿಯ ವಿದ್ಯಾರ್ಥಿಗಳಾಗಿರುವ ಆದಿವಾಸಿಗಳಿಗೆ ವ್ಯವಸ್ಥೆಯೆಂಬ ಇಕ್ಕಳವನ್ನು ತೋರಿಸಿ ಹಾಳುಗೆಡವಬಾರದು. ಈ 'ಅರಣ್ಯ ವಿದ್ಯಾಲಯ'ದಲ್ಲಿ ಹೊರಗಿನವರು ಹೊರಗಿನವರಾಗಿಯೇ ಇರಬೇಕು. ಸ್ವಾರ್ಥ ಕಾಮುಕತನ, ಛಟ್ಟಂಗಿತನ, ಭ್ರಷ್ಟ–ದುಷ್ಟ ಜಗತ್ತಿನ ಜನರಿಗೆ ಅಲ್ಲಿ ಕೆಲಸವಿಲ್ಲ ಎನ್ನುವದನ್ನು ನೀವು ವಿವರಿಸುತ್ತಾ, ಗಟ್ಟಿಗೊಳಿಸುತ್ತಾ ಹೋಗುವಿರಿ. ನಗರದ ವೈಯ್ಯಾರಿ ಕೊಟ್ಟ 'ಹತ್ತು ಪೈಸೆ'ಯನ್ನು ನರ್ತಕರು ಸಿಬ್ಬಂದಿಯ ಚಪರಾಸಿಗೇ ತಿರುಗಿ ಕೊಟ್ಟದ್ದಕ್ಕಿಂತ ಆ ಮಹಿಳೆ ತಾನು ಮಾಡಿದೆ ಎಂದುಕೊಂಡ ಅವಮಾನ 'ದೊಡ್ಡದಲ್ಲ ಅಲ್ಲವೇ?' ಎಂದು ಮನಸ್ಸು ಪಿಸುಗುಡುತ್ತದೆ.

ಆದಿವಾಸಿಗಳ ಮುಗ್ಧತೆಯನ್ನು ದುರುಪಯೋಗಪಡಿಸಿಕೊಂಡ ಮಹಾನುಭಾವರ ಪಟ್ಟಿಯಲ್ಲಿ ಆಕಾಶವಾಣಿಯವರು ಸೇರಿದ್ದು ಓದಿ ದಿಜ್ಞೂಢನಾದೆ. ಸಾಂಸ್ಕೃತಿಕ ಮಾಧ್ಯಮದವರೆಂದು ಎದೆತಟ್ಟಿ ಹೇಳುವ ಜನರಲ್ಲಿಯೂ ಎಂತಹ ನೀಚತನ? ಇದನ್ನು ಓದಿ ಭಾರವಾದ ಮನಸ್ಸಿಗೆ ವೆರಿಯರ್ ಎಲ್ವಿನ್‌ರ ನಿಸ್ವಾರ್ಥ ಸೇವೆಯ ಕುರಿತಾದ ಅಧ್ಯಾಯ ತುಸು ನೆಮ್ಮದಿಯನ್ನು ತಂದಿತು. ಆದಿವಾಸಿಗಳ ಕಲ್ಯಾಣಕ್ಕೆ ಕೋಟಿಗಟ್ಟಲೆ ಹಣಸುರಿದರೆ ಆಗುವುದಿಲ್ಲ, ಅವರ ಕಲ್ಯಾಣಕ್ಕಾಗಿ ತುಡಿಯುವ, ದುಡಿಯುವ 'ಎಲ್ವಿನ್' ತರಹದ ಮನವುಳ್ಳ ವ್ಯಕ್ತಿಗಳು ಮುಂದಾಗಬೇಕು. ಘರಗುಟ್ಟುತ್ತಾ ಜೀಪಿನಲ್ಲಿ ಬಂದು ಮಾಂಸ, ಮದ್ಯ, ಮದನಿಕೆಯರನ್ನು ಸವಿದು, ಜೇಬಿಗೆ ದುಡ್ಡಿಳಿಸುತ್ತಾ ದೌಡಾಯಿಸುವ ಅಧಿಕಾರಿಗಳಿಂದ ಏನೂ ಸಾಧ್ಯವಾಗದು. ಅಪೂರ್ವ ಅರಣ್ಯಗಳನ್ನು ಹಾಳುಗೆಡುಹುತ್ತಾ ಆದಿವಾಸಿಗಳ ಬದುಕಿನಲ್ಲಿ ಬಿರುಗಾಳಿಯೆಬ್ಬಿಸಿರುವ ನಗರದ ಆದಿವಾಸಿಯು ಮಹಾತ್ಮ ಗಾಂಧಿಯವರ ಗ್ರಾಮರಾಜ್ಯದ ಕನಸನ್ನು ನನಸಾಗಿಸಿಯಾನೆ? ಈ ಪ್ರಶ್ನೆ ತಲತಲಾಂತರದವರೆಗೂ ಪ್ರಶ್ನೆಯಾಗಿಯೇ ಉಳಿಯುತ್ತದೆ. ಹಾಗೆ ಒಂದು ದಿನ ಈ ಪ್ರಶ್ನೆಯೂ ಕರಗಿ ಹೋಗಿ ಬಿಡುತ್ತದೆ. ಕಾಡುಗಳು ಕರಗಿದಂತೆ, ಬಸ್ತರು ಕಮರಿದಂತೆ. ಮನುಷ್ಯನ ಮೂಲ ಹೀಗೆ ಎಲ್ಲಾ ಪ್ರಾಣಿಯಂತೆ ಬದುಕಬೇಕು ಎನ್ನುವ ನಿಸರ್ಗದ ನಿರ್ಧಾರದ ವಿರುದ್ಧ ನಾಗರಿಕತೆಯ, ಸುಸಂಸ್ಕೃತಿಯ ಹೆಸರಿನಲ್ಲಿ ಬೆಳೆಯುತ್ತಾ ಬಹು ಎತ್ತರಕ್ಕೆ ಸಾಗಿ ಅಲ್ಲಿಂದ ಪ್ರಪಾತಕ್ಕೆ ಬೀಳುವವನಿದ್ದಾನೆ. ಈ ನರಕದ ನಾಯಿಗಳು ಅವರನ್ನು ಉಳಿಸಿಯಾರೆ, ನಿಮ್ಮ ಮಾತಿನಂತೆ ಉತ್ತಮವಾದ ಸಂಪ್ರದಾಯಗಳನ್ನು ಹಾಳುಗೆಡಹುವದೇ ಭಾರತೀಯರ ವೈಶಿಷ್ಟ್ಯವೆಂದು ತೋರುತ್ತದೆ. ನಿಸರ್ಗದ ಕೂಸುಗಳಾದ ಆದಿವಾಸಿಗಳನ್ನು ಉಳಿಸಿಕೊಳ್ಳಲು ನಿಸರ್ಗವೇ ಉಪಾಯ ಹೂಡಬೇಕು.

'ಬಸ್ತರ ಪ್ರವಾಸ ಕಥನ' ಬರಿಯ ಒಂದು ಪ್ರವಾಸ ಕಥನವಲ್ಲ, ವಿಜ್ಞಾನ ಪುಸ್ತಕವೂ ಹೌದು, ಸಂಸ್ಕೃತಿಯನ್ನು ಪರಿಚಯಿಸುವ ಸಂಶೋಧನಾ ಗ್ರಂಥವೂ ಹೌದು. ಘಟನೆಗಳನ್ನೂ ಹೇಳುತ್ತಾ ಕಾದಂಬರಿಯಾಗಿ, ಕಾವ್ಯವಾಗಿ ನರ್ತಿಸುತ್ತಾ ನೆನಪಿನಾಳದ ನಿಧಿಯಾಗಿರುತ್ತದೆ. ಇದಕ್ಕಾಗಿ ನಿಮಗೆ ಸಾಸಿರ ವಂದನೆ. ಇಂತಹ ಪ್ರವಾಸ ಸಾಹಿತ್ಯಕ್ಕೆ ಎಲ್ಲಾ ಪ್ರಶಸ್ತಿ, ಪುರಸ್ಕಾರಗಳನ್ನು ದಕ್ಕಿಸಿಕೊಳ್ಳುವ ಶ್ರೀಮಂತಿಕೆಯಿದೆ. ಪ್ರಪಂಚದ ಎಲ್ಲೆಡೆಯಲ್ಲೂ ಆದಿವಾಸಿಗಳ ಬದುಕು ಹಸನಾಗಲೆಂದು ಹರಸುವ ನಿಮ್ಮ ದನಿಯೊಡನೆ ನನ್ನ ದನಿಯನ್ನೂ ಸೇರಿಸುತ್ತಾ ಲೇಖನಿ ಕೆಳಗಿಡುತ್ತಿದ್ದೇನೆ.

# 'ನಾ ರಾಜಸ್ಥಾನದಲ್ಲಿ' - ಒಂದು ನೋಟ

**ಜಿ. ಎನ್. ನರಸಿಂಹಮೂರ್ತಿ**

ಡಾ|| ಕೃಷ್ಣಾನಂದ ಕಾಮತರು ಕನ್ನಡದ ಅತೀವ ಪ್ರತಿಭಾಶಾಲಿಗಳಲ್ಲಿ ಒಬ್ಬರು. ಅವರು ವೃತ್ತಿಯಿಂದ ವಿಜ್ಞಾನಿಯಾದರೂ ಕನ್ನಡ ಸಾಹಿತ್ಯಕ್ಕೆ ನೀಡಿರುವ ಕಾಣಿಕೆ ಅಪೂರ್ವವಾದುದು, ಅನನ್ಯವಾದುದು. ಅವರದು ಕವಿಯ ಮನಸ್ಸು, ವಿಜ್ಞಾನಿ, ವಿದ್ವಾಂಸನ ಕುತೂಹಲ, ಸದಾ ತೆರೆದ ಛಾಯಾಚಿತ್ರಕಾರನ ಕಣ್ಣು, ರಸಿಕತೆ, ಇತಿಹಾಸಕಾರನ ಐತಿಹಾಸಿಕ ಪ್ರಜ್ಞೆ ಭಾವ ವೈಶಾಲ್ಯಗಳು ಅವರ ಸ್ವಭಾವದಲ್ಲಿ ಬೆರೆತಿವೆ. ಅವರು ಯಾವುದೇ ಕೃತಿಯನ್ನು ಓದಲಿ, ಇವೆಲ್ಲ ಓದುಗರ ಅರಿವಿಗೆ ಬರುತ್ತವೆ.

'ನಾ ರಾಜಸ್ಥಾನದಲ್ಲಿ' ಇವರ ಮೊದಲ ಕೃತಿಗಳಲ್ಲಿ ಒಂದು. ಈ ಕೃತಿ ಪ್ರಕಟವಾಗುವ ಹೊತ್ತಿಗೆ ಅವರ 'ನಾನೂ ಅಮೇರಿಕೆಗೆ ಹೋಗಿದ್ದೆ' ಹಾಗೂ 'ವಂಗದರ್ಶನ'ಗಳು ಹೊರಬಂದಿದ್ದವು. ಆಗಲೇ ಕನ್ನಡಿಗರಿಗೆ ಇವರ ಸರಳವಾದ ಭಾಷೆ, ಜಾನಪದ ಸಂಸ್ಕೃತಿಯ ಬಗೆಗೆ ಇವರಿಗಿದ್ದ ಕುತೂಹಲಗಳು ಪರಿಚಯವಾಗಿದ್ದವು. ಹೀಗಾಗಿ 'ನಾ ರಾಜಸ್ಥಾನದಲ್ಲಿ' ಕೃತಿಗೆ ಒಳ್ಳೆಯ ಸ್ವಾಗತವೇ ಸಿಕ್ಕಿತು. ಕೆಲಸದ ನಿಮಿತ್ತ ರಾಜಸ್ಥಾನದ ಜೋಬನೇರದ ಕೃಷಿ ವಿಶ್ವವಿದ್ಯಾನಿಲಯದ ಉಪನ್ಯಾಸಕರಾಗಿ ಹೋಗಬೇಕಾಗಿ ಬಂದದ್ದು ಕಾಮತರಿಗೆ ಉದ್ಯೋಗ ನಿಮಿತ್ತವಾದ ಅಗತ್ಯವಾದರೆ ಕನ್ನಡದ ಪಾಲಿಗೆ ಅದೊಂದು ಅಪೂರ್ವ ಲಾಭವಾಯಿತು. ಬೇರೆಡೆ ಹೋದವರೆಲ್ಲ ಇಂತಹ ಕೃತಿಗಳನ್ನು ರಚಿಸಿದ್ದರೆ ಕನ್ನಡ ಸಾಹಿತ್ಯ ಇನ್ನೆಷ್ಟು ವಿಸ್ತಾರ ಪಡೆಯುತ್ತಿತ್ತೋ ತಿಳಿಯದು. ರಾಜಸ್ಥಾನಿಗಳ ಸ್ವಭಾವ, ಅಲ್ಲಿಯ ಸಂಸ್ಕೃತಿಯ ಪರಿಚಯ, ಜನಪದದ ಬಗೆಗೆ ಸಮೃದ್ಧ ವಿವರ, ಭಾರತೀಯ ಶಿಕ್ಷಣ ವ್ಯವಸ್ಥೆಯ ಕರಾಳ ರೂಪ ಎಲ್ಲವನ್ನೂ ಕಾಮತರ ಲೇಖನಿ ತೆಳು ಹಾಸ್ಯದ ಲೇಪನದೊಂದಿಗೆ ಒದಗಿಸುತ್ತದೆ.

ಮೂವತ್ತೆರಡು ಅಧ್ಯಾಯಗಳಲ್ಲಿ ತೆರೆದುಕೊಳ್ಳುವ ಕಾಮತರ ಅನುಭವದ ಬುತ್ತಿ ದೂರದ ಪ್ರಯಾಣದೊಂದಿಗೆ ಆರಂಭವಾಗುತ್ತದೆ. ಮೊದಲ ಅಧ್ಯಾಯದಲ್ಲೇ ಕಾಮತರು ಓದುಗರ ಮನಸ್ಸಿಗೆ ಲಗ್ಗೆ ಇಡುತ್ತಾರೆ. ಮುಂಬಯಿ ಮೂಲಕ ಅಹ್ಮದಾಬಾದ್ ತಲಪುವ ವೇಳೆಗೆ ಗುಜರಾತ, ರಾಜಸ್ಥಾನಗಳ ಇತಿಹಾಸದ ಸ್ಮರಣೆ, ಪ್ರಯಾಣದ ಸಹಗರ, ರೈಲ್ವೇ ಸ್ಟೇಷನ್ನುಗಳ ಚಿತ್ರಣ, ಅಲ್ಲಿ ದೊರೆಯುವ ಉಪಾಹಾರ ಪಾನೀಯಗಳ ಬಗೆಗೆ ವ್ಯಾಖ್ಯೆ ಎಲ್ಲವೂ ಕಂಡು ಬರುತ್ತವೆ.

ನಂತರದಲ್ಲಿ, ಅಹ್ಮದಾಬಾದು ಎಂದಿನಿಂದ ಇವರ ಪರಿಚಯದ್ದೋ ಎಂಬಂತೆ ಅಲ್ಲಿಯ ಬೆಳಗಿನ ವಿವರಣೆ ನೀಡುತ್ತಾರೆ. ಕಾಮತರ ಮನಸ್ಸು ವಿವರಗಳನ್ನು ಫಕ್ಕನೇ ಕೂಡಿಟ್ಟುಕೊಂಡು ಬಿಡುತ್ತವೆ. ಅವನ್ನು ಪ್ರಕಟಿಸುವ ರೀತಿಯೂ ಅನನ್ಯ. 'ಗುಜರಾತಿ ಮಕ್ಕಳೂ ತಂದೆಯಂತೆ ಅಚ್ಚುಕಟ್ಟಾಗಿಯೂ ಅಂದವಾಗಿಯೂ ಕಾಣುತ್ತಾರೆ. ಆದರೆ ವಿವಾಹಿತ ಸ್ತ್ರೀಯರ ಬಗ್ಗೆ ಈ ಮಾತು ಹೇಳುವುದು ಕಷ್ಟ. ಕೊಬ್ಬುಳ್ಳ ಹಾಲು, ಹೈನು, ಬೆಣ್ಣೆ, ತುಪ್ಪ, ಅತಿಯಾಗಿ ಸೇವಿಸುವುದರಿಂದ ತುಂಬ ಸ್ಥೂಲಕಾಯರಾಗಿತ್ತಾರೆ ಎಂದು ವ್ಯಾಖ್ಯಾನಿಸುತ್ತಾರೆ ಸ್ವತಃ ಗುಜರಾತಿ ಸ್ತ್ರೀಯರಿಗೂ ಇದನ್ನು ನಿರಾಕರಿಸಲು ಕಷ್ಟಸಾಧ್ಯ ಎನಿಸುವ ಹಾಗೆ.

ಗುಜರಾತದಿಂದ ರಾಜಸ್ಥಾನಕ್ಕೆ ಹೊರಡುವ ಹಾದಿಯಲ್ಲೇ ಕಾಮತರಿಗೆ ಅಲ್ಲಿಯ ಇತಿಹಾಸದ ನೆನಪರಿಕೆ. ಪೂರ್ವದಲ್ಲಿ ನಡೆದಿರಬಹುದಾದ ಯುದ್ಧಗಳನ್ನು ನೆನಪಿಸಿಕೊಳ್ಳುತ್ತ. 'ಬೆವರು ಹನಿಸಿ ಬೆಳೆದ ಗೋಧಿ, ಹೊಂಬೆಳಕಿನಲ್ಲಿ ರಕ್ತದಲ್ಲಿ ಬೆಳೆದಂತೆ ಕಂಡವು' ಎನ್ನುತ್ತಾರೆ.

ಬೆಳಗಿನ ಸುಂದರ ಚಿತ್ರಣ ಕಟ್ಟಿಕೊಡುತ್ತಿರುವಾಗ ಕೂಡ, ಮಧುರ ಜಿಲೇಬಿಯ ಸ್ವಾದ, ಚಹಾ ಕಪ್ಪಿನ ಕಲಾತ್ಮಕತೆ ಕಾಮತರ ಕಣ್ಣು ತಪ್ಪಿಸುವುದಿಲ್ಲ. ಕಾಮತರು ಸ್ವಭಾವ ವಿಶೇಷವೇ ಇಲ್ಲಿ ಪ್ರಕಟವಾಗುತ್ತದೆ. ಪ್ರತಿಭೆಗೆ ಬೆಲೆಕೊಡುವುದರಲ್ಲಿ, ಅದನ್ನು ಗುರುತಿಸುವಲ್ಲಿ ಕಾಮತರದು ಪಕ್ವ, ಪರಿಣತ ಮನಸ್ಸು. ಎಲ್ಲಾ ಕೃತಿಗಳುದ್ದಕ್ಕೂ ಪ್ರಕಟವಾಗುವ ಕಾಮತರ ಈ ಗುಣ ಓದುಗರ ಮನಸ್ಸಿನಲ್ಲಿ ಸ್ಥಾಯಿಯಾಗಿ ನಿಲ್ಲುತ್ತದೆ. ಜೊತೆಗೇ ಅವರ ಇತಿಹಾಸ ಪ್ರಜ್ಞೆ ಪ್ರಕಟವಾಗುವ ರೀತಿ ಉದಯಪುರದ ಕೋಟೆಯ ಮೇಲೆ ಅವರಿಗೆ ಹೀಗೆ ಅನ್ನಿಸುತ್ತದೆ:

**"ಕೋಟೆಯ ಕಲ್ಲುಗಳೆಲ್ಲ ಮರೆಯದಿರೋ ಮೂರ್ಖ ಮಾನವ! ನಿನಗೂ ನನ್ನಂತಹ ದಿನಗಳು ಬಂದಾವು!" ಎಂದು ಎಚ್ಚರಿಸುತ್ತಿದ್ದಂತೆ ಕಂಡವು. ನಮ್ಮದು ಎಂತಹ ದೇಶ! ನಮ್ಮ ಇತಿಹಾಸ ಸಂಸ್ಕೃತಿಯನ್ನು ನೆನಪಿಗೆ ತಂದುಕೊಡುವಂತಹ ಇಂತಹ ಅಪೂರ್ವ ಸ್ಮಾರಕಗಳನ್ನು ನಾವಾಗಲೀ ನಮ್ಮ ದೇಶದ ಸರಕಾರವಾಗಲೀ ರಕ್ಷಿಸಿಕೊಳ್ಳುತ್ತಿಲ್ಲವಲ್ಲ ಎಂದು ಕಸಿವಿಸಿಯಾಯಿತು."**

**"ಕೋಟೆಯ ತುತ್ತ ತುದಿಯೇರಿ ಹರಡಿಕೊಂಡಿದ್ದ ರಜಪೂತರ ಗತವೈಭವದ ಅವಶೇಷಗಳನ್ನು ನೋಡಿ ಅವರ ಶೌರ್ಯಕ್ಕೆ ತಲೆಬಾಗಿದೆ. ಭಾರವಾದ ಮನಸ್ಸಿನಿಂದ ಜಾರುವ ಬಂಡೆಗಳ ಮೇಲೆ ಜಾರುತ್ತಾ ಗುಡ್ಡ ಇಳಿದು ಬಂದೆ."**

ಜೋಬನೇರಕ್ಕೆ ತಲುಪಿದ ಮೇಲೆ ರಾಜಸ್ಥಾನ ನಿಧಾನಕ್ಕೆ ತೆರೆದುಕೊಳ್ಳಲು ಪ್ರಾರಂಭವಾಗುತ್ತದೆ. ಅಲ್ಲಿಯ ನವಿಲುಗಳ ಕೇಕೆ ಕಾಮತರ ಮನಸ್ಸನ್ನು ಸೆಳೆಯುತ್ತವೆ. ನೀರಿಗಾಗಿ ಅಲ್ಲಿಯ ಜನ ಪಡುವ ಕಷ್ಟ, ಅವರ ಜೀವನ ವಿಧಾನಗಳು ಅತ್ಯಂತ ಸಪಿರಾದ ಭಾಷೆಯಲ್ಲಿ ಪ್ರಕಟವಾಗುತ್ತವೆ. ಬಸ್ಸಿನಲ್ಲಿ ಕುಳಿತ ನಂತರ ಹೊರಡುವುದು ನಿಧಾನವಾದಾಗ, ಕಾಮತರು ಮನಸ್ಸು ಬೇಸರಗೊಂಡಿದ್ದರೂ ಚಹಾ ಮಾಡುವ ಅಂಗಡಿಗೆ ಹೋಗಿ ಅಲ್ಲಿಯ ವಿವರಗಳನ್ನೆಲ್ಲ ದಾಖಲಿಸುತ್ತಾರೆ.

ನಂತರ ಕೃಷಿ ಕಾಲೇಜಿನ ಮಾಥುರರ ಕುಟುಂಬ, ಕಾಲೇಜಿನ ಸಿಬ್ಬಂದಿ ಇವರೆಲ್ಲರೂ ಕಾಮತರ ಅಧ್ಯಾಪಕ ಜೀವನದ ಅನಿವಾರ್ಯ ಎಳೆಗಳಾಗುತ್ತಾರೆ. ರಾಜಸ್ಥಾನದ ಸಾಮಾನ್ಯ ಜನರ ಬದುಕಿನ ವಿವರಗಳು ಮನೋಜ್ಞವಾಗಿ ದಾಖಲಾಗುತ್ತವೆ. ಇಲ್ಲೆಲ್ಲ ಕಾಮತರ ಬರವಣಿಗೆಯನ್ನು ನಾವು ಬಿ.ಜಿ.ಎಲ್. ಸ್ವಾಮಿಯವರ ಬರವಣಿಗೆಯ ಪಕ್ಕದಲ್ಲಿರಿಸಿ ನೋಡುವ ಹಾಗಾಗುತ್ತದೆ. ಇಬ್ಬರದೂ ದೈತ್ಯ ಪ್ರತಿಭೆಯೆ. ಇಬ್ಬರದೂ ಸೂಕ್ಷ್ಮವಾದ, ಪಟುವಾದ, ಜೀವನಪ್ರೀತಿ ತುಂಬಿದ ಮನಸ್ಸು. ವ್ಯತ್ಯಾಸಗಳು ಹಲವಿದ್ದರೂ ಸಾಮ್ಯಗಳೂ ಇವೆ. ಕಾಮತರಿಗೆ ಸುತ್ತಲಿನ ಜನರ ಬದುಕು, ಸಂಪ್ರದಾಯ, ನಂಬಿಕೆ, ಆಚರಣೆಗಳು ಆಸಕ್ತಿಯ ವಿಷಯಗಳಾಗಿವೆ. ಅಧ್ಯಯನಶೀಲ ದೃಷ್ಟಿಯಿಂದ, ಬೆರಗಿನಿಂದ, ಅತೀವ ಕುತೂಹಲದಿಂದ ಅವನ್ನು ಗಮನಿಸುತ್ತಾರೆ. ಅವರ ಉದಾರ ಮನಸ್ಸು ಬೇರೆಯವರ ಸಣ್ಣತನ, ಸ್ವಾರ್ಥಗಳನ್ನು ದಾಖಲಿಸಿಯೂ ಕ್ಷಮಿಸಿ ಬಿಡುತ್ತದೆ. ಒಮ್ಮೊಮ್ಮೆ ಇಂಥಲ್ಲೆಲ್ಲ ಒಂದು ಬಗೆಯ ನಿರ್ಲಿಪ್ತಿ ಕಾಣಬರುತ್ತದೆ.

ಬದುಕಿನ ವಿವರಗಳನ್ನು, ಸಾಂಸ್ಕೃತಿಕ ಸಂಗತಿಗಳನ್ನು ಕಾಮತರು ಚಿತ್ರಿಸುವ ರೀತಿ ಅನನ್ಯವಾದುದು. ನೀರಿನ ಎಚ್ಚರದ ಬಳಕೆ, ಊಟ ಮಾಡಿದ ತಟ್ಟೆಗಳನ್ನು ಶುಭ್ರ ಮರಳಿನಿಂದ ಥಳಥಳಿಸುವಂತೆ ಸ್ವಚ್ಛಮಾಡುವುದು, ಪರಿಸರದ ಕುರಿತು ಜನರ ಅಜ್ಞಾನ, ನಾಯಿ ಹಂದಿಗಳ ಜಗಳ, ಸುಂದರ ಬಳೆಗಳ ತಯಾರಿ ಯಾವುದೇ ಇರಲಿ ರಂಜನೆಯೊಂದಿಗೆ ಅಪೂರ್ವ ಮಾಹಿತಿಯೊಂದಿಗೆ ಓದುಗರ ಮನಸ್ಸಿನಲ್ಲಿ ತುಂಬಿಕೊಳ್ಳುತ್ತವೆ. ಜೋಬನೇರದ ಪೇಟೆಯ ಪರಿಸರದ, ವ್ಯಕ್ತಿಗಳ ಚಿತ್ರಣವಂತೂ ಒಮ್ಮೆಗೇ ರಾಜಸ್ಥಾನದ ಕುರಿತಾದ ಅಧಿಕೃತ ಸಾಂಸ್ಕೃತಿಕ ದಾಖಲೆಗಳೆನಿಸಿಬಿಡುತ್ತವೆ.

ಈ ಮಧ್ಯದಲ್ಲೇ ತಮ್ಮ ವೈಯಕ್ತಿಕ ಸಂಗತಿಗಳನ್ನು ತೆರೆದಿಡುತ್ತಾರೆ. ಮದುವೆ ನಿಶ್ಚಿತವಾದ ಸಂಗತಿ, ಆ ಕುರಿತ ಕಲ್ಪನೆಗಳು, ಆತಂಕಗಳು, ಬರಲಿರುವ ಹುಡುಗಿಯ ಬಗೆಗಿನ ಕಾಳಜಿ ಎಲ್ಲ ದಾಖಲಾಗುತ್ತದೆ. ಒಂದು ಬಗೆಯ ಆತ್ಮೀಯ ಸ್ಪರ್ಶ ಓದುಗರಿಗೆ ಒದಗುತ್ತದೆ. ವಿವಾಹ ಕುರಿತ ಅವರ ಕಲ್ಪನೆಯ ಲಹರಿ ಹೀಗೆ ಬಿಚ್ಚಿಕೊಳ್ಳುತ್ತದೆ.

**"ಇಲ್ಲಿಯ ಮದುವೆಯ ಸಡಗರ ನೋಡಿ ನಾನೂ ರಾಜಾಸ್ಥಾನಿ ಪದ್ಧತಿಯಲ್ಲಿ ವಿವಾಹವಾದರೆ ಹೇಗಿರುತ್ತದೆಂದು ಯೋಚಿಸಿಯೇ ರೋಮಾಂಚನವಾಯಿತು. ಗುಲಾಬಿವರ್ಣದ ಹದಿನೆಂಟು ಗಜದ ಪಗಡಿಸುತ್ತಿ ಅದಕ್ಕೆ ಝರಿಯಿಂದ ಮಾಡಿದ ತುರಾಯಿ ಹಚ್ಚಿಕೊಂಡಿದ್ದೇನೆ. ಬಿಗಿಯಾದ ಹಳದಿವರ್ಣದ ಬಂದಿಯಾ ಅಂಗರಖಾ ತೊಟ್ಟಿದ್ದೇನೆ. ಅದೇ ವರ್ಣದ ಚೂಡಿದಾರ ಪಾಯಿಜಾಮಾ ಧರಿಸಿದ್ದೇನೆ. ಸೊಂಟಕ್ಕೆ ಖಡ್ಗವನ್ನು ತೂಗಬಿಟ್ಟು ಕಾಲಿಗೆ ಮಖಮಲ್ಲಿನಲ್ಲಿ ಕಸೂತಿ ಮಾಡಿದ ರಾಜಸ್ಥಾನಿ ಮಾದರಿಯ ಶೂಸು ಧರಿಸಿ ಸುಂದರವಾದ ಬಿಳಿಕುದುರೆ ಹತ್ತಿ ಕುಳಿತಿದ್ದೇನೆ. ಯಶಸ್ಸು ಕೋರಿ ಆಪ್ತರು ಹಾಕಿದ ವಿವಿಧ ವರ್ಣದ ಬಟ್ಟೆಗಳಿಂದ ಹೋಳಿಯಾಡಿ ಬಂದವನಂತೆ ಅನ್ನಿಸುತ್ತದೆ. ನನ್ನ ವಧು ನಲವತ್ತು ಗಜದ ಸ್ಯಾಟನ್ನಿನ ಗಾಗರಾ(ಲಂಗ) ಧರಿಸಿದ್ದಾಳೆ. ಕನ್ನಡಿಗಳನ್ನು ಕೂಡಿಸಿ ಕಸೂತಿ ಮಾಡಿದ ಗೇಣಗಲದ 'ಕಂಚಲೀ' (ರವಿಕೆ) ತೊಟ್ಟಿದ್ದಾಳೆ. ಕೈತುಂಬಾ ಬಳೆಗಳು, ಕಾಲಲ್ಲಿ ಭಾರವಾದ ಪೈಜಣ(ಕಾಲಂದುಗೆ), ಸೊಂಟಕ್ಕೆ 'ಕರಧನಿ', ಬೈತಲೆಯಲ್ಲಿ 'ಬೋರ', ಎರಡೂವರೆ ಗಜದ ಪಾರದರ್ಶಕ ಬಟ್ಟೆಯ ಓಡಣಿಯಿಂದ ಅವಳ ಸೌಂದರ್ಯ ತೂರಿ ಹೊರಗೆ ಬರುತ್ತದೆ."**

ಕೆಲ ವರ್ಷಗಳ ಹಿಂದೆ ಜ್ಯೋತ್ಸ್ನಾ ಕಾಮತರು ಕಮಲಾಹಮ್ಮಿಗ್ರೆ ಅವರ ಜತೆಯಲ್ಲಿ ನಡೆದ ದೂರದರ್ಶನದಲ್ಲಿ ರಾಯರ ರಸಿಕತೆಯ ಪ್ರಸ್ತಾಪ ಬಂದಾಗ, ಸುಸ್ಮಿತೆಯಾಗಿದ್ದು ನೆನಪಿಗೆ ಬರುತ್ತದೆ.

ಕೃತಿಯುದ್ದಕ್ಕೂ ಕಾಮತರ ಸರಳ ಮನೋಭೂಮಿಕೆ, ಜೀವನದೃಷ್ಟಿಗಳ ಪರಿಚಯವಾಗುತ್ತದೆ. ವಿವಾಹ, ಜಯಪುರ, ಕೃಷಿ ಮೇಳಾ, ಚಹಾಕ್ಲಬ್, ಸಹೋದ್ಯೋಗಿಗಳು, ಹೊಸಬರು, ವಾರಾಂತ್ಯ, ಅಧ್ಯಾಯಗಳು ಸ್ವತಂತ್ರ ಪ್ರಬಂಧಗಳಾಗಿಯೂ ಎಲ್ಲಿಯೂ ಸಲ್ಲಬಹುದು. ಅವು ನೀಡುವ ಕಚಗುಳಿ ಮುದ ನೀಡಿದರೆ, ವಿವಿಧ ಸಾಂಸ್ಕೃತಿಕ, ಅನ್ಯ ವಿವರಗಳು ಎಂಥವರ ಮನಸ್ಸನ್ನಾದರೂ ಸೂರೆಗೊಳ್ಳಬಲ್ಲವು.

'ನಾ ರಾಜಸ್ಥಾನದಲ್ಲಿ' ನಮ್ಮ ವಿಶ್ವವಿದ್ಯಾಲಯಗಳ ಪರಿಸ್ಥಿತಿಯ ಬಗೆಗೆ ಒಂದು ಗಂಭೀರ ವಿಮರ್ಶೆಯೂ ಆಗಿದೆ. ವೈಯಕ್ತಿಕ ಹಿತಾಸಕ್ತಿ, ರಾಜಕಾರಣಿಗಳ ಪ್ರಭಾವ, ಅಧಿಕಾರದ ಜತೆಗೆ ಜವಾಬ್ದಾರಿಯೂ ಇದೆ ಎಂಬ ಅರಿವೇ ಇಲ್ಲದಂತೆ ವರ್ತಿಸುವ ಡೀನರು, ಪ್ರಾಂಶುಪಾಲರು, ಒಮ್ಮೆ ವಿಶ್ವವಿದ್ಯಾಲಯ ಸ್ಥಾಪನೆಯಾದರೆ ಅಲ್ಲಿಯ ಯಾವ ವಿಷಯಕ್ಕೂ ತಲೆ ಹಾಕದ ವ್ಯವಸ್ಥೆ, ಪರಸ್ಪರ ಸಹಾಯ ಸಂಘದಂತೆ ನಡೆಯುವ ಆಡಳಿತ ಎಲ್ಲವನ್ನೂ ಕಾಮತರ ಲೇಖನಿ ಹಗುರ ಮನಸ್ಸಿನಿಂದ ಚಿತ್ರಿಸಿದರೂ ಕಠೋರ ಸತ್ಯವನ್ನೂ ಮುಂದಿರಿಸುತ್ತದೆ. ನಮ್ಮ ಅನೇಕ ವಿಶ್ವವಿದ್ಯಾಲಯಗಳೂ ಇದರಿಂದ ಕಲಿಯಬೇಕಾದ ಪಾಠಗಳು ಹಲವಿವೆ.

ಹೇಗಾದರೂ ಕಾಮತರ ವೈಶಿಷ್ಟ್ಯವೆಂದರೆ ಬಗೆಬಗೆಯ ವಿವರಗಳನ್ನು ಉತ್ಸುಕತೆಯಿಂದ ನೀಡುವುದೇ ಆಗಿದೆ. 'ಕೃಷಿ ಮೇಳಾ' ಅಧ್ಯಾಯವನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಉದಾಹರಣೆಗೆ 'ರಸಮಲಾಯಿ' (ಐಸ್ ಕ್ರೀಮ್) ಮಾಡುವ ಸನ್ನಿವೇಶವನ್ನು ಗಮನಿಸಬಹುದು.

**"ಅವನ ಹಿಂದೆ ನಾಲ್ಕಾರೂ ಹುಡುಗರು ಸದಾ ತಿರುಗಾಡುತ್ತಿರುತ್ತಾರೆ. ಅವನ ಹತ್ತಿರ ಹತ್ತರಿಂದ ಅರವತ್ತು ಪೈಸೆಯ ತನಕ ವಿವಿಧ ಬಣ್ಣ ರುಚಿಗಳುಳ್ಳ ಸುವಾಸನೆಯ ರಸಮಲಾಯಿ ಸಿಗುತ್ತದೆ. ಗಿರಾಕಿಗಳು ಹಣಕೊಟ್ಟಾಗ ಮಡಕೆಯಿಂದ ಹಿತ್ತಾಳೆಯ ಪಾತ್ರೆ ತೆಗೆದು ಅದು ಮುಚ್ಚಳಕ್ಕೆ ಬಿಗಿದ ಸಾಯಕಲ್ ಟ್ಯೂಬಿನ ತುಂಡನ್ನು ತೆಗೆದು ಸ್ವಚ್ಛವಾದ ಚಾಕುವಿನಿಂದ ರಸಮಲಾಯಿಗಳನ್ನು ಚೆನ್ನಾಗಿ ತೊಳೆದು ಒರೆಸಿದ ಒಣ. ಎಲೆಗೆ ಕೆಡುವಿ ಅದನ್ನು ತುಂಡುಮಾಡಿ, ಚಮಚೆಯ ಬದಲಾಗಿ ಚಮಚೆಯ ಆಕಾರದಲ್ಲಿ ಕತ್ತರಿಸಿದ ಚಿಕ್ಕ ಬಿದಿರ ತುಂಡುಗಳನ್ನು ಕೊಡುವನು. ಆ ರಸಮಲಾಯಿಯ ಉತ್ಕೃಷ್ಟ ಸ್ವಾದ ಮತ್ತು ರಸಮಲಾಯಿವಾಲಾನ ಸ್ವಚ್ಛತೆಗಳನ್ನು ಒಮ್ಮೆ ಕಂಡವರಿಗೆ ಅದನ್ನು ಬಿಡಲು ಎಂದೂ ಮನಸ್ಸು ಬಾರದು."**

**"ಬೇಸಿಗೆಯ ಉರಿಯಲ್ಲಿ ಬೇಯುತ್ತಿದ್ದರೂ ಈ ರಸಮಲಾಯಿಗಾಗಿ ಬೇಸಗೆಯನ್ನು ಸ್ವಾಗತಿಸುವವರಿದ್ದಾರೆ."**

ಹಾಗೆಯೇ ಜಯಪುರ ಅರಮನೆಯ ವಿವರ, ಹೆಂಡತಿಗೆ ಅನಾರೋಗ್ಯವಾಗಿದ್ದಾಗ ಪಡುವ ಪರಿಪಾಟಲು, ಆಸ್ಪತ್ರೆಯ ವಾತಾವರಣ, ಬಡಹುಡುಗ ಗೋಪಾಲನ ಚಿತ್ರ ಎಲ್ಲವೂ ಗೆರೆಕೊರೆದಂತೆ ಓದುಗರ ಮನಸ್ಸಿನಲ್ಲಿ ನಿಲ್ಲುತ್ತವೆ.

ಒಟ್ಟಾರೆ ಸೂಕ್ಷ್ಮ ಮನಸ್ಸಿನ ಸಾಹಿತಿಯಾಗಿ, ವೃತ್ತಿಯಿಂದ ವಿಜ್ಞಾನಿಯಾಗಿ, ಇತಿಹಾಸ ಪ್ರಜ್ಞೆ ಮೈಗೂಡಿಸಿಕೊಂಡಿರುವ 'ನಾ ರಾಜಸ್ಥಾನದಲ್ಲಿ' ಕೃತಿಯನ್ನು ನೀಡಿರುವ ಕಾಮತರಿಗೆ ಎಲ್ಲ ಕನ್ನಡಿಗರ ಅಭಿವಂದನೆಗಳು ಸಲ್ಲುತ್ತವೆ. ಕೃತಿ ಒಮ್ಮೆಗೇ ಪ್ರವಾಸ ಸಾಹಿತ್ಯ, ವಿಜ್ಞಾನ ಸಾಹಿತ್ಯ, ಸಾಂಸ್ಕೃತಿಕ ಪ್ರಬಂಧಗಳು, ವ್ಯಕ್ತಿ ಚಿತ್ರಗಳು ಎಲ್ಲ ಪ್ರಕಾರಗಳಿಗೂ ಸೇರುತ್ತದೆ. ಕೆಲ ವಿವರಗಳು ಹೆಚ್ಚೆನಿಸುವುದು, ರಾಜಸ್ಥಾನದ ಸಾಹಿತ್ಯಕ ವಾತಾವರಣದ ಪರಿಚಯ ಇಲ್ಲದಿರುವುದು, ರಾಜಸ್ಥಾನಿ ಭಾಷೆಯ ಕುರಿತು ಹೆಚ್ಚೇನೂ ಮಾಹಿತಿ ಇಲ್ಲದಿರುವುದು ಒಟ್ಟಾರೆ ಕೃತಿಯಲ್ಲಿ ಕಾಣಬರುವ ಕೊರತೆಗಳು ಎನಿಸಿದರೂ, ತುಂಬ ಸಮೃದ್ಧ ವಿವರಗಳನ್ನು ದಾಖಲಿಸಿರುವ ಕಾಮತರ ರಸಿಕ ಮನಸ್ಸಿನ ದರ್ಶನ ಈ ಕೃತಿಯಲ್ಲಿ ನಮಗೆ ಸಿಗುತ್ತದೆ.

❑

# ಸರ್ಪ ಸಂಕುಲ - ಒಂದು ವಿಶ್ಲೇಷಣೆ

ಡಾ|| ಎನ್. ಎಸ್. ಲೀಲಾ



"ಶೃಂಗಾರವಾಗಿಹುದು ಶ್ರೀ ಹರಿಯ ಮಂಚ
ಅಂಗನೆ ಮಹಲಕುಮಿಯರಸಮಲಗುವ ಮಂಚ"
"ಹೆಡೆಯುಳ್ಳ ಹೊಸಮಂಚ ಪೊಡವಿ ಪೊತ್ತಿಹ ಮಂಚ"
"ಕಾಲಿಲ್ಲದೋಡುವ ಮಂಚ ಗಾಳಿನುಂಗುವ ಮಂಚ,"
"ಕಣ್ಣು ಕಿವಿಯಾದ ಮಂಚ ಬೆನ್ನು ಬಾಗಿದ ಮಂಚ,
ಹುಣ್ಣಿಮೆಯ ಚಂದ್ರಮನ ಅಡ್ಡಗಟ್ಟುವ ಮಂಚ,"
"ಹಕ್ಕಿಗೆ ಹಗೆಯಾದ ಮಂಚ ರೊಕ್ಕ ಮುಟ್ಟದ ಮಂಚ"
"ಶಂಕರನ ಕೊರಳಿಗೆ ಪದಕವಾಗಿಹ ಮಂಚ"

ಇಂತಹ ಸುಂದರ ವರ್ಣನೆಯ ಕೀರ್ತನೆ ಭಾಗಗಳು ಪುರಂದರದಾಸರದು. ಬಹುಶಃ ಅವರು ಶ್ರೀರಂಗ ಕ್ಷೇತ್ರದ ರಂಗನಾಥನನ್ನು ಕಂಡಾಗ ಹೊರಬಿದ್ದ ದೇವಸಾಕ್ಷಾತ್ಕಾರದ ಸಂಗೀತ ಸುಧೆ.

"ನಾಗರ ಹಾವೇ ಹಾವೊಳು ಹೂವೆ,
ಬಾಗಿಲ ಬಿಲದಲಿ ನಿನ್ನಯ ಠಾವೆ
ಬಾ - ಬಾ - ಬಾ - ಬಾ
ಬರಿಮೈ ತಣ್ಣಗೆ, ಮನದಲಿ ಬಿಸಿಹಗೆ
ಎರಡೆಳೆ ನಾಲಗೆ ಇದ್ದರು ಸುಮ್ಮನೆ
ಎರಗುವೆ ನಿನಗೆ ಈಗಲೇ ಹೊರಗೆ
ಪೋ - ಪೋ - ಪೋ - ಪೋ.

-ಕವಿಶಿಷ್ಯ (ಪಂಜೆಮಂಗೇಶರಾವ್)

'ಕಲ್ಲನಾಗರ ಕಂಡು ಹಾಲೆರೆಯ ನಿಜನಾಗರ ಕಂಡಾಗ ಕಲ್ಲನೆಸೆಯುವ' ಬಸವೇಶ್ವರ ವಚನ – ಹೀಗೆ ಅವರವರ ಭಾವಕ್ಕೆ ಅವರವರ ಭಕುತಿಗೆ ಹೊರ ಹೊಮ್ಮುವ ಸತ್ಯವೇ ಅವರ ಕೃತಿಗಳು ಎಂಬುದನ್ನು ಸಾಕಾರಗೊಳಿಸುತ್ತದೆ ಡಾ. ಕೃಷ್ಣಾನಂದ ಕಾಮತರ "ಸರ್ಪ ಸಂಕುಲ". ಕೇವಲ ೫೫ ಪುಟಗಳಲ್ಲಿ ವಿಷಯಕ್ಕೆ ಸಂಬಂಧಪಟ್ಟ ಹೂರಣವನ್ನಷ್ಟೇ ತುರುಕದೆ ಅದರೊಂದಿಗೆ ಹದವಾಗಿ ಬೆಂದ ಹೋಳಿಗೆಯನ್ನು ಜೊತೆಗೆ ಬೆಣ್ಣೆಕಾಸಿದ ತುಪ್ಪ ಮತ್ತು ಘಮಘಮಿಸುವ ಹಾಲನ್ನು ಸೇರಿಸಿ ರುಚಿಕಟ್ಟಾಗಿ ಓದುಗರಿಗೆ ಉಣಬಡಿಸಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯ ಕುಮಟ, ಹೊನ್ನಾವರ, ಸಿರ್ಸಿ ಮತ್ತು ಧಾರವಾಡದಲ್ಲಿ ತಮ್ಮ ಬಾಲ್ಯ, ಶಾಲಾ ಮತ್ತು ಕಾಲೇಜು ವಿದ್ಯಾರ್ಥಿಯಾಗಿ ಕಂಡು, ಅನುಭವಿಸಿದ ಸರ್ಪ ಸಂಬಂಧಿ ವಿಷಯಗಳನ್ನು ಯಥಾವತ್ತಾಗಿ ಬಳಸಿಕೊಳ್ಳುತ್ತಾ, ಮೂಢ ನಂಬಿಕೆಗಳ ಪ್ರಸ್ತಾಪ ಹಾಗೂ ಇತಿಹಾಸ ಪುರಾಣಗಳ ಸತ್ಯಾಸತ್ಯತೆಗಳನ್ನು ಕಥನರೂಪದಲ್ಲಿ ತಮ್ಮ ಸರಳ ಶೈಲಿಯಲ್ಲಿ ವಿವರಿಸಿದ್ದಾರೆ.

ಕನ್ನಡ ಪುಸ್ತಕಗಳ ವ್ಯಾಪಾರ, ಓದುಗರ ಸಂಖ್ಯೆ ಇಳಿಮುಖವಾಗುತ್ತಿದೆ ಎಂಬ ಕೂಗು ಇತ್ತೀಚಿನ ದೂರು. ಅದರಲ್ಲೂ ವಿಜ್ಞಾನ ಸಾಹಿತ್ಯ ಕುರಿತ ಪುಸ್ತಕಗಳು, ಲೇಖನಗಳು ಸಾಮಾನ್ಯ ಜನರನ್ನು ಸೆಳೆಯುವುದೇ ಅಪರೂಪ. ವಾರ ಪತ್ರಿಕೆಗಳಲ್ಲಿ ಸಿನಿರಂಗದ ರಂಗುರಂಗಿನ ಆಕರ್ಷಕ ಲೇಖನಗಳ ಮುಂದೆ ಮೊದ್ದುಮೊದ್ದಾಗಿ ಅಚ್ಚಾದ ಕಪ್ಪು ಬಿಳುಪು ಚಿತ್ರಗಳ ವೈಜ್ಞಾನಿಕ ಲೇಖನಗಳು ತೀರ ಸಪ್ಪೆ ಎನಿಸುವುದು. ಇಷ್ಟೆಲ್ಲಾ ಋಣಾತ್ಮಕ ಅಂಶಗಳ ನಡುವೆಯೂ ಕನ್ನಡದಲ್ಲಿ ವಿಜ್ಞಾನ ವಿಷಯಗಳನ್ನು ಕುರಿತ ಬರಹಗಾರರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿರುವುದು ಸ್ವಾಗತಾರ್ಹ.

ಪ್ರಿಸಮ್ ಬುಕ್ಸ್ ಪ್ರೈ.ಲಿ. ನವರು ಪ್ರಕಟಿಸಿರುವ ಪುಸ್ತಕಗಳ ಪಟ್ಟಿಯಲ್ಲಿ ವಿಜ್ಞಾನ ಪ್ರಕಟಣೆಗಳ ಒಟ್ಟು ಸಂಖ್ಯೆ-೧೩. ಆದರೆ ಸಂಖ್ಯೆಯ ಅದಲು ಬದಲು ೩೧-ಸಾಹಿತ್ಯ ವಿಚಾರಗಳಿಗೆ ಸಂಬಂಧ ಪಟ್ಟ ಪ್ರಕಟಣೆಗಳು. ಅಂದರೆ, ಕನ್ನಡದಲ್ಲಿ ವಿಜ್ಞಾನ ಸಾಹಿತ್ಯಕ್ಕೆ ೧/೩ ರ ಮನ್ನಣೆ. ಎಲ್ಲರಿಗೂ ವಿಜ್ಞಾನದ ಫಲಾಫಲಗಳು ಅನುಭವಿಸಲು ಬೇಕು. ಆದರೆ ಅದಕ್ಕೆ ಸಂಬಂಧಪಟ್ಟ ಸಾಹಿತ್ಯವಲ್ಲ. ಆದ್ದರಿಂದಲೇ ಡಾ.. ಕಾಮತರು ತಮ್ಮ ಕೃತಿಯ ಹಿನ್ನೆಲೆಯಲ್ಲಿಯೇ ಹೇಳಿಕೊಂಡಿದ್ದಾರೆ. "ಇದು ಸರ್ಪಗಳ ಕುರಿತ ಸಕಲ ಮಾಹಿತಿ ನೀಡುವ ಬದಲಿಗೆ ಅವುಗಳ ಕುರಿತಾದ ತಪ್ಪು ಕಲ್ಪನೆಗಳನ್ನು ಬದಿಗಿರಿಸಿ ವೈಜ್ಞಾನಿಕ ಸತ್ಯವನ್ನು ತೋರಿಸುವುದು." ಈ ದಿಶೆಯಲ್ಲಿ ಅವರು ಯಶಸ್ಸನ್ನು ಸಾಧಿಸಿದ್ದಾರೆ.

ಬೇಸಿಗೆಯ ರಜಾದಿನಗಳಲ್ಲಿ ಹಿರಿಯರ ಆಕ್ಷೇಪಣೆಗಳನ್ನು ಲೆಕ್ಕಿಸದೆ, ಪ್ರಕೃತಿಯ ಕರೆಗೆ ಓಗೊಟ್ಟು ನಡೆಸಿದ ವೀಕ್ಷಣೆ ಹಾಗೂ ದೇಶ ವಿದೇಶಗಳನ್ನು ಸುತ್ತಿ ಸಂಗ್ರಹಿಸಿದ ಸರ್ಪ ವಿಚಾರ, ಸ್ವಾಂತಿಕೆಯ ವಿವರಣೆಯಾಗಿ ಮೂಡಿಬಂದಿದೆ. ಚಿತ್ರಕಲೆ, ವಾಸ್ತು ಶಿಲ್ಪಗಳಲ್ಲಿ ಸ್ವತಃ ಆಸಕ್ತಿ ಬೆಳೆಸಿಕೊಂಡು ಡಾ. ಕಾಮತರು ಅವುಗಳ ಬಗೆಗೆ ಬರೆಯುವಾಗ ತಮ್ಮ ವೈಜ್ಞಾನಿಕ ದೃಷ್ಟಿ ತೋರುವುದು ಅಪರೂಪದ್ದೇನಲ್ಲ. ಆದ್ದರಿಂದಲೇ ಈ ಚಿಕ್ಕ ಹೊತ್ತಿಗೆಯಲ್ಲಿ ಸರ್ಪದ ಪರಿಚಯ ಚೊಕ್ಕವಾಗಿ ಮೂಡಿಬಂದಿದೆ.

ಸ್ವದೇಶ ಮತ್ತು ವಿದೇಶಗಳ ಸರ್ಪದ ಬಗೆಗಿನ ನಂಬಿಕೆಗಳು ಹಾಗೂ ಅಲ್ಲಿಯ ವಿಷಪೂರಿತ ಹಾವುಗಳ ಬಗೆಗೆ ಮಾಹಿತಿಗಳನ್ನು ನೀಡುತ್ತಾ ಐತಿಹಾಸಿಕ, ಸಾಮಾಜಿಕ ಮತ್ತು ಪೌರಾಣಿಕ ಹಿನ್ನೆಲೆಯಲ್ಲಿ ವಿಷಯವನ್ನು ನಿರೂಪಿಸಿರುವುದು ಸ್ತುತ್ಯಾರ್ಹ.

ಅಪರೂಪದ ಘಟನೆಗಳಲ್ಲಿ ನಡೆಯಬಹುದಾದ ತದ್ವಿರುದ್ಧ ಆಸಕ್ತಿಗಳ ಬಗೆಗೆ ವಿವರಣೆ ನೀಡಿರುವುದು, ಸಮಾಜದಲ್ಲಿ ದಿನನಿತ್ಯ ಕಾಣುವ ಅಂಶವೇ. ಇದರಿಂದಲಾದರೂ ಜನ ತಮ್ಮ ನಡವಳಿಕೆಯನ್ನು ಬದಲಿಸಿಕೊಳ್ಳಬಲ್ಲರೇ? ಎಂಬುದೇ ಆಶಯ.

"ಹಾವಿನ ಹಾವಳಿ" – ಅಧ್ಯಾಯದಲ್ಲಿ ಕುಮಟಾ ಕಾಲೇಜಿನ ಬಗೆಗೆ ಪ್ರಸ್ತಾಪವಿದೆ. ಈ ಕಾಲೇಜು ಊರ ಹೊರಗಿನ ಒಂದು ಪಾಳು ಭೂಮಿಯಲ್ಲಿ ಸ್ಥಾಪಿಸಲಾಗಿತ್ತಂತೆ. ಒಮ್ಮೆ ಇಲ್ಲಿ ಅಂತರ್ ಕಾಲೇಜು ಕ್ರೀಡಾ ಸ್ಪರ್ಧೆ ಏರ್ಪಡಿಸಿದ ಸಂಗತಿ ವಿವರಿಸುತ್ತಾ ಸರ್ಪಕ್ಕೆ ಸಂಬಂಧ ಪಟ್ಟ ವಿವರಣೆ ನೀಡಿದ್ದಾರೆ.

ಕ್ರೀಡಾಸ್ಪರ್ಧೆ ಏರ್ಪಡಿಸಿದ್ದ ವೇಳೆಗೆ ಅಲ್ಲಿ ಪ್ರಾಣಿಶಾಸ್ತ್ರ ವಿಭಾಗವಿದ್ದು, ವಿಭಾಗದ ಮ್ಯೂಸಿಯಂ ಕೂಡ ಅಸ್ತಿತ್ವದಲ್ಲಿ ಇತ್ತಂತೆ. ಕ್ರೀಡಾ ಸ್ಪರ್ಧೆಗೆ ಬೇಕಾದ ಬಯಲಿನ ನಿರ್ಮಾಣ ಪಾಳುಬಿದ್ದಿದ್ದ ಭೂಮಿಯನ್ನು ಸಮತಟ್ಟು ಮಾಡಿ ಸಿದ್ಧಗೊಳಿಸುವ ಏರ್ಪಾಟಾಗಿತ್ತು. ಕಾಲೇಜು ಕಟ್ಟಡದ ನಿರ್ಮಾಣ ಸಮಯದಲ್ಲಿ ಅನೇಕ ಸರ್ಪಯಾಗವಾಗಿದ್ದರಿಂದ, ಅದನ್ನು ತಡೆಯುವ ದೃಷ್ಟಿಯಿಂದ, ಅಲ್ಲಿ ಅಡಗಿದ್ದ ಸರ್ಪಗಳನ್ನು ಪ್ರಾಣಿಶಾಸ್ತ್ರ ಪ್ರಯೋಗಾಲಯಕ್ಕೆ ನೀಡಲು ಹೋದಾಗ, "ಮಹಾರಾಯರೇ ನಮ್ಮ ವಿಭಾಗದಲ್ಲಿ ವಿದ್ಯಾರ್ಥಿಗಳಿಗೇ ಸರಿಯಾಗಿ ಕೂಡ್ರಲು ಸ್ಥಳವಿಲ್ಲ! ನಿಮ್ಮ ಹಾವುಗಳನ್ನು ಎಲ್ಲಿ ಕೂಡ್ರಿಸಿ ಸಾಕುವುದು? ಅವನ್ನು ಇಲ್ಲಿಯವರೆಗೆ ತರುವ ಹುಚ್ಚು ಸಾಹಸ ಏಕೆ ಮಾಡಿದಿರಿ? ಕಂಡಲ್ಲಿ ಕೊಂದರೆ ಆಗುತ್ತಿರಲಿಲ್ಲವೇ?"ಎಂದರಂತೆ ಸಂಬಂಧ ಪಟ್ಟವರು. ಅಪರೂಪದ ಪ್ರಭೇದಗಳ ದುರ್ಗತಿ ಇದು. (ಪುಟ. ೨೬)

ಈ ಮೇಲಿನ ಪ್ರಸಂಗಕ್ಕೆ ತದ್ವಿರುದ್ಧವಾದ ನಡವಳಿಕೆ ಒಬ್ಬ ಶಾಲಾ ಮಾಸ್ತರದು. ಸಿರ್ಸಿ ಮಾರಿಕಾಂಬ ಶಾಲೆಯ ವಿಜ್ಞಾನ ಶಿಕ್ಷಕರಾಗಿದ್ದ ಮಾಳಪ್ಪ ಪೈ ಮಾಸ್ತರರ ಸಾಹಸ ಮತ್ತು ಆಸಕ್ತಿ ಮೆಚ್ಚುವಂತಹದ್ದು. ಚುನಾವಣಾ ಪ್ರಚಾರಕ್ಕೆ ಹೋಗಿದ್ದ ಸ್ವಯಂ ಸೇವಕರು ಕಾಡಿನ ಬಳಿ ದಾರಿಗೆ ಅಡ್ಡಲಾಗಿ ಹೆಬ್ಬಾವನ್ನು ಕಂಡರಂತೆ. ಸರಿ, ಕಲ್ಲು ಮತ್ತು ದೊಣ್ಣೆಯಿಂದ ಹೆಬ್ಬಾವನ್ನು ಜಜ್ಜಲು ಶುರು ಮಾಡಿದರು. ಅವರೊಂದಿಗೆಯಿದ್ದ ಪೈ ಮಾಸ್ತರರು ಅರೆ ಜೀವದ ಹೆಬ್ಬಾವನ್ನು ಗೋಣಿಚೀಲದಲ್ಲಿ ಎಳೆದು ತಂದು ಎಷ್ಟೋ ಉಪಚರಿಸಿದರೂ ತಂದ ಆನೇ ದಿನಕ್ಕೆ ಅಸು ನೀಗಿತಂತೆ. ಅದನ್ನು ಹಾಗೆಯೇ ಬಿಸುಡದೆ, ಅದರ ಅಂತರಾಳವನ್ನು ಬಗೆದು ಪರೀಕ್ಷಿಸುವ ಆಸೆಯಿಂದ, ಅಂಗ ಪರಿಚ್ಛೇದನಕ್ಕೆ ಬೇಕಾದ ಕತ್ತರಿ, ಚಾಕು, ಚಿಮಟಗಳಿಲ್ಲದಿದ್ದರೂ ತರಕಾರಿ ಹೆಚ್ಚುವ ಚಾಕು, ಬಟ್ಟೆ ಕತ್ತರಿಸುವ ಕತ್ತರಿ, ಕೆಂಡ ತೆಗೆಯುವ ಚಿಮಟಗಳನ್ನೇ ಬಳಸಿ ಮೃತ ಸರ್ಪದ ಅಂಗಛೇದನ ನಡೆಸಿದರಂತೆ. ಅದರ ಉದರದಲ್ಲಿ ಕೆಲವು ವಾರಗಳ ಹಿಂದೆ ನುಂಗಿದ್ದ ಅರೆಬರೆ ಜೀರ್ಣಗೊಂಡ ನರಿಯಿದ್ದದ್ದನ್ನು ವಿವರಿಸಿದ್ದಾರೆ. ಹಾವಿನ ಪ್ರತಿಯೊಂದು ಅಂಗವನ್ನೂ ಗಾಜಿನ ಬೃಹತ್ ಭರಣಿಗಳಲ್ಲಿ ಫಾರ್ಮಲಿನ್ ಹಾಕಿ ಸಂಗ್ರಹಿಸಿ ಪಾಠದ ವಿವರಣೆಗೆ ಬಳಸಿದ್ದರಂತೆ. ಅದರ ಉದರದಲ್ಲಿದ್ದ ನರಿಯ ಅವಶೇಷಗಳನ್ನು ಒಣಗಿಸಿ ಸಂಗ್ರಹಾಲಯದಲ್ಲಿ ಪ್ರದರ್ಶನಕ್ಕಿಟ್ಟಿದ್ದು ವಿದ್ಯಾರ್ಥಿಗಳ ಮೇಲೆ ಶಿಕ್ಷಕರು ಯಾವ ರೀತಿ ಪ್ರಭಾವ ಬೀರಬಲ್ಲರೆಂಬುದನ್ನು ತೋರಿಸುತ್ತದೆ. (ಪುಟ ೪೦-೪೧)

'ಕಾಳಿಂಗ ಸರ್ಪ' (Naga hanna) ಇದಕ್ಕೆ ophiophagus ಎಂಬ ವೈಜ್ಞಾನಿಕ ನಾಮವೂ ಇದೆ. ಎಂದರೆ ophio = ಹಾವು, phagus = ಭಕ್ಷಕ - ಅದೇ ಸರ್ಪ ಭಕ್ಷಕ. ಈ ಗುಣಲಕ್ಷಣವನ್ನು ವಿವರಿಸುವಾಗ ಅದು ತನಗಿಂತಲೂ (ಭಾರಿ) ಗಾತ್ರದ ಹೆಬ್ಬಾವನ್ನು ನುಂಗಿ ಒದ್ದಾಡುವ ಪ್ರಸಂಗ, ಕಚ್ಚಿ ಸಾಯಿಸಿ ನಂತರ ಸಂಪೂರ್ಣ ನುಂಗಲಾರದೆ ಉಗುಳಿದ ವರ್ಣನೆ ಸ್ವಾರಸ್ಯಕರವಾಗಿದೆ. ಹಾವುಗಳಲ್ಲಿ ಇದೊಂದೇ ಪ್ರಭೇದ. ಗೂಡುಕಟ್ಟಿ ಮೊಟ್ಟೆಗಳನ್ನು ಕಾಪಾಡುವುದು. ಇದನ್ನು ಕುತೂಹಲಕರವಾಗಿ ವಿವರಿಸಿದ್ದಾರೆ.

ಇತರೇ ಜೀವಿಗಳಂತೆ ಹಾವುಗಳನ್ನೂ ಸಾಕಬಹುದೆಂಬ ವರ್ಣನೆ ಓದುಗರನ್ನು ಸರ್ಪ ಭಯದಿಂದ ಮುಕ್ತಿಗೊಳಿಸಿ ಅವುಗಳ ಬಗೆಗೆ ಆಕರ್ಷಿತರನ್ನಾಗಿ ಮಾಡುವಂತಾಗಿದೆ.

ವಿಷಯದ ಮೇಲಿನ ಪ್ರಭುತ್ವ ಮತ್ತು ವಿಶಿಷ್ಟ ಶೈಲಿಯಿಂದ ಓದುಗರನ್ನು ಸೆರೆಹಿಡಿಯಬಲ್ಲ ಡಾ॥ ಕೃಷ್ಣಾನಂದ ಕಾಮತರು ವಿಧಿವಶರಾಗಿದ್ದು ವಿಜ್ಞಾನ ಸಾಹಿತ್ಯಕ್ಕಾಗಿರುವ ಕೊಡಲಿಪೆಟ್ಟು. ಈಗ ಕೋಲು ಮುರಿದಿದೆ ಆದರೆ 'ಸರ್ಪಸಂಕುಲ' ವಿಜ್ಞಾನ ಸಾಹಿತ್ಯದಲ್ಲಿ ಅಮರವಾಗಿದೆ.

ತನುವೆಂಬ ಹುತ್ತದಲಿ ಎಂದರೆ ಪರಿಸರದಲ್ಲಿ, ಮನವೆಂಬ ಸರ್ಪ ಹೆಡೆಯನುದುಗಿಕೊಂಡಿರಲು, ಮಾನವನ ಜ್ಞಾನ ಶಕ್ತಿಯೇ ಚಿಂತನ-ಮಂಥನಕ್ಕೊಳಗಾದಾಗ, ಈ ಜಗತ್ತು ಎಲ್ಲಾ ಜೀವಿಗಳಿಗೂ ಜೀವಿಸಲು ಯೋಗ್ಯವಾಗಬಲ್ಲದೆಂಬ ತತ್ವ ಇಲ್ಲಿ ಅಡಗಿದೆ.



# ಡಾ॥ ಕೃಷ್ಣಾನಂದ ಕಾಮತರ ವೈಜ್ಞಾನಿಕ ಸಾಹಿತ್ಯ

**ಎಂ. ವಿ. ವಸಂತಕುಮಾರಿ**

ವೈಜ್ಞಾನಿಕ ಲೇಖನಗಳನ್ನು ನಿಖರವಾಗಿ, ಸಮರ್ಥವಾಗಿ ಬರೆಯಬಲ್ಲ ಅನೇಕ ಲೇಖಕರು ಇರಬಹುದು. ಉತ್ಕೃಷ್ಟವಾದ, ರೋಚಕವಾದ ಕಥೆ ಕಾದಂಬರಿಗಳನ್ನು ಬರೆಯಬಲ್ಲ ಸಾವಿರಾರು ಲೇಖಕರು ಇದ್ದಾರೆ. ಆದರೆ ವೈಜ್ಞಾನಿಕ ಲೇಖನಗಳನ್ನು ಕಥೆ ಕಾದಂಬರಿಗಳಷ್ಟೇ ರೋಚಕವಾಗಿ, ವಿಜ್ಞಾನದ ಗಂಧಗಾಳಿ ಇಲ್ಲದವರಿಂದಲೂ ಹಿಡಿದ ಮೆಟ್ಟಿನಲ್ಲೇ ಕೊನೆಯವರೆಗೂ ಓದಿಸಿಕೊಳ್ಳುವಂತೆ ಬರೆಯಬಲ್ಲವರು ಕೇವಲ ಬೆರಳೆಣಿಕೆಯಷ್ಟು ಲೇಖಕರು. ಡಾ. ಕೃಷ್ಣಾನಂದ ಕಾಮತರು ಇಂತಹ ಲೇಖಕರಲ್ಲಿ ಒಬ್ಬರು. ಕಾಮತರು ತಮ್ಮನ್ನು ತಾವೇ ಹೆಸರಿಸಿಕೊಂಡಂತೆ "ಕೀಟ ಪಂಡಿತರು". ಕೀಟಶಾಸ್ತ್ರ ಅವರ ವಿಶೇಷ ಅಧ್ಯಯನದ ವಿಷಯ. ಅದು ಅವರಿಗೆ ಡಾಕ್ಟರೇಟ್ ಪದವಿಗಳಿಸಿಕೊಟ್ಟದ್ದೂ ಹೌದು. ಕಾಮತರ ವೈಶಿಷ್ಟ್ಯವೆಂದರೆ ಕೇವಲ ಪದವಿ ಗಳಿಕೆಗೆ ತೃಪ್ತಿಪಟ್ಟುಕೊಳ್ಳದೆ, ಸ್ವಂತವಾಗಿ ಕೀಟಗಳನ್ನು ಸಾಕಿ, ಅವುಗಳನ್ನು ಬೆಂಬತ್ತಿಹೋಗಿ, ಅವುಗಳಿಂದ ಕಚ್ಚಿಸಿಕೊಂಡು, ಅವುಗಳ ಬದುಕಿನ ವಿಸ್ಮಯಗಳನ್ನು ಎಡೆಬಿಡದೆ ಅಭ್ಯಸಿಸಿ, ಕ್ಲಿಕ್ಕಿಸಿ, ದಾಖಲಿಸಿ, ಸರಸ ಬರಹಗಳಲ್ಲಿ ಜನಸಾಮಾನ್ಯರಿಗೂ ತಿಳಿಯುವಂತೆ ನಿರೂಪಿಸಿದ್ದು. ಕಾಮತರ ಆಸಕ್ತಿ ಕೇವಲ ಕೀಟಗಳಿಗಷ್ಟೇ ಸೀಮಿತವಲ್ಲ ಎಂಬುದು ಇನ್ನೊಂದು ವಿಶೇಷ. ಪ್ರಾಣಿ, ಪಕ್ಷಿ, ಸಸ್ಯ, ಅರಣ್ಯ, ಪರಿಸರ–ಅಷ್ಟೇಕೆ ಸಮಸ್ತ ಜೀವರಾಶಿ, ಅದನ್ನು ಆಧರಿಸಿರುವ ನಿಸರ್ಗದ ಎಲ್ಲ ಆಗುಹೋಗುಗಳೂ ಅವರ ಅಧ್ಯಯನದ ತೆಕ್ಕೆಯಲ್ಲಿ ಸಿಲುಕಿವೆ. ನಿಸರ್ಗದೊಂದಿಗೆ ಮಾನವನಿಗೆ ಅವಿನಾ ಸಂಬಂಧವಿದ್ದರೂ, ಅದನ್ನು ಕಡೆಗಣಿಸುತ್ತಿರುವ ಮಾನವ, ನಿಸರ್ಗದ ಬಗ್ಗೆ ಅವನು ತೋರುತ್ತಿರುವ ಅನಾದರ, ಕ್ರೌರ್ಯ, ತನ್ನ ಸೌಕರ್ಯಕ್ಕಾಗಿ ಮಾನವ ತಾನೇ ಕಟ್ಟಿಕೊಂಡ ಸಮಾಜ, ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗಳ ಅವ್ಯವಸ್ಥೆ, ಭಾರತದ ಸಮಕಾಲೀನ ಸಮಸ್ಯೆಗಳು –ಹೀಗೆ ಹತ್ತು ಹಲವು ವಿಷಯಗಳು ಹಾಸ್ಯ ಲೇಪವಿದ್ದರೂ ಮೊನಚಾದ ಅವರ ವಿಮರ್ಶೆಯ ಕ್ಷ-ಕಿರಣದ ಪರಿಧಿಯಲ್ಲಿ ಬರುತ್ತವೆ. ಘನಘೋರ ಯುದ್ಧದಲ್ಲಿ ಸೆರೆ ಸಿಕ್ಕಿದ ಇರುವೆಗಳನ್ನು ಕರಿ ಇರುವೆಗಳು ಗೃಹಕೃತ್ಯಕ್ಕೆ ಬಳಸಿಕೊಂಡರೂ, ಅವುಗಳನ್ನು ಎಂತಹ ಸಮಾನ ದೃಷ್ಟಿಯಿಂದ ನೋಡುತ್ತವೆ ಎಂದು ವಿವರಿಸುವಾಗ, ಸೇವಕ ವರ್ಗವನ್ನು ಹೇಗೆ ನಡೆಯಿಸಿಕೊಳ್ಳಬೇಕು? ಎಂಬುದನ್ನು ಮಾನವ, ಇರುವೆಗಳಿಂದ ಕಲಿಯಬೇಕು ಎನ್ನುತ್ತಾರೆ. ತಮ್ಮ ರಾಣಿಗೆ ಸೇವೆ ಸಲ್ಲಿಸಲು ಆತ್ಮ ಬಲಿದಾನ ಮಾಡುವ ಇರುವೆಗಳನ್ನು ನೋಡಿದಾಗ, 'ತ್ಯಾಗಿ' ಗಳೆಂದು ಕರೆದುಕೊಳ್ಳುವ 'ಪುಢಾರಿ' ಗಳ ಬಗ್ಗೆ ಒಂದು ಚಟಾಕಿ ಹಾರಿಸುತ್ತಾರೆ. ಬಂಗಾಲದಲ್ಲಿ ಕೆಲವುಕಾಲ ಕೆಲಸ ಮಾಡುತ್ತಿದ್ದ ಕಾಮತರಿಗೆ, ಅಲ್ಲಿನ ನಿರಂತರ ಸಂಪು, ಹರತಾಳ ಚಳುವಳಿಗಳಿಂದಾಗುವ ದುರವಸ್ಥೆಯ ನೆನಪು ಸದಾ ಕಾಡುತ್ತದೆ, ಹಾಗಾಗಿ ಒಂದು ದಿನವೂ ಸಂಪು ಹೂಡದೆ ನಗರ ನಿರ್ಮಲೀಕರಣ ಮಾಡುವ ಕಾಗೆ ಅವರ ಪ್ರಶಂಸೆಗಳಿಸಿದೆ. ಅರಣ್ಯ ಸಂರಕ್ಷಣೆ ಭಾರತದಲ್ಲಿ ಅರಣ್ಯರೋದನವಾಗಿರುವುದು ಅವರ ಪರಿಸರ ಕಾಳಜಿಯ ಲೇಖನಗಳಲ್ಲಿ ಮುಖ್ಯವಾಗಿ ಕಾಣುವ ವಿಷಯ, ನಮಗೆ ಬೇಡವಾದ ವಿಚಾರಗಳಲ್ಲಿ ಪಾಶ್ಚಾತ್ಯರನ್ನು ಅನುಕರಿಸುವ ನಾವು ಅವರು ಅರಣ್ಯಗಳನ್ನು ಬೆಳೆಸುವುದನ್ನು ಮಾತ್ರ ಅನುಕರಿಸದೇ, ಇದ್ದ ಅರಣ್ಯವನ್ನೂ ಲೂಟಿ ಮಾಡುವುದರ ಬಗ್ಗೆ ಅತ್ಯಂತ ಕಳಕಳಿಯಿಂದ ಬರೆಯುತ್ತಾರೆ.

ಸಾಹಿತ್ಯ, ಕಲೆ, ಶಿಲ್ಪಗಳೂ ಕಾಮತರು ಆಳವಾಗಿ ಅಭ್ಯಾಸ ಮಾಡಿದ ವಿಷಯಗಳು. ಕ್ಯಾಮರಾ ಅವರ ಪತ್ನಿಯಷ್ಟೇ ಪ್ರಿಯವಾದ ಜೀವನ ಸಂಗಾತಿ. ಅವರ ಪತ್ನಿ ಹೊಸ ಹೊಸ ಆಭರಣಗಳನ್ನು ಬಯಸುವವರಲ್ಲ, ಆದರೆ ಅವರ ಹದಿನಾರು ಕ್ಯಾಮರಾಗಳು ಬಯಸುವ ಅತ್ಯಾಧುನಿಕ ಉಪಕರಣಗಳಿಗೆ ಲೆಕ್ಕವಿಲ್ಲ. ಅವರ ಛಾಯಚಿತ್ರಗಳು, ವರ್ಣ ಮತ್ತು ರೇಖಾಚಿತ್ರಗಳು ಅವರ ವೈಜ್ಞಾನಿಕ ಅಧ್ಯಯನದ ಸಾಧನವಷ್ಟೇ ಆಗಿ ಉಳಿಯುವುದಿಲ್ಲ. ಅವುಗಳು ಅವರ ಕಲಾಭಿವ್ಯಕ್ತಿಯ ಮಾಧ್ಯಮವೂ ಹೌದು. ಅವೆಲ್ಲವೂ ಅವರ ಮತ್ತು ಅವರ ಇತಿಹಾಸ ಸಂಶೋಧಕಿ ಪತ್ನಿಯ ಪುಸ್ತಕಗಳ ವಿಷಯ ಮಂಡನೆಗೆ ಗಟ್ಟಿ ನೆಲಗಟ್ಟನ್ನು ಒದಗಿಸುತ್ತವೆ; ಪುಸ್ತಕಗಳ ಅಂದವನ್ನೂ ಹೆಚ್ಚಿಸುತ್ತವೆ. ಕಾಮತರ 'ಪ್ರಾಣಿ ಪರಿಸರ' ಪುಸ್ತಕ ಇದಕ್ಕೊಂದು ಉತ್ತಮ ನಿದರ್ಶನ. ಕಾಮತರ ಪತ್ನಿಯ ರೇಷ್ಮೆ ಸೀರೆಗಳು ವಿಶ್ವದಲ್ಲೇ ಬೇರೆಲ್ಲೂ ಸಿಗದಂಥವು. ಏಕೆಂದರೆ ಅವುಗಳ ಒಡಲು, ಸೆರಗು, ಅಂಚುಗಳನ್ನು ಅಲಂಕರಿಸಿರುವುದು ಕಾಮತರ ವಿಶಿಷ್ಟ ವರ್ಣ ಹಾಗೂ ರೇಖಾ ಚಿತ್ರಗಳು. ಆ ಚಿತ್ರಗಳೂ ಅಪೂರ್ವವಾದುವೇ. ಲೇಪಾಕ್ಷಿಯೋ ಮತ್ಯಾವುದೋ ದೇವಾಲಯ ಅಥವಾ ಐತಿಹಾಸಿಕ ಸ್ಮಾರಕಗಳಲ್ಲಿ ಹುದುಗಿರುವ, ಸಾಮಾನ್ಯ ಪ್ರವಾಸಿಗರ ಕಣ್ಣಿಗೆ ಕಾಣದ, ಕಾಮತರ ಕ್ಯಾಮರಾ ಕಣ್ಣಿಗೆ ಮಾತ್ರ ಸೆರೆಸಿಕ್ಕಿದ ಸುಂದರ ಶಿಲ್ಪಗಳನ್ನು ಪಡಿಮೂಡಿಸಿದ ಚಿತ್ರಗಳು ಅವು. ಕೃಷ್ಣಾನಂದ ಕಾಮತರ ಬಹುಮುಖ ಆಸಕ್ತಿ, ವ್ಯಕ್ತಿತ್ವಗಳು ಅವರ ಬರವಣಿಗೆಯಲ್ಲಿ ಪೂರ್ಣವಾಗಿ ಪ್ರತಿಬಿಂಬಿತವಾಗಿವೆ.

ನೆನೆದವರೇ ಕಣ್ಮನಗಳನ್ನು ಸೂರೆಗೊಳ್ಳುವ ಸುಂದರ ಪಾತರಗಿತ್ತಿಗಳಿಂದ ಹಿಡಿದು, ನೆನೆದರೆ ಹೇಸಿಗೆ ಬರಿಸುವ ಜೊಂಡಿಗನ (ಜಿರಳೆಯ)ವರೆಗೆ ಕೀಟ ಜಗತ್ತಿನ ವೈವಿಧ್ಯವನ್ನು ತೆರದಿಡುವ 'ಕೀಟ ಜಗತ್ತು' ಕಿರು ಹೊತ್ತಿಗೆಯನ್ನು ಓದಿ ಮುಗಿಸುವ ಹೊತ್ತಿಗೆ ಜೊಂಡಿಗವೂ ಆತ್ಮೀಯವಾಗದಿದ್ದರೂ ಸ್ವಲ್ಪ ಸಹಾನುಭೂತಿಯನ್ನಾದರೂ ಗಳಿಸಿಕೊಳ್ಳುತ್ತದೆ. ಅದಕ್ಕೆ ಕಾರಣ ಕಾಮತರ ನಿರೂಪಣೆಯಲ್ಲಿ ಕೀಟಗಳು ಕೇವಲ ಕೀಟಗಳಾಗಿ ಉಳಿಯದೆ, ಸ್ವತಂತ್ರ ವ್ಯಕ್ತಿತ್ವವನ್ನು ಪಡೆಯುತ್ತವೆ. ಅವುಗಳ ಪ್ರಣಯ, ಸಹಜೀವನ, ಸರಸ-ವಿರಸ, ಯುದ್ಧ, ಮಾನವ ಲೋಕದ ಇಂತಹವೇ ಸನ್ನಿವೇಶಗಳನ್ನು ನೆನಪಿಗೆ ತರುತ್ತವೆ. ಆದರೆ ಅವು ಇನ್ನೂ ಹೆಚ್ಚು ರೋಚಕ. ವಿಸ್ಮಯಕಾರಕ ಕೀಟಲೋಕದ ನಾಗರೀಕತೆ, ಸಾಮಾಜಿಕ ವ್ಯವಸ್ಥೆ, ಮಾನವ ಲೋಕದ ವ್ಯವಸ್ಥೆಗಿಂತ ಉನ್ನತ ಮಟ್ಟದ್ದಲ್ಲವೇ ಎಂದೆನಿಸುತ್ತದೆ.

ವೈಜ್ಞಾನಿಕ ತಥ್ಯಗಳು ಕಾಮತರ ನಿರೂಪಣೆಯಲ್ಲಿ ಒಣ ದತ್ತಾಂಶಗಳಾಗಿ ನಿಲ್ಲುವುದಿಲ್ಲ. ಒಂದು ಚೌರಸ ಇಂಚಿನಲ್ಲಿ ಹತ್ತು ಸಾವಿರ ಅಮೀಬಗಳು ಸಭೆ ಮಾಡಬಹುದು ಎಂದರೆ, ಅಮೀಬದ ಗಾತ್ರದ ಕಲ್ಪನೆ ಬರುವುದರ ಜೊತೆಗೇ ಅವು 'ಸಭೆ' ಮಾಡುವುದು ಎನ್ನುವ ಕಲ್ಪನೆಯೇ ರೋಚಕವಾಗುತ್ತದೆ. ಕೀಟಗಳ ಪ್ರಣಯ, ರಮ್ಯತೆಯ ಮುಂದೆ ಮಾನವನ ಪ್ರಣಯ ಪ್ರಸಂಗಗಳು ತೀರ ಸಪ್ಪೆ ಎನಿಸಿಬಿಡುತ್ತವೆ. ಗರ್ಭವತಿ ಕನ್ಯೆಯನ್ನು ವಧುವಾಗಿ ಸ್ವೀಕರಿಸಲು ಮಾನವ ವರ ಒಪ್ಪುವುದೇ ಇಲ್ಲ. ಆದರೆ ಗರ್ಭವತಿ ಕೀಟಕನ್ಯೆಯನ್ನೇ ಅರಸುವ ಕೀಟವರಗಳುಂಟು. ಕೀಟ ಲೋಕದಲ್ಲಿ ಹೆಣ್ಣಿಗೆ ಹೆಣ್ಣುತನವಿದ್ದರೆ ಸಾಕು. ಆದರೆ ಅದು ಗಂಡಿನಿಂದ ಮಾತ್ರ "ವಯ್ಯಾರದ ಕೊಡುಗೆ"ಗಳನ್ನಪೇಕ್ಷಿಸುತ್ತದೆ. ಗಂಡುಜೊಂಡಿಗ ವೀಣೆಯ ತಂತಿಯಂತೆ ಮಿಡಿದು ದೇಹವನ್ನು ನೆಲಕ್ಕೆ ಬಡಿದು ನಾದಹೊರಡಿಸಿ, 'ಸುಮುಹೂರ್ತೇಸಾವಧಾನ' ಎನ್ನುತ್ತದೆ. ಗಂಡನ ರುಂಡವನ್ನೇ ಭಕ್ಷಿಸಿ, ಅನಂತರ ರುಂಡರಹಿತ ಗಂಡನೊಂದಿಗೆ ಕೂಡುವ ಶಿವನ ಕುದುರೆ, ವಿಧವೆಯಾದ ಹೊರತು ತಾಯಾಗದ 'ವಿಧವಾ ಜೇಡ', ರೇಶಿಮೆ ದಾರದ ಮೇಲೆ ತತ್ತಿಗಳನ್ನು ತೂಗುಹಾಕುವ ಇರುವೆ ಸಿಂಹ, ಗಂಡಿನ ಸಂಪರ್ಕವಿಲ್ಲದೆಯೂ ಸಂತತಿಯನ್ನು ಪಡೆಯಬಲ್ಲ ಎಫಿಡ್‌ಗಳು, ಮಂದ ಮಾರುತ ಬೀಸಿದಾಗ ತೂಗುತ್ತಾ, ಹೂಮಂಚದ ಮೇಲೆ ವಿರಾಜಿಸುತ್ತಾ ಸಂತತಿ ನಿರ್ಮಾಣ ಮಾಡುವ ಸಸ್ಯ ತಗಣೆ, ಒಟ್ಟಿಗೆ ಇನ್ನೂರು ಮುನ್ನೂರು ತತ್ತಿಗಳನ್ನಿಟ್ಟು 'ನಿರೋಧ್' ಬಯಸದೆ ಸಂತತಿ ನಿರೋಧ ಮಾಡುವ ಔಡಲ ರೇಶಿಮೆ ಪತಂಗ, ಅಲ್ಪ ವೇಳೆಯಲ್ಲಿ ದೊಡ್ಡ ಸೈನ್ಯ ನಿರ್ಮಿಸಿ, ವಿಜಯ ಪತಾಕೆಯನ್ನು ಹಾರಿಸುವ 'ಪೀಡಾದೇವರು' ತಗಣೆ, ಗೃಹಿಣಿಯ ಆಜನ್ಮ ವೈರಿ 'ಪುಟ್ಟದೆವ್ವ' ಧಾನ್ಯಕೀಟ, ತಮ್ಮ ಪಕ್ಕಗಳನ್ನು ಕೈಮುಗಿಯುವಂತೆ ಜೋಡಿಸುವ ಹಗಲಿನ 'ಸೂರ್ಯವಂಶಿ' ಪಾತರಗಿತ್ತಿ, ಪಕ್ಕಗಳನ್ನು ವಿಮಾನದ ರೆಕ್ಕೆಗಳಂತೆ ಪಸರಿಸುವ 'ಜಟ್ಟಿ' 'ಜಡಭರತ', 'ನಿಶಾಚರಿ' ಚಿಟ್ಟೆ, ಡಾಕ್ಟರು ಮದ್ದನ್ನು ಇಂಜಕ್ಷನ್ ಟ್ಯೂಬಿನಲ್ಲಿ ಹೀರಿಕೊಳ್ಳುವಂತೆ, ಕೊಳವೆ ಬಾಯಿಂದ ರಸಹೀರುವ ಪತಂಗ, ಹರಟೆಯಲ್ಲಿ ತೊಡಗಿದಾಗ ಹೆಣ್ಣಾಗಿ, ಕಾದಾಟದಲ್ಲಿ ತೊಡಗಿದಾಗ ಗಂಡಾಗುವ ಲಿಂಗಭೇದರಹಿತ ಅಮೀಬ, ಪುರಿ ಜಗನ್ನಾಥನ ರಥವನ್ನು ಭಕ್ತರು ಎಳೆಯುವಂತೆ, ಸತ್ತ ಜೊಂಡಿಗನ ಮೀಸೆಗಳನ್ನು ಕಚ್ಚಿಹಿಡಿದು ಎಳೆಯುವ ಇರುವೆಗಳು, ಒಂದು ಕೀಟದ ಮೊಟ್ಟೆಯಲ್ಲೇ ತಮ್ಮ ತತ್ತಿಯನ್ನೂ ಇಟ್ಟುಬಿಡುವ ಪರಪುಟ್ಟ ಕೀಟಗಳು, ಹೂವು ಹಣ್ಣುಗಳೊಂದಿಗೆ ವಿದೇಶ ಯಾತ್ರೆ ಕೈಗೊಳ್ಳುವ 'ವಿಶ್ವಕುಟುಂಬಿ' ಕೀಟಗಳು- ಒಂದೇ ಎರಡೇ!? ಕೀಟಲೋಕದ ವಿಸ್ಮಯಗಳು ಕಾಮತರ ನಿರೂಪಣೆಯಲ್ಲಿ ಮರೆಯಲಾಗದಂತೆ ಕಣ್ಣಿಗೆ ಕಟ್ಟುತ್ತವೆ.

ಮೀಸೆ ಮಾನವ ಲೋಕದಲ್ಲಿ ಪುರುಷನ ಪೌರುಷದ, ಸೌಂದರ್ಯದ ಸಂಕೇತ. ಅಪರೂಪಕ್ಕೆ ಹೆಣ್ಣಿಗೂ ಮೀಸೆ ಮೂಡಿದರೆ ನಗೆ ಪಾಟಲು. ಆದರೆ ಕೀಟಲೋಕದಲ್ಲಿ ಮೀಸೆ ಬಹುಮುಖ್ಯ ಸಂಪರ್ಕಸಾಧನ. ಹಾಗಾಗಿ ಗಂಡು ಹೆಣ್ಣು ಎರಡೂ ಮೀಸೆ ಹೊತ್ತಿರುತ್ತವೆ. ಈ ಒಂದು ವೈಜ್ಞಾನಿಕ ಸತ್ಯವನ್ನು ಆಧರಿಸಿ ಹೆಣೆದಿರುವ 'ಮೀಸೆ ಮಂಡೋದರಿಯರು', ಮುಗ್ಧ ಮನೋರಮೆಯರ ಸಂವಾದವನ್ನು ನೆನಪಿಗೆ ತರುವ 'ಕೀಟಕನ್ಯೆಯರು' ಅಧ್ಯಾಯಗಳು ಕಾಮತರ ಶಿಳಿಹಾಸ್ಯಕ್ಕೆ ಉತ್ಕೃಷ್ಟ ಮಾದರಿ. 'ಷಟ್ಪಾದಿಗಳ ಸಂಗೀತ' ಅಧ್ಯಾಯ ಕೀಟಗಳ ನಾದ ವೈವಿಧ್ಯದ ಲೋಕವನ್ನೇ ತೆರೆದಿಡುತ್ತವೆ. ಗಾಯನದಲ್ಲಿ ವಿಶ್ವಾಸವಿಡದ, ವಾದ್ಯ ನುಡಿಸುವುದನ್ನೇ ಧ್ಯೇಯ ಮಾಡಿಕೊಂಡ ಕೀಟಗಳ ದೇಹವೇ ವಾದ್ಯ. ತಂಬೂರಿ ಮೀಟಿದಂತೆ, ಪಿಟೀಲು ನುಡಿಸಿದಂತೆ, ಬಾಚಣಿಗೆಯ ಹಲ್ಲುಗಳ ಮೇಲೆ ಹೆಬ್ಬೆರಳು ಓಡಿಸಿದಂತೆ, ಜೈಲೋಫೋನ್ ಬಾರಿಸಿದಂತೆ, ಮೃದಂಗದ ಮೇಲೆ ಕೈ ಓಡಿಸಿದಂತೆ, ಕಹಳೆ ಊದಿದಂತೆ, ನಗಾರಿ ಗುಡುಗಿಸಿದಂತೆಲ್ಲ ಕೀಟಗಳು ಸಂಗೀತವನ್ನು ಹೊರಡಿಸಬಲ್ಲವಂತೆ.

ಕೇಕಯದ ಅಶ್ವಪತಿ ರಾಜನಿಗೆ ಇರುವೆಗಳ ಭಾಷೆ ತಿಳಿದಿತ್ತಂತೆ. ಈ ಒಂದು ಎಳೆಯನ್ನು ಹಿಡಿದು ಮಾಸ್ತಿಯವರು ಒಂದು ಸುಂದರ ಕಥೆ ಕಟ್ಟಿದ್ದಾರೆ. ಕಾಮತರು ಇರುವೆಯ ಸಾಮ್ರಾಜ್ಯದ ಸಕಲ ವಿಸ್ಮಯಗಳನ್ನು ಬಿಂಬಿಸಲು 'ಇರುವೆಯ ಇರವು' ಎಂಬ ಪುಸ್ತಕವನ್ನೇ ಮೀಸಲಿಟ್ಟಿದ್ದಾರೆ. ಪ್ರಾಣಿಜಗತ್ತಿನಲ್ಲಿ ಮಾನವನನ್ನು ಹಿಂದೆ ಹಾಕುವ, ಸಂಘಟಿತ ಜೀವನವನ್ನು ನಡೆಸುವ ಅಲ್ಪ ಜೀವಿ ಇರುವೆ, ಅವರ ವಿಶೇಷ ಅಧ್ಯಯನದ ವಸ್ತು. ಇರುವೆಗಳ ಬಾಳಿನ ಒಳಗುಟ್ಟುಗಳನ್ನು ಅರಿಯಲು 'ಪಿಪೀಲಿಕಾ ಆಲಯ'ವನ್ನು ಸ್ಥಾಪಿಸಿ, ಅವುಗಳನ್ನು

ಪ್ರೋಷಿಸಿದ್ದಾರೆ. ನಿರಂತರವಾಗಿ ಅವುಗಳನ್ನು ಬೆಂಬತ್ತಿ, ಕಟ್ಟಿಸಿಕೊಂಡು ಹಗಲು ರಾತ್ರಿ ಎನ್ನದೇ, ಮನೆಯೊಳಗೆ, ಹೊರಗೆ, ಮರಗಳ ಬುಡದಲ್ಲಿ, ಹುತ್ತಗಳಲ್ಲಿ ಅವುಗಳ ಚಲನವಲನವನ್ನೆಲ್ಲ ವೀಕ್ಷಿಸಿ, ಅವುಗಳ ಭಾಷೆಯನ್ನು ಅರ್ಥೈಸಿ ವಿವರಿಸುತ್ತಾರೆ. ಬದುಕಿದೀ ತತ್ತಿಗಳನ್ನಿಡುವುದನ್ನು ಬಿಟ್ಟರೆ ಬೇರೆ ಉದ್ಯೋಗ ಮಾಡದ ಒಂದೇ ಒಂದು ರಾಣಿಯ ಯೋಗಕ್ಷೇಮಕ್ಕಾಗಿ ದುಡಿಯುವ ಸಾವಿರಾರು ಇರುವೆಗಳ 'ಮಲಿಯಾಳಿ ಪ್ರಮೀಳಾ ರಾಜ್ಯ'ದ ಒಂದೊಂದು ಮಜಲನ್ನೂ ವಿವರವಾಗಿ ತೆರೆದಿಡುತ್ತಾರೆ. ಸೂಕ್ಷ್ಮದರ್ಶಕದಲ್ಲಿ ಸುರಸುಂದರಿ'ಯಾಗಿ ಕಂಡ ಇರುವೆಯ ಅಂಗಾಂಗಗಳ ಸೌಂದರ್ಯವನ್ನು ಒಬ್ಬ ಅಪ್ಸರೆಯ ಸೌಂದರ್ಯವೋ ಎನ್ನುವಂತೆ ವರ್ಣಿಸುತ್ತಾರೆ. 'ಅಲಂಕಾರಪ್ರಿಯ' ಇರುವೆ 'ಶುಚಿರ್ಭೂತ'ಳಾಗುವ ಕಲಾಪ ಯಾವ ರಾಜಕುಮಾರಿಯ ಸ್ನಾನ ಪ್ರಸಾಧನ ಕಲಾಪಕ್ಕೂ ಕಡಿಮೆ ಇಲ್ಲ. 'ಮದುವೆ ದಿಬ್ಬಣ' ಹೊರಟಂತೆ ಇರುವೆಗಳು ಪಯಣ ಹೊರಡುತ್ತವೆ. 'ಭಕ್ತರು ತಿರುಮಲ ಗುಡ್ಡವನ್ನು ಏರುವಂತೆ ಮಣ್ಣ ದಿಬ್ಬವನ್ನು ಏರುತ್ತವೆ. 'ಪಾಡೇಕಾರ' ತೆಂಗಿನ ಮರ ಏರುವಂತೆ ಹುಲ್ಲನ್ನು ಏರಿ ಕಾಳನ್ನು  ಸಂಗ್ರಹಿಸುತ್ತವೆ. 'ಸಾರ್ವಜನಿಕ ಸ್ಥಳದಲ್ಲಿ ಬಹಿರಂಗವಾಗಿ ಚುಂಬಿಸಲು ತಾವಾಗಿ ಹಕ್ಕನ್ನು ಗಳಿಸಿದ ಧೀರಜನಾಂಗ ಇರುವೆಗಳು. 'ಇರುವೆ ಇಂಜಿನಿಯರು'ಗಳ ಗೃಹ ಮತ್ತು ನಗರ ನಿರ್ಮಾಣ ಕೌಶಲ, ಗೂಡಿನ ರಕ್ಷಣಾ ವ್ಯವಸ್ಥೆ, ಹೊಟ್ಟೆಯಲ್ಲಿ ಆಹಾರ ಸಂಗ್ರಹ ಮಾಡಿದ್ದೂ ಅದನ್ನು ತಾವೇ ಉಪಯೋಗಿಸಿಕೊಳ್ಳದೆ, ಎಲ್ಲರಿಗೂ ಹಂಚುವ ತ್ಯಾಗ ಮನೋಭಾವ, ಸೈನಿಕರ ಶಿಸ್ತು, 'ಶುಚಿತ್ವದ' ಗೀಳು – ಇವೆಲ್ಲವೂ ಕಾಮತರ ನಿರೂಪಣೆಯಲ್ಲಿ ಸ್ವಾರಸ್ಯ ಪೂರ್ಣವಾಗಿ ತೆರೆದುಕೊಳ್ಳುತ್ತವೆ. ಓದುಗನಿಗೆ, ಮಾನವನು ಇರುವೆಗಳಿಂದ ಕಲಿಯಬೇಕಾದ್ದು ಬೇಕಾದಷ್ಟಿದೆ ಎನ್ನಿಸುತ್ತದೆ. ಆದರೂ ತಲೆಗೆ ಎಣ್ಣೆ ಹಾಕಿ ಮಲಗಿಸಿದ ಮಗುವಿನ ತಲೆಯ ಚರ್ಮವನ್ನೇ ಕಿತ್ತು ತಿನ್ನಲೆತ್ನಿಸುವ ಇರುವೆಯನ್ನು ನೋಡಿ, ಹಿರಿಯರ ಉಪದೇಶದಂತೆ ಇರುವೆಯ ಹಾಗೆ ದುಡಿಯಲು ಕಲಿತರೂ ಇರುವೆಯಂತಹ ಉಪದ್ರವಿ ಪ್ರಾಣಿಯಾಗಿ ಮಾತ್ರ ಬಾಳಬಾರದು ಎಂದು ಎಚ್ಚರಿಸುತ್ತಾರೆ.

'ಕಾಗೆ ಕಾಮತ್' ಎಂಬ ಬಿರುದನ್ನು ಕೃಷ್ಣಾನಂದ ಕಾಮತರಿಗೆ ದೊರಕಿಸಿಕೊಟ್ಟ ಕಾಗೆಯಷ್ಟು, ಮಾನವನ ತಾತ್ಸಾರಕ್ಕೊಳಗಾದ ಪಕ್ಷಿ, ಬೇರೊಂದಿಲ್ಲ. ಕರೆದಾಗ ಕಾಗೆ ಬರದಿದ್ದರೆ ಪರಿತಪಿಸುವುದು ಕೇವಲ ಶ್ರಾದ್ಧದ ದಿನ ಮಾತ್ರ. ಅಂತಹ ಕಾಗೆಗೆ ವಿಶ್ವಮಾನ್ಯತೆ ದೊರಕಿಸಿಕೊಟ್ಟವರು ಪ್ರಸಿದ್ಧ ವ್ಯಂಗ್ಯ ಚಿತ್ರಕಾರ ಆರ್. ಕೆ. ಲಕ್ಷ್ಮಣ್ ಅವರು ಒಬ್ಬರು. ತಮ್ಮ ಬರಹ ಛಾಯಾಚಿತ್ರ, ರೇಖಾಚಿತ್ರಗಳಲ್ಲಿ ಕಾಗೆಯ ಜೀವನದ ಚಮತ್ಕಾರಗಳನ್ನು ಸ್ವಾನುಭವದಿಂದ ಕಂಡು, ಪ್ರಚುರ ಪಡಿಸಿರುವ ಕೃಷ್ಣಾನಂದ ಕಾಮತರು ಇನ್ನೊಬ್ಬರು.

ಪ್ರಾಣಿ, ಪಕ್ಷಿಗಳು ಹೇಗೆಲ್ಲಾ ಕೂಗುತ್ತವೆ ಎಂದು ಮಕ್ಕಳಿಗೆ ಹೇಳಿಕೊಡುವಾಗ ಕಾಗೆ 'ಕಾ ಕಾ' ಎನ್ನುತ್ತದೆ ಎಂದಷ್ಟೇ ಹೇಳಿಕೊಡುತ್ತೇವೆ. ಆದರೆ ಅವುಗಳ 'ಕಾ ಖಿರ್', 'ಕಾವ್ ಕರ್', 'ಕಿರ್‌ಕಿಚ್, ಕಿಚ್‌ಕಿರ್', 'ಖಾ ಖಾ ಕರ್' 'ಖರರ್ ಖರರ್' 'ಖಿಕ್, ಖಿಕ್' 'ಕೊರರ್ ಕೊರರ್' ಮುಂತಾದ ಶ್ರೀಮಂತ ಭಾಷೆಯನ್ನು ಅರ್ಥೈಸಿಕೊಳ್ಳಲು ಕೃಷ್ಣಾನಂದ ಕಾಮತರ ಸಹಾಯ ಅಗತ್ಯ. ಕಾಗೆಗೆ ಒಂದೇ ಕಣ್ಣು ಎಂಬುದು ಕೇವಲ ಪ್ರತೀತಿ. ವೈರಿಗಳಿಂದ ರಕ್ಷಿಸಿಕೊಳ್ಳಲು ಸುತ್ತಲೂ ಕಣ್ಣು ಓಡಿಸುತ್ತಲೇ ಇರುವುದರಿಂದ ನಮಗೆ ಹಾಗೆ ಕಾಣಿಸುತ್ತದೆ ಎಂಬ ಸತ್ಯವನ್ನು ಮನಗಾಣಿಸುತ್ತಾರೆ. ಸಸ್ಯಾಹಾರ, ಮಾಂಸಾಹಾರ, ಫಲಾಹಾರ ಎಂಬ ಯಾವ ಕುಸುಬಿಷ್ಟಿಯೂ ಇಲ್ಲದ ಕಾಗೆಗೆ ಆಹಾರ ಸ್ವೀಕರಿಸಲು ಯಾವ ಸ್ಥಳವಾದರೂ ಆದೀತು. ಯಾವ ಜಾತಿಭೇದವೂ ಅದಕ್ಕಿಲ್ಲ. ತನ್ನ ಕಾಲಂಗುಲ ಹೊಟ್ಟೆ ಹೊರಕೊಳ್ಳಲು ಕಾಗೆ ಕೈಗೊಳ್ಳುವ ನಿರಂತರ ಚಟುವಟಿಕೆ, ಚಾಲಾಕುತನ ವಿಸ್ಮಯವನ್ನುಂಟುಮಾಡುತ್ತದೆ. ಭದ್ರವಾಗಿ ಹೊಲಿದ ಪ್ಲಾಸ್ಟಿಕ್ ಚೀಲದ ಹೊಲಿಗೆ ಬಿಚ್ಚಿ ಒಳಗಿರುವ ಮಂಡಕ್ಕಿಯನ್ನು ದೊರಕಿಸಿಕೊಳ್ಳುವ ಜಾಣತನವಿದೆ ಕಾಕಪಕ್ಷಿಗೆ. ಆದರೆ, ತನ್ನ ಗೂಡಿನಲ್ಲಿ ಕೋಗಿಲೆಯ ಮೊಟ್ಟೆಗಳು ಸೇರಿ, ತಾನಿಟ್ಟ ಮೊಟ್ಟೆಗಳ ಸಂಖ್ಯೆ ಹೆಚ್ಚಾಗಿರುವುದು ಮಾತ್ರ ತಿಳಿಯುವುದಿಲ್ಲ. ಇದಕ್ಕೆ ಕಾರಣ "ಕಾಗೆಗಳ ಸಮಾಜದಲ್ಲಿ ಉತ್ತಮ ಗಣಿತ ಶಿಕ್ಷಕನ ಕೊರತೆ"ಯಂತೆ! ಕಾಳಗಕ್ಕಾಗಲಿ, ಶೋಕ ಸಭೆಗಾಗಲಿ, ನ್ಯಾಯ ಪಂಚಾಯಿತಿಗಾಗಲಿ, ಕಾಗೆಗಳು ಪ್ರದರ್ಶಿಸುವ ಒಗ್ಗಟ್ಟು ಅದ್ಭುತ. ಹಾಗಾಗಿ ಕಾಕರಾಜನ ಕೋಪವನ್ನೆದುರಿಸುವುದು ಹದ್ದು ಹಾವುಗಳಿಗೂ ಸಾಧ್ಯವಿಲ್ಲ. ಎಲ್ಲರೆದುರಿಗೆ ಪ್ರೇಮಾಲಾಪಮಾಡಿ, ಸಂಭೋಗಕ್ಕೆ ಗುಪ್ತಸ್ಥಳವನ್ನು ಅರಸಿ ಹೋಗಿ, ತಾನು ತಾಯಾಗಲಿದ್ದೇನೆಂದು ತಿಳಿದ ಕಾಕಪತ್ನಿಯು ಪತಿಗೆ "ಗೂಡು ಕಟ್ಟಿ ದೊರೆ ನೀವು ತಂದೆಯಾಗಲಿದ್ದೀರಿ" ಎನ್ನುತ್ತಾಳೆ.

ಮನೆಯ ಎದುರಿನ ಹಲಸಿನ ಮರದಲ್ಲಿ ಬೀಡು ಬಿಟ್ಟಿದ್ದ 'ಕರಿಯಪ್ಪ' ಕಾಮತರ ಕಾಕಾಭ್ಯಾಸಕ್ಕೆ ಒಳ್ಳೆಯ ಸಂದರ್ಭವನ್ನು ಕಲ್ಪಿಸುತ್ತಾನೆ. ಆಕಸ್ಮಾತ್ ಮರದಿಂದ ಬಿದ್ದ ಕಾಗೆ ಮರಿಗೆ 'ಕಾಳು' ಎಂದೂ ನಾಮಕರಣ ಮಾಡಿ ಅದನ್ನು ಸಾಕುವ ಪ್ರಯತ್ನ ವಿಫಲವಾದಾಗ, ಅದರ ಛಾಯಾಚಿತ್ರ ತೆಗೆದು ತೃಪ್ತಿ ಪಟ್ಟುಕೊಂಡಿದ್ದಾರೆ. 'ಕರಿಯಣ್ಣ' 'ಕಪಟಣ್ಣ,' 'ಕಗ್ಗಪ್ಪ,' 'ಕಾಡಿಗಣ್ಣ,' 'ಕರಿಮೊಗ' 'ಕಾಳಪ್ಪ,' 'ಕಾಕಮ್ಮ'ಗಳೆಲ್ಲರೂ ಕಾದಂಬರಿಯ ಪಾತ್ರಗಳಂತೆ ಸಜೀವಗಾಗಿ ನಮ್ಮ ಮುಂದೆ ನಿಲ್ಲುತ್ತಾರೆ. 'ಕಾಗೆಯ ಕಾಯಕ' ಪುಸ್ತಕದ ಮೊದಲ ಮಾತಿನಲ್ಲಿ "ವಾಚಕರಿಗೆ ಕಾಗೆಗಳ ಕುರಿತು ಕಿಂಚಿತ್ತಾದರೂ ಸಹಾನುಭೂತಿ ಮೂಡುವಂತಾದರೆ ನನ್ನ ಯತ್ನ ಸಫಲವಾಯಿತೆಂದು ತಿಳಿಯುತ್ತೇನೆ" ಎಂದಿದ್ದಾರೆ ಕಾಮತರು. ಅವರ ಆಶಯ ಪೂರ್ಣವಾಗಿ ಫಲಿಸಿದೆ ಎಂದು ಬೇರೆ ಹೇಳಬೇಕಿಲ್ಲ.

'ಇರುವೆಯ ಇರವು' ಪುಸ್ತಕದ ಹಿನ್ನೆಲೆ ಕೊಡುತ್ತಾ "ಇದನ್ನೊಂದು ವೈಜ್ಞಾನಿಕ ವರದಿ ಎಂದು ಪರಿಗಣಿಸದೇ ವಿಜ್ಞಾನ ಆಧಾರಿತ ಸಾಹಿತ್ಯಕ ಬರವಣಿಗೆ ಎಂದರೆ ಹೆಚ್ಚು ಸಮಂಜಸವಾದೀತು! ಇರುವೆಗಳು ತಮ್ಮ ಗುಟ್ಟುಗಳನ್ನು ಅಷ್ಟೊಂದು ಸುಲಭವಾಗಿ ಬಹಿರಂಗಪಡಿಸಲು ಇಚ್ಛಿಸದಿದ್ದರಿಂದ ನನಗೆ ಸರಿತೋರಿದಂತೆ ಅರ್ಥಯಿಸಿದ್ದೇನೆ. ಇನ್ನೂ ಹೆಚ್ಚು ಸಂಶೋಧನಾ ಸೌಲಭ್ಯಗಳು ದೊರೆತಾಗ ಇನ್ನೂ ಹೆಚ್ಚಿನ ವಿವರಗಳನ್ನು ಪಡೆಯುವ ಸಾಧ್ಯತೆಗಳು ಇದ್ದೇ ಇವೆ" ಎಂದಿದ್ದಾರೆ. ಇತ್ತೀಚೆಗೆ 'ದಿ ಹಿಂದೂ' ಪತ್ರಿಕೆಯಲ್ಲಿ ಕಾಗೆಯ ಜಾಣತನದ ಬಗ್ಗೆ ಬಂದ ಒಂದು ವೈಜ್ಞಾನಿಕ ಪ್ರಯೋಗದ ವರದಿಯನ್ನು ಓದಿದಾಗ ಕಾಮತರ ಈ ವಾಕ್ಯ ನೆನಪಿಗೆ ಬಂದಿತು. ಹೆಣ್ಣು ಕಾಗೆ, ತಂತಿಯನ್ನು ಕೊಕ್ಕರೆಯಂತೆ ಬಗ್ಗಿಸಿ, ಅದರಿಂದ ಒಂದು ಉದ್ದ ಸಪೂರ ಕೊಳವೆಯ ತಳದಲ್ಲಿದ್ದ ಮಾಂಸದ ಚೂರನ್ನು ಎಳೆದುಕೊಂಡಿತು ಎಂದು ವರದಿಯಾಗಿತ್ತು. ಕಾಮತರು ವಿವರಿಸಿದಂತೆ ಚೀಲದ ಹೊಲಿಗೆ ಬಿಚ್ಚಿ ಮಂಡಕ್ಕಿಯನ್ನು ದಕ್ಕಿಸಿಕೊಂಡದ್ದೂ ಹೆಣ್ಣು ಕಾಗೆಯೇ ಎಂದು ನೆನಪಾಗಿ 'ಪರವಾಗಿಲ್ಲವೇ ಕಾಕಪ್ರಪಂಚದಲ್ಲಿ ಹೆಣ್ಣು ಗಂಡಿಗಿಂತ ಜಾಣತನದಲ್ಲಿ ಮೇಲುಗೈ' ಎನಿಸಿತು.

ಕಾಮತರ ವೈಜ್ಞಾನಿಕ ಬರಹ, ಸಾಹಿತ್ಯವೂ ಹೌದು, ವಿಜ್ಞಾನವೂ ಹೌದು. ಅದು ಸಾಮಾನ್ಯನಿಗೂ ಎಟಕುವ ವೈಜ್ಞಾನಿಕ ಸಾಹಿತ್ಯ ಅಥವಾ ಸಾಹಿತ್ಯಕ ವಿಜ್ಞಾನ.

❑



# ಪ್ರಾಣಿ ಪರಿಸರ : ವಿಜ್ಞಾನ ಸಾಹಿತ್ಯಕ್ಕೆ ಹೊಸ ಮಳೆ - ಪುಷ್ಕಳ ಬೆಳೆ

**ಟಿ. ಆರ್. ಅನಂತರಾಮು**

ಡಾ|| ಕೃಷ್ಣಾನಂದ ಕಾಮತ್ ಅವರನ್ನು ೨೦೦೨ ರ ಜನವರಿ ತಿಂಗಳ ಒಂದು ದಿನ ಫೋನ್‌ನಲ್ಲಿ ಸಂಪರ್ಕಿಸಿದೆ. ನನ್ನ ಗೋತ್ರಗಳನ್ನು ಕೇಳುವ ಸಮಯ, ಇಚ್ಛೆ ಅವರಿಗಿತ್ತೋ ಇಲ್ಲವೋ ನಾನರಿಯೆ. ನಾನೂ ಒಂದೇ ಒಂದು ವಾಕ್ಯದಲ್ಲಿ ನನ್ನ ಬೇಡಿಕೆಯನ್ನು ಅವರಿಗೆ ಹೇಳಿ ಮಾತನ್ನು ಮುಗಿಸಿದೆ.

"ವಿಜ್ಞಾನ ಸಂಗಾತಿ ಪತ್ರಿಕೆಯಲ್ಲಿ ನಿಮ್ಮ 'ಪ್ರಾಣಿ ಪರಿಸರ' ಕೃತಿಯಲ್ಲಿರುವ 'ನಾಮಕರಣ' ಎಂಬ ಲೇಖನವನ್ನು ಪ್ರಕಟಿಸಲು ತಮ್ಮ ಅನುಮತಿ ಬೇಕು"

ಫೋನಿನಲ್ಲಿ ದೀರ್ಘ ಮೌನಕ್ಕೆ ಅವಕಾಶವಿಲ್ಲ ತಾನೆ? ಇತ್ತ ನನ್ನ ಧ್ವನಿ ಮುಗಿಯುತ್ತಿದ್ದಂತೆ ಆ ಕಡೆಯಿಂದ ಕಾಮತ್‌ರ ಧ್ವನಿ ಮೂರು ಅಕ್ಷರಗಳ ಪುಟ್ಟ ವಾಕ್ಯದಲ್ಲಿ "ಆಗಲಿ" ಎಂದಿತು. ಸಂಭಾಷಣೆಯನ್ನು ಕೊನೆಗೊಳಿಸುತ್ತಲೇ ಅನುಮತಿ ನೀಡಿದ್ದರು. ಆಗ ಕಾಮತರು ಯಾವ ಆಲೋಚನೆಯಲ್ಲಿದ್ದರು ಎಂದು ಹೇಗೆ ಹೇಳುವುದು? ಅವರನ್ನು ಹತ್ತಿರದಿಂದ ಬಲ್ಲ ಕೆಲವೇ ಮಂದಿಗೂ ಅವರ ಅಂತರಂಗವನ್ನು ಹೊಕ್ಕು ಏನಿದೆ ಆ ಘಳಿಗೆಯಲ್ಲಿ ಎಂದು ಹೇಳುವುದು ಸುಲಭವಲ್ಲ. ಮನೆಯಲ್ಲಿದ್ದಾಗ ಅವರು ಏಕಾಂತಪ್ರಿಯರು. ಬಾಹ್ಯ ಜಗತ್ತಿಗೆ ಅವರದು ಬಹುಮುಖಿ ವ್ಯಕ್ತಿತ್ವ. ನನ್ನಂಥ ಸಾವಿರಾರು ಓದುಗರ ಮೇಲೆ ಕಳೆದ ಮೂರು ದಶಕಗಳಿಂದ ಅವರ ಬರಹಗಳು ದೊಡ್ಡರೀತಿಯಲ್ಲೇ ಪ್ರಭಾವ ಬೀರಿದ್ದವು. ಅವರನ್ನು ಭೇಟಿಯಾಗಿ ಇಂದಿನ ವಿಜ್ಞಾನದ ಬರಹಗಳ ಸ್ಥಿತಿಗತಿಯನ್ನು ಚರ್ಚಿಸಬೇಕೆಂದು ಬಹು ದಿನದಿಂದ ಬಯಸಿದ್ದೆ. ಆದರೆ ಆ ಸಂದರ್ಭ ಒದಗಿ ಬರಲೇ ಇಲ್ಲ. ಲೇಖಕಿ ನೇಮಿಚಂದ್ರ ಅವರ 'ಒಂದು ಕನಸಿನ ಪಯಣ' ಕೃತಿ ಬಿಡುಗಡೆಗೆ ಅವರು ಒಪ್ಪಿದ್ದರು ಎಂಬುದೇ ಒಂದು ಬಗೆಯ ಆಶ್ಚರ್ಯ, ಕುತೂಹಲ ಹುಟ್ಟಿಸಿತ್ತು. ಇಂಥ ಕಾರ್ಯಕ್ರಮವನ್ನು ಅವರು ಒಪ್ಪಿಕೊಳ್ಳುವುದೇ ವಿರಳ ಎಂಬ ಗುಟ್ಟಂತೂ ಆ ಹೊತ್ತಿಗೆ ನನ್ನ ಕಿವಿಗೂ ತಲಪಿತ್ತು. ೧೯೯೯ರ ಮಾರ್ಚ್ ತಿಂಗಳ ಒಂದು ದಿನ ನೇಮಿಚಂದ್ರ ಅವರ ಕೃತಿ ಬಿಡುಗಡೆ ಮಾಡುತ್ತ ಆ ದಿನ ಅವರು ಮಾತಾಡಿದ್ದು ಅಷ್ಟೇ.

"ಪ್ರವಾಸ ಸಾಹಿತ್ಯ ಅಂದರೆ ಅಲ್ಲಿ ಹೋಗಿದ್ದೆ, ಇಲ್ಲಿ ಹೋಗಿದ್ದೆ, ಇಂತಿಂಥ ಪ್ರೇಕ್ಷಣೀಯ ಸ್ಥಳವಿದೆ ಎಂದು ಬರೆಯುವ ಕಾಲವೊಂದಿತ್ತು. ಈಗ ಪ್ರವಾಸ ಸಾಹಿತ್ಯದ ಪರಿಕಲ್ಪನೆಯೇ ಬದಲಾಗಿದೆ, ಅದರ ವಿಸ್ತಾರ ಹೆಚ್ಚಿದೆ. ನೇಮಿಚಂದ್ರ ಅವರ ಈ ಕೃತಿಯನ್ನು ಓದಿದರೆ ಅದು ಸ್ಪಷ್ಟವಾಗುತ್ತದೆ" ಎಂದಿದ್ದರು. ಅವರು ಎಷ್ಟು ಏಕಾಂತಪ್ರಿಯರು ಎಂಬ ವಿಚಾರವೂ ಅಲ್ಲಿ ಪ್ರಸ್ತಾಪವಾದಾಗ ಅವರಿಗೆ ಮುಜುಗರ ತರಬಾರದೆಂಬ ಇರಾದೆಯಿಂದ, ಅವರನ್ನು ಭೇಟಿಯಾಗದಿರಲು ತೀರ್ಮಾನಿಸಿದೆ, ಹಿಂದೆಲ್ಲ ಕರ್ನಾಟಕದ ಅನೇಕ ಪತ್ರಿಕೆಗಳಲ್ಲಿ ಅವರ ಬಿಡಿ ಲೇಖನಗಳನ್ನು ಓದುತ್ತಿದ್ದೆ. ಬೆರಗುಗಣ್ಣಿನಲ್ಲಿ ಹಸಿ ಹಸಿಯಾಗಿ ಓದುತ್ತಾ ವಿಜ್ಞಾನ ಸಾಹಿತ್ಯವನ್ನು ಸವಿಯುತ್ತಿದ್ದ ದಿನಗಳವು. ಆದರೆ ಕಳೆದ ಒಂದು ದಶಕದಿಂದ ಅವರ ಬಿಡಿ ಲೇಖನಗಳು ಯಾವ ಪತ್ರಿಕೆಗಳಲ್ಲೂ ಅಷ್ಟಾಗಿ ಕಾಣಿಸುತ್ತಿರಲಿಲ್ಲ. ಯಾವುದೇ ಸೈನ್ಸ್ ಕ್ಲಬ್‌ಗಳಲ್ಲಿ, ಸಂಘ ಸಂಸ್ಥೆಗಳಲ್ಲಿ ಅವರು ಭಾಷಣ ಮಾಡಿದ್ದು ವರದಿಯಾಗಿರಲಿಲ್ಲ.

ಕಾಮತರು ತಮ್ಮ ವೈಜ್ಞಾನಿಕ ವಿವೇಚನೆಗಳಿಗೆ ಓದುಗರ ಎದೆಯಲ್ಲಿ ವೇದಿಕೆ ಸೃಷ್ಟಿ ಮಾಡಬೇಕೆಂದು ಬಲವಂತ ಪ್ರಯತ್ನ ಮಾಡಿದವರಲ್ಲ, ಅವರ ಬರವಣಿಗೆಗಳು ಆ ಕೆಲಸವನ್ನು ತಂತಾನೇ ಮಾಡಿದ್ದವು. ವಿಜ್ಞಾನ ಸಂಗಾತಿ ಪತ್ರಿಕೆಯಲ್ಲಿ ಅವರ 'ನಾಮಕರಣ' ಲೇಖನ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಯಿತು. ಆ ಹೊತ್ತಿಗೆ ಕೃಷ್ಣಾನಂದ ಕಾಮತ್ ಆಪ್ತ ಓದುಗರ ಎದೆಯಲ್ಲಿ ಶೂನ್ಯಗಳ ಸರಮಾಲೆಯನ್ನು ಸೃಷ್ಟಿಸಿ, ಮರುಪಯಣ ಬೆಳೆಸಿದ್ದರು.

ಗೆಳೆಯ ಹಾಲ್ದೊಡ್ಡೇರಿ ಸುಧೀಂದ್ರ ಅವರನ್ನು ವಿನಂತಿಸಿಕೊಂಡು ಕಾಮತ್ ಅವರ ವೆಬ್ ಸೈಟ್ ಕುರಿತು ಒಂದು ಲೇಖನವನ್ನು ಇದೇ ಸಂಚಿಕೆಗೆ ಬರೆಯಲು ಸಾಧ್ಯವೇ ಎಂದು ಕೇಳಿದ್ದೆ. ಸುಧೀಂದ್ರ ಅವರು ಹಬ್ಬದ ಸಂಭ್ರಮವೆಂಬಂತೆ www.kamat.com ವೆಬ್ ಸೈಟನ್ನು ಜಾಲಾಡಿ ಗಾಬರಿ ಪಟ್ಟಿದ್ದರು. ಕೃಷ್ಣಾನಂದ ಕಾಮತರನ್ನು ಯಾವ ವರ್ಗಕ್ಕೆ ಸೇರಿಸಬೇಕೆಂದು ನನ್ನಂತೆಯೇ ಅವರೂ ಪೇಚಾಡಿಕೊಂಡಿದ್ದರು.

'ಇವರಿಗೊಂದು ವಿಳಾಸವಿಲ್ಲ, ಹೋಗಲಿ ಕಂಪ್ಯೂಟರಾದರೂ ಇದೆಯೇ? 'ಉಹುಂ. ಗಂಡ ಹೆಂಡತಿ (ಪತ್ನಿ ಪ್ರಸಿದ್ಧ ಲೇಖಕಿ ಜ್ಯೋತ್ಸ್ನಾ ಕಾಮತ್ ಅವರು) ಲೇಖನಗಳನ್ನು ಕೈಯಲ್ಲಿ ಬರೆದು ಚಿತ್ರಗಳನ್ನು ಸ್ಟುಡಿಯೋದಲ್ಲಿ ಅಚ್ಚು ಹಾಕಿಸಿ ಲಕೋಟೆಯಲ್ಲಿಟ್ಟು ದೂರದ ಅಮೇರಿಕದಲ್ಲಿನ ಮಗನ ವಿಳಾಸಕ್ಕೆ ಅಂಚೆಯಲ್ಲಿ ಕಳಿಸುತ್ತಾರೆ. ಮಗ, ಸೊಸೆ ತಮ್ಮ ಕಂಪ್ಯೂಟರಿನಲ್ಲಿ ಮತ್ತೆ ಲೇಖನಗಳನ್ನು ಟೈಪುಮಾಡಿ, ಚಿತ್ರಗಳನ್ನು ಸ್ಕ್ಯಾನ್ ಮಾಡಿ ವೆಬ್ ಸೈಟಿಗೆ ತುಂಬುತ್ತಾರೆ' ಎಂದು ಬರೆದರು. ಈ ಮನುಷ್ಯನಿಗೆ ಇ-ಮೇಲ್ ವಿಳಾಸವೂ ಇಲ್ಲವಲ್ಲ ಎಂದು ಗೆಳೆಯ ಕೊರಗಿದ್ದರು.

ವೈಯಕ್ತಿಕ ನಡೆನುಡಿ, ಹಾವಭಾವಗಳಿಗಿಂತ ಒಬ್ಬ ಲೇಖಕ ಓದುಗರ ಮನದಲ್ಲಿ ನಿಲ್ಲುವುದು ಅವನ ಕೃತಿಗಳಿಂದ ಎಂಬ ಅನುಭವಜನ್ಯ ಸತ್ಯವನ್ನು ನಾನೂ ಕಂಡುಕೊಂಡಿದ್ದೇನೆ. ಒಮ್ಮೆಯಾದರೂ ಅವರೊಡನೆ ಗಳಪುವ, ವಿಚಾರ ವಿನಿಮಯ ಮಾಡಿಕೊಳ್ಳುವ ಅವಕಾಶ ನನಗೆ ಒದಗಿಬರಲಿಲ್ಲ. ಆದರೆ, ಅವರ ಕೃತಿಗಳು ನನ್ನೆದೆಯಲ್ಲಿ ಶಾಶ್ವತವಾಗಿ ಛಾಪು ಮೂಡಿಸಿದ್ದವು. ಕನ್ನಡದ ವಿಜ್ಞಾನದ ಲೇಖಕರ ಪೈಕಿ ಬಿ.ಜಿ.ಎಲ್. ಸ್ವಾಮಿ ತಮ್ಮ ಕೃತಿಗಳಿಗೆ ತಾವೇ ರೇಖಾಚಿತ್ರಗಳನ್ನು ಬಿಡಿಸುತ್ತಿದ್ದರು. ಛಾಯಾಚಿತ್ರದಲ್ಲಿ ಅದ್ಭುತ ಕಲೆ ಸಾಧಿಸಿದ್ದ ಕಾಮತರದು ಇದೇ ಜಾಯಮಾನ.



ಕಾಮತ್ ಅವರ ಬರಹಗಳನ್ನು ಯಾವ ವರ್ಗಕ್ಕೆ ಸೇರಿಸಬೇಕೆಂದು ನಾನೂ ಪೇಚಾಡಿಕೊಂಡಿದ್ದೆ ಎಂದು ಹೇಳಿದೆನಲ್ಲವೆ. 'ಅಕ್ಷತ' ಕೃತಿಯಲ್ಲಿ ಇವರು ಪಕ್ಕಾ ಮಾನವ ಶಾಸ್ತ್ರಜ್ಞ. 'ಪ್ರಾಣಿ ಪರಿಸರ' ಕೃತಿಯಲ್ಲಿ ಮೊದಲನೆ ದರ್ಜೆಯ ಜೀವವಿಜ್ಞಾನಿ. ಅವರ ಬಸ್ತರ್ ಯಾತ್ರೆ, ಅಮೇರಿಕಾ ಯಾತ್ರೆಯ ಕೃತಿ ಓದಿದಾಗ ಯಾರಿಗೂ ಕಾಣದ ನಗ್ನಸತ್ಯ ಈ ಮನುಷ್ಯನ ಕಣ್ಣಿಗೆ ಕಾಣುತ್ತವೆ ಎನ್ನಿಸದಿರದು. ಅದರ ಫಲವೇ ಕನ್ನಡಿಗರಿಗೆ ಅತ್ಯುತ್ತಮ ಸಾಹಿತ್ಯದ ರಸದೌತಣ. ಬದುಕಿನ ಒಳಾವರಣಗಳನ್ನು ಪ್ರವೇಶಿಸಿ, ಅನುಭವವನ್ನು ಅಕ್ಷರದಲ್ಲಿ ಹಿಡಿದಿಡುವ ಕಲಾ ಪ್ರಜ್ಞೆ ಅವರದು. ನನಗೆ ಕಾಮತ್ ಅವರ ವ್ಯಕ್ತಿತ್ವವನ್ನು ಶಿವಗಂಗೆಯ ಬೆಟ್ಟಕ್ಕೆ ಹೋಲಿಸಬೇಕೆನಿಸುತ್ತದೆ. ಬೆಂಗಳೂರಿನಿಂದ ತುಮಕೂರಿಗೆ ಹೋಗುವ ರಾಷ್ಟ್ರೀಯ ಹೆದ್ದಾರಿಯಲ್ಲಿ ದಾಬಸಪೇಟೆಗೆ ಕೇವಲ ಏಳು ಕಿಲೋ ಮೀಟರು ದೂರದಲ್ಲಿ ಶಿವಗಂಗೆ ಬೆಟ್ಟ ಎದ್ದು ಕಾಣುತ್ತದೆ. ಹತ್ತಿಪ್ಪತ್ತು ಕಿಲೋ ಮೀಟರು ದೂರದಿಂದಲೇ ಅದರ ಬಾಹ್ಯ ಚಹರೆ ದಾರಿಹೋಕರನ್ನು ಥಟ್ಟನೆ ಸೆಳೆಯುತ್ತದೆ. ಉತ್ತರದಿಂದ ವೀಕ್ಷಿಸಿದಾಗ ಅದರ ರೂಪ ಶಿವಲಿಂಗದಂತೆ, ಪೂರ್ವದಿಂದ ಕಂಡರೆ ಥೇಟ್ ಬಸವಣ್ಣ ಮೊಣಕಾಲೂರಿ ಮಲಗಿದಂತೆ, ದಕ್ಷಿಣದಿಂದ ಕಂಡಾಗ ಹೆಡೆ ಎತ್ತಿದ ಸರ್ಪದಂತೆ, ಪಶ್ಚಿಮದಿಂದ ವೀಕ್ಷಿಸಿದಾಗ ಗಣಪತಿಯಂತೆ ಈ ಬೆಟ್ಟದ ಭಂಗಿ. ಸಾಮೀಪ್ಯ ಬಂದಾಗ ಶಿವಗಂಗೆಯ ಕಥೆ ದಂತಕಥೆಯಾಗಿಬಿಡುತ್ತದೆ. ಇತಿಹಾಸ, ಭೂಗೋಳ, ಪುರಾಣ, ಪಾವಿತ್ರ್ಯ, ಮಾನವ ಪರಿಕಲ್ಪನೆ ಎಲ್ಲವೂ ಮೇಳೈಸಿ ಅವರವರ ಭಾವಕ್ಕೆ ಸುರುಳಿ ಸುರುಳಿಯಾಗಿ ಬಿಚ್ಚಿಕೊಳ್ಳುತ್ತದೆ. ಕಾಮತರ ಬಗೆಯೂ ಆ ಉಪಮೆ, ಅಕ್ಷರಶಃ ಒಪ್ಪುತ್ತದೆ. ಪ್ರಾಣಿ ಪರಿಸರ ಕೃತಿಯ ಪ್ರಕಾಶಕರು ಈ ಮಾತು ಹೇಳಿದ್ದಾರೆ:

"ಇದು ನಾಟಕವಲ್ಲ, ಕಾದಂಬರಿಯಲ್ಲ ಸಣ್ಣ ಕಥೆ ಅಲ್ಲ, ಆತ್ಮಚರಿತ್ರೆ ಅಲ್ಲ, ವಿಜ್ಞಾನ ಪ್ರಬಂಧದಂತೆ ಕಂಡರೂ ಅಳತೆಗೋಲು ಹಾಕಿದಾಗ ಅದೂ ಅಲ್ಲ, ಇದು ಏನೂ ಅಲ್ಲದ್ದರಿಂದಲೇ 'ನೇತಿ' ಪ್ರಕಾರದ್ದು".

ಹಾಗಾದರೆ ನೇತಿ ಪ್ರಕಾರ ಓದುಗರಿಗೆ ತಲಪಿಸುವ ಆಶಯವೇನು? ಓದುಗ ಮೆಚ್ಚುತ್ತಾನೆಯೇ? ಓದುಗರಲ್ಲಿ ಹೊಸ ಆಲೋಚನೆಗಳನ್ನು ಏಳಿಸದಿದ್ದರೆ ಒಂದಷ್ಟು ಪ್ರೇರಣೆ ಕೊಡದಿದ್ದರೆ, ಜೀವನೋತ್ಸಾಹವನ್ನು ಚಿಮ್ಮಿಸದಿದ್ದರೆ ಕೃತಿ ಯಾವ ವರ್ಗಕ್ಕೆ ಸೇರಿದರೇನು, ಬಿಟ್ಟರೇನು. ಅದು ನಗಣ್ಯ. ಕಾಮತರದು ವರ್ಗೀಕರಣಕ್ಕೆ ಸಿಕ್ಕದ ಸಾಹಿತ್ಯವಾದರೂ ಅದು ಮನೋಲೋಕವನ್ನು ತಟ್ಟುವ ಪರಿ ಅನನ್ಯ. 'ಪ್ರಾಣಿ ಪರಿಸರ' ಕೃತಿಯನ್ನು ಈ ಹಿನ್ನೆಲೆಯಲ್ಲಿ ನಾವು ನೋಡಬೇಕಾಗುತ್ತದೆ. ಕರ್ನಾಟಕದಲ್ಲಿ ಹಾಗೂ ನೆರೆಯ ರಾಜ್ಯದಲ್ಲಿ ದೇವಸ್ಥಾನದ ಶಿಲ್ಪದಲ್ಲಿ ಮೂಡಿರುವ ಪ್ರಾಣಿಗಳನ್ನು ಅಧ್ಯಯನ ಮಾಡಿ ಮನೋಹರ ಗ್ರಂಥಮಾಲೆಗೆ ಪುಸ್ತಕ ಬರೆಯಲು ಒಪ್ಪಿಕೊಂಡ ಜೀವವಿಜ್ಞಾನಿ ಕಾಮತ್, ಧರ್ಮ ಗ್ರಂಥ, ಇತಿಹಾಸ, ಶಿಲ್ಪಕಲೆ ಮುಂತಾದವನ್ನು ಪ್ರಾಣಿ ವಿಜ್ಞಾನದ ತಿಳಿವಳಿಕೆಗೆ ಎರಕಹೊಯ್ದು, ಕನ್ನಡಿಗರಿಗೆ ಹೊಸತೊಂದು ಪ್ರಕಾರದ ಸಾಹಿತ್ಯವನ್ನು ಉಣಬಡಿಸಿದ್ದಾರೆ. ಕೇವಲ ಜೀವ ವಿಜ್ಞಾನಿಯ ದೃಷ್ಟಿಯಿಂದಷ್ಟೇ ನೋಡಿದ್ದರೆ ಇದು ಅಚ್ಚುಕಟ್ಟಾದ ಪಠ್ಯಪುಸ್ತಕವಾಗಿಬಿಡುತ್ತಿತ್ತು. ಅಷ್ಟೇ ಅಲ್ಲ, ಅಟ್ಟಕ್ಕೇರಿ ಅದು ಶಾಶ್ವತ ಸಾಹಿತ್ಯ ಎಂಬ ವರ್ಗೀಕರಣಕ್ಕಂತೂ ಒಳಪಡುತ್ತಿತ್ತು. ಸದ್ಯ ಹಾಗಾಗಲಿಲ್ಲ,, ಓದುಗರಿಗೆ ಲಾಭವಾಯಿತು.

ಕಾಮತರ ಬರವಣಿಗೆಯ ಧೋರಣೆಯೇ ಖುಷಿ ಕೊಡುವ ಸಂಗತಿ. ಏಕೆಂದರೆ ತಾವು ಬರೆಯುವುದು ಈ ವರ್ಗದ ವಿದ್ಯಾರ್ಥಿಗಳಿಗೆ ಎಂತಲೋ, ವಿಜ್ಞಾನದ ಹಿನ್ನೆಲೆ ಇರುವವರಿಗೆ ಎಂತಲೋ ಮೊದಲೇ ಕಟ್ಟುಪಾಡುಗಳನ್ನು ವಿಧಿಸುವ ಬರವಣಿಗೆ ಅವರದಲ್ಲ. ಓದುವವರಿಗೆ ಅವರ ವಿಚಾರಗಳು ಹೃದಯಾಳದೊಳಕ್ಕೆ ಇಳಿಯಬೇಕು, ಅಷ್ಟೇ ಅವರ ಗುರಿ; ಇದು ಜನಪ್ರಿಯ ವಿಜ್ಞಾನ ಕುರಿತದ್ದು ಎಂದು ಹೇಳಿಕೊಳ್ಳುವ ಅಗತ್ಯವಿಲ್ಲ.

ಅವರ 'ಪ್ರಾಣಿ ಪರಿಸರ' ಕೃತಿಯ ಕೆಲವು ಮಗ್ಗಲನ್ನು ಸ್ಥೂಲವಾಗಿ ನಾವು ಪರಿಶೀಲಿಸಬಹುದು. ಇಲ್ಲಿನ ವಿಚಾರಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ತೀರ ಆಳವಲ್ಲದಿದ್ದರೂ ಜೀವೋತ್ಪತ್ತಿಯ ಬಗ್ಗೆ ಕೆಲವು ಪ್ರಾಥಮಿಕ ಅಂಶಗಳು ತಿಳಿದಿರಬೇಕು. ವಿಜ್ಞಾನಿಗಳು ಜೀವ ವಿಕಾಸವನ್ನು ಪ್ರತಿಪಾದಿಸಿರುವ ದೃಷ್ಟಿಕೋನದ ಬಗ್ಗೆ ಸ್ವಲ್ಪವಾದರೂ ನಮಗೆ ತಿಳಿದಿರಬೇಕು. ಅವುಗಳನ್ನು ನಾಮಕರಣ ಮಾಡುವ ಕುರಿತು ವೈಜ್ಞಾನಿಕ ವಿಧಿ ವಿಧಾನಗಳು ಹೇಗಿರಬೇಕೆಂಬುದನ್ನು ಲೇಖಕರೇ ಪರಿಚಯಮಾಡಿಕೊಳ್ಳುತ್ತಾರೆ. ಪ್ರತ್ಯೇಕವಾದ ೨೪ ಅಧ್ಯಾಯಗಳಲ್ಲಿ ಪ್ರಾಣಿ ಪರಿಸರವನ್ನು ಅನಾವರಣ ಮಾಡುತ್ತಾರೆ. ಒಂದೊಂದು ಅಧ್ಯಾಯದಲ್ಲೂ ಲೇಖಕರು ಸ್ವಾತಂತ್ರ್ಯವಹಿಸಿ, ಕೆಲವೊಮ್ಮೆ ವಿಜ್ಞಾನದ ಕ್ಯಾನ್‌ವಾಸನ್ನೂ ಮೀರಿ, ನಮ್ಮ ಸಾಮಾಜಿಕ ಧೋರಣೆಗಳನ್ನೂ, ಅಂಕುಡೊಂಕುಗಳನ್ನೂ ತಿಳಿಸಿಕೊಡುವ ಧೈರ್ಯ ಮಾಡುತ್ತಾರೆ. ಅಲ್ಲಲ್ಲೇ ವ್ಯಂಗ್ಯ ಕಚಗುಳಿ ಇಟ್ಟ ಅನುಭವ ಓದುಗನಿಗಾಗುತ್ತದೆ. ವಿಜ್ಞಾನದ ಪ್ರಬಂಧಗಳು ಹೀಗೆಯೇ ಇರಬೇಕು, ಈ ಎಲ್ಲೆಗಳನ್ನು ಮೀರಬಾರದು, ಪಾರಿಭಾಷಿಕ ಶಬ್ದಗಳು ಮೂಲಾರ್ಥವನ್ನು ಕಳೆದುಕೊಳ್ಳದೆ ಮರುಹುಟ್ಟು ಪಡೆಯುವಂತೆ ಬಳಕೆಯಾಗಬೇಕು ಮುಂತಾದ 'ಬೇಕುಗಳ ಸಂಹಿತೆಗಳನ್ನು ಬದಿಗಿಟ್ಟು, ವಿಜ್ಞಾನ ಸಂವಹನೆಯನ್ನು ಅರ್ಥಪೂರ್ಣವಾಗಿಯೇ ಮಾಡಬಹುದೆಂದು ತೋರಿಸಿಕೊಟ್ಟ ಬರಹಗಳ ಸಂಗ್ರಹ ಇದು. ವಿಜ್ಞಾನ ವಿಚಾರಗಳನ್ನು ಹೃದಯ ಸಂವಾದವಾಗಿ ಮಾಡಬೇಕೆಂದು ಹೊರಟವರಿಗೆ ಏನೆಲ್ಲ ಪರಿಕರಗಳು ಬೇಕು? ಇತಿಹಾಸ ಪ್ರಜ್ಞೆ, ಜೀವನಾನುಭವದ ದ್ರವ್ಯ, ಆಡು ಮಾತಿನ ಬಳಕೆ, ದಾರ್ಶನಿಕ ಪ್ರಜ್ಞೆ, ಹಾಸ್ಯಗಳನ್ನು ಬಳಸಿಕೊಳ್ಳುವ ಜಾಣ್ಮೆ ನಿಸರ್ಗದ ಚೋದ್ಯಗಳನ್ನು ಬರಿಗಣ್ಣಿನಿಂದ ನೋಡುವ ಛಾತಿ, ಇವೆಲ್ಲವೂ ಈ ಸಂಗ್ರಹದಲ್ಲಿ ಮೇಳೈಸಿವೆ. ಈ ಹಿನ್ನೆಲೆಯೊಂದಿಗೆ ಪ್ರಾಣಿ ಪರಿಸರದ ಕೃತಿಯಲ್ಲಿ 'ಕಾಮತರ ರೀತಿ' ಎನ್ನಬಹುದಾದ ಕೆಲವು ಅಂಶಗಳನ್ನು ಕುರಿತು ಇಣುಕುನೋಟ ನೀಡುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ. ಇದು ಪ್ರತಿ ಅಧ್ಯಾಯದ ಸವಿವರ ವಿಮರ್ಶೆಯಲ್ಲ; ಅದು ಈ ಲೇಖನದ ಉದ್ದೇಶವೂ ಅಲ್ಲ.

ಜೀವ ವಿಜ್ಞಾನಿಗಳು ಜೀವ ವಿಕಾಸದ ಮಜಲುಗಳನ್ನು ಗುರುತಿಸುವಾಗ ಏಕಾಣುಜೀವಿಗಳಿಂದಲೇ ಪ್ರಾರಂಭಿಸುತ್ತಾರೆ. ಕಾಮತರು ಜೀವ ವಿಜ್ಞಾನವನ್ನು ನೋಡುವ ಪರಿಯೇ ವಿಶಿಷ್ಟ ಬಗೆಯದು. ಜೀವಿಗಳ ಬದುಕು, ಪರಿಸರ, ಶರೀರ ವಿಜ್ಞಾನದ ತಿಳಿವಿನ ಜತೆಗೆ ನಮ್ಮ ಸಾಮಾಜಿಕ ಚಿಂತನೆಗಳು ಹೇಗೆ ಹಾಸುಹೊಕ್ಕಾಗಿವೆ ಎಂಬುದನ್ನು ತಿಳಿಯಲು ಅವರದೇ ವಾಕ್ಯಗಳನ್ನು ಓದಬೇಕು:

**"ತೀರ ಪುರಾತನವೆಂದು ಏಕಜೀವಕಣ ಪ್ರಾಣಿಗಳು ಕಣ್ಣಿಗೆ ಕಾಣದಷ್ಟು ಸೂಕ್ಷ್ಮವಾಗಿವೆ. ಅವುಗಳಲ್ಲಿಯೇ ದೊಡ್ಡದಾದ ಅಮೀಬ ಒಂದು ಬಿಂದುವಿನ ಗಾತ್ರದ್ದು. ಒಂದು ಚೌರಸ ಇಂಚಿನಲ್ಲಿ ನಗರದ ಹತ್ತು ಸಾವಿರ ಅಮೀಬಗಳು ಒತ್ತಟ್ಟಿಗೆ ಸೇರಿ ಸಭೆಯಾಗಬಹುದು. ಅವಕ್ಕೆ ಕಣ್ಣು, ಕಾಲು, ಕೈ ಎಂಬ ಭೇದ ಇಲ್ಲದಂತೆ ಲಿಂಗಭೇದವೂ ಇಲ್ಲ. ಹರಟೆಯಲ್ಲಿ ತೊಡಗಿದಾಗ ಹೆಣ್ಣಾದರೆ, ವೈರಿಯೊಡನೆ ಕಾದಾಟದಲ್ಲಿ ತೊಡಗಿದಾಗ ಅದು ಗಂಡಾಗುತ್ತದೆ. ಅವು ದೊಡ್ಡದಾಗಿ ಬೆಳೆದು ಚಟುವಟಿಕೆ ತೊಂದರೆಯಾದಾಗ ಎರಡು ಭಾಗವಾಗಿ ಜೋಡಿ ಮರಿ ಅಮೀಬಿಯಾಗಿಬಿಡುತ್ತವೆ. ಮಾನವನಲ್ಲೂ ಈ ಸಾಮರ್ಥ್ಯ ಉಳಿದುಕೊಂಡಿದ್ದರೆ, ವರ ಹುಡುಕುವ, ವರದಕ್ಷಿಣೆ ಕೊಡುವ, ಮಕ್ಕಳು ಮರಿಗಳನ್ನು ಸಲಹುವ ತೊಂದರೆಯೇ ಇರುತ್ತಿರಲಿಲ್ಲ."**

ಇಂಥ ಬರಹಗಳನ್ನು ಆಸ್ವಾದಿಸುವುದನ್ನು ಬಿಟ್ಟು ಇದು ಯಾವ ವರ್ಗಕ್ಕೆ ಸೇರಬೇಕೆಂದು ತಲೆ ತುರಿಸಿಕೊಳ್ಳುವ ಅವಶ್ಯಕತೆಯಾದರೂ ಇದೆಯೇ? ಅಥವಾ ವಿಜ್ಞಾನ ಬರವಣಿಗೆಗೆ ಇಂತಹದೇ ಚೌಕಟ್ಟು ಬೇಕು, ಇದೇ ಶೈಲಿ ಇರಬೇಕು, ಸರಳವಾಗಿರಬೇಕು, ಇಂಥ ಕಟ್ಟುಪಾಡುಗಳನ್ನು ಏಕೆ ತಾನೇ ಹಾಕಿಕೊಳ್ಳಬೇಕು? ಅದು ವಿಜ್ಞಾನವಾಗಲಿ, ಶುದ್ಧ ಸಾಹಿತ್ಯವಾಗಲಿ ರಸಾನುಭವ ಕೊಡದಿದ್ದರೆ ಬರವಣಿಗೆಗೆ ಕವಡೆ ಕಿಮ್ಮತ್ತು ಇರುವುದಿಲ್ಲ. ಅದು ಶುಷ್ಕ ಎನ್ನಿಸಿಬಿಡುತ್ತದೆ. ಕಾಮತರ ಬರವಣಿಗೆ ತಾಕತ್ತು ಇರುವುದೇ ಈ ರಸಾನುಭವದ ಅಭಿವ್ಯಕ್ತಿಯಲ್ಲಿ. ಹಾಗೆಂದು ವೈಜ್ಞಾನಿಕ ಖಚಿತತೆಗೆ ಎಷ್ಟೂ ಬಾಧಕವಾಗದಂತೆ ತಮ್ಮ ಬರಹಗಳನ್ನು ಸಲೀಸಾಗಿ ನಿರ್ವಹಿಸುತ್ತಾರೆ. ಕನ್ನಡದಲ್ಲಿ ಸದ್ಯ ಅವಶ್ಯವಿರುವುದು ಈ ಬಗೆಯ ನಿಲುವು ಮತ್ತು ಇಂಥ ಬರಹಗಳು. ನಿಜವಾದ ಅರ್ಥದಲ್ಲಿ ಜನಪ್ರಿಯ ವಿಜ್ಞಾನ ಬರವಣಿಗೆ ಎಂದರೆ ಈ ಜಾತಿಯ ಪ್ರಬಂಧಗಳೇ.

ಈಗ ಎಲ್ಲೆಲ್ಲೂ ಕ್ಲೋನಿಂಗ್ ಕುರಿತು ಮಾತುಗಳು ಕೇಳಿ ಬರುತ್ತಿವೆ. ಜೈವಿಕ ತಂತ್ರಜ್ಞಾನ, ಜೀವ ಜಗತ್ತನ್ನೇ ಬೆಚ್ಚಿಸುವ ಹಂತ ತಲುಪಿದೆ. ಪ್ರಾಣಿಗಳ ಜೀನ್ ಅಳವಡಿಸಿದ ಸಸ್ಯಗಳನ್ನು ಯಾವ ಗುಂಪಿಗೆ ಸೇರಿಸಬೇಕು? ಮಡಿವಂತರಿಗೆ ಇದು ಸಹ್ಯವೇ ಅಥವಾ ಅಸಹ್ಯವೇ ಎಂಬ ವಾದವಿವಾದಗಳು ಧಾರಾಳವಾಗಿ ನಡೆಯುತ್ತಿವೆ. ಇನ್ನೊಂದೆಡೆ ಕಂಡ ಹಾಗೆಯೇ ತಾಯಿ ಕುರಿಯ ಕೆಚ್ಚಲಿನ ಕೋಶವೊಂದರಿಂದ ಜೀವ ತಳೆದ ಡಾಲಿ ಕುರಿಮರಿ ಪ್ರೌಢಾವಸ್ಥೆ ತಲುಪಿದೆ. ಇದರ ನಂತರ ಕೋತಿಗಳ ಕ್ಲೋನಿಂಗ್ ಸರದಿ, ಈಗ ಮಾನವ ತದ್ರೂಪಿನ ಬಗ್ಗೆ ಬಿಸಿಬಿಸಿ ಚರ್ಚೆಗಳಾಗುತ್ತಿವೆ. ವೈಜ್ಞಾನಿಕ ಪ್ರಗತಿಯು, ನೈತಿಕ ಲಕ್ಷ್ಮಣ ಗೆರೆಯನ್ನು ದಾಟುತ್ತಿದೆಯೆಂದು ಸಾಮಾಜಿಕರು ತಲೆ ಕೆಡೆಸಿಕೊಂಡಿದ್ದಾರೆ. ಮಾನವ ಪ್ರತಿರೂಪದ ಬಗ್ಗೆ ವಿರೋಧವೂ ಹೆಚ್ಚುತ್ತಿದೆ. ಕೃಷ್ಣಾನಂದ ಕಾಮತರು ಪ್ರಾಣಿ ಪರಿಸರ ಕೃತಿ ರಚಿಸಿದ್ದು ೧೯೭೭ರಲ್ಲಿ. ಆಗಿನ್ನೂ ಜೈವಿಕ ತಂತ್ರಜ್ಞಾನ ಎಂಬ ಅಂಗ ಈಗಿನಷ್ಟು ತನ್ನ ಕಬಂಧ ಬಾಹು ಚಾಚಿರಲಿಲ್ಲ. ಈಗಿನ ಪರಿಸ್ಥಿತಿಯೇ ಬೇರೆ. ಕಳೆದ ಕಾಲು ಶತಮಾನದಲ್ಲಿ ಜೀನ್ ಕ್ರಾಂತಿಯಾಗಿದೆ. ಜೀನ್‌ಗಳು ಎತ್ತರೆತ್ತರ ಜಿಗಿಯುತ್ತಿವೆ. ತಳಿ ವಿಜ್ಞಾನ ತನ್ನದೇ ಆದ ಸಾಮ್ರಾಜ್ಯ ಸ್ಥಾಪಿಸಿಕೊಂಡು ಅಸೀಮವಾಗಿ ಬೆಳೆಯುತ್ತಿದೆ. ಬಿ.ಟಿ. ಹತ್ತಿಯ ಕ್ರಾಂತಿಯಿಂದ ತೊಡಗಿ, ಕುಲಾಂತರಿ ಮೆಕ್ಕೆ ಜೋಳದವರೆಗೆ ಕೃಷಿ ಕ್ಷೇತ್ರದಲ್ಲೂ ತಳಿ ತಂತ್ರಜ್ಞಾನ ಅಭೂತಪೂರ್ವ ಸಾಧನೆ ಮಾಡಿದೆ. ಸಾಮಾಜಿಕವಾಗಿ ಈ ಬಗೆಯ ಕ್ರಾಂತಿ ತರಬಹುದಾದ ಬದಲಾವಣೆಗಳನ್ನು ಕಾಮತರು ಜೀವೋತ್ಪತ್ತಿ ಎಂಬ ಅಧ್ಯಾಯದಲ್ಲಿ ಹೀಗೆ ಕಲ್ಪಿಸುತ್ತಾರೆ: **"ಉಳಿದ ಪ್ರಾಣಿಗಳಂತೆ ಮಾನವನು ಕುಲುಕುಲು ನಗುತ್ತ ಬಾಲ್ಯ ಕಳೆದು ಶೂರನಂತೆ ಯೌವನದಲ್ಲಿ ಕಾಲಿಟ್ಟು, ಬಾಡಿದ ಹೂವಿನಂತೆ ಮುದಿ ಪ್ರಾಯವನ್ನು ನೂಕುತ್ತಾನೆ. ತಾರುಣ್ಯ ಅಖಂಡವಾಗಿ ಉಳಿಯುವಂತೆ, ಅದರಂತೆ ಸಾವು ಮುಂದೂಡಲು ಸಾಧ್ಯವೇ ಎಂದು ವಿಜ್ಞಾನಿಗಳು ತಲೆ ಕೆಡೆಸಿಕೊಂಡಿದ್ದಾರೆ. ಮುದಿ ಮಾಡುವ ಜೀನ್‌ಗಳ ಅಧಿಕಾರ ಕುಗ್ಗಿಸಲು ಕೃತಕ ಜೀನುಗಳು ಪೇಟೆಯಲ್ಲಿ ಸಿಗುವಂತೆ ಆಗುವ ಕಾಲ ಬಂದರೆ ಆಗ ಯಯಾತಿಯಂತೆ ಎಲ್ಲರೂ ಯೌವನ ಖರೀದಿಸಬಹುದು. ಹೆಂಗಳೆಯರು ತಮ್ಮ ರೂಪ ಲಾವಣ್ಯವನ್ನು ಕಾಯ್ದಿಡುವ ಅಮಿನೋ ಆಮ್ಲಗಳ ಮಿಶ್ರಣವನ್ನು ಸೇವಿಸಿ ತಾವೂ ಮೊಮ್ಮಗಳೊಂದಿಗೆ ಸ್ಪರ್ಧಿಸಬಹುದು - ಮುದಿತನ ಇಲ್ಲದ್ದರಿಂದ - ಮರಣ ಮುಂದೆ ಹೋಗಿದ್ದರಿಂದ ಮಾನವ ಸಂತಾನ ನಿರ್ಮಾಣ ಕಾರ್ಯದಲ್ಲಿ ಪ್ರಗತಿಯಾಗುವುದರಲ್ಲಿ ಸಂದೇಹವಿಲ್ಲ...... ಜೀವಿಗಳನ್ನು ನಿರ್ಮಿಸುವ, ಅವುಗಳಿಗೆ ಇಚ್ಛಿತ ಆಕಾರ, ರೂಪ, ನಡವಳಿಕೆ ಕೊಡುವ ನಿಸರ್ಗದ ಗುಟ್ಟು ಮಾನವನಿಗೆ ಸಂಪೂರ್ಣ ತಿಳಿದರೆ ಅವು ಅವನ್ನು ಯೋಗ್ಯ ಉಪಯೋಗಿಸಬಹುದೆ ಇಲ್ಲವೆ ದುರುಪಯೋಗ ಮಾಡಿಕೊಳ್ಳಬಹುದೆ ಎಂಬುದು ಕಲ್ಪನೆಗೆ ನಿಲುಕದ ಮಾತು. ಒಬ್ಬನು ಆಕಾಶದಷ್ಟು ಎತ್ತರವಾಗಿ ಬೆಳೆದರೆ, ಇನ್ನೊಬ್ಬನು ಇರುವೆಯಷ್ಟಾಗಬಹುದು, ಓಟಗಾರನು ಜಿರಾಫೆಯ ಕಾಲುಗಳನ್ನು ಪಡೆದರೆ, ಕುಸ್ತಿಗಾರನು ಆನೆಯ ಶಕ್ತಿ ಪಡೆದಾನು. ಕ್ರಿಕೆಟ್ ಆಟಗಾರನು ಲಕ್ಷ ಓಟಗಳ ಗಟ್ಟಿತನ ಪಡೆದರೆ, ಹಾಕಿ ಆಟಗಾರನು ಗಾಳಿಯಲ್ಲಿ ಹಾರಿ ಗೋಲ್ ಹೊಡೆದಾನು. ಹಾಡುಗಾರ್ತಿಯರು ಸುಮಧುರ ಕಂಠ ಪಡೆದಾರು. ವಿಜ್ಞಾನಿಗಳೆಲ್ಲ ಡಾ. ಸಿ.ವಿ. ರಾಮನ್ನರ ಬುದ್ಧಿಮತ್ತೆ ಪಡೆದು, ನೋಬೆಲ್ ಬಹುಮಾನ ಯಾರಿಗೆ ಕೊಡಬೇಕು ಎಂದು ಗೊಂದಲ ಏಳಬಹುದು. ಎಲ್ಲರೋಗಗಳಿಗೆ ಜೀವಿ ಔಷಧಿ ಬಳಸುವುದರಿಂದ ಡಾಕ್ಟರರೆಲ್ಲ ದೀವಾಳಿ ಎದ್ದು ಹೋದಾರು. ಸ್ತ್ರೀಯರು ಪ್ರತಿಮಾಸದ ಋತಿಮತಿಯಾಗುವ ಕಷ್ಟ ನಿಲ್ಲಿಸಿಕೊಂಡು ಐಚ್ಛಿಕ ಸಂತಾನ ಪಡೆದಾರು. ಪುರುಷರು ಹೆಚ್ಚಿನ ಇಂದ್ರಿಯ ಸಾಮರ್ಥ್ಯದಿಂದ ದೀರ್ಘಕಾಲದ ಸುಖ ಪಡೆದಾರು, ಇದಲ್ಲದೆ ಮಾನವನು ತನ್ನ ಕಡು ವೈರಿಗಳಾದ ಗುಂಗಾಡು, ಕ್ರಿಮಿಕೀಟಗಳು, ಹಾವು ಮೊದಲಾದವುಗಳ ಸಂತತಿ ನಿರ್ಮಾಣ ಸಾಧ್ಯವಾಗದಂತೆ ಮಾಡಿದರೆ ತನ್ನ ಸೇವೆಯಲ್ಲಿರುವ ನಾಯಿ, ಬೆಕ್ಕು, ದನ ಕರು, ಆನೆ, ಕುರಿ, ಕೋಳಿ ನವಿಲುಗಳಂತಹ ಪ್ರಾಣಿಗಳನ್ನು ಅಪಾರ ಸಂಖ್ಯೆಯಲ್ಲಿ ಸಾಕಬಹುದು. ಅಲ್ಲದೇ ತನ್ನ ಆಜ್ಞೆಗಳನ್ನು ಶಿರಸಾವಹಿಸಿ ಪಾಲಿಸುವಂತಹ ಹೊಸ ಬಗೆಯ ಪ್ರಾಣಿಗಳನ್ನು ಮಾನವನು ಹುಟ್ಟಿಸಬಹುದು. ಆ ಕಾಲ್ಪನಿಕ ಯುಗದಲ್ಲಿ ಮಾನವನು ಕಲ್ಪಿಸಿದ್ದೆಲ್ಲ ಆವನದಾಗಬಹುದು. ಆದರೆ ಅದರಿಂದ ಅವನ ಸಂತೋಷ, ಸುಖ ಹೆಚ್ಚಾಗುವುದು ಎಂದು ಮಾತ್ರ ಹೇಳಲಾದೀತೆ?"**

ಕಾಮತರ ಈ ಬಗೆಯ ಘೋಷಣೆ, ವಿಜ್ಞಾನ ನಮ್ಮ ಸಮಾಜದ ಒಂದು ಅಂಗ ಎಂದು ಒಪ್ಪಿಕೊಳ್ಳುತ್ತದೇ ವಿನಾ ಅದೊಂದು ಪ್ರತ್ಯೇಕವಾದ ಜ್ಞಾನ ಎಂದು ಕೃತಕ ಗೋಡೆ ನಿರ್ಮಿಸುವುದಿಲ್ಲ. ವಿಜ್ಞಾನಿಗಿರಬೇಕಾದ ಸಾಮಾಜಿಕ ಜವಾಬ್ದಾರಿಯೇನು ಎಂಬುದನ್ನು ಈ ವಾಕ್ಯಗಳು ನಮಗೆ ಸ್ಪಷ್ಟವಾಗಿ ಮನಗಾಣಿಸುತ್ತವೆ.

ನಮ್ಮ ಶರೀರವನ್ನು ವಿವರಿಸುವ ಬಗೆ ಹೇಗೆ? ವಚನಕಾರರಾದರೆ ಉಪಮೆಗಳಿಂದಲೇ ಶರೀರವನ್ನು ವಿವರಿಸುತ್ತಾ ಅಧ್ಯಾತ್ಮಿಕಕ್ಕೆ ಒಯ್ಯಬಹುದು. ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ ಎಂದಿಲ್ಲವೆ ಬಸವಣ್ಣನವರು. ಪುರಂದರದಾಸರು 'ಎಲುಬು ರಕ್ತ ಮಾಂಸಗಳ ಮೇಲೆ ಚರ್ಮದ ಹೊದಿಕೆ, ಒಳಗೆ ಮಲ ಮೂತ್ರ ಕ್ರಿಮಿ ರಾಶಿ ಇಹುದು, ಹಲವು ವ್ಯಾಧಿಯ ಬೀಡು,

ಪಂಚಭೂತದ ನಾಡು' ಎಂದರು. ಆದರೆ ವೈಜ್ಞಾನಿಕವಾಗಿ ಬೇರೆಯದೇ ಆದ ವಿವರ ಅಗತ್ಯವಿದೆ. ಕಾಮತರು ಕೂಡ ಉಪಮೆಗಳನ್ನು ಕೊಡುತ್ತಾರೆ. ನಮ್ಮ ಬದುಕಿನಿಂದ ಆಯ್ದ ಪ್ರಸಂಗದಿಂದ.

**"ಶ್ವೇತಶಿಲೆಯಿಂದ ಕಟ್ಟಿದ ತಾಜಮಹಲು, ಪಾಷಾಣದಿಂದ ನಿರ್ಮಿಸಿದ ಪಿರಮಿಡ್ಡುಗಳನ್ನು ನೋಡಿ ಸೋಜಿಗಪಡುತ್ತೇವೆ; ಅದ್ಭುತ ಎನ್ನುತೇವೆ, ವಿಶ್ವ ವಿಸ್ಮಯಗಳಲ್ಲಿ ಒಂದು ಎಂದು ಸಾರುತ್ತೇವೆ. ಕಲ್ಲಿಗೆ ಕಲ್ಲು ಜೋಡಿಸಿ ಮಾಡಿದ ಈ ಕಟ್ಟಡಗಳೇ ನಮಗೆ ಇಷ್ಟೊಂದು ರಮ್ಯವಾಗಿ ಕಂಡರೆ, ಕೇವಲ ಒಂದೇ ಒಂದು ಜೀವಾಣು ಬಳಸಿ ನಿರ್ಮಿತವಾದ, ಸತತ ಬೆಳೆಯುವ, ಸತತ ದುಡಿಯುವ ಈ ಶರೀರ ಕಟ್ಟಡದ ಆಗುಹೋಗುಗಳ ಗುಟ್ಟು ಅರಿತರೆ, ಮಾತಿಲ್ಲದೆ ಮೂಕರಾಗುವ ಪ್ರಸಂಗ ಬರಬಹುದು.... ತಾಯ ತೊಡೆಯ ಮೇಲೆ ಕುಳಿತು ಕೇಕೆ ಹಾಕಿ ನಗುವ ಮಗು ಎಷ್ಟು ಅಬಲ ಎಂದು ಕಂಡರೂ ಅದರ ಶರೀರ ಜಟಿಲವಾದ ಎಷ್ಟೋ ಸಮಸ್ಯೆಗಳಿಗೆ ಉತ್ತರ ದೊರಕಿಸಿಕೊಳ್ಳಬಹುದಾಗಿದೆ. ಆ ದೃಷ್ಟಿಯಲ್ಲಿ ಒಂದು ಮಗುವನ್ನು ಮಹಾನಗರಕ್ಕೆ ಹೋಲಿಸಬಹುದಾಗಿದೆ. ನೀರು ಪೂರೈಕೆಯಂತೆ ಇದ್ದ ರಕ್ತ ಪೂರೈಕೆಯಿಂದ ಜೀರ್ಣಿಸಿದ ಆಹಾರದ ಜತೆಗೆ ಪ್ರತಿ ಜೀವಾಣುವಿಗೂ ಪ್ರಾಣವಾಯುವಿನ ಪೂರೈಕೆ ಆಗುತ್ತದೆ. ಮೂತ್ರಪಿಂಡ ಗುದದ್ವಾರಗಳು ಒಳಚರಂಡಿ ಯೋಜನೆ ಇದ್ದಂತೆ, ಇದರಲ್ಲಿ ಘನ ಮತ್ತು ದ್ರವ ಪದಾರ್ಥಗಳನ್ನು ಬೇರ್ಪಡಿಸುವ ವ್ಯವಸ್ಥೆಯೂ ಇದೆ. ಹೃದಯವು ಜಲ ಒತ್ತಡದ ಪಂಪಿನಂತೆ ಕೆಲಸಮಾಡಿದರೆ ಕೈಕಾಲುಗಳು ವಾಹನದ ಸಾರಿಗೆಯಂತೆ ಇವೆ. ಮಿದುಳು ಮುಖ್ಯವಾದ ನಿರ್ಣಯ ಕೈಗೊಳ್ಳುವ ಕಚೇರಿ ಠಾಣೆಯಂತೆ ಇದ್ದರೆ, ಕಿವಿ, ಕಂಠಗಳು ಆಕಾಶವಾಣಿಯಂತೆ ಇರುವುವು. ಮಾಂಸಖಂಡಗಳು ಸೈನ್ಯದಂತೆ ಇದ್ದರೆ, ಕಣ್ಣುಗಳು ರಾಡಾರಿನಂತೆ ಇರುವುವು."**

ಕವಿ ಭಾವವಿಲ್ಲದವರಿಗೂ ಮನಸ್ಸಿಗೆ ತಟ್ಟುವ ಸಂಗತಿಗಳಿವು. ವಿಜ್ಞಾನ ಹೃದಯದ ಕವಾಟಗಳಲ್ಲಿ ಸುಸುಳಿ, ಮಿಡಿಯುವ ಚಿಂತನೆಗಳು ಇವು. ಈ ಬಗೆಯ ಬರವಣಿಗೆಯ ವೈಖರಿಯನ್ನು ಏಕೋ ಬಲು ವಾಲು ವಿಜ್ಞಾನ ಲೇಖಕರು ಮೈಗೂಡಿಸಿಕೊಂಡಿಲ್ಲ. ಕಾಮತರನ್ನು ಅನುಕರಿಸಿದ್ದರೂ ಅದೊಂದು ಉತ್ತಮ ಸಾಹಿತ್ಯ ರಚನೆಗೆ ಅನುವು ಮಾಡಿಕೊಡುತ್ತಿತ್ತೋ ಏನೋ. ಅಸಲೀ ಮಾತೆಂದರೆ ನಮ್ಮ ಎಷ್ಟೋ ಮಂದಿ ವಿಜ್ಞಾನ ಲೇಖಕರು ಇಂಥ ಕೃತಿಗಳನ್ನು ಓದದೇ ಇರುವುದಿಲ್ಲ.

ನಮ್ಮ ಸುತ್ತಣ ನಿಸರ್ಗದ ಸಕಲ ಜೀವಿರಾಶಿಯ ವಿಕಾಸದ ಪ್ರಕ್ರಿಯೆಯಲ್ಲಿ ನಮ್ಮದೂ ಒಂದೆಂದು ಭಾವಿಸಿದಾಗ ಮಾತ್ರ ಮನುಕುಲದ ಚರಿತ್ರೆಯ ಹ್ರಸ್ವ ಅವಧಿ ನಮ್ಮ ಕಣ್ಣಮುಂದೆ ನಿಲ್ಲುತ್ತದೆ. ಪ್ರಾಣಿ ದಯೆ ಉಂಟಾಗುತ್ತದೆ. ಆಗ ನಮ್ಮನ್ನು ನಾವು ನಿಜವಾದ ಅರ್ಥದಲ್ಲಿ ಮತಿವಂತ ಮಾನವ (Homosapien) ಎನ್ನಬಹುದು.

ಪ್ರಾಣಿ ಪರಿಸರದಲ್ಲಿ ಕಾಮತರು ಇಡಿಯಾಗಿ ಧ್ವನಿಸುವ ಅಂಶವೇ ಇದು. ನಮ್ಮ ಪರಿಸರದ ವೃತ್ತಾಂತವನ್ನೇ ದೃಷ್ಟಾಂತವಾಗಿ ನೀಡಿ ನಮ್ಮ ಬದುಕಿನ ಘನಘೋರ ಚಿತ್ರಗಳನ್ನವರು ಅತ್ಯಂತ ಪರಿಣಾಮಕಾರಿ ಶಬ್ದಗಳಲ್ಲಿ ಹಿಡಿದಿಟ್ಟಿದ್ದಾರೆ.

ತಿಮಿಂಗಿಲಗಳ ಕಗ್ಗೊಲೆ, ಮೊಸಳೆಗಳ ಬೇಟೆ, ಹುಲಿ, ಸಿಂಹ, ಚಿರತೆಗಳ ಸರ್ವನಾಶ, ಹಾವುಗಳನ್ನು ಆಜನ್ಮ ವೈರಿಗಳಂತೆ ಕಾಣುವ ನಮ್ಮ ಅಮಾನವೀಯ ಪ್ರವೃತ್ತಿ, ಕಪ್ಪೆಗಳ ಹತ್ಯೆ ಇವನ್ನೆಲ್ಲ ವಿವರವಾಗಿ ಪ್ರಸ್ತಾಪಿಸುತ್ತಾ, ಅನ್ನದೇವರು ನಮ್ಮ ಈ ಕೃತ್ಯವನ್ನು ಮೆಚ್ಚಿಯಾನೇ ಎಂದು ಕೇಳುತ್ತಾರೆ ಕಾಮತರು.

ಜೀವಿಗಳ ಆಶ್ರಯ ಕುರಿತು ಕಾಮತರು ಪ್ರಸ್ತಾಪಿಸುವಾಗಲೂ ಅಲ್ಲೊಂದು ಅವರದೇ ಆದ ವೈಶಿಷ್ಟ್ಯ ಎದ್ದು ಕಾಣುತ್ತದೆ. ಎಲ್ಲ ತರಹದ ಜನರು ತಮ್ಮ ವಾಸಕ್ಕೆ ಲಲಿತಮಹಲೇ ಬೇಕೆನ್ನದೆ ತಮ್ಮ ಶಕ್ತಿ ಮತ್ತು ಯೋಗ್ಯತೆಗೆ ಅನುಸಾರವಾಗಿ ಜೋಪಡಿಯಿಂದ ಬಂಗಲೆಯವರೆಗೆ ವಿವಿಧ ಪ್ರಕಾರದ ಕಟ್ಟಡಗಳಲ್ಲಿ ಸಂಸಾರ ಹೂಡುವಂತೆ ಪ್ರಾಣಿಗಳೂ ತಮ್ಮ ವಾಸಯೋಗ್ಯ ತಾಣಗಳಲ್ಲೇ ತಮ್ಮ ಗೃಹ ನಿರ್ಮಾಣ ಮಾಡಿಕೊಳ್ಳುತ್ತವೆ ಎನ್ನುವ ಪೀಠಿಕೆಯೊಂದಿಗೆ ಜೀವ ಜಗತ್ತಿನ ವೈವಿಧ್ಯಮಯ ಆಶ್ರಯ ತಾಣಗಳ ಬಗ್ಗೆ ಅತ್ಯಂತ ರಂಜನೀಯವಾಗಿ ಬರೆಯುತ್ತಾರೆ. ತಿಮಿಂಗಿಲದಿಂದ ತೊಡಗಿ ಕರಡಿ, ಹುಲಿ, ಸಿಂಹ, ಕೊನೆಗೆ ನಮ್ಮ ಹೊಟ್ಟೆಯೊಳಗೇ ಬಾಡಿಗೆ ಮನೆಯಂತೆ ವಾಸಿಸುವ ಸೂಕ್ಷ್ಮ ಹುಳು, ಕ್ರಿಮಿಗಳ ಹಲವು ಆಶ್ರಯ ತಾಣಗಳನ್ನು ಬೊಟ್ಟು ಮಾಡಿ ತೋರಿಸುತ್ತಾರೆ.

ಕೀಟಗಳ ಸಾಮಾಜಿಕ ಸಂಘಟನೆ ಕಾಮತರಿಗೆ ಇಂಗ್ಲೆಂಡಿನ ರಾಜ ಮನೆತನದ ಪದ್ಧತಿಯನ್ನು ನೆನಪಿಸುತ್ತದೆ. ಕೀಟಗಳ ಸಾಮಾಜಿಕ ಜೀವನದಲ್ಲಿ ಹೆಣ್ಣಿನ ಬಗ್ಗೆ ಬರೆಯುತ್ತಾ ಪುರುಷರ ಸ್ಥಾನ ಇಂಗ್ಲೆಂಡಿನ ರಾಣಿಯ ಪತಿಯಂತೆ ಎನ್ನುತ್ತಾರೆ. ಇವೆಲ್ಲ ಸರಿಯೇ. ಕಾಮತರ ಬರಹಗಳ ಸಂದೇಶವಾದರೂ ಏನು? ಆಗಲೇ ಹೇಳಿದ ಹಾಗೆ ವಿಜ್ಞಾನವು ಬದುಕಿನೊಟ್ಟಿಗೆ ನೋಡುವ ಕ್ರಿಯೆ. ಕಾಮತರು ಹೇಳುತ್ತಾರೆ.

"ನಾವು ಸಂಘ ಜೀವನಕ್ಕಾಗಿ ಅತಿಯಾಗಿ ಅಭಿಮಾನ ಪಡುತ್ತೇವೆ. ಆದರೆ ಈ ಸಾಂಘಿಕ ಪ್ರವೃತ್ತಿಯೇ ನಮ್ಮನ್ನು ಸ್ವಾರ್ಥಿ, ಸಂಕುಚಿತ ಮನೋಬುದ್ಧಿಯವರನ್ನಾಗಿ ಮಾಡಿರಬೇಕು. ಬಾಯಿಂದ ನಾವು ವಿಶ್ವ ಕುಟುಂಬಿಗಳೆಂದರೂ ನೆರೆ ರಾಜ್ಯಗಳನ್ನು ಕಂಡರೆ ಆಗುವುದಿಲ್ಲ, ನೆರೆ ಭಾಷೆ ಕೇಳಿದರೆ ಸಹಿಸುವುದಿಲ್ಲ, ಪಾಕಿಸ್ತಾನ, ಚೀನಗಳೊಡನೆ ಮೈತ್ರಿಯಿಲ್ಲ, ನಿಸರ್ಗದತ್ತವಾಗಿ ಪೆಟ್ರೋಲನ್ನು ಉಳಿದ ಜನಾಂಗಗಳ ಹಿತ ಸಾಧನೆಗೆ ಕೊಡಲು ಅರಬರು ಸಿದ್ಧರಿಲ್ಲ, ಭೂಮಿಯ ಒಂದು ಭಾಗದಲ್ಲಿ ಹಸಿವೆಯಿಂದ ಮಾನವನು ಸಾಯುತ್ತಿದ್ದಾಗ, ಇನ್ನೊಂದು ಭಾಗದಲ್ಲಿ ಜೀರ್ಣವಾಗದಷ್ಟು ಆಹಾರ ಬೆಳೆದು ನಂತರ ಹಾಳುಮಾಡುತ್ತಾರೆ. ಜಗತ್ತಿನಲ್ಲಿ ಅಸಂಖ್ಯ ಬಡವರು, ನಿರ್ಗತಿಕರಿದ್ದರೂ ಅಣ್ವಸ್ತ್ರ ಯುದ್ಧಗಳನ್ನು ನಿಲ್ಲಿಸಿ ಅದಕ್ಕೆ ಖರ್ಚಾಗುವ ಹಣವನ್ನು ಮಾನವನ ಕಲ್ಯಾಣಕ್ಕಾಗಿ ಬಳಸಲು ನಮ್ಮಿಂದ ಸಾಧ್ಯವಾಗಲಿಲ್ಲ. ಒಬ್ಬರಿಗಾಗಿ ಇನ್ನೊಬ್ಬರು ಜೀವಿಸುವ ಕಲೆಯನ್ನು ನಾವು ಕೀಟಗಳಿಂದ ಕಲಿಯಬೇಕೆಂದು ಕಾಣುತ್ತದೆ (ಸಾಮಾಜಿಕ ಸಂಘಟನೆ)".

ನಾದಲೋಲ ಜೀವಿಗಳ ಬಗ್ಗೆ ಬರೆಯುತ್ತ ಕಂಠವಿಲ್ಲದ ಕೀಟಗಳನ್ನು ವಾದ್ಯಗಾರರ ಗುಂಪಿಗೆ ಸೇರಿಸುತ್ತಾರೆ. ನಾದವನ್ನು ಆಸ್ವಾದಿಸುವ ಕಿವಿಗಳೇ ಕೀಟಗಳಿಗಿಲ್ಲವಲ್ಲ ಎಂದು ಚೋದ್ಯ ಪಡುವವರಿಗೆ ಕೀಟಗಳ ದೇಹ ರಚನೆಯನ್ನು ತಿಳಿಸುತ್ತಾ ಅವುಗಳ ಸೂಕ್ಷ್ಮ ಅವಯವಗಳ ಬಗ್ಗೆ ಪರಿಚಯಿಸುತ್ತಾರೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಬರುವ ಜಾನಶ್ರುತಿ ರಾಜನ ಬಗ್ಗೆ ಅವನಿಗೆ ತಿಳಿದಿದ್ದ ಪಕ್ಷಿ ಭಾಷೆಯ ಬಗ್ಗೆ ಓದುಗರ ಗಮನ ಹರಿಸಿ, ಆಧುನಿಕ ಪಕ್ಷಿ ವಿಜ್ಞಾನದ ಪ್ರಗತಿಯನ್ನೂ, ಪಕ್ಷಿಗಳ ಧ್ವನಿ ಅನುಕರಿಸುವ ಕಲೆಯನ್ನೂ ಸೋದಾಹರಣವಾಗಿ ನಮ್ಮ ಮುಂದೆ ಬಿಚ್ಚಿಡುತ್ತಾರೆ.

ಜೀವ ಜಗತ್ತಿನಲ್ಲಿ ನಾಮಕರಣಕ್ಕೆ ವೈಜ್ಞಾನಿಕ ಇತಿಹಾಸವಿದೆ. ೧೭೫೮ರಲ್ಲಿ ಲಿನಿಯಸ್ ಎಂಬಾತ ಈ ಪದ್ಧತಿಗೆ ತಳಹದಿ ಹಾಕಿದ. ಆಗ ಆತ ದಾಖಲಿಸಲು ಸಾಧ್ಯವಾದದ್ದು ೪೩೭೯ ಪ್ರಾಣಿಗಳನ್ನ. ೧೯೦೦ರ ಹೊತ್ತಿಗೆ ಈ ಪಟ್ಟಿಯಲ್ಲಿ ૩,೦೦,೦೦೦ ಪ್ರಾಣಿಗಳು ಸೇರಿದವು. ವೈಜ್ಞಾನಿಕವಾಗಿ ಈ ಎಲ್ಲ ಹಂತಗಳನ್ನೂ ವಿವರಿಸುತ್ತ, ಜೀವಿಗಳ ನಾಮಕರಣ ಪದ್ಧತಿ ಏಕೆ ಅವಶ್ಯ ಎಂಬುದನ್ನು ನಮಗೆ ಮನಗಾಣಿಸುತ್ತ, ಕೆಲವೊಮ್ಮೆ ಹಾಸ್ಯ ಪ್ರಸಂಗಗಳನ್ನು ಕಾಮತರು ನಮ್ಮ ಮುಂದಿಡುತ್ತಾರೆ.

"ಧೀಮಂತ ಜೀವಿ ಎಂದು ಮೆರೆಯುವ ಮಾನವನ ವಂಶಜರಿಗೆಲ್ಲ ಪ್ರತ್ಯೇಕವಾದ ಹೆಸರು ಕೊಡಲು ಸಾಧ್ಯವಿಲ್ಲ. ಅಂತೆಯೇ ನಮ್ಮಲ್ಲಿ ಚಂದ್ರಶೇಖರ, ಜಾನ್, ಮೇರಿ, ಬಸವರು ಎಷ್ಟು ಲಕ್ಷ ಇದ್ದಾರೋ ಏನೋ. ಪ್ರತ್ಯೇಕಿಸಲು ಶಾರ್ದೂಲ ಸಿಂಘ್, ಬಾಟ್ಲಿವಾಲಾ, ಕುದುರೆಮೋತಿಗಳಂತಹ ಅಡ್ಡ ಹೆಸರುಗಳನ್ನು ಪಡೆಯುವ ಪ್ರಸಂಗ ಬಂದಿದೆ. ಸಾಕಿದ ಗಿಳಿಗಳಿಗೆ ಮಿಠೂ ಎಂದೂ, ನಾಯಿಗೆ ಟಿಪ್ಪೂ, ಮೋತಿ ಎಂದೂ ನಾಲ್ಕಾರೂ ಹೆಸರುಗಳಿಗಿಂತ ಬೇರೆಯವು ಹೊಳೆಯುವುದೇ ಇಲ್ಲ. ಮಾನವನನ್ನು ಅನುಕರಿಸಿ ಪ್ರಾಣಿಗಳಲ್ಲಿ ಹೆಸರು ಇಡುವ ಪರಿಪಾಠ ಇದೆಯೋ ಇಲ್ಲವೋ ಗೊತ್ತಿಲ್ಲ. ಇದ್ದರೂ ಮಾನವನಂತೆ ಇಂದಿರಾ, ಸರೋಜಿನಿ, ರಾಜೀವ, ಸಂಜೀವ ಎಂದೂ ಇಡುವವೆಂದು ಹೇಳಲಾಗುವುದಿಲ್ಲ. ಬದಲಾಗಿ ಪೀಡಕ ಕೀಟಗಳು ತಮ್ಮಲ್ಲಿ ಶೂರನೆನಿಸಿಕೊಂಡವನಿಗೆ ಮಾನವ ವಿಪರೀತನ್, ನರಹಿಂಸಕನ್, ಸಂತಾನ ಪ್ರವೀಣನ್, ವಂಶೋದ್ಧಾರಕನ್ ಎಂಬ ಅನ್ವರ್ಥ ನಾಮಗಳನ್ನು ಕೊಡುತ್ತಿದ್ದವೋ ಏನೋ".

ಗೂಡುಕಟ್ಟುವ ಹಕ್ಕಿಗಳು 'ಫ್ಲಾಟ್' ಹುಡುಕುವ ಪರಿ, ಚೊಚ್ಚಲ ಬಾಣಂತನಕ್ಕೆ ಗಂಡು ಪಕ್ಷಿಯ ನೆರವು ಪಡೆಯುವುದು ಇವೆಲ್ಲವನ್ನೂ ಕಾಮತರು ಕುಟುಂಬ ಯೋಜನೆಗಳು ಎನ್ನುತ್ತಾರೆ. ಹೆಣ್ಣು ಗಂಡಾಗುವುದು, ಗಂಡು ಹೆಣ್ಣಾಗುವುದನ್ನು ವೈಜ್ಞಾನಿಕವಾಗಿ ವಿವರಿಸುವ ಕಾಮತರು ಹಾಗಿಲ್ಲದಿದ್ದರೆ ಪುರುಷರಲ್ಲಿ ಕೆಲಸಕ್ಕೆ ಬಾರದ ಸ್ತನ ಭಾಗ ಇರುವ ಅವಕಾಶವೇನಿತ್ತು ಎಂದು ಕೇಳುತ್ತಾರೆ. ಜೀವಿಗಳ ಅಂಗಾಂಗಗಳ ಮರುಬೆಳವಣಿಗೆ ಕುರಿತು ಸಾಮಾನ್ಯ ಜನರು ಏನೆಲ್ಲ ಯೋಚಿಸಬಹುದು? ಶರೀರದಲ್ಲಿ ತಲೆಯೊಂದೇ ಬೆಳೆಯಲು ಪ್ರಾರಂಭಿಸಿದರೆ, ಕೈಗಳಷ್ಟೇ ಉದ್ದವಾಗುತ್ತ ಹೋದರೆ, ಹೊಟ್ಟೆ ಗುಡಾಣವಾಗುತ್ತ ಬೆಳೆದರೆ? ನಿಸರ್ಗ, ದೇಹದ ವಯಸ್ಸಿಗನುಗುಣವಾಗಿ ಯಾವ ಅಂಗ ಎಷ್ಟು ಪ್ರಮಾಣದಲ್ಲಿ ಬೆಳೆಯಬೇಕೆನ್ನುವುದನ್ನು ನಿರ್ಧರಿಸುತ್ತದೆ, ಹಾಗೆಯೇ ನಿಯಂತ್ರಿಸುತ್ತದೆ. ಕಾಮತರು ಇದೇ ಪ್ರಕ್ರಿಯೆಯನ್ನು ನಮ್ಮ ಪುರಾಣ ಕಲ್ಪನೆಗೂ ವಿಸ್ತರಿಸುತ್ತಾರೆ:

"ದೇವ ದೇವತೆಗಳು ಮಾನವನಿಗಿಂತ ಭಿನ್ನ ಎಂದು ಜನಸಾಮಾನ್ಯರಿಗೆ ತಿಳಿವಳಿಕೆ ಮೂಡಿಸುವಂತೆ ಅವರನ್ನು ಅನೇಕಾಂಗಿಗಳನ್ನಾಗಿ ರೂಪಿಸಲಾಗಿದೆ. ಶಿವ, ವಿಷ್ಣು ಮುಂತಾದ ದೇವತೆಗಳಿಗೆ ನಾಲ್ಕು ಕೈಗಳಿದ್ದರೆ, ಆರು ಎಂಟು ಹತ್ತು ಕೈಗಳಿದ್ದ ದೇವ-ರಾಕ್ಷಸರಿದ್ದಾರೆ. ತ್ರಿಮೂರ್ತಿ, ಷಣ್ಮುಖ, ದಶಾನನರಿದ್ದಾರೆ. ರಾವಣನ ಯಾವ ಶಿರದ ಮಿದುಳಿನ ಅಂಕಿತದಲ್ಲಿ ಅಂಗಾಂಗಗಳು ಕೆಲಸ ಮಾಡುತ್ತಿದ್ದವು, ಯಾವ ಬಾಯಿಂದ ಆತ ಸುಗ್ರಾಸ ಭೋಜನ ಮಾಡುತ್ತಿದ್ದ? ಯಾವ ಬಾಯಿಂದ ಸೋಮರಸ ಕುಡಿಯುತ್ತಿದ್ದ? ಒಂದೇ ಶಿರಕ್ಕೆ ನಿದ್ರೆ ಬಂದು ಇನ್ನೊಂದಕ್ಕೆ

**ಬಾರದಿದ್ದರೆ ಅವನು ಏನು ಮಾಡುತ್ತಿದ್ದ? ಎಂದು ಕೇಳುವವರಿಗೆ ರಾವಣನಂತಹ ವ್ಯಕ್ತಿ ಜೀವಿಸುವುದು ಸಾಧ್ಯವಿಲ್ಲ ಎಂದು ಹೊಳೆಯಬೇಕು. ಇದು ಪೂರ್ವಜರಿಗೂ ತಿಳಿದಿರಬೇಕು".**

ಕಾಮತರ 'ಪ್ರಾಣಿ ಪರಿಸರ' ಕೃತಿಯ ಕಾಣ್ಕೆ ಇರುವುದು ಜೀವೋತ್ಪತ್ತಿಯಾಗಲೀ ಪರಿಸರದ ಬಗ್ಗೆ ತಿಳಿಯಾಗಿ ಹೇಳುವ ಕಲೆಯಲ್ಲಾಗಲೀ ಅಲ್ಲ. ನಾಡಿನಾದ್ಯಂತ ಸಂಚರಿಸಿ, ದೇವಾಲಯಗಳಲ್ಲಿನ ಪ್ರಾಣಿ ಶಿಲ್ಪಗಳನ್ನು ಅಧ್ಯಯನ ಮಾಡಿ, ಅವುಗಳನ್ನು ವರ್ಗೀಕರಿಸಿ, ಪುರಾತತ್ವ ಇಲಾಖೆಯವರು ಮಾಡಬೇಕಾಗಿದ್ದ ಕೆಲಸವನ್ನು ತಮ್ಮ ಹೆಗಲಮೇಲೆ ಹಾಕಿಕೊಂಡು ಕನ್ನಡದ ಓದುಗರನ್ನು ಹೊಸ ಪ್ರಪಂಚಕ್ಕೊಯ್ಯುವ ಅವರ ಹಂಬಲದಲ್ಲಿ. ಪ್ರಾಣಿ ಪ್ರಪಂಚದ ಲಾಂಛನಗಳನ್ನು ಯಾವ ಯಾವ ಆಳುವ ವರ್ಗ ಹೇಗೆ ಬಳಸಿಕೊಂಡಿದೆ ಎಂಬುದರ ಪಟ್ಟಿಯಷ್ಟೆ ಇಲ್ಲಿಲ್ಲ. ಉಬ್ಬು ಚಿತ್ರಗಳನ್ನು ಆಧರಿಸಿ ತಾವೇ ಸ್ವತಃ ಬಿಡಿಸಿರುವ ಸೊಗಸಾದ ರೇಖಾಚಿತ್ರಗಳಿವೆ. ಗಂಗರ ಆನೆ, ಮೈಸೂರರಸರ ಗಂಡಭೇರುಂಡ, ಹೊಯ್ಸಳರ ಹೆಬ್ಬುಲಿ, ವಿಜಯನಗರದ ಅರಸರ ವರಾಹ, ಕದಂಬರ ಸಿಂಹ ಇವು ಒಂದು ಬಗೆಯವಾದರೆ, ದುಷ್ಟ ಮರ್ದಕ ಶಿಷ್ಟ ರಕ್ಷಕರಾಗಿ ಮೂಡಿ ಬಂದಿರುವ ದೇವಾನುದೇವತೆಗಳ ಚಿತ್ರ ಪಶು ಮತ್ತು ಮಾನವ ಸಂಬಂಧವನ್ನು ಸೂಚಿಸುವ ಹಲವು ಅಪರೂಪದ ಚಿತ್ರಗಳು ಇಲ್ಲಿವೆ. ದೇವಾಲಯಕ್ಕೆ ಹೋದಾಗ ನಾವು ಏನೇನು ನೋಡಿದರೆ ಚೆನ್ನ ಎಂಬ ಕಿವಿಮಾತನ್ನು ಹೇಳುತ್ತಲೇ ಪ್ರಾಣಿ ಪ್ರಪಂಚಕ್ಕೆ ನಮ್ಮನ್ನು ಕರೆದೊಯ್ಯುತ್ತಾರೆ ನಮ್ಮ ದೃಷ್ಟಿ ತಪ್ಪಿಸಿಕೊಂಡ ಹಲವು ಚಿತ್ರಗಳನ್ನು ಕಾಮತರು ಪಟ್ಟಿ ಮಾಡಿ ತೋರಿಸುತ್ತ ಮತ್ತೆ ಅಂಥವನ್ನು ನೋಡಲೆಂದೇ ಹೋಗಲು ಪ್ರೇರೇಪಿಸುತ್ತಾರೆ. ಸಾಹಿತ್ಯದ ವಿವಿಧ ಅಂಶಗಳನ್ನು ವಿಜ್ಞಾನಕ್ಕೆ ಬಳಸಿಕೊಂಡ ಕಾಮತರು ಮೂಲತಃ ವಿಜ್ಞಾನದ ಹಿನ್ನೆಲೆಯುಳ್ಳವರು ಎನ್ನುವುದನ್ನು ನಾವು ಮರೆಯುವಂತಿಲ್ಲ. ವೈಜ್ಞಾನಿಕ ಸಾಹಿತ್ಯದ ಮೂಲ ತಿರುಳಿರುವುದೇ ಒಂದು ಶಿಸ್ತಿಗೊಳಪಟ್ಟ ವಿಷಯದ ಪ್ರತಿಪಾದನೆಯಲ್ಲಿ. ಯಾವುದೇ ಪ್ರವಾಸೋದ್ಯಮ ಇಲಾಖೆಯ ಪ್ರಕಟಣೆಯಲ್ಲಿ ಕಂಡುಬರದ, ಪುರಾತತ್ವ ಇಲಾಖೆಯ ಕಡತದಲ್ಲಿ ಕಳೆದುಹೋದ ಅಪರೂಪದ ಚಿತ್ರಗಳನ್ನು ಜನ ಸಾಮಾನ್ಯರ ಕೈಗಿಡುವ ಕಾಮತರು ಇದೇ ಕೃತಿಯಲ್ಲಿ ದೇವಾಲಯಗಳ ಕಾಲ, ಸ್ಥಳ ಅವು ಯಾವ ರಾಜ್ಯ, ಜಿಲ್ಲೆಗಳಲ್ಲಿ ಹಂಚಿಹೋಗಿವೆ ಎಂಬ ಅಂಶಗಳನ್ನು ಅತ್ಯುತ್ತಮ ಇತಿಹಾಸಕಾರರಾಗಿ ದಾಖಲಿಸುತ್ತಾರೆ. ಔರಂಗಾಬಾದಿನ ಅಜಂತದ ಬೌದ್ಧ ಗುಹೆ ಇರಬಹುದು, ಶಿವಮೊಗ್ಗದ ಬಳ್ಳಿಗಾವೆಯ ಕೇದಾರೇಶ್ವರನ ದೇವಾಲಯವಿರಬಹುದು, ಅನಂತಪುರದ ಲೇಪಾಕ್ಷಿ ಇರಬಹುದು, ಅಲ್ಲಿನ ಪ್ರಾಣಿ ಶಿಲ್ಪಗಳ ಬಗ್ಗೆ ನಮ್ಮ ಮುಂದೆ ಅಪರೂಪದ ಚಿತ್ರಗಳು ತೆರೆದುಕೊಳ್ಳುತ್ತವೆ. ರಾಜ್ಯದ ಹೊರಗೂ ಒಳಗೂ ಅವಿರತವಾಗಿ ಎರಡು ವರ್ಷ ಕಾಲ ಸುತ್ತಾಡಿ, ನಮ್ಮದೇ ಚಿತ್ತಲನ್ನು ನಮಗೇ  ಪರಿಚಯಿಸುವ ಪರಿ ಅನನ್ಯ. ಆದರೆ ಅವರ ಅನುಭವದಲ್ಲಿ ವಿಷಾದದ ಛಾಯೆಯನ್ನು ಸ್ಪಷ್ಟವಾಗಿ ಗುರುತಿಸಬಹುದು. ನಮ್ಮ ಜಡತ್ವ, ಸರಕಾರೀ ಅಧಿಕಾರಿಗಳ ಅವಜ್ಞೆ, ಅಸಡ್ಡೆ, ನಮ್ಮ ಸಂಸ್ಕೃತಿಯ ಬಗ್ಗೆ ನಮಗಿರುವ ಮೌಢ್ಯ ಕಾಮತರಿಗೆ ಹಲವು ಸಲ ಕಿರಿಕಿರಿ ಉಂಟುಮಾಡಿದೆ. ಬಳ್ಳಿಗಾವಿಯ ಭೇರುಂಡೇಶ್ವರ ಸ್ತಂಭದ ಮೇಲಿರುವ ಗಂಡಭೇರುಂಡಕ್ಕೆ ಮಾನವ ದೇಹವಿದ್ದು ರೆಕ್ಕೆ ಶಿರಗಳು ಮಾತ್ರ ಹಕ್ಕಿಯವು ಇವೆ ಎಂದು ಯಾವ ಗೈಡಾದರೂ ನಿಮಗೆ ತೋರಿಸಿದ್ದಾನೆಯೇ? ಲೇಪಾಕ್ಷಿಯ ಕಂಬವೊಂದರ ಮೇಲೆ ಗೂಬೆಯ ಚಿತ್ರವೊಂದನ್ನು ಬಿಡಿಸಿರುವುದು ಗೊತ್ತೇ? ಹಂಪೆಯ ಕಲ್ಲಿನ ರಥದ ಮೇಲೆ ಆಟಿಗೆಯನ್ನು ಎಳೆಯುವ ಗಿಣಿಯನ್ನು ನೀವು ಕಂಡಿರಾ? ಬಹುತೇಕ ಇವೆಲ್ಲಕ್ಕೂ ನಿಮ್ಮ ಉತ್ತರ 'ಇಲ್ಲ' ಎಂದೇ ಇರುತ್ತದೆ. ಕಾಮತರ 'ನೇತಿ' ಸಾಹಿತ್ಯವನ್ನು ಓದಿದ ಮೇಲೆ  ಈ ಸ್ಥಳಗಳನ್ನು ಈ  ದೃಷ್ಟಿಯಿಂದ ನೀವು ಮತ್ತೊಮ್ಮೆ ನೋಡಿ ಬರಲು ಪ್ರೇರಣೆ ದೊರೆಯುತ್ತದೆಂದು ಹೇಳಬೇಕಿಲ್ಲ ತಾನೇ?

ಕಾಮತರಿಗೆ ಯಾರಿಗೂ ಹೊಳೆಯದ ಅನೇಕ ಸಂಗತಿಗಳು ಥಟ್ಟನೆ ಹೊಳೆಯುತ್ತವೆ. ನಮಗೇಕೆ ಈ ಸರಳ ವಿಚಾರ ತಲೆಗೆ ಬರಲಿಲ್ಲ ಎಂದು ಒಂದರೆಕ್ಷಣ ನಮ್ಮಂಥವರು ತಲೆ ಕೆರೆದುಕೊಳ್ಳಲೂಬಹುದು. ಮೆಲುಕಾಡಿಸುವ ಪ್ರಾಣಿಗಳನ್ನು ಕುರಿತು ಬರೆಯುವಾಗ ಕಾಮಧೇನುವಿನಿಂದ ಹಿಡಿದು ನಂದಿಯವರೆಗೆ, ಜಿಂಕೆಯಿಂದ ಹಿಡಿದು ಸಾಧಾರಣ ಗೋವಿನವರೆಗೆ ಯಾವ ದೇವಾಲಯಗಳಲ್ಲಿ ಯಾವ ಶಿಲ್ಪಗಳಿವೆ ಎನ್ನುವುದನ್ನು ತೋರಿಸುತ್ತಲೇ ಥಟ್ಟನೆ ಅವರ ಮನಸ್ಸಿನಲ್ಲಿ ಕೋಣ ಪ್ರತ್ಯಕ್ಷವಾಗುತ್ತದೆ. ಗಂಭೀರ ಪ್ರಕರಣವನ್ನು ಹೇಳುವ ಅದೇ ಉತ್ಸಾಹದಲ್ಲಿ ಹಾಸ್ಯಲೇಪನವನ್ನು ವಿಜ್ಞಾನಕ್ಕೆ ಕಾಮತರು ನೀಡಿ ಮನವನ್ನು ತಿಳಿಗೊಳಿಸುತ್ತಾರೆ:

**"ಸತ್ತವರನ್ನು ಕೊಂಡೊಯ್ಯಲು ಯಾವ ಅವಸರವೂ ಇಲ್ಲದ ಯಮನು ಮಂದಗಾಮಿ ಕೋಣವನ್ನೇ ವಾಹನವನ್ನಾಗಿ ಆರಿಸಿದ್ದು ಯೋಗ್ಯವಿದೆ!. ನಾಲ್ಕು ಜನರು ಹೊರಲು ಇಲ್ಲದಿದ್ದರೂ, ನಗರ ಪಾಲಿಕೆಯ ಶವ ವಾಹನ ವೇಳೆಗೆ ಬರದೇ ಇದ್ದರೂ, ಕರೆ ಕಳಿಸದಿದ್ದರೂ ಜೀವವನ್ನು ಕೊಂಡೊಯ್ಯಲು ಯಮಧರ್ಮರಾಯ ಕೋಣನ ಬೆನ್ನೇರಿ ಬಂದೇ ಬರುವ. ಪಟ್ಟದಕಲ್ಲಿನಲ್ಲಿ ಮಾರ್ಕಂಡೇಯನ ಜೀವವನ್ನು ಕೊಂಡೊಯ್ಯಲು ಯಮನು ಬಂದಾಗ ಶಿವನು ಪ್ರತ್ಯಕ್ಷನಾದ ಶಿಲ್ಪವನ್ನು ಮೂಡಿಸಲಾಗಿದೆ."**

ಇದು ಕಾಮತರ ಬರಹದ ರೀತಿ. ಸಮಕಾಲೀನ ಸಮಾಜದ ಓರೆಕೋರೆಗಳನ್ನು ವಿಜ್ಞಾನ ಸಾಹಿತ್ಯದಲ್ಲಿ ಹೇಗೆ ಬಳಸಿಕೊಳ್ಳಬಹುದು ಎನ್ನುವುದಕ್ಕೆ ಅತ್ಯುತ್ತಮ ನಿದರ್ಶನ. ನಮ್ಮ ಹಿಂದಿನವರ ಶಿಲ್ಪ ಚಾತುರ್ಯ, ಕಲಾಭಿಜ್ಞತೆಯನ್ನು ಪ್ರಶಂಸಿಸುವಾಗ ದಶಾವತಾರಗಳು ವಿಜ್ಞಾನಿಗಳು ಗುರುತಿಸಿದ ಪ್ರಾಣಿ ವಿಕಾಸದ ಮಾರ್ಗವನ್ನೇ ಅನುಸರಿಸುತ್ತವೆ ಎಂಬ ತೀರ್ಮಾನಕ್ಕೆ ಬಂದಿರುವುದು ಮಾತ್ರ ಸೋಜಿಗ ಉಂಟುಮಾಡುತ್ತದೆ. ನರಸಿಂಹ ಅವತಾರದಲ್ಲಿ ಪಶು, ಮಾನವನಾಗಲು ಯತ್ನಿಸಿದ ಅರೆ ಯಶಸ್ಸನ್ನು ರೂಪಿಸಲಾಗಿದೆ ಎಂಬ ಪ್ರತಿಪಾದನೆಯನ್ನು ವಿಕಾಸವಾದದ ಪ್ರಾಥಮಿಕ ತಿಳಿವಳಿಕೆ ಇರುವ ಸಾಮಾನ್ಯ ಓದುಗನೂ ಒಪ್ಪಲಾರ. ಹಾಗೆಯೇ ಭೂವಿಕಾಸವನ್ನು ಅಧ್ಯಯನ ಮಾಡಲು ಭೂವಿಜ್ಞಾನಿಗಳು ಬೇರೆ ಬೇರೆ ಕಾಲಘಟ್ಟಗಳನ್ನು ಕಲ್ಪಿಸಿದ್ದಾರೆ. ಈ ಯುಗಗಳ ಬಗ್ಗೆಯೂ ಕಾಮತರು ಅಸ್ಪಷ್ಟವಾಗಿ ಇಲ್ಲಿ ಬರೆದಿದ್ದಾರೆ. ಮಹಾಕಲ್ಪ, ಕಲ್ಪ ಇವುಗಳನ್ನೆಲ್ಲ ಬದಿಗೊತ್ತಿ, ಭೂ ಇತಿಹಾಸ ಮಧ್ಯಯುಗಗಳಷ್ಟೇ ಭೂಯುಗಗಳೆಂದು ಗುರುತಿಸಿದ್ದಾರೆ.

ಕೃಷ್ಣಾನಂದ ಕಾಮತರ ಬರಹಗಳು ಚಿಂತನೆ, ವಿಸ್ತಾರವಾದ ಅವರ ಕ್ಯಾನ್‌ವಾಸ್, ಸಣ್ಣಪುಟ್ಟ ದೋಷಗಳನ್ನು ಮರೆಮಾಡಿ ಚರಿತ್ರೆ, ಭೂಗೋಳ, ಶುದ್ಧ ಸಾಹಿತ್ಯ, ಮಾನವಶಾಸ್ತ್ರ ಪರಿಸರ, ಪುರಾಣ, ಪುಣ್ಯಕಥೆ ಇವುಗಳ ಇತಿಮಿತಿ ಅರಿತು ವಿಜ್ಞಾನಕ್ಕೆ ಮುಡಿಸಿಕೊಳ್ಳುವ ಜಾಣ್ಮೆ ಪುಟಪುಟದಲ್ಲೂ ಎದ್ದು ಕಾಣುತ್ತದೆ. ಕಾಮತರದು ವಿಜ್ಞಾನ ಸಾಹಿತ್ಯಕ್ಕೆ ಸುರಿದ ಹೊಸ ಮಳೆ, ಬೆಳೆದ ಪುಷ್ಕಳ ಬೆಳೆ.

ಇಂಥ ಮನುಷ್ಯ ಕೇವಲ ಪ್ರೀತಿಯಿಂದ ಈ ಕೃತಿ ಬರೆಯಲು ಹೊರಟಾಗ ಪಟ್ಟ ಪಾಡುಗಳೇನು? ಒಂದಲ್ಲ ನೂರಾರು. ಪ್ರಾಣಿ ಶಿಲ್ಪಗಳ ಚಿತ್ರಗಳನ್ನು ತೆಗೆಯಲು ಕ್ಯಾಮೆರಾಕ್ಕೆ ಸ್ಟಾಂಡ್ ಬಳಸಬಾರದೆಂಬ ಕಟ್ಟಾಜ್ಞೆ ದೇವಾಲಯಗಳ ಉಸ್ತುವಾರಿ ನೋಡಿಕೊಳ್ಳುವವರಿಂದ. ಅದೇ ಮಂದಿ ಕೃತಕ ಬೆಳಕು ದೇವರ ಮೇಲೆ ಬೀಳಬಾರದೆಂಬ ಕೃತಕ ಮಡಿವಂತಿಕೆ ತೋರಿಸಿ ಅವರನ್ನು ಬೆಚ್ಚಿ ಬೀಳಿಸಿದ್ದುಂಟು. ಕೈ ಬಿಸಿ ಮಾಡಿದರೆ ಯಾವುದೇ ಕಟ್ಟಳೆಯನ್ನು ಸಡಿಲಿಸಲು ಮುಂದಾಗುವ ಅಧಿಕಾರಿ ಸಿಬ್ಬಂದಿ ವರ್ಗ, ಈ ಮಾನಸಿಕ ಹಿಂಸೆಗಳನ್ನು ತಪ್ಪದೆ ಕಾಮತರು ದಾಖಲಿಸಿದ್ದಾರೆ. ಸಾಂಸ್ಕೃತಿಕ ಪರಂಪರೆಯ ಈ ಸಂಪತ್ತನ್ನು ಸಂರಕ್ಷಿಸಲು ನಿಜವಾದ ಕಾಳಜಿ ಜನಕ್ಕಾಗಲೀ ಸರ್ಕಾರಕ್ಕಾಗಲೀ ಇಲ್ಲವೆಂಬ ಕೊರಗಿನಲ್ಲಿ ತಮ್ಮ ಎರಡು  ವರ್ಷಗಳ ಯಾತ್ರೆಯನ್ನು ಮುಗಿಸುತ್ತಾರೆ. ಈಗ ಇಹಯಾತ್ರೆಯನ್ನೇ ಮುಗಿಸಿರುವ ಕಾಮತರಿಗೆ ತಮ್ಮ ಉದ್ದಿಷ್ಟ, ಗುರಿ ಈ ಕೃತಿಯಲ್ಲಿ ಹೇಗೆ ಈಡೇರಿದೆ ಎಂಬುದನ್ನು ತಿಳಿಸುವುದಾದರೂ ಹೇಗೆ? ನಿಮ್ಮ ನೇತಿ ಸಾಹಿತ್ಯ, ವಿಜ್ಞಾನವನ್ನು ಪ್ರೀತಿಸುವವರಿಗೆ ಹೊಸ ಮಾರ್ಗವನ್ನು ತೋರಿಸಿಕೊಟ್ಟಿದೆ ಎಂದು ಹೇಳಿದರೆ, ಅದು ಅವರ ಕಿವಿ ಮುಟ್ಟುವ  ಪರಿ ಎಂತು? ನಿಮ್ಮ ವ್ಯಂಗ್ಯ, ಓರೆನೋಟ ವಿಜ್ಞಾನವನ್ನು ತಿಳಿಗೊಳಿಸಿ ಎದೆಯನ್ನು ಹಗುರಮಾಡುತ್ತದೆ ಎಂದು ಹೇಳಬೇಕೆನಿಸುತ್ತದೆ. ಈ ಎಲ್ಲ ವಾಕ್ಯಗಳನ್ನು ಅಲ್ಪವಿರಾಮ, ಅರ್ಧವಿರಾಮ, ಪೂರ್ಣವಿರಾಮಗಳನ್ನು ಬಳಸದೆ ಒಂದೇ ಉಸುರಿಗೆ ಹೇಳಬೇಕೆನಿಸುತ್ತದೆ. ಕಾಮತರದು ಏಕಾಂತಪ್ರಿಯತೆ. ಅವರೊಬ್ಬ ಮಿತಭಾಷಿಯಾಗಿದ್ದರು. ಆದ್ದರಿಂದ, ಈ ಎಲ್ಲ ಮಾತುಗಳನ್ನು, ನಾನು ಸ್ವಗತದಲ್ಲಿ ಆಡಿಕೊಂಡರೇ ಹೆಚ್ಚು ಯುಕ್ತವೇನೋ.



# ಕಾಮತರ ಕಾಕಲೋಕ

**ಜಯಂತ ಕಾಯ್ಕಿಣಿ**

ಪ್ರಾಣಿ ಪಕ್ಷಿ ಕೀಟ-ಜ್ಞಾನ, ಛಾಯಾಗ್ರಹಣ, ಪ್ರವಾಸ, ಚಾರಣ, ಅಧ್ಯಯನ, ಅದ್ವಿತೀಯ ಸೂಕ್ಷ್ಮಾವಲೋಕನ, ಮನುಜಲೋಕದ ಎಲ್ಲ ಸಂಗತಿಗಳಲ್ಲಿ ಇಂಗದ ಆಸಕ್ತಿ, ಅಪರೂಪದ ವಿನೋದ ಮತ್ತು ಇವೆಲ್ಲವುಗಳ ಮೂಲದಲ್ಲಿ ಜಾಗ್ರತ ಮೌನ! ಕೃಷ್ಣಾನಂದ ಕಾಮತ ಎಂದ ತಕ್ಷಣ ಹೊಳೆಯುವ ಸಂಗತಿಗಳು ಇವೆಲ್ಲ. ಬಾಳಿನ ಪಯಣದಲ್ಲಿ, ಸಹಪ್ರವಾಸಿಗಳ ಕುರಿತು ಇರುವ ಚುರುಕಾದ ಮತ್ತು ಅಷ್ಟೇ ಮಾನವೀಯವಾದ ಆಸಕ್ತಿಗೆ ಇನ್ನೊಂದು ಹೆಸರು ಕೃಷ್ಣಾನಂದ ಕಾಮತ. ಕೃಷ್ಣಾನಂದರ ಈ ಎಲ್ಲ ಮುದಿತ, ಎಚ್ಚರ ಮತ್ತು ತನ್ಮಯತೆಗಳ ಮೂರ್ತರೂಪಕದಂತಿದೆ ಅವರ ಐವತ್ತು ಪುಟದ ಪುಟ್ಟ ಪುಸ್ತಕ – "ಕಾಗೆಯ ಕಾಯಕ."

ಕಾಗೆಯ ವರ್ತನೆಯನ್ನು ವರ್ಣಿಸುತ್ತಲೇ ಮನುಜಲೋಕದ ವೈಚಿತ್ರ್ಯಗಳನ್ನು ಒಟ್ಟಿಗೇ ಧ್ವನಿಸಬಲ್ಲಂಥ ಈ ಬರವಣಿಗೆ ತನ್ನ ಸರಳತೆ, ನಿಖರತೆ ಮತ್ತು ಹರಿತ ದೃಷ್ಟಿಕೋನದಿಂದಾಗಿ ವಿಶಿಷ್ಟವಾಗಿದೆ. ಕಾಗೆಯನ್ನು ಈ ನಿಸರ್ಗದ ಒಂದು ಅನುಪಮ ಸೃಷ್ಟಿಯೆಂದು ನೋಡುತ್ತಿರುವಾಗಲೇ ಅದರಲ್ಲಿ ಮನುಜವ್ಯಾಪಾರದ ಅನುಕರಣೆಯನ್ನೂ ಗಮನಿಸುವ ಕೃಷ್ಣಾನಂದರ ಸಂವೇದನಾಶೀಲ ಕಣ್ಣಿನಿಂದಾಗಿ, ಮಾಹಿತಿಯು ಜ್ಞಾನವಾಗಿ ಮತ್ತು ಜ್ಞಾನವು ಅರಿವಾಗಿ ಪರಿವರ್ತಿತವಾಗುವ ಅನುಭವ ಈ ಬರವಣಿಗೆಯಲ್ಲಿದೆ.

ಕಾಡಿನ ಕಾಗೆಗಳು ನಾಡಿನ ಕಾಗೆಗಿಂತ ದಪ್ಪಗೆ, ಕಪ್ಪಗೆ ಇರುವುದರಿಂದಲೇ ಅವನ್ನು 'ಗಂಡು ಕಾಗೆ' ಎಂದು ಕರೆಯುವ ಪ್ರವೃತ್ತಿ, ಹದ್ದಿನ ಕೊಕ್ಕಿನಲ್ಲಿಯ ಮೀನಿಗಾಗಿ ಹದ್ದನ್ನು ಅಟ್ಟಿಸಿಕೊಂಡು ಹೋಗುವ ಕಾಗೆಗಳು, ಆ ಹತಾಶ ಹದ್ದು ಸೋತು ಆ ಮೀನನ್ನು ಬಿಟ್ಟುಹೋದರೂ ಆ ಮೀನಿಗೆ ಲಕ್ಷ್ಯಕೊಡದೇ ಹದ್ದಿನ ಹಿಂದೇ ಬೆನ್ನಟ್ಟಿ ಹೋಗುವುದು, ನಗರವಾಸಿ ಕಾಗೆಗಳು ಮರದ ಕಡ್ಡಿಗಳು ಸಿಗದೆ ತಂತಿ, ವಾಯರ್ ಚೂರು, ಕನ್ನಡಕದಂಗಡಿಯ ಕನ್ನಡಕದ ಫ್ರೇಮುಗಳು ಇತ್ಯಾದಿಗಳಿಂದ ಕಟ್ಟುವ 'ಆಧುನಿಕ' ಗೂಡುಗಳು, ಟಿಬೆಟ್ ಸೈಬೀರಿಯಾಗಳಿಂದ ವಲಸೆ ಬರುವ ಹಕ್ಕಿಗಳಿಗೆ ಕಾಗೆಗಳು ಕೊಡುವ 'ಮೂಲವಾಸಿ' ಕಿರುಕುಳ, ಶಾಲೆಗೆ ಹೊರಟ ಮಕ್ಕಳ ಬುತ್ತಿಯ ಡಬ್ಬಿಯಿಂದ ದೋಸೆ ಚೂರು ಚೋಂಡದ ಜತೆಗೆ, ಎತ್ತಿ ಎಲ್ಲೋ ಒಯ್ದು ಹಾಕುವ ಚಮಚೆಗಳು- ಇಂಥ ನಿತ್ಯಜೀವನದ ವಿವರಗಳ ಮೂಲಕ ಕಾಗೆಯ ಕಾಯಕ ಸಂಸ್ಕೃತಿಯನ್ನು ಕೃಷ್ಣಾನಂದರು ಚಿತ್ರವತ್ತಾಗಿ ಕೊಡುತ್ತಾರೆ. ಕಾಗಣ್ಣ, ಕಾಗೆಯರಾಮ, ಕಾಳುರಾಯ, ಕಾಕರಾಜ ಹೀಗೆ ನಾನಾರೀತಿಯಲ್ಲಿ ಕಾಗೆಯನ್ನು ಕರೆದು ಮುದ್ದುಗರೆಯುತ್ತಾರೆ.

ತನ್ನ ಗೂಡಿನಲ್ಲಿ ಕೋಗಿಲೆ ಕೂಡ ತತ್ತಿ ಹಾಕಿ ಹೋದಾಗ – ಸಂಖ್ಯೆ ದ್ವಿಗುಣಗೊಂಡರೂ ಲಕ್ಷ್ಯಕ್ಕೆ ಬಾರದ ಕಾಗೆಯ ಪೆದ್ದುತನವನ್ನು ಕಾಮತರು ವರ್ಣಿಸುವುದು ಹೀಗೆ : 'ಅವುಗಳ ಸಮಾಜದಲ್ಲಿ ಉತ್ತಮ ಗಣಿತ ಶಿಕ್ಷಕರ ಕೊರತೆ ಇದ್ದಂತಿದೆ". ಬಿಸಿ ಬಿಸಿ ಬೋಂಡಾ ಕರಿದು ತಟ್ಟೆಯಲ್ಲಿಟ್ಟು ಗಿರಾಕಿಗಳಿಗಾಗಿ ಕಾಯುವ ಕೃಷ್ಣಪ್ಪನವರು "ದಯವಿಟ್ಟು ತಟ್ಟೆಗೆ ಕೈಹಾಕಬೇಡಿ" –ಎಂದು ಬೋರ್ಡು ಬರೆದಿದ್ದರೂ ಕಾಗೆ ತನ್ನ ದಾಳಿ ನಡೆಸುತ್ತದೆ. ಯಾಕೆಂದರೆ ಬೋರ್ಡಿನಲ್ಲಿ "ಚುಂಚು" ಎಂದು ಬರೆದಿಲ್ಲವಲ್ಲ ಅದಕ್ಕೆ! ಪ್ರೇಮಿಗಳು ಪಕೋಡ ಕೊಂಡು ತಿಂದು ಪೊಟ್ಟಣದ ಕಡೇ ಪಕೋಡವನ್ನು "ನೀನು ತಿನ್ನು", "ನೀನು ತಿನ್ನು" ಎಂದು ಪರಸ್ಪರ ಒಲ್ಲೆಗರೆಯುವಾಗ ಕಾಗೆ, "ಅದು ನನಗಿರಲಿ" ಎಂದು ಹಾರಿಸಿಕೊಂಡು ಹೋಗುತ್ತದಂತೆ. ಹೀಗೆ ಕೃಷ್ಣಾನಂದರು ಮಧ್ಯಮವರ್ಗದ ಮನಸ್ಸಿನಲ್ಲಿ ನೆಲೆನಿಲ್ಲುವಂತೆ ಕಾಗೆಯ ಜೀವನಚಿತ್ರ ಬಿಡಿಸುತ್ತಾರೆ.

ರೋಗರುಜಿನಗಳಿಂದ ಜರ್ಜರಿತವಾಗಿ, ಮಾನವನ ಕ್ರೌರ್ಯಕ್ಕೆ ತುತ್ತಾಗಿ ಗರಿ ಉದುರಿ, ಕೊಕ್ಕು ಮೊಂಡಾದ ಕಾಗೆಗಳೂ ಇಲ್ಲಿ ಆಯಾಸದಿಂದ ಕುಪ್ಪಳಿಸುತ್ತವೆ. ಕೆಲವು ನಗರದ ಉದ್ಯಾನವನಗಳಲ್ಲಿ ಶ್ರೀಮಂತರು ತಮ್ಮ ಶೋಕಿಗಾಗಿ ಹಾರಿವಾಳಗಳಿಗೆ ಮಂಡಕ್ಕಿ, ಬ್ರೆಡ್ಡು ಎಸೆಯುವುದುಂಟಲ್ಲ! ಅಲ್ಲಿ ಈ ರುಗ್ಣ ಕಾಗೆಗಳೂ ಕದ್ದು ಮುಚ್ಚಿ ತೆವಳಿ ಕಾಳು ಹೆಕ್ಕುವುದರ ವರ್ಣನೆ ಇದೆ. ಜತೆಗೆ ಸೋಮಾರಿ ಕಾಗೆಗಳು ಅದರ ದುರ್ಲಾಭ ಪಡೆಯುವುದನ್ನು ಕಾಮತರು ತೋರಿಸುತ್ತಾರೆ. ಬೊಜ್ಜು, ಬಿಗುಮಾನಗಳಿಲ್ಲದ ಇಲ್ಲಿಯ ಭಾಷೆಯ ಸರಳ ಸೊಗಸಿಗೆ ಕಾಗೆಯ ಯುಗಲದ ಪ್ರಣಯದ ವರ್ಣನೆ ಒಳ್ಳೆಯ ಉದಾಹರಣೆ:

**"ನಲ್ಲ ಕಣ್ಮುಚ್ಚಿ ಕುಳಿತಾಗ, ನಲ್ಲೆ ಅದರ ಕೊರಳನ್ನು ನೇವರಿಸುವದು; ಗರಿಗಳಿಂದ ಹೇನು ಹೆಕ್ಕುವದು; ಪುಕ್ಕಗಳನ್ನು ಮೃದುವಾಗಿ ಹಿಡಿದೆಳೆಯುವದು. ಗಂಡು ಆಗೊಮ್ಮೆ ಈಗೊಮ್ಮೆ ಕಣ್ಣು ತೆರೆದು ನಲ್ಲೆಯನ್ನು ಅಭಿಮಾನದಿಂದ ನೋಡುತ್ತ ತಿರುಗಿ ನಿದ್ರಾವಶನಂತೆ ನಟಿಸುವದು".**

ಲೇಖಕರ ಕಣ್ಣು ಕಿವಿಗಳು ಎಷ್ಟು ಸೂಕ್ಷ್ಮವಾಗಿವೆ ನೋಡಿ:

**"ಕಾಗೆಗಳು ಅರೆನಿದ್ರೆಯಲ್ಲಿ ಕಂಠವನ್ನು ಸಡಲಿಸಿಕೊಳ್ಳುವದು, ರೆಕ್ಕೆ ಕೆದರಿಕೊಳ್ಳುವದು ಸಾಮಾನ್ಯ. ಕೆಲವಂತೂ ನಿದ್ರೆಯಲ್ಲಿ ಮಾತಾಡಿಕೊಳ್ಳುವವು. ಒಂದು ಸುತ್ತು ಹಾರಿ ಬಂದು ನಿದ್ದೆಯನ್ನು ಮುಂದುವರೆಸುವವು."**

ಕಾಗೆಯ ಸ್ವರದ ಏರಿಳಿತಗಳನ್ನು, ವೈವಿಧ್ಯಗಳನ್ನು ಸೂಕ್ಷ್ಮವಾಗಿ ಆಲಿಸಿರುವ ಕೃಷ್ಣಾನಂದರು ಅವುಗಳನ್ನು ರೆಕಾರ್ಡ್‌ಮಾಡಿಕೊಂಡು, ದೊಡ್ಡಕ್ಕೆ ಹಚ್ಚಿ ಕಾಗೆಗಳನ್ನೇ ಬೇಸ್ತು ಬೀಳಿಸಿದ್ದಾರೆ. ಗಂಡಿನ ಸ್ವರಕ್ಕೆ ಮರುಳಾಗುವ ಹೆಣ್ಣುಕಾಗೆ, ಮರಿಯ ಕೂಗಿಗೆ ಧಾವಿಸಿ ಬರುವ ತಾಯಿ ಕಾಗೆ.... ಇವೆಲ್ಲ ಕಾಮತರ ಟೇಪರೆಕಾರ್ಡರಿಂದ ಮೋಸಹೋಗಿ ನಂತರ ಪಾಠಕಲಿತಿವೆ.

ಪರಿಸರದ ಎಲ್ಲ ಸೇಂದ್ರೀಯ ಕೊಳೆಯನ್ನು ಸಾಫು ಮಾಡುವ ಕಾಕರಾಯನ ಎಲ್ಲ ಚಲನವಲನಗಳನ್ನು ಸೆರೆಹಿಡಿದಿರುವ ಕಾಮತರ ತನ್ಮಯತೆ ಎಷ್ಟೆಂದರೆ – ಲೋಂಡಾ ಸ್ಟೇಷನ್ನಿನಲ್ಲಿ ಗೋವಾ ರೈಲಿಗಾಗಿ ಕಾಯುತ್ತಿದ್ದಾಗ ಅಲ್ಲಿಯ ಎರಡು ಗೋಣಿ ಚೀಲಗಳ ಮೇಲೆ "ಚುಂಬನ ದಾಳಿ" ನಡೆಸುತ್ತಿದ್ದ ಕಾಕದಂಪತಿಗಳ ಯುದ್ಧ ಕೌಶಲ್ಯವನ್ನು ಆನಂದಿಸಲು "ರೈಲು ಇನ್ನೆರಡು ಗಂಟೆ ತಡವಾಗಿ ಬರಬಾರದಿತ್ತೇ?" ಎಂದು ಅವರು ಪರಿತಪಿಸುತ್ತಾರೆ. ಮಲ್ಲೇಶ್ವರದ ತಮ್ಮ ಮನೆಯ ಕಿಟಕಿಯಿಂದ ಅಪಾರವಾದ ಧ್ಯಾನದಲ್ಲಿ, ಒಂದು ಮೊಂಡು ಚುಂಚಿನ ಕಾಗೆಯ ಕಾರ್ಯಕಲಾಪಗಳನ್ನು ದಿನಗಟ್ಟಲೆ ನೋಡುತ್ತಾರೆ. ಕಾಗೆಯೊಂದರ ಅವಸಾನವನ್ನು ಅವರು ನೋಡುವುದು ಹೀಗೆ –

**"ರಕ್ತಸ್ರಾವ ನಿಲ್ಲದೆ, ಕಲ್ಲಣ್ಣ ಕೊನೆಯುಸಿರು ಎಳೆದ. ಕಾಗೆ ಬಳಗ ಇನ್ನೂ ಕಾರವಾಗಿ ಕಾ ಕಾ ಕಾ ಎಂದು ಶೋಕಿಸುತ್ತ ಕಳವಳ ತೋರ್ಪಡಿಸಿದವು. ಯದ್ವಾ ತದ್ವಾ ಹಾರಲಾರಂಭಿಸಿದವು. ಹತ್ತಿರದ ಗಿಡಮರಗಳ ಎಲೆಗಳನ್ನು ಕಿತ್ತು ಕಿತ್ತು ಎಸೆಯಲಾರಂಭಿಸಿದವು. ಇನ್ನೂ ಶೋಕಾರ್ತವಾದವು, ಮರದ ತೊಗಟೆಯನ್ನು ಕೊಕ್ಕಿನಿಂದ ಸುಲಿಯಲಾರಂಭಿಸಿದವು. ಶೀಘ್ರದಲ್ಲಿ ಕಲ್ಲಣ್ಣನ ದೇಹ ಬಿದ್ದಲ್ಲಿ ಸ್ಮಶಾನಮೌನ ನೆಲೆಸಿತು. ಕೆಂಪಿರುವೆಗಳ ತಂಡ ಬಂದು ಮುತ್ತಿಗೆ ಹಾಕಿ ಆತನ ಇರವನ್ನು ಸಂಪೂರ್ಣವಾಗಿ ಇಲ್ಲವಾಗಿಸಿದವು. ಹುಟ್ಟು-ಸಾವುಗಳು ನಿಸರ್ಗದ ನಿಯಮವೆಂದು ಕಾಕ ಸಮಾಜವೂ ಅರಿತುಕೊಂಡಂತೆ ಅನಿಸುತ್ತದೆ."**

ತನ್ಮಯತೆಯ ಜೊತೆಗೆ ಅಗಾಧ ಮಾನವೀಯ ಎಚ್ಚರ ಹೊಂದಿರುವ ಕೃಷ್ಣಾನಂದ ಕಾಮತರ ಆಂತರಿಕ ಮೌನ ಈ ಕೃತಿಯ ಜೀವಾಳವಾಗಿದೆ. ಸಹಾನುಭೂತಿಯ ಜತೆಗೆ ಕುತೂಹಲ ಮತ್ತು ತಿಳುವಳಿಕೆ ಬೆರೆತಾಗ ಮಾತ್ರ, ಸುತ್ತಣ ಜೀವಜಾಲದ ಕುರಿತ ಇಂಥ ಸಹಜ ಬರವಣಿಗೆ ಸಾಧ್ಯ. ಕೇವಲ ಒಂದು ಕೆ.ಜಿ. ತೂಕದ 'ಒಕ್ಕಣ್ಣ'ನೆಂಬ ಖ್ಯಾತಿಯ ಈ ಕಾಗೆಯನ್ನು, ಕೇವಲ ಕ್ಯಾಮೆರಾ ಕಣ್ಣಿಂದ ನೋಡದೇ, ಹೃದಯದ ಕಣ್ಣಿಂದ ನೋಡಿರುವ ಕೃಷ್ಣಾನಂದರ ಜೀವಪ್ರೇಮದ ಸ್ವಚ್ಛ ಸರಳ ಕೈಗನ್ನಡಿಯಂತಿರುವ ಈ ಪುಟ್ಟ ಹೊತ್ತಗೆಯಿಂದ ಇಂದಿನ ಮನುಷ್ಯ ಕಲಿಯಬೇಕಾದದ್ದು ಬಹಳಷ್ಟಿದೆ. 'ಮಾಹಿತಿ'ಯೇ ಸರ್ವಸ್ವವಾಗಿರುವ ಈ ದಿನಗಳಲ್ಲಿ ಮಾಹಿತಿ ಹೇಗೆ ಜ್ಞಾನವಾಗಬಲ್ಲುದು ಮತ್ತು ಜ್ಞಾನ ಹೇಗೆ ಅನುಭವ ಮುಖೇನ ಅರಿವಾಗಬಲ್ಲುದು ಎಂಬುದರ ಸೂಕ್ಷ್ಮ ಸರಳ ನಿದರ್ಶನ ಇಲ್ಲಿದೆ.



# ಹುಡುಕು ಕಣ್ಣುಗಳ ದೃಶ್ಯ ವೈಭವ

## (ಡಾ|| ಕೃಷ್ಣಾನಂದ ಕಾಮತ್ ಹಾಗೂ ಚಿತ್ರಕಲೆ)

**ಡಾ|| ಅ. ಲ. ನರಸಿಂಹನ್**

ಡಾ|| ಕೃಷ್ಣಾನಂದ ಕಾಮತರಿಗಿದ್ದ ಹತ್ತು ಹಲವು ಹವ್ಯಾಸಗಳಲ್ಲಿ ಚಿತ್ರಕಲೆಯೂ ಒಂದು. ಆದರೆ ಅದನ್ನೇ ಅವರು ವಿಶೇಷವಾಗಿ ಅಭ್ಯಸಿಸಿದಂತೆ ಕಂಡುಬರುವುದಿಲ್ಲ. ಬಟ್ಟೆಯ ಮೇಲೆ ಫ್ಯಾಬ್ರಿಕ್ ಬಣ್ಣದಿಂದ ಕೆಲವು ರೇಖಾಚಿತ್ರ ಬರೆದಿದ್ದರಲ್ಲದೆ, ನೀರು ಬಣ್ಣದಿಂದ ಚಿತ್ರ ಬರೆಯುತ್ತಿದ್ದರೆಂದು ಪರಿಚಯಾವಳಿಯಲ್ಲಿದೆ. ಅವರ ಹಾಗೂ ಅವರ ಪತ್ನಿ ಡಾ|| ಜ್ಯೋತ್ಸ್ನಾ ಕಾಮತ್‌ರ ಅನೇಕ ಲೇಖನಗಳಿಗೆ, ಕೆಲವು ತಮ್ಮ ಹಾಗೂ ಬೇರೆಯವರ ಪುಸ್ತಕಗಳಿಗೆ ಬರೆದ ರೇಖಾಚಿತ್ರಗಳೇ ನೂರಾರಿವೆ. ಇವು ಅವರ ವೈಜ್ಞಾನಿಕ ಛಾಯಾಗ್ರಹಣದ ಒಂದು ಭಾಗ. ವಿಷಮಚಿತ್ರ (ನೆಗೆಟೀವ್)ದ ನೆರಳನ್ನು ಮಸೂರದಲ್ಲಿ (ಎನ್‌ಲಾರ್ಜರ್‌ನ) ಅಳವಡಿಸಿ ಕಾಗದದ ಹಾಳೆಯ ಮೇಲೆ ರೇಖಾಚಿತ್ರಗಳು ನಂತರ ಪರಿಷ್ಕರಿಸುತ್ತಿದ್ದುದು, ಮೂಲಚಿತ್ರದ ಯಥಾವತ್ತಾದ ನಕಲು ದೊರೆಯುತ್ತಿದ್ದವು. ಸಾಮಾನ್ಯ ಕಲಾವಿದನಾಗಿದ್ದರೆ ಮೂಲಕ್ಕಿಂತ ಹೆಚ್ಚು ಸುಂದರಗೊಳಿಸುತ್ತಿದ್ದ. ಅಂತೆಯೇ ಪ್ರವಾಸ ಕಾಲದಲ್ಲಿ ಕಂಡಿದ್ದ ಚಿತ್ರ-ಶಿಲ್ಪಗಳನ್ನು ಪರಿಶೀಲಿಸಿ, ಛಾಯಾಗ್ರಹಣಮಾಡಿ, ವಿಷಯಕ್ಕೆ ಸಂಬಂಧಿಸಿದಂತೆ ಹೊಂದಿಸಿ, ತಮ್ಮ ಬೇರೆಯ ಲೇಖನಗಳೊಂದಿಗೆ ಹೇಳಿರುವುದಲ್ಲದೆ, ಸಿಬಿಯ ವರ್ಣಚಿತ್ರಗಳ ಬಗ್ಗೆ ಲೇಖನವೊಂದನ್ನು ಹಾಗೂ ಕಾವಿಕಲೆಯ ಬಗ್ಗೆ ಪುಸ್ತಕವೊಂದನ್ನು ಬರೆದರು.

ಕಾಮತರ ಎಲ್ಲ ಲೇಖನಗಳೂ ಒಂದು ಅರ್ಥದಲ್ಲಿ ಆತ್ಮಚರಿತ್ರೆಯಾದರೂ ಚಿತ್ರಕಲೆಯ ಬಗ್ಗೆ ಅವರಿಗೆ ಆಸಕ್ತಿ ಹೇಗೆ ಬಂದಿತೆಂದು ತಿಳಿದು ಬರುವುದಿಲ್ಲ. ಅವರ ತಂದೆಯೂ ಚಿತ್ರ ಬರೆಯುತ್ತಿದ್ದಿರಬಹುದು. ತಂದೆ ತೀರಿಕೊಂಡು ಒಂದು ವರ್ಷವಾದಾಗ, ಪತ್ನಿಗೆ ಬರೆದ ಪತ್ರದಲ್ಲಿ (೬-೧-೧೯೭೦) ತಂದೆಯನ್ನು ಉದ್ದೇಶಿಸಿ ಬರೆದಂತಿದ್ದು ಸ್ವರ್ಗದಲ್ಲಿರುವ ತಂದೆಗೆ 'ನಿನ್ನ ಹವ್ಯಾಸದ ಚಿತ್ರಕಲೆಗೆ ಬೇಕಾಗುವ ಕುಂಚ, ಬಣ್ಣಗಳು ಸುಲಭ ಬೆಲೆಗೆ ಸಿಗುತ್ತವೆಯೇ?' ಎಂದು ಪ್ರಶ್ನಿಸಿದ್ದಾರೆ. (ಪ್ರೇಯಸಿಗೆ ಪತ್ರಗಳು ಪು-೧೦೧). ಆದರೆ ಇದೇ ಪುಸ್ತಕದಲ್ಲಿ ತಂದೆ ತೀರಿ ಹೋದ ಸಂದರ್ಭದಲ್ಲಿ ಬರೆದ ಪತ್ರದಲ್ಲಿ (ಪಿತರ ಪರಲೋಕ ಪಯಣ ೨೦-೧-೬೯) ಈ ಬಗ್ಗೆ ಏನೂ ಉಲ್ಲೇಖವಿಲ್ಲ. ಎಳವಯಸ್ಸಿನಲ್ಲಿಯೇ ಕಾಮತರಿಗೂ ಚಿತ್ರಬಿಡಿಸುವ ಹವ್ಯಾಸ ಬಂದಿರಬಹುದು. ರಜಾದಿನಗಳಲ್ಲಿ ತಿರುಗಾಡುವ ಚಪಲಕ್ಕಾಗಿ ಹಿರಿಯರಿಂದ 'ಸುಮ್ಮನೆ ತಿಂಡಿ ತಿಂದು ಜಗಲಿಯ ಮೇಲೆ ಕುಳಿತು ಓದು ಬರಹ ಚಿತ್ರ ಬಿಡಿಸುವುದು ಮಾಡುತ್ತಾ ಬೇಸಿಗೆ ರಜೆ ಕಳೆಯಬಾರದಾ?' ಎಂದು ಬೈಸಿಕೊಂಡಿದ್ದುಂಟು (ಸರ್ಪಸಂಕುಲ ಪು - ೫೦) ಇನ್ನೊಂದೆಡೆ ಗುಡಿಗಾರರ ಬಗ್ಗೆ ಹೇಳುತ್ತಾ. "ಗೌರಿ-ಗಣೇಶ ಹಬ್ಬಕ್ಕೆ ಶಿವ-ಪಾರ್ವತಿ ಗಣೇಶರ ಮೂರ್ತಿಗಳನ್ನು ತಯಾರಿಸುವುದು, ಚಿತ್ರಪಟಗಳನ್ನು ಮಾಡುವುದು ಹಾಗೂ ಊರ ತೇರನ್ನು ಅಲಂಕರಿಸುವುದು, ಮೊದಲಾದ ಸಾರ್ವಜನಿಕ ಕಲಾಕೃತಿಗಳ ಸಂಪೂರ್ಣ ಜವಾಬ್ದಾರಿ ಅವರದೇ. ಅವರು ಚಿತ್ರಿಸುತ್ತಿದ್ದ ಶಾರ್ದೂಲ, ರಾಕ್ಷಸ, ಹೂ ಹಣ್ಣುಗಳನ್ನು ನೋಡುತ್ತಾ ಅದೆಷ್ಟು ಕಾಲ ಕಳೆದಿದ್ದೇನೆ?" (ಮರು ಪಯಣ, ೪೯) ಎಂದು ಹೇಳುತ್ತಾರೆ. ಇಲ್ಲಿಯೂ ಕಾವಿಚಿತ್ರಗಳ ಬಗ್ಗೆ ಹೇಳುತ್ತಾರೆ. ಈ ಗುಡಿಗಾರರು ಹಾಗೂ ಕಾವಿ-ಚಿತ್ರಗಳು ಕಾಮತರಿಗೂ ಚಿತ್ರ-ಶಿಲ್ಪಗಳಲ್ಲಿ ಅಭಿರುಚಿ ಮೂಡುವಂತೆ ಪ್ರೇರೇಪಿಸಿದವು. ಊರಲ್ಲಿದ್ದ ಗುಡಿಗಾರರು, ಅವರ ಕಲಾಕೃತಿಗಳಲ್ಲದೆ ದಿನದ ಉಪಕರಣಗಳ ತಯಾರಿಕೆ, ಲಾಭವಿಲ್ಲದ ಮಾರಾಟ, ವಿದೇಶಿ ಗ್ರಾಹಕರು, ದಳ್ಳಾಳಿಗಳ ಮಧ್ಯಸ್ಥಿಕೆ ಇತ್ಯಾದಿ ಕುರಿತು ಸೊಸೆ ಹಾಗೂ ಮಗನಿಗೆ ಹೇಳುತ್ತಾರೆ. ಇನ್ನೊಂದೆಡೆ ಹೊನ್ನಾವರದ ಗುಡಿಗಾರರ ಕಲಾಕೌಶಲ್ಯ, ಕೀರ್ತಿಯ ಬಗ್ಗೆ ಹೇಳುತ್ತಾ "ಹೊಯ್ಸಳರ ಕಾಲದಿಂದಲೂ ಕಲೆಗೆ ಜೀವನ ಮುಡುಪಾಗಿಟ್ಟವರ ಕುಲಕ್ಕೆ ಸೇರಿದವರು. ಕರ್ನಾಟಕದ ಶ್ರೇಷ್ಠ ಕಲಾಗಾರರುಗಳಾಗಿ ಗುಡಿಗಳನ್ನು ಕಟ್ಟಿಸಿದ ಗುಡಿಗಾರರು ಇವರ ಪೂರ್ವಜರೇ ಎಂಬ ಪ್ರತೀತಿಯಿದೆ. ಕ್ರಿ.ಶ. ೧೮೬೭ ರಲ್ಲಿ ಪ್ಯಾರಿಸ್‌ನಲ್ಲಿ ನಡೆದ ಕಲಾ ಪ್ರದರ್ಶನದಲ್ಲಿ ಹೊನ್ನಾವರದ ಸುಬ್ಬಣ್ಣ ಗುಡಿಗಾರರ ಶ್ರೀಗಂಧದ ಕುಸುರಿನ ಕೆಲಸಕ್ಕೆ ಬೆಳ್ಳಿ ಪದಕ ಕೊಟ್ಟು ಗೌರವಿಸಿದರು." ಎಂದು ನೆನಪಿಸಿಕೊಳ್ಳುತ್ತಾರೆ (ಅಕ್ಷತೆ ೧೮)

ಕಾಮತರಿಗೆ ಕಲೆಯ ಬಗ್ಗೆ ಆಸಕ್ತಿ ಬರುವುದಕ್ಕೆ ಕಾರಣ ನಿಸ್ಸಂಶಯವಾಗಿ 'ಕಾವಿಕಲೆ'. ಉತ್ತರ ಕನ್ನಡ ಜಿಲ್ಲೆಯಾದ್ಯಂತ ಒಂದು ಕಾಲದಲ್ಲಿ ವ್ಯಾಪಕವಾಗಿ ಚಿತ್ರಿತವಾಗಿದ್ದ ಇಂದು ಅವಶೇಷ ಮಾತ್ರವಾಗಿರುವ ಕಾವಿಕಲೆಯ ಬಗ್ಗೆ ತಮ್ಮ ಪುಸ್ತಕ, ಲೇಖನಗಳಲ್ಲಿ ಸಮಯ ಸಿಕ್ಕಾಗಲೆಲ್ಲಾ ಮನದುಂಬಿ, ಮನಸೊಂದು ಬರೆಯುತ್ತಾರೆ. ಅವರ ಪೂರ್ವಜರು ಕಟ್ಟಿಸಿದ ಮನೆಯ ಚೈತಕ ಖಾನೆಯಲ್ಲಿದ್ದ ಕಾವಿಚಿತ್ರಗಳ ಬಗ್ಗೆ ವಿಸ್ಮಯ ಪಟ್ಟಿದ್ದುಂಟು. ಅಂತೆಯೇ ಊರಿನಲ್ಲಿರುವ ದೇವಾಲಯಗಳ ಮೇಲಿದ್ದ ಪೌರಾಣಿಕ ಚಿತ್ರಗಳನ್ನು ನೋಡುತ್ತಾ ನಿಲ್ಲುವುದು ಮೈಮರೆಯುವಂತಹ ಹವ್ಯಾಸವಾಗಿತ್ತು. "ಊರಿನ ಮಾಸ್ತಿ ಗುಡಿ ಕಟ್ಟುತ್ತಿದ್ದಾಗ ಅದರ ಹೊರಗೋಡೆಯ ಮೇಲೆ ರಚಿಸಲಾಗುತ್ತಿದ್ದ

ಉರಮಂಜಿ ಚಿತ್ರಗಳನ್ನು ತದೇಕ ಚಿತ್ತದಿಂದ ವೀಕ್ಷಿಸುತ್ತಿರುವಲ್ಲಿ ಗಡಿಯಾರ ಮುಂದೆ ಓಡಿದ್ದೇ ಅರಿವಾಗದೇ ವಿಳಂಬವಾಗಿ ಮನೆಗೆ ಹಿಂದಿರುಗಿದ್ದಕ್ಕಾಗಿ ಮನೆಯವರಿಂದ ಬೈಗುಳ ಮಂಗಳಾರತಿ ಬೆಳಗಿಸಿಕೊಂಡಿದ್ದೂ ಇದೆ. ಅಂತೆಯೇ ದೊಡ್ಡವನಾದ ಮೇಲೆ ಕಾವಿ ಕಲಾಕಾರನಾಗಿ ಇಂತಹ ಚಿತ್ರ ರಚನೆ ಮಾಡಿ ಆನಂದಿಸಬೇಕೆಂದು ಕನಸು ಕಂಡದ್ದೂ ಇದೆ" ಎಂದು ಹೇಳಿದ್ದಾರೆ (ಕಾವಿಕಲೆ, ಪು-೯). ನಂತರ 'ಮರುಪಯಣ'ದಲ್ಲಿ ಪತ್ನಿ, ಮಗ, ಸೊಸೆಯೊಂದಿಗೆ ಹಳೆಯ ಕಥೆಯೆಲ್ಲಾ ಹೇಳುವಾಗ ಮತ್ತೆ ಕಾವಿಕಲೆ, ಅವುಗಳ ತಯಾರಿಕಾ ವಿಧಾನ, ಇತ್ಯಾದಿ ವಿವರಿಸಿ ಆ ಕಲೆ ಅಳಿದು ಹೋದುದಕ್ಕೆ ವಿಷಾದಿಸುತ್ತಾರೆ (ಪು- ೫೧-೫೨).

ಕಾಮತರಿಗೆ ಸಾಂಪ್ರದಾಯಿಕ ಅಥವಾ ಭಿತ್ತಿಚಿತ್ರಗಳ ಬಗ್ಗೆ ಅರಿವಿತ್ತು. ವ್ಯಾಪಕವಾಗಿ ನೋಡಿದ್ದರು, ಓದಿಕೊಂಡಿದ್ದರು. ಸಿಬಿಯ ಭಿತ್ತಿಚಿತ್ರಗಳ ಬಗ್ಗೆ ದೀರ್ಘವಾದ ಲೇಖನವೊಂದನ್ನು ಬರೆದಿದ್ದಾರೆ. ಆದರೆ ಅವರಿಗೆ ಹೆಚ್ಚು ಒಲವು, ಆಸಕ್ತಿ ಇದ್ದುದು ಆದಿವಾಸಿಗಳ ಕಲೆಯ ಬಗ್ಗೆ. ಅಲ್ಲದೆ ಮಧ್ಯಪ್ರದೇಶದಾದ್ಯಂತ ಸಂಚರಿಸುವ ಸೌಭಾಗ್ಯವೊಂದು ಅವರಿಗೆ ದೊರೆತದ್ದು ಅಲ್ಲಿಯ ಇತಿಹಾಸಪೂರ್ವ ಹಾಗೂ ಆದಿವಾಸಿಗಳ ಕಲೆಯನ್ನೂ ಕಣ್ಣಾರೆ ನೋಡುವ, ಛಾಯಾಚಿತ್ರ ಮಾಡಿಕೊಳ್ಳುವ ಅವಕಾಶವಾಯಿತು. ಈ ಅನುಭವಗಳನ್ನು ಸೇರಿಸಿ ಮೂರು-ನಾಲ್ಕು ಪುಸ್ತಕಗಳನ್ನು ಬರೆದರಾದರೂ ಬರೆಯದೇ ಬಿಟ್ಟಿದ್ದು ಇನ್ನೂ ಹತ್ತರಷ್ಟಿತ್ತು. ಅವು ಹೊರಬರದೇ ಇದ್ದದ್ದು ಪ್ರವಾಸ ಕಥನಗಳಿಗೆ ಬಹುದೊಡ್ಡನಷ್ಟ.

ಅವರ ಸ್ಥಳವಾದ 'ಉತ್ತರ ಕನ್ನಡ'ದ ಹಾಲಕ್ಕಿ ಒಕ್ಕಲಿಗರ ಹಸೆಗೋಡೆ ಚಿತ್ರ ಕಂಡಿದ್ದರು. ಹೊಸದಾಗಿ ಮನೆ ಕಟ್ಟಿದ ಮೇಲೆ ಅದರಲ್ಲಿ ಚಿತ್ತಾರ ಬಿಡಿಸುತ್ತಿದ್ದ ಬಗ್ಗೆ ಹೇಳುತ್ತಾರೆ (ಅಕ್ಷತ, ೫೧). ಅಂತೆಯೇ ನೀಲಗಿರಿಯ ಆದಿವಾಸಿ ತೋಡವರಲ್ಲಿಗೂ ಹೋಗಿದ್ದು ಅಲ್ಲಿಯ ಆಚರಣೆಗಳ ಬಗ್ಗೆ ಹೇಳುತ್ತಾ ದೇವಾಲಯದ ಎದುರು ಗೋಡೆಯ ಮೇಲೆ, ಅವರ ಆರಾಧ್ಯ ದೇವರಾದ 'ಒನ್'ನ ರೇಖಾಚಿತ್ರವನ್ನು ಉಳಿದೆಡೆ ಚುಕ್ಕಿ ಮತ್ತು ತ್ರಿಕೋನಗಳ ರಂಗೋಲಿಯನ್ನು ಬಿಡಿಸಿರುತ್ತಾರೆ. ಹದ ಹಾಕಿದ ಎಮ್ಮೆಯ ಚರ್ಮದ ಮೇಲೆ ಮೊಳೆಯಿಂದ ಚಿತ್ರ ಬಿಡಿಸಿ, ಎದುರಿಗೆ ತೋಡಿದ ವರ್ತುಲಾಕಾರದ ದೊಡ್ಡಿಯ ಸುತ್ತ ಬಿದಿರಿನ ಬೇಲಿ ಕಟ್ಟಿ, ಎರಡು ಪ್ರವೇಶ ದ್ವಾರ ಇಟ್ಟಿದ್ದಾರೆ. ಅವುಗಳ ಆಧಾರ ಶಿಲೆಯ ಕೆಳಭಾಗದಲ್ಲಿ ಎತ್ತು - ಎಮ್ಮೆಗಳ ಉಬ್ಬು ಚಿತ್ರಗಳಿದ್ದರೆ, ಮೇಲುಗಡೆ ಸೂರ್ಯ ಚಂದ್ರರನ್ನು ಕೆತ್ತಲಾಗಿದೆ. "ಇವು ಮಾರಿಯಾ ಆದಿವಾಸಿಗಳ (ಮಧ್ಯಪ್ರದೇಶ) ಮೃತ್ಯು ಸ್ಥಂಭಗಳನ್ನು ನೆನಪಿಗೆ ತರುತ್ತವೆ" ಎಂದು ಹೇಳುತ್ತಾರೆ. (ಅಕ್ಷತ ೨೦-೨೧) ಈ ಒಂದು ಹೇಳಿಕೆಯಲ್ಲಿ ಕಾಮತರ ಹುಡುಕು ಕಣ್ಣುಗಳ ಕೂಲಂಕಶ ಅಧ್ಯಯನ ಕಂಡುಬರುತ್ತದೆ. ದಕ್ಷಿಣ ಭಾರತದ ನೀಲಗಿರಿ ಹಾಗೂ ಉತ್ತರ ಭಾರತದ ಮಧ್ಯಪ್ರದೇಶಗಳಲ್ಲಿಯ ಆದಿವಾಸಿಗಳ ಬಗ್ಗೆ ಇರುವ ಸಾಮ್ಯತೆ ಗುರುತಿಸಿದ್ದಾರೆ.

ಮುಂದೆ ತಮ್ಮ ಮಧ್ಯಪ್ರದೇಶದ ಅನುಭವ ಕಥನಗಳಲ್ಲೆಲ್ಲಾ ಮಾರಿಯಾ ಹಾಗೂ ಮುರಿಯಾ ಆದಿವಾಸಿಗಳ ಕಲೆಯ ಬಗ್ಗೆ ಉತ್ಸಾಹದಿಂದ ಬರೆಯುತ್ತಾರೆ. "ಮಾರಿಯರು..... ಕೊರಡು ಕೊರೆಯುವರು, ಮಣ್ಣಿನ ಮೂರ್ತಿಮಾಡಬಲ್ಲರು, ಚಿತ್ರ ಬಿಡಿಸಬಲ್ಲರು, ವಾದ್ಯ ನುಡಿಸಬಲ್ಲರು....." (ಬ. ಪ್ರ. ೬೮) ಎಂದು ಸಂಗ್ರಹವಾಗಿ ಹೇಳಿದ್ದರೂ, 'ಮಧ್ಯಪ್ರದೇಶದ ಮಡಿಲಲ್ಲಿ' ಯಲ್ಲಿ ವಿಸ್ತಾರವಾಗಿ ವಿವರಿಸುತ್ತಾರೆ. ಬಸ್ತರ ಜಿಲ್ಲೆಯ ಮಾರಿಯಾ ಆದಿವಾಸಿಗಳು ಶಿಲೆಯ ಹಲಗೆಗಳನ್ನು ಸ್ಮಾರಕ ನಿರ್ಮಾಣಕ್ಕಾಗಿ ಬಳಸುತ್ತಾರೆ. ಜಗದಲಪುರ, ಗಿದಮ್, ಬಾರಸೂರ್, ದಂತೇವಾಡ, ಭೋಟಿಡೊಂಗರ ಮತ್ತು ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಇಂಥ ಅನೇಕ ಮೃತ್ಯುಶಿಲೆಗಳು ಕಾಣಸಿಗುತ್ತವೆ" (ಮ.ಮ. ೧೮೧) ಎಂದು ಹೇಳಿರುವರಾದರೂ ಕಾಲರಂಗದಲ್ಲಿ ಬಾರಸೂರ್‌ಗೆ ಪ್ರಯಾಸಪಟ್ಟು ಹೋಗಿದ್ದ ವಿವರಗಳಿವೆ. ಶಿಲ್ಪಗಳ ಬಗ್ಗೆಯೂ ಉಲ್ಲೇಖಗಳಿವೆ. ಉಳಿದ ಊರುಗಳ ವಿವರ. ಜಾತ್ರೆ ಇತ್ಯಾದಿ ಈ ಮೂರು ಗ್ರಂಥಗಳಲ್ಲಿ ಆಗಾಗ್ಗೆ ಬರುತ್ತದೆ.

ಇಡೀ ಮಧ್ಯಪ್ರದೇಶದ ಇನ್ನೊಂದು ಪ್ರಮುಖ ಆದಿವಾಸಿಗಳಾದ ಗೊಂಡರ ಕಲೆಯ ಬಗ್ಗೆ ಅಲ್ಲಲ್ಲಿ ಹೇಳಿದ್ದಾರೆ. ವಿಶೇಷವಾಗಿ ಡಿಮ್‌ರಾ ಥಾನ ಎಂಬ ಹಳ್ಳಿಯ ಒಂದು ಮನೆಯಲ್ಲಿ ನೆಲ ಗೋಡೆಗಳನ್ನು ಚೊಕ್ಕಟವಾಗಿ ಸಾರಿಸಿ ರಂಗೋಲಿ ಹಾಕಿದ್ದಲ್ಲದೇ ಅಲ್ಲಲ್ಲಿ ಉಬ್ಬುಚಿತ್ರಗಳನ್ನು ತೀರಾ ಸರಳವಾಗಿ (ಪಶು-ಪಕ್ಷಿಗಳನ್ನು) ರಚಿಸಿದ್ದರ ಬಗ್ಗೆ ವಿವರಿಸುತ್ತಾರೆ. "ವರ್ತುಲವೊಂದಕ್ಕೆ ಜೋಡಿ ರೆಕ್ಕೆ ಜೋಡಿಸಿದಾಗ ಅದು ಹಾರುವ ಹಕ್ಕಿಯಾಗಿಬಿಡುತ್ತದೆ. ನಾಲ್ಕು ಕಂಬದಂಥ ಕಾಲುಗಳಿಗೆ ಮುಂದೆ ಸೊಂಡಿಲು, ಹಿಂದೆ ಬಾಲ ಇದ್ದರೆ ಆನೆಯಂತೆ ಕಾಣುತ್ತದೆ. ಇದರಂತೆ ಹುಲಿ, ಕರಡಿ, ನಾಯಿ, ಬೆಕ್ಕುಗಳೆಲ್ಲ ಗೋಡೆಯ ಮೇಲೆ ವಿರಾಜಿಸುತ್ತಿದ್ದವು. ಒಂದು ಮೂಲೆಯಲ್ಲಿ ಜೇಡಿಮಣ್ಣಿನಿಂದ ರಚಿಸಿದ ಬಾನಿ ನಿಂತಿತ್ತು. ಅದನ್ನು ಚೌಕೋನಾಕಾರದಲ್ಲಿ ರಚಿಸಿ ಉಬ್ಬು ಚಿತ್ರ, ಇತರೇ ಚಿತ್ರಗಳಿಂದ ಅಲಂಕರಿಸಲಾಗಿತ್ತು." ಎಂದು ಹೇಳಿದ್ದು ಪ್ರಾಯಶಃ ಹಿಂದಿನ ಅವಿಭಜಿತ ಮಧ್ಯಪ್ರದೇಶದ ಎಲ್ಲ ಆದಿವಾಸಿಗಳ ಮನೆಗಳಿಗೂ ಅನ್ವಯಿಸಬಹುದೆನ್ನಿಸುತ್ತದೆ. ಮೇಲಿನ ಹಾಗೂ ಇನ್ನಿತರ ವಿವರಗಳಿಂದ ಇಡೀ ಆದಿವಾಸಿಗಳ ಬದುಕೇ ಎಷ್ಟು ಕಲಾತ್ಮಕವಾಗಿ ಎಷ್ಟು ಸುಂದರವಾಗಿ ವರ್ಣರಂಜಿತವಾಗಿ ಇದೆ ಎಂದೆನಿಸದೇ ಇರದು. ಕಲಾತ್ಮಕತೆ ಸೌಂದರ್ಯ ಪ್ರಜ್ಞೆ ಎಂಬುದು ಅವರ ಹುಟ್ಟುಗುಣ. ವಂಶ ಪಾರಂಪರ್ಯವಾಗಿ ಬಂದುದು.

ಆದಿವಾಸಿಗಳ ಸುರಾಪಾನ ಚಟದ ಬಗ್ಗೆ ಬರೆಯುತ್ತಾ ಪ್ರಾಸಂಗಿಕವಾಗಿ "ಸತ್ತವರ ನೆನಪಿಗೆ ಧಾರ್ಮಿಕ ಮುಖಂಡನಿಂದ ಭಿತ್ತಿಚಿತ್ರಗಳನ್ನು ಬಿಡಿಸಲಾಗುತ್ತದೆ....... ಇನ್ನಿಲ್ಲದವನ ಗೌರವಾರ್ಥವಾಗಿ ಕೊರಡು ಮೃತ್ಯುಸ್ಥಂಭ ಇರಬೇಕೆಂದು ಪರಿಪಾಠ ಹಲವು

ಆದಿವಾಸಿಗಳಲ್ಲಿ ಬೆಳೆದು ಬಂದಿವೆ. ಆಗಲೂ ಸೆರೆಯ ಸೇವನೆ ಆಗಲೇಬೇಕು” ಎಂದು ಹೇಳುತ್ತಾರೆ (ಬ.ಪ್ರವಾಸ, ೯೫). ಚಿತ್ರ, ಶಿಲ್ಪ, ನೃತ್ಯ, ಸಂಗೀತ, ದೈಹಿಕ ಶೃಂಗಾರ ಇತ್ಯಾದಿಯಾಗಿ ಐಹಿಕ ಸುಖ, ತೃಪ್ತಿಗಳೊಂದಿಗೇ ಸುರಪಾನವೂ ಪೂರಕ ಸಾಮಗ್ರಿಯಾಗಿರುವುದಲ್ಲದೆ ನಿಷಿದ್ಧವಲ್ಲ.

ಆದಿವಾಸಿಗಳ ಇನ್ನೊಂದು ಕಲಾಗಾರವೆಂದರೆ ಘೋಟುಲ್ - ಇದೊಂದು ಊರ ಹೊರಗಿರುವ ಪ್ರತ್ಯೇಕವಾದ ಜಾಗ. ಆರರಿಂದ ಹದಿನೆಂಟರ ವರೆಗಿನ ಯುವಕ-ಯುವತಿಯರು ದಿನನಿತ್ಯವೆಂಬಂತೆ ರಾತ್ರಿ ಇಲ್ಲಿ ತಂಗಿ ಜೀವನಾನುಭವದ ಪಾಠ ಕಲಿಯುವ ಶಾಲೆ. ನೃತ್ಯವಾದ್ಯಗಳಿಂದ ಆರಂಭವಾಗಿ, ಕಥೆ-ಒಗಟುಗಳಿಂದ ಮುಂದುವರಿದು, ನಂತರ ಹಿರಿಯರು ಆಯ್ಕೆ ಮಾಡಿದ ಹೆಣ್ಣು-ಗಂಡುಗಳು ಒಟ್ಟಾಗಿ ಜೋಡಿಯಾಗಿ ವಿಶ್ರಮಿಸಿಕೊಳ್ಳುವಂತಹ ಸಾಂಘಿಕ ಜೀವನ ನಡೆಸುವ ಸ್ಥಳ. ದೈನಂದಿನ ಸಮಸ್ಯೆಯಿಂದ ಹಿಡಿದು ದೈಹಿಕ ರಚನೆಯವರೆಗೆ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ಸಾಮಾಜಿಕ ವ್ಯವಸ್ಥೆ.

ಅಂತೆಯೇ ಘೋಟುಲದಲ್ಲಿಯ ಭಿತ್ತಿಚಿತ್ರಗಳೂ ಇಲ್ಲಿಯ ವಾತಾವರಣಕ್ಕೆ ಪೂರಕವಾಗಿರುವಂತಹವು. ಕಾಮತರು ಬಸ್ತರ ಪ್ರವಾಸದಲ್ಲಿ ಒಂದು ಅಧ್ಯಾಯವೇ ಇರಿಸಿ ಸಮಗ್ರ ಅಧ್ಯಯನ ಮಾಡಿದ್ದಾರೆ. “ಈ ಕಟ್ಟಡದ (ಘೋಟುಲ್) ಗೋಡೆ ನೆಲಗಳನ್ನು ಮಣ್ಣು ಮೆತ್ತಿ ಅರೆದು ನುಣುಪು ಮಾಡಿರುತ್ತಾರೆ. ಗೋಡೆಗಳ ಮೇಲೆ ಆನೆ, ನವಿಲುಗಳಂತಹ ಉಬ್ಬುಚಿತ್ರಗಳನ್ನು ಹಚ್ಚಿರುತ್ತಾರಲ್ಲದೆ, ಸುಗ್ಗಿ ಹಬ್ಬಕ್ಕೆ ಯಶ ಕೋರಿ, ಅಕ್ಕಿ ಹಿಟ್ಟಿನಿಂದ ರಚಿಸಿದ ರಂಗೋಲಿಯಂತಹ ನಕ್ಷೆ (ಛಪ್ಪಾ)ಗಳು ಇರುತ್ತವೆ. ಅಲ್ಲದೇ ಸಮಯ ಸ್ಫೂರ್ತಿಯಿಂದ, ಇದ್ದಿಲ ಚೂರಿನಿಂದ ಬಿಡಿಸಿದ ಹೆಣ್ಣಿನ ಹಲವು ಚಿತ್ರಗಳೂ ಗೋಡೆಗಳನ್ನು ಅಲಂಕರಿಸಿರುತ್ತವೆ. ಸ್ತನ, ಜನನೇಂದ್ರಿಯಗಳನ್ನು ಬೃಹದಾಕಾರದಲ್ಲಿ ಬಿಡಿಸಿರುವುದು ಇಂತಹ ಚಿತ್ರಗಳ ವೈಶಿಷ್ಟ್ಯ (ಬ. ಪ್ರವಾಸ, ೭೪) ಎಂದಷ್ಟೇ ಹೇಳಿದ್ದರೂ ‘ಕಾಲರಂಗ’ದ ಚಮೇಲಿ ಅಧ್ಯಾಯದಲ್ಲಿ ಘೋಟುಲ್ ಹಾಗೂ ಚಿತ್ರಕಲೆಯ ಬಗ್ಗೆ ಇನ್ನಷ್ಟು ವಿವರಿಸಿದ್ದಾರೆ.

ಅದರಂತೆ ಬೇಸಿಗೆ, ಮಳೆಗಾಲ, ಚಳಿಗಾಲಗಳಿಗೆ ತಕ್ಕಂತೆ ಬೇರೆ ಬೇರೆ ಘೋಟುಲ್ ಕಟ್ಟಡಗಳಿರುತ್ತವೆ. ಅದರಲ್ಲಿ ಸಗಣಿಯಿಂದ ಸಾರಿಸಿದ ಗೋಡೆಗೆ ಹಳದಿ ಬಣ್ಣ ಲೇಪಿಸಿ ಅದರ ಮೇಲೆ ಪ್ರಾಣಿಗಳ ಹಲವಾರು ಚಿತ್ರ ರಚಿಸುತ್ತಾರೆ. ಕಪ್ಪು-ಬಿಳಿ ಕಲ್ಲುಗಳನ್ನು ಗೋಡೆಗೆ ಅಂಟಿಸಿ ನಕ್ಷೆಗಳನ್ನು ರಚಿಸಿದ್ದು ಬೆಳೆ ಬಿತ್ತುವ ಮೊದಲು ಯಶಸ್ಸು ಕೋರಿ ರಚಿಸುವ ಕೃತಿಗಳಿವು. ಒಳಗೋಡೆಯಲ್ಲಿ ಕಪ್ಪು ಹಾಗೂ ಬಿಳುಪು ಬಣ್ಣದಲ್ಲಿ ಚಿತ್ರ ಬರೆಯಲಾಗಿತ್ತು. “ಈ ಚಿತ್ರಗಳೆಲ್ಲ ಕಾಣಲು ಸುಲಭವಾಗಿ ಕಂಡರೂ ಶಕ್ತಿಯುತವಾಗಿದ್ದವು. ಕಲಾಕಾರರು ತಮ್ಮ ಅನಿಸಿಕೆಗಳನ್ನು ಚಿತ್ರರೂಪದಲ್ಲಿ ಇಳಿಸುವುದರಲ್ಲಿ ಯಶಸ್ವಿಯಾಗಿದ್ದರು. ಅವುಗಳಲ್ಲಿ ಪಶು ಪಕ್ಷಿಗಳ ಚಿತ್ರವಿದ್ದಂತೆ ಪ್ರೇಮಿಗಳ, ಕಾಮ ಪ್ರಚೋದಕ ಚಿತ್ರಗಳೂ ಇದ್ದವು. ಬಿಳಿ ಬಣ್ಣದ ಚಿತ್ರಗಳನ್ನು . . . ಅಕ್ಕಿ ಹಿಟ್ಟನ್ನು ನೀರಿನಲ್ಲಿ ಕದಡಿ ಬೆರಳಿನಿಂದ ಇಲ್ಲದೇ ಬಟ್ಟೆ ತುಣುಕಿನ ಬ್ರೆಷ್ ಮಾಡಿ ಬಿಡಿಸಿದಂತಹವುಗಳು” (ಕಾಲರಂಗ–೧೫೦)

ಜೊತೆಯಲ್ಲಿ ಬಂದ ಮಾರ್ಗದರ್ಶಿಯ ಪ್ರಕಾರ ‘ಈ ಚಿತ್ರಗಳೆಲ್ಲ ವಿದ್ಯಾರ್ಥಿಗಳಿಗೆ ಆವೇಶ ಬಂದಾಗ ಬರೆದ ಚಿತ್ರಗಳು’ ಆವೇಶವೆಂದರೆ ಏನೆಂದೂ ಆತನೇ ವಿವರಿಸುತ್ತಾನೆ. ಹಿರಿಯರು ಗೊತ್ತುಪಡಿಸಿದ ಜೋಡಿಗಳು ಜೊತೆಯಾಗಿ ಪವಡಿಸಿದಾಗ ಪ್ರೀತಿಸದೇ ಇರಲು ಸಾಧ್ಯವೇ? ಅಂತಹ ಆವೇಶಸ್ಥಿತಿಯಲ್ಲಿ ರಚಿಸಿರಬಹುದಾದ ಶೃಂಗಾರ ಚಿತ್ರಗಳು ಇವು. ಬಸ್ತರ ಜಿಲ್ಲಾ ಪ್ರದೇಶದ ಆದಿವಾಸಿಗಳು ಇಂದಿಗೂ ಉಳಿಸಿಕೊಂಡಿರುವ ಈ ಬಗೆಯ ಸಾಂಘಿಕ ಜೀವನ, ನೃತ್ಯ ಸಂಗೀತಗಳೊಂದಿಗೆ ಚಿತ್ರ/ಶಿಲ್ಪಗಳು (ಇಲ್ಲಿ ಲೈಂಗಿಕ ಚಿತ್ರಣವೂ ಸೇರಿದಂತೆ) ಸಾಕಷ್ಟು ಹಿಂದಿನ ಪದ್ಧತಿಯಿರಬಹುದು. ನಮ್ಮ ಕೆಲವು ದೇವಾಲಯಗಳ ಮಿಥುನ ಶಿಲ್ಪ/ಚಿತ್ರಗಳಿಗೂ ಇಂತಹ ಹಿನ್ನೆಲೆಯಿರಬಹುದೇ ಎನ್ನಿಸದಿರದು. ಇದೇ ಮಧ್ಯಪ್ರದೇಶದ ಖಜುರಾಹೋದ ವಿಶ್ವವಿಖ್ಯಾತ ಮಿಥುನ ಶಿಲ್ಪಗಳ ಬಗ್ಗೆಯೂ ಕಾಮತರು ಅಧ್ಯಾಯವೊಂದನ್ನು ಬರೆದಿದ್ದಾರೆ (ಕಾಲರಂಗ, ಅಧ್ಯಾಯ ೧೩).

ಆದಿವಾಸಿಗಳ ಚಿತ್ರಗಳಂತೆ ಕಾಮತರು ವಿವರಿಸುವ ಇನ್ನೊಂದು ಪ್ರಕಾರವೆಂದರೆ ಇತಿಹಾಸ ಪೂರ್ವಕಾಲದ ಶಿಲಾಶ್ರಯದ ಚಿತ್ರಗಳು. ಹಿಂದಿನ ಅವಿಭಜಿತ ಮಧ್ಯಪ್ರದೇಶದ ಹೊಶಂಗಾಬಾದ್ ಜಿಲ್ಲೆಯ ಪರಿಸರದಲ್ಲಿ ನೂರಾರು ಆದಿಮ ಚಿತ್ರ ಸಂಕೀರ್ಣಗಳಲ್ಲಿ ಕೆಲವನ್ನು ಕಾಣುವ ಸೌಭಾಗ್ಯ ಅವರದಾಗಿತ್ತು. ಕಾಮತರು ಅಲ್ಲಿಗೆ ಹೋಗುವ ವೇಳೆಗೆ ಆ ಬಗ್ಗೆ ಓದಿ ತಿಳಿದಿದ್ದರೂ ನಿಖರವಾಗಿ ಆ ಪ್ರದೇಶ ಎಲ್ಲಿದೆ ಎಂದು ಪ್ರಯಾಸದಿಂದಲೇ ಹುಡುಕಿದರು. ಭೂಪಾಲ-ಬೇತುಲ-ಅಬ್ದುಲ್‌ಗಂಜ್ -ಬಿನೇಕಾ, ಭೂಪಾಲ್ - ಇಟಾರಸಿ ರೈಲ್ವೆ ಹಳಿ ದಾಟಿ ಕೊನೆಗೊಮ್ಮೆ ಶಿಲಾಶ್ರಯಗಳ ಬಳಿಗೆ ಹೋದಾಗ ಖ್ಯಾತ ಸಂಶೋಧಕ ವಾಕಣಕರರೇ ಭೇಟಿಯಾಗುತ್ತಾರೆ (ಕಾಲರಂಗ, ಅಧ್ಯಾಯ ೪). ಮುಂದಿನ ಇನ್ನೊಂದು ಅಧ್ಯಾಯದಲ್ಲಿ ವಾಕಣಕರರು ತಾವು ಆ ಸ್ಥಾನ ಸಂಶೋಧಿಸಿದ ಬಗೆ, ತಮ್ಮ ಪ್ರಬಂಧ, ಲೇಖನಗಳ ರಚನೆ ಅವುಗಳ ಪುರಸ್ಕಾರ-ಟೀಕೆ, ತಮ್ಮ ಗುರು ಸಂಕಾಲಿಯ ಹಾಗೂ ತಮಗಿದ್ದ ಅಭಿಪ್ರಾಯಭೇದ, ಸ್ಥಳೀಯ ಜನ, ರಾಜಕಾರಣಿಗಳಿಂದ ಆಗುತ್ತಿರುವ ಹಾನಿ, ವಿದೇಶಿಯರ ಅಧ್ಯಯನ ಕುತೂಹಲ ಇತ್ಯಾದಿ ವಿವರವಾಗಿ ಹೇಳಿದ್ದರೂ ಚಿತ್ರಗಳ ಬಗ್ಗೆ ಇಲ್ಲಿ ಹೇಳುವುದಿಲ್ಲ (ಕಾಲರಂಗ ಅಧ್ಯಾಯ-೧೨).

ಮುಂದೆ 'ಮಧ್ಯಪ್ರದೇಶದ ಮಡಿಲಲ್ಲಿ' ಪುಸ್ತಕದಲ್ಲಿ ಚಿತ್ರಕಲೆಯ ಬಗ್ಗೆ ವಿವರಿಸುತ್ತಾರೆ. 'ಭೀಮ ವೇಡಕಾ' (ಕಾಲರಂಗ) (ಮ.ಮದಲ್ಲಿ 'ಭೀಮ ಬೇಟಕಾ' ಎಂದು ಕರೆದಿದ್ದಾರೆ) ಪ್ರದೇಶ ಭೂಪಾಲಕ್ಕೆ ದಕ್ಷಿಣದಲ್ಲಿ ೪೦ಕಿ.ಮೀ. ದೂರದ ಬೇಸ ಗಂಗಾ ನದಿಯ ಕೊಳ್ಳದಲ್ಲಿದ್ದು ನೂರಾರು ಶಿಲಾಶ್ರಯಗಳಲ್ಲಿ ಹರಡಿರುವ ಚಿತ್ರಗಳ ಒಂದು ಪಕ್ಷಿನೋಟ ಇಲ್ಲಿ ದೊರೆಯುತ್ತದೆ. 'ಈ ಆದಿಮಾನವನು ಯಾವುದೇ ಸೂತ್ರಕ್ಕೆ ಕಟ್ಟುಬೀಳದೆ ಉಸಿರಾಡಿದಷ್ಟು ಸುಲಭವಾಗಿ ಚಿತ್ರಗಳನ್ನು ಬಿಡಿಸಿದ್ದರಿಂದ ಅವು ಎಷ್ಟು ಸುಲಭವೆನಿಸಿದ್ದೂ ಜೀವ ತುಂಬಿಕೊಂಡು ಥಕಥೈ ಎಂದು ಕುಣಿಯುತ್ತವೆ. ಕೇವಲ ಎರಡು ಮೂರು ರೇಖೆಗಳಿಂದಲೇ ನೋಡಿದ ಪಶು ಪಕ್ಷಿಗಳನ್ನು ಭಾವಪೂರಿತವಾಗಿ ರೂಪಿಸುವಲ್ಲಿ ನಿಸ್ಸೀಮನವನು. ಈ ಕಡ್ಡಿ ಆಕೃತಿಗಳಲ್ಲಿ ಚಿಹ್ನೆ ಸಂಜ್ಞೆಗಳನ್ನು ಧಾರಾಳವಾಗಿ ಬಳಸಿಕೊಂಡಿದ್ದಾನೆ. ಸೊಂಡಿಲು ಆನೆಯನ್ನು, ಅಲಂಕಾರದ ಕೋಡು ಜಿಗರೆಯನ್ನು, ಉದ್ದಗರಿ ನವಿಲನ್ನು ಪ್ರತಿನಿಧಿಸುತ್ತದೆ. ಇದೇ ರೀತಿ ಗಂಡು ಜಿಗರೆಯನ್ನು ಹೆಣ್ಣಿನಿಂದ ತಕ್ಷಣ ಗುರುತಿಸುವಂತೆ ಎಚ್ಚರವಹಿಸಿದ್ದಾನೆ. ತ್ರಿಕೋನಗಳನ್ನು ವಿವಿಧ ರೀತಿ ಜೋಡಿಸಿ, ಪಶು ಪಕ್ಷಿ, ಮಾನವಾಕಾರಗಳನ್ನು ನಿರ್ಮಿಸುವುದು ಅವನ ಸಾಧನೆ. ಇದಕ್ಕಾಗಿ ಎರಡು-ಮೂರು ಇಲ್ಲವೆ ಇನ್ನೂ ಹೆಚ್ಚು ತ್ರಿಕೋನಗಳನ್ನು ಬಳಸಿಕೊಂಡಿದ್ದಾನೆ. ಕೈಕಾಲುಗಳ ಜೊತೆಗೆ ಯೋನಿ ಜೋಡಿಸಿದರೆ ಹೆಣ್ಣಾಕೃತಿಯಾಗಿಬಿಡುತ್ತದೆ! ಕೆಲವು ಚಿತ್ರಗಳನ್ನು ಏಕವರ್ಣದ ದಪ್ಪವಾದ ಗೆರೆಯಿಂದ ಬಿಡಿಸಿದರೆ, ಎರಡು ಬಣ್ಣದ ಜೋಡಿ ರೇಖಾಚಿತ್ರಗಳು ಅಲ್ಲೊಂದು ಇಲ್ಲೊಂದು ಕಾಣಸಿಗುತ್ತವೆ. ಹಲವೆಡೆಯಲ್ಲಿ ರೇಖೆಯ ಒಳಭಾಗದಲ್ಲಿ ತಿಳಿಬಣ್ಣಸವರಿ ಉಬ್ಬು ಚಿತ್ರದ ಭಾಸ ಬರುವಂತೆ ಯತ್ನಿಸಲಾಗಿದೆ. ಕೆಲವು ಸಲ ಕೆಂಪು-ಬಿಳಿ, ಕೆಂಪು-ಕಪ್ಪು-ವರ್ಣ ಸಂಯೋಜನೆಯಿಂದಾಗಿ ಚಿತ್ರಗಳ ಆಕರ್ಷಣೆ ಹೆಚ್ಚಿಸಲಾಗಿದೆ. ಕೆಲವು ಚಿತ್ರಗಳನ್ನು ಒಂದೇ ತಿಳಿಬಣ್ಣದಿಂದ ರೂಪಿಸಲಾದ್ದರಿಂದ ಅವೆಲ್ಲಾ ನೆರಳು ಚಿತ್ರಗಳಂತೆ ತೋರುತ್ತವೆ." (ಮ.ಮ. ೯೯) ಎಂದು ಕೆಲವೇ ವಾಕ್ಯಗಳಲ್ಲಿ ಪರಿಣಾಮಕಾರಿಯಾಗಿ ವಿವರಿಸುತ್ತಾರೆ.

ಮಾನವಾಕಾರಗಳಿಗಿಂತ ಪ್ರಾಣಿಗಳ ಚಿತ್ರಣ ಹೆಚ್ಚಾಗಿದೆ ಎಂದು ಗುರುತಿಸಿದ್ದು ಕೆಲವು ಪ್ರಾಣಿಗಳ ಉದರ ಪಾರದರ್ಶಕವಾಗಿದ್ದು ಅವುಗಳಲ್ಲೂ ಚಿತ್ರ ಮೂಡಿಸಿರುವುದು ತಿಳಿಸುತ್ತಾರೆ. ಜಿಗರೆಯ ಹೊಟ್ಟೆಯೊಳಗೆ ಆನೆಯಿರುವಂತೆ ಚಿತ್ರಿಸಿರುವುದು ವಿನೋದ ಪ್ರವೃತ್ತಿಯಿರಬೇಕು ಎನ್ನುವ ಕಾಮತರು ಮಾನವ ವ್ಯಕ್ತಿಗಳಲ್ಲಿ ಸ್ತ್ರೀಯರ ಚಿತ್ರ ಕಡಿಮೆಯಿರುವುದು ಪುರುಷ ಪ್ರಧಾನ ಸಮಾಜದ ಪ್ರತೀಕವೇ? ಎಂದು ಪ್ರಶ್ನಿಸುತ್ತಾರೆ. ಪ್ರಾಣಿಗಳಲ್ಲಿ ಸಾರಂಗ, ಕಾಡುಹಂದಿ, ಖಡ್ಗ ಮೃಗ, ನವಿಲುಗಳಿರುವುದಲ್ಲದೆ ಪ್ರಾಣಿಗಳ ರೆಕ್ಕೆ, ಪುಕ್ಕ ಕೋಡುಗಳನ್ನು ಮನುಷ್ಯನೂ ಧರಿಸಿರುವುದು ಅಲಂಕಾರಕ್ಕಿರಬಹುದು ಅಥವಾ ಇವುಗಳೊಂದಿಗೆ ಮೈಮೇಲೆ ಚಿತ್ರಿಸಿಕೊಂಡಿರುವ ಮಾನವಾಕಾರಗಳು ಮಾಂತ್ರಿಕರದಿರಬಹುದೆನ್ನುತ್ತಾರೆ. ಅಂತೆಯೇ ಸ್ಪೇನಿನ (ದೇಶದ) ಆದಿಮ ಚಿತ್ರಗಳೊಂದಿಗೆ ಭೀಮಬೇಟಕಾದ ಚಿತ್ರಗಳನ್ನು ಹೋಲಿಸಿ ಎರಡೂ ಸಮಕಾಲೀನವೇ ಆದರೂ ಅಲ್ಲಿಯವರು ಸಂತಾನಾಭಿವೃದ್ಧಿ ಕೋರಿ ಲಿಂಗಕ್ಕೆ ಪ್ರಾಧಾನ್ಯತೆ ನೀಡಿ ಚಿತ್ರಿಸಿದ್ದರೆ "ಇಲ್ಲಿಯ ಹೆಚ್ಚಿನ ಚಿತ್ರಗಳಲ್ಲಿ ಜನನೇಂದ್ರಿಯ ತೋರಿಸಿಲ್ಲ. ಹೆಣ್ಣನ್ನು ಗುರ್ತಿಸಲು ಚಿಕ್ಕ ಯೋನಿಯನ್ನು ತೋರಿಸಲಾಗಿದೆಯೇ ಹೊರತು ಸ್ತನಗಳನ್ನು ಕೈ ಬಿಡಲಾಗಿದೆ. ಕೆಲವು ಕಡೆಯಲ್ಲಿ ಸ್ತ್ರೀಯರಿಗೆ ಮಾತೆ ಮತ್ತು ದೇವಿಯರ ಸ್ಥಾನಕ್ಕೆ ಏರಿಸಿದ್ದರಿಂದ ಭಕ್ತರ ರಕ್ಷಣೆಗಾಗಿ ತುಂಬಿದೆದೆಗಳಿಂದ ಹಾಲು ಚಿಮ್ಮುವಂತೆ ಪ್ರತಿನಿಧಿಸಲಾಗಿದೆ" (ಮ.ಮ. ಪು.೧೦೧) ಎಂದು ಅಭಿಪ್ರಾಯ ಪಡುತ್ತಾರೆ.

ವಾಕಣಕರರು ಈ ಪರಿಸರದ ಕಾಲಾವಧಿಯನ್ನೂ ಐದು ಲಕ್ಷ ವರ್ಷಗಳಷ್ಟು ಹಿಂದೂಡಿದರೂ (ಕಾ. ರಂ. ಪು-೮೫) ಮಾನವ ನೆಲೆ ನಿಂತ ಮೇಲೆ ವ್ಯವಸ್ಥಿತವಾಗಿ ಬೇಟೆ, ಪಶುಪಾಲನೆ, ವೈರಿಗಳೊಂದಿಗೆ ಕುದುರೆ ಮೇಲೆ ಯುದ್ಧಗಳಲ್ಲದೆ, ಬೌದ್ಧಧರ್ಮದ ಸ್ತೂಪಗಳು, ಮೌರ್ಯ ಲಿಪಿಗಳು ದೊರೆತಿರುವುದರಿಂದ ಇತಿಹಾಸ ಕಾಲದಲ್ಲೂ ಇಲ್ಲಿಯ ಚಿತ್ರ ರಚನೆ, ಜನವಸತಿಯ ಬಗ್ಗೆ ಬೆಳಕು ಚೆಲ್ಲುತ್ತದೆ. ಅಷ್ಟೇ ಅಲ್ಲ. ಈಗಾಗಲೇ ಗುರುತಿಸಿರುವಂತೆ ಆದಿಮ ಕಾಲದ ಹಾಗೂ ಇಂದಿಗೂ ಇರುವ ಆದಿವಾಸಿಗಳ ಕಲೆಯ ಬಗ್ಗೆ ಅವುಗಳಲ್ಲಿಯ ಸಾಮ್ಯತೆಯ ಬಗ್ಗೆ ಹಾಗೂ ಬೇಟೆ, ನೃತ್ಯ ಉಡುಪು ಇತ್ಯಾದಿ ಸಾಮಾಜಿಕ ವಿಷಯಗಳಲ್ಲಿ ಅಂದಿನಂತೆ ಇಂದಿಗೂ ಬದುಕುತ್ತಿರುವ ಆದಿವಾಸಿಗಳ ಹೋಲಿಕೆ ಮಾಡುತ್ತಾರೆ (ಮ.ಮ. ೧೦೩). ಬಸ್ತರ ಆದಿವಾಸಿ ಶಾಲಾಮಕ್ಕಳು ಕೆಲವೇ ರೇಖೆಗಳಲ್ಲಿ ಜಿಂಕೆ, ಹಂದಿ, ನವಿಲು, ಬೇಟೆಗಾರ, ನೃತ್ಯಗಾರ ಚಿತ್ರಗಳನ್ನು ಇದ್ದಲಿನಿಂದ ಆಕರ್ಷಕವಾಗಿ ಬರೆದಿದ್ದು ಕಂಡು ಕಾಮತರು ಮೆಚ್ಚಿಗೆ ಸೂಚಿಸುತ್ತಾರೆ (ಬ. ಪ್ರವಾಸ. ೧೨೫). ಎಂದರೆ ಅಂದಿನಿಂದ ಇಂದಿಗೂ ಉಳಿದು ಬಂದಿರುವ ಕಲಾ ಪ್ರವಾಹ, ಅವರದೇ ಆದ ಸರಳ ಸೌಂದರ್ಯ, ಶಕ್ತಿಯುತ ರೇಖೆಗಳು, ಇದ್ದಲಿನಂತಹ ಯಾವುದೇ ಸಾಧನದಿಂದ ರಚಿಸಬಹುದಾದ ಸಾಧ್ಯತೆ ಇವೆಲ್ಲವೂ ಅವರ ದೈನಂದಿನ ಜೀವನದಲ್ಲೂ ಸೊಬಗಿನಿಂದ ಕಂಡುಬರುವಿಕೆ ಕುತೂಹಲಕಾರಿಯಾದುದು.

ಭೀಮಬೇಟಕದಲ್ಲಿ ಪಶುಪಕ್ಷಿ ಮಾನವರ ಚಿತ್ರಗಳಲ್ಲದೆ ಹಲವಾರು ಜಾಮಿತಿಯ ಆಕಾರಗಳನ್ನು ಗುರುತಿಸಲಾಗಿದೆ. ಉದ್ದಕ್ಕೆ ಎಳೆದ ರೇಖೆ, ಟಿಸಿಲು ಒಡೆದ ರೇಖೆಗಳೂ, ಜಾಳಿಗೆ, ಕಾಟಕೋನ, ತ್ರಿಕೋನ, ಚೌಕೋನ, ತಿರುವಿನ ವರ್ತುಲ, ಜೇನುಗೂಡಿನಂತಹ (ಆರು ಮೂಲೆಗಳ) ಆಕಾರಗಳು ಇಲ್ಲಿದ್ದು ಮುಂದೆಯೂ ಅನೇಕ ಆಚರಣೆಗಳಲ್ಲಿ, ವಿಧಿಕ್ರಿಯೆಗಳಲ್ಲಿ ಭಾರತದಾದ್ಯಂತ ಕಂಡು ಬರುತ್ತವೆ. ಇನ್ನೊಂದು ಸಮಾನ ಅಂಶವೆಂದರೆ ಚಿತ್ರಗಳ ಮೇಲೆಯೇ ಚಿತ್ರ ಬಿಡಿಸಿರುವುದು. ಇವು ಸಮಕಾಲೀನವಾಗಿ ಅಥವಾ ಮುಂದಿನ

ಕಾಲದಲ್ಲಿಯಾಗಲೀ ಆಗಿರಬಹುದು. ಹೀಗೆಯೇ ಒಂದು ಆಯ್ಕೆಮಾಡಿದ ಶಿಲಾಶ್ರಯದ ಒಂದು ಭಾಗದಲ್ಲಿ ಮಾತ್ರ ಮೇಲಿಂದ ಮೇಲೆ ಚಿತ್ರ ರಚನೆಯಾಗಿರುವುದು ಪ್ರಪಂಚದಾದ್ಯಂತ ಕಂಡು ಬರುವುದನ್ನು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ. ಪ್ರಾಯಶಃ ಆ ಚಿತ್ರದ ಜಾಗ ಸುರಕ್ಷಿತ ಅಥವ ಪವಿತ್ರ ಎಂದು ಆತನಿಗೆ ಅನ್ನಿಸಿರಬಹುದು. ಭೀಮಬೇಟಕದಲ್ಲಿ ಕೆಂಪು, ಬಿಳಿ, ಹಳದಿ, ಕಪ್ಪು ಬಣ್ಣಗಳ ಚಿತ್ರಗಳಲ್ಲದೆ, ಕೆಂಪು ಬಣ್ಣದಲ್ಲಿ ಹಲವಾರು ವೈವಿಧ್ಯವಲ್ಲಿ ಎಂದರೆ ನಾಶಿಪುಡಿ ಬಣ್ಣದಿಂದ ಜಾಂಬಳಿ ಬಣ್ಣದ ವರೆಗೆ ರಚಿಸಿದೆ. ಒಂದು ಅರ್ಥದಲ್ಲಿ ಈ ಚಿತ್ರಗಳಿಗೆ ಸಾವಿಲ್ಲ ಅಂತ್ಯವಿಲ್ಲ ಎಂಬುದು ಸತ್ಯ.

ಈ ಮಾತು ಪಚಮಡಿಯ ಆದಿಕಲೆಯ ಬಗ್ಗೆ ಹೇಳುವಾಗ ಸ್ಪಷ್ಟವಾಗುತ್ತದೆ. ಮಧ್ಯ ಪ್ರದೇಶದಲ್ಲಿ ಸಂಚರಿಸುತ್ತಾ ನಾಗದ್ವಾರದ ಬಗ್ಗೆ ಹೇಳುವಾಗ ಒಮ್ಮೆ ಪಚಮಡಿ ಹಾಗೂ  ಅಲ್ಲಿಯ ಗುಹಾಚಿತ್ರ, ಅವುಗಳ ನಾಶದ ಬಗ್ಗೆ ಪ್ರಸ್ತಾಪಿಸುತ್ತಾರೆ (ಮ.ಮ. ಪು-೫೭) ಮತ್ತೆ ಅದೇ ಪುಸ್ತಕದಲ್ಲಿ ಪೀಪರಿಯ ಬಗ್ಗೆ ಹೇಳುವಾಗ ಇನ್ನಷ್ಟು ವಿವರವಾಗಿ ಪುನರುಕ್ತಿಗೊಳಿಸಿದ್ದಾರೆ. (ಹಾಗೆ ಮಾಡಿದಾಗ ಕೆಲವು ಸಣ್ಣ ಪುಟ್ಟ ವ್ಯತ್ಯಾಸ ಆಕಸ್ಮಿಕವಾಗಿ ಸೇರಿದೆ. ಮೊದಲು ಮಾರ್ಗದರ್ಶಿಗೆ ೨೦ರೂ. ಎಂದಿತ್ತು ನಂತರದಲ್ಲಿ ೧೨ ಆಗಿದೆ. ಮೊದಲಿಗೆ ಸೈನಿಕರು, ದಾರಿಹೋಕರು ಗುಹಾ ಚಿತ್ರಗಳ ಮೇಲೆ ಹೆಸರು ಬರೆದಿದ್ದೆಂದು ಹೇಳಿದರೆ ನಂತರ ಪೋಲಿ ಹುಡುಗರು ಕಲ್ಲಿನಿಂದ ಜಜ್ಜಿ ನಾಶ ಮಾಡಿದ್ದಾಗಿ ಹೇಳುತ್ತಾರೆ). ಪಚಮಡಿಯಲ್ಲಿ ಬೌದ್ಧರ ಕಾಲದ 'ಪಾಂಡು ಗುಂಫಾ' ಎಂದು ಕರೆಯುವ ಐದು ಗುಹೆಗಳಿದ್ದು (ಪಂಚ=ಐದು, ಮಡಿ=ಮನೆ) ಇವೂ ಅಥವಾ ಈ ಬಗೆಯ ಬೇರೆ ಶಿಲಾಶ್ರಯಗಳಲ್ಲೂ ಚಿತ್ರಗಳಿದ್ದಿರಬಹುದು. ಸೈನಿಕರು, ಸ್ಥಳೀಯರ ಪ್ರಕಾರ "ಈ ಚಿತ್ರಗಳೆಲ್ಲಾ ಹಾಳುಗೆಡವಿದಂತೆ ಪುನಃ ಹುಟ್ಟಿಕೊಳ್ಳುತ್ತದೆ" ಎಂಬ ಭಾವನೆ ಇರುವುದೇ ಇವುಗಳ ನಾಶಕ್ಕೆ ಕಾರಣ ಎಂದು ಕಾಮತರು ಹೇಳುತ್ತಾರಲ್ಲದೆ "ಹೆಚ್ಚಿನ ಚಿತ್ರಗಳು ಕೆಂಪು, ಕೆಂಪು ಮತ್ತು ಬಿಳಿ ವರ್ಣಗಳಿಂದ ರಚಿತವಾದವುಗಳು. ಸ್ತ್ರೀ ಪುರುಷರು, ದಂಪತಿಗಳು, ಮದುವೆಯಲ್ಲಿ ಹಾಕುವ ಕುಂಡಲಿ, ನಕ್ಷೆಗಳನ್ನು ಕೆಂಬಣ್ಣದಲ್ಲಿ ಬಿಡಿಸಲಾಗಿದೆ. ಬೇಟೆಗಾರರು, ಕಾಡು ಪ್ರಾಣಿಗಳು, ಎತ್ತು, ಹಂದಿ, ಮಂಗ ಮೊದಲಾದ ಪ್ರಾಣಿಗಳನ್ನು ಬಿಳಿಯ ಬಣ್ಣದಿಂದ ಬರೆಯಲಾಗಿದೆ. ಈ ಚಿತ್ರಗಳು ಸಹಸ್ರ ವರ್ಷಗಳಿಗಿಂತ ಹಿಂದಿನವಾದರೂ ಈಗಿನ ಗೊಂಡರ ಕೃತಿಗಳಿಗೆ ತೀರ ಹತ್ತಿರದವು ಅನಿಸುತ್ತವೆ (ಮ. ಮ. ೮೩) ಎಂದು ಹೇಳಿದಾಗ, ಬರುವ ಸಂದೇಹವೆಂದರೆ ಹಳೆಯ ಕೃತಿಗಳ ಮಧ್ಯೆ ಇಂದಿನ (ಅಂದು ಕಾಮತರು ಕಂಡಾಗಿನ) ಗೊಂಡರೂ ಸಹ ಚಿತ್ರ ರಚಿಸಿರಬಹುದೆಂಬುದು. ಭೀಮಬೇಟಕದಲ್ಲಿ ನೋಡಿದಂತೆ ಆದಿಮ ಚಿತ್ರಗಳ ಶೈಲಿಯೇ ಬಹುತೇಕ ಇಂದಿಗೂ ಆದಿವಾಸಿಗಳು ಅನುಸರಿಸುತ್ತಿರುವುದು ಒಂದಾದರೆ, ಸ್ಥಳೀಯರ ಪ್ರಕಾರ ನಾಶಮಾಡಿದಾಗ ಮತ್ತೆ ಹುಟ್ಟುತ್ತದೆ ಎಂಬ ಮಾತೂ ಪೂರಕವಾಗಿ ಹಳೆಯ ಚಿತ್ರಗಳ ಎಡೆಯಲ್ಲೇ ಸಮಕಾಲೀನವಾಗಿಯೂ ಚಿತ್ರ ರಚಿಸಿರಬಹುದಾದ ಸಾಧ್ಯತೆಗಳಿವೆ. ಅಲ್ಲದೆ ಕಾಮತರೇ ತಾವು ಕಂಡ ಚಿತ್ರಗಳು 'ಸಹಸ್ರ ವರ್ಷಗಳ ಹಿಂದಿನವಾದರೂ ಇಂದಿನ ಗೊಂಡರೂ ಬರೆದ ಚಿತ್ರಗಳಂತಿವೆ' ಎಂದು ಹೇಳುವುದು ಸಹ ಆದಿವಾಸಿಗಳಲ್ಲಿ ಸುಪ್ತವಾಗಿ ಅಡಗಿರುವ ಆದಿಮ ಜನಾಂಗದ ಮನೋಭಾವ, ಚಿಂತನೆ, ಚಿತ್ರರಚನಾ ಪರಿಣತಿಗಳನ್ನು ಬಿಂಬಿಸುತ್ತವೆ ಎಂದು ಹೇಳಬಹುದು. (ಕರ್ನಾಟಕದಲ್ಲಿಯೂ ಕೊಪ್ಪಳ ಜಿಲ್ಲೆಯ ಗುಹಾಚಿತ್ರಗಳ ಬಳಿಯಲ್ಲಿ ಇಂದಿನ ದನಗಾಹಿಗಳು ಬರೆದ ಚಿತ್ರಗಳು ಸಹ ಆದಿಮ ಚಿತ್ರಗಳನ್ನೇ ಹೋಲುವುದಾಗಿ ಡಾ॥ ದೇವರಕೊಂಡಾರೆಡ್ಡಿ ಅವರು ತಿಳಿಸುತ್ತಾರೆ.)

ಕಾಮತರು ಪೂರ್ವದ ಪ್ಲಾಸಿಯಿಂದ ಹಿಡಿದು ಪಶ್ಚಿಮದ ಜೈಪುರದವರೆಗೆ ಇಡೀ ಉತ್ತರ ಭಾರತದಲ್ಲಿ (ರಾಜಸ್ಥಾನ, ಉತ್ತರಪ್ರದೇಶ ಹಾಗೂ ಬಂಗಾಳಗಳಲ್ಲಿ) ವ್ಯಾಪಕವಾಗಿ ಸಂಚರಿಸಿದವರು. ಅಂದಿಗೂ ಇಂದಿಗೂ ವಿಪುಲವಾಗಿ ಚಿತ್ರರಚನೆಯಾಗಿರುವ  ಆಗುತ್ತಿರುವ ಪ್ರದೇಶಗಳಿವು. ಜೈಪುರ, ಭೂಪಾಲ್, ಉಜ್ಜಯನಿ, ಕೋಲ್ಕೊತ್ತ (ಖ್ಯಾತ ವಿಕ್ಟೋರಿಯಾ ಮೆಮೊರಿಯಲ್ ವಸ್ತು ಸಂಗ್ರಹಾಲಯ ಸೇರಿ) ಗಳಲ್ಲಿ ಇರುವ ಮ್ಯೂಸಿಯಂ ಕಂಡಿರಲೇಬೇಕು. ಆದರೆ ಅಲ್ಲಿ ಸಂಗ್ರಹವಾಗಿರುವ ಮಧ್ಯಯುಗದ ಚಿಕಣಿ (ಮಿನಿಯೇಚರ್) ಚಿತ್ರಗಳ ಬಗ್ಗೆಯಾಗಲೀ, ತಾಳೆ ಓಲೆಯ ಮೇಲಿನ ಚಿತ್ರಗಳ ಬಗ್ಗೆಯಾಗಲೀ ಜನಪದ ಶೈಲಿಯ ಪಟ್, ಪಟುವಾ, ಕಾಳೀಘಾಟ್ ಚಿತ್ರಗಳ ಬಗ್ಗೆಯಾಗಲೀ ಎಲ್ಲಿಯೂ ಉಲ್ಲೇಖಿಸದಿರುವುದು ಆಶ್ಚರ್ಯಕರ. ಅಂತೆಯೇ ಅಮೇರಿಕೆಯಿಂದ ವ್ಯಾಸಂಗ ಮುಗಿಸಿ ಬರುವಾಗ ಅಮೇರಿಕದ ಬಹುಭಾಗ ಹಾಗೂ ಐರೋಪ್ಯದೇಶಗಳಲ್ಲಿ ಸಂಚರಿಸಿ ಬಂದರೂ ಅಲ್ಲಿಯ ಮ್ಯೂಸಿಯಂ ಅಥವ ಚಿತ್ರ/ಶಿಲ್ಪಗಳ ಬಗ್ಗೆ ಹೇಳಿಲ್ಲ. ಎಂದರೆ ಇವೆಲ್ಲ ಅವರು ಕಂಡಿಲ್ಲವೆಂದಲ್ಲ. ಹೇಳಲು ಸೂಕ್ತ ಅವಕಾಶ ಅವರಿಗೆ ದೊರೆಯದೇ ಹೋದುದು ನಮಗಾದ ಒಂದು ದೊಡ್ಡ ನಷ್ಟ.

ಆದರೂ ಪ್ರವಾಸಕಾಲದಲ್ಲಿ ಕಂಡಿದ್ದ ಕೆಲವು ಅರಮನೆಗಳು ಹಾಗೂ ಅವುಗಳಲ್ಲಿದ್ದ ಚಿತ್ರಗಳ ಬಗ್ಗೆ ಬರೆದಿದ್ದಾರೆ. ಬಂಗಾಳದಲ್ಲಿದ್ದಾಗಲೇ ಪ್ಲಾಸಿಬಳಿಯ ಸಿರಾಜುದ್ದೌಲನ ರಾಜಧಾನಿ ಮುರಶಿದಾಬಾದ್‌ದಲ್ಲಿ ಆತನ ವಂಶಜರು ಕಟ್ಟಿಸಿದ ಅರಮನೆಯಲ್ಲಿ ಸಿರಾಜುದ್ದೌಲನದೂ ಸೇರಿದಂತೆ ಮುಂದಿನ ಹಲವಾರು ರಾಜರ ತೈಲಚಿತ್ರಗಳನ್ನು ವಿವರಿಸಿದ್ದಾರೆ. ಅಲ್ಲದೆ ಅಂದಿನ ಹೆಸರಾಂತ ಐರೋಪ್ಯಕಲಾಕಾರರ ಚಿತ್ರ ಶಿಲ್ಪಗಳೂ ಇದ್ದೂ ಅವು ಲಕ್ಷೋಪಲಕ್ಷ ಬೆಲೆ ಬಾಳುವಂತಿದ್ದರೂ, ನ್ಯಾಯಾಲಯದ ಪ್ರಕರಣಗಳಿಂದಾಗಿ ಅವು ಅಲಕ್ಷಿತವಾಗಿದ್ದವೆಂದು ಹೇಳುತ್ತಾರೆ (ವಂಗದರ್ಶನ ೧೦೨) ಇದೇರೀತಿ ಅವಜ್ಞೆಗೆ ಗುರಿಯಾಗಿದ್ದ ಅರಮನೆಯೆಂದರೆ ಬಸ್ತರ ಜಿಲ್ಲೆಯ

ಜಗದಲಪುರದ ಕೊನೆಯ ಅರಸ ಪ್ರವೀಣ ಚಂದನ ಅರಮನೆ. ಆತನ ನಿಧನಾನಂತರ ಇದೂ ಸಹ ನ್ಯಾಯಾಲಯ ಕಟಕಟೆ ಹತ್ತಿದ್ದರೂ ದಿನ ನಿತ್ಯವೆಂಬಂತೆ ಪರ ಊರುಗಳಿಂದ ರಾಜನ ಅಭಿಮಾನಿಗಳು ಅರಮನೆ ನೋಡಲು ಬರುತ್ತಿದ್ದು ಕಾಮತರೂ ಕುತೂಹಲದಿಂದ ಹೋಗಿದ್ದರು. ಅಲ್ಲಿ ರಾಜ ರಾಣಿಯರ (ಪ್ರವೀಣ ಚಂದ, ವೇದವತಿ) ಭಾವಚಿತ್ರ ಹಾಗೂ ಇತರ ವಸ್ತುಗಳಿದ್ದವು (ಬಸ್ತರ ಪ್ರವಾಸದಲ್ಲಿ ಪು ೫೪ರಲ್ಲಿ ಸಂಕ್ಷಿಪ್ತವಾಗಿ ಹಾಗೂ ಪು ೯೮ರಲ್ಲಿ ದೀರ್ಘವಾಗಿ ಅರಮನೆಯ ಸ್ಥಿತಿಗತಿಗಳನ್ನು ಇತಿಹಾಸವನ್ನು, ವಿವರಿಸುತ್ತಾರೆ). ಕಾಮತರು ಕಂಡಿದ್ದು ಇನ್ನೊಂದು ಅರಮನೆ ಮಾಂಡುವಿನದು. ಅಕ್ಬರನ ಕಾಲದ ಭಾರತೀಯ ಇತಿಹಾಸದ ಪ್ರಸಿದ್ಧ ರಾಣಿ ರೂಪಮತಿಯ ಮಾಂಡುವಿನ ಬಗ್ಗೆ ಅನೇಕ ದಂತ ಕಥೆಗಳಿವೆ. ಅಲ್ಲದೆ ಮಾಂಡು ರಾಜಸ್ಥಾನಿ ಚಿಕಣಿ ಕಲೆಗಳ ಒಂದು ಪ್ರಕಾರಕ್ಕೆ ತನ್ನದೇ ಹೆಸರು ನೀಡಿ ಪ್ರಸಿದ್ಧವಾಗಿದೆ. ಬಾಝು ಬಹಾದೂರ ಹಾಗೂ ರಾಣಿ ರೂಪಮತಿಯರ ಬಗ್ಗೆ ಕಥೆಗಳಲ್ಲದೆ ಅವರ ಪ್ರೀತಿ ಹಾಗೂ ದುರಂತಗಳ ಬಗ್ಗೆ ನೂರಾರು ಹಾಡುಗಳಿವೆ. "ಅನೇಕಾನೇಕ ಕಲಾಕಾರರೂ ಸಹ ಈ ಅಪೂರ್ವ ದಂಪತಿಗಳನ್ನು ಅಜರಾಮರವಾಗಿ ಮಾಡಿದ್ದಾರೆ. ಅವುಗಳಲ್ಲಿ ಹಿಮಾಲಯದ ಗಢವಾಲ ಕಲಾಕಾರನು ನಿರ್ಮಿಸಿದ ಚಿತ್ರ ಆಕರ್ಷಕವಾಗಿದೆ. ನರ್ಮದಾನದಿಯ ಕೊಳ್ಳದಲ್ಲಿ ಬೆಳದಿಂಗಳ ರಾತ್ರಿಯಲ್ಲಿ ಅರಸ ಅರಸಿಯರು ಬೇಟೆಗಾಗಿ ಹೊರಟಿದ್ದಾರೆ. ಶ್ವೇತ ಅಶ್ವಾರೋಹಿಯಾದ ಬಾಝು ಬಹಾದುರನು ನಿಲುವಂಗಿ ತೊಟ್ಟು ಎಡಗೈಯಲ್ಲಿ ಭರ್ಜಿ ಹಿಡಿದು, ಬಿಲ್ಲನ್ನು ತೋಳಿಗೇರಿಸಿ, ಸೊಂಟಕ್ಕೆ ಖಡ್ಗವನ್ನು ನೇತುಹಾಕಿ ಸುಸಜ್ಜಿತನಾಗಿದ್ದರೆ, ನಾಸಿಪುಡಿ ಬಣ್ಣದ ಕುದುರೆಯೇರಿದ ರೂಪಮತಿ, ಯಾವುದೋ ರಾಗದ ಕುರಿತಾದ ಚರ್ಚೆಯಲ್ಲಿ ಪ್ರಿಯಕರನೊಡನೆ ತೊಡಗಿದ್ದಾಳೆ. ಹತ್ತಿರದ ಸರೋವರದಲ್ಲಿ ಕಮಲಗಳು ಮರುದಿನದ ಸೂರ್ಯೋದಯಕ್ಕಾಗಿ ಹಾತೊರೆಯುತ್ತಿವೆ. ಹಿನ್ನೆಲೆಯಾಗಿ ದಟ್ಟವಾದ ಕಾಡನ್ನು ಬಳಸಲಾಗಿದೆ. ಕಲಾಕಾರನ ಕಲ್ಪನಾ ಶಕ್ತಿಗೆ ಇನ್ನೊಮ್ಮೆ ತಲೆದೂಗಿದೆ. ಸೀತೆ, ಸಾವಿತ್ರಿ ಪದ್ಮಿನಿಯರಿಗೆ ಸರಿ ಸಮನಾದ ಗೌರವ ರೂಪಮತಿಗೂ ಸಂದಾಯವಾಗಿರಬೇಕು ಎಂದು ಅನಿಸದೇ ಇರಲಿಲ್ಲ" ಎಂದು ಹೇಳುತ್ತಾರೆ (ಮ. ಮಡಿಲಲ್ಲಿ ೬೩).

ಕಾಮತರು ತಮ್ಮ ಪ್ರವಾಸದ ಅವಧಿಯಲ್ಲಿ ಹಲವಾರು ಕಲಾವಿದರು, ಶಿಲ್ಪಕಾರರನ್ನು ಕಂಡಿದ್ದು ಅವರ ಪಟ್ಟಿಯೊಂದನ್ನು ಕೊಡುತ್ತಾರೆ. ನಾಗಪುರ ಬಳಿಯ ಛಿಂದವಾಡದಲ್ಲಿ ಆದಿವಾಸಿ ಸಂಶೋಧನಾ ಕೇಂದ್ರ, ಮ್ಯೂಸಿಯಂ ಇತ್ಯಾದಿಗಳಿವೆ. ಅಲ್ಲಿಯ ಸಂಗಮ್ ಹೋಟೆಲ್‌ನ ಮಾಲಿಕ ಕೌಸಲ್. ಕಲಾಕಾರನೂ ಹೌದು. ಹೋಟೆಲಿನ ತುಂಬಾ ಆತ ಬಿಡಿಸಿದ ಚಿತ್ರಗಳಿದ್ದು ಕಾಮತರು ಆ ಬಗ್ಗೆ ಕುತೂಹಲ ತಾಳುತ್ತಾರಲ್ಲದೆ ಛಾಯಾಚಿತ್ರ ಸಹ ಮಾಡಿಕೊಳ್ಳುತ್ತಾರೆ. ಈ ಪ್ರಸಂಗ ಕಾಲರಂಗದಲ್ಲಿ ಸಂಕ್ಷಿಪ್ತವಾಗಿದ್ದರೆ (ಪು೬೪-೫) ಮಧ್ಯಪ್ರದೇಶದ ಮಡಿಲಲ್ಲಿಯಲ್ಲಿ ವಿಸ್ತಾರವಾಗಿದೆ (ಪು೧೬-೧೭) (ಮಾಲಿಕನೇ ಕಲಾಕಾರನೆಂದು ತಾವೇ ಊಹಿಸಿದ್ದಾಗಿ ಕಾಲರಂಗದಲ್ಲಿ ತಿಳಿಸಿದರೆ ಮ.ಮ.ದಲ್ಲಿ ಮಾಣಿ ಹೇಳಿದ ಎಂದಿದ್ದಾರೆ). ಏನಾದರೂ ಈ ಕೃತಿಗಳ ವರ್ಣನೆಯೇ ರೋಚಕವಾಗಿದೆ. ಹಳ್ಳಿಯ ಚಿತ್ರ, ಜೋಡಿ ಕಬ್ಬಾರೆಯ ಚಿತ್ರ, "ನೀರಿನ ಕೊಡ ಹೊತ್ತ ಭಿಲ್ಲಹೆಣ್ಣು ಅರೆಬೆತ್ತಲೆ ಮಾರಿಯಾನಾರಿ, ಕರಿಕೇಶರಾಶಿಯ ಚಂದ್ರಮುಖಿಯರು, ಉಬ್ಬೆದೆ, ಸಿಂಹ ಕಟಿಯ, ತುಂಬಿಕೊಂಡ ಕೈಕಾಲುಗಳ ನೀರೆಯರು" ನೋಡುತ್ತಾ ಮುಂದುವರೆದಾಗ ಮಾಲಿಕನ ಮಗಳು ಸಜೀವ ಚಿತ್ರ ಕನ್ಯೆ ಎದುರಾಗುತ್ತಾಳೆ!

ಈ ಕೌಸಲರ ಸಹೋದರ 'ರುದ್ರಕುಮಾರ' ಒಬ್ಬ ಛಾಯಾಗ್ರಾಹಕ. ತನ್ನ ಮಡದಿಯನ್ನೇ ಮಾಡಲ್ ಆಗಿಸಿ ಸೌಂದರ್ಯ ಭರಿತ ಚಿತ್ರತೆಗೆದವ. ಅಷ್ಟೇ ಅಲ್ಲ ಕಾಮತರು ಊರಿಗೆ ಬಂದಾಗಿನಿಂದ ಒಂದೇ ಸಮನೆ ಹುಡುಕುತ್ತಿದ್ದ 'ಆದಿವಾಸಿ ಸಂಶೋಧನಾ ಕೇಂದ್ರ' ದಲ್ಲಿಯೇ ಕಲಾಕಾರ ಹಾಗೂ ಛಾಯಾಗ್ರಾಹಕ. ಅಲ್ಲಿಯ ಇನ್ನೊಬ್ಬ ಮೂರ್ತಿ ರಚನಾಕಾರ 'ನಾರದ' ಎಂಬಾತ. ಕಲಾಕಾರರ ಇನ್ನೂ ಕೆಲವು ಹೆಸರು ದೊರೆಯುತ್ತದೆಯಾದರೂ ಅವರು ಎಲ್ಲಿಯವರೆಂದು ತಿಳಿದು ಬರುವುದಿಲ್ಲ. ಕಪ್ಪುಮಸಿ, ಎನಾಮಲ್ ಸಾಮಗ್ರಿ ಮಾರಾಟಗಾರ ಖಜಾಂಚಿವಾಲ ಮುಂಬಯಿಯ ಜೆಜೆಯಲ್ಲಿ ಕಲಿತು ಬಂದಾತ. ಪ್ರಣಯಿಗಳು ಪ್ರೇಮ-ಕಾಮದ ಚಿತ್ರಗಳೇ ಅಧಿಕ. ತಮ್ಮ ಅಂಗಡಿಯಲ್ಲಿರಿಸಿ ಮಾರಾಟ ಮಾಡುತ್ತಾರಲ್ಲದೆ ಕೆಲವು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೂ ಚಿತ್ರ ರಚನೆ ಕಲಿಸಿಕೊಡುತ್ತಾರೆ. ಔಷಧ ಅಂಗಡಿಯ ವರ್ಮ ಒಬ್ಬ ಭಾವಚಿತ್ರ ರಚನೆಕಾರ.

ರುದ್ರಕುಮಾರ ಜೈಪುರ, ಹೈದ್ರಾಬಾದ್‌ಗಳಲ್ಲಿ ಕಲಿತಾತ. ಮುರಿಯಾ ಸ್ತ್ರೀ-ಪುರುಷರ ಕುರಿತ ಸಂಗತಿಗಳೇ ಚಿತ್ರಿತ ವಿಷಯ. ಭೂಪಾಲ್, ಗ್ವಾಲಿಯರ್ ದೆಹಲಿಗಳಲ್ಲೂ ಕೃತಿಗಳು ಇವೆಯಲ್ಲದೆ ಪತ್ರಿಕೆಗಳಲ್ಲೂ ಅವರ ಬಗ್ಗೆ ಕೃತಿಗಳ ಬಗ್ಗೆ ಪ್ರಕಟಣೆಗಳಾಗಿವೆ. ತನ್ನ ಕೃತಿಗಳ ಬಗ್ಗೆ ಹೆಮ್ಮೆ, ಅಭಿಮಾನ, ಕನಸು ಕಾಣುವಿಕೆಯೇ ಅಧಿಕ. ಛತ್ತರ್ ಪುರದ ದುಬೆಲಾ ಎಂಬಲ್ಲಿ ರಾಸಲೀಲೆ. ಜಂಬೂಸವಾರಿ ಇತ್ಯಾದಿ (ಪ್ರಾಯಶ ಚಿಕಣಿ) ಚಿತ್ರಗಳು (೧೯-೨೦ನೇ ಶತಮಾನದವು) ಸಂಗ್ರಹಿಸಿರಿಸಿದಂತೆ ಜಬಲ್‌ಪುರದಲ್ಲಿ ರಾಣಿ ದುರ್ಗಾವತಿಯ ಜೀವನ ಸಾಧನೆಗಳನ್ನು ರೂಪಿಸುವ ಚಿತ್ರಗಳಿದ್ದವು. ಭೂಪಾಲ್, ಗ್ವಾಲಿಯರ್, ಇಂದೋರ್, ಕವರ್ಧಾ, ರಾಯಪುರಗಳಲ್ಲೂ ಸಂಗ್ರಹಗಳಿದ್ದವು ಎಂದಷ್ಟೇ ಹೇಳಿ ಮುಗಿಸಿ ಬಿಡುತ್ತಾರೆ.

ಮೂರ್ತಿಕಾರರಲ್ಲಿ ಖಜುರಾಹೋದ ಕಾಮಿನಿಯರ ಶಿಲ್ಪವರ್ಣನೆಯಿದೆ. ನಂತರ ಆದಿವಾಸಿ ಸಂಶೋಧನಾ ಕೇಂದ್ರದ ನಾರದರ ಬಗ್ಗೆ 'ಕಾಲರಂಗ' ಹಾಗೂ 'ಮ.ಮಡಿಲಲ್ಲಿ'ಗಳಲ್ಲೂ ವಿಸ್ತಾರವಾಗಿ ವಿವರಗಳಿವೆ. ನಾರದರು ಮುಂಬಯಿಯ ಸಿನಿಮಾ ಜಗತ್ತಿನಲ್ಲಿದ್ದೂ ಬೇಸರಿಸಿ ಇಲ್ಲಿಗೆ ಬಂದು ಮೂರ್ತಿರಚನಕಾರರಾಗಿದ್ದು ಆದಿವಾಸಿಗಳ (ಮುರಿಯದ) ದೈನಂದಿನ ಜೀವನ, ನೃತ್ಯ, ಆಟ, ವಿನೋದ ಅಥವ ಬರಿದೆ ಅಲಂಕೃತ ಸ್ವರೂಪ ಇತ್ಯಾದಿಗಳನ್ನು ಕಿರು ಆಕಾರದಲ್ಲಿ ರೂಪಿಸಿ ಕೇಂದ್ರದಲ್ಲಿರಿಸಿದ್ದರು. ಖಾಸಗಿಯಾಗಿಯೂ ಮೂರ್ತಿಶಿಲ್ಪ ರಚಿಸಿಕೊಡುತ್ತಿದ್ದರು. ಮಕ್ಕಳ ಉದ್ಯಾನವನಕ್ಕೆ, – ಬಟ್ಟೆ ಅಂಗಡಿಗೆ ಸಹ ದೊಡ್ಡ ಪ್ರಮಾಣದ ಮೂರ್ತಿಗಳನ್ನು ರೂಪಿಸಿಕೊಡುತ್ತಿದ್ದರು.

ಭೂಪಾಲದ ಖುಶ್ವಾದವರು ಕಟ್ಟಿಗೆಯಿಂದ ಮೂರ್ತಿಶಿಲ್ಪ ರಚನೆಕಾರರಾಗಿದ್ದು, ಅಲ್ಲಿಯ ಆದಿವಾಸಿ ಸಂಸ್ಥೆಯ ಕಲಾಕಾರರು ಖಜುರಾಹೋ ಸುರಸುಂದರಿಯರನ್ನು ರೂಪಿಸಿದ್ದು. ಪ್ರಯೋಗಶೀಲ ಪ್ರಶಸ್ತಿ ವಿಜೇತ ಪಶ್ಚಿಮ ಬಂಗಾಳದ ಗುಹಾ ಅವರು ಮೂಲತಃ ಡ್ರಾಫ್ಟ್ಸ್‌ಮೆನ್ ಆದರೂ ಜಗದಲಪುರದಲ್ಲಿ ಕಲಾಕೇಂದ್ರ ತೆರೆದು ಮೂರ್ತಿಶಿಲ್ಪ ರಚನೆ ಮಾಡುತ್ತಿದ್ದವರು. ಮುರಿಯರ ನೃತ್ಯ, ಸಂತೆ, ಕೌಟುಂಬಿಕ ಚಿತ್ರಗಳೇ ಮರದ ಹಲಗೆಯ ಮೇಲೆ ಅರೆಯುಬ್ಬು ಶಿಲ್ಪದಂತೆ ರೂಪಿಸುತ್ತಿದ್ದಾತ. ಆದರೆ ಬಾಡಿಗೆ ಕಲಾವಿದನ್ನಿರಿಸಿಕೊಂಡು ಹೆಚ್ಚಿನ ಸಂಖ್ಯೆಯಲ್ಲಿ ಕೃತಿರಚಿಸಿ ಹೊರ ಊರಿನ ಧನಿಕರಿಗೆ ಮಾರಿ ಹಣ ಸಂಪಾದಿಸುತ್ತಿದ್ದುದು, ಆ ಪ್ರದೇಶದ ಪರಂಪರಾನುಗತ ಶಿಲ್ಪಕಲೆಯ ಮೇಲೆ ವ್ಯತಿರಿಕ್ತ ಪರಿಣಾಮಬೀರುವಂತಾಗಿದ್ದು ವಿಷಾದನೀಯ.

ಮುಂದೆ ಕಾಮತರು ಆದಿವಾಸಿಗಳ ಶಿಲೆ ಹಾಗೂ ಮರದ ಸ್ಮಾರಕ ಸ್ತಂಭಗಳ ಬಗ್ಗೆ ವಿವರವಾಗಿ ಹೇಳುತ್ತಾರೆ. ಅದರಲ್ಲಿಯ ಚಿತ್ರ, ರೂಪಗಳು, ಶಿಲೆಯ ಆಕಾರ, ಆಚರಣೆ ಕುರಿತ ವಿವರಗಳು ಇವೆ (ಕಾಲರಂಗ ೧೪೫-೬). ಡಾ|| ಶೇಷಶಾಸ್ತ್ರಿ ಅವರು ಈ ಬಗ್ಗೆ ಇನ್ನಷ್ಟು ವಿವರ ನೀಡುತ್ತಾರೆ. ಸ್ಮಾರಕ ಶಿಲೆಗಳ ಮೇಲೆ ಮೃತವ್ಯಕ್ತಿಯ ಜೀವನ ವಿವರ, ಅಧಿಕಾರ, ಕೈಗೂಡದ ಆಸೆ, ನೃತ್ಯಗಾತಿಯರು, ಮಧುಪಾತ್ರೆ, ಬೇಟೆ-ಪ್ರಾಣಿಗಳ ಚಿತ್ರಣವೂ ಇರುತ್ತವೆ ಎಂದು ಹೇಳುವ ಶಾಸ್ತ್ರಿ ಅವರು ಕೆಲವು ರೇಖಾ ಚಿತ್ರ ಸಹ ನೀಡುತ್ತಾರೆ. (ಕರ್ನಾಟಕದ ವೀರಗಲ್ಲುಗಳು ಪು. ೧೫-೧೬). ಚಿತ್ರ, ಶಿಲ್ಪ ರಚನಕಾರರ ಬಗ್ಗೆ ಕಾಮತರು ಸಾಕಷ್ಟು ಹೇಳಿದರೂ ಯಾವುದೇ ಕೃತಿಗಳ ಚಿತ್ರ ನೀಡಿಲ್ಲದಿರುವುದೂ ಒಂದು ಕೊರತೆ. ಪ್ರಾಯಶಃ ಮ.ಮಡಿಲಲ್ಲಿಯ ಮುಖ ಪುಟದ ತರುಣಿಯ ಹಾಗೂ ೨೯ನೇ ಪುಟದಲ್ಲಿರುವ ಮುರಿಯಾ ತರುಣ-ತರುಣಿಯ ಚಿತ್ರ ಕೌಸಲರು ಬಿಡಿಸಿದ್ದಿರಬಹುದು. ಇದರ ಮುಖಪುಟದ ತರುಣಿಯ ವರ್ಣಚಿತ್ರ ಅನುಸರಿಸಿ ರೇಖಾ ಚಿತ್ರವೊಂದನ್ನು ಪ್ರಾಯಶ ಕಾಮತ್‌ರೇ ರಚಿಸಿ ಬಸ್ತರ ಪ್ರವಾಸದ ೧೩೧ನೇ ಪುಟದಲ್ಲಿ ನೀಡಿದ್ದಾರೆ.

ಸಂಗೀತ, ಚಿತ್ರ, ಶಿಲ್ಪಗಳ ಕಾಶಿ ಎನಿಸಿದ ರವೀಂದ್ರರ ಕನಸಿನ ಕೂಸಾದ 'ಶಾಂತಿನಿಕೇತನ'ದ ವಿಶ್ವಭಾರತಿಗೆ ಕಾಮತರು ಹೋಗಿದ್ದು ಸಾಕಷ್ಟು ಪೂರ್ವಸಿದ್ಧತೆ ಹಾಗೂ ಮಾರ್ಗದರ್ಶನವಿಲ್ಲದೇ ಇಡೀ ದಿನ ವ್ಯರ್ಥ ಸುತ್ತುವಂತಾಗಿತ್ತು. ಆದರೂ ನಂದಲಾಲ ಬಸು ಅವರ ಕೃತಿಗಳು, ರವೀಂದ್ರರ ಜೀವನ ಚರಿತ್ರೆ ರೂಪಿಸುವ ಪ್ರದರ್ಶನ, ಅವರು ಬಳಸುತ್ತಿದ್ದ ವಸ್ತುಗಳು, ದೇಶವಿದೇಶಗಳಲ್ಲಿ ಅವರಿಗೆ ಕಾಣಿಕೆ ಬಂದ ಸಾಮಗ್ರಿಗಳನ್ನು ಪ್ರದರ್ಶಿಸಿರುವ ಬಗ್ಗೆ ಹೇಳುತ್ತಾರೆ. ಅಲ್ಲಲ್ಲಿ ನೈಜ ಶೈಲಿಯಲ್ಲಿ ರೂಪಿಸಿ ಇರಿಸಿದ್ದ ಶಿಲ್ಪಗಳು, ವಸ್ತು ಸಂಗ್ರಹಾಲಯದ ಹೊರಗೋಡೆಯಲ್ಲಿಯ ಭಿತ್ತಿಚಿತ್ರ ಹಾಗೂ ಒಳಾಂಗಣದಲ್ಲಿದ್ದ ಚಿತ್ರಗಳ ಬಗ್ಗೆಯೂ ಹೇಳುತ್ತಾ "..ಇವು ಏನೂ ಅರ್ಥವಾಗದೆ ಕೊರಡಿನಲ್ಲಿ ಕಾಲ್ಪನಿಕ ಕುದುರೆ ಎಷ್ಟೋ ಅರ್ಥ ಕೊಡುವಂತಹದಾಗಿದೆ" ಎಂದು ಹೇಳುವುದಲ್ಲದೆ ನಂದಲಾಲರ ಬಗ್ಗೆ ಹೇಳುತ್ತಾ ನಗ್ನಸ್ತ್ರೀಯನ್ನು ಮಾಡೆಲ್ಲಾಗಿರಿಸಿ ಚಿತ್ರ ರಚಿಸುವುದಕ್ಕಿಂತ, ನಿಸರ್ಗದಲ್ಲಿಯ ಗಿಡಮರ, ಪಕ್ಷಿ ಪ್ರಾಣಿಗಳ ಚಿತ್ರ ರಚಿಸುತ್ತಿದ್ದ ಅವರ ಪರಿಶ್ರಮ ಜ್ಞಾಪಿಸಿಕೊಳ್ಳುತ್ತಾರೆ. "ಜೇಲಿವೆಣ್ಣಿನ ನಗ್ನ ಚಿತ್ರ ಚಿತ್ರಿಸುವುದಕ್ಕಿಂತ ದಿಟ್ಟಿಸುವ ಕಣ್ಣುಗಳ ಭಯ ಭೀತಿಯಿಲ್ಲದೇ ಅರೆನಗ್ನವಾಗಿ ಜೀವಿಸುವ ಗಿರಿಜನರನ್ನೇ ಆಧಾರವಾಗಿಟ್ಟುಕೊಂಡು ಕಂಡದ್ದನ್ನು ಕಲ್ಪಿಸಿ ರಚಿಸಬೇಕೆಂದು ಅವರ ಹವ್ಯಾಸ. ಇದು ಅವರು ಭಾರತೀಯ ಚಿತ್ರ ಮಾದರಿಗೆ ಹಾಕಿಕೊಟ್ಟ ಬುನಾದಿ" ಎಂದು ಮುಕ್ತ ಕಂಠದಿಂದ ಪ್ರಶಂಸಿಸುತ್ತಾರೆ (ವಂಗದರ್ಶನ ಪು. ೨೬೪-೫). ಆದರೆ ಇವುಗಳ ನೆನಪಿಗಾಗಿ ಛಾಯಾಚಿತ್ರ ತೆಗೆಯಲೂ ಎಲ್ಲಕಡೆ ಅಡ್ಡಿಪಡಿಸಿದ ಬಗ್ಗೆಯೂ ವಿಷಾದಿಸುತ್ತಾರೆ. (ಆದರೆ ಪು ೧೯೧ರಲ್ಲಿ ಹೀಗೆ ತೊಂದರೆ ನೀಡಿದ ಒಬ್ಬಾತನಿಗೆ ತಾವು ವಿಶ್ವಭಾರತಿಯ ಅಧಿಕಾರಿಯಿಂದ ಅಪ್ಪಣೆ ಪಡೆದುದಾಗಿ ಹೇಳುತ್ತಾರೆ).

ಕಾಮತರು ಶಾಂತಿನಿಕೇತನಕ್ಕೆ ಹೋಗಿದ್ದು ಬಂಗಾಳದಲ್ಲಿದ್ದ ಅವಧಿಯಲ್ಲಿ (೧೯೬೯-೭೧). ಇದಾದ ಸುಮಾರು ೧೮-೧೯ ವರ್ಷಗಳ ನಂತರ ಈ ಪ್ರದೇಶದಲ್ಲಿ ಅಧ್ಯಯನ ಪ್ರವಾಸ ಕೈಗೊಂಡ ಎಚ್. ಎಸ್. ರಾಘವೇಂದ್ರರಾವ್ ಅವರು ಕೆಲದಿನ ಶಾಂತಿನಿಕೇತನದಲ್ಲಿ ತಂಗಿದ್ದು ಇಲ್ಲಿಯ ಕಲೆ, ಕಲಾವಿದರು, ಕಲಾ ಅಧ್ಯಾಪಕರು ಇತ್ಯಾದಿಗಳ ಬಗ್ಗೆ ಸಾಕಷ್ಟು ವಿವರ ನೀಡುತ್ತಾರೆ. ಅಲ್ಲದೆ ಇಪ್ಪತ್ತನೇ ಶತಮಾನದ ಆದಿಭಾಗದಲ್ಲೇ ರವೀಂದ್ರರೊಂದಿಗೇ ನೇರ ಸಂಪರ್ಕ ಇರಿಸಿಕೊಂಡಿದ್ದ ಅ.ನ. ಸುಬ್ಬರಾಯರು, ಅ.ನ. ಕೃಷ್ಣರಾಯರು ಶಾಂತಿನಿಕೇತನಕ್ಕೆ ಹೋಗಿದ್ದು ಅಲ್ಲಿಯ ಕಲಾಪರಿಸರದ ಬಗ್ಗೆ ಹೇಳಿರುವ ವಿವರಗಳು ದೊರೆಯುತ್ತವೆ. ಆದರೆ ಕಾಮತರು ಹೋಗುವ ವೇಳೆಗೆ ಅದು ನಕ್ಸಲೀಯರ.ತಾಣವಾಗಿದ್ದು, ಅಲ್ಲಿಯ ಜನ ಹೊರಗಿನವರನ್ನು ಸಂಶಯದಿಂದ ನೋಡುವಂತಾಗಿದ್ದು ದುರ್ದೈವ.

ಕಾಮತರ ಇಷ್ಟೆಲ್ಲಾ ಓದು, ಪ್ರವಾಸ ಹಾಗೂ ಕೃತಿ ರಚನೆಯ ಪರಿಶ್ರಮದ ಹಿನ್ನೆಲೆಯಲ್ಲಿ 'ಸಿಬಿಯ ಭಿತ್ತಿಚಿತ್ರಗಳು' ಲೇಖನ ಹಾಗೂ  ಕಾವಿಕಲೆ ಪುಸ್ತಕದ ಬಗ್ಗೆ ಸಂಕ್ಷಿಪ್ತವಾಗಿ ನೋಡಬಹುದು. ಲಕ್ಷ್ಮಣ್ ತೆಲಗಾವಿ ಅವರು ೧೯೮೨ರಲ್ಲಿ ಹರತಿ ಕೋಟೆಯ ವೀರನಾಯಕರ ಸ್ಮರಣಾರ್ಥವಾಗಿ ಸಂಪಾದಿಸಿದ ಗ್ರಂಥ 'ಹರತಿಸಿರಿ'ಗಾಗಿ ಬರೆದ ಸುದೀರ್ಘ ಲೇಖನ 'ಸಿಬಿಯ ಭಿತ್ತಿಚಿತ್ರಗಳು'. ಬೇರೊಬ್ಬರ ಅಧ್ಯಯನದ ಸಲುವಾಗಿ ಹಲವು ಬಾರಿ ಸಿಬಿಗೆ ಹೋಗಬೇಕಾಗಿದ್ದು ಅಲ್ಲಿಯ ಭಿತ್ತಿ ಚಿತ್ರಗಳನ್ನು ವಿವರವಾಗಿ ಅಧ್ಯಯನ ಮಾಡಿದ್ದಲ್ಲದೆ ವ್ಯಾಪಕವಾಗಿ ಛಾಯಾಚಿತ್ರ ತೆಗೆದಿದ್ದು, ನಂತರ ಕಾಮತರೇ ಈ ಕುರಿತು ಲೇಖನ ಬರೆಯುವಂತಾಯಿತು. ಮೊದಲಿಗೆ ಹಿನ್ನೆಲೆಯಾಗಿ ಐತಿಹಾಸಿಕವಾಗಿ ಹೇಳಿದ್ದಾರೆ. ಆದರೆ ನಂತರದ ಕಾಲದಲ್ಲಿ ಕೆಲವು ಸಂಗತಿಗಳು ಸ್ಪಷ್ಟವಾದವು. ಅವು ಮೊದಲೇ ಕಾಮತರ ಗಮನಕ್ಕೆ ಬಂದಿರಲಿಲ್ಲ. ಅವೆಂದರೆ, ವಿಜಯನಗರ ಶಾಸನೋಕ್ತ 'ಸಿಬಿ' ಅಥವ 'ಶಿಬೂರು' 'ಸಿಬೂರು'ಗಳು ಇಂದು ನರಸಿಂಹಸ್ವಾಮಿ ದೇವಾಲಯವಿರುವ 'ಸಿಬಿ' ಅಲ್ಲ, ಬಳಿಯಲ್ಲಿಯೇ ಇರುವ 'ಸಿಬಿಅಗ್ರಹಾರ' ಗ್ರಾಮ. ಅಲ್ಲಿ ಈಚೆಗೆ ವಿಜಯನಗರ ಕಾಲದ ಶಿವಾಲಯವೊಂದರ ತಳಪಾಯ ದೊರೆಯಿತು. ಪ್ರಾಯಶ ಅದೇ ಶಾಸನೋಕ್ತ ಚಂದ್ರಮೌಳೇಶ್ವರಿ ದೇವಾಲಯವಾಗಿದ್ದಿರಬಹುದು. ಎರಡನೆಯದಾಗಿ ಇಂದಿನ 'ಸಿಬಿ' ನರಸಿಂಹಸ್ವಾಮಿ ದೇವಾಲಯದ ಭಿತ್ತಿಚಿತ್ರದಲ್ಲಿರುವ ಶಾಸನದ ಪೂರ್ಣಪಾಠ ತುಮಕೂರಿನ ಡಾ. ಬಿ. ನಂಜುಂಡಸ್ವಾಮಿಯವರು ಗುರುತಿಸಿದ್ದು ಅದರಂತೆ ಹೈದರ್‌ನಾಮೆಯ ಕೃತಿಕಾರ ಕಚೇರಿ ಕೃಷ್ಣಪ್ಪನವರೇ ಎಂದು ಸಿದ್ಧವಾಗುವುದಲ್ಲದೆ ಇಲ್ಲಿಯ ಭಿತ್ತಿಚಿತ್ರಗಳು ಮುಮ್ಮಡಿ ಕೃಷ್ಣರಾಜರ ಕಾಲದ್ದೆಂದೂ. ಭಿತ್ತಿಚಿತ್ರದಲ್ಲಿಯ ಭಾವಚಿತ್ರಗಳು ಹೈದರ್ ಟಿಪ್ಪುಗಳಲ್ಲದ್ದವೆಂದೂ, ಮುಮ್ಮಡಿಯವರದೆಂದೂ ಸಿದ್ಧವಾಗುತ್ತದೆ. ಇತಿಹಾಸ ಹಾಗೂ ವ್ಯಕ್ತಿ ಚಿತ್ರಗಳ ಭಾಗಗಳ ವಿನಾ ಕಾಮತರ ಉಳಿದ ಅಧ್ಯಯನಗಳು ಆಸಕ್ತದಾಯಕವಾಗಿದೆ.

ಇಡೀ ಚಿತ್ರಣಗಳನ್ನು ಧಾರ್ಮಿಕ, ಸಾಮಾಜಿಕ, ನೈಸರ್ಗಿಕ, ವ್ಯಕ್ತಿಗತ, ಲೈಂಗಿಕ ಹಾಗೂ ಚಾರಿತ್ರಿಕವೆಂದು ವಿಭಾಗಿಸಿಕೊಂಡು ವಿವರಿಸಿದ್ದಾರೆ. ಈ ಹಿಂದೆಯೇ ಮೈಸೂರು ಪುರಾತತ್ವ ಇಲಾಖೆಯವರು ೧೯೪೫ರಲ್ಲಿ ಹೊರತಂದ ವಾರ್ಷಿಕ ವರದಿಯಲ್ಲಿ ಇಲ್ಲಿಯ ಚಿತ್ರಗಳ ಬಗ್ಗೆ ವಿವರಗಳಿವೆ. ನಂತರ ತಿ.ತಾ.ಶರ್ಮ ಹಾಗೂ ಶಿವರಾಮ ಕಾರಂತರು ಇಲ್ಲಿಯ ಐತಿಹಾಸಿಕ ಹಾಗೂ ಕಲಾಕೃತಿಗಳ ಬಗ್ಗೆ ವಿವರಿಸಿದ್ದಾರೆ. ಈಚೆಗೆ ವೀಣಾಶೇಖರ್ ಅವರು ವಿವರವಾಗಿ ಅಭ್ಯಸಿಸಿ ಕೈಪಿಡಿ( ಮೊನೋಗ್ರಾಫ್)ಯನ್ನು ಹೊರತಂದಿದ್ದಾರೆ. ಕಾಮತರು ಈ ಹಿಂದೆ ಪ್ರಕಟವಾದವುಗಳನ್ನು ಗಮನಿಸಿದ್ದರಾದರೂ ಒಂದೊಂದೇ ಚಿತ್ರಿತ ಅಂಕಣಗಳನ್ನು ಇರಿಸಿಕೊಂಡು, ಅವುಗಳನ್ನು ಉಪ ಅಧ್ಯಾಯಗಳಿಗೆ ತಕ್ಕಂತೆ ವಿಭಾಗಿಸಿಕೊಂಡು ಲೇಖನ ರಚಿಸಿರುವುದರಿಂದ ಒಂದು ಸಮಗ್ರತೆ ಕಂಡುಬರುತ್ತದೆ. ಸಂಪ್ರದಾಯ ಚಿತ್ರಗಳು ಒಂದು ಕಾಲದ ಸಾಂಸ್ಕೃತಿಕ ದಾಖಲೆಯಾಗಿರುವುದರಿಂದ ಅದರಲ್ಲಿಯ ಧಾರ್ಮಿಕ ವಿಷಯಗಳೂ ಸೇರಿದಂತೆ ಸಾಮಾಜಿಕ ಜನಜೀವನ, ಉಡುಗೆ-ತೊಡುಗೆ ವಾಸ್ತು, ಪ್ರಕೃತಿ ಚಿತ್ರಣ, ಸಾಂಸಾರಿಕ ಚಿತ್ರಣ, ಯುದ್ಧ, ಬೇಟೆ, ಮೆರವಣಿಗೆ, ದೈನಂದಿನ ಕೆಲಸ-ಕಾರ್ಯಗಳು ಇತ್ಯಾದಿಗಳನ್ನು ನೋಡಬೇಕಿದ್ದು ಕಾಮತರು ಈ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿದ್ದಾರೆ. ಹಾಗೂ ಮುಂದೆ ಈ ರೀತಿ ಅಧ್ಯಯನ ಮಾಡುವವರಿಗೆ ಒಂದು ರೀತಿ ಪೂರ್ವಸಿದ್ಧತೆ ಮಾಡಿಕೊಟ್ಟಿದ್ದಾರೆಂದೇ ಹೇಳಬಹುದು.

ಹಿಂದೆ ಹೇಳಿದಂತೆ ಕಾಮತರು ಕಣ್ಣುಬಿಟ್ಟು ಮೊದಲು ನೋಡಿದ್ದೇ ಕಾವಿ ಚಿತ್ರಗಳನ್ನು. ಹಾಗಾಗಿ ಅದರ ಬಗ್ಗೆ ಅವರಿಗೆ ಅಪಾರ ಒಲವು ಇತ್ತಲ್ಲದೆ, ಆ ಪ್ರದೇಶದಲ್ಲಿ ಇದ್ದಷ್ಟು ಕಾಲವೂ ಇವುಗಳನ್ನು ಕಂಡು ಕಣ್ಣು, ಮನಸ್ಸುಗಳನ್ನು ಪಳಗಿಸಿಕೊಂಡಿದ್ದರು. ಮುಂದೆ ಇವುಗಳನ್ನು ಕನಿಷ್ಟ ದಾಖಲಿಸಿ ಇಡಲೆಂದು ಹೋದಾಗ ಹಳೆಯವನೇಕವು ನಾಶವಾಗಿದ್ದವು. ಆದರೂ ಇರುವಷ್ಟು ದಾಖಲಿಸಿ ಕೆಲವು ಲೇಖನಗಳನ್ನು ಬರೆದರು (ತರಂಗ ೧೨-೧೧-೧೯೮೪. ಕಲಾ ಮೇಳ ಸ್ಮರಣ ಸಂಚಿಕೆ, ೧೯೮೮ ಇತ್ಯಾದಿ). ೧೯೮೫ರಲ್ಲಿ ರಾಜ್ಯ ಪುರಾತತ್ವ ಇಲಾಖೆಯ ಶತಮಾನೋತ್ಸವ ಸಂದರ್ಭದ ವಿಚಾರ ಸಂಕಿರಣದಲ್ಲಿಯೂ ಈ ಕುರಿತು ಪ್ರಬಂಧ ಮಂಡಿಸಿದ್ದು ಮುಂದೆ ಅದೂ ಪ್ರಕಟವಾಯಿತು. ಈಚೆಗೆ ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ. ಯಾದಪ್ಪ ಪರದೇಶಿ ಅವರು ಉತ್ತರ ಕರ್ನಾಟಕದ ಭಿತ್ತಿಚಿತ್ರಗಳ ಬಗ್ಗೆ ಸಮಗ್ರ ಅಧ್ಯಯನ ಮಾಡಿದ್ದು ಕಾವಿಕಲೆಯನ್ನೂ ಪರಿಶೀಲಿಸಿದ್ದಾರೆ. ಕಾಮತರು ನೀಡಿದ ಪಟ್ಟಿಯನ್ನು ಅನುಸರಿಸಿದ್ದಲ್ಲದೆ ಇನ್ನೂ ಹಲವಾರು ಸ್ಥಳಗಳಲ್ಲಿ ಪತ್ತೆಹಚ್ಚಿದ್ದು, ಕಲಾಕೃತಿ ರಚಿಸುವ ಜನರನ್ನು ಹುಡುಕಿ ಪ್ರಾಯೋಗಿಕವಾಗಿ ಪರೀಕ್ಷಿಸಿದ್ದಾರೆ.

'ಕಾವಿಕಲೆ' ಪುಸ್ತಕದಲ್ಲಿಯೂ ಕಾಮತರು ಐತಿಹಾಸಿಕವಾಗಿ ಗುರುತಿಸಿ ನಂತರ ಕರಾವಳಿಯ ದೇವಾಲಯಗಳು, ಚಿತ್ರಶೈಲಿ, ಜಾಮಿತಿಯ ಚಿತ್ರಗಳು, ಸಮಕಾಲೀನ ವ್ಯಕ್ತಿಗಳು, ಗ್ರಾಮೀಣ ಶೈಲಿ, ಪಶು-ಪಕ್ಷಿಗಳು, ಹೆಂಗಳೆಯರೂ, ಹೂಬಳ್ಳಿಗಳು, ದ್ವಾರಪಾಲಕರು, ಆದಿ  ಬೆಳವಣಿಗೆಗಳಲ್ಲದೆ  ಅದರ ವಿನಾಶದ ಹಾದಿಯನ್ನು ಗುರುತಿಸಿದ್ದಾರೆ. ಹಿಂದೆ ಹೇಳಿದಂತೆ ಅವರ ವಿವಿಧ ಪುಸ್ತಕಗಳಲ್ಲಿ ಸಮಯ ಸಿಕ್ಕಾಗಲೆಲ್ಲ ಕಾವಿಕಲೆಯ ವೈಭವವನ್ನು ಹೇಳುತ್ತಲೇ ಅದು ವಿನಾಶದ ಅಂಚನ್ನು ಮುಟ್ಟಿರುವ ಬಗ್ಗೆ ಕಳಕಳಿಯಿಂದ, ಬೇಸರದಿಂದ, ದುಃಖದಿಂದ ನಿಟ್ಟುಸಿರು ಬಿಡುತ್ತಾರೆ. ಗೋವೆಯ ಮೂಲದಿಂದ ಒಂದು ಹಂಗಡದವರ ಜೊತೆಗೇ ಬಂದ ಈ ಕಲಾ ಪ್ರಕಾರ ಉತ್ತರ ಕನ್ನಡ ಜಿಲ್ಲೆಗಷ್ಟೇ ಸೀಮಿತವಾಗಿರುವುದು. ಈ ಕಲೆಗೆ ಬೇಕಾದ 'ಉರಿಮಂಜು' ಎಂಬ ಖನಿಜ ವರ್ಣ (earthern colour) ಇಲ್ಲಿಯ ಬಸವರಾಜದುರ್ಗ ಪ್ರದೇಶದಲ್ಲಿ ದೊರೆಯುವುದು. ಒಂದು ಕಲಾ ಪ್ರಕಾರವಾಗಿ ಮುಂದಿನ ಪೀಳಿಗೆ ಕಲಿಯದೇ ಹೋದುದೇ (ಗ್ರಾಹಕರೂ

ವಿಮುಖವಾದುದು) ಒಟ್ಟಾರೆಯಾಗಿ ಈ ಕಲಾ ಪ್ರಕಾರ ಹೊರಗಿನ ಪ್ರಪಂಚವಿರಲಿ ನೆರೆಯ ಜಿಲ್ಲೆಗೇ ಪ್ರಸರಿಸಲಿಲ್ಲ. ರಾಜ್ಯ ಲಲಿತ ಕಲಾ ಅಕಾಡೆಮಿಗಾಗಿ ರಚಿಸಿದ ಈ ಗ್ರಂಥದಲ್ಲಿ (೧೯೯೩ರಲ್ಲಿ) ವಿಪುಲವಾದ ಚಿತ್ರಗಳಿದ್ದು ವಿವರಣೆಯೂ ಇರುವುದರಿಂದ ಅಷ್ಟು ಮಾತ್ರವಾದರೂ ಉಳಿದುಕೊಂಡಿದೆಯೆನ್ನಬಹುದು. ಮುಂದೆ ಕಾಮತರು ೨೦೦೦ದಲ್ಲಿ ಇದೇ ಗ್ರಂಥವನ್ನು ಇಷ್ಟೇ ಚಿತ್ರಗಳೊಂದಿಗೆ ಕೊಂಕಣಿ ಅಕಾಡೆಮಿಗಾಗಿ ಕೊಂಕಣಿ ಭಾಷೆಯಲ್ಲಿ ಅನುವಾದಿಸಿಕೊಟ್ಟಿದ್ದು ಪ್ರಕಟವಾಗಿದೆ.

ಉತ್ತರ ಕರ್ನಾಟಕದ ಹಳೆಯ ಮನೆ ಅಥವಾ ಸಾಕಷ್ಟು ದೇವಾಲಯಗಳಲ್ಲಿ ಕಾವಿಕಲೆ ಕಾಣಬಹುದಾದರೂ ಹೆಚ್ಚಿನವು ಸುಳವು ಹೊಳವಿನ ನಕ್ಷೆಗಳು-ಆದರೆ ಸುಮಾರು ೩೩ ದೇವಾಲಯ ಹಾಗೂ ಮನೆಗಳಲ್ಲಿ ಉಳಿದಿರುವ ಚಿತ್ರಿತ ಆಕಾರಗಳನ್ನು ಇರಿಸಿಕೊಂಡು ಅವುಗಳನ್ನು ವಿಷಯಕ್ಕೆ ತಕ್ಕಂತೆ ವಿಭಾಗಿಸಿಕೊಂಡು ವಿವರಿಸಿದ್ದಾರೆ. ಪ್ರವಾಸ ಕಥನಗಳಿಂದಾಗಿಯೇ ಪ್ರಸಿದ್ಧರಾಗಿದ್ದ ಕಾಮತರಿಗೆ ಕಥನಕಲೆ ಅಥವ ಶೈಲಿ ಮೈಗೂಡಿದ್ದು ಪ್ರಸ್ತುತ ಪುಸ್ತಕದಲ್ಲಿಯೂ ಕಂಡುಬರುತ್ತದೆ. ಆದರೆ ಕಾಮತರ ಮೂಲತಃ ಸಂಶೋಧನಾ ಪ್ರವೃತ್ತಿಯಿಂದಾಗಿ ಒಂದು ವಿಷಯ ಕೈಗೆತ್ತಿಕೊಂಡರೆ ಅದರ ಕೂಲಂಕಷ ಪರಿಶೀಲನೆ ಸ್ಪಷ್ಟವಾಗಿ ಕಂಡುಬರುತ್ತದೆ. ಉದಾಹರಣೆಗೆ ಗಿಳಿಯ ಬಗ್ಗೆ ಹೇಳುತ್ತಾ ಎಷ್ಟು ಬಗೆಯಲ್ಲಿ, ಯಾವ ಯಾವ ರೀತಿಯಲ್ಲಿ, ಭಂಗಿಯಲ್ಲಿ, ಶೈಲಿಯಲ್ಲಿ ಇರುವವೆಂದು ಒಂದೇ ಎಡೆಯಲ್ಲಿ ಸಂಪೂರ್ಣ ಚಿತ್ರ ನೀಡಿಬಿಡುತ್ತಾರೆ. ಕಾವಿಕಲೆಯಲ್ಲಿ ಕಾಮತರು ಆರಿಸಿಕೊಂಡ ಎಲ್ಲ ಆಕಾರಗಳ ಬಗ್ಗೆಯೂ ಇದೇ ಮಾತು ಹೇಳಬಹುದು.

ಚಿತ್ರಕಲೆಯಷ್ಟೇ ಅಲ್ಲ, ಕಾಮತರು ಶಿಲ್ಪಕಲೆಯ ಬಗ್ಗೆಯೂ ಸಾಕಷ್ಟು ಹೇಳಿದ್ದಾರೆ. ಇವೆರಡೂ ದೃಶ್ಯಮಾಧ್ಯಮಗಳೇ ಆದರೂ ಪ್ರಯೋಗದಿಂದ ಹಿಡಿದು ಪ್ರಯೋಜನದವರೆಗೆ ಎರಡೂ ವಿಭಿನ್ನ ಮಾಧ್ಯಮಗಳೇ. ಬಸ್ತರ ಜಿಲ್ಲೆಯ ಘರುವಾ ಆದಿವಾಸಿ ಜನಾಂಗದವರ ವಿಶಿಷ್ಟ ಪಿತ್ತಾಳೆ ಶಿಲ್ಪಗಳ ಸೊಬಗು, ಸೌಂದರ್ಯಗಳ ಬಗ್ಗೆ ಹೇಳದಲ್ಲದೆ ಅವುಗಳ ತಯಾರಿಕಾ ವಿಧಾನವನ್ನು ವಿವರಿಸುತ್ತಾರೆ (ಮ.ಮಡಿಲಲ್ಲಿ ೯೩). ಇವರ ಮುಗ್ಧ, ಜನಪದೀಯ, ಬೆಲೆ ಅರಿಯದ ಕಲಾಕೃತಿಗಳ ಬಗ್ಗೆ ಹೇಳುತ್ತಲೇ ಬಳಿಯ ಶಹರದ, ನಾಗರೀಕ ವಿದ್ಯಾವಂತರು ಈ ಗ್ರಾಮೀಣ ಕಲಾವಿದರನ್ನೂ ಸೇರಿದಂತೆ ಬೇರೆಯವರಿಂದ ಶಿಲ್ಪಕೃತಿ ಮಾಡಿಸಿ ತಮ್ಮ ಹೆಸರಿನಲ್ಲಿ ಬಿಕರಿಮಾಡಿ, ಬಹುಮಾನ ಪಡೆದು ಪ್ರಸಿದ್ಧರಾಗುತ್ತಿದ್ದ ಬಗ್ಗೆ ಕೂಡ ವ್ಯಥೆಯಿಂದ ಬರೆಯುತ್ತಾರೆ.

ಶಿಷ್ಟಪದ ಚಿತ್ರ, ಶಿಲ್ಪಕಲೆಯಲ್ಲಿ 'ಸರ್ಪಸಂಕುಲ'ದಲ್ಲಿ ನಾಗರ ಚಿತ್ರದ ಬಗ್ಗೆ ಅಧ್ಯಾಯವೊಂದಿದೆ. ಕರಾವಳಿಯ ಒಂದು ಆಚರಣೆ 'ಮಂಡ್ಲಸೇವೆ' ಯಲ್ಲಿ ಪಂಚವರ್ಣದಲ್ಲಿ ನಾಗನ ಚಿತ್ರ ರಚಿಸುವ ಬಗ್ಗೆ ಹಾಗೂ ಕಾವಿಕಲೆಯಲ್ಲಿ ಆದಿಶೇಷ, ಸಂಪ್ರದಾಯ ಕಲೆಯಲ್ಲಿ ಕಾಳಿಂಗ ಮರ್ದನ, ಅಜಂತ ಹಾಗೂ ಚಿಕಣಿ ಚಿತ್ರಗಳಲ್ಲಿ ಸರ್ಪ, ಹಾವಾಡಿಗ ಇತ್ಯಾದಿಗಳೂ ಜೈನ ಹಾಗೂ ವೈದಿಕ ಶಿಲ್ಪಗಳಲ್ಲಿ ಸರ್ಪದ, ವಿವಿಧ ರೂಪಗಳ ಬಗ್ಗೆ ವಿವರಿಸಿದ್ದಾರೆ.

ಇಡೀ 'ಪ್ರಾಣಿ ಪರಿಸರ' ಪುಸ್ತಕದಲ್ಲಿ ಚಾರಿತ್ರಿಕ ಕಾಲದ ಶಿಷ್ಟಪದ ಶಿಲ್ಪಗಳಲ್ಲಿ ಪ್ರಾಣಿಗಳ ಉದಾಹರಣೆಗಳನ್ನು ಸಾಕಷ್ಟು ನೀಡಿದ್ದಾರೆ. ಅಷ್ಟೇ ವಿಪುಲವಾಗಿ ಶಿಲ್ಪಗಳನ್ನು ರೇಖಾಚಿತ್ರವಾಗಿಸಿಕೊಟ್ಟಿದ್ದಾರೆ. ಶಿಲ್ಪಗಳಲ್ಲಿ ಕಂಡುಬರುವ ವಿವಿಧ ಪ್ರಾಣಿ ವರ್ಗಗಳನ್ನು ಆಯಾ ಸಂದರ್ಭಗಳಲ್ಲಿ ವಿವರಿಸಿ ಉಳಿದಂತೆ ಆಯಾ ನೈಜ ಪ್ರಾಣಿಗಳ ಗುಣ, ಸ್ವಭಾವ, ನಡವಳಿಕೆ ಇತ್ಯಾದಿ ಕುರಿತು ಹೇಳುತ್ತಾರೆ. ಒಟ್ಟಾರೆಯಾಗಿ ಎಲ್ಲ ಪ್ರಾಣಿಗಳನ್ನೂ ವಿಭಾಗಿಸಿಕೊಂಡಿದ್ದಾರೆ. ಜನಸಾಮಾನ್ಯರ ಕಣ್ಣಿಗೆ ಬೀಳದ ಕೆಳವರ್ಗದ ಪ್ರಾಣಿಗಳು ಅತಿ ಕಡಿಮೆ ಇದ್ದಂತೆ, ಮಾನವನ ದಿನಬಳಕೆಯ ಸಸ್ತನಿ ಪ್ರಾಣಿಗಳು ಹೇರಳವಾಗಿ ಮೂಡಿ ಬಂದಿವೆ. . . . ಬೇರೆ ಬೇರೆ ಪೌರಾಣಿಕ ಗ್ರಂಥಗಳಲ್ಲಿ ಬರುವ ಪಶು-ಪ್ರಾಣಿಗಳನ್ನು ವಿವಿಧ ಶಿಲ್ಪಿಗಳು ತಮ್ಮ ಕಲ್ಪನೆಯ ಮೇರೆಗೆ ಹೇಗೆ ಭಿನ್ನವಾಗಿ ಚಿತ್ರಿಸಲು ಯತ್ನಿಸಿದ್ದಾರೆಂಬುದನ್ನು ಮೂಡಿಸಲು ಯತ್ನಿಸಲಾಗಿದೆ. ಕೆಲವು ಶಿಲ್ಪಗಳು ಭವ್ಯವಾಗಿದ್ದು ಎಲ್ಲರ ದೃಷ್ಟಿಗಳನ್ನು ಆಕರ್ಷಿಸುವಂತಿದೆ. ಕೆಲವು ತೀರ ಕಿರಿಯದಿದ್ದು 'ಕ್ಯಾಮರ ಕಣ್ಣು' ಇದ್ದವರಿಗೆ ಮಾತ್ರ ಗೋಚರಿಸುವಂತಹವು. ಕೆಲವು ಕಲಾತ್ಮಕವಾಗಿ, ಪ್ರತಿಯೊಂದು ವಿವರಗಳನ್ನು ಹೊತ್ತು ನಿಂತರೆ, ಇನ್ನೂ ಕೆಲವು ಕೇವಲ ರೂಪರೇಷೆಗಳನ್ನು ಹೊತ್ತು ನಿಂತವು ಎಂದು ಹೇಳುತ್ತಾರೆ (ಪ್ರಾಣಿ ಪರಿಸರ, ಪು ೧೧೩)

ಒಟ್ಟಾರೆಯಾಗಿ ಉಳಿದ ಸಂಗತಿಗಳಂತೆ ಚಿತ್ರ, ಶಿಲ್ಪಗಳ ಬಗ್ಗೆಯೂ ಕಾಮತರು, ಓದು ಹಾಗೂ ಇತರೆ ಮಾಧ್ಯಮಗಳಿಂದ ವಿಷಯ ಸಂಗ್ರಹಿಸಿದರೂ ಸಾಕಷ್ಟು ಓಡಾಡಿ, ಕ್ಷೇತ್ರಕಾರ್ಯ (ಫೀಲ್ಡ್ ವರ್ಕ್) ಮಾಡಿ, ಕಣ್ಣಾರೆ ಕಂಡು, ಛಾಯಾಚಿತ್ರ ತೆಗೆದು ಅಭ್ಯಾಸ ಪೂರ್ವಕವಾಗಿಯೇ ಲೇಖನಗಳನ್ನು ಅಧ್ಯಾಯಗಳನ್ನು ಬರೆದಿದ್ದಾರೆ. ಆದರೆ ಇಡಿಯಾಗಿ ಒಬ್ಬ ಸಂಶೋಧಕನಂತೆ ಅಭ್ಯಸಿಸಿ ಒಂದು ನಿರ್ಣಯಕ್ಕೆ ಬರುವ ಇರಾದೆ ಅವರಿಗೆ ಇರಲಿಲ್ಲ. ಒಬ್ಬ ನಿಷ್ಠಾವಂತ ಪ್ರವಾಸಿಯ ನೋಟಕ್ಕೆ ದಕ್ಕಿದ ಮೊದಲ ವರದಿಯನ್ನು ಕೆಲವೊಮ್ಮೆ ಹೋಲುತ್ತವೆ. ಎಲ್ಲ ಬರಹಗಳನ್ನು ಒಮ್ಮೆ ಓದುವುದರಿಂದ ಖುಷಿ ನೀಡುತ್ತವೆ. ಕಣ್ಣಿಗೆ ಕಟ್ಟುವಂತೆ ವರ್ಣನೆಯಿದೆ, ನಮ್ಮ ಜ್ಞಾನ ವಿಶಾಲವಾಗುತ್ತದೆ. ಇವುಗಳ ಬೆನ್ನುಹತ್ತಿ ಇನ್ನೂ ಹೆಚ್ಚಿನ ಅಧ್ಯಯನ ಮಾಡುವವರಿಗೆ ವಿಪುಲವಾದ ಅವಕಾಶವಿದೆ.

❑

# ಬುಡಕಟ್ಟು ಸಂಸ್ಕೃತಿ ದರ್ಶನ

**ಡಾ॥ ಎಂ. ಬೈರೇಗೌಡ**

ಡಾ॥ ಕೃಷ್ಣಾನಂದ ಕಾಮತ್ ಹೆಸರೇ ಚೈತನ್ಯಶಾಲಿ ಅನುಭವ ನೀಡುತ್ತದೆ. ಬುಡಕಟ್ಟುಗಳ ಪರಿಚಯ ಮಾಡಿಕೊಳ್ಳುವ ನನ್ನಂಥ ವಿದ್ಯಾರ್ಥಿಗಳಿಗೆ ಅವರ ಕೃತಿಗಳು ಆಕರಗಳಾಗುತ್ತವೆ. ಕಾಮತರು ತಮ್ಮ ಹುಡುಕಾಟದ ಮೂಲಕ ಉತ್ತು-ಬಿತ್ತು ಬೆಳೆದ ಹುಲುಸಾದ ಫಸಲು ಉಣ್ಣುತ್ತಿರುವ ನಾವು ಧನ್ಯರು. ಬಹುಮುಖೀ ಚಿಂತಕರಾದ ಕೃಷ್ಣಾನಂದ ಕಾಮತರ ಕೃತಿಗಳಿಂದ ಅಪೂರ್ವ ಆನಂದಾನುಭೂತಿ ಪಡೆದವರಲ್ಲಿ ನಾನೂ ಒಬ್ಬ. ಪರಿಸರ, ವಿಜ್ಞಾನ, ಚಿತ್ರಕಲೆ, ಸಂಶೋಧನೆ, ಛಾಯಾಗ್ರಹಣ, ತಿರುಗಾಟದ ರಸಾನುಭವಗಳು-ಹೀಗೆ ವಿವಿಧ ವಿಷಯಗಳ ಹದಿನೈದಕ್ಕೂ ಹೆಚ್ಚು ಕೃತಿಗಳಲ್ಲಿ ಮುಖ್ಯವಾಗಿ **ಬಸ್ತರ ಪ್ರವಾಸ, ಮಧ್ಯಪ್ರದೇಶದ ಮಡಿಲಲ್ಲಿ** (೧೯೯೩), **ಅಕ್ಷತ** (೧೯೯೯) ಮತ್ತು **ಪ್ರವಾಸಿಯ ಪ್ರಬಂಧಗಳು** (೨೦೦೦) (ಬಹು ಹಿಂದೆ ಓದಿದ **ಬಸ್ತರ ಪ್ರವಾಸ** ಕೃತಿ ಲಭ್ಯವಿಲ್ಲದ್ದರಿಂದ ಆ ಬಗ್ಗೆ ಹೆಚ್ಚಿನ ಮಾಹಿತಿಗಳು ಇಲ್ಲಿಲ್ಲ. ಆದರೆ, ಅಲ್ಲಿನ ಕೆಲವು ಲೇಖನಗಳು **ಮಧ್ಯಪ್ರದೇಶದ ಮಡಿಲಲ್ಲಿ** ಕೃತಿಯಲ್ಲೂ ಇವೆ.) ಈ ನಾಲ್ಕು ಕೃತಿಗಳನ್ನು ಆಧಾರವಾಗಿಟ್ಟುಕೊಂಡು ಅಲ್ಲಿನ ಆದಿವಾಸಿ ಸಂಬಂಧಿ ಲೇಖನಗಳಲ್ಲಿ ನನಗರ್ಥವಾದಷ್ಟನ್ನು ಪ್ರಿಯ ಓದುಗರ ಮುಂದಿಡುತ್ತೇನೆ. ಈ ಬರಹ ಕಾಮತರ ಕೃತಿಗಳನ್ನು ಓದಲು ಪ್ರಚೋದನೆ ನೀಡಿದರೆ ನನ್ನ ಶ್ರಮ ಸಾರ್ಥಕ.

ಕರ್ನಾಟಕ-ಭಾರತ ಮಾತ್ರವಲ್ಲದೆ ಜಗತ್ತಿನ ಅನೇಕ ರಾಷ್ಟ್ರಗಳ ಜನಜೀವನದ ಚಿತ್ರಣಗಳನ್ನು ಕಾಮತರು ಕಟ್ಟಿಕೊಡುವ ರೀತಿ ಅವರ ಕೃತಿಗಳನ್ನು ಓದಿದವರಿಗೆ ಹೊಸ ಲೋಕದಲ್ಲಿ ವಿಹರಿಸಿದ ಅನುಭವ ನೀಡಬಲ್ಲುವು. ಆದಿವಾಸಿಗಳ ಬದುಕು-ಬವಣೆ, ಅವರ ರೀತಿ-ರಿವಾಜುಗಳು, ಸಂಪ್ರದಾಯಗಳು, ಆಯಾ ಸಂದರ್ಭದ ಅಪರೂಪದ ಛಾಯಾಚಿತ್ರಗಳ ಮೂಲಕ ಒಂದೇ ಉಸಿರಿಗೆ ಓದುವ ಓಘ ಕಲ್ಪಿಸುತ್ತದೆ. ಹೀಗೆ ಎಷ್ಟು ಜನ ಲೇಖಕರು. ಸಂಶೋಧಕರು ಸಫಲರಾಗಬಲ್ಲರು? ಎಂಬ ಪ್ರಶ್ನೆ ಎದುರಾದಾಗ ಡಾ. ಕೃಷ್ಣಾನಂದ ಕಾಮತರು ಸಫಲರಾಗಿದ್ದಾರೆಂದು ಒಪ್ಪಿಕೊಳ್ಳಬಹುದು.

**ಮಧ್ಯಪ್ರದೇಶದ ಮಡಿಲಲ್ಲಿ** ಪುಟ ತೆರೆದೊಡನೆ ಪ್ರಶ್ನಿಸುತ್ತಾರೆ: 'ಯಾವ ಊರು?' ಗಾಬರಿಯಾಗಬೇಡಿ! ಮೊದಲ ಲೇಖನದ ಶೀರ್ಷಿಕೆಯಿದು. ನಂತರ ಮೊದಲ ಸಾಲು "ಸರ್ಕಾರಿ ಸಂಬಳ ತಿನ್ನುತ್ತಿರುವ ಇವರೆಲ್ಲ ಎಲ್ಲಿ ಹಾಳಾಗಿ ಹೋದರೋ?" (ಪು. ೯) ಸರ್ಕಾರದ ಧೋರಣೆ, ಆಡಳಿತ ಸೂತ್ರ ಹಿಡಿದವರ ಮೇಲಿನ ಸಿಟ್ಟು-ಸೆಡವುಗಳು ಅನಾವರಣಗೊಳ್ಳುತ್ತವೆ. ಅಧಿಕಾರಶಾಹಿಯ ಅಸಮರ್ಪಕ ನಿರ್ವಹಣೆ ಪ್ರತಿಬಿಂಬಿತವಾಗುತ್ತದೆ. ಆದಿವಾಸಿಗಳ ವಾಸಸ್ಥಳಗಳಲ್ಲಿನ ಸಾರಿಗೆ ಇಲಾಖೆ ರೀತಿಯನ್ನು ಖಂಡಿಸುತ್ತಾರೆ. ರೈಲು ಪ್ರಯಾಣದಲ್ಲಿರುವ ಕಾಮತರು ಭಾರತದ ವಿವಿಧ ರಾಜ್ಯದ, ವಿವಿಧ ಭಾಗಗಳು, ವಿವಿಧ ಜನರ ವಿವಿಧ ಸ್ತರಗಳ ಜೀವನ ವಿಧಾನವನ್ನು ಕಟ್ಟಿಕೊಡುತ್ತಾರೆ. ಹಾಗೆ ಹೇಳ-ಹೇಳುತ್ತಲೇ ಮಧ್ಯಪ್ರದೇಶದ ಎತ್ತರದ ಗುಡ್ಡದ ತುತ್ತ ತುದಿಯಲ್ಲಿನ ಹತ್ತಾರು ಗುಡಿಸಲುಗಳ ಗೊಂಡರಪಳ್ಳಿಯಲ್ಲಿ ಇಳಿಸುತ್ತಾರೆ. ಸಹಪ್ರಯಾಣಿಕರ ನೋವಿಗೆ ಮರುಗುತ್ತಲೇ ಓದುಗನಲ್ಲಿ ಅನುಕಂಪೆಯ ಅಲೆ ಎಬ್ಬಿಸುತ್ತಾರೆ. ಕಾಮತರ ಲಹರಿಯಲ್ಲಿ ವಿಹರಿಸುತ್ತಾ ಮಧ್ಯಪ್ರದೇಶದ ಛಿಂದವಾಡ ತಲುಪುವಲ್ಲಿ ಸೂರ್ಯಾಸ್ತ. ಅಲ್ಲಿನ ಆದಿವಾಸಿ ಸಂಶೋಧನಾ ಕೇಂದ್ರದ ಹೆಸರನ್ನೇ ಕೇಳದ ಜನ ಪರಿಚಯದಲ್ಲಿ ಮುಗ್ಧತೆಯ ದರ್ಶನ. ಪುಟ ತಿರುವುತ್ತಿದ್ದರೆ ಇಡೀ ಛಿಂದವಾಡದ ವ್ಯಾಪಾರ, ವ್ಯವಹಾರ, ಪರಿಸರ-ಪರದಾಟಗಳ ಚಿತ್ರಣ. ಇದು ಕಾಮತರ ವೈಶಿಷ್ಟ್ಯವೂ ಹೌದು!

'ಕೀರ್ತಿಯ ಹಾದಿಯಲ್ಲಿ' ಎರಡನೇ ಲೇಖನ. ಸಂತೆ-ವ್ಯಾಪಾರಿ ಕೇಂದ್ರಗಳಲ್ಲಿ ಕಂಡುಬರುವ ಮೋಸ, ವಂಚನೆ, ದೊರೆವ ಪದಾರ್ಥ, ಖಾದ್ಯ, ಹಣ್ಣು-ಹಂಪಲು, ತರಕಾರಿಗಳನ್ನು ಹೆಸರಿಸುತ್ತಾ ಅವುಗಳ ಗುಣಮಟ್ಟವನ್ನೂ ತಿಳಿಸುತ್ತಾರೆ. ಮರವೈವಿಧ್ಯತೆಯನ್ನು ಮನದಟ್ಟು ಮಾಡಿಸುತ್ತಾರೆ. ಕುಶಲಿಯೊಬ್ಬನ ಕಲಾಕುಸುರಿಯಂತೆ ಕಾಮತರ ಲೇಖನಿ ಓಡುತ್ತ, ಹೊಸ ರಸಾನುಭೂತಿ ಉಂಟುಮಾಡುತ್ತದೆ. ಹೋಟೆಲ್ ಮಾಲೀಕನೊಬ್ಬನ ಕಲಾಪ್ರತಿಭೆಯ ಅನಾವರಣವಾಗುತ್ತದೆ. ಎಲ್ಲಿಯೂ ಗೊಂದಲವಿಲ್ಲದ ಸರಾಗ ಓದಿಗೆ ಕಾಮತರ ಬರಹ ದಾರಿಮಾಡಿಕೊಟ್ಟಾಗ ಅವರ ಹಾಸ್ಯಪ್ರವೃತ್ತಿ ದರ್ಶನವಾಗುತ್ತದೆ. ಹಾಸ್ಯದ ಮೂಲಕವೇ ರಸಿಕ ನೋಟ ಬಿಂಬಿಸುತ್ತಾರೆ. ಸಮರ್ಥ ಚಿತ್ರಕಾರನೊಬ್ಬ ಕಾಮತರಲ್ಲಿ ಉದ್ಭವಿಸುತ್ತಾನೆ. ಅಪರೂಪದ ಛಾಯಾಚಿತ್ರಕಾರನಾಗಿ ಗೋಚರಿಸುತ್ತಾನೆ. (ಕೀರ್ತಿಯ ಹಾದಿಯಲ್ಲಿ) ಡೋಂಗೀ ಮಾತುಗಾರರಿಗೆ ವಾಕ್ಚಾತುರ್ಯದಿಂದ ಎಚ್ಚರಗೊಳ್ಳುವಂತೆ ಆಗುತ್ತದೆ. ಉದಾ : ಕತ್ತಲೆ ಕೋಣೆಯಲ್ಲಿ ತಾವು ತೆಗೆದ ಛಾಯಾಚಿತ್ರದ ಫಿಲ್ಮ್ ತೊಳೆಯಲುದ್ಯುಕ್ತರಾಗುತ್ತಾರೆ. ತೊಳೆಯುವ ಅವಧಿ ಮುಗಿದಿದ್ದರಿಂದ ಎಸೆಟಿಕ್

ಆಮ್ಲವನ್ನು ಕೊಡಲು ಒಳಬರುತ್ತಿದ್ದ ಛಾಯಿಸಾಬ, ಆಮ್ಲ ಹಾಕಿದರೆ ಫಿಲ್ಮು ಹೋಗುವುದಿಲ್ಲವೇ? ಎಂದಾಗ ಇವನೆಂಥ ಛಾಯಾಗ್ರಾಹಕ! ಅನಿಸದೇ ಹೋಗಲಿಲ್ಲ (ಪು. ೨೩) ಎಂಬಲ್ಲಿ ಗುರುತಿಸಬಹುದು.

ಹೀಗೆ ಛಿಂದವಾಡದ ಹೋಟೆಲು, ಜನರನ್ನು ಪರಿಚಯಿಸುತ್ತಾ ಆದಿವಾಸಿ ಸಂಶೋಧನಾ ಕೇಂದ್ರಕ್ಕೆ ಕರೆದೊಯ್ಯುತ್ತಾರೆ. ಪ್ರವೇಶದ್ವಾರದಿಂದಲೇ ಅಪರೂಪವೂ, ಅಪೂರ್ವವೂ ಆದ ಕೇಂದ್ರದ ಬಗೆಗೆ ತಿಳಿಯದ ಜನರ ಅಲ್ಪಮತಿಯನ್ನು ತಿಳಿಸಿಕೊಡುತ್ತಾರೆ. ಐತಿಹಾಸಿಕ ಸ್ಮಾರಕಗಳೆನಿಸಿದ ಭಿಲ್ಲರ ವೀರಗಲ್ಲುಗಳ ಬಗೆಗೆ ಬರೆಯುತ್ತಾ, ಕರಾವಳಿ ಹಾಲಕ್ಕಿ ಒಕ್ಕಲಿಗರು ಬಳಸುವ ಮರಗಾಲುಗಳ ಪತ್ತೆಹಚ್ಚುತ್ತಾರೆ. ಕೊರ್ಕು, ಬೈಗಾಗಳ ಮರಗೆತ್ತನೆ ಕೌಶಲ, ವಿವಿಧ ಆದಿವಾಸಿಗಳ ಛಾಯಾಚಿತ್ರಗಳ ಸಮೂಹ ಆಕರ್ಷಣೆ, ಅದೇ ಸಮಯಕ್ಕೆ ಒಳಬಂದ ಹಳ್ಳಿಗರ ಗುಂಪಿನಲ್ಲಿ ಲೇಖಕ ಒಬ್ಬರಾಗುತ್ತಾರೆ. (ಚಕ್ಕರ್ ರಸ್ತೆ, ಪು. ೨೫.)

ಚಕ್ಕರ್ ರಸ್ತೆಯ ಹಳೆಬಂಗ್ಲೆಯ ಒಂದೆಡೆಯ ಆದಿವಾಸಿ ವಸ್ತು ಸಂಗ್ರಹಾಲಯದ ಬಗೆಗೆ ಬರೆದಿರುವ ಭಾಗ ಓದುವಾಗ ಅಲ್ಲಿಲ್ಲಿ ಓಡಿಯಾಡಿದ ಶಬ್ದಚಿತ್ರ ಕಟ್ಟಿಕೊಡುತ್ತ ಲೇಖಕನ ಸೃಜನಶೀಲತೆ ಮೆರೆಯುತ್ತಾರೆ. ಸಂಗ್ರಹಾಲಯದಲ್ಲಿ ಕಂಡ ವಸ್ತು ವೈವಿಧ್ಯ, ಅದು ಉಂಟುಮಾಡಿದ ಪ್ರಭಾವ; ಒಂದೆಡೆ ಆದಿವಾಸಿಗಳ ವಸ್ತು ಸಂಗ್ರಹಾಲಯವಿತ್ತು. ಅದನ್ನು ಕಂಡಾಗ ಹೊಸ ಜಗತ್ತು ಕಂಡ ಕೊಲಂಬಸನ ಅನುಭವವಾಯ್ತು. ಅವರ ಬಾಚಣಿಗೆಗಳು, ತಂಬಾಕು ಡಬ್ಬಿ, ಕವಡೆಸರ, ಮೂಗುತಿಗಳು, ಬಳೆಗಳು, ಕಾಲುಂಗುರಗಳು, ಗೆಜ್ಜೆಗಳು, ಕಾಲುಸರಗಳು, ಬಿಲ್ಲು-ಬಾಣ... ಒಂದೇ ಎರಡೇ! (ಪುಟ. ೨೫) -ಹೀಗೆ ಆದಿವಾಸಿ ವಸ್ತುಸಂಗ್ರಹಾಲಯವನ್ನು ರೂಪಕಗಳ ಮೂಲಕ ಪರಿಚಯಿಸುತ್ತಾರೆ. ಸತ್ಯಘಟನೆಯ ಆಧಾರದಿಂದ ಬರಹಗಾರರ ಅಸತ್ಯ, ಅತಾರ್ಕಿಕ, ಅಪಮೌಲ್ಯದ ಬರಹಗಳನ್ನು ಟೀಕಿಸುತ್ತಾರೆ (ಪು. ೨೬). ಈ ಅಧ್ಯಯನಕ್ಕೆ ಸಹಾಯಕ ಮನಃಪರಿವರ್ತನೆ ಪರಿಕರವಾಗಿ, ಅಧ್ಯಯನಕಾರರಿಗೆ ಇರಬೇಕಾದ ಸೌಜನ್ಯತೆ, ಸತ್ಯಪರತೆ, ವಾಸ್ತವಗಳ ಅರಿವುಗಳನ್ನು ತಿಳಿಸಿಕೊಡುತ್ತಾರೆ. ಲೇಖಕ ಕ್ಷೇತ್ರಕಾರ್ಯಾರ್ಥಿಯ ನಡವಳಿಕೆಗಳನ್ನು ಸರಳ ನಿರೂಪಣೆ ಮೂಲಕ ಮನದಟ್ಟು ಮಾಡಿಸುತ್ತಾರೆ. ಲೇಖಕ ನಿಷ್ಠುರಿಯೂ ಸತ್ಯದ ಪ್ರತಿಪಾದಕನೂ ಆಗಿರಬೇಕೆಂಬುದನ್ನು ನವಿರು ಮಾತುಗಳಲ್ಲೇ ಹೇಳುತ್ತಾರೆ (ಪು ೨೭).

ಸಂಭಾಷಣೆ ಮೂಲಕ ವಿವರ ಕಟ್ಟಿಕೊಡುವ ಮಧ್ಯಪ್ರದೇಶದ ಆದಿವಾಸಿ ಸಂತತಿಯನ್ನು ಪರಿಚಯಿಸುವ ಕಾಮತರ ಕುಶಲತೆಗೆ ಒಂದು ಉದಾ: “ಸದಾ ಚಟುವಟಿಕೆಯಿಂದಿರಬೇಕಾದ ಈ ಕೇಂದ್ರದಲ್ಲಿ ಸ್ಮಶಾನ ಶಾಂತಿ ಏಕೆ ಆವರಿಸಿದೆ ಎಂದು ಕೇಳಬಹುದೇ?” ಎಂದ ಮಾತಿಗೆ ಕುಸುಮಾಕರರು “ಛಿಂದವಾಡ ಪರಿಸರದಲ್ಲಿ ಆದಿವಾಸಿಗಳ ಸಂಖ್ಯೆ ಹೇರಳವಾಗಿದೆ. ಅವರ ಜೀವನ, ಆರ್ಥಿಕ ಸ್ಥಿತಿಗತಿ, ಪ್ರಗತಿಯ ರೀತಿ, ಶಿಕ್ಷಣ ಮೊದಲಾದ ಅಂಶಗಳನ್ನು ಅಭ್ಯಸಿಸುವ ಸಲುವಾಗಿ ಏಪ್ರಿಲ್ ೧೯೫೪ರಲ್ಲಿ ಕೇಂದ್ರದ ಸ್ಥಾಪನೆ, ನಂತರ ಕಾರ್ಯಪರಿಮಿತಿಯಿಂದ ಆದಿವಾಸಿ ಚಟುವಟಿಕೆಗಳ ಕೇಂದ್ರವಾಗಿ ಬೆಳೆಯಿತು...” (ಪು. ೨೬) ಹೀಗೆ ಸೂತ್ರಧಾರನಾಗಿ ಹೇಳಬೇಕಾದಲ್ಲಿಗೆ ವಿಷಯವನ್ನು ತಂದು ನಿಲ್ಲಿಸಿ, ಇನ್ನೊಂದು ಅಲ್ಲಿಯದೇ ಪಾತ್ರದ ಮೂಲಕ ಹೇಳಿಸುತ್ತಾ ಒಳ್ಳೆ ನಾಟಕಕಾರರಾಗಿ ಕಾಮತರು ಕಾಣಿಸಿಕೊಳ್ಳುತ್ತಾರೆ. ಹಾಗೆಯೇ ಈ ಸಮಾಜದಲ್ಲಿನ ಕೊಳಕು ರಾಜಕಾರಣದ ಬಗ್ಗೆ ಪಟ್ಟಭದ್ರರ ಬಾಲಬಡುಕತನ, ತಮ್ಮ ಬೇಳೆ ಬೇಯಿಸಿಕೊಳ್ಳುವ ಅಧಿಕಾರವರ್ಗದ ಬಗೆಗೆ ವಿವರಿಸುತ್ತಾ ವ್ಯವಸ್ಥೆಯ ಕೆಟ್ಟ ಬೆಳವಣಿಗೆ ಮತ್ತು ಸರಿಪಡಿಸಲಾಗದ ಅಸಹಾಯಕ ಸ್ಥಿತಿಗಳ ನೈಜ ಚಿತ್ರಣ ಕಟ್ಟಿಕೊಡುತ್ತಾರೆ. ಇಲ್ಲೆಲ್ಲ ಕಾಮತರ ಚಿಕಿತ್ಸಕ ಮನಸ್ಸು ತೆರೆದುಕೊಳ್ಳುತ್ತದೆ. ಕೀರ್ತಿಶನಿಯ ವಿಕಟಾಟ್ಟಹಾಸವನ್ನು ನಾರದ ಮತ್ತು ರುದ್ರಕುಮಾರರ ಪಾತ್ರಗಳ ಮೂಲಕ ಅದರ ದುಷ್ಪರಿಣಾಮಗಳನ್ನು ಕುಸುಮಾಕರರ ಬಾಯಲ್ಲಿ ಹೇಳಿಸುತ್ತಾರೆ (ಪು. ೨೮.). ಸರ್ಕಾರಿ ವ್ಯವಸ್ಥೆಯೊಂದರ ದಿವ್ಯ ನಿರ್ಲಕ್ಷ್ಯವನ್ನು ಚಕ್ಕರ್ ರಸ್ತೆಯ ಛಿಂದವಾಡ ಆದಿವಾಸಿ ಸಂಶೋಧನಾ ಕೇಂದ್ರದ ಅವ್ಯವಸ್ಥೆ ಮೂಲಕ ಪರಿಚಯಿಸುತ್ತಾರೆ. ಸಂಸ್ಕೃತಿ, ಸಮಾಜ, ಆದಿವಾಸಿ ಸಮುದಾಯ-ಇನ್ನಾವುದೇ ಶಿಸ್ತಿನ ಅಧ್ಯಯನದ ಕ್ಷೇತ್ರಕಾರ್ಯಾರ್ಥಿ ಎಷ್ಟು ಕಡಿಮೆ ಲಗ್ಗೇಜು (ಅಧ್ಯಯನಕ್ಕೆ ಬೇಕಾದ ಪರಿಕರಗಳನ್ನು ಹೊರತುಪಡಿಸಿ) ತೆಗೆದುಕೊಂಡು ಹೋದರೆ ಒಳಿತೆಂದು ಆ ಮೂಲಕ ಅಧ್ಯಯನಕಾರನ ಸರಳತೆಯ ಆವಶ್ಯಕತೆಯನ್ನು ಒತ್ತಿಹೇಳುತ್ತಾರೆ. ಕ್ಷೇತ್ರಕಾರ್ಯ ಕಾಲದ ತೊಂದರೆಗಳನ್ನು ಸಹಿಸಿಕೊಳ್ಳುವ ಮನಃಸ್ಥಿತಿ ಎಷ್ಟು ಮುಖ್ಯ ಎಂಬುದನ್ನು ಕಾಮತರು ತಮ್ಮ ಅನುಭವಗಳ ಮೂಲಕ ವಿಷದೀಕರಿಸುತ್ತಾರೆ. ಆಕಸ್ಮಿಕವಾಗಿ ಸಿಗುವ ಸವಲತ್ತುಗಳ ಬಗೆಗೆ ಅಷ್ಟೇ ನಿರ್ಲಿಪ್ತವಾಗಿ ಹೇಳುತ್ತಾರೆ. ಸವಲತ್ತು ಒದಗಿಸಿದವರು ತಾವಿರಿಸಿಕೊಳ್ಳುವ ಸದು(ದು)ದ್ದೇಶದ ಸತ್ಯಾಸತ್ಯತೆಯನ್ನು ನಿರ್ದಾಕ್ಷಿಣ್ಯವಾಗಿ ಟೀಕಿಸುತ್ತಾರೆ. ಅಪರೂಪದ, ಅಸಾಧಾರಣ ವ್ಯಕ್ತಿಗಳ ನಿರ್ಲಕ್ಷ್ಯಕ್ಕೆ ಕಾಮತರು ಮರುಗುತ್ತಾರೆ. ಕೃಷ್ಣಾನಂದ ಕಾಮತರ ಕೃತಿ ಓದುವುದೆಂದರೆ ಅದೊಂದು ಸರಸ ಸಂಭಾಷಣೆಯೇ ಸರಿ. ನಿಜವಾಗಿ ನಾವು ಕಾಮತರೊಡನೆ ಹರಟುತ್ತೇವೆ. ಅನೇಕ ಹೊಳಹುಗಳಿಗೆ ದಾರಿ ತೆರೆದುಕೊಳ್ಳುತ್ತದೆ. ಕೃತಿಚೌರ್ಯದ ಇಣುಕುನೋಟ 'ಪವಾಡ' ಲೇಖನದಲ್ಲಿದೆ (ಪು. ೩೩). ಅಂಥವರ ಮೇಲೆ ಕಿಡಿ ಕಾರುತ್ತಾರೆ : ಧನ ಸಂಪಾದನೆಗೇ ಹೋಟೆಲ್ ತೆರೆದವರು ಗಿರಾಕಿಗಳನ್ನು ಸುಲಿದರೆ ಕ್ಷಮಿಸಬಹುದು. ಆದರೆ ಆದಿವಾಸಿಗಳ ಹಿತರಕ್ಷಣೆ ಹೆಸರಿನಲ್ಲಿ ನಡೆವ ಸಂಶೋಧನಾ ಕೇಂದ್ರದ ಮುಖ್ಯಸ್ಥರಾಗಿ ದೂರದ ಊರಿನಿಂದ ಅಧ್ಯಯನಾಕಾಂಕ್ಷೆಯಿಂದ ಬಂದವನನ್ನು ಆಶ್ರಯ ಕೊಡುವ ನೆಪದಲ್ಲಿ ಬಗೆ-ಬಗೆಯಾಗಿ ಸುಲಿದರೆ ಪರಿಹಾರವೇನು? ವಿದ್ಯಾವಂತರೆ ಹೀಗಿದ್ದರೆ, ವ್ಯಾಪಾರಿಗಳು, ಏಜೆಂಟರು, ಆದಿವಾಸಿಗಳನ್ನು

ಶೋಷಿಸುವುದರಲ್ಲಿ ಅಚ್ಚರಿಯಿಲ್ಲ (ಪು. ೩೩). ಎನ್ನುತ್ತ ಆದಿವಾಸಿ ಅಭಿವೃದ್ಧಿಯಲ್ಲಿನ ತೊಡಕುಗಳು, ಸಮಸ್ಯೆಗಳು, ಅಧಿಕಾರಿಗಳ ಆಷಾಢಭೂತಿತನ, ಸ್ವಾರ್ಥ, ನಿರ್ಲಜ್ಜೆಗಳನ್ನು ದರ್ಶಿಸುತ್ತಾರೆ.

ಛಿಂದವಾಡದ ಹತ್ತಿರವೇ ಇದ್ದ ಗೊಂಡರಪಳ್ಳಿ ಜಾಮುನಜರಿಗೆ ಭೇಟಿ ನೀಡಿದ ಕಾಮತರ ಅನುಭವಗಳು ಅವರ್ಣನೀಯ ಆನಂದ ನೀಡುತ್ತವೆ. "ಹಳ್ಳಿ ಪ್ರವೇಶಿಸುತ್ತಿದ್ದಂತೆ ಗೊಂಡನೊಬ್ಬ ಜೈರಾಮಜೀಕಿ ಎಂದು, ಇತ್ತ ಪಾದಗಳನ್ನು ಬೆಳೆಸುವ ಕಾರಣವೇನೆಂದು ಅರಿಯಬಹುದೇ?" ಎಂದು ಕೇಳಿದಾಗ "ನಿಮ್ಮನ್ನು ಹಳ್ಳಿಯನ್ನು ನೋಡಬಯಸಿ ಬಂದಿದ್ದೇನೆ" ಎಂದಾಗ "ಇಲ್ಲಿ ನೋಡುವುದೇನಿದೆ" ಎಂದು ಪ್ರಶ್ನಾರ್ಥಕವಾಗಿ ನೋಡುವ ಮೂಲಕ ಅವರ ಅಮಾಯಕ ಬದುಕಿನ ಪರಿಚಯವಾಗುತ್ತೆ (ಪು. ೩೪). ಕಾಮತರ ಸಂಶೋಧನಾ ಸೂಕ್ಷ್ಮಮತಿಗೊಂದು ಉದಾ: "ಹೊಲಗಳನ್ನು ದಾಟಿ, ಅಂಕುಡೊಂಕು ರಸ್ತೆ ತುಳಿದ ನಂತರ ದೂರದಲ್ಲಿ ಸಾಲಾಗಿ ನಿಂತ ಮನೆಗಳ ಹಳ್ಳಿಯನ್ನು ಪ್ರವೇಶಿಸುತ್ತಿದ್ದಂತೆ ಒಂದೆಡೆ ಮಾಟ-ಮಂತ್ರದ ಕುರುಹುಗಳು ಗೋಚರಿಸಿದವು. ಎರಡು ಸಾಲುಗಳಲ್ಲಿ ಸುಮಾರು ಒಂದಂಗುಲ ವ್ಯಾಸದ ಅರೆವರ್ತುಲಗಳನ್ನು ಬೂದಿಯಿಂದ ನಿರ್ಮಿಸಿ, ಮಧ್ಯದಲ್ಲಿ ಸಗಣಿ ಉಂಡೆಯಲ್ಲಿ ಕುಂಬಳ ಹೂಗಳನ್ನು ನೆಟ್ಟಿದ್ದರು. ಸುತ್ತಲೂ ಅಕ್ಕಿಕಾಳು, ಅರಿಷಿಣ-ಕುಂಕುಮಗಳನ್ನು ಹರವಲು ಮರೆತಿರಲಿಲ್ಲ. ಸ್ವಲ್ಪ ದೂರದಲ್ಲಿ ಬಲಿಕೊಟ್ಟ ಎಮ್ಮೆಯನ್ನು ತಿನ್ನುತ್ತಿದ್ದ ನಾಯಿಗಳು..." (ಪು. ೩೫) -ಹೀಗೆ ಆದಿವಾಸಿ ಆಚರಣೆಯೊಂದನ್ನು ಅತಿಸೂಕ್ಷ್ಮವಾಗಿ ಗಮನಿಸುವ ಮೂಲಕ ಕ್ಷೇತ್ರಕಾರ್ಯಾರ್ಥಿಗಳಿಗೆ ಮಾರ್ಗದರ್ಶಕರಾಗುತ್ತಾರೆ. ತಮ್ಮ ಅನುಭವಗಳ ಮೂಲಕ ಜನರ ಬದುಕಿನ ರೀತಿ-ನೀತಿ, ಬಳಸುವ ಪಾತ್ರೆ, ಆಹಾರ ಪದಾರ್ಥ, ವೇಷ-ಭೂಷಣಗಳನ್ನು ವಿವರಿಸುವ ಕೌಶಲವಿದೆ. ಗಾಂಗುದೇವರನ್ನು ಪರಿಚಯಿಸುವ ಪರಿ ಮನೋಹರ (ಪು. ೭೩).

ವಾಸಕ್ಕೆ ಮನೆ ಹುಡುಕಿದ ಪ್ರಕರಣ ಹೇಳುತ್ತ, ಜನರ ದೊಡ್ಡತನ, ಸಣ್ಣತನಗಳನ್ನು ನವಿರಾಗಿ ತಿಳಿಸುತ್ತಾರೆ. ಸಂತೆ ವ್ಯವಹಾರ ನಿರೂಪಿಸುತ್ತಾ ಸೊಪ್ಪು, ಹಣ್ಣು ತರಕಾರಿಗಳನ್ನು 'ವಿಂಗಡದ ಗುಡಿ' ಲೇಖನ ಪ್ರತಿಪಾದಿಸುತ್ತದೆ. ಮುಂದಿನ ಲೇಖನ ಆದಿವಾಸಿಗಳ ಬದುಕಿನ ಮೇಲೆ ನಾಗರಿಕತೆ ಉಂಟುಮಾಡಿದ ತಲ್ಲಣ-ಪಲ್ಲಟ, ಕಾಡಿನ ನಾಶ, ಪರಿಸರದ ಮೇಲೆ ಅವ್ಯಾಹತ ಮಾನವ ಧಾಳಿ, ಕಿರಿದಾದ ಕಾಲುದಾರಿಗಳಲ್ಲಿ ಕಲ್ಲಿದ್ದಲು ತುಂಬಿದ ಟ್ರಕ್ಕುಗಳು, ಅಧಿಕಾರಗಳ ಕಾರುಗಳು, ಶಾಲಾ ವಿದ್ಯಾರ್ಥಿಗಳನ್ನು ತುಂಬಿಕೊಂಡ ಬಸ್ಸುಗಳ ಓಡಾಟ, ಅದರಿಂದ ಉಂಟಾದ ಶಬ್ದಮಾಲಿನ್ಯ, ವಾಯುಮಾಲಿನ್ಯಗಳ ದುಷ್ಪರಿಣಾಮಗಳನ್ನು ತಿಳಿಯಪಡಿಸುತ್ತಾರೆ. ತಲ-ತಲಾಂತರದಿಂದ ನೆಲೆನಿಂತ ಮುಂಡ, ಕೋಲ, ಕೊರ್ಕು ಆದಿವಾಸಿಗಳು ತಮ್ಮ ನೆಲೆ ಕಳೆದುಕೊಂಡು ತಮ್ಮದೇ ಭೂಮಿಯಲ್ಲಿ ಕೂಲಿಗಳಾಗಿ ಮಾಲೀಕನ ದೌರ್ಜನ್ಯಕ್ಕೆ ತುತ್ತಾದ ಕರುಣಾಜನಕ ವೃತ್ತಾಂತ, ಜಟಿಲತೆ ತಿಳಿಸುತ್ತ, ಪರಿಣಾಮಗಳ ಬಗೆಗೆ ಸುಳಿವು ಕೊಡುತ್ತಾರೆ (ಜಾಂದಾ ಮೇಟಾ, ಪು.೪೪). ಯಂತ್ರನಾಗರಿಕತೆ ಸ್ವಚ್ಛಂದ ಸಂಸ್ಕೃತಿಯ ಮೇಲುಂಟಾದ ಪರಿಣಾಮಗಳನ್ನು.ಎಳೆ ಎಳೆಯಾಗಿ ಓದುಗರ ಗಮನಕ್ಕೆ ತರುತ್ತಾರೆ (ಪು. ೪೫-೪೬). ಒಂದೆರಡು ಸಾಲಿನ ಉದಾ: "ಅಂಗಡಿಕಾರ ತಾನು ಕಂಡುಕೊಂಡ ವಿಷಯ ಹೇಳಿ ಮುಗಿಸುತ್ತಿದ್ದಂತೆ ತಲೆಗೆ ಉಕ್ಕಿನ ಹೆಲ್ಮೆಟ್, ಮುಖಕ್ಕೆ ಕಲ್ಲಿದ್ದಲಿನ ಧೂಳು, ಕೊಳೆ ಬಟ್ಟೆ-ಬರೆ, ಕೈಯಲ್ಲಿ ಪಿಕಾಸಿ ಹಿಡಿದ ದೃಢಕಾಯನೊಬ್ಬ ಚಹಾಪಾನಕ್ಕಾಗಿ ಬಂದ. "ಬಾಬೂಜಿ ಇವನು ಒಬ್ಬ ಗೊಂಡ ಆದಿವಾಸಿ-ಕೆಲಸಗಾರ ಎಂದು ಅಂಗಡಿಕಾರ ಪರಿಚಯಿಸಿದ. ಕೈಯಲ್ಲಿ ಬಿಲ್ಲು-ಬಾಣ, ಕೊಡಲಿಗಳನ್ನು ಹಿಡಿದು ಸ್ವಚ್ಛಂದವಾಗಿ ಕಾಡಿನಲ್ಲಿ ಓಡಾಡಿಕೊಂಡಿದ್ದ ಅವನ ಹಿಂದಿನ ಜೀವನ ಕಲ್ಪಿಸಿಕೊಂಡು ಮರುಗುವಂತಾಯಿತು" (ಪುಟ. ೪೬). ಈ ನಾಲ್ಕು ಸಾಲುಗಳು ಆದಿವಾಸಿ ಸಮುದಾಯದ ಮೇಲೆ ಯಂತ್ರನಾಗರಿಕತೆಯ ಕರಿನೆರಳಿನ ಅಗಾಧತೆಯನ್ನು ತಿಳಿಸುತ್ತದಲ್ಲವೇ. ಅಮೆರಿಕಾದ ರೆಡ್ ಇಂಡಿಯನ್ನರ ಸ್ಥಿತಿ ಮತ್ತು ಇಲ್ಲಿನ ಗೊಂಡರ ಸ್ಥಿತಿಗೆ ಹೋಲಿಸಿ ಅಲ್ಲಿನ ಪ್ರಜಾಪ್ರಭುತ್ವ ಮತ್ತು ಭಾರತದ ಪ್ರಜಾಪ್ರಭುತ್ವಕ್ಕೂ ಇರುವ ಅಂತರವನ್ನು ತಿಳಿಸುತ್ತಾರೆ.

ದೇವರು-ದೈವಗಳ ಹೆಸರಲ್ಲಿನ ಅನಾಚಾರಗಳನ್ನು ವಿವರಿಸುತ್ತ ಅಲ್ಲಿನ ಭೀಭತ್ಸ್ಯವನ್ನು ತಿಳಿಸಿಬಿಡುತ್ತಾರೆ. ಕೂಲಿಗಳ ಮೇಲೆ ಭಕ್ತರು ನಡೆಸುವ ದೌರ್ಜನ್ಯದ ಶೋಷ-ಭೀಷಣ ದೃಶ್ಯಗಳನ್ನು ಕಟ್ಟಿ ಕೊಡುತ್ತಾರೆ. "ದೇವರೆಂದರೆ ಮಲಮೂತ್ರಗಳ-ಕಲ್ಲು ಮಣ್ಣುಗಳ ದಾರಿಯಲ್ಲಿ ಸಾಗಿ ನಂತರ ಕಾಣಸಿಗುವವನು. ಸ್ವರ್ಗ-ನರಕಗಳ ಕಲ್ಪನೆಯೇ ಇದಿರಬೇಕು. ಮೊದಲು ದುರ್ನಾತ ಕುಡಿದು, ನಂತರ ಗಂಧದಕಡ್ಡಿ, ಕರ್ಪೂರ, ಧೂಪದ ಹೊಗೆಯ ಸುಗಂಧ ಸವಿಯುವುದೇ ನರಕ-ಸ್ವರ್ಗಗಳ ಕಲ್ಪನೆಯಂತೆ ಕಾಣುತ್ತದೆ. ದೇವಸ್ಥಾನದ (ನಾಗದೇವತೆ) ಪೂಜೆ, ಜಾತ್ರೆಗಳನ್ನು ಪರಿಚಯಿಸುತ್ತಾ ಗತಕಾಲದ ಮಾನವ ನೆಲೆಗೆ ಗುಹಾಂತರ ಮನೆಗಳಿಗೆ ನಮ್ಮನ್ನು ಕರೆದುಕೊಂಡು ಹೋಗುತ್ತಾರೆ. ಅನನ್ಯವಾದ, ರಕ್ಷಿಸಬೇಕಾದ ಐತಿಹಾಸಿಕ ತಾಣಗಳ ದುಃಸ್ಥಿತಿಯನ್ನು ಕಂಡು ಮಮ್ಮಲ ಮರುಗಿ, ಮತ್ತೆಲ್ಲಿಯಾದರು ಕಂಡರೆ ಅವುಗಳನ್ನು ರಕ್ಷಿಸಬೇಕೆಂಬ ಹೊಣೆಗಾರಿಕೆಯನ್ನು ಕಾಮತರು ಸೃಷ್ಟಿಸಿಬಿಡುತ್ತಾರೆ. ಅವರ ಬರವಣಿಗೆಯ ಪ್ರಖರತೆ ಅಂತಹದ್ದು (ನಾಗದ್ವಾರ. ಪು.

೫೭-೫೮). ಆದಿವಾಸಿಗಳ ಬಗ್ಗಿನ ಆಸಕ್ತಿಗಿಂತ ಕಾಮತರಿಗೆ ಐತಿಹಾಸಿಕತೆಯ ಕಡೆಗೇ ಹೆಚ್ಚು ಒಲವು ಎನಿಸುತ್ತದೆ. 'ರಾಣಿರೂಪಮತಿಯ ಮಾಂಡು' ಲೇಖನ ಸಂಪೂರ್ಣ ಐತಿಹಾಸಿಕ ನೆಲೆಯಲ್ಲಿ ಬೆಳೆವುದನ್ನು ಉದಾಹರಿಸಬಹುದು.

'ಜಟಾಶಂಕರ' ಲೇಖನದಲ್ಲಿ ಆದಿವಾಸಿಗಳ ನಿರ್ಲಿಪ್ತ ಮನಸ್ಸಿನ ತುಂಬು ಜೀವನದ ಸಮಗ್ರ ಚಿತ್ರಣವಿದೆ. ಮಾವಾಶೀಯರ ಬದುಕಿದೆ. ಹೊಲಸು ನಾರುವ ಪಚಮಡಿಯಿಂದ ಕೇವಲ ಒಂದೂವರೆ ಮೈಲು ದೂರದಲ್ಲಿರುವುದೇ ಜಟಾಶಂಕರ ರಮ್ಯ ನಿಸರ್ಗತಾಣ, ಸ್ವರ್ಗದ ಒಂದು ಚೂರು ಎಂಬ ಕಲ್ಪನೆಯನ್ನು ಲೇಖನ ಓದುತ್ತಿದ್ದಂತೆ ಮೂಡಿಸುತ್ತಾರೆ. ಮಾವಾಶೀಯರ ಮನದಾಳದ ಮಾತುಗಳು ಎಲ್ಲಾ ಸವಲತ್ತು ಪಡೆದು ಮತ್ತಷ್ಟು ಬೇಕೆನಿಸುವ ನಮಗೆ ಲಜ್ಜೆ ಉಂಟುಮಾಡುತ್ತದೆ. ಕಾಮತರು ಮಾವಾಶೀಯರ ವಾಸಸ್ಥಳ ಪರಿಸರವನ್ನು ನೋಡಿ "ದೇವಲೋಕದ ಸುಧೆಯನೊಲ್ಲೆನು... ಬರಿಯ ನೆಲವಿರಲೆಮಗೆ ಮಲಗಲು...." ಪದ್ಯದ ಸಾಲುಗಳನ್ನು ಮೆಲುಕು ಹಾಕುತ್ತಾರೆ. ಮಾತನಾಡಲೆಂದೇ ಕೇಳಿದ ಒಂದು ಪ್ರಶ್ನೆ, ಅದಕ್ಕೆ ಸಿಕ್ಕ ಉತ್ತರ, ಈ ದೃಶ್ಯ ಸಾಲುಗಳಿಗೆ ಅರ್ಥ ತಂದುಕೊಡುತ್ತದೆ.

"ಮಳೆ ನೀರಿನಿಂದ ನಿಮ್ಮ ವಾಸಕ್ಕೆ ಆತಂಕ ಉಂಟಾಗುವುದಿಲ್ಲವೆ?" ಇದು ಕಾಮತರ ಪ್ರಶ್ನೆ! "ನಮಗಾದರೂ ತಲೆಯ ಮೇಲೊಂದು ಸೂರಿದೆ, ಕೋತಿಗೆ ಅದೂ ಇಲ್ಲವಲ್ಲ (ಪು. ೬೫)" ಇದು ಆತನ ಉತ್ತರ; ನೂರು ಮಾತು ಬೇಕೆ? ನಾಗರಿಕನಿಗೆ ಚಾಟಿಯಿಂದ ಬಡಿಯಬೇಕೆ. ನಾಗರಿಕನ ಅಸ್ತಿತ್ವವನ್ನು ಅಲುಗಾಡಿಸುವ ಶಕ್ತಿ ಈ ಮಾತಿಗಿಲ್ಲವೆ? ಆದಿವಾಸಿ ಜನಪ್ರತಿನಿಧಿಯಾದ ಮಾವಾಶಿ ಯಾವದಾರ್ಶನಿಕನಿಗೆ ಕಡಿಮೆಯಾಗುತ್ತಾನೆ? ಹತ್ತು, ನೂರು, ಸಹಸ್ರ ಕೃತಿಗಳಿಗೆ, ಪ್ರವಾದಿಗಳಿಗೆ ಸಮವಲ್ಲವೆ ಆತನ ಒಂದು ಮಾತು. ಇಂಥ ವಿವರಗಳು ನಾಗರಿಕನ ಮೇಲೆ ಎಂಥ ಪ್ರಭಾವ ಬೀರಬಲ್ಲವು? ನಿಸರ್ಗದ ಎಲ್ಲವನ್ನು ಮುರಿದು ಮುಕ್ಕಿ ಆನಂದಿಸುವ ನಾಗರಿಕನ ಮನಸ್ಸಿಗೆ ಘಾಸಿ ಮಾಡಿಸುತ್ತವೆ ಈ ಮಾತುಗಳು. ಅದೇ ಆದಿವಾಸಿಗಳನ್ನು ಪರಿಚಯಿಸುತ್ತ ಅಲ್ಲಿನ ಮೌಢ್ಯ, ದೇವರ ಹೆಸರಲ್ಲಿನ ಅಚಾತುರ್ಯ, ಪರಿಣಾಮಗಳ ಕಡೆಗೇ ಜಾರಿಬಿಡುತ್ತಾರೆ (ಪು. ೬೭.).

**ಭಿಲ್ಲರ ಹೋಳಿ** : ಹೋಳಿ ಆಚರಣೆಯ ಹಿಂದೆ ಜನಾಂಗದ ಕಲ್ಪನೆ, ಹೋಳಿಗೆ ಭಿಲ್ಲರು ಕೊಡುವ ಪ್ರಾಧಾನ್ಯತೆ, ಅರ್ಥ ವೈಶಾಲ್ಯತೆಗಳು ಮುಖ್ಯವೆನಿಸುತ್ತವೆ. ಭಾರತದ ಬುಡಕಟ್ಟುಗಳ ಜನಸಂಖ್ಯೆಯಲ್ಲಿ ಮೂರನೇ ಸ್ಥಾನದಲ್ಲಿರುವ ಭಿಲ್ಲರು ಮಧ್ಯಪ್ರದೇಶದ ಧಾರ, ಝಾಬುವಾ ಮತ್ತು ಪಶ್ಚಿಮ ನಿಮಾರ ಜಿಲ್ಲೆಗಳಲ್ಲಿ ಹಂಚಿಕೊಂಡಿದ್ದಾರೆ. ಸದಾ ಬಿಲ್ಲು-ಬಾಣಗಳೊಂದಿಗೆ ಅಲೆದಾಡುವ ಇವರಿಗೆ ಈ ಹೆಸರು ಅನ್ವರ್ಥವಾಗಿದೆ. ಹೀಗೆ ಅವರ ಭಾಷೆ, ಜೀವನ ವಿಧಾನ, ಕಸುಬು, ಉಪಭಾಷೆಗಳ ವಿವರ ನೀಡುತ್ತ ಆದಿವಾಸಿ ಬದುಕಿನ ಅಧ್ಯಯನದ ನೆಲೆಗಳನ್ನು ತಿಳಿಸುತ್ತಾರೆ. ರಾಜಾಸ್ಥಾನಿ ವಲಸೆ ರಜಪೂತರಿಂದ ಭಿಲ್ಲರ ಹೆಂಗಸರಲ್ಲಿ ಹುಟ್ಟಿದ ಭಿಲಾಲಾ ಎಂಬ ಹೊಸ ಜನಾಂಗದ ಪರಿಚಯವಿದೆ. ಆಚಾರ-ವಿಚಾರಗಳ ತೌಲನಿಕ ಬರಹಗಳಿವೆ (ಪು. ೭೦). ಹೋಳಿಹಬ್ಬ ಹೊಸಬದುಕಿಗೆ, ಸಾಂಸಾರಿಕ ಜೀವನಕ್ಕೆ ನಾಂದಿ ಹೇಗಾಗುತ್ತದೆ, ಆ ಸರಳತೆ, ನಿರ್ವಿಕಾರ, ನಿರ್ಲಜ್ಜ ಮನೋಭಾವಗಳನ್ನು ವಿವರಿಸುತ್ತಾರೆ. ನಾಗರಿಕ ಸಮಾಜದ ನಾವು ಎಷ್ಟೊಂದು ಕಲಿಯಲಿಕ್ಕಿದೆ ಎನಿಸದಿರದು. 'ಭಿಲ್ಲರ ಹೋಳಿ' ನಿಜಕ್ಕೂ ಅಪರೂಪದ ಲೇಖನ. ನವದಂಪತಿಗಳ ಬದುಕಿನ ನಾಂದಿ. ಗಂಡು-ಹೆಣ್ಣುಗಳ ಆಕರ್ಷಣೆ, ಇನಿಯ-ಇನಿಯಳನ್ನು ಆಯ್ಕೆ ಮಾಡಿಕೊಳ್ಳುವ ಮುಕ್ತ ವಾತಾವರಣಗಳೆಲ್ಲ ತೆರೆದುಕೊಳ್ಳುತ್ತವೆ. ಸ್ತ್ರೀ ಸ್ವಾತಂತ್ರ್ಯಕ್ಕೆ ಭಿಲ್ಲರ ಬದುಕು ಮಾದರಿಯಾಗಬಲ್ಲದು. ಹೀಗೆ ಅವರ ಪದ್ಧತಿ, ಆಚರಣೆ, ಆಭರಣ, ವೇಷಭೂಷಣಗಳನ್ನು ಲೇಖನ ಪರಿಚಯಿಸುತ್ತದೆ.

**ಚಕಡಾ ಓಟ** : ಛಿಂದವಾಡದಲ್ಲಿ ನಡೆದ ಈ ಓಟದ ವಿವರಗಳನ್ನು ತಿಳಿಸುವಾಗ ಕಾಮತರ ಜೊತೆಯಲ್ಲಿಯೇ ನೋಡುತ್ತಿದ್ದೇವೆಂಬ ತನ್ಮಯತೆ ತರುವ ಶಕ್ತಿ ಕಾಮತರ ಬರವಣಿಗೆಗಿದೆ. ಶುದ್ಧ ಗ್ರಾಮೀಣ ಕ್ರೀಡೆ ಚಕಡಾ ಓಟದ ಮೂಲಕ ನಶಿಸುತ್ತಿರುವ ಗ್ರಾಮೀಣ ಕ್ರೀಡೆಗಳ ಭವ್ಯತೆ, ಮಹತ್ವ ವಿವರಿಸುತ್ತಾರೆ. ಅಲ್ಲಿ ನೆರೆದ ಸಮೂಹ ವೈವಿಧ್ಯತೆಯಲ್ಲಿ ಏಕತೆಯನ್ನು ಮೆರೆಸುವ ಪ್ರಯೋಗವಾಗಿ ರೂಪುಗೊಳ್ಳುವ ಪರಿಯಿದೆ. ಎತ್ತುಗಳ ಮನಃಸ್ಥಿತಿ, ಅವುಗಳ ವರ್ತನೆ, ಚಡಪಡಿಕೆಗಳನ್ನೆಲ್ಲ ಅಕ್ಷರಗಳಲ್ಲಿಯೇ ಅಡಗಿಸಿ ಮನನ ಮಾಡಿಸುತ್ತಾರೆ. ತಮ್ಮ ಎಲ್ಲ ಲೇಖನಗಳಲ್ಲೂ ಕಾಮತರ ರಸಿಕ ಕಣ್ಣುಗಳು ಮೈತುಂಬಿಕೊಂಡ ಯುವತಿಯರೆಡೆಗೆ ಹಾಯುವುದನ್ನು ಗಮನಿಸಬಹುದು. ಅವರ ಕ್ಯಾಮರ ಪ್ರತಿಲೇಖನಗಳಲ್ಲೂ ಅಂಥ ಸ್ನಿಗ್ಧ ಹೆಣ್ಣೊಂದನ್ನು ತೋರಿಸುತ್ತದೆ. ಆ ಮೂಲಕ ರಸಿಕತೆಯ ತಮ್ಮ ಅನುಭವವನ್ನು ಓದುಗರೊಡನೆ ಮನಬಿಚ್ಚಿ ಹೇಳಿಬಿಡುತ್ತಾರೆ. ಮನಸ್ಸಿನಲ್ಲೇ ಮಂಡಿಗೆ ತಿನ್ನುವ ಮಡಿವಂತ ಮಂದಿಗಿಂತ ಉತ್ತಮರಲ್ಲವೆ?

ಮಾನವ ತನ್ನ ಸುತ್ತಮುತ್ತಲಿನ ಪ್ರಕೃತಿಯ ಚೆಲುವಿಗೆ ಮನಸೋತು ಅದರ ಪುನರ್ ನಿರ್ಮಿತಿಗೆ ತುಡಿಯುತ್ತಿರುತ್ತಾನೆ. ಕಲೆ ಆದಿಮಾನವ ಪಡೆದ ಪ್ರಕೃತಿಯ ಅಂತರ್ಯ ದರ್ಶನದ ಫಲ. ಕ್ರಿ.ಪೂ. ೩೦೦೦ ವರ್ಷಗಳಷ್ಟು ಹಿಂದಿನಿಂದಲೇ ಆರಂಭವಾದ ಆದಿಮಾನವ ಕಲೆಗಳನ್ನು ಶೋಧಿಸಿ ಗಮನ ಸೆಳೆದಿದ್ದಾರೆ. ಗುಹೆ, ಚಾಚುಬಂಡೆಗಳ ಅಡಿಯಲ್ಲಿ ವಾಸಿಸುತ್ತಿದ್ದ ಆದಿಮಾನವರು ಹುಲಿ, ನವಿಲುಗಳ ಚಿತ್ರ ಬಿಡಿಸುವ ಮೂಲಕ ಅವರ ಕಲಾನೈಪುಣ್ಯತೆ ಮೆರೆಯುತ್ತಿದ್ದುದರ ಸುಳಿವುಗಳನ್ನು ನೀಡಿದ್ದಾರೆ. ಯಾವುದೇ ಲಾಭ

ಅಥವಾ ಯಾರದೋ ತೆವಲಿಗಾಗಿ ಕಲೆ ಹುಟ್ಟುವುದಿಲ್ಲ ಬದಲಾಗಿ ಅವರ ಸೂಕ್ಷ್ಮ ವ್ಯಕ್ತಿತ್ವದ ಅಭಿವ್ಯಕ್ತಿಯಾಗಿ ರೂಪ ಪಡೆಯುತ್ತದೆ. ಮಾನವ ನಗ್ನಾವಸ್ಥೆಯಲ್ಲಿರುವಾಗಲೇ ಹುಟ್ಟಿದ ಪ್ರಾಚೀನ ಕಲೆ ಹಚ್ಚೆಯನ್ನು ಕುರಿತು ಕಾಮತರು ಬರೆಯುತ್ತಾರೆ (ಆದಿವಾಸಿಗಳಲ್ಲಿ ಹಚ್ಚೆ).

ಹುಲಿ ಚಿಗರೆಗಳ ಮೈಬಣ್ಣ ನೋಡಿ ಆದಿಮಾನವನಿಗೆ ತನ್ನ ಅನಾಕರ್ಷಕ ದೇಹದ ಮೇಲೆ ಜಿಗುಪ್ಸೆ ಹುಟ್ಟಿರಬೇಕು. ಬಣ್ಣ ಬಣ್ಣದ ಮಣ್ಣುಗಳನ್ನು ಮೈಗೆ ಮೆತ್ತಿಕೊಂಡಿರಬೇಕು. ಹೀಗೆ ಮಾಡುವುದರಿಂದ ಬೇಟೆಯಾಡುವುದರಲ್ಲಿಯೂ ಸಹಾಯವಾಗುತ್ತದೆ ಎಂದು ಅನುಭವಕ್ಕೆ ಬಂದದ್ದರಿಂದ ಬಣ್ಣಗಳನ್ನು ಕಲಾತ್ಮಕವಾಗಿ ಜೋಡಿಸುವುದನ್ನು ಕಲಿತನು. ಕ್ರಮೇಣ ತನ್ನ ಪರಿಸರದ ವಸ್ತುಗಳನ್ನು ಬಿಡಿಸಲಾರಂಭಿಸಿದನು. ನಂತರ ಇಂತಹ ಚಿತ್ರಗಳಿಲ್ಲದೆ ಬೇಟೆ ಸಿಗದು, ಕ್ರೂರ ಪ್ರಾಣಿಗಳಿಂದ ರಕ್ಷಣೆ ಸಿಗದು ಎಂದು ಅವುಗಳನ್ನು ಶಾಶ್ವತವಾಗಿ ತನ್ನ ಶರೀರದ ಮೇಲೆ ಬಿಡಿಸಲು ಯತ್ನಿಸಿರಬೇಕು. ಮೊಟ್ಟಮೊದಲನೆಯ ಹಚ್ಚೆ ಸಸ್ಯಬಣ್ಣ ಮತ್ತು ಮುಳ್ಳಿನ ಸಹಾಯದಿಂದ ನಿರ್ಮಾಣವಾಗಿರಬೇಕೆಂದು ಊಹಿಸುತ್ತಾರೆ (ಪು. ೮೯). ನಿಜ ಅಧ್ಯಯನಕಾರ ಕಾಮತರಲ್ಲಿ ತೆರೆದುಕೊಳ್ಳುತ್ತಾನೆ. ಹಚ್ಚೆ ಹಾಕಿಸಿಕೊಳ್ಳುವ ಸಂದರ್ಭಗಳನ್ನು ತಿಳಿಸುತ್ತಾ, ಅದಕ್ಕೊಂದು ಸಾಂಸ್ಕೃತಿಕ ಮಹತ್ವ ತಂದುಕೊಡುತ್ತಾರೆ. ವೈಜ್ಞಾನಿಕ ದೃಷ್ಟಿಯಿಂದ ಬಣ್ಣಗಳ ಬದಲಾಗುವಿಕೆ, ದೇಹದಲ್ಲಿ ಮಿಳಿತಗೊಂಡು ಚರ್ಮದ ರಕ್ಷಣೆ ಮಾಡುವ ಪರಿಯನ್ನು ಸೊಗಸಾಗಿ ನಿರೂಪಿಸುತ್ತಾರೆ. ಕುಂಚಕಲಾವಿದ, ಹಚ್ಚೆಯ ಸೂಜಿಕಲಾವಿದರನ್ನು ಸಮೀಕರಿಸುವ ಕಾಮತರ ವಿಧಾನ ಗಮನಾರ್ಹವಾಗಿದೆ (ಪು. ೯೦). ಪ್ರಕೃತಿ ಆರಾಧಕರಾದ ಆದಿವಾಸಿಗಳು ಹಚ್ಚೆಯಲ್ಲಿ ಗಿಡ-ಮರ-ಬಳ್ಳಿಗಳನ್ನು ತರುವ ಬಗೆ ವಿವರಿಸಲು ಮರೆಯುವುದಿಲ್ಲ. ಅಲಂಕಾರ ಪ್ರಿಯರಾದ ಆದಿವಾಸಿ ಹೆಂಗಳೆಯರು ತಮ್ಮ ಮನದಾಸೆಯನ್ನು ಹಚ್ಚೆ, ಇತರೆ ಆಭರಣಗಳ ಮಾದರಿಯನ್ನು ಧರಿಸುವುದರಲ್ಲೆ ಸಂತೋಷಿಸುವುದನ್ನು ಕಾಣಬಹುದು. ಮನೋವೈಜ್ಞಾನಿಕ ವಿಶ್ಲೇಷಣೆಗಳು ಹೇರಳವಾಗಿ ಕಾಮತರ ಬರಹಗಳಲ್ಲಿವೆ.

ಹಚ್ಚೆ ಹಾಕುವವರ ಕಲಾನೈಪುಣ್ಯದ ಪದರುಗಳನ್ನು ಓದುಗನ ಮುಂದೆ ಸರಳ ಶೈಲಿಯಲ್ಲಿ ಉಪಮೆ, ರೂಪಕಗಳೊಡನೆ ಮನನ ಮಾಡಿಸುತ್ತಾರೆ. ಯಾವುದೇ ಕಲಾವಿದನನ್ನು ನೋಡುವ ಆ ನೈಪುಣ್ಯತೆ ಎಷ್ಟು ಜನ ಬರಹಗಾರರಿಗೆ ಸಾಧ್ಯ? ಬೇರೆ ಬೇರೆ ಆದಿವಾಸಿಗಳು ಹಚ್ಚೆ ಕಲೆಯನ್ನು ಯಾವ ಹಿನ್ನೆಲೆಯಲ್ಲಿ ಹಾಕಿಸಿಕೊಳ್ಳುತ್ತಾರೆಂಬ ತೌಲನಿಕ ಅಧ್ಯಯನವಿದೆ. ಅವರು ನಿಜಕ್ಕೂ, ಆದಿವಾಸಿಗಳ ಪಕ್ಷಿನೋಟವನ್ನೇ ಕೊಡುತ್ತಾರೆ. ಒಬ್ಬ ಅಧ್ಯಯನಕಾರ ಆದಿವಾಸಿಯಾಗಿ ಅವರ ನೆಲೆಯಲ್ಲಿ ನಿಂತು ಯೋಚಿಸಬೇಕೆಂಬ ಸಾಮಾನ್ಯ ತತ್ವವನ್ನೇ ಆದರ್ಶವಾಗಿ ಅಳವಡಿಸಿಕೊಂಡು, ಆ ಮೂಲಕ ಸಾಗುವ ಕಾಮತರ ಬರಹ ಆ ಕಾರಣದಿಂದಲೂ ಯಶಸ್ವಿಯಾಗಿದೆ ಎಂದರೆ ಅತಿಶಯವಲ್ಲ.

ಬಸ್ತರ ಜಿಲ್ಲೆ ಜಗದಲಪುರ ಬೈಲಡಾಂಗಾದ ಬಯಲಿಗೆ ಓದುಗರನ್ನು ಕರೆದುಕೊಂಡು ಹೋಗಿ ಅಲ್ಲಿರುವ ಶ್ರೀಮಂತ ಕಲೆ ಘರೇವಾ ಕಲೆಗಾರರ ಬಡಬದುಕು, ಬರ್ಬರ ಸ್ಥಿತಿಯನ್ನು ಘರೇವಾ ಜನರನ್ನು ಭೇಟಿಮಾಡಿಸಿ ಪರಿಚಯಿಸುತ್ತಾರೆ. ಓದುಗ ಬಯಲಿನಲ್ಲಿ ಸುತ್ತಾಡುತ್ತಾ, ಅವರ ಬದುಕನ್ನು ಕಂಡು ಕಂಬನಿಗರೆವ ಸ್ಥಿತಿ ತಲುಪುತ್ತಾನೆ. "ನಗರದ ಹೊರಭಾಗದಲ್ಲಿ ಗುಡಿಸಲುಗಳ ಕಿರುವಸತಿ ಗೋಚರಿಸಿತು. ಮುರುಕಲು ಗುಡಿಸಲು ಎದುರಿಗೆ ಇದ್ದ ಕಿರಿಯ ಚಪ್ಪರವೇ ಅವರ ಕಮ್ಮಟ. ಕೃಶಕಾಯ, ಗುಳಿಬಿದ್ದ ಕಣ್ಣುಗಳು, ಅವರೆಲ್ಲ ಕಡುಬಡವರೆಂದು ಸಾರಿದವು. ಆದರೆ ಅವರ ಪ್ರಾಣಿ ಪ್ರೇಮಕ್ಕೆ ಏನೇನೂ ಕೊರತೆಯಿರಲಿಲ್ಲ. ಕೆಲವರು ಗಿಳಿ ಸಾಕಿದರೆ, ಇನ್ನು ಕೆಲವರು ಕೆಂಪುಮೂತಿಯ ಕೋತಿ, ನಾಯಿ, ಮೈನಾಗಳನ್ನು ಸಾಕಿದ್ದರು (ಪು. ೯೩)". ಬದುಕಿನ ವಿರಾಟ್ ದರ್ಶನದ ಜೊತೆಗೆ ಮಾನವೀಯ ತುಡಿತಗಳ ಬಗೆಗೆ ತಿಳಿ ಹೇಳುತ್ತ ಕಲಾವಿದರನ್ನು ಸುಲಿದು- ಕಲಾಕೃತಿ ಪ್ರದರ್ಶಿಸಿ ಬಹುಮಾನ ಪಾರಿತೋಷಕ ಕೊಳ್ಳೆ ಹೊಡೆವ ಬಂಡವಾಳಶಾಹಿಗಳ ಬಣ್ಣ ಬಯಲಿಗೆಳೆಯುತ್ತಾರೆ (ಪು. ೯೫).

ಆದಿವಾಸಿಗಳ ಬಗೆಗೆ ಬರೆಯುವಾಗಲೆಲ್ಲ ಕಾಮತರು ಇತಿಹಾಸದೆಡೆಗೆ ಅಪ್ರಜ್ಞಾಪೂರ್ವಕವಾಗಿ ಹೊರಳಿಬಿಡುತ್ತಾರೆ. ಅವರ ಆದಿವಾಸಿಗಳ ಕಲೆ (ಪು. ೯೭) ಲೇಖನದಲ್ಲಿ ವಿವರಗಳು ದೊರೆಯುತ್ತವೆ. ಬಣ್ಣಗಳ ಮಿಶ್ರಣ, ಅವುಗಳನ್ನು ರಚಿಸಿದ ಕಾಲ, ರಚಿಸುವಾಗ ಆ ಕಲಾವಿದರಲ್ಲಿದ್ದ ನಿರ್ಲಿಪ್ತತೆಯ ಎಳೆಗಳನ್ನು ಸಮರ್ಥವಾಗಿ ಅಭಿವ್ಯಕ್ತಿಸುತ್ತಾರೆ (ಪು. ೯೯). ಆದಿವಾಸಿ ಕಲೆಯ ವಿಶ್ಲೇಷಣೆಯನ್ನು ಗಮನಿಸಿದಾಗ ಕಾಮತರೊಳಗಿನ ಕಲಾವಿಮರ್ಶಕನ ದರ್ಶನ, ಕಲೆ ಬಗೆಗೆ ಅವರಿಗಿದ್ದ ಅಪಾರ ಜ್ಞಾನದ ಅರಿವಾಗುತ್ತದೆ (ಪು. ೯೮). ಗಂಡು-ಹೆಣ್ಣುಗಳಲ್ಲಿನ ಭಾವನಾತ್ಮಕ ಸಂಬಂಧ ತಿಳಿಸುತ್ತ ಇಂದಿನ ಸಮಪಾಲು-ಸಮಬಾಳಿಗೆ ಹೋರಾಡುತ್ತಿರುವ ಲಲನಾಮಣಿಯರ ಲೇವಡಿಯಿದೆ (ಪು. ೧೦೧). ಹೋರಾಟದ ಬದುಕು-ಬವಣೆಗಳು, ಯುದ್ಧಕ್ಕೆ ಬಳಸುತ್ತಿದ್ದ ಆಯುಧಗಳು, ಹೊಟ್ಟೆಪಾಡಿಗೆ ಕಂಡುಕೊಂಡಿದ್ದ ಮಾರ್ಗಗಳು ಮತ್ತು ತನ್ನ ಎಲ್ಲ ಆಸೆ-ಆಕಾಂಕ್ಷೆಗಳು ಪೂರೈಸಿದ ನಂತರ ಮಾನವನ ಸಾಂಸ್ಕೃತಿಕ ಪ್ರಜ್ಞೆ ಜಾಗೃತಗೊಂಡು ಧಾರ್ಮಿಕ ಹಿನ್ನೆಲೆಯಲ್ಲಿ ಬೆಳೆದುಬರುವ ಎಲ್ಲ ವಿವರಗಳನ್ನು ಕಾಲಾನುಕ್ರಮದಲ್ಲಿ ಜೋಡಿಸಿಕೊಡುತ್ತಾರೆ (ಪು. ೧೦೨).

'ಗೊಂಡಾರಣ್ಯದ ಗೊಂಡರು' ಲೇಖನದಲ್ಲಿ ಗೊಂಡ ಬದುಕಿನ ಸ್ಥೂಲ ಪರಿಚಯವಿದೆ. ತಾವು ಯಾವುದೇ ಸ್ಥಳಕ್ಕೆ ಹೋಗಬೇಕಾದರೂ ಮಾನಸಿಕ ಸಿದ್ಧತೆ, ಕಣ್ಣುಗಳ ಚಲನೆಯ ವೇಗಗಳನ್ನು ಸುಲಭವಾಗಿ ಪರಿಚಯಿಸಿಬಿಡುತ್ತಾರೆ. ಮನೆಯ ಹೊರ-

ಒಳಗಿನ ವಿವರಗಳನ್ನು ಅಚ್ಚುಕಟ್ಟಾದ ಕಲಾತ್ಮಕ ನೆಲೆಯಲ್ಲಿ ಕಟ್ಟಿಕೊಡುತ್ತಾರೆ (ಪು. ೧೦೫). ಫೋಟೋ ಕ್ಲಿಕ್ಕಿಸುತ್ತಲೇ ಆಭರಣಗಳ ಹೆಸರು, ಧರಿಸುವ ವಿಧಾನಗಳನ್ನು ಹೆಸರಿಸುತ್ತಾರೆ. ಮಾತನಾಡುತ್ತಿದ್ದಂತೆಯೇ ಆಚರಣೆ-ನಂಬಿಕೆಗಳನ್ನು ಹೊರಗೆಡಹುವ ಪರಿ ಬೆರಗು ಮೂಡಿಸುತ್ತದೆ. ವಿಶೇಷವಾದ "ಸ್ತ್ರೀರಾಜ್ಯ" ಹಬ್ಬದಲ್ಲಿನ ನೃತ್ಯವೈವಿಧ್ಯಗಳು ಅನಾವರಣಗೊಳ್ಳುತ್ತವೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಯಲ್ಲಿ ಸಾಗುತ್ತಲೇ ಇತಿಹಾಸದೆಡೆ ತಿರುಗಿ ಬಹುಮುಖಿ ಅಧ್ಯಯನಕ್ಕೆ ಅನುವಾಗುತ್ತದೆ. ಕರ್ನಾಟಕಕ್ಕೆ ಗೊಂಡರ ಆಗಮನ, ನೆಲೆಗಳನ್ನು, ತಿಳಿಸುತ್ತಾರೆ. 'ಹರ್ಮಡೆಯಗುಂಟ' ಲೇಖನದಲ್ಲಿ ಗೋಪಾಲಪುರದ ಸತಿಪದ್ಧತಿಯ ಮಾಹಿತಿಗಳು, ಐತಿಹಾಸಿಕ ಅಂಶಗಳು ಕಾಮತರ ಬರವಣಿಗೆಯಲ್ಲಿವೆ (ಪು. ೧೧೪-೧೧೫) .

ಧೂಪಗಡದ ಕೊರ್ಕುಗಳನ್ನು ಪರಿಚಯಿಸುತ್ತಾ ಬಡತನ ಬಂದುದರ ಐತಿಹ್ಯವೊಂದನ್ನು ಹೇಳುತ್ತಾರೆ. ತಲೆತಲಾಂತರದಿಂದ ಅಲ್ಲಿ ನೆಲೆಸಿರುವ ಕೊರ್ಕುಗಳು ಏಕೆ ಸಾಮಾನು ಹೊತ್ತು ಶಿವಾಲಯದವರೆಗೂ ಹೋಗುತ್ತಾರೆಂದರೆ : ಒಂದಾನೊಂದು ದಿನ ಬೇಟೆಗೆ ಹೋದಾಗ, ಕಾಡುಕೋಣವೊಂದು ಕಂಡಿತು. ಒಳ್ಳೆಯ ಬೇಟೆಯೊಂದು ದೊರೆಯಿತೆಂದು ಅದನ್ನು ಅಟ್ಟಿಸಿಕೊಂಡು ಹೋದಾಗ ಗುಹೆಯೊಂದರಲ್ಲಿ ಸೇರಿಕೊಂಡಿತು. ಹೊರಬರುತ್ತದೆಂದು ಬಹುಹೊತ್ತು ಹಸಿವಿನಿಂದ ಕಾದು ಕುಳಿತಿರುವಾಗ ಧರ್ಮಿಷ್ಠನೊಬ್ಬ ಹೊರಬಂದು ಧಾನ್ಯ ನೀಡಿ ಹೊಟ್ಟೆ ತುಂಬಿಸಿಕೊಳ್ಳಲು ಹೇಳಿದ. ಈ ಮಹಾದೇವ ಬೆಟ್ಟದಸುತ್ತ ಉಳಿಯಲು ಶಿವನೇ ಆಡಿದ ನಾಟಕವಿದು. ಇಲ್ಲಿ ನೆಲೆನಿಂತು ಅಂದಿನಿಂದ ಈ ಕಾಯಕ (ಭಾರಹೊತ್ತು ಬೆಟ್ಟ ಹತ್ತಿ ಭಕ್ತರ ಸೇವೆ) ಮಾಡುತ್ತಿದ್ದೇವೆ ಎಂಬಲ್ಲಿ ಕೊರ್ಕುಗಳ ಪ್ರಾಚೀನತೆ, ಅವರ ಬೇಟೆಯ ವಿವರಗಳನ್ನು ವಿಶದೀಕರಿಸುತ್ತಾರೆ. ಅನಾದಿಕಾಲದ ಆದಿವಾಸಿ ಬದುಕಿನ ಅನನ್ಯತೆ ವಿವರಿಸುತ್ತಾರೆ (ಪು. ೧೧೯). ಜನಾಂಗಸಂಬಂಧಿ ಪುರಾಣವನ್ನು ಸ್ಥೂಲವಾಗಿ ನೀಡುತ್ತಾರೆ. ಪ್ರಕೃತಿ ಆರಾಧನೆಯ ಹಲವು ಒಳನೋಟಗಳನ್ನು ತೆರೆದಿಡುತ್ತಾರೆ. ಗೊಂಡ-ಭಿಲ್ಲರ ತೌಲನಿಕ ವಿವೇಚನೆಯಿದೆ. ಅವಿಭಕ್ತ ಕುಟುಂಬ ವ್ಯವಸ್ಥೆ, ಸಾಮುದಾಯಿಕ ಹೊಂದಾಣಿಕೆ ಇತ್ಯಾದಿಗಳನ್ನು ಸೊಗಸಾಗಿ ಬರೆಯುತ್ತಾರೆ.

ಕಾಮತರ **'ಅಕ್ಷತ'** ಹನ್ನೆರಡು ಬಿಡಿಲೇಖನಗಳನ್ನೊಳಗೊಂಡ ಕೃತಿ. ಮೊದಲ ಅಧ್ಯಾಯ 'ನಾವು ನಮ್ಮವರು' ಉತ್ತರ ಕನ್ನಡ ಜಿಲ್ಲೆಯ ಭೌಗೋಳಿಕ, ಇತಿಹಾಸ, ಸಂಸ್ಕೃತಿ, ಜನಜೀವನ, ಸಂಪ್ರದಾಯ, ಧಾರ್ಮಿಕ ವಿವರಗಳ ಜೊತೆಗೆ ಅಲ್ಲಿ ಕಂಡುಬರುವ ಸಿದ್ದಿ, ಹಾಲಕ್ಕಿ, ಖಾರ್ವಿ, ಗಾವ್ಡಿ, ಹರಕಂತ್ರ, ದಾರಜಿ, ನವಾಯತ, ಗೌಳಿಗ, ಮಾಪಿಳ್ಳೆ, ಸಾರಸ್ವತ, ತೊದವ, ಸಂತಾಲ ಜನಾಂಗ ಕುರಿತ ಲೇಖನಗಳಿವೆ. ಕೊಂಕಣಿ ಭಾಷೆಯ ಉಗಮ ಬೆಳವಣಿಗೆ, ಕೊಂಕಣಿ-ಕನ್ನಡಿಗರ ಭಾಷಾ ಬಾಂಧವ್ಯ, ಗೋವಾ-ಕರ್ನಾಟಕಗಳ ಮೈತ್ರಿ ಮತ್ತು ಕರಾವಳಿ ಕ್ರೈಸ್ತರನ್ನು ಕುರಿತ ಬಿಡಿ ಲೇಖನಗಳ ಗುಚ್ಛವಿದು. ಆದಿವಾಸಿ ಅಧ್ಯಯನದ ಪ್ರಾಥಮಿಕ ನೋಟಗಳು ಇಲ್ಲಿ ದೊರೆಯುತ್ತವೆ. ವಿವಿಧ ಆಯಾಮಗಳ ಅಧ್ಯಯನದ ಸಾಧ್ಯತೆ, ಆವಶ್ಯಕತೆ, ಅನಿವಾರ್ಯತೆ, ತುರ್ತುಗಳನ್ನು ತಿಳಿಸುವಲ್ಲಿ ಕಾಮತರ ಲೇಖನಗಳು ಸಫಲವಾಗಿವೆ. 'ಅಕ್ಷತ' ನಿಜಕ್ಕೂ ಜನ-ಜಾತಿಗಳನ್ನು ಅರಿಯಲು ಅನುಕೂಲವಾದ ಕಿರುಕೈಪಿಡಿ.

**'ಪ್ರವಾಸಿಯ ಪ್ರಬಂಧಗಳು'** ಲಲಿತ ಪ್ರಬಂಧಗಳ ಸಂಕಲನವೆನ್ನಬಹುದು. ಅಲ್ಲಿನ ಅನೇಕ ಲೇಖನಗಳು ಕಾಮತರ ಪ್ರವಾಸದ ಅನುಭವಗಳ ಜೊತೆಗೆ ಮನಕ್ಕೆ ಮುದನೀಡುತ್ತವೆ. ಕಾಮತರ ರಸಿಕತೆಯನ್ನು ತೆರೆದಿಡುವ ಅಪರೂಪದ ಕೃತಿ. ತಮ್ಮ ಅನುಭವಗಳ ಮೂಲಕ ವಿಡಂಬನೆ, ಹಾಸ್ಯ,ಭೀಭತ್ಸ್ಯಗಳನ್ನು ಹೇಳುತ್ತಾ ಸಮಾಜಮುಖಿ ಚಿಂತನೆಗಳಿಗೆ ಎಡೆಮಾಡಿಕೊಡುತ್ತಾರೆ. ಬುಡಕಟ್ಟು ಸಂಬಂಧಿ ಕೆಲ ಲೇಖನಗಳು ಇಲ್ಲಿ ಪುನರಾವರ್ತನೆಗೊಂಡಿವೆ. ಉಳಿದಂತೆ ಅವರ ಪ್ರವಾಸದ ದಟ್ಟ ಅನುಭವದ ಲೇಖನಗಳಿವೆ. ಇಪ್ಪತ್ತಮೂರು ಬಿಡಿ ಲೇಖನಗಳಲ್ಲಿ ಅಮೆರಿಕೆಯಲ್ಲಿ ಹಜಾಮತಿ, ಬಂಗಾಲಿಗಳ ಕಲಹ, ಪರೋಪಕಾರಿ ಪರಕೆ, ಜಾಚೂ ತಪ್ಪದೆ ಸೇವಿಸುವ ಚಹ, ಮನೆ ಚೊಕ್ಕಟ ಊರು ಹೊಲಸು, ಮಾವನೂರಲ್ಲದ ಮಾವಿನಹುರ್ಕೆ, ಮುಕ್ಕಣ್ಣನ ಮುರ್ಡೇಶ್ವರ ಇತ್ಯಾದಿಗಳು ಶುದ್ಧ ಹಾಸ್ಯ ಲೇಖನಗಳು. ಚಕಪಾ ಓಟ ಮತ್ತು ಭಿಲ್ಲರ ಹೋಳಿ ಪುನರಾವರ್ತನೆಯಾಗಿರುವ ಆದಿವಾಸಿ ಸಂಬಂಧಿ ಲೇಖನಗಳು (ಮಧ್ಯಪ್ರದೇಶದ ಮಡಿಲಲ್ಲಿ) ವಿಷಯ ವೈವಿಧ್ಯತೆಯಿಂದ ಕೂಡಿದ ಕೃತಿಯು ನವಿರಾದ ಹಾಸ್ಯ, ಪ್ರವಾಸ ಸಾಹಿತ್ಯದ ಕಲೆಗಾರಿಕೆ, ಕತೆಗಾರಿಕೆಯ ತಂತ್ರಗಳನ್ನು ಸುಲಭಗ್ರಾಹಿಯಾಗಿ ಮೂಡಿಬಂದಿವೆ.

ಹೀಗೆ ವಿಷಯ ವೈವಿಧ್ಯಗಳಿಂದ ಕೂಡಿದ ಕಾಮತರ ಕೃತಿಗಳು ಬುಡಕಟ್ಟು ಲೋಕದ ನೆಲೆಗಳನ್ನು ಬಿಡಿಸುತ್ತವೆ. ಆದಿವಾಸಿಗಳನ್ನು ಕುರಿತು ಕಾಮತರ ಬರಹಗಳು ಈ ಮೊದಲೇ ತಿಳಿಸಿದಂತೆ ಅಧ್ಯಯನಾಕಾಂಕ್ಷಿಗಳಿಗೆ ದಾರಿದೀಪವಾಗಬಲ್ಲವು.

❑

# ಕಾಮತರ ರೇಖಾಚಿತ್ರಗಳು - ಒಂದು ಟಿಪ್ಪಣಿ

ಡಾ. ಅ. ಲ. ನರಸಿಂಹನ್

*(ಈ ಲೇಖನಕ್ಕೆ ಒಂದು ಸಣ್ಣ ಪೀಠಿಕೆಯ ಅಗತ್ಯವಿದೆ. ಡಾ॥ ಕೃಷ್ಣಾನಂದ ಕಾಮತರು ಅವರ ಜೀವಿತಾವಧಿಯಲ್ಲಿ ಆಪ್ತವಾಗಿ ಅಂತರಂಗಕ್ಕೆ ಬಿಟ್ಟುಕೊಂಡವರು ತೀರ ಕಡಿಮೆ. ಸುಮಾರು ೧೯೭೯ರ ವೇಳೆಯಲ್ಲಿ ನನ್ನ ಮಹಾಪ್ರಬಂಧಕ್ಕಾಗಿ ಛಾಯಾಚಿತ್ರಕಾರರನ್ನು ಹುಡುಕುತ್ತಿದ್ದಾಗ ಡಾ॥ ಶೇಷಶಾಸ್ತ್ರಿ ಅವರು ಕಾಮತರನ್ನು ಪರಿಚಯಿಸಿದರು. ಮನೆಯ ಬಳಿಯೇ ಅವರ ಸ್ಟುಡಿಯೋ ಹಾಗೂ ಮನೆಗಳಿದ್ದದ್ದರಿಂದ ಆಗಾಗ ಭೇಟಿಯಾಗುತ್ತಿದ್ದೆವು. ಇದಕ್ಕೂ ಮೊದಲೇ ಸಂಪಿಗೆ ಥಿಯೇಟರ್ ಬಳಿಯ ಅವರ ಅಂಗಡಿಯ (ಸ್ಟುಡಿಯೋ) ಮುಂದೆ ಇದ್ದ "ವೈಜ್ಞಾನಿಕ ಛಾಯಾಚಿತ್ರ ಗ್ರಹಣ* - Scientific Photo Lab - *ಎಂಬ ಫಲಕ ನನ್ನಲ್ಲಿ ತೀರ ಕುತೂಹಲ ಹುಟ್ಟಿಸಿತ್ತು. ಕಾಮತರ ಪರಿಚಯವಾದ ಮೇಲೆ ನೂರಾರು ವಿಷಯಗಳು ಅವರಿಂದ ತಿಳಿದು ಬಂದು ನನ್ನ ಜ್ಞಾನದ ಪರಿಧಿ ವಿಸ್ತರಿಸುವಂತಾಯಿತು. ಮೊದಲೇ ಅವರ ರಾಜಸ್ಥಾನ ವಂಗದರ್ಶನ ಹಾಗೂ ಅಮೆರಿಕೆಯ ಪುಸ್ತಕಗಳನ್ನು ಓದಿದ್ದೆ. ಅಂಗಡಿಯಲ್ಲಿ ತಾಸೆರಡು ತಾಸು ಕುಳಿತು ಹರಟೆ ಹೊಡೆಯುತ್ತಿದ್ದೆವು. ಅದು ಕಾಡು ಹರಟೆಯಲ್ಲ, ವೈಯಕ್ತಿಕ ಸಂಗತಿಗಳೂ ಅಲ್ಲ. ಸಂಶೋಧನೆ, ಅಧ್ಯಯನ, ಛಾಯಾಚಿತ್ರಗಳಿಗೆ ಸಂಬಂಧಿಸಿದ್ದವು. 1982ರ ವೇಳೆಯಲ್ಲಿ ಶೇಷಶಾಸ್ತ್ರಿ ಅವರ ಮಹಾಪ್ರಬಂಧ ಮುದ್ರಣವಾಗುತ್ತಿತ್ತು. ಅದರಲ್ಲಿ ರೇಖಾ ಹಾಗೂ ಛಾಯಾಚಿತ್ರಗಳನ್ನು ಮಿತಿ ಇಲ್ಲದಂತೆ ಹಾಕಲು ಪರಿಷತ್ತಿನ ಅಧ್ಯಕ್ಷರು ಸೂಚಿಸಿದ್ದರು. ಶೇಷಶಾಸ್ತ್ರಿಗಳ ಮಾರ್ಗದರ್ಶಕರು ಹಾಗೂ ಕಾಮತರ ಸೂಚನೆಗಳಂತೆ ಶಾಸ್ತ್ರಿಗಳು ಅಧ್ಯಾಯ ವಿಂಗಡಿಸಿ ಅಧ್ಯಯನ ಮಾಡಿದ್ದರು. ಸದರಿ ಪುಸ್ತಕಕ್ಕೆ ರೇಖಾಚಿತ್ರಗಳ ವಿನ್ಯಾಸವನ್ನು ಕಾಮತರು ಮಾಡಿದಾಗಲೇ 'ವೈಜ್ಞಾನಿಕ ಛಾಯಾಚಿತ್ರ ಗ್ರಹಣ' ಎಂದರೆ ಏನೆಂದು ತಿಳಿದು ಬಂದದ್ದು. ಅದೆಷ್ಟು ಪರಿಪೂರ್ಣಕ್ರಿಯೆ ಎಂದಷ್ಟೇ ಅಲ್ಲ ಎಷ್ಟು ರೇಜಿಗೆಯ ಕೆಲಸ ಎಂದೂ ಅರಿವಾದುದು. ಇದನ್ನು ಉದಾಹರಣೆಯ ಮೂಲಕ ಹೇಳುವುದು ಒಳಿತು. 'ವೀರಗಲ್ಲುಗಳಲ್ಲಿ ಗುರಾಣಿಯ ವಿನ್ಯಾಸ' ಎಂಬುದು ಒಂದು ಉಪ ಅಧ್ಯಾಯ. ಶಾಸ್ತ್ರಿಗಳಾದರೋ ನೂರಾರು ಚಿತ್ರ ತೆಗೆದಿದ್ದರು. ಅವುಗಳಲ್ಲಿ ಹೆಚ್ಚು ಸ್ವಾರಸ್ಯಕರವಾದ ಗುರಾಣಿಗಳುಳ್ಳ ಚಿತ್ರದ ಆಯ್ಕೆ ನಂತರ ಅದರ ವಿಷಮ ಚಿತ್ರ (ನೆಗೆಟಿವ್) ಆಯ್ದುಕೊಂಡು, ಎನ್‌ಲಾರ್ಜರ್‌ನಲ್ಲಿ ಇರಿಸಿ ಕೆಳಗಿನ ಕಾಗದದ ಮೇಲೆ ಮೂಡುವ ಇಡೀ ಚಿತ್ರಬಂಧದಲ್ಲಿ ಯಾರಾದರೊಬ್ಬ ಯೋಧ ಹಿಡಿದ ಗುರಾಣಿಯ ಹೊರರೇಖೆಯಷ್ಟನ್ನೇ ಸೀಸದ ಕಡ್ಡಿಯಿಂದ (ಪೆನ್ಸಿಲ್) ತೆಳುವಾಗಿ ಮೂಡಿಸಿಕೊಳ್ಳಬೇಕು. ಒಂದು ಪುಟದಲ್ಲಿ ಒಂಬತ್ತು ಗುರಾಣಿಗಳ ಚಿತ್ರಹಾಕಬೇಕಾಗಿದ್ದ ಸಂದರ್ಭದಲ್ಲಿ ಕಾಗದದ ಮೇಲೆ ಒಂಬತ್ತು ಅಂಕಣಗಳನ್ನು ಮಾಡಿಕೊಂಡು ಅಂಕಣಕ್ಕೆ ಹೊಂದಿಕೊಳ್ಳುವಂತೆ ಬೇರೆ ಬೇರೆ ವಿಷಮ ಚಿತ್ರಗಳಿಂದ ಆಯ್ದ ಗುರಾಣಿಗಳನ್ನು ಅಂಕಣಗಳಲ್ಲಿ ಎನ್‌ಲಾರ್ಜರ್‌ನಲ್ಲಿ ಹೊಂದಿಸಿಕೊಳ್ಳುತ್ತಾ ಮೂಡಿಸಿಕೊಳ್ಳಬೇಕು. ನಂತರ ಎಲ್ಲವನ್ನೂ ಪೂರ್ಣಗೊಳಿಸಿ ಅಂತಿಮ ರೂಪ ನೀಡಬೇಕು. ಈ ಪದ್ಧತಿಯಿಂದಾಗಿ ಮೂಲರೂಪವನ್ನು ಯಥಾವತ್ತಾಗಿ ಉಳಿಸಿಕೊಳ್ಳಲು ಸಾಧ್ಯ.*

*ವೈಜ್ಞಾನಿಕ ಛಾಯಾಚಿತ್ರ ಗ್ರಹಣದ ಇನ್ನೊಂದು ರೂಪವೆಂದರೆ ವೈಜ್ಞಾನಿಕ ಪರೀಕ್ಷಾಲಯಗಳಲ್ಲಿ (ಲ್ಯಾಬೊರೇಟರಿ) ಮಾಡುತ್ತಿದ್ದ ಪ್ರಯೋಗಗಳ ಚಿತ್ರಣ. ಕೆಲವೊಮ್ಮೆ ವಿದ್ಯಾರ್ಥಿಗಳು ತಾವು ಮಾಡಿದ ಪ್ರಯೋಗಗಳ ಮಾದರಿಗಳನ್ನೇ ತಂದು ಛಾಯಾಚಿತ್ರ ಪಡೆಯುತ್ತಿದ್ದರು. ಕೆಲವು ವೇಳೆ ಬದಲಾವಣೆಗಳ ಹಂತಗಳನ್ನು ಗುರುತಿಸುವಂತಿದ್ದಲ್ಲಿ ಪ್ರಯೋಗಾಲಯಕ್ಕೇ ಹೋಗಿ ಚಿತ್ರ ತೆಗೆಯುತ್ತಿದ್ದರು. ಇದು ಬಜಾರಿನ ವ್ಯಾಪಾರೀ ಛಾಯಾಚಿತ್ರಣದಂತಲ್ಲ. ಸ್ವತಃ ಕಾಮತರೇ ವಿಜ್ಞಾನದಲ್ಲಿ, ವಿದೇಶದಿಂದಲೇ ಉನ್ನತ ಪದವಿ ಪಡೆದು ಬಂದದ್ದರಿಂದ ಈ ಬಗೆಯ ವಿಶೇಷ ತರಬೇತಿಯನ್ನು ಬೆಳೆಸಿಕೊಂಡಿದ್ದರು.*

*ಈ ಎರಡನೆಯ ಪದ್ಧತಿಯದು ವಿಜ್ಞಾನದ ವಲಯದಲ್ಲಿ ಪರಿಚಿತವಾದುದು. ಆದರೆ ಮೊದಲ ವಿಷಯ ಪ್ರತಿಯ ರೇಖಾಚಿತ್ರ ರಚನೆ ಶಾಸ್ತ್ರಿಯವರ 'ಕರ್ನಾಟಕ ವೀರಗಲ್ಲುಗಳ' ಅಧ್ಯಯನವೂ ಸೇರಿದಂತೆ ಕಾಮತರ, ಅವರ ಪತ್ನಿ ಡಾ॥ ಜ್ಯೋತ್ಸ್ನಾ ಕಾಮತರ ಪುಸ್ತಕ, ಲೇಖನಗಳಲ್ಲಿ ಧಾರಾಳವಾಗಿ ಬಳಕೆಯಾಗಿದೆ. ಶಾಸ್ತ್ರಿಯವರ ಪುಸ್ತಕದಲ್ಲಿ ಹಿಂದೆ ಹೇಳಿದ ಗುರಾಣಿಯ ಚಿತ್ರವಲ್ಲದೆ, ಕತ್ತಿ ಹಾಗೂ ಆಯುಧಗಳು, ಶಿರೋಲಂಕಾರ ಇತ್ಯಾದಿ ಹಲವಾರು ವಿನ್ಯಾಸಗಳು ರಚಿತವಾಗಿವೆ. ಜ್ಯೋತ್ಸ್ನಾರವರ ಮಧ್ಯಯುಗದ ಸಾಂಸ್ಕೃತಿಕ ಅಧ್ಯಯನಕ್ಕೆ ಉತ್ತರ ಕನ್ನಡದ ಭಟ್ಕಳ ಬಳಿಯ ಚೇತಪ್ಪಯ್ಯ ದೇವಾಲಯದ ಶಿಲ್ಪಗಳಲ್ಲದೆ ಇನ್ನೂ ಅನೇಕ ವಿಜಯನಗರ ಕಾಲದ ಶಿಲ್ಪಗಳ ರೇಖಾಚಿತ್ರವಿದೆ. ಕಾಮತರ ಪುಸ್ತಕಗಳಲ್ಲಿ ರೇಖಾಚಿತ್ರಗಳು ಹೆಚ್ಚಾಗಿ ಕಂಡುಬರುವುದು ಅವರ ಪ್ರಾಣಿ ಪರಿಸರ ಪುಸ್ತಕದಲ್ಲಿ. ಇದರಲ್ಲಿ ಗ್ರಂಥದ ಪಠ್ಯವಸ್ತು ಒಂದು ಭಾಗವಾದರೆ ರೇಖಾಚಿತ್ರಗಳು ಇನ್ನೊಂದು ಭಾಗ. ಬರಿಯ ಚಿತ್ರವಷ್ಟೇ ನೋಡುತ್ತಾ ಹೋದರೂ ಈ ಪುಸ್ತಕಕ್ಕಾಗಿಯೇ ಕಾಮತರು ಕಲೆಹಾಕಿರುವ ನೂರಾರು ಛಾಯಾಚಿತ್ರಗಳು, ಅವುಗಳ ವ್ಯವಸ್ಥಿತ ವಿಂಗಡಣೆ. ಮೂಲದಲ್ಲಿ ವಿವಿಧ ಅಳತೆಗಳಲ್ಲಿ ಇರುವ ಭಾಗವನ್ನು ಒಂದೇ ಅಳತೆಗೆ ತಂದು ಚಿತ್ರಿಸಿರುವಿಕೆ ಇತ್ಯಾದಿಗಳ ಶ್ರಮ ಆ ಬಗೆಯ ಕಾರ್ಯನಿರ್ವಹಿಸಿದವರಿಗೇ ಗೊತ್ತು. ಕಾವಿಕಲೆ ಪುಸ್ತಕಕ್ಕಾಗಿಯೂ ಇದೇ ರೀತಿ ರೇಖಾಚಿತ್ರದ ಫಲಕ* (plates) *ಮಾಡಿಕೊಂಡಿದ್ದರು.*

*ಇವೆಲ್ಲವೂ ಪ್ರಕಟವಾಗಿ ವಿವಿಧ ಕಡೆಗಳಲ್ಲಿ ದೊರೆಯುವಂತಿದ್ದು ನೋಡಸಿಗುತ್ತಿದ್ದವು. ಆದರೆ ಇಂತಹ ಇನ್ನೂ ನೂರಾರು ಫಲಕಗಳನ್ನು ಕಾಮತರು ಮಾಡಿದ್ದು ನಾನೂ ಸೇರಿದಂತೆ ಯಾರೂ ನೋಡಿರಲಿಲ್ಲ. ಅಷ್ಟೇಕೆ ಅವರು ಎರಡೂವರೆ ಲಕ್ಷ ಚಿತ್ರಗಳನ್ನು ಕ್ಲಿಕ್ಕಿಸಿದ್ದು, ಪ್ರಕಟವಾಗಿದ್ದರ ವಿನಾ ಉಳಿದವು 'ಅಗೋಚರವಾಗಿಯೇ ಇದ್ದವು - ಎಂದರೆ ಅವುಗಳನ್ನು ಬೆಳಕಿಗೆ ತರುವ ಆವಶ್ಯಕತೆ ಬರಲಿಲ್ಲ ಅಷ್ಟೇ. ಯಾರು ಯಾವ ವಿಷಯದ ಬಗ್ಗೆ ಕೇಳುತ್ತಾರೋ ಅದಷ್ಟೇ ಅವರು ಸಂಗ್ರಹಿಸಿ ಅಧ್ಯಯನ ಮಾಡಿಕೊಡುತ್ತಿದ್ದರು. ಇತಿಹಾಸ, ಸಮಾಜಶಾಸ್ತ್ರಗಳಿಂದ ಹಿಡಿದು ಕಲೆಯವರೆಗೆ ಅವರಲ್ಲಿ ಇಲ್ಲದ ಸರಕಿಲ್ಲ ಎಂಬಂತಿದ್ದರು. ಕಾವಿಕಲೆಯ ವಿನಾ ಉಳಿದ ಕಲೆಯ ಬಗ್ಗೆ ಅವರನ್ನು ಯಾರೂ ಕೇಳಲಿಲ್ಲ. ಇವರು ಬರೆಯಲಿಲ್ಲ (ಲೇಖನ ಕೇಳದೆ ಅವರಾಗೇ ಎಂದೂ ಸ್ವತಃ ಬರೆದು-ಪತ್ರಿಕೆ, ವಿಶೇಷ ಸಂಚಿಕೆಗಳಿಗೂ-ನೀಡಿದವರಲ್ಲ. ಲೇಖನಗಳ ಸರಣಿಯನ್ನೇ ಪತ್ರಿಕೆಗಳು ಕೇಳಿದ್ದುಂಟು ಅಂತಹ ಸಂದರ್ಭಗಳಲ್ಲಿ ೩-೪ ಲೇಖನ ಕಳಿಸಿ ಅವು ಪ್ರಕಟವಾದ ಮೇಲಷ್ಟೇ ಉಳಿದವು ಕಳಿಸುತ್ತಿದ್ದುದು. ಹಾಗಾಗಿ ಪೂರ್ಣ ಪ್ರಮಾಣದ ಅಪ್ರಕಟಿತ ಲೇಖನಗಳು ಎಂಬುದಿರಲಾರದು.)*

*ಈ ನೆನಪಿನ ಸಂಪುಟ ಪ್ರಕಟವಾಗುತ್ತಿರುವ ವೇಳೆಯಲ್ಲಿ ಕಾಮತರ ಕಲೆಯ ಪ್ರಪಂಚವನ್ನು ಪರಿಚಯಿಸಬೇಕೆಂದು ಜ್ಯೋತ್ಸ್ನಾ ಕಾಮತರು ತಿಳಿಸಿದಂತೆ ಅವರಲ್ಲಿಗೆ ಹೋದಾಗ ಕಾಮತರು ರೂಪಿಸಿಕೊಂಡಿದ್ದ ಮುನ್ನೂರಕ್ಕೂ ಹೆಚ್ಚು ರೇಖಾಚಿತ್ರಗಳ ಫಲಕ* (plates) *ಗಳನ್ನು ನೀಡಿದರು. ಇವುಗಳಲ್ಲಿ ಹೆಚ್ಚಿನವು ಅವರ ಮಧ್ಯಪ್ರದೇಶದ ಅಧ್ಯಯನದ್ದು. ಇವುಗಳಲ್ಲಿ ಪ್ರಾತಿನಿಧಿಕವೆಂಬಂತೆ ಸುಮಾರು ನೂರು ಹಾಳೆಗಳನ್ನು ಆರಿಸಿಕೊಂಡು ತಂದೆ. ಇವುಗಳ ಆಧಾರಿತ ಟಿಪ್ಪಣಿ ಈ ಲೇಖನ. ಇನ್ನೂ ಬಹುದೊಡ್ಡ ಸಂಗ್ರಹ ಕಾಮತರ ಮಗ ವಿಕಾಸ ಅಮೇರಿಕೆಗೆ ಒಯ್ದಿರುವುದಾಗಿ ನಂತರ ತಿಳಿದು ಬಂದಿತು.*

* * *

ಈ ಹಾಳೆಗಳಲ್ಲಿಯ ಆಕೃತಿಗಳನ್ನು ಕಾಮತರು ಮೊದಲೇ ವಿಂಗಡಿಸಿಕೊಂಡು ರಚಿಸಿದ್ದಾರೆ. ಅವುಗಳಲ್ಲಿ ೧. ಬೆಂಬೆಡ್ಕ (ಭೀಮಬೇಡಕಾ) ಪ್ರದೇಶದ ಆದಿಮ ಚಿತ್ರಗಳು ೨. ಮಧ್ಯಪ್ರದೇಶದ ವಿವಿಧ ಆದಿವಾಸಿಗಳ ದೈನಂದಿನ ಚಿತ್ರಣ ೩. ಪಕ್ಷಿ, ಆಭರಣಗಳು, ಆಟಿಕೆ, ಮುಖವಾಡಗಳು ಎಂದು ವಿಂಗಡಿಸಿ ನೋಡಬಹುದು. ಇವಲ್ಲದೆ ಕಾಪಿಕಲೆಗೆ ಸಂಬಂಧಿಸಿದಂತಹ ಫಲಕಗಳು ಬೇರೆಯಾಗಿಯೇ ಇವೆ. ಪ್ರಾಯಶಃ ಈ ಎಲ್ಲಾ ಹಾಳೆಗಳನ್ನು ಮೊದಲಿಗೆ ಕಿರಿಯ, ವಿವಿಧ ಅಳತೆಯ ಫಲಕದಲ್ಲಿ ರಚಿಸಿ ನಂತರ ಏಕರೂಪವಾಗುವಂತೆ ಒಂದೇ ಅಳತೆಯ ಹಾಳೆಗಳಲ್ಲಿ ಜರಾಕ್ಸ್ ಮಾಡಿಸಿರಿಸಿದ್ದಾರೆ. ಎಲ್ಲ ಹಾಳೆಗಳಿಗೂ ಕ್ರಮಬದ್ಧವಾಗಿ–ವಿಷಯಕ್ಕೆ ಅನುಗುಣವಾಗುವಂತೆ ಕ್ರಮಸಂಖ್ಯೆ ಹಾಕಿದ್ದಾರೆ. ದೈನಂದಿನ ದಿನಚರಿಯಲ್ಲದೆ ನೂರಾರು ಪುಸ್ತಕಗಳಲ್ಲಿ ಟಿಪ್ಪಣಿ ಹಾಕಿಕೊಂಡಿರುವರಾದರೂ ಈ ಚಿತ್ರಗಳಿಗೆ ಪ್ರತ್ಯೇಕವಾಗಿ ಟಿಪ್ಪಣಿ ಹಾಕಿದಂತಿಲ್ಲ. ಹಾಗೂ ಈ ಎಲ್ಲ ಚಿತ್ರಗಳೂ ಹಿಂದೆ ಹೇಳಿದಂತೆ ವಿಷಮಚಿತ್ರ(ನೆಗೆಟಿವ್)ಗಳ ಆಧಾರದಿಂದಲೇ ರಚಿಸಿದಂತಹವು.

ಮೊದಲಿನ ಎಂಬತ್ತಕ್ಕೂ ಹೆಚ್ಚು ಹಾಳೆಗಳು ಆದಿಮ ಹಾಗೂ ಆದಿವಾಸಿಗಳಿಂದ ರಚಿತವಾದ ಶಿಲಾಶ್ರಯದ ಚಿತ್ರಗಳು. "ಮಧ್ಯಪ್ರದೇಶದ ಮಡಿಲಲ್ಲಿ ಆದಿವಾಸಿಗಳ ಕಲೆ" ಅಧ್ಯಾಯದಲ್ಲಿ ಈ ಬಗ್ಗೆ ವಿವರಗಳಿವೆ. ಅದರಂತೆ ಚಿತ್ರಗಳು ತೀರ ದುರ್ಗಮವಾದ ಸ್ಥಳಗಳಲ್ಲಿವೆ. ಇಂದು ಸುಲಭವಾಗಿ ಹೋಗಲಾರದ, ಕಾಣಲಾರದ, ಛಾಯಾಚಿತ್ರ ತೆಗೆಯಲು ಸಾಕಷ್ಟು ಸ್ಥಳಾವಕಾಶವಿಲ್ಲದ ಸ್ಥಳಗಳಲ್ಲಿವೆ. ತೀರ ಮಾಸಿ ಹೋಗಿರುವುದರಿಂದ ಸ್ಪಷ್ಟವಾಗಿ ಚಿತ್ರ ಮೂಡುವುದಿಲ್ಲ. ಇವನ್ನು ಆದಿಮಾನವ ಕೇವಲ ವಿರಾಮದ ವೇಳೆಯಲ್ಲಿ ರಚಿಸಿದ್ದಲ್ಲ. ಭಾವುಕತೆ, ಭೀತಿ, ನಂಬಿಕೆ, ಕಷ್ಟಕುತ್ತುಗಳಿಂದ ಪಾರಾಗುವ ಹವಣಿಕೆಯಲ್ಲಿ ರಚಿಸಿದ್ದು. ಹಲವು ಕಡೆಗಳಲ್ಲಿ ಒಂದರ ಮೇಲೊಂದರಂತೆ ನಾಲ್ಕಾರು ಚಿತ್ರ ಬರೆದಿದ್ದು ಅವುಗಳಲ್ಲಿ ಪ್ರತಿಯೊಂದು ಆಕಾರಗಳ ಹೊರರೇಖೆ ವಿಭಜಿಸಿಕೊಳ್ಳುವುದೂ ತ್ರಾಸದಾಯಕ. ಕೆಂಪು, ಹಳದಿ, ಕಪ್ಪು, ಬಿಳಿ, ಹಸಿರು ಬಣ್ಣದವೆಂದು ಗುರುತಿಸಿದ್ದರಾದರೂ ಪ್ರಸ್ತುತ ರೇಖಾಚಿತ್ರ ಕಪ್ಪು ಬಣ್ಣದವು ಮಾತ್ರ. ಆದಿಮ ಕಲಾವಿದ. ಕೆಲವೇ ರೇಖೆಗಳಿಂದ, ಕಡ್ಡಿಯ ಆಕೃತಿಯಿಂದಲೇ ಭಾವಪೂರ್ಣವಾಗಿ ರಚಿಸಿದ್ದಾನೆ. ಹೆಣ್ಣು–ಗಂಡುಗಳ ವ್ಯತ್ಯಾಸವನ್ನು ಜನನೇಂದ್ರಿಯಗಳಿಂದ ಗುರುತಿಸಬಹುದು. ಕೇವಲ ಹೊರರೇಖೆ ಹಾಕಿ ಬರೆದಿರುವುದು; ಪ್ರಾಣಿಗಳ ಚಿತ್ರಣದ ಹೊರರೇಖೆಗಳ ಮಧ್ಯೆ ಅವುಗಳ ಇಡೀ ದೇಹದ ಮೇಲೆ ಹಲವಾರು ವಿನ್ಯಾಸಗಳನ್ನು ರಚಿಸಿ ಜೋಳುತನ ಹೋಗಿಸಲು ಪ್ರಯತ್ನಿಸಿರುವುದು. ಉದರ ಭಾಗದಲ್ಲಿ ಮಾತ್ರ ವಿನ್ಯಾಸ ಅಥವಾ ಬೇರೆ ಪ್ರಾಣಿಗಳ ಚಿತ್ರ ರಚಿಸಿ ಅವು ಆ ಪ್ರಾಣಿಗಳ ಹೊಟ್ಟೆಯೊಳಗೇ ಇದೆಯೇನೊ ಎಂಬಂತೆ ರಚಿಸಿರುವುದು; ಹೊರರೇಖೆ ಒಂದು ಬಣ್ಣದ್ದಾದರೆ ಒಳಗೆ ಪೂರ್ತಾ ಬೇರೆಬಣ್ಣ ಬಳಿದಿರುವುದು; ಇಲ್ಲವೆ ಕಪ್ಪು ಬಣ್ಣ ಬಳಿದು ಇಡೀ ಚಿತ್ರ 'ನೆರಳಿನ ಚಿತ್ರ' ದಂತೆ ರಚಿಸಿರುವುದು; ಬರಿದೆ ಪ್ರಾಣಿ ಅಥವ ಮನುಷ್ಯನನ್ನು ರಚಿಸಿರುವುದು; ಮನುಷ್ಯ, ಮನುಷ್ಯರು ಬಿಲ್ಲು ಬಾಣ ಸಹಿತ ಪ್ರಾಣಿ/ಪ್ರಾಣಿಗಳ ಬೇಟೆಯಾಡುತ್ತಿರುವುದು; ಬಣಗಳಂತೆ ಮನುಷ್ಯರು ಪರಸ್ಪರ ಕಾದಾಡುತ್ತಿರುವುದು. ನಾಗರಿಕರಾಗುವ ಪ್ರಯತ್ನದಲ್ಲಿ (ಸ್ಥಿರ ಜೀವನ) ಬುಟ್ಟಿ ಹೆಣೆಯುತ್ತಿರುವುದು; ನಾಯಿ, ಕೋಳಿ, ಕುದುರೆ ಪಳಗಿಸಿ ಬೆಳೆಸುವುದನ್ನು ಕಲಿತಿದ್ದು ಆ ಬಗೆಯ ಚಿತ್ರಣ ಇತ್ಯಾದಿ ಅನೇಕ ಬಗೆಯ ಚಿತ್ರಗಳು ಇವೆ. ಲೋಹ ಕಂಡುಹಿಡಿದಿದ್ದು ಆಯುಧಗಳನ್ನೂ ಹಿಡಿದಂತೆ ಚಿತ್ರಿಸಿದೆ. ಹಸ್ತ ಮುದ್ರಿಕೆಗಳಿವೆ. ಬೌದ್ಧ ಧರ್ಮದ ಪ್ರವೇಶದಿಂದಾಗಿ ಬ್ರಾಹ್ಮಿ ಲಿಪಿಯ ಬರಹ/ಅಕ್ಷರಗಳೂ ಇವೆ. ಹಾಡು, ನೃತ್ಯ, ವಿನೋದಗಳ ಚಿತ್ರಣಗಳಿವೆ. ಮುಖವಾಡಗಳು ಮಾಂತ್ರಿಕರ ರಚನೆಗಳಿವೆ. ಈ ಹಳೆಯ ಹಾಗೂ ಕಾಲಕಾಲದ ಚಿತ್ರಣಗಳು ಒಂದಾದರೆ ಇಂದಿಗೂ ಅಲ್ಲಲ್ಲಿ ನೆಲೆಸಿರುವ ಆದಿವಾಸಿಗಳ ಸಮಕಾಲೀನ ಕಲೆಯಲ್ಲೂ ಈ ಹಿಂದಿನ ಅನೇಕ ವಿನ್ಯಾಸ, ರೀತಿಗಳನ್ನು, ಆಕೃತಿ, ಹಾಗೂ ಆ ಬಗೆಯ ಆಕೃತಿಯ ರಚನೆಗೆ ಕಾರಣವನ್ನೂ ಕಾಣಬಹುದು. "ಅಂದು ಇಂದಿನವರ ಈ ಬಣಗಳ ತೌಲನಿಕ ಅಭ್ಯಾಸ ಮಾಡಿದರೆ ಮಾನವನು ತುಳಿದು ಬಂದ ದಾರಿಯ ಬಗ್ಗೆ ಹೆಚ್ಚಿನ ಜ್ಞಾನ ಸಿಗುವಂತಾಗಬಹುದು" ಎಂದು ಕಾಮತರು ಅಭಿಪ್ರಾಯಪಡುತ್ತಾರೆ (ಮ.ಮ., ಪು. ೧೦೨).

ಇಲ್ಲಿಯೇ ಹೇಳಬಹುದಾದ ಇನ್ನೊಂದು ಸಂಗತಿಯೆಂದರೆ, ಇತಿಹಾಸ ಪೂರ್ವಚಿತ್ರಗಳು. ಅದನ್ನವರು ಬೆಂಬೆಡ್ಕ ಹಾಗೂ ಪಚಮಡಿಯಲ್ಲಿ ಕಂಡಿದ್ದರು. ಅದರೆ ಇಂದಿಗೂ ಅದನ್ನೇ ಹೋಲುವಂತೆ ಆದಿವಾಸಿಗಳು ಚಿತ್ರ ಬರೆಯುತ್ತಿದ್ದು ಅದು ಈ ಸ್ಥಳಗಳಲ್ಲದೆ ಇಡೀ ಮಧ್ಯಪ್ರದೇಶದಲ್ಲಿ ಆದಿವಾಸಿಗಳು ಇರುವಲ್ಲೆಲ್ಲಾ ಕಂಡುಬರುವಂತಹವು. ಅಲ್ಲದೆ ಬೆಂಬೆಡ್ಕ ಶಿಲಾಶ್ರಯಗಳ ಆದಿಮ ಚಿತ್ರಗಳ ಬಗ್ಗೆ ವಾಕಣಕರ್, ಸಂಕಾಲಿಯ, ನ್ಯೂಮೇಯರ್ ಇತ್ಯಾದಿ ಹಲವಾರು ಸಂಶೋಧಕರು ಚಿತ್ರಸಹಿತ ಪುಸ್ತಕ ರಚಿಸಿದ್ದಾರೆ. ಹಾಗಾಗಿ ಈ ಎಲ್ಲವರ ಮಿಶ್ರಣ ಈ ಫಲಕಗಳಲ್ಲಿವೆ. ಅಂತೆಯೇ ಔರಂಗಾಬಾದ್ ಪರಿಸರದ ಎಷ್ಟು ಶಿಲಾಶ್ರಯಗಳಲ್ಲಿ ಕಾಮತರು ಚಿತ್ರ ನೋಡಿದ್ದೆಂದಾಗಲೀ ಈ ಫಲಕದಲ್ಲಿ ಅವು ಎಲ್ಲಿಯವೆಂದಾಗಲೀ ಗುರುತಿಸಿಲ್ಲ. ಹಾಗಾಗಿ ಅಧಿಕೃತವಾಗಿ ಈ ಕೃತಿಗಳ ಬಗ್ಗೆ ಹೇಳಲು

ಸಾಧ್ಯವಿಲ್ಲವಾದರೂ ಕಾಮತರ ಹಸ್ತ ಕೌಶಲ್ಯ, ಕುಂಚದಿಂದ ಎಳೆದ ದೃಢತೆ ಹಾಗೂ ವಿಂಗಡಣೆ (classification) ಗಳನ್ನು ಗುರುತಿಸಬಹುದು. ಈ ಬಗ್ಗೆ ಅವರೇ ಬರೆದಿದ್ದರೆ ಹೆಚ್ಚು ಅರ್ಥಪೂರ್ಣವಾಗಿರುತ್ತಿತ್ತು.

ಮೊದಲ ಸುಮಾರು ನೂರು ಸಂಖ್ಯೆಯ ಫಲಕಗಳಲ್ಲಿ ಪ್ರಾಣಿಗಳು ಹಾಗೂ ಬೇಟೆಯ ಚಿತ್ರಣಗಳಿವೆ. ಇವುಗಳಲ್ಲಿ ಕೇವಲ ಹೊರ ರೇಖೆಯಷ್ಟೇ ಇರುವ, ಒಳಭಾಗವೆಲ್ಲಾ ತುಂಬಿಸಿ ನೆರಳು ಚಿತ್ರಗಳಂತೆ ರಚಿಸಿರುವ ಹಾಗೂ ಕೇವಲ ರೇಖೆಗಳಲ್ಲಿ ಕಡ್ಡಿಯಂತೆ ರೂಪಿಸಿರುವ ಚಿತ್ರಣಗಳಿವೆ. ಆಕೃತಿಯ ಒಳಭಾಗ ತುಂಬಿಸುವುದರಲ್ಲೂ ಕೋಳಿ (ಫಲಕ ೧) ಚಿರತೆ (೨) (ಈ ಮುಂದೆ ಆವರಣದಲ್ಲಿರುವ ಸಂಖ್ಯೆ ಫಲಕದ ಸಂಖ್ಯೆಯಾಗಿದೆ) ಗಳಿಗೆ ಚುಕ್ಕೆಗಳಿರಿಸಿದ್ದರೆ, ನವಿಲೊಂದಕ್ಕೆ ಅಡ್ಡ ಹಾಗೂ ಉದ್ದ ಪಟ್ಟಿ ಹಾಕಿ ಚೌಕಳಿಯಂತೆ ನಿರೂಪಿಸಿದೆ. ಜಿಂಕೆಗಳಿಗೆ (೭,೮) ಅಡ್ಡಪಟ್ಟಿ ಹಾಕಿದೆ. ಇನ್ನೆರಡು ಜಿಂಕೆಗಳಿಗೆ (೯,೧೦) ಗಿಡದ ಟೊಂಗೆಯಂತೆ ಚಿತ್ರಿಸಿದೆ. ಇದೇ ರೀತಿ ಆನೆ, ಹಸುಗಳ ಮೇಲೆಯೂ ಗೆರೆಯಾಕೃತಿಗಳಿವೆ. ಆದರೆ ವೈವಿಧ್ಯವಾಗಿರುವುದು ಘೇಂಡಾಮೃಗದಂತಹ ಪ್ರಾಣಿಯ ಮೇಲೆ. (೩೭,೩೮) ಇಡೀ ದೇಹದ ಪಕ್ಕದ ಭಾಗವನ್ನು ಹಲವಾರು ಅಂಕಣಗಳಾಗಿಸಿ, ಅಡ್ಡ-ಉದ್ದಗೆರೆ, ಚೂಪಾದ ಹಾಗೂ ವರಿಳಿತದ ಅಲೆಗಳು, ಶಂಖು, ವಜ್ರಾಕೃತಿ, ತ್ರಿಕೋಣ, ಜೇನುಗೂಡಿನಂತೆ ಆರು ಕೋಣಗಳು ಇತ್ಯಾದಿಗಳಲ್ಲದೆ ಅನಿಶ್ಚಿತವಾದ ಹಲವಾರು ರೂಪಗಳಿವೆ. ಇದೇ ರೀತಿ ಸಾರಂಗವೊಂದರ ಮೇಲೆ ಸಹ ರಚಿಸಿರುವುದು (೪೯) ಚಿತ್ರಕಲೆಯ ದೃಷ್ಟಿಯಿಂದ ಅತ್ಯಂತ ಸುಂದರ ರಚನೆ. ಈ ಬಗೆಯ ಡಿಸೈನ್‌ಗಳನ್ನೇ ಪ್ರತ್ಯೇಕವಾಗಿ ಒಂದೆಡೆಗೆ ಕಾಮತರು ತಂದಿದ್ದಾರೆ (೧೮). ಕೆಲವು ಪ್ರಾಣಿಗಳ ಚಿತ್ರದಲ್ಲಿ ಅವುಗಳ ಉದರ ಭಾಗದಲ್ಲೇ ಅದೇ ರೀತಿಯ ಅಥವಾ ಬೇರೆ ರೀತಿಯ ಪ್ರಾಣಿಗಳ ಚಿತ್ರವೂ ಇವೆ. ಒಂದರಲ್ಲಿ ಜಿಂಕೆಯ ಒಡಲಲ್ಲಿ ಆನೆಯ ಚಿತ್ರವಿದೆ (೩೦). ಇವುಗಳಿಗೆ ನಿಶ್ಚಿತ ಅರ್ಥ ಹೇಳಲು ಸಾಧ್ಯವಿಲ್ಲ. ಕಲಾವಿದನ ವಿನೋದ ಪ್ರಜ್ಞೆ ಎಂದು ತಿಳಿಯಲಾಗಿದೆ.

ಪ್ರಾಣಿಗಳ ಎಲ್ಲಾ ಚಿತ್ರಣಗಳೂ ಒಂದು ಬದಿಯಿಂದ (ಪಕ್ಕದಿಂದ) ನೋಡಿದಂತೆಯೇ ರಚಿಸಿದೆ. ಸಾಮಾನ್ಯವಾಗಿ ಶಿರೋಭಾಗ ಚಿಕ್ಕದಿದ್ದು ಕುತ್ತಿಗೆ ಹಾಗೂ ಹೊಟ್ಟೆಯ ಭಾಗ ವಿಶಾಲವಾಗಿಯೂ ಕಾಲುಗಳನ್ನು ಪುಟ್ಟವಾಗಿಯೂ ರಚಿಸಿದೆ. ಈ ರೀತಿ ಮಾಡಿದಾಗಲೂ ಅದ್ಭುತವಾದ ಸಮತೋಲನ (balance) ಸಾಧಿಸಲಾಗಿದೆ. ಕೆಲವೊಮ್ಮೆ ಕೊಂಬು ಇಲ್ಲವೇ ಬಾಲಗಳನ್ನು ಅತಿಶಯಿಸಿ ಚಿತ್ರಿಸಿದೆ (೩೮). ಸ್ಪೇನ್ ಬಳಿಯ ಅಲ್ಟಮೇರ ಇತ್ಯಾದಿ ಇತಿಹಾಸ ಪೂರ್ವದ ಈ ಬಗೆಯ ಕೃತಿಗಳೂ ಸಹ ಒಂದು ಪಕ್ಕದ ನೋಟವಾಗಿದ್ದು ದೇಹದಲ್ಲಿ ಶಿರೋಭಾಗವನ್ನು ಚಿಕ್ಕದಾಗಿಯೂ ಒಡಲನ್ನು ಅತಿಶಯಿಸಿಯೂ ಕೊಂಬುಗಳನ್ನು ಉದ್ದವಾಗಿಯೂ ರಚಿಸಿದೆ. ಅಲ್ಲಿ ಒಡಲಿನ ಭಾಗದ ಜೋಳುತನ ಹೋಗಲಾಡಿಸಲು ಛಾಯಾಂಕನ' (shading) ಮಾಡಲಾಗಿದೆ ಆದರೆ ಇಲ್ಲಿ (ಬಿಂಬೆಟ್ಕ) ಒಡಲಿನ ಖಾಲಿತನ ಹೋಗಿಸಲು ಸಪಾಟಾಗಿ ಬಣ್ಣ ತುಂಬಿಸಿದೆ ಅಥವಾ ಹಲವಾರು ನಿಶ್ಚಿತ, ಅನಿಶ್ಚಿತ ಡಿಸೈನ್‌ಗಳಿಂದ ತುಂಬಿಸಿದೆ. ಒಟ್ಟಾರೆಯಾಗಿ ಇವನ್ನು ಅಸಹಜವೆಂದು ತಳ್ಳಿಹಾಕಲಾಗದು. ಇವು ಕಲಾವಿದನ ಭಾವನಾತ್ಮಕ ಕಣ್ಣುಗಳ ಕಾಣ್ಕೆ. ಮುಂದಿನ ಶತಮಾನಗಳ ಭಾರತೀಯ ಸಾಂಪ್ರದಾಯಿಕ ಚಿತ್ರಗಳಲ್ಲಿ ಕಂಡು ಬರುವ ರೇಖಾ ಪ್ರಾಧಾನ್ಯತೆ, ಅತಿಶಯಿಸುವಿಕೆ ಹಾಗೂ ಸಮತೋಲನ ತರುವಿಕೆಯನ್ನು ಈ ಬಗೆಯ ಆದಿಮ ಚಿತ್ರಗಳಿಂದಲೇ ಗುರುತಿಸಬಹುದು.

ಈ ಮಾತನ್ನು ಈ ಆದಿಮ ಚಿತ್ರಗಳಿರುವಲ್ಲಿಯೇ ಇಂದಿನ ಸಮಕಾಲೀನ ಆದಿವಾಸಿಗಳು ಹಾಗೂ ದನಗಾಹಿಗಳು ರಚಿಸಿರುವ ಚಿತ್ರಗಳೊಂದಿಗೆ ಹೋಲಿಸಿ ಸಮರ್ಥಿಸಬಹುದು. ಮಧ್ಯಪ್ರದೇಶದ ಇನ್ನೊಂದು ಭಾಗದಲ್ಲಿರುವ 'ಪಚಮಡಿ'ಯ ಶಿಲಾಶ್ರಯಗಳಲ್ಲಿ ಹಳೆಯ ಚಿತ್ರಗಳು ನಾಶವಾದರೂ ಹೊಸದಾಗಿ ಅದೇ ರೀತಿಯ ಹೊಸ ಚಿತ್ರಗಳು ಹುಟ್ಟುತ್ತವೆ ಎಂಬ ಸ್ಥಳೀಕರ ಮಾತಿನಂತೆ ಇಂದೂ ಅಲ್ಲಿಯ ಆದಿವಾಸಿಗಳು ಚಿತ್ರರಚಿಸುತ್ತಿದ್ದು ಅವು ಆದಿಮ ಚಿತ್ರಗಳನ್ನೇ ಬಹಳವಾಗಿ ಹೋಲುತ್ತವೆ. ಕಾಮತರು ನಿಖರವಾಗಿ ಚಿತ್ರ ಫಲಕಗಳಲ್ಲಿ ಸೂಚಿಸಿಲ್ಲವಾದರೂ ೨೯, ೩೦, ೫೩, ೫೯, ೬೦, ೭೦, ೭೯, ೮೦, ಇತ್ಯಾದಿ ಫಲಕಗಳಲ್ಲಿಯ ಚಿತ್ರಗಳು ಈ ಮಾದರಿಯ ಉದಾಹರಣೆಗಳೆನ್ನಬಹುದು. ಇಲ್ಲಿಯ ಎಲ್ಲಾ ಆಕೃತಿಗಳು ನೆರಳು ಚಿತ್ರಗಳಂತೆ ಪೂರ್ತಿಯಾಗಿ ತುಂಬಿಸಿರುವಂತಹವು.

ಪ್ರಾಣಿಗಳ ವೈವಿಧ್ಯ ಹಾಗೂ ರಚನಾ ಕ್ರಮಗಳಿಂದಾಗಿ ಅವುಗಳ ರಚನೆಯ ಕಾಲವಾಗಲೀ, ಬೆಳವಣಿಗೆಯಾಗಲೀ ಹೇಳಲು ಸಾಧ್ಯವಿಲ್ಲ. ಆದರೆ ಕಾಮತರು ಒಂದು ಗುಂಪಿಗೆ ಸೇರಬಹುದಾದ ಪ್ರಾಣಿ ಹಾಗೂ ಮನುಷ್ಯಾಕೃತಿಗಳನ್ನು ಒಂದೆಡೆಗೆ ತಂದಿದ್ದಾರೆ- ಜಿಂಕೆ, ಕಡವೆ, ಅಥವಾ ಆ ಬಗೆಯ (ತಳಿ, ಸ್ಪೀಷೀಸ್) ಪ್ರಾಣಿಗಳ ರಚನೆಯಲ್ಲಿ ಸ್ವಚ್ಛಂಧತೆ, ಬಿಡುಗೈ ರಚನೆ (free hand) ಕಾಣಬಹುದು. (೧,೭,೮,೧೦ ಇತ್ಯಾದಿ) ಘೇಂಡಾಮೃಗದ ರಚನೆಯಲ್ಲಿಯೂ ಅವನ್ನು ಕಲೆಗಾರ ತೀರಾ ಗಮನಿಸಿಯೇ ಬರೆದಿದ್ದಾನೆ.

(೩೭,) ಜಿಂಕೆ, ಕಡವೆಗಳು ಬೇಟೆಯ ಪ್ರಾಣಿಗಳಾಗಿದ್ದು ಘೇಂಡಾಮೃಗ ಉಪಕ್ರಮಕಾರಿಯಾಗಿದ್ದಿರಬಹುದು. ಆಮೆ (೨೯) ಮುಳ್ಳುಹಂದಿ (೫೮) ಹಲ್ಲಿ, ಮೊಲ (೫೯) ನವಿಲು(೬೦)ಗಳಲ್ಲದೆ ಸ್ಪಷ್ಟವಾಗಿ ಗುರುತಿಸಲಾಗದ ಹಲವಾರು ಪ್ರಾಣಿಗಳಿವೆ (೭೦,೭೪). ಹಕ್ಕಿಗಳ ಚಿತ್ರಣ ಬಹಳ ಕಡಿಮೆ (೩೦, ೮೦). ಒಂದು ಫಲಕವಿಡೀ ಮೀನಿನ ಚಿತ್ರವಿದೆ (೩೪) ಎಲ್ಲವೂ ಹೊರ ರೇಖೆಗಳ ಒಳಗೆ ವಿವಿಧ ರೀತಿಯ ಗೆರೆಗಳನ್ನೂ ಹಾಕಿ ರಚಿಸಿರುವಂತಹವು. ಥಕ್ಕನೆ ನೋಟಕ್ಕೆ ಮೀನಿನ ಮುಳ್ಳುಗಳ ಅಸ್ಥಿಪಂಜರದಂತೆ ಕಾಣುತ್ತವೆ. ಅಲ್ಲದೆ ಸ್ಪಷ್ಟವಾಗಿ ಗುರುತಿಸಲು ಬಾರದಂತಹ ಆಕೃತಿಗಳಿವೆ (೩೦, ೫೩, ೭೪).

ಈ ಫಲಕಗಳಲ್ಲಿ ಕುದುರೆಯ ಚಿತ್ರಣ ಬರುವದೇ ಅವುಗಳನ್ನು ಪಳಗಿಸಿ ಅವುಗಳ ಸವಾರಿ ಹೋಗುತ್ತಿರುವ ಇಲ್ಲವೆ ಬೇಟೆಗೆ (ಯುದ್ಧಕ್ಕೆ?) ಹೊಗುತ್ತಿರುವ ದೃಶ್ಯಗಳಲ್ಲಿ. (೬೭, ೬೯, ೭೦) ಈ ಹಂತದಲ್ಲಿ ಚಿತ್ರಕಲೆಯಲ್ಲಿ ಒಂದು ಮಹತ್ತರ ಬದಲಾವಣೆ ಕಂಡುಬರುತ್ತದೆ. ಈ ವರೆಗೆ ಸಹಜವಾದ ರಚನೆಯಿದ್ದುದು ಈಗ ಎರಡು ಡಬ್ಬು ಹಾಕಿದ ತ್ರಿಕೋಣಗಳಿಂದ ⋈ ಆಕಾರಗಳನ್ನು ಸುಲಭವಾಗಿ ರಚಿಸತೊಡಗಿದ. ಕುದುರೆ, ಜಿಂಕೆಗಳಿಗೆ ಅಡ್ಡಕ್ಕೆ ಬರೆದು ಮುಖ ಬಾಲಗಳನ್ನು ಹಾಕಿದರೆ, ಮನುಷ್ಯಾಕಾರಗಳಿಗೆ ಉದ್ದಕ್ಕೆ ಬರೆದು ಕಡ್ಡಿಯಂತಹ ಕೈಕಾಲು, ದುಂಡನೆಯ ಬಿಂದುವಿನಂತಹ ಮುಖ ಬರೆದು ನಿರ್ವಹಿಸಿದ್ದಾನೆ. ಈಗಾಗಲೇ ಅಧ್ಯಯನಕಾರರು ಗುರುತಿಸಿರುವಂತೆ ಈ ಬಗೆಯ (ತ್ರಿಕೋಣಾಕಾರಗಳ) ಆಕಾರಗಳು ಇಂದಿಗೂ ಭಾರತಾದ್ಯಂತ ಆದಿಮ ಹಾಗೂ ಜನಪದದಲ್ಲಿ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು. ಈ ನೆರಳು ಚಿತ್ರಗಳಲ್ಲಿ ಹಸು (೧೩), ಜಿರಾಫೆ, (೧೪) ಆನೆಗಳೂ (೭೯)ಇವೆ. ಕುದುರೆಗೆ ಜೀನು, ಕಡಿವಾಣ ಇತ್ಯಾದಿ ತೊಡಸಿ ಅಲಂಕಾರಯುತವಾಗಿಯೂ ರಚಿಸಿದೆ (೧೧, ೧೩). ಆದಿವಾಸಿಗಳು ತಮ್ಮ ಪಿತೃಗಳಿಗೆ ಹಾಕಿಸುವ ನೆನಪಿನ ಫಲಕಗಳ ಚಿತ್ರಣ (ವೀರಗಲ್ಲುಗಳನ್ನು ಹೋಲುವಂತೆ) ಪ್ರತ್ಯೇಕವಾಗಿ ರಚಿಸಿದ್ದಾರೆ (೮೧).

ಪ್ರಾಣಿಗಳಿಗೆ ಹೊರರೇಖೆ ಹಾಕಿ ದುಂಡುತನ ತಂದಿರುವುದಾದರೂ ಮನುಷ್ಯರನ್ನು ಕಡ್ಡಿಯಂತೆ ಕೇವಲ ರೇಖೆಯಲ್ಲಿ ರಚಿಸಿರುವ ಹಲವಾರು ಚಿತ್ರಣಗಳಿವೆ. (೩೫, ೩೬, ೪೪, ೪೭, ೫೫, ೫೬) ಇವುಗಳು ಒಂದೇ ಎಡೆಯಲ್ಲಿ ರಚಿಸಿರುವ ಚಿತ್ರಸಮೂಹಗಳಾಗಿರಬಹುದು. ಇವುಗಳೆಲ್ಲದರಲ್ಲೂ ಬೇಟೆಯೇ ಪ್ರಧಾನವಾಗಿದೆ. ಇವುಗಳೊಂದಿಗೆ ಬೇಟೆಯನ್ನೇ ಪ್ರತ್ಯೇಕವಾಗಿ ರಚಿಸಿದ್ದಾರೆ. (೫,೬,೨೩) ತನ್ನ ಬೇಟೆಯನ್ನು ಬೇಟೆಗಾರರು ಹೊತ್ತು ಬರುತ್ತಿರುವುದು (೪೩) ಗಮನಿಸಬಹುದು. ಉಳಿದಂತೆ ಏಕವ್ಯಕ್ತಿ ನೃತ್ಯ, ಗುಂಪು ನೃತ್ಯಗಳಿವೆ (೨೪, ೩೩, ೪೧, ೪೨, ೪೮, ೫೧) ಸರತಿಯ ಸಾಲಿನಂತೆ ನಿಂತವರು (೪೫), ರೋಗಿಯೊಬ್ಬನ ಶುಶ್ರೂಷೆಗಳೂ, (೨೪) ದೈನಂದಿನ ಜೀವನ ಚಿತ್ರಣದಲ್ಲಿ ಜೇನು ತೆಗೆಯುತ್ತಿರುವುದು (೧೭), ಮರಹತ್ತಿ ಹಣ್ಣು ಕೀಳುತ್ತಿರುವುದು, ಆಟ (೪೦, ೪೬) ಇತ್ಯಾದಿ ರಚಿತವಾಗಿದೆ. ವೈವಿಧ್ಯಮಯವಾದ ಕುದುರೆ ಅಥವಾ ಎತ್ತುಗಳನ್ನು ಕಟ್ಟಿದ ರಥಗಳನ್ನು ಒಂದೆಡೆಗೆ ತಂದಿದ್ದಾರೆ (೨೧). ಇವಲ್ಲಿ ಕೆಲವು ಮೇಲು ನೋಟದಿಂದ ನೋಡಿರುವುದು ಕುತೂಹಲಕಾರಿಯಾಗಿದೆ. ಈ ಎಲ್ಲಾ ಗೆರೆ ಚಿತ್ರಗಳಲ್ಲಿ ಕಾಮತರ ಚಿತ್ರರಚನಾ ಕೌಶಲ್ಯ ಕಾಣಬಹುದು. ಇವುಗಳಿಗೆಲ್ಲಾ ಮೂಲ ಚಿತ್ರಣ (ಛಾಯಾಚಿತ್ರ) ಇದ್ದಿರಬಹುದಾದರೂ ಗೆರೆ ಎಳೆಯುವಲ್ಲಿ ಕೈಯ ದೃಢತೆ, ರೇಖೆಗಳ ದಪ್ಪ ಕಡಪುಗಳನ್ನು ಕಾಯ್ದುಕೊಂಡು ಬರುವಿಕೆ, ರೇಖೆಗಳು ಆರಂಭವಾಗುವ ಹಾಗೂ ಅಂತಿಮವಾಗಿ ನಿಂತ ನಿಲವುಗಳ ಬಿಂದುಗಳು, ಸಲೀಸಾದ ಏರಿಳಿತಗಳ ಹರಿವು (flow) ಕಾಣಬಹುದು. ಕಾಮತರು ಮೂಲಕ್ಕೆ ಹೆಚ್ಚು ನಿಷ್ಠರಾಗಿದ್ದಾರೆ. ಇವೇ ಚಿತ್ರಗಳನ್ನು ಬೇರೆಯವರು ಇನ್ನಷ್ಟು ಸುಂದರಗೊಳಿಸಿ ರಚಿಸಿರುವುದು (ನ್ಯೂಮೇಯರ್, ಕೆ.ಕೆ. ಹೆಬ್ಬಾರ್), ಅಧ್ಯಯನದ ದೃಷ್ಟಿಯಿಂದ ಅವು ಅಪೇಕ್ಷಣೀಯವಲ್ಲ.

ಇಲ್ಲಿಯೇ ಹೇಳಬಹುದಾದುದೆಂದರೆ, ನೃತ್ಯದಲ್ಲಿಯ ಮುಖವಾಡದಂತಹ ರಚನೆ (೫,೪೧). ಆದರೆ ಕಾಮತರು ಈ ಬಗೆಯ ಮುಖವಾಡಗಳನ್ನು ಪ್ರತ್ಯೇಕವಾಗಿ ಜೋಡಿಸಿ ಕೊಟ್ಟಿದ್ದಾರೆ (೨೫, ೨೬). ವಿವಿಧ ರೀತಿಯಲ್ಲಿ ಮುಡಿ ಕಟ್ಟಿರುವಂತೆ, ಕಿರೀಟದಂತೆ ಇರುವ ವಿವಿಧ ವಸ್ತುಗಳನ್ನು ಮುಡಿದುಕೊಂಡಿರುವಂತೆ, ಪ್ರಾಣಿಗಳ ಮುಖಗಳಂತೆ ಇರುವ ಇತ್ಯಾದಿ ಸುಮಾರು ೬೦ ಬಗೆಯನ್ನು ಗುರುತಿಸಿದ್ದಾರೆ. ಇಂದಿಗೂ ಮಾರಿಯಾ ಆದಿವಾಸಿಗಳು ಧರಿಸುವ ಕೊರಡಿನಿಂದ ರಚಿತವಾದ ಮುಖವಾಡ ಹಾಗೂ ಅದನ್ನು ಧರಿಸಿದಾತನ ರೇಖಾಚಿತ್ರ ಸಹ ನೀಡಿದ್ದಾರೆ. ಅಂತೆಯೆ ಇಡೀ ಬೆಂಬೆಡ್ಕ ಪ್ರದೇಶದ ಆದಿಮ ಚಿತ್ರಗಳಲ್ಲಿ ಸ್ತ್ರೀಯ ಚಿತ್ರಣಕಡಿಮೆ ಎಂದು ಹೇಳಿದ್ದು ಕಾಮತರು ಪರಿವೀಕ್ಷಣೆಯ ಅವಧಿಯಲ್ಲಿ ದೊರೆತ ಕೆಲವು ಚಿತ್ರಗಳನ್ನು ನೀಡಿದ್ದಾರೆ (೨೨,೩೯). ಎಲ್ಲವೂ ನಗ್ನವಾಗಿದ್ದು ಸ್ತನಗಳನ್ನು ಪ್ರಧಾನವಾಗಿ ತೋರಿಸಿದೆ. ಒಬ್ಬ ಸ್ತ್ರೀಯ ಸ್ತನಗಳಿಂದ ಹಾಲು ಉಕ್ಕಿ ಸುರಿಯುತ್ತಿರುವಂತೆ ಚುಕ್ಕೆಗಳಿಂದ ತೋರಿಸಿದೆ ಹಾಗೂ ತ್ರಿಕೋಣಾಕಾರದ ಜನನೇಂದ್ರಿಯದಿಂದ ಹೆಣ್ಣನ್ನೂ, ಕಡ್ಡಿಯಂತಹದರಿಂದ ಪುರುಷನನ್ನೂ ಗುರುತಿಸಬಹುದೆಂದು ತಿಳಿಸಿದಂತೆ ಕೆಲವು ಚಿತ್ರಗಳಿವೆ. (೨೨, ೪೨).

ಆದಿಮ ಜನಾಂಗ ಕೃಷಿಕವಲ್ಲವಾದ್ದರಿಂದ ಬೇಟೆಯೇ ಪ್ರಧಾನವಾಗಿದ್ದು ಅನೇಕ ಫಲಕಗಳಲ್ಲಿ ಕಾಮತರು ಬೇಟೆಯನ್ನು ರಚಿಸಿದ್ದಾರೆ. ಕೆಲವು ಫಲಕಗಳಲ್ಲಿ ಬೇಟೆಯ ವಿಧಾನವಷ್ಟೇ ವಿಂಗಡಿಸಿದ್ದರೆ, ಕೆಲವದರಲ್ಲಿ ಭಿತ್ತಿಯ ಒಂದು ಭಾಗದ ಇಡೀ ರಚನೆಯನ್ನು ನೀಡಿದ್ದಾರೆ. ಬೇಟೆಗೆ ಸಿಲುಕಿದ, ಬಾಣದ ಏಟು ತಿಂದ, ಸೋವು ಬೇಟೆಗೆ ಸಿಲುಕಿದ ಪ್ರಾಣಿಗಳು ಕೆಲವೊಮ್ಮೆ ಆಟವೆಂಬಂತೆ ಲೀಲಾಜಾಲವಾಗಿ, ಕೆಲವೊಮ್ಮೆ ಪ್ರಯಾಸದಿಂದ, ಹೆದರಿಕೆಯಿಂದ ಓಡಿಹೋಗುತ್ತಿರುವ ಬೇಟೆಗಾರ ಅಥವಾ ಬೇಟೆಗಾರರ ಸಮೂಹ ತೋರಿಸಲಾಗಿದೆ. ಆದಿಮ ಮಾನವನ ದೈನಂದಿನ ಕೃತಿಯಾದ ಈ ಬೇಟೆಯ ಸಂಗತಿಗಳನ್ನು ಪರಿಪೂರ್ಣವಾಗಿ ಗ್ರಹಿಸಿ ಯಥಾವತ್ತಾಗಿ, ಆದರೆ ಕಲಾತ್ಮಕವಾಗಿ ಚಿತ್ರಿಸಿದ್ದು ಕಾಮತರೂ ಅಷ್ಟೇ ಚಲುವಿನಿಂದ ಮರು ರೇಖಣೆ ಮಾಡಿದ್ದಾರೆ. ಪ್ರಾಣಿಗಳಿಗೆ ಏಟು ಬಿದ್ದಿರುವುದು, ಜನರು (ಬೇಟೆಗಾರರು) ಓಡಾಡುತ್ತಿರುವುದು (೩೩), ಇಡೀ ಬೇಟೆಯ ದೃಶ್ಯ (೩೫, ೩೬, ೫೬), ಬಿಲ್ಲು ಬಾಣ ಹಿಡಿದು ಬೇಟೆ (೯,೫೫), ಈಟಿ ಹಿಡಿದು ಏಕವ್ಯಕ್ತಿಯಿಂದ ಬೇಟೆ (೫,೨೩), ಬಲೆಯಂತಹ ಒಂದು ನಿರ್ದಿಷ್ಟ ಜಾಗಕ್ಕೆ ಪ್ರಾಣಿಗಳನ್ನು ಹೋಗುವಂತೆ ಮಾಡಿ ಬೇಟೆ (೬,೪೪), ಹಲವಾರು ಮಂದಿ ವಿರುದ್ಧ ದಿಕ್ಕಿನಿಂದ ಬೇಟೆಗಾರನ ಕಡೆಗೆ ಪ್ರಾಣಿಗಳನ್ನು ಓಡಿಸಿ ಒಬ್ಬಾತ ಬೇಟೆಯಾಡುತ್ತಿರುವುದು (೫,೫೫) ಇವೇ ಮುಂತಾದ ವೈವಿಧ್ಯತೆ ಕಾಣಬಹುದು. ನಂತರದ ಕಾಲದ್ದೆನ್ನಬಹುದಾದ ಕಡುಕಪ್ಪಿನ ನೆರಳು ಚಿತ್ರಗಳಲ್ಲೂ ಬೇಟೆಯ ದೃಶ್ಯಗಳಿವೆ. ಇವು ಶಿಲಾಶ್ರಯದವೊ ಅಥವಾ ಕೊರಡಿನ ಮೇಲೆ ರಚಿಸಿದ ಸ್ಮಾರಕ ಫಲಕಗಳೋ ತಿಳಿಯಲಾಗದು. ಇವೆಲ್ಲವೂ ಕುದುರೆಯ ಮೇಲೆ ಕುಳಿತು ಬೇಟೆ ಆಡುತ್ತಿರುವ ಅಥವಾ ಬೇಟೆಗೆ ಹೋಗುತ್ತಿರುವ ದೃಶ್ಯಗಳೇ ಆಗಿವೆ. ಬೇಟೆಗಾರರು ಈಟಿ, ಬಿಲ್ಲು ಬಾಣಗಳೊಂದಿಗೆ (೧೩), ಕತ್ತಿ ಹಿಡಿದು (೧೪), ಕುದುರೆಗಳಿಗೆ ರಕ್ಷಣಾ ಕವಚ (೧೨), ರಾಜನಿಗಿರುವಂತೆ ಛತ್ರಿ ಚಾಮರ ಹಿಡಿದು (೧೧,೬೭) ಬಂದೂಕಿನಿಂದ ಹುಲಿಯ ಬೇಟೆ (೬೦) ಇತ್ಯಾದಿಗಳಿವೆ. ಕೊನೆಯವು ಇತ್ತೀಚಿನ ಚಿತ್ರಣಗಳು, ಹಾಗೂ ಇವು ಹೆಚ್ಚು ಜನಪದೀಯವಾಗಿವೆ.

ಈವರೆಗೆ ಉದಾಹರಿಸಿದ ಎಲ್ಲವೂ ಚಿತ್ರಕಲೆಗೆ ನೇರವಾಗಿ ಸಂಬಂಧಿಸಿರುವಂತಹವು. ಬೆಂಬೆಡ್ಕದ ಚಿತ್ರಗಳು ಕ್ರಿ. ಪೂ. ೨೦ ಶತಮಾನಗಳ ಹಿಂದೆ ರಚಿತವಾದದ್ದೆಂಬ ಅಭಿಪ್ರಾಯವಿದೆ. ಆದರೆ ಅಲ್ಲಿ ಇತಿಹಾಸಯುಗದ ಕುರುಹುಗಳೂ ದೊರೆತಿದ್ದು ಕಾಲಕಾಲದಲ್ಲಿ ಅಲ್ಲಿದ್ದ ಮಾನವ ಸಹ ತನ್ನ ಕಾಣಿಕೆಯನ್ನು ನೀಡಿದ್ದಾನೆ. ಈ ಪ್ರದೇಶದಲ್ಲಿ ಇಂದಿಗೂ ಇರುವ ಆದಿವಾಸಿಗಳೂ ಈ ಬಗೆಯ ಚಿತ್ರಣ ಮಾಡುತ್ತಿದ್ದಾರೆ. ಇಡೀ ಭಾರತದಲ್ಲೇ ಅತ್ಯಂತ ಹಿಂದಿನ ಕಾಲದ ಚಿತ್ರಣ ಈ ಪ್ರದೇಶದಲ್ಲಿದ್ದು ಅಲ್ಲಿಯ ಕೆಲವಂಶಗಳು ಇಂದಿನ ದೇಶದಾದ್ಯಂತ ಹಾಗೂ ಜನಪದಗಳಲ್ಲೂ ಉಳಿದು ಬಂದಿರುವುದು ಕುತೂಹಲಕರ. ಕಾಮತರ ಈ ಫಲಕಗಳು ಈ ದಿಸೆಯಲ್ಲಿ ಅಭ್ಯಾಸಯೋಗ್ಯವಾಗಿವೆ.

❋ ❋ ❋

ಚಿತ್ರಕಲೆಗೆ ನೇರವಾಗಿ ಸಂಬಂಧ ಪಡದ, ಆದಿವಾಸಿಗಳ ದೈನಂದಿನ ಜೀವನದ ಕೆಲವು ದೃಶ್ಯಗಳ ರೇಖಾಚಿತ್ರಗಳನ್ನು ಕಾಮತರು ರಚಿಸಿದ್ದಾರೆ. ಇವುಗಳಲ್ಲೂ ಹಚ್ಚೆ, ಆಭರಣ ಹಾಗೂ ದಿನನಿತ್ಯದ ಕೆಲಸ ಕಾರ್ಯಗಳು ಎಂಬಂತೆ ವಿಭಾಗಿಸಿಕೊಂಡಿದ್ದಾರೆ. ಇಲ್ಲಿಯೂ ಸಹ ನೂರೈವತ್ತಕ್ಕೂ ಹೆಚ್ಚು ಫಲಕ (plates) ಗಳಲ್ಲಿ ಪ್ರಾತಿನಿಧಿಕವಾಗಿ ಕೆಲವನ್ನು ಆಯ್ಕೆ ಮಾಡಿದೆ. 'ಮಧ್ಯಪ್ರದೇಶದ ಮಡಿಲಲ್ಲಿ' ಕೃತಿಯಲ್ಲಿ ಆದಿವಾಸಿಗಳ ಹಚ್ಚೆಯ ಬಗ್ಗೆ ಒಂದು ಅಧ್ಯಾಯ ಇರಿಸಿದ್ದಾರೆ. ಅದರಲ್ಲಿ ಹಚ್ಚೆಗೆ ಕಾರಣ, ವೈವಿಧ್ಯ, ವಸ್ತು ಇತ್ಯಾದಿಗಳ ಬಗ್ಗೆ ವಿವರಿಸಿದ್ದಾರೆ. ಹಚ್ಚೆಯ ನಕ್ಷೆಗಳು ಬಿಂದು ಮತ್ತು ರೇಖೆಗಳ ಜೋಡಣೆಯಿಂದಲೇ ರಚಿಸಲಾಗುತ್ತದೆ. ಬಿಂದುಗಳನ್ನು ಉದ್ದ ಅಗಲವಾಗಿ ತ್ರಿಕೋನ, ಚೌಕೋನ, ವರ್ತುಲದಲ್ಲಿ ಬಳಸಿಕೊಳ್ಳಲಾಗುತ್ತದೆ. ರೇಖೆಗಳನ್ನು ಉದ್ದ, ಅಗಲವಾಗಿ ಜೋಡಿಸಿಕೊಳ್ಳುವುದಲ್ಲದೆ ಖಾತಿ, ಜಾಲ, ತಿರುಮುರುಗಳಾಗುವಂತೆ ಮಾಡಿರುತ್ತಾರೆ. ಈ ಆಕೃತಿಗಳು ರಂಗೋಲಿಯನ್ನು ಹೋಲುತ್ತವೆಯಲ್ಲದೆ ರೇಖಾಗಣಿತದ (geomentry) ಪರಿಚಯ ಇಲ್ಲದ ಇವರ ಆ ಬಗೆಯ ರಚನೆ ಆಶ್ಚರ್ಯಕರವಾದುದು. ತ್ರಿಕೋನ, ಕಾಟಕೋನ, ಚೌಕೋನ, ಚಚ್ಚೌಕಗಳ ಬಳಕೆಯಾಗಿದೆ. ತಾವು ವಾಸಿಸುವ ಪರಿಸರದ ಪ್ರಜ್ಞೆಯಿಂದಾಗಿ ಸಸ್ಯಗಳನ್ನು ಹೋಲುವ ರಚನೆಗಳು ಕಂಡುಬರುತ್ತವೆ. ಸರಳ ರೇಖೆಯೊಂದಕ್ಕೆ ಮೂರು ಬಿಂದುಗಳನ್ನು ಸೇರಿಸಿದರೆ ಗಿಡದ ಟೊಂಗೆಯ ಭಾಗವೆಂದು ಸುಲಭವಾಗಿ ತಿಳಿದುಬರುತ್ತದೆ. ಲತೆ, ಕಳ್ಳಿಯ ಗಿಡಗಳೂ ಅಷ್ಟೇ ಶಕ್ತಿಯುತವಾದ ರಚನೆಗಳಾಗಿವೆ. ಹೂಗಳ ರಚನೆಯಲ್ಲಿ ಅವುಗಳ ನೈಜತೆಗೆ ಹೆಚ್ಚು ಒತ್ತು ನೀಡದೆ ಕೇವಲ ರೇಖೆ, ಬಿಂದುಗಳಿಂದಲೇ ವೈವಿಧ್ಯತೆ ಸಾಧಿಸಿದ್ದಾರೆ.

ಕಷ್ಟಕರ ರಚನೆ ಎನ್ನಿಸುವ ಮಾನವಾಕೃತಿಗಳನ್ನು ಹಚ್ಚೆಯಲ್ಲಿ ಕಾಣಬಹುದು. ಒಂದು ವರ್ತುಲ ಬಿಂದು ಹಾಗೂ ಎರಡೂ ಮೂರು ರೇಖೆಗಳಲ್ಲಿ ಮಾನವಾಕಾರ ಮೂಡಿಸಬಲ್ಲರು. ಅಷ್ಟೇ ಅಲ್ಲ ಅವರು ಹಾಡುತ್ತಿರುವಂತೆ, ನರ್ತಿಸುತ್ತಿರುವಂತೆ ವಾದ್ಯನುಡಿಸುತ್ತಿರುವವರನ್ನು

ರೂಪಿಸಬಲ್ಲರು. ಮಿತವಾದ ರೇಖೆಗಳಿಂದಲೇ ಹಂಸ, ಕೋಳಿ, ನವಿಲುಗಳನ್ನೂ ರಚಿಸುತ್ತಾರೆ. ಬೆಟ್ಟಗಳ ಮಧ್ಯೆ ಉದಯ ಸೂರ್ಯ, ಕಾದಾಟದಲ್ಲಿ ತೊಡಗಿರುವ ಕುಕ್ಕುಟಗಳು, ಮರವೇರಿದ ನವಿಲು ಸಹ ಕಾಣಸಿಗುತ್ತವೆ. ಈ ಬಗೆಯ ಬಿಂದು, ವರ್ತುಲ, ಜ್ಯಾಮಿತಿಯ ಆಕಾರಗಳು, ಗಿಡ-ಬೊಂಗೆಗಳು, ಪಕ್ಷಿ, ಮಾನವಾಕಾರ ಇತ್ಯಾದಿಗಳನ್ನು ಸಾಲು ಸಾಲಾಗಿ ಜೋಡಿಸುತ್ತಾ ಹೋಗುವುದರಿಂದ ಒಂದು ವಿಶಾಲವಾದ ನಕ್ಷೆಯಂತಹ ರಚನೆಗಳಾಗುತ್ತವೆ. ಈ ಪುಟ್ಟ ಆಕಾರಗಳನ್ನು ಆಶಯ (motif) ಎಂದು ಪರಿಗಣಿಸಿದರೆ ಅವುಗಳ ಸುತ್ತು ಬಳಕೆಯಿಂದ (permutation-combination) ಒಂದು ಸಂಯೋಜಿತ (composition) ಚಿತ್ರ ತಯಾರಾಗುತ್ತದೆ. ನಮ್ಮ ರಂಗೋಲಿ, ಕಾವಿಕಲೆಗಳಲ್ಲಿ ಈ ಬಗೆಯ 'ಆಶಯ'ಗಳು ಕಡಿಮೆಯಿವೆ. ಆದರೆ ಮಧ್ಯಪ್ರದೇಶದ ಆದಿವಾಸಿಗಳ ಹಚ್ಚೆ ಚಿತ್ರಗಳಲ್ಲಿ ವಿಪುಲವಾದ 'ಆಶಯಗಳನ್ನು' ಕಾಣಬಹುದು. ಬಹಳ ಹಿಂದೆಯೇ ೧೯೦೧ರ ಜನಗಣತಿಯ ವರದಿಯಲ್ಲಿ ದಕ್ಷಿಣ ಭಾರತದಲ್ಲಿ ಕಂಡುಬರುವ ಹಚ್ಚೆಯ ವಿನ್ಯಾಸಗಳನ್ನು ನೀಡಿದ್ದು ಇಂದಿಗೂ ಮತ್ತೆ ಮತ್ತೆ ಅವೇ ಉದಾಹರಿಸಲಾಗುತ್ತಿದೆ. ಆದರೆ ಕಾಮತರ ಈ ಅಧ್ಯಯನ ವಿಭಿನ್ನ ಕಾಣಿಕೆಯಾಗಿದೆ.

ಇದರೊಂದಿಗೇ ಕಾಮತರು ಹಚ್ಚೆಯಲ್ಲಿ (ಮಧ್ಯಪ್ರದೇಶದ ಆದಿವಾಸಿಗಳಲ್ಲಿ) ಆಗುತ್ತಿರುವ ಬದಲಾವಣೆ ಸಹ ಗುರುತಿಸಿದ್ದಾರೆ. "ಕೆಲವು ಸುಧಾರಕರೊಡನೆ ಸಂಪರ್ಕದಲ್ಲಿ ಬಂದ ಆದಿವಾಸಿಗಳು ಹಿಂದೂ ದೇವ ದೇವತೆಗಳ ಹಚ್ಚೆ ಹಾಕಿಕೊಳ್ಳುತ್ತಾರೆ. ಭಿಲಾದಲಾದ ಕಬ್ಬಿಣ ಅದಿರಿನ ಗಣಿಗಳಲ್ಲಿ ಕೆಲಸ ಮಾಡುವವರು ನಾಗರಿಕ ಸಹವಾಸದಿಂದಾಗಿ ಅಶ್ಲೀಲ ಚಿತ್ರಗಳನ್ನು ಅಭಿಮಾನದಿಂದ ಧರಿಸುತ್ತಾರೆ ಎಂದು ಹೇಳುತ್ತಾರೆ. (ಮ.ಮ. ೬೦) ಎಷ್ಟು ಹಾಗೂ ದೇಹದ ಯಾವ ಭಾಗದಲ್ಲಿ ಯಾವ ಹಚ್ಚೆ ಹಾಕಿಸಿಕೊಳ್ಳಬೇಕೆಂಬುದು ವೈಯಕ್ತಿಕ ಅಭಿರುಚಿಯಿರಬಹುದು. ಸಾಮಾನ್ಯವಾಗಿ ಬಟ್ಟೆಯಿಂದ ದೇಹದ ಭಾಗ ಮುಚ್ಚದ ಕೈಕಾಲುಗಳ ಮೇಲೆ ಹಚ್ಚೆ ಇರುತ್ತವೆ. ದೋಲಾನ ಆದಿವಾಸಿಗಳು ಹಣೆ, ಕಪೋಲ, ಗಲ್ಲಗಳ ಮೇಲೂ, ಗೊಂಡರು ಪಾದ, ಮೊಳಕಾಲುಗಳ ಮೇಲೂ, ಹೆಚ್ಚು ಬಟ್ಟೆ ಧರಿಸುವ ಭಿಲ್ಲರು ಕೈಗಳಿಗೆ ಮಾತ್ರ ಸೀಮಿತವಾಗಿಯೂ, ಬೈಗಾಗಳು ದೇಹದ ಹೆಚ್ಚಿನ ಭಾಗಗಳಲ್ಲೂ ಉರವರು ದೇಹದ ಒಂದಿಷ್ಟು ಸ್ಥಳವನ್ನು ಬಿಡದೆ ಇಡಿಯಾಗಿಯೂ ಹಚ್ಚೆಯನ್ನು ಹಾಕಿಸಿಕೊಳ್ಳುತ್ತಾರೆ. ಗೊಂಡ ಸ್ತ್ರೀಯರು ಫಲವತ್ತತೆಯಾಗಬೇಕೆಂದು ಬಾಳೆ, ತೆಂಗುಗಳ ಚಿತ್ರಗಳನ್ನು ಹಾಕಿಸಿಕೊಳ್ಳುವರಾದರೂ ಹಚ್ಚೆ ಹಾಕುವರ ಪರಂಪರೆ, ಕಲ್ಪನೆ, ಆಸಕ್ತಿಗಳ ಮೇಲೂ ವಿನ್ಯಾಸಗಳು ರಚಿತವಾಗುತ್ತವೆ. ಪ್ರತಿಯೊಂದು ಆದಿವಾಸಿ ತಂಡದವರಿಗೆ ನಿರ್ದಿಷ್ಟ ರೀತಿಯಲ್ಲಿ ಹಚ್ಚೆ ಹಾಕುವುದರಿಂದ ಈ ಆಧಾರದ ಮೇಲೆಯೆ ಅವರು ಯಾವ ಗುಂಪಿಗೆ ಸೇರಿದವರು ಎಂದು ನಿರ್ಧರಿಸಬಹುದು ಎಂದು ಕಾಮತರು ಹೇಳುತ್ತಾರೆ. ಹಾಗೂ ಈ ಕುರಿತೇ ಪ್ರತ್ಯೇಕ ಫಲಕಗಳನ್ನು ಮಾಡಿದ್ದಾರೆ. ಕೆಲವೇ ಆಕೃತಿಗಳಿರುವ ಮಾರಿಯಾ (೧೦೦) ಕಾಲು  ಕೈಗಳ ಮೇಲೆ ಹಚ್ಚೆಯಿರುವ ಗೊಂಡ (೧೦೩) ಹೆಚ್ಚಿನಂಶ ಬಟ್ಟೆಯಿಂದ ಮುಚ್ಚಿರುವ ಭಿಲ್ಲ ಸ್ತ್ರೀ (೧೦೪), ಕೈ ಕಾಲುಗಳಲ್ಲದೆ ಎದೆಯ ಭಾಗದಲ್ಲೂ ಹಚ್ಚೆಯಿರುವ ಬೈಗಾ (೧೦೫) ಆಧುನಿಕ ದಿರಸಿನ ಸ್ತ್ರೀ ಎನ್ನಬಹುದಾದ ಉರವ (೧೦೬), ನಾಲ್ಕೇ ಆಕೃತಿಯ  ಕೋಲ ಸ್ತ್ರಿ (೧೦೭) ಗಳನ್ನು ಕುರಿತು ವಿಂಗಡಿಸಿದ್ದಾರೆ. (ಫಲಕ ೧೦೦ರಲ್ಲಿ ಕೇವಲ ಕೆಲವು ಹಚ್ಚೆಯ ವಿನ್ಯಾಸಗಳಿದ್ದರೆ ೧೦೮ರದು ಅಪೂರ್ಣವಾಗಿದ್ದು ಚಿತ್ರಿತ ಸ್ತ್ರೀಯರ ಗುಂಪಿನ ಹೆಸರಿಲ್ಲ. ಮಧ್ಯಪ್ರದೇಶದ ಮಡಿಲಲ್ಲಿ ಪುಸ್ತಕದ 'ಹಚ್ಚೆ' ಕುರಿತ ಅಧ್ಯಾಯದಲ್ಲಿ ಆವರಣದಲ್ಲಿ ಚಿತ್ರಗಳ ಸಂಖ್ಯೆಗಳೆಂದು ಗುರುತಿಸಿದ್ದಾರಾದರೂ ಮುದ್ರಿತ ಪುಸ್ತಕದಲ್ಲಿ ಚಿತ್ರಗಳಿಲ್ಲ. ಪ್ರಾಯಶಃ ಪ್ರಸ್ತುತ ಅಧ್ಯಯನ ಮಾಡಿರುವ ಅಥವಾ ಆ ಬಗೆಯ ಚಿತ್ರಗಳು ಅಲ್ಲಿ ಬರಬೇಕಾಗಿರಬಹುದು)

ಈ ರೀತಿಯ ವಿಂಗಡಣೆ ಒಂದು ಗುಂಪಿನ ಬುಡಕಟ್ಟು ಸ್ತ್ರೀಯ-ಒಬ್ಬ ಅಥವಾ ಹಲವಾರು - ಒಟ್ಟು ಹಚ್ಚೆಗಳ ವಿನ್ಯಾಸಗಳೆಂದು ಹೇಳಬಹುದು ಎಂದರೆ ಒಟ್ಟಾರೆಯಾಗಿ ಇರಬಹುದಾದ ಹಚ್ಚೆಯ ಎಲ್ಲ ವಿನ್ಯಾಸಗಳನ್ನು ಒಂದೆಡೆ ತಂದು ಕಾಮತರು ಅಧ್ಯಯನ ಮಾಡಿದ್ದಾರೆ. ಪ್ರತೀ ಆದಿವಾಸಿ ಜನಾಂಗದ ಬುಡಕಟ್ಟುಗಳಲ್ಲಿಯ ಹಚ್ಚೆ ವಿನ್ಯಾಸ ಪ್ರತ್ಯೇಕಿಸಿದ್ದು ಮಧ್ಯಪ್ರದೇಶದ ಪ್ರವಾಸಿ ಕಥನಗಳಲ್ಲಿ ಇನ್ನೂ ಅನೇಕ ಬುಡಕಟ್ಟುಗಳನ್ನು ಉದಾಹರಿಸಿದ್ದಾರೆ.

ಆದಿವಾಸಿಗಳ ಆಭರಣಗಳ ಬಗ್ಗೆ ಕಾಮತರು ಇನ್ನೂ ಹೆಚ್ಚಿನ ಅಧ್ಯಯನ ಮಾಡಿದಂತಿದೆ. (ಈ ಕುರಿತು ನೂರಕ್ಕೂ ಹೆಚ್ಚು ಫಲಕಗಳನ್ನು ಮಾಡಿಕೊಂಡಂತಿದೆ: ಸಂಖ್ಯೆ ಸುಮಾರು ೩೩೦ ರಿಂದ ೪೦೭ ಕ್ಕೂ ಹೆಚ್ಚು. ಈ ಲೇಖನದ ಸಲುವಾಗಿ ಇವುಗಳಿಂದ ಆರು ಫಲಕಗಳನ್ನು ಆಯ್ಕೆ ಮಾಡಿದೆ). "ಆದಿವಾಸಿ ಹೆಂಗಳೆಯರು ಅಲಂಕಾರ ಪ್ರಿಯರು. ಅಲಂಕಾರ ಸೌಂದರ್ಯದ ಸಾಧನವಾದಂತೆ ಸಿರಿವಂತಿಕೆಯ ಸಂಕೇತವೂ ಹೌದು. ಅಂತೆಯೇ ಸ್ತ್ರೀಯರು ತಮ್ಮ ಆಭರಣ, ಹಚ್ಚೆಗಳನ್ನು ಹೆಚ್ಚಿಸುವ ಕನಸು ಕಾಣುತ್ತಿರುತ್ತಾರೆ. ಸಂತೆಗೂ, ಜಾತ್ರೆಗೂ, ಹೊರಟ ಆದಿವಾಸಿ ನಾರಿ ಮದುಮಗಳಿಗಿಂತ ಹೆಚ್ಚು ಆಕರ್ಷಕವಾಗಿ ಅಲಂಕರಿಸಿಕೊಳ್ಳುತ್ತಾಳೆಂದರೆ

ಅತಿಶಯೋಕ್ತಿಯಾಗಲಾರದು.... ಕಾಲಿಗೆ ನಾಲ್ಕೈದು ಆಭರಣಗಳನ್ನು ತೊಡುವಂತೆ ಮೂಗುತಿಯೂ ಬೇಕು. ಅವಳಿಗೆ, ಕೊರಳಿಗೆ ನಾಣ್ಯಗಳ ಸರ, ಗೋವು, ವಿವಿಧ ಬಣ್ಣಗಳ ಸರ ಇದ್ದಿರಬೇಕು. ವಂಕಿ, ಬಳೆ, ಉಂಗುರಗಳು  ಕೈಗೆ ಇದ್ದಂತೆ ಕಡಗ, ಗೆಜ್ಜೆಗಳು ಕಾಲಿಗೆ ಇದ್ದಿರಬೇಕು" (ಮ.ಮಡಿಲಲ್ಲಿ, ಪು. ೯೧) ಎಂದು ಹೇಳಿರುವ ಕಾಮತರು ಕೈಯ ಬಳೆ, ಸರ, ಕಾಲ ಆಭರಣ, ಪಾದದ ಎಲ್ಲಾ ಬೆರಳಿಗೆ ಹಾಕಿಕೊಳ್ಳುವ ಆಭರಣ, ಕಿವಿಯ ಆಭರಣ ಇತ್ಯಾದಿಯಾಗಿ ಪ್ರತ್ಯೇಕವಾಗಿ (ಫಲಕದಲ್ಲಿ ಆರೇಳು ಇರುವಂತೆ) ವಿಂಗಡಿಸಿಕೊಟ್ಟಿದ್ದಾರೆ. ಕೆಲವು ತೀರ ಸರಳವಿದ್ದರೆ ಕೆಲವು ಪಲವಾರು ಸುಳಹು ಪೊಳಹು, ನಕ್ಷೆ ಕೆಲಸಗಳಿಂದ ತುಂಬಿಸಿ ಆಕರ್ಷಕವಾಗಿ ರೂಪಿಸಿದೆ. ಪ್ರಾಯಶಃ ಈ ಆಭರಣಗಳನ್ನು ತಯಾರಿಸಲು ಪ್ರತ್ಯೇಕವಾದ ಅಕ್ಕಸಾಲಿಗರ ಪಂಗಡ ಇದ್ದಂತಿಲ್ಲ. ಜನಾಂಗದಲ್ಲೇ ಯಾರಾದರೂ ಒಂದು ಕಸುಬಾಗಿ ಇಲ್ಲವೆ ಉಪಕಸುಬಾಗಿ ಸ್ವೀಕರಿಸಿರಬಹುದು. ಆಭರಣಗಳೊಂದಿಗೆ ಕಟ್ಟಿಗೆಯ ಅಥವಾ ಲೋಹದ ಶಿಲ್ಪಗಳನ್ನು ರಚಿಸುವವರೂ ಇದ್ದಾರೆ. ಅವರಲ್ಲಿ ಘರೇವಾ ಜನರ ಲೋಹದ ಶಿಲ್ಪಗಳು ಇಂದು ಕರಕುಶಲ ಕಲೆಯಂತೆ ರಚನೆಯಾಗುತ್ತಿವೆ. ಭಾರತದಾದ್ಯಂತದ ಕರಕುಶಲ ಪ್ರದರ್ಶನ, ಮಳಿಗೆಗಳಲ್ಲದೆ ವಿದೇಶಗಳಿಗೂ ರಫ್ತಾಗುತ್ತಿವೆ. ಆದರೆ ೧೯೭೬ರ ವೇಳೆಯಲ್ಲಿ ಕಾಮತರು ಮಧ್ಯಪ್ರದೇಶದಲ್ಲಿ ವ್ಯಾಪಕವಾಗಿ ಸಂಚರಿಸಿದಾಗ ಈ ಕಲೆಗೆ ಹೆಚ್ಚಿನ ಆದ್ಯತೆ ಇದ್ದಿರಲಾರದು. (ಈ ಸುಮಾರಿನಲ್ಲಿಯೇ ಕಮಲಾದೇವಿ ಚಟ್ಟೋಪಾಧ್ಯಾಯ ಮುಂತಾದವರ ಪರಿಶ್ರಮದಿಂದಾಗಿ ಭಾರತೀಯ ಜನಪದ ಕಲೆಗಳು ಕರಕುಶಲ ಕಲೆಗಳಂತೆ ರಚಿತವಾಗುವಂತಾದವು) ಈ ಬಗೆ ಲೋಹದ ಶಿಲ್ಪಗಳ ತಯಾರಿಕೆಯ ಬಗ್ಗೆ ವಿವರವಾಗಿ ಬರೆದಿದ್ದು ಶಿಲ್ಪಗಳ ರೇಖಾಚಿತ್ರ ಫಲಕಗಳೂ ಇವೆ. (೩೩೧, ೩೩೨ ಇತ್ಯಾದಿ)

ಉಳಿದಂತೆ ಕಾಮತರ ರೇಖಾಚಿತ್ರಗಳಲ್ಲಿ ಹೇಳಬಹುದಾದ್ದೆಂದರೆ ಆದಿವಾಸಿಗಳ ದೈನಂದಿನ ಬದುಕಿನ ದೃಶ್ಯಗಳು. ಫಲಕಗಳ ಸಂಖ್ಯೆಯಲ್ಲಿ ಇನ್ನೂರರ ಸುಮಾರಿನಿಂದ ಆರಂಭಿಸಿ ಒಂದು ನೂರಾದರೂ ಫಲಕ ಮಾಡಿಕೊಂಡಂತಿದೆ. ಮನೆ ಕೆಲಸ ಮಾಡುತ್ತಿರುವುದು, ಮಕ್ಕಳೊಂದಿಗೆ ಜಾತ್ರೆಗೆ ಹೋಗುತ್ತಿರುವುದು. ಹರಟೆ ಹೊಡೆಯುತ್ತಿರುವುದು ಇವೇ ಮುಂತಾದ ದೃಶ್ಯಗಳನ್ನು, ಯಾವುದೇ ಹಿನ್ನೆಲೆಯಿಲ್ಲದೆ ವ್ಯಕ್ತಿಯೇ ಪ್ರಧಾನವಾಗಿ, ಸ್ತ್ರೀ-ಪುರುಷರಿಗೆ ಬೇರೆ ಬೇರೆಯೆಂಬಂತೆ, ಕ್ರಿಯೆಗಳಿಗೆ ತಕ್ಕಂತೆ ವಿಂಗಡಿಸಿ ಫಲಕಗಳನ್ನು ರಚಿಸಿದ್ದಾರೆ. ಇವೂ ಸಹ ಛಾಯಾಚಿತ್ರಗಳ ಆಧಾರದಿಂದಲೇ ರಚಿಸಿರುವಂತಹವು. ಕಾಮತರ ಕೆಲವು ಪುಸ್ತಕಗಳಲ್ಲಿ ಪತ್ರಿಕಾ ಲೇಖನಗಳಲ್ಲಿ ಛಾಯಾಚಿತ್ರಗಳನ್ನೂ ನೇರವಾಗಿ ಮುದ್ರಣಕ್ಕೆ ನೀಡಿದ್ದಾರೆ. ಮೂರು ದಶಕಗಳ ಹಿಂದೆ ಈ ಪ್ರದೇಶದ (ಅಥವ ಒಟ್ಟಾರೆಯಾದ) ಸಂಚಾರದಲ್ಲಿದ್ದಾಗ ಇಂದಿನಂತೆ ಸುಧಾರಿತ ಕ್ಯಾಮರಗಳಾಗಲಿ, ಬಣ್ಣದ ಛಾಯಾಚಿತ್ರವಾಗಲೀ ಇರಲಿಲ್ಲ. ಕ್ಯಾಮರಾದ ಅಪರ್ಚರ್ ಸಹ ತೀರ ಕಡಿಮೆಯದು. ಟೆಲಿ ಲೆನ್ಸ್‌ನದು ಇನ್ನೂ ಕಡಿಮೆಯದು. ಕಾಡಿನ ಪ್ರದೇಶದಲ್ಲಿ ಬೆಳಕಿನ ಸಮಸ್ಯೆ ಕೂಡ ಅತಿ ಹೆಚ್ಚಿನದು. ಹೀಗಾಗಿ ಕಾಮತರು ತೆಗೆದ ಚಿತ್ರಗಳಲ್ಲಿ ಅಸ್ಪಷ್ಟವಾಗಿ ಮೂಡಿದವುಗಳನ್ನು ಈ ರೀತಿ ರೇಖಾಚಿತ್ರವಾಗಿ ರಚಿಸಿ ಸ್ಪಷ್ಟಗೊಳಿಸಲು ಪ್ರಯತ್ನಿಸಿದಂತಿದೆ. ಕಾಮತರು ಪೂರ್ಣ ಪ್ರಮಾಣದ ಚಿತ್ರಕಾರರಲ್ಲದ್ದರಿಂದ ಈ ಚಿತ್ರಗಳ ಮಾನವಾಕಾರಗಳಲ್ಲಿ ದೇಹರಚನೆ (ಅನಾಟಮಿ) ಮೀರಿದಂತಿದೆ. ಆದರೂ ವ್ಯಕ್ತಿಗಳ ಕ್ರಿಯೆಯಲ್ಲಿ ಅವರ ತನ್ಮಯತೆ ಸಹಜತೆ, ಬೆಡಗು, ಬಿನ್ನಾಣ, ವಿನಯ-ದರ್ಪ ಇವೇ ಮುಂತಾದವು ಯಶಸ್ವಿಯಾಗಿ ಮೂಡಿ ಬಂದಿವೆ.

ಛಾಯಾಚಿತ್ರಗಳು ಮೂಲಕ್ಕೆ ಹೆಚ್ಚು ಹತ್ತಿರವಾಗಿದ್ದು ಬರಹಕ್ಕೂ ಪೂರಕವಾಗಿ ನೀಡಬಹುದಾದರೂ, ಕೆಲವು ಸಂದರ್ಭಗಳಲ್ಲಿ ರೇಖಾ ಚಿತ್ರ ರೂಪಕ್ಕೆ ಬದಲಿಸಬೇಕಾದುದು ಅನಿವಾರ್ಯ. ಕಲೆಯಂತಹ ದೃಶ್ಯ ಮಾಧ್ಯಮಗಳ ಬಗ್ಗೆ ಬರುವ ಪ್ರೌಢ ಸಂಶೋಧನಾ ಗ್ರಂಥಗಳಲ್ಲಿ ವಿಷಯ ವಿಂಗಡಣೆಗೆ (classification) ಅನುಸಾರವಾಗಿ ರೇಖಾಚಿತ್ರಗಳನ್ನು ಒಂದೆಡೆ ನೀಡಿ ಕೊನೆಯಲ್ಲಿ ಛಾಯಾಚಿತ್ರಗಳನ್ನು ಮುದ್ರಿಸಿರುವುದುಂಟು. ಆದರೆ ಅನೇಕ ಸಂದರ್ಭಗಳಲ್ಲಿ ರೇಖಾಚಿತ್ರಗಳನ್ನು ನುರಿತ ಕಲಾವಿದರು ರಚಿಸುವುದರಿಂದಾಗಿ ಮೂಲದಿಂದ ಹೊರತಾದ ಕಲಾತ್ಮಕತೆ ತಲೆಹಾಕಿ ಅಧ್ಯಯನ ಪರಿಪೂರ್ಣವಾಗದು. ಆದರೆ ಕಾಮತರ 'ವೈಜ್ಞಾನಿಕ ಛಾಯಾಗ್ರಹಣ' ಹಾಗೂ ಅದರ ಮೂಲಕ ರಚಿಸಿದ ರೇಖಾಚಿತ್ರಗಳೇ ಮೂಲಕ್ಕೆ ಹೆಚ್ಚು ಸಮೀಪವಾಗಿವೆ. ಹಾಗೂ ಛಾಯಾಚಿತ್ರದ ಅನಾವಶ್ಯಕ ಭಾಗಗಳನ್ನು ನಿವಾರಿಸಿ ವಿಷಯಕ್ಕೆ ತಕ್ಕಂತೆ ವಿಭಜಿಸಿಕೊಳ್ಳಲು, ಮೂಲದ ಬೇರೆ ಬೇರೆ ಅಳತೆಯ ಆಕಾರಗಳನ್ನು ಒಂದೆಡೆಗೆ ಒಂದೇ ಅಳತೆಗೆ ತಂದುಕೊಡಲು ಸಾಧ್ಯವಾಗಿದೆ. ಆದಿವಾಸಿಗಳ ಕನಿಷ್ಠತಮ ಉಡುಗೆಗೂ ಛಾಯಾಚಿತ್ರಕ್ಕಿಂತ ರೇಖಾಚಿತ್ರಗಳಿಗೇ ಹೆಚ್ಚು ಸೂಕ್ತವೆನಿಸುತ್ತದೆ. ಈ ಎಲ್ಲದರ ಬಗ್ಗೆ ಹಾಗೂ ತಮ್ಮ ಛಾಯಾಗ್ರಹಣದ ಬಗ್ಗೆಯೂ ಕಾಮತರ ವಿವಿಧ ಪುಸ್ತಕಗಳಲ್ಲಿ ಸಾಕಷ್ಟು ಮಾಹಿತಿಗಳಿದ್ದು ಅವೇ ಒಂದು ಪ್ರತ್ಯೇಕ ಲೇಖನವಾಗುವಂತಿವೆ.

❑

# ಡಾ। ಕೃಷ್ಣಾನಂದ ಕಾಮತರ ಕಾದಂಬರಿ 'ಭಗ್ನಸ್ವಪ್ನ'

ಡಾ. ಜಿ.ಎಂ. ಹೆಗಡೆ

ಡಾ. ಕೃಷ್ಣಾನಂದ ಕಾಮತರು ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಅತ್ಯಂತ ಪ್ರಮುಖ ಲೇಖಕರು. 'ನಾನೂ ಅಮೇರಿಕೆಗೆ ಹೋಗಿದ್ದೆ'. ಪ್ರವಾಸ ಸಾಹಿತ್ಯ ಧಾರವಾಡದ ಮನೋಹರ ಗ್ರಂಥಮಾಲೆಯ ಮೂಲಕ ಪ್ರಕಟವಾದಾಗ ಅದಕ್ಕೆ ಸಿಕ್ಕ ಜನಪ್ರಿಯತೆ, ಕಾಮತರನ್ನು ಪ್ರಮುಖ ಲೇಖಕರನ್ನಾಗಿ ಕಾಣುವಂತಾಯಿತು. 'ವಂಗದರ್ಶನ', 'ನಾ ರಾಜಸ್ಥಾನದಲ್ಲಿ' ಪ್ರವಾಸ ಸಾಹಿತ್ಯ ಕೃತಿಗಳೂ ಪ್ರಕಟವಾಗಿ ಅವು ಕೂಡ ಅಷ್ಟೇ ಜನಮನ್ನಣೆ ಗಳಿಸಿದವು. ಕಡಲಾಚೆಯ ಪಾಶ್ಚಾತ್ಯ ಪ್ರಪಂಚವನ್ನು, ಭಾರತದ ವಿವಿಧ ಭಾಗಗಳ ಜನಜೀವನವನ್ನು ಕಾಮತರು ಆಕರ್ಷಕ ಭಾಷೆಯಲ್ಲಿ ಚಿತ್ರಿಸಿದರು. ಕೃಷ್ಣಾನಂದರ ಬರವಣಿಗೆಯಲ್ಲಿ ಆದರ್ಶ ಪ್ರವಾಸ ಸಾಹಿತ್ಯದ ಮಾದರಿಗಳನ್ನು ನಾವು ಕಾಣುತ್ತೇವೆ. ಕುತೂಹಲ ಕೆರಳಿಸುವ ಸನ್ನಿವೇಶ, ವಸ್ತುನಿಷ್ಠ ದೃಷ್ಟಿಕೋನದಿಂದ ಕಾಮತರು ನಮ್ಮನ್ನು ಸೆಳೆದುಕೊಳ್ಳುತ್ತಾರೆ. ಓದುಗರನ್ನು ಪುಳಕಗೊಳಿಸುವ ಭಾಷೆ ಕಾಮತರದು. ಲೇಖಕರ ಆದರ್ಶವಾದ ಭಾರತೀಯ ಸಂಸ್ಕೃತಿಯ ಪ್ರೀತಿ, ಅನನ್ಯವಾದ ಜೀವನಪ್ರೀತಿ ಕಾಮತರ ಕೃತಿಗಳ ವಿಶಿಷ್ಟತೆಯಾಗಿದೆ. ಕಾಮತರು 'ನಾನೂ ಅಮೇರಿಕೆಗೆ ಹೋಗಿದ್ದೆ' ಕೃತಿಯ ಜನಪ್ರಿಯತೆಯಿಂದ ಕಾದಂಬರಿಯನ್ನು ಬರೆದರು. ಅವರ 'ಭಗ್ನಸ್ವಪ್ನ' ಕಾದಂಬರಿ ೧೯೭೦ರಲ್ಲಿ ಮೊದಲ ಮುದ್ರಣ ಕಂಡಿತು. ಧಾರವಾಡದ ಸಮಾಜ ಪುಸ್ತಕಾಲಯದಿಂದ ಪ್ರಕಟವಾದ 'ಭಗ್ನಸ್ವಪ್ನ' ಅರವತ್ತು ಎಪ್ಪತ್ತರ ದಶಕದ ಭಾರತೀಯ ಜೀವನ ಸಮಸ್ಯೆಯನ್ನು ಚಿತ್ರಿಸುತ್ತದೆ. ಕೃಷ್ಣಾನಂದ ಕಾಮತರು ಅರವತ್ತರ ದಶಕದಲ್ಲಿ ಭಾರತದಿಂದ ಅಮೆರಿಕೆಗೆ ತೆರಳಿ ಕೀಟಶಾಸ್ತ್ರದಲ್ಲಿ ಪಿಎಚ್.ಡಿ. ಪದವಿ ಪಡೆದು ಭಾರತಕ್ಕೆ ಮರಳಿ ಬಂದವರು. ಅವರು ಬಯಸಿದ್ದರೆ ಅಮೆರಿಕೆಯಲ್ಲಿ ಶಾಶ್ವತವಾಗಿ ನೆಲಸಬಹುದಿತ್ತು. ಭಾರತಕ್ಕೆ ಮರಳಿ ಬರುವಲ್ಲಿ ಕಾಮತರು ತಮ್ಮದೇ ಆದ ಆದರ್ಶವನ್ನು ಇಟ್ಟುಕೊಂಡಿದ್ದರು. ಇಂದು ಧನದಾಸೆಗಾಗಿ ವಿದೇಶಗಳಿಗೆ ಹೋಗುವ ಜನ ಎಲ್ಲೆಡೆ ಕಾಣುವಾಗ, ವಿದೇಶದಲ್ಲಿ ಪದವಿ ಮುಗಿಸಿ ಭಾರತಕ್ಕೆ ಮರಳಿ ಬರುವ ಕಾಮತರಂಥವರು ವಿರಳರಾಗಿದ್ದಾರೆ. ಪ್ರತಿಭಾ ಪಲಾಯನ ಭಾರತದ ಬಹುಮುಖ್ಯ ಸಮಸ್ಯೆಯಾಗಿದೆ. ಭಾರತದೇಶ ವೈದ್ಯಕೀಯ, ತಾಂತ್ರಿಕ ವ್ಯಾಸಂಗಕ್ಕಾಗಿ ಭಾರತೀಯರಿಗೆ ತರಬೇತಿ ನೀಡುತ್ತದೆ. ಸರಕಾರದಿಂದ ಸಹಾಯಪಡೆದ ಜನ ದೇಶದಲ್ಲಿ ತಮ್ಮ ಸೇವೆ ಮಾಡುವದನ್ನು ಬಿಟ್ಟು ಪರದೇಶಗಳಿಗೆ ವಲಸೆ ಹೋಗುತ್ತಿದ್ದಾರೆ. ಒಬ್ಬ ವಿದ್ಯಾರ್ಥಿಗೆ ದೇಶದ ಭಂಡಾರದಿಂದ ಎಷ್ಟು ಖರ್ಚಾಗುತ್ತದೆ, ಮುಂದೆ ಆ ವಿದ್ಯಾರ್ಥಿ ದೇಶಕ್ಕೆ ಸಮಾಜಕ್ಕೆ ಯಾವ ಸೇವೆ ಸಲ್ಲಿಸಿ ತನ್ನ ಋಣ ತೀರಿಸಿಕೊಳ್ಳುತ್ತಾನೆ ಎಂಬುದು ಗಂಭೀರವಾದ ಪ್ರಶ್ನೆ. ಕೃಷ್ಣಾನಂದ ಕಾಮತರು ವಿದೇಶಕ್ಕೆ ತೆರಳಿ ಭಾರತಕ್ಕೆ ಹಿಂದುರುಗಿದ ವಿಜ್ಞಾನದ ಪದವೀಧರರು. ಭಾರತೀಯ, ಪರಿಸರದಲ್ಲಿ ಅಸಹಾಯಕ, ಅನಾಥ ಪ್ರಜ್ಞೆ ಅನುಭವಿಸುತ್ತಾನೆಂಬ ಕಟುವಾಸ್ತವದ ಅನುಭವವನ್ನು ಇಲ್ಲಿ ಎತ್ತಿಕೊಳ್ಳುತ್ತಾರೆ. ಒಂದೆಡೆ ಪ್ರತಿಭಾ ಪಲಾಯನವಾಗುತ್ತದೆ. ಎಂದು ಹೇಳುವ ರಾಜಕಾರಣಿಗಳು ಮಾಡುವ ಅನ್ಯಾಯ ನೀಚತನಗಳಿಗೆ ಲೇಖಕರು ಇಲ್ಲಿ ಸೃಜನಾತ್ಮಕ ಸ್ವರೂಪ ನೀಡುತ್ತಾರೆ. ಕೃಷ್ಣಾನಂದರ ಕಾದಂಬರಿ ಓದುವಾಗ ಅದು ಅವರ ಜೀವನದ ಒಂದು ಭಾಗವಾಗಿರುವಂತೆ ತುಂಬ ಆಪ್ತವಾದ ಅನುಭವವನ್ನು ನೀಡುತ್ತದೆ. ಆತ್ಮಚರಿತಾತ್ಮಕ ಧಾಟಿಯಲ್ಲಿ ಕೃಷ್ಣಾನಂದ ಕಾಮತರ ಬರವಣಿಗೆ ಮೂಡಿಬಂದಿದೆ. 'ಭಗ್ನಸ್ವಪ್ನ' ಕಾದಂಬರಿಯ ಮೊದಲ ಮಾತಿನಲ್ಲಿ ಲೇಖಕರು ಹೀಗೆ ಹೇಳಿದ್ದಾರೆ. 'ಭಾರತಕ್ಕೆ ಮರಳಿದ ವಿಜ್ಞಾನಿಯೊಬ್ಬನ ಆಸೆ-ಆಕಾಂಕ್ಷೆಗಳು, ಮರಳಿದ ಮೇಲೆ ಎದುರಿಸಬೇಕಾದ ಸಮಸ್ಯೆಗಳು ಮುಂತಾದವನ್ನು ಕಾದಂಬರಿಯ ಮುಖಾಂತರ ಚಿತ್ರಿಸಲು ಯತ್ನಿಸಿದ್ದೇನೆ. ಇಲ್ಲಿ ಬರುವ ವ್ಯಕ್ತಿಗಳು ಕಾಲ್ಪನಿಕವಾಗಿದ್ದರೂ ಬರುವ ಘಟನೆಗಳು ಕಾಲ್ಪನಿಕ ಎಂದು ಹೇಳುವಂತಿಲ್ಲ. ಉಚ್ಚ ಶಿಕ್ಷಣ ಮುಗಿಸಿ ಸ್ವದೇಶಕ್ಕೆ ಮರಳಿದ ಅನೇಕ ವಿಜ್ಞಾನಿಗಳ ಹೃದಯದ ಬಡಿತವನ್ನು ತೀರ ಹತ್ತಿರದಿಂದ ಕೇಳಿ ಅರ್ಥಮಾಡಿಕೊಳ್ಳಲು ಯತ್ನಿಸಿದ್ದೇನೆ. ಕಳೆದ ಆರು ವರ್ಷಗಳಲ್ಲಿ ನಾನೂ ಈ ಬಗೆಯ ಅನುಭವಗಳನ್ನು ಕಂಡವ. ರಾಜಸ್ಥಾನದ ಮರುಭೂಮಿಯ ಹಳ್ಳಿಯೊಂದರಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಗಳನ್ನು ತರಬೇತು ಮಾಡಿದೆ. ದೈನಂದಿನ ಕೊಲೆ, ಸುಲಿಗೆ ಅಪಮಾನಗಳಿಂದ ಪೀಡಿತವಾದಂಥ ಬಂಗಾಲದಲ್ಲಿ ಎರಡು ವರ್ಷ ಸಂಶೋಧನಾ ಕ್ಷೇತ್ರದಲ್ಲಿ ದುಡಿದೆ. ಹಿಮಾಲಯದ ಪ್ರದೇಶದಲ್ಲಿ ಕೂಡ ಬೆನ್ನು ಮುರಿದು ದುಡಿಯಲು ಸಿದ್ಧನಿದ್ದೆ. ಆದರೂ ನನ್ನ ಉಚ್ಚ ಶಿಕ್ಷಣ, ವಿದೇಶದಲ್ಲಿಯ ತರಬೇತಿ, ಡಾಕ್ಟರೇಟುಗಳ ಪ್ರಯೋಜನವನ್ನು ಸರಕಾರ, ಸಮಾಜ, ಸಂಸ್ಥೆಗಳು ಮಾಡಿಕೊಳ್ಳಲು ಕಿಂಚಿತ್ ಕೂಡ ಆಸ್ಥೆ ತೋರಿಸದೇ ಇದ್ದುದರಿಂದ ಇಷ್ಟು ವರ್ಷ ಬೆವರು ಸುರಿಸಿ ಗಳಿಸಿದ ವಿದ್ಯೆಗೆ ನಾನು ಕೊನೆ ನಮಸ್ಕಾರ ಹಾಕಬೇಕಾಯಿತು. ನಾನುಂಡ ಅನೇಕ ಕಹಿ ಅನುಭವಗಳು ಕಾದಂಬರಿಯಲ್ಲಿ ಅಲ್ಲಲ್ಲಿ ನುಸುಳಿಕೊಂಡಿವೆ. ಕಾದಂಬರಿಯಲ್ಲಿ ಬರುವ ಪ್ರಸಂಗಗಳು ನಂಬಲಸಾಧ್ಯವಾದವು ಎಂದು ತೋರಿದರೆ ಅದಕ್ಕೆ ನಮ್ಮ ದೇಶದ

ವಸ್ತು ಸ್ಥಿತಿಯೇ ಕಾರಣ.' ಕೃಷ್ಣಾನಂದ ಕಾಮತರ ಮಾತುಗಳಲ್ಲಿ ವಿದೇಶದ ವಿಜ್ಞಾನ ಕ್ಷೇತ್ರದಲ್ಲಿ ಉನ್ನತ ಸಂಶೋಧನೆ ಮಾಡಿ ಭಾರತಕ್ಕೆ ಬಂದ ಪ್ರತಿಭಾವಂತರು ಯಾವ ಪಾಡು ಪಡಬೇಕೆಂಬುದರ ನೋವಿನ ಅನುಭವವಿದೆ. ಭಗ್ನಸ್ವಪ್ನ ಕಾದಂಬರಿಯ ನಾಯಕ ಅರುಣ ಪ್ರತಿಭಾವಂತ ವಿದ್ಯಾರ್ಥಿ. ವಿದ್ಯಾರ್ಥಿ ಜೀವನದಲ್ಲೇ ಆಶಾಳೊಂದಿಗೆ ಅನುರಾಗ ಬೆಳೆಯುತ್ತದೆ. ಮುಂದೆ ಅರುಣ ವಿದೇಶಕ್ಕೆ ತೆರಳಿ ಅಲ್ಲಿ ಉನ್ನತ ವ್ಯಾಸಂಗ ಮಾಡಿ ಭಾರತಕ್ಕೆ ಮರಳಿ ಬರುತ್ತಾನೆ. ಆಶಾ ಅರುಣರ ನಡುವೆ ಒಲವಿನ ಪತ್ರಗಳು ಅವರ ಸಂಬಂಧವನ್ನು ಮತ್ತಷ್ಟು ಗಟ್ಟಿಗೊಳಿಸುತ್ತವೆ. ಆಶಾ ಅರುಣನನ್ನೇ ಮದುವೆಯಾಗಲು ಬಯಸಿದ್ದರೂ ಅವಳ ಮನೆಯಲ್ಲಿ ಅದಕ್ಕೆ ವಿರೋಧ ವ್ಯಕ್ತವಾಗುತ್ತದೆ. ಜಾತಿಸಂಬಂಧಗಳೂ, ವೈಯಕ್ತಿಕ ಕಾರಣಗಳೂ ಅಡ್ಡ ಬಂದಾಗ ಆಶಾ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಅರುಣ ಆಶಾಳಿಗಾಗಿ ವಿದೇಶದ ದೊಡ್ಡ ನೌಕರಿ ಬಿಟ್ಟು ಬಂದಿದ್ದರೂ ಅವನು ನೌಕರಿಯಿಂದಲೂ ತನ್ನ ಪ್ರೇಮದಿಂದಲೂ ನೋವನ್ನು ಅನುಭವಿಸಬೇಕಾಗುತ್ತದೆ. ಅರುಣ ಮರಳಿ ನ್ಯೂಯಾರ್ಕಿಗೆ ಹೊರಟಾಗ, ವಿಮಾನ ಬಿರುಗಾಳಿಗೆ ಸಿಕ್ಕಿ ಸಾವನ್ನಪ್ಪುತ್ತಾನೆ. ಅರುಣನ ದೇಹ ಆಶಾಳನ್ನು ಹಿಂಬಾಲಿಸಿದಂತೆ ಆಗುತ್ತದೆ. ಆಶಾ ಅರುಣರ ಪ್ರೇಮದ ಭಗ್ನಸ್ವಪ್ನ ಕುಸಿದು ನಿಂತುದನ್ನು ಡಾ. ಕಾಮತರು ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಯುವಕ ಯುವತಿಯರ ಮನಸ್ಸನ್ನು ಅರ್ಥಮಾಡಿಕೊಳ್ಳಲು ವಿಫಲರಾದ ದೇಶಪಾಂಡೆಯವರಂಥ ವಿದ್ಯಾವಂತರು ನಮ್ಮ ದೇಶದಲ್ಲಿ ತುಂಬಿಕೊಂಡಿರುವುದನ್ನು ಲೇಖಕರು ಇಲ್ಲಿ ಚಿತ್ರಿಸಿದ್ದಾರೆ. ಕೃಷ್ಣಾನಂದ ಕಾಮತರ 'ಭಗ್ನಸ್ವಪ್ನ' ಅರ್ಥಪೂರ್ಣ ಶೀರ್ಷಿಕೆಯ ಕಾದಂಬರಿ. ವಿಜ್ಞಾನ ಕ್ಷೇತ್ರದಲ್ಲಿ ಉನ್ನತ ಸಂಶೋಧನೆ ಮಾಡಲು ಭಾರತದಲ್ಲಿ ವಾತಾವರಣ, ಪರಿಸರ ಹದಗೊಂಡಿಲ್ಲ, ಪ್ರತಿಭಾ ಪಲಾಯನ ಅನಿವಾರ್ಯವಾದ ಪ್ರಕ್ರಿಯೆಯಾಗಿದೆ. ಭಾರತೀಯರು ವಿಜ್ಞಾನಿಗಳಾದಲ್ಲಿ, ಬೌದ್ಧಿಕ ಜಗತ್ತಿನಲ್ಲಿ ಸಾಧನೆ ಮಾಡುವವರನ್ನು ಸರಿಯಾಗಿ ಅರ್ಥಮಾಡಿಕೊಂಡು ಅವರಿಗೆ ಸಿಗಬೇಕಾದ ಸ್ಥಾನಮಾನ ನೀಡುತ್ತಿಲ್ಲ, ವಿಜ್ಞಾನಿಗಳಿಗೆ ಪ್ರೋತ್ಸಾಹ ನೀಡುವ ಅಮೇರಿಕಾ, ಪ್ರತಿಭಾವಂತ ವಿಜ್ಞಾನಿಗಳನ್ನು ತನ್ನ ದೇಶಕ್ಕೆ ಕರೆಸಿಕೊಂಡು ಅಭಿವೃದ್ಧಿಯ ಹಾದಿಯಲ್ಲಿ ದಾಪುಗಾಲು ಹಾಕಿ ಮುನ್ನಡೆಯುತ್ತಿದೆ. ಆದರ್ಶ ಮತ್ತು ವಾಸ್ತವಿಕತೆ ನಡುವೆ ದೊಡ್ಡ ಕಂದರ ಇದೆ. ಭಾರತದಲ್ಲಿ ವಿಜ್ಞಾನಿಯಾಗಿ ಕಲಿತ ವಿದ್ಯೆಯನ್ನು ಕ್ರಿಯಾಶೀಲಗೊಳಿಸುವುದು ಸಾಧ್ಯವಿಲ್ಲವೆಂಬ ಕಟುವಾಸ್ತವವನ್ನು ಕಾಮತರ ಕಾದಂಬರಿ ನಮಗೆ ತಿಳಿಸುತ್ತದೆ. ಹೀಗೆ, ಆದರ್ಶ ಮತ್ತು ವಾಸ್ತವಗಳ ಸೇತುವೆಯಾಗಿ ಪ್ರತಿಭಾ ಪಲಾಯನಕ್ಕೆ ಕಾರಣವಾದ ಘಟನೆ, ಸನ್ನಿವೇಶವನ್ನು ವೈಯಕ್ತಿಕ ನೆಲೆಯಲ್ಲಿ ಸಾಮಾಜಿಕ ನೆಲೆಯಲ್ಲಿ ಶೋಧಿಸುವ 'ಭಗ್ನಸ್ವಪ್ನ' ಈ ನಿಟ್ಟಿನಲ್ಲಿ ನಾವು ಚಿಂತಿಸುವಂತೆ ಮಾಡುತ್ತದೆ. 'ಭಗ್ನಸ್ವಪ್ನ' ಕೃಷ್ಣಾನಂದ ಕಾಮತರ ವೈಯಕ್ತಿಕ ಬದುಕಿನ ನೋವನ್ನು ಸೃಜನಶೀಲವಾಗಿಸಿದ ಕಾದಂಬರಿಯಾಗಿದೆ. ಕಾಮತರ ಗದ್ಯಶೈಲಿ ನೇರ, ಸರಳ ಮತ್ತು ಸ್ಪಷ್ಟ.



# ಕಾಲವನ್ನು ಮರೆಸುವ ಕಾಲರಂಗ

**ಚಿ. ವೀ. ಶ್ರೀನಾಥ ಶಾಸ್ತ್ರಿ**

ಕಾಲಗರ್ಭದಲ್ಲಿ ಅಡಗಿರುವ, ಅಡಗುತ್ತಿರುವ ಅಮೂಲ್ಯ ಅಂಶಗಳನ್ನು ಹೆಕ್ಕಿ ತೆಗೆದು ನಮ್ಮೆದುರಿಗೆ ಪ್ರಸ್ತುತ ಪಡಿಸುವ 'ಕಾಲರಂಗ' ಅಡಕಮುದ್ರಿಕೆಯು (ಸಿಡಿ) ಡಾ. ಕೃಷ್ಣಾನಂದ ಕಾಮತ್ ಅವರ ಒಂದು ಅಪೂರ್ವ ಕೊಡುಗೆ. ಕಾಲರಂಗವನ್ನು ಗಣಕಕ್ಕೆ ಊಡಿಸಿ ನೋಡಲು ಕುಳಿತ ಯಾರೇ ಆಗಲಿ ರಂಗದೊಡನೆ ಒಂದಾಗಿ ಕಾಲವನ್ನು ಮರೆತುಬಿಡುವಂತಹ ಮೋಡಿಗೆ ಒಳಗಾಗುತ್ತಾರೆ. ಪ್ರಸಿದ್ಧ ಚಿತ್ರಗ್ರಾಹಕರಾಗಿಯೂ, ಸಾಹಿತಿಯಾಗಿಯೂ ಮೆರೆದಿರುವ ಡಾ. ಕಾಮತ್ ಅವರ ಅಸಾಧಾರಣ ಚಿತ್ರಗ್ರಹಿಕೆ ಹಾಗೂ ಚಿತ್ರಗ್ರಹಿಕೆಯ ಸಾಮರ್ಥ್ಯಗಳ ಎಲ್ಲ ಫಲಿತಗಳೂ ಈ ಅಡಕಮುದ್ರಿಕೆಯಲ್ಲಿ ಅಡಕವಾಗಿಯೂ, ಒಪ್ಪವಾಗಿಯೂ ಮೂಡಿಬಂದಿವೆ.

ಐದು ದಶಕಗಳ ಕಾಲ ದೇಶದ ವಿವಿಧ ಭಾಗಗಳಲ್ಲಿ ಪ್ರಾಧ್ಯಾಪನ ಮಾಡುವಾಗ, ಪರ್ಯಟನ ಕಾಲದ ಅನೇಕ ಸಂದರ್ಭಗಳಲ್ಲಿ ಶ್ರೀಯುತರು ಗ್ರಹಿಸಿದ ಚಿತ್ರಗಳ, ಅನುಭವಗಳ ಆಬಾಲ ವೃದ್ಧರೊಡನೆ ನಡೆಸಿದ ಸಂವಾದಗಳ, ಸೂಕ್ಷ್ಮನೋಟದಲ್ಲಿ ಕಂಡುಕೊಂಡ ಅಮೂಲ್ಯವಿಚಾರಗಳ ರಸಪಾಕವೇ ಈ ಕಾಲರಂಗ ಭಂಡಾರ ಎನ್ನಬಹುದು.

ಇತ್ತೀಚಿನ ಯಾಂತ್ರಿಕತೆ, ತಾಂತ್ರಿಕತೆಗಳಿಂದ ಮುಕ್ತವಾದ, ಗಡಿಬಿಡಿ ಗಲಭೆಗಳಿಂದ ದೂರವಾದ, ಪ್ರಶಾಂತ ಪರಿಸರದ, ಇತಿಹಾಸ ಪ್ರಸಿದ್ಧವಾದ ಸ್ಥಳಗಳ, ಭವ್ಯವಾದ ಕಟ್ಟಡಗಳ ಮತ್ತು ದೇಗುಲಗಳ ಹಾಗೂ ನಿರ್ಮಲ ಮನದ ವ್ಯಕ್ತಿಚಿತ್ರಗಳ ಹಾಗೂ ಹಲವಾರು ಪ್ರಸಿದ್ಧ ಆಕರ್ಷಕ ರೇಖಾಚಿತ್ರಗಳನ್ನು ಒಳಗೊಂಡ ಹೇರಳವಾದ ಈ ಸಂಗ್ರಹವು ನಮ್ಮನ್ನು ಅಚ್ಚರಿಗೊಳಿಸುತ್ತದೆ. ಇದರೊಂದಿಗೆ ಹಲವಾರು ಘಟನೆಗಳ ವಿವರಣಾತ್ಮಕ ವಿಶ್ಲೇಷಣೆ, ಚಿತ್ರ ವಿವರಣೆಗಳು ಮತ್ತು ಐತಿಹಾಸಿಕ ಘಟನೆಗಳ ನಿರೂಪಣೆಗಳೊಂದಿಗೆ ಈ ವಿಶಿಷ್ಟ 'ಪ್ರವಾಸಿ'ಯ ಅನುಭವಗಳ ಸರಳ ನಿವೇದನೆಗಳು ಸಮುಚಿತವಾಗಿ ಮೇಳೈಸಿ ಈ ಅಡಕಮುದ್ರಿಕೆಯು ಒಂದು ವಿಶೇಷ ಅನುಭವವನ್ನು ಉಂಟುಮಾಡುತ್ತದೆ.

ಮಾಹಿತಿ ತಂತ್ರಜ್ಞಾನದ ಯಶಸ್ವೀ ಬಳಕೆಗೆ ಇದೊಂದು ಉದಾಹರಣೆಯಾಗಿದೆ. ಕಾಲರಂಗವನ್ನು ಪ್ರವೇಶಿಸುವ, ಅದರಲ್ಲಿ ಮನಬಂದಂತೆ ಸುತ್ತಾಡುವ, ಅದರಲ್ಲಿನ ವ್ಯವಸ್ಥಿತ ಜಾಲದಲ್ಲಿ ವಿಹರಿಸುವ, ನಕ್ಷೆಯಾಧಾರಿತ ಆಯ್ಕೆಗೆ ಅವಕಾಶವಿರುವ ಹಲವಾರು ಸುಲಭ ಸೌಕರ್ಯಗಳನ್ನು ಇಲ್ಲಿ ಒದಗಿಸಲಾಗಿದೆ; ಕರ್ನಾಟಕ, ಗೋವಾ, ರಾಜಸ್ಥಾನ, ಮಧ್ಯಪ್ರದೇಶ ಮತ್ತು ಪಶ್ಚಿಮ ಬಂಗಾಲ ರಾಜ್ಯಗಳಿಗೆ ಸಂಬಂಧಿಸಿದಂತೆ ಬಹುದೊಡ್ಡ ಮಾಹಿತಿ ಸಂಗ್ರಹವಿದೆ; ಉತ್ತರ ಕನ್ನಡ ಮತ್ತು ಬಸ್ತಾರ್‌ಗಳ, ಬೇಲೂರು, ಅಜಂತಾ, ಮೈಸೂರು, ಭೀಮಬೆಟಕ ಸ್ಥಳಗಳ ಹಾಗೂ ತುಮಕೂರು ಬಳಿಯ ಪ್ರಸಿದ್ಧ ಸೀಬಿ ನರಸಿಂಹಸ್ವಾಮಿಯ ದೇವಾಲಯದಲ್ಲಿನ ಕಲಾಕೃತಿಗಳನ್ನು ಕುರಿತಂತೆ ಹೆಚ್ಚಿನ ಮಾಹಿತಿಗಳನ್ನು ಇದರಲ್ಲಿ ನೀಡಲಾಗಿದೆ; ಕಾಲರಂಗದ ಹೆಸರಿಗೆ ಅನುಗುಣವಾಗಿ ಕಾಲಾನುಕ್ರಮಣಿಕೆಯಲ್ಲಿ ಮಾಹಿತಿಗಳನ್ನು ಆಯ್ದುಕೊಳ್ಳುವ ಅವಕಾಶವಿದೆ; ಸ್ಥಳಗಳ, ಚಿತ್ರಗಳ, ವ್ಯಕ್ತಿಗಳ, ಲೇಖನಗಳ ಹಾಗೂ ಇನ್ನಿತರ ವಿವರಗಳ ಅಕಾರಾದಿ ವರ್ಗೀಕರಣವನ್ನೂ ನೀಡಲಾಗಿದ್ದು, ಆಯ್ಕೆಯ ಅವಕಾಶಗಳನ್ನು ಮತ್ತಷ್ಟು ವ್ಯವಸ್ಥಿತಗೊಳಿಸಲಾಗಿದೆ; ಮಾಹಿತಿಯೊಂದನ್ನು ವೀಕ್ಷಿಸುವಾಗ ಅದಕ್ಕೆ ಸಂಬಂಧಪಟ್ಟ ಆದರೆ ಕಾಲ, ಗಡಿಗಳನ್ನು ಮೀರಿದ ಇತರೆ ಮಾಹಿತಿಗಳಿಗೆ ತಕ್ಷಣ ಸಂಪರ್ಕ ಒದಗಿಸಬಲ್ಲ 'ಹೈಪರ್ ಲಿಂಕ್' ವ್ಯವಸ್ಥೆ ಇದರಲ್ಲಿದೆ. ಈಗಾಗಲೇ ಹೇಳಿದಂತೆ ಸಹಜ ಪರಿಸರದ ವಾತಾವರಣವನ್ನು ಗುರುತಿಸಿ, ಸಾಮಾನ್ಯ ಜನರನ್ನೂ ಸೂಕ್ಷ್ಮವಾಗಿ ಗಮನಿಸಿ ಓದುಗರನ್ನು ಅಲ್ಲಿಗೆ ಒಯ್ದು ನಿಲ್ಲಿಸುವಂತಹ ವಿಶಿಷ್ಟವಾದ ಪ್ರವಾಸಕಥನಗಳನ್ನು ಇದರಲ್ಲಿ ನೀಡಲಾಗಿದೆ. ಸರಳ ಶೈಲಿಯ ಸುಲಭ ಭಾಷೆಯ ನೇರ ನಿರೂಪಣೆಯ ಈ ಲೇಖನಗಳು ಚಿತ್ರಗಳೊಳಗೂಡಿ ನಮ್ಮನ್ನು ತನ್ಮಯಗೊಳಿಸುತ್ತವೆ. ವ್ಯಕ್ತಿ ವಿವರಗಳು, ಸ್ಥಳವಿಚಾರಗಳು, ಕಲಾವಿಮರ್ಶೆ ಮುಂತಾಗಿ ಯಾವುದೇ ವಿಭಿನ್ನ ವಿಚಾರವಾಗಲಿ ಸಮಾನಾಸಕ್ತಿಯಿಂದ ಓದಿಸಿಕೊಂಡು ಹೋಗುವಂತಹ ಲೇಖನಗಳು ಇಲ್ಲಿವೆ. ಐತಿಹಾಸಿಕ ವಿಚಾರಗಳು, ಜನಸಮುದಾಯದ ಸಂಪ್ರದಾಯಗಳು, ಧರ್ಮ ಸಂಸ್ಕೃತಿಗಳಿಗೆ ಸಂಬಂಧಿಸಿದ ಮಾಹಿತಿಗಳು ಮುಂತಾದವನ್ನು ಕ್ರೋಢೀಕರಿಸುವಾಗ ಡಾ. ಕಾಮತ್ ಅವರು ಬಹಳ ಶ್ರಮವಹಿಸಿರುವುದೇ ಅಲ್ಲದೆ ಅನೇಕ ಆಕರಗಳಿಂದ ಅಪಾರ ಮಾಹಿತಿಗಳನ್ನು ಸಂಗ್ರಹಿಸಿ ಸಂಶೋಧನಾತ್ಮಕ ಅಧ್ಯಯನಗಳನ್ನು ನಡೆಸಿರುವುದು ಇಲ್ಲಿ ಸ್ಪಷ್ಟವಾಗುತ್ತದೆ.

ಡಾ. ಕಾಮತ್ ಅವರೇ ತಿಳಿಸುವಂತೆ ಭರತಖಂಡವು ವಿಭಿನ್ನ ಮೂಲದ ಜನತೆಯ, ಸಸ್ಯರಾಶಿಯ ಹಾಗೂ ಪ್ರಾಣಿ ಸಂಕುಲದ ಮಾತೃಭೂಮಿಯಾಗಿದೆ. ದಿಗ್ಭ್ರಮೆಗೊಳಿಸುವ ಪ್ರಕೃತಿ ಸೌಂದರ್ಯ, ಸಂಕೀರ್ಣ ಸಾಂಸ್ಕೃತಿಕ ಪರಿಸರಗಳಿಂದ ಕೂಡಿದ ಭಾರತವು ವೈವಿಧ್ಯಮಯ ಹಾಗೂ ಮನಸೂರೆಗೊಳ್ಳುವ ಕಲೆ, ಇತಿಹಾಸ ಮತ್ತು ಸಂಪ್ರದಾಯಗಳ ನೆಲೆಗಟ್ಟಾಗಿದೆ. ಇವುಗಳಿಂದ ಆಕರ್ಷಿತರಾಗಿ ಅವಕಾಶವಾದಾಗಲೆಲ್ಲ ಭಾರತದ ವಿವಿಧ ಭಾಗಗಳಲ್ಲಿ ಪ್ರವಾಸಮಾಡುತ್ತಾ, ಡಾ ಕೃಷ್ಣಾನಂದ ಕಾಮತ್ ಅವರು ಜನಜೀವನವನ್ನು ಸೂಕ್ಷ್ಮವಾಗಿ ಗಮನಿಸಿ, ಆಂತರಿಕ ಸೌಂದರ್ಯವನ್ನು ಗುರುತಿಸಿ ಅವನ್ನು ತಮ್ಮ ಲೇಖನಿಗಳಿಂದಲೂ, ಛಾಯಾಚಿತ್ರಗಳಿಂದಲೂ ದಾಖಲಿಸಿ ನಮ್ಮೆದುರು ತೆರೆದಿಡುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದಾರೆ. ಮಧ್ಯಪ್ರದೇಶದ ಅಗಮ್ಯ ಅರಣ್ಯಗಳಲ್ಲಿ ಸುತ್ತಾಡಿ ಅಲ್ಲಿ ಕಾಣಬರುವ ಸಂತೃಪ್ತಿಯ ಭಾವಗಳನ್ನು ತೆರೆದಿಡಲು ಯತ್ನಿಸಿದ್ದಾರೆ. ಅಲ್ಲಿನ ಬಡತನದ ಬವಣೆಗಳನ್ನು ನಮ್ಮ ಮುಂದಿಡುತ್ತಾರೆ; ಜೀವನದ ಗೊಂದಲ ಗೋಜಲುಗಳ ನಡುವೆ ವಿವಿಧ ಜಾತಿ ಪಂಗಡಗಳು, ಉಪಪಂಗಡಗಳು ಮತ್ತು ಉತ್ತಮಕುಲದವರು ಶಾಂತವಾಗಿ ಅನುಸರಿಸುತ್ತಿರುವ ಸರಳ ಜೀವನಶೈಲಿಯು ಡಾ. ಕಾಮತ್ ಅವರ ಪ್ರೀತಿಯ ಅಧ್ಯಯನ ವಸ್ತುವಾಗಿತ್ತು. ಇದರೊಂದಿಗೆ ಪ್ರಾಚೀನ ಭಾರತೀಯ ಕಲೆ, ಕಲಾತ್ಮಕತೆಗಳ ಬಹು ದೊಡ್ಡ ಚಿತ್ರಭಂಡಾರವನ್ನೇ ಸಂಗ್ರಹಿಸಿ ಅವರು ನಮಗೆ ಪ್ರಸ್ತುತ ಪಡಿಸಿದ್ದಾರೆ. ಒಟ್ಟಿನಲ್ಲಿ ಕಾಲರಂಗವು ಭಾರತೀಯ ಪರಂಪರೆಯಲ್ಲಿನ ಏಳುಬೀಳು ಸೃಜನಾತ್ಮಕತೆಯ ವಿವಿಧ ಮಾನವ ಪ್ರವೃತ್ತಿಗಳ ಅದ್ಭುತ ಚಿತ್ರಣವಾಗಿದೆ.

ಭಾರತೀಯ ಇತಿಹಾಸ, ಬುಡಕಟ್ಟು ಜನಾಂಗ, ವಿವಿಧ ಕಲಾಪ್ರಕಾರಗಳು, ಕರಕುಶಲ ವಸ್ತುಗಳು, ನೃತ್ಯ, ಮಹಿಳೆ, ದೇವಾಲಯಗಳು, ಹಿಂದೂ ದೇವತೆಗಳು, ಹಬ್ಬಗಳು, ಜೈನಮತ, ರಸ್ತೆ ವ್ಯಾಪಾರಿಗಳು, ಬಡತನ ಮುಂತಾದ ವಿಷಯಗಳನ್ನು ಕುರಿತ ವಿಸ್ತೃತ ಚಿತ್ರಣಗಳು ಕಾಲರಂಗದಲ್ಲಿ ಹೆಣೆದುಕೊಂಡಿವೆ. ಗುಹೆಗಳಲ್ಲಿ ಅರಳಿರುವ ಕಲೆಗಳು, ಬೇಲೂರು ಮುಂತಾದ ಪ್ರಸಿದ್ಧ ದೇವಾಲಯಗಳಲ್ಲಿನ ಶಿಲ್ಪಗಳು, ಜಾನಪದ ಕಲೆಗಳು ಹಾಗೂ ಕಲಾವಿದರು, ಕಸೂತಿ ಕಲೆ, ಬೆಂಗಾಲಿ ಜಾನಪದ ಪ್ರಕಾರಗಳು, ಜೈನಕಲೆ, ರೇಖಾಚಿತ್ರ ಪರಂಪರೆ, ಬೊಂಬೆಗಳು, ಲೇಪಾಕ್ಷಿ, ಅಜಂತಾ, ಮೈಸೂರು ಹಾಗೂ ಸೀಬಿಗಳಲ್ಲಿನ ವರ್ಣಚಿತ್ರಗಳು, ಮಹಮದೀಯ ಕಲೆ ಮುಂತಾದವುಗಳನ್ನು ಚಿತ್ರಗಳ ಮೂಲಕ ತೋರಿಸುವ ಕಾಲರಂಗವು ಕಲಾಪ್ರಿಯರನ್ನು ತಣಿಸಬಲ್ಲದ್ದಾಗಿದೆ. ಕರ್ನಾಟಕದ ಕರಾವಳಿಯ ಕಲಾವಿಶೇಷವಾದ ಕಾವಿಕಲೆಯನ್ನು ಕುರಿತು ಆದ್ಯಸಂಶೋಧಕರಾಗಿ ಆ ಕಲೆಯನ್ನು ಬೆಳಕಿಗೆ ತಂದವರೆಂದು ವಿಶೇಷವಾಗಿ ಗೌರವಿಸಲ್ಪಟ್ಟಿರುವ ಡಾ. ಕಾಮತ್ ಅವರು ಅನೇಕ ಆತ್ಯಾಕರ್ಷಕ ಕಾವಿಚಿತ್ರಗಳನ್ನು ಸೆರೆ ಹಿಡಿದು ಕಾಲರಂಗದಲ್ಲಿ ಪ್ರಸ್ತುತಪಡಿಸಿದ್ದಾರೆ. ಇತಿಹಾಸಪೂರ್ವ ಕಾಲದಿಂದ ಕಂಡುಬರುವ ಭಾರತದ ಹಲವಾರು ಸ್ಥಳಗಳ ಗುಹಾಚಿತ್ರಗಳು, ರೇಖಾಚಿತ್ರಗಳು, ದೇವಾಲಯಗಳಲ್ಲಿನ ಚಿತ್ರಗಳು ಮುಂತಾದವನ್ನು ತಮ್ಮ ಕ್ಯಾಮರಾದಲ್ಲಿ ಸೆರೆಹಿಡಿದನಂತರ ಅವುಗಳ ಮೂಲರೂಪ, ಉದ್ದೇಶಗಳು ಸ್ಪಷ್ಟವಾಗುವಂತೆ ಚಿತ್ರಗಳ ಹಿನ್ನೆಲೆಯನ್ನು ಶುಭ್ರಗೊಳಿಸುವ, ಮಸುಕಾಗಿರುವ ರೇಖೆಗಳನ್ನು ಮತ್ತೆ ರೂಪಿಸುವ ಕ್ರಿಯಾತ್ಮಕ ಆದರೆ ಕ್ಲಿಷ್ಟದಾಯಕ ಕಾರ್ಯವನ್ನು ಶ್ರೀಯುತರು ಅತ್ಯಂತ ಪ್ರಾಮಾಣಿಕವಾಗಿ ನಿರ್ವಹಿಸಿದ್ದಾರೆ, ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

ಇವೆಲ್ಲದರ ಜೊತೆಗೆ ಭಾರತೀಯ ದೇವಾಲಯಗಳ ಚರಿತ್ರೆ ಹಾಗೂ ಅವುಗಳ ರಚನೆಗಳನ್ನು ಕುರಿತ ಲೇಖನಗಳೇ ಅಲ್ಲದೆ ಗುಜರಾತ್, ಕಾಶ್ಮೀರ, ಖಜುರಾಹೋ, ಒರಿಸ್ಸಾ, ರಾಜಸ್ಥಾನ, ಸೋಮನಾಥ, ಪಶ್ಚಿಮ ಬಂಗಾಳ ಹಾಗೂ ದಕ್ಷಿಣ ಭಾರತದ ಹಲವಾರು ದೇವಾಲಯಗಳನ್ನು ಕುರಿತ ಅನೇಕ ಲೇಖನಗಳೂ ಕಾಲರಂಗದಲ್ಲಿ ಅಡಕವಾಗಿವೆ. ಈ ದೇವಾಲಯಗಳಿರುವ ಜಾಗಗಳ ಭೂಪಟಗಳನ್ನೂ ಕೊಡಲಾಗಿದೆ.

ಮಹಿಳೆಯರ ಚಿತ್ರಗಳು ಕಾಲರಂಗದ ಮತ್ತೊಂದು ವಿಭಾಗ. ಲಂಬಾಣಿ, ಗಾಂಧಾರಿ, ಕೊಂಕಣಿ, ಹಾಲಕ್ಕಿ, ಕೊಡಗು, ಬಸ್ತಾರ್, ಹವ್ಯಕ ಮುಂತಾದ ಮಹಿಳೆಯರ ಅನೇಕ ಚಿತ್ರಗಳು ನೋಡುಗರ ಮನ ಸೆಳೆಯುತ್ತವೆ. ಇದರೊಂದಿಗೆ ಹಿಂದೂ ವಿಧವೆ, ವೈದ್ಯ ಮಹಿಳೆ, ನಗರದ ಮಹಿಳೆ, ಬಟ್ಟೆ ಒಗೆಯುತ್ತಿರುವ ಮಹಿಳೆ, ಸೀರೆಯುಟ್ಟ ಮತ್ತು ಆಭರಣ ತೊಟ್ಟ ಸುಂದರಿಯರು–ಹೀಗೆ ಡಾ. ಕಾಮತರ ಕ್ಯಾಮರಾ ಅನೇಕಾನೇಕ ಮಹಿಳೆಯರ ಚಿತ್ರಗಳನ್ನು ಸೆರೆ ಹಿಡಿದಿದೆ. ಇಷ್ಟೇ ಅಲ್ಲದೆ ರಾಜರುಗಳು, ಪ್ರಕೃತಿ ಮುಂತಾಗಿ ಅನೇಕ ವಿಷಯಗಳನ್ನು ಕುರಿತ ವೈವಿಧ್ಯಮಯ ಚಿತ್ರಗಳ ಬಹುದೊಡ್ಡ ಸಂಗ್ರಹ ಈ ಕಾಲರಂಗ.

ಈ ಚಿತ್ರಗಳೊಂದಿಗೆ ಜಬಲಪುರ ಬಜಾರಿನ ವರ್ಣನೆ, ರಾಜಸ್ಥಾನದ ಗ್ರಾಮೀಣ ಜೀವನ, ಜೊಬನೇರಿನ ಸಾಮಾನ್ಯ ಜನತೆಯೊಡನೆ ಮಾತುಕತೆ, ಬಸ್ತಾರ್‌ನ ಹಾದಿಯಲ್ಲಿ, ಉದಯಪುರ ಮುಂತಾದ ಲೇಖನಗಳಲ್ಲಿ ಆ ಸ್ಥಳಗಳನ್ನು ಕಣ್ಣೆದುರು ನಿಲ್ಲಿಸುವಂತಹ ನಿರೂಪಣಾ ಕೌಶಲ್ಯ ಎದ್ದುಕಾಣುತ್ತದೆ.

ಒಟ್ಟಿನಲ್ಲಿ ಕಾಲರಂಗವು ಕಾಲಕಾಲಕ್ಕೂ ನೋಡುತ್ತಾ ಅನುಭವಿಸಬೇಕಾದ, ನೋಡಿದ್ದನ್ನು ಬಹಳ ಕಾಲ ಮನಸ್ಸಿನಲ್ಲೇ ಉಳಿಸುವ, ಹಿಡಿಯಷ್ಟರ ಅಡಕ ಮುದ್ರಿಕೆಯಲ್ಲಿ ಮಹತ್ತನ್ನು ತೋರಿಸುವ ಅತ್ಯುತ್ತಮ ಸಂಗ್ರಹ. ಈ ಅಪಾರ ಸಂಖ್ಯೆಯ ಚಿತ್ರಗಳ ಹಾಗೂ ವಿವರಗಳ ಸಂಗ್ರಹಣೆಗಾಗಿ ಬಳಸಿರುವ ಎಲ್ಲ ಆಕರಗಳನ್ನು ನಮೂದಿಸಲಾಗಿದೆ. ಸಂಬಂಧಿಸಿದ ಎಲ್ಲ ಸಂಸ್ಥೆಗಳು, ವ್ಯಕ್ತಿಗಳು ಮತ್ತು ಕೃತಿಗಳಿಗೆ ಕೃತಜ್ಞತೆಗಳನ್ನು ಸಲ್ಲಿಸಲಾಗಿದೆ.

ತಮ್ಮ ಗ್ರಂಥಗಳು, ಸಂಶೋಧನಾತ್ಮಕ ಪ್ರಬಂಧಗಳು ಹಾಗೂ ಲೇಖನಗಳಿಂದ ಪ್ರಸಿದ್ಧರೇ ಆಗಿದ್ದ ಡಾ. ಕೃಷ್ಣಾನಂದ ಕಾಮತ್ ಅವರ ಜೀವನಸಂಗಾತಿಯಾದ ಡಾ. ಜ್ಯೋತ್ಸ್ನಾ ಕಾಮತ್ ಅವರ ಅನುಭವ ಪಾಕದ ಫಲವೂ ಈ ಕಾಲರಂಗದಲ್ಲಿ ಸೇರಿಕೊಂಡಿದೆ.

ಹೀಗೆ ವೈಜ್ಞಾನಿಕ ಸಂಶೋಧನೆ, ಅಧ್ಯಾಪನಗಳ ಯಶಸ್ವೀ ವೃತ್ತಿಯೊಡನೆ ಸಾಹಿತ್ಯ, ಕಲೆ, ಸಂಸ್ಕೃತಿ, ಚಿತ್ರಗ್ರಹಣ ಮುಂತಾದವುಗಳಲ್ಲಿ ಅಪಾರ ಆಸಕ್ತಿವಹಿಸಿ, ಪರಿಣತಿ ಸಾಧಿಸಿದ ಮೇರು ಸದೃಶ ವ್ಯಕ್ತಿಯೊಬ್ಬರ ಜೀವಮಾನದ ಮಹತ್ಸಾಧನೆಗಳನ್ನು ಚಿರಕಾಲ ಉಳಿಸುವಂತೆ ದಾಖಲಿಸುವ ಪ್ರಯತ್ನವೇ ಈ ಅಡಕಮುದ್ರಿಕೆ ಎನ್ನಬಹುದು. ಈ ಹಿನ್ನೆಲೆಯಲ್ಲಿ ನೋಡಿದಾಗ, ಅಡಕ ಮುದ್ರಿಕೆಯಲ್ಲಿ ಭಾರತದ ಇತರ ಭಾಗಗಳ, ಇತರ ಐತಿಹಾಸಿಕ ಸಂಗತಿಗಳ ಮಾಹಿತಿಗಳು ಇಲ್ಲದಿದ್ದರೂ ಅವು ಇಲ್ಲವೆನ್ನುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.

ಬಹುಮುಖ್ಯವಾಗಿ, ಈ ಅಡಕಮುದ್ರಿಕೆಯನ್ನು ಸಿದ್ಧಪಡಿಸಿರುವ ಶ್ರೀ ವಿಕಾಸ್ ಕಾಮತ್ ಅವರು ಡಾ|| ಕೃಷ್ಣಾನಂದ ಕಾಮತ್ ಅವರ ಸುಪುತ್ರರಾಗಿ ತಮ್ಮ ಪಿತೃಋಣವನ್ನು ವಿಶೇಷ ರೀತಿಯಲ್ಲಿ ತೀರಿಸಿದ್ದಾರೆ. ನಮ್ಮೆಲ್ಲರ ಮೆಚ್ಚುಗೆ, ಕೃತಜ್ಞತೆಗಳಿಗೆ ಪಾತ್ರರಾಗಿದ್ದಾರೆ. ಕಳೆದ ಐದು ವರ್ಷಗಳಷ್ಟು ಹಿಂದೆಯೇ ಈ ಯೋಜನೆಯನ್ನು ಹಮ್ಮಿಕೊಂಡು ಯಶಸ್ವಿಯಾಗಿ ಮುಗಿಸಿದ ಶ್ರೀ ವಿಕಾಸ್ ಅವರು ಆಗ ಲಭ್ಯವಿದ್ದ ತಾಂತ್ರಿಕತೆಯನ್ನು ಬಹು ಜಾಣ್ಮೆಯಿಂದ ಬಳಸಿಕೊಂಡಿದ್ದಾರೆ. ವಿಷಯಗಳ ಹಾಗೂ ಚಿತ್ರಗಳ ಸಂಕಲನ, ಗಣಕಕ್ಕೆ ಅವುಗಳ ಊಡಿಕೆ ಮುಂತಾದ ಶ್ರಮದಾಯಕ ಕಾರ್ಯಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಮಾಹಿತಿಗಳು ಹಾಗೂ ಚಿತ್ರಗಳ ಮಹಾಪೂರದಲ್ಲಿ ವೀಕ್ಷಕರಿಗೆ ದಾರಿಕಾಣದಂತಾಗುವುದನ್ನು ತಪ್ಪಿಸಲು ಹಲವಾರು ರಾಜಮಾರ್ಗಗಳನ್ನು ಸಿದ್ಧಗೊಳಿಸಿದ್ದಾರೆ. ಇದಕ್ಕಾಗಿ ತಂತ್ರಾಂಶ ಸಂಬಂಧಿತ ವಿಚಾರಗಳನ್ನು ಚಾಕಚಕ್ಯತೆಯಿಂದ ಬಳಸಿಕೊಂಡಿದ್ದಾರೆ. ವಿಂಡೋಸ್ ಕಾರ್ಯಾಚರಣ ವ್ಯವಸ್ಥೆಯಲ್ಲಿನ ಎಂ.ಎಸ್ ಆಕ್ಸೆಸ್, ಫ್ರಂಟ್ ಪೇಜ್ ತಂತ್ರಾಂಶಗಳನ್ನೂ, ಯಾವುದೇ ಗಣಕ ವ್ಯವಸ್ಥೆಯಲ್ಲಿ ನೋಡಲು ಸಾಧ್ಯವಾಗುವಂತೆ 'ಜಾವಾ' ಗಣಕ ಭಾಷಾ ಮಾಧ್ಯಮವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಒಟ್ಟಿನಲ್ಲಿ ಗಣಕ ತಂತ್ರಜ್ಞಾನವನ್ನು ಬಹು ಚೆನ್ನಾಗಿ ದುಡಿಸಿಕೊಂಡಿದ್ದಾರೆ.

ಗಣಕದ ಮುಂದೆ ಕುಳಿತು ನೋಡುತ್ತಾ ಹೋದಂತೆ ಅಮೂಲ್ಯವೂ, ಕಾಲಾತೀತವೂ, ಆದ ಈ ಕಾಲರಂಗವು ಕನ್ನಡ ಮಾಧ್ಯಮದಲ್ಲೂ ಇರಬೇಕೆಂಬುದು ಕನ್ನಡಿಗರಿಗೆ ಸಹಜವಾಗಿ ಅನ್ನಿಸುತ್ತದೆ. ಗಣಕಗಳಲ್ಲಿ ಕನ್ನಡ ಲಿಪಿ ಮೂಡಿಕೆ ಬಗ್ಗೆ ಇದ್ದ ಗೊಂದಲವು ಈಗ ನಿವಾರಣೆಯಾಗಿದೆ. ಕರ್ನಾಟಕ ಸರ್ಕಾರವು ತೆಗೆದುಕೊಂಡಿರುವ ಒಂದು ಐತಿಹಾಸಿಕ ನಿರ್ಧಾರದಿಂದಾಗಿ ಗಣಕಗಳಲ್ಲಿ ಕನ್ನಡ ಲಿಪಿಯನ್ನು ಮೂಡಿಸುವಲ್ಲಿ ಶಿಷ್ಟತೆ ಮತ್ತು ಏಕರೂಪತೆಗಳು ಜಾರಿಗೆ ಬಂದಿವೆ. ಸರ್ಕಾರದ ಈ ನಿಯಮಗಳಿಗೆ ಅನುಗುಣವಾದ ನುಡಿ ಎಂಬ ಉಚಿತ ಕನ್ನಡ ಲಿಪಿ ತಂತ್ರಾಂಶವು ಬಳಕೆಗೆ ಬಂದು ಜನಪ್ರಿಯವಾಗಿದೆ. ಇದನ್ನು ಪದ ಸಂಸ್ಕರಣೆಗೇ ಅಲ್ಲದೇ ದತ್ತ ಸಂಸ್ಕರಣೆ, ಬಹುಮಾಧ್ಯಮ ಮತ್ತು ಅಂತರಜಾಲ ಕ್ಷೇತ್ರಗಳಲ್ಲೂ ಯಶಸ್ವಿಯಾಗಿ ಬಳಸಬಹುದಾಗಿದೆ. ನುಡಿಯೊಡನೆ ಅಕಾರಾದಿ ವಿಂಗಡಣೆಯ ಸೌಲಭ್ಯವಿದೆ, ತಂತ್ರಾಂಶ ಅಭಿವೃದ್ಧಿ ಸಲಕರಣೆಗಳನ್ನು ನೀಡಲಾಗಿದೆ. ಈ ರೀತಿಯಲ್ಲಿ ಮುಕ್ತ ಕನ್ನಡ ತಂತ್ರಾಂಶ ವಾತಾವರಣವಿರುವಾಗ ಈ ಅಡಕ ಮುದ್ರಿಕೆಯನ್ನು ಕನ್ನಡೀಕರಿಸಿ ಕನ್ನಡ ಜನತೆಗೆ ನೀಡುವಲ್ಲಿ ಶ್ರೀ ವಿಕಾಸ್ ಕಾಮತ್ ಅವರು ಮುಂದಾಗಬೇಕೆಂದು ನಮ್ಮೆಲ್ಲರ ಅಭಿಲಾಷೆಯಾಗಿದೆ.

❑

# 'ವಂಗದರ್ಶನ'- I

**ಈಶ್ವರ ಚಂದ್ರ**

ಕೃಷ್ಣಾನಂದ ಕಾಮತರು ಕನ್ನಡದ ಅನನ್ಯ ಲೇಖಕರು. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃಷಿ ಮಾಡಿದ ಅವರು ರಚಿಸಿರುವ 'ವಂಗದರ್ಶನ' ಒಂದು ವಿಶಿಷ್ಟಕೃತಿ. ಪ್ರಕಾಶಕರು ಇದನ್ನು ಪ್ರವಾಸಕಥನ ಎಂಬ ಪ್ರಕಾರದಲ್ಲಿ ಪ್ರಕಟಿಸಿದ್ದರೂ ಇದು ಮೂಲತಃ ಜನಜೀವನ ಅಧ್ಯಯನ. ಕೀಟಶಾಸ್ತ್ರದಲ್ಲಿ ಪಂಡಿತರಾಗಿದ್ದ ಡಾ॥ ಕೃಷ್ಣಾನಂದ ಕಾಮತರು ಸಂಶೋಧನಾ ಕೇಂದ್ರವೊಂದರ ಮೇಲ್ವಿಚಾರಕರಾಗಿ ಪಶ್ಚಿಮ ಬಂಗಾಳದ ಇತಿಹಾಸ ಪ್ರಸಿದ್ಧ ಪ್ಲಾಸಿಯಲ್ಲಿ ಎರಡು ವರ್ಷ (೧೯೬೯-೧೯೭೧) ಬೀಡು ಬಿಟ್ಟಿದ್ದರು. ಆಗ ಅಲ್ಲಿನ ಪರಿಸ್ಥಿತಿ ಪ್ರಕ್ಷುಬ್ಧವಾಗಿದ್ದರೂ, ಬಂಗಾಲಿಗಳನ್ನು ತೀರ ಹತ್ತಿರದಿಂದ ನೋಡಿ ಅವರ ಆಸೆ ಆಕಾಂಕ್ಷೆಗಳನ್ನು ಅರಿತು ಅವರ ನಿತ್ಯಜೀವನವನ್ನು ಅಭ್ಯಸಿಸುವ ಹವ್ಯಾಸದಿಂದಾಗಿ ಸ್ಥೈರ್ಯದಿಂದ ಅಲ್ಲಿ ಏಕಾಂಗಿಯಾಗಿ ನೆಲೆಯೂರಿದರು. ಬಂಗಾಲಿಗಳನ್ನು ಅರಿತುಕೊಳ್ಳುವ ಹಂಬಲದಿಂದ ರಾಜ್ಯದ ಬೇರೆಬೇರೆ ಮೂಲೆಗಳಿಗೆ ಭೇಟಿಕೊಟ್ಟರು. ಕಾಮತರೇ ಹೇಳುವಂತೆ, "ಅಲ್ಲಿಯ ಜೀವನ ಮತ್ತು ರಾಜಕಾರಣವನ್ನು ಒಂದನ್ನು ಇನ್ನೊಂದರಿಂದ ಬೇರ್ಪಡಿಸುವುದು ತೀರ ಅಸಾಧ್ಯವಾದ ಮಾತು. ಆದ್ದರಿಂದ ಅಪೇಕ್ಷಿಸಿದ್ದಕ್ಕಿಂತ ಹೆಚ್ಚಿನ ರಾಜಕಾರಣದ ಚರ್ಚೆಯನ್ನು ಸೇರಿಸುವುದು ಅನಿವಾರ್ಯವಾಯಿತು... ರಾಜಕೀಯ ಪಕ್ಷಗಳು, ರಾಜ್ಯ ಸರಕಾರ, ಕೇಂದ್ರ ಸರಕಾರ ಮತ್ತು ಜನತೆ ಇವರೆಲ್ಲ ಸರಿಸಮವಾಗಿ ಬಂಗಾಲದ ಅಧಃಪತನಕ್ಕೆ ಹೊಣೆಗಾರರೆಂದು ನಂಬಿಕೆಯಿದ್ದುದರಿಂದಲೇ ಇದರಲ್ಲಿ ಯಾರೊಬ್ಬರನ್ನೂ ದೂರಲು ನಾನು ಸಿದ್ಧನಿಲ್ಲ. ಈ ದೃಷ್ಟಿಕೋನದಿಂದಲೇ ಬಂಗಾಲದ ಆಗುಹೋಗುಗಳನ್ನು ಅಳೆಯಲು ಪ್ರಯತ್ನಿಸಿದ್ದೇನೆ".

ಈ ಹಿನ್ನೆಲೆಯಲ್ಲಿ ತಮ್ಮ ಬಂಗಾಲದ ಅಧ್ಯಯನವನ್ನು ದಾಖಲಿಸಲು ಆರಂಭಿಸಿದ ಕಾಮತರು ನಲವತ್ತಾರು ಅಧ್ಯಾಯಗಳಲ್ಲಿ, ಮುನ್ನೂರು ಪುಟಗಳಲ್ಲಿ ಸಾಕಷ್ಟು ವ್ಯಾಪಕವಾಗಿಯೇ ವಿವರಿಸಿದ್ದಾರೆ. ಅವರ ದೃಷ್ಟಿಕೋನದಲ್ಲಿ ಸಮಾಜಶಾಸ್ತ್ರಜ್ಞನೊಬ್ಬನ ಶಿಸ್ತು ಮತ್ತು ಕುತೂಹಲ ಮಿಳಿತವಾಗಿರುವುದರಿಂದ ಅರ್ಥಪೂರ್ಣವಾದ ಅಧ್ಯಯನವೊಂದು ನಮಗೆ ಲಭ್ಯವಾಗಿದೆ. ಅವರ ಬರಹದಲ್ಲಿ ವಿನೋದಪರತೆಯೂ ಸೇರಿರುವುದರಿಂದ ಓದು ಸ್ವಾರಸ್ಯಪೂರ್ಣವಾಗುತ್ತದೆ. ಮೂವತ್ತು ವರ್ಷಗಳ ಹಿಂದೆ (೧೯೭೨) ಪ್ರಕಟವಾದ ಈ ಕೃತಿಯಲ್ಲಿನ ಪಶ್ಚಿಮ ಬಂಗಾಳದ ಜನಜೀವನವನ್ನು ಈಗಿನ ಪರಿಸ್ಥಿತಿಗೆ ಹೋಲಿಸಿ ನೋಡಿದರೂ ಹೆಚ್ಚಿನ ಸುಧಾರಣೆ ಆದಂತೇನೂ ಕಾಣುವುದಿಲ್ಲ.

ರಾಮಕೃಷ್ಣ ಪರಮಹಂಸ, ವಿವೇಕಾನಂದ, ಬಂಕಿಮಚಂದ್ರ, ರವೀಂದ್ರನಾಥ ಟ್ಯಾಗೋರ್, ನೇತಾಜಿ ಸುಭಾಸಚಂದ್ರಬೋಸ್, ಶರಚ್ಚಂದ್ರ ಚಟರ್ಜಿ, ಜಗದೀಶಚಂದ್ರಬೋಸ್, ಪ್ರಫುಲ್ಲಚಂದ್ರರಾಯ್ ಮುಂತಾದ ಅನೇಕ ಮಹನೀಯರು ಜನಿಸಿದ ನಾಡು; ರಾಷ್ಟ್ರಕ್ಕೆ ಪ್ರಥಮ ನೊಬೆಲ್ ಬಹುಮಾನ ತಂದವರ ನಾಡು; ವಂದೇ ಮಾತರಂ, ಜನಗಣಮನ ನೀಡಿದವರ ನಾಡು–ಎಂದೆಲ್ಲಾ ಹೆಸರಾದವರು ಬಂಗಾಳಿಗಳು. ಇಡೀ ಭಾರತ ನಾಳೆ ಯೋಚಿಸುವುದನ್ನು ಪಶ್ಚಿಮ ಬಂಗಾಳ ಇಂದೇ ಯೋಚಿಸುತ್ತದೆ ಎಂಬ ಸೂಕ್ತಿಯೂ ಇತ್ತು. ಆದರೆ ಕೃಷ್ಣಾನಂದ ಕಾಮತರು ಕಂಡು ಚಿತ್ರಿಸಿದ ಪಶ್ಚಿಮ ಬಂಗಾಳ ತೀರ ವಿಭಿನ್ನವಾಗಿದೆ. ಅಧ್ಯಾಯ ೩೧ರಲ್ಲಿ ಬಂಗಾಲಿಯ ವೈಶಿಷ್ಟ್ಯಗಳೇನು ಎಂದು ೪೫ ಅಂಶಗಳನ್ನು ಪಟ್ಟಿ ಮಾಡಿದ್ದಾರೆ. ಬಂಗಾಲಿಗಳ ವೈಚಿತ್ರ್ಯಗಳನ್ನೂ (೧೨) ಪಟ್ಟಿ ಮಾಡಿದ್ದಾರೆ. ಅದನ್ನು ಓದಿದಾಗ ಸಹಜವಾಗಿಯೇ ತಲ್ಲಣವಾಗುತ್ತದೆ. ಕೆಲವೇ ಮಂದಿ ಜಗಳಗಂಟರ ಹಿಡಿತದಲ್ಲಿ ಸಿಕ್ಕಿ ಇಡೀ ಸಮಾಜವೇ ಜರ್ಝರಿತವಾದ ಚಿತ್ರ ಮೂಡುತ್ತದೆ. ಕ್ರಾಂತಿಯ ಹೆಸರಿನಲ್ಲಿ ಕೊಲೆ, ಸುಲಿಗೆಯಲ್ಲಿ ತೊಡಗಿದವರೇ ಕಾಣುತ್ತಾರೆ. ಯುವ ಜನಾಂಗ ಸೋಮಾರಿಯೂ, ಬೇಜವಾಬ್ದಾರಿಯೂ, ದುರಹಂಕಾರದ್ದೂ ಆಗಿ ಬೆಳೆಯುತ್ತಿರುವುದನ್ನು ಕಂಡರೆ ಗಾಬರಿಯಾಗುತ್ತದೆ. ರಾಜಕಾರಣಿಗಳೂ ಕೂಡ ಜನರ ಕಷ್ಟಕಾರ್ಪಣ್ಯಗಳ ಬಗೆಗೆ ನಿರ್ಲಕ್ಷ್ಯದಿಂದಿದ್ದಾರೆ. ತಮ್ಮ ಬೇಳೆ ಬೇಯಿಸಿಕೊಳ್ಳಲು ಎಂತಹ ಹೀನ ಕಾರ್ಯಕ್ಕೂ ಹೇಸುವುದಿಲ್ಲ. ತಮ್ಮ ಕಾರ್ಯಕರ್ತರು ಮಾಡಿದ ಎಂತಹ ಅಪರಾಧಕ್ಕೂ ಮಾಫಿ ದೊರೆಯುತ್ತದೆ. ಇಂದೂ ಅದೇ ಪ್ರವೃತ್ತಿ ಮುಂದುವರಿಯುತ್ತಿರುವುದನ್ನು ನೋಡಬಹುದು.

ಕಾಮತರು ಅಲ್ಲಿದ್ದ ಕಾಲದಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟರು ಮತ್ತು ನಕ್ಸಲೀಯರ ಹಾವಳಿ ಅತಿರೇಕಕ್ಕೆ ಮುಟ್ಟಿತ್ತು. 'ತಮ್ಮ ಪಾರ್ಟಿಯವರ ಮೇಲೆ ಆಕ್ರಮಣ ನಡೆದಾಗ ಸ್ವಸಂರಕ್ಷಣೆಗಾಗಿ ಎದುರಾಳಿಗಳ ಕೊಲೆ ಮಾಡಿದರೂ ಕ್ಷಮ್ಯ ಎನ್ನುವುದು ಮಾರ್ಕ್ಸ್‌ವಾದಿ

ಮುಖಂಡರಾಗಿದ್ದ ಜ್ಯೋತಿಬಸು ಅವರ ಸಿದ್ಧಾಂತವಾಗಿತ್ತು. ಅವರ ಆಡಳಿತದಲ್ಲಿ ಇಂಥ ಸ್ವರಕ್ಷಣೆ ಕೊಲೆಗಳು ಅನೇಕ ನಡೆದವು ಎಂದು ಬೇರೆ ಹೇಳಬೇಕಾಗಿಲ್ಲ' ಎಂದು ಕಾಮತರು ದಾಖಲಿಸುತ್ತಾರೆ.

ಭೂಸುಧಾರಣೆ ಹಾಗೂ ಭೂಮಿ ಹಂಚುವಿಕೆ ನೆಪದಲ್ಲಿ ಜ್ಯೋತಿಬಸು ತಮ್ಮ ಪಾರ್ಟಿಯವರಿಗೆ ಹಳ್ಳಿಗಳಲ್ಲಿ ವರ್ಚಸ್ಸು ಬೆಳೆಸಲು ಆದೇಶವನ್ನು ಕೊಟ್ಟರು. ಸ್ವಯಂ ಸೇವಕರು ಆಯುಧಗಳನ್ನು ಹಿಡಿದು ಹೊಲದ ಮಾಲಿಕರ ಮನೆಗಳನ್ನು ಮುತ್ತಿಗೆ ಹಾಕಿ ಕಾಳಗ ನಡೆಸಿ, ಹೊಲಗಳನ್ನು ವಶಪಡಿಸಿಕೊಂಡು ತಮ್ಮ ಪಾರ್ಟಿಯ ಕೆಂಪು ಧ್ವಜಗಳನ್ನು ಹಾರಿಸಲಾರಂಭಿಸಿದರು. ಇಂಥ ದಾಳಿಗಳಲ್ಲಿ ಸಿಕ್ಕಿದ ಹಣ-ಬಂಗಾರಗಳು ಪಾರ್ಟಿಗೆ ಹೋದರೆ, ಹೊಲಗಳು, ಪಾರ್ಟಿ ಹೆಸರಿನಿಂದ ದುಡಿಯುವ ಗೂಂಡಾಗಳಿಗೆ ಸಲ್ಲುತ್ತಿತ್ತು. ಭೂಮಾಲಿಕರು ದೂರುಕೊಟ್ಟರೆ ಪೋಲೀಸರು ಅವರನ್ನೇ ಬಂಧಿಸುತ್ತಿದ್ದರು. ಇದರಿಂದ ಮಾರ್ಕ್ಸ್‌ವಾದಿಗಳಿಗೆ ಹೊಸ ಬಲ ಬಂದಿತು. ಕೊಲೆ-ಸುಲಿಗೆಗಳು ನಿತ್ಯದ ಮಾತಾದವು. ಕೆಲವು ಕಡೆ ಸ್ತ್ರೀಯರ ಮಾನಭಂಗ ಘಟನೆಗಳೂ ನಡೆದವು. ಪಾರ್ಟಿಯ ರಕ್ಷಾಕವಚ ಗೂಂಡರಿಗಿತ್ತು. ಪೋಲೀಸರು ಮತ್ತು ಮ್ಯಾಜಿಸ್ಟ್ರೇಟರೂ ಮಾರ್ಕ್ಸ್‌ವಾದಿ ಧೋರಣೆಗಳಿಗೆ ತಲೆಬಾಗಿ ನಡೆಯುತ್ತಿದ್ದರೆಂದರೆ ಅಲ್ಲಿನ ಕಾನೂನು ಮತ್ತು ವ್ಯವಸ್ಥೆ ಹೇಗಿತ್ತೆಂದು ಊಹಿಸಿಕೊಳ್ಳಬಹುದು.

ನಕ್ಸಲೀಯರು ಎಂಬ ಅಧ್ಯಾಯದಲ್ಲಿ ಬಂಗಾಳದಲ್ಲಿ ಅವರ ಹಾವಳಿಯ ಚಿತ್ರವನ್ನು ಕೊಟ್ಟಿದ್ದಾರೆ. ಚಾರು ಮುಝುಂದಾರ್ ಮತ್ತು ಕನು ಸನ್ಯಾಲರ ನೇತೃತ್ವದಲ್ಲಿ ಅವರು ಕ್ರಾಂತಿಯ ಹೆಸರಿನಲ್ಲಿ ನಡೆಸಿದ ಕೊಲೆ ಸುಲಿಗೆಗಳಿಗೆ ಲೆಕ್ಕವಿಲ್ಲ. ಒಕ್ಕಲಿಗನಿಗೆ, ಕಾಮಗಾರರಿಗೆ ನೇಗಿಲು, ಉಪಕರಣಗಳ ಬದಲಾಗಿ ಕೋವಿಗಳನ್ನು ಕೊಟ್ಟು, ಹಣ-ಹೊಲಗಳಿಂದ ಲಾಭ ಪಡೆದು ಬೊಜ್ಜು ಬೆಳೆಸಿಕೊಂಡವರನ್ನು ನಿರ್ನಾಮ ಮಾಡಿ, ಅವರ ಸಂಪತ್ತನ್ನು ಬಡಬಗ್ಗರಲ್ಲಿ ಹಂಚಿ, ಭಾರತಕ್ಕೆ ಸಮತಾವಾದ ತರಬೇಕು ಎಂಬುದು ನಕ್ಸಲೀಯರ ಧ್ಯೇಯ. ಇದರಿಂದ ನಗರಗಳಲ್ಲಿ ನಕ್ಸಲೀಯರ ಕ್ರಾಂತಿ ಮರವಾಗಿ ಬೆಳೆಯಲಾರಂಭಿಸಿತು. ಭವಿಷ್ಯ ತೀರ ಅನಿಶ್ಚಿತವಾಗಿರುವ ಸುಶಿಕ್ಷಿತ ಯುವಕರಿಗೆ, ಈ ಹೊಸ ಕ್ರಾಂತಿ ಹೆಚ್ಚು ಆಕರ್ಷಕವೆನಿಸಿತು. ಅವರೆಲ್ಲ ಗುಪ್ತವಾಗಿ ನಕ್ಸಲೀಯ ಪಂಗಡಕ್ಕೆ ಸೇರಿಕೊಂಡರು. ಮುಂದೆ ನಕ್ಸಲೀಯರೆಂದು ಬಂಧಿತರಾದವರಲ್ಲಿ ಕಾಲೇಜಿನ ಪ್ರಾಧ್ಯಾಪಕರು, ಡಾಕ್ಟರರು, ಸ್ನಾತಕೋತ್ತರ ಪದವೀಧರರು, ಬುದ್ಧಿಜೀವಿಗಳು, ಮಾಧ್ಯಮಿಕ ಶಿಕ್ಷಕರು, ಸರಕಾರಿ ನೌಕರರು ಇದ್ದರೆಂಬುದು ಗಮನಾರ್ಹ ಸಂಗತಿ. ಪೋಲೀಸರೇ ನಕ್ಸಲೀಯರಿಗೆ ಮಣಿದು ಅವರು ಹೇಳಿದಂತೆ ಕುಣಿಯಲಾರಂಭಿಸಿದ್ದರಿಂದ ನಕ್ಸಲೀಯರಿಗೆ ಗರಿಮೂಡಿದಂತಾಯಿತು. ಪಶ್ಚಿಮ ಬಂಗಾಳದ ದುರಂತಕ್ಕೆ ನಕ್ಸಲೀಯರು ಇನ್ನೊಂದು ಕನ್ನಡಿ ಹಿಡಿದರು.

ಹೀಗೆ ಎಳೆ ಎಳೆಯಾಗಿ ವಂಗದರ್ಶನ ಮಾಡಿಸುವ ಕೃಷ್ಣಾನಂದ ಕಾಮತರು, ಬಂಗಾಳದ ಅಡಿಗೆಯ ಬಗೆಗಳನ್ನು ಬರೆಯಲೂ ಮರೆಯುವುದಿಲ್ಲ. ಅದಕ್ಕಾಗಿಯೇ ಒಂದು ಅಧ್ಯಾಯವನ್ನು ಮೀಸಲಿರಿಸಿ ಬಗೆಬಗೆಯ ಅನ್ನವಿಧಗಳು, ಪಲ್ಯಗಳು, ಸಾರುಹುಳಿಗಳು ಮತ್ತು ಮಿಠಾಯಿಗಳನ್ನು ತಯಾರಿಸುವ ವಿಧಾನಗಳನ್ನು ವಿವರಿಸಿದ್ದಾರೆ. ಅಲ್ಲದೆ ಚಂದಾ ಎತ್ತುವವರ ಹಾವಳಿ, ಶಾಂತಿ ನಿಕೇತನದ ಭೇಟಿಯ ಕಟು ಅನುಭವ, ಬಂದ್ ಸಂಸ್ಕೃತಿ, ಆಟಕೂಟಗಳು, ಶಿಕ್ಷಣಕ್ರಮ, ಕಲ್ಕತ್ತ ದರ್ಶನ ಮುಂತಾದ ವಿಷಯಗಳ ಮೇಲೂ ತಮ್ಮ ಕ್ಷ-ಕಿರಣ ಬೀರಿದ್ದಾರೆ. ಬಂಗಾಳಿಗಳ ಕಲೆ, ಸಾಹಿತ್ಯ ಜಾನಪದ ಕಲೆ, ಪತ್ರಿಕೋದ್ಯಮ ಈ ವಿಷಯಗಳನ್ನು ಕುರಿತು ಇಲ್ಲಿ ಯಾವ ಮಾಹಿತಿಯೂ ಸಿಗುವುದಿಲ್ಲ. ಬಂಗಾಳಿಯನ್ನು ಚೆನ್ನಾಗಿ ಕಲಿಯುವ ಹಂಬಲ ಪೂರೈಸಿದ್ದರೆ ಪ್ರಾಯಶ ಈ ವಿಚಾರಗಳ ಬಗೆಗೂ ಕಾಮತರು ಲೇಖನಿ ಹರಿಸದೇ ಬಿಡುತ್ತಿರಲಿಲ್ಲ. ಫೋಟೋ ಮತ್ತು ಕಾರ್ಟೂನುಗಳನ್ನು ಸೇರಿಸಿ ಕೃತಿಯನ್ನು ಸಚಿತ್ರಗೊಳಿಸಿರುವ ಕಾಮತರು, 'ತಮಿಳು ತಲೆಗಳ ನಡುವೆ' ಕೃತಿಯ ದಿ. ಬಿ.ಜಿ.ಎಲ್. ಸ್ವಾಮಿ ಅವರನ್ನು ನೆನಪಿಸುತ್ತಾರೆ. ಒಟ್ಟಿನಲ್ಲಿ ಕಾಮತರು ತಮ್ಮ ಕುತೂಹಲದ ಕಣ್ಣುಗಳಿಂದ ಕಂಡು ದಾಖಲಿಸಿದ ಬಂಗಾಳಿಗಳ ಜನಜೀವನ, ವಂಗದರ್ಶನದಲ್ಲಿ ಕೊಂಚ ಢಾಳಾಗಿಯೇ ಮೂಡಿಬಂದಿದೆ ಎಂದರೆ ಅತಿಶಯೋಕ್ತಿಯಲ್ಲ.



❑



# 'ವಂಗದರ್ಶನ'- II

ಎನ್ಕೆ

ನಮ್ಮ ಕೃಷ್ಣಾನಂದ ಕಾಮತರು ಏನೇ ನೋಡಿದರೂ ಅದು ತಮ್ಮ ಒಳಗಣ್ಣಿನ, ಒಳಗಣ್ಣಾಗಿದ್ದ ಕ್ಯಾಮೆರಾ ಕಣ್ಣಿಂದ. ನನ್ನನ್ನೂ ಕೂಡ ನಮ್ಮ ಮನೆಯ ಹೊಸ್ತಿಲೊಳಗೆ ಕಾಲಿಟ್ಟ ಕೂಡಲೇ ಅವರು ಸಕೃದ್ದರ್ಶನ ಪಡೆದದ್ದು ತಮ್ಮ ಕ್ಯಾಮರಾ ಕಣ್ಣಿನಿಂದಲೆ. ನನ್ನ ಮುಖ ಮೂತಿಯ ರಹಸ್ಯ-ರೂಪ-ರೇಷೆಗಳೇನು ಎಂಬುದನ್ನು ನನ್ನ ಮುಖಕ್ಕೆ ಕನ್ನಡಿ ಹಿಡಿದಂತೆ, ಆ ನನ್ನ ಮುಖಚಂದ್ರವ (ಪೂರ್ಣಚಂದ್ರವೋ-ಗ್ರಹಣ ಚಂದ್ರವೋ ಗೊತ್ತಿಲ್ಲ) ದರ್ಶನಮಾಡಿದ್ದರು. ಬಹುಶಃ ನನ್ನ ಸಹಸ್ರ ಚಂದ್ರದರ್ಶನದ ಕಾಲ ಆದಾಗಿರಬೇಕು.

'ಮನೋಹರ ಗ್ರಂಥಮಾಲೆ'ಯಲ್ಲಿ ಪ್ರಕಟವಾದ ಕೃಷ್ಣಾನಂದ ಕಾಮತರ 'ವಂಗದರ್ಶನ' ಓದಿ ಮುಗ್ಧನಾದ ನಾನು ನನ್ನ ಮಿತ್ರ ಲಾಂಗೂಲಾಚಾರ್ಯರಿಗೆ (ಶ್ರೀ ಪಾ.ವೆಂ. ಆಚಾರ್ಯ) 'ಕಸ್ತೂರಿ'ಗಾಗಿ ಅದರ ಸಾರಾಂಶವನ್ನು ಪುಸ್ತಕ ವಿಭಾಗಕ್ಕೆ ಮಾಡಬಹುದೇ? ಎಂದು ಕೇಳಿದಾಗ ಅವರು ಸಂತೋಷದಿಂದ ಒಪ್ಪಿದರು. ನಾನು ಅದನ್ನು ಪುಸ್ತಕ ವಿಭಾಗ ಗಾತ್ರಕ್ಕೆ ಅಳವಡಿಸಿದೆ.

ಹೇಳಿದೆನಲ್ಲ, ಕೃಷ್ಣಾನಂದರು ಯಾವುದೇ ಪ್ರದೇಶದ ಜನರನ್ನು ನೋಡಲಿ, ಜಲವನ್ನು ನೋಡಲಿ, ನೆಲವನ್ನು ನೋಡುವುದು ಅವರದೇ ಆದ ವ್ಯಕ್ತಿತ್ವದ ಮುದ್ರೆಯನ್ನು ಧರಿಸಿರುತ್ತಿತ್ತು, ಅದು "ವಂಗದರ್ಶನ"ವೇ ಆಗಿರಲಿ, "ಮಧ್ಯಪ್ರದೇಶದ ಮಡಿಲಲ್ಲಿ"ಯೇ ಆಗಿರಲಿ.

ಪ್ರವಾಸ ಸಾಹಿತ್ಯ ನಿರ್ಮಿಸಬೇಕು ಕೃಷ್ಣಾನಂದರೇ! ವಾಚಕನಿಗೆ ಯಾವ ಒಂದು ಆಸಕ್ತಿ, ಎಂಥ ಒಂದು ಜಿಜ್ಞಾಸೆಗಳಿರುತ್ತವೆಂಬುದು ಕೃಷ್ಣಾನಂದರಿಗೆ ಗೊತ್ತಿತ್ತು. ಅಂತೆಯೇ ಜನಮನರಂಜನೀಯವಾಗಿ ಬರೆಯಬಲ್ಲರು.

ವಂಗದೇಶಕ್ಕೆ ಎಂದರೆ ಸ್ವಾತಂತ್ರ್ಯ ನಂತರದ ಪಶ್ಚಿಮ ಬಂಗಾಲದ ಪ್ರವಾಸ ಕೈಕೊಂಡು ಅಂತಹ ಒಂದು ಪ್ರದೇಶ ಪ್ರವಾಸವನ್ನು ಕೈಕೊಂಡು ತಾವೂ ಏನೂ ಅರಿಯದ, ಅಲ್ಲಿಯ ಭಾಷೆಯನ್ನು, ಅಲ್ಲಿ ಹಳ್ಳಿ ಪಳ್ಳಿಗಳನ್ನು ಏನೂ ಗೊತ್ತಿಲ್ಲದ ಪ್ರದೇಶಕ್ಕೆ ಭೆಟ್ಟಿಕೊಟ್ಟಾಗ – ತಾವು ಇಳಿದುಕೊಳ್ಳಬೇಕಾದ ಹೋಟೆಲ್ ಹೆಸರಿನ ಮಾತ್ರದಿಂದಲೇ ಸುಂದರವಾದ ಹೋಟೆಲ್ ಒಂದನ್ನು ಶೋಧಿಸಿ ಆ ಕೇಂದ್ರದಿಂದಲೇ ಕವೀಂದ್ರ ರವೀಂದ್ರರು ಬರೆದ 'ಕಾಬೂಲಿವಾಲಾ'ದ ಆ ಎತ್ತರ ನಿಲುವಿನ ಕಾಬೂಲಿವಾಲ, 'ಮಿನಿ'ಗಾಗಿ ತರುತ್ತಿದ್ದ ಸಿಹಿಯ ಆ ಆಕರ್ಷಕ ವಾತ್ಸಲ್ಯ ಶಕ್ತಿಯನ್ನು ಬಣ್ಣಿಸಿದ ಕಣ್ಣಿನಿಂದಲೇ ನಮ್ಮ ಕೃಷ್ಣಾನಂದರು ವಂಗದೇಶವನ್ನು ಕಂಡಿದ್ದಾರೆ!

ಇದಕ್ಕೂ ಹೆಚ್ಚಾಗಿ ಕೃಷ್ಣಾನಂದರು ಮನಸಾರೆ ಮೆಚ್ಚುವುದು ವಂಗದೇಶದ ಜಾನಪದ ಜನ, ಜಾನಪದ ಪ್ರದೇಶಗಳು, ಅಲ್ಲಿಯ ಆದಿವಾಸಿಗಳು, ಆ 'ಪಲ್ಲೀ ಸಮಾಜ'. ಅವರ ಮುಗ್ಧ ಮನೋಭಾವ, ಹೊಲಗಳಲ್ಲಿ ಮೈಮೇಲೆ ಕುಪ್ಪಸಗಳು ಸಹ ಇಲ್ಲದೆ ಹಸಿರು ಹೊಲಗಳಲ್ಲಿ ಕೆಸರೆನ್ನದೆ ಕಸವೆನ್ನದೆ ದುಡಿಯುವ ತುಂಬಿದ ತರುಣಿಯರು, ಅವರ ಕಷ್ಟ ಸಹನೆ, ಅವರ ಕೃಷಿ, ಬದುಕಿನ ಬಣ್ಣನೆ, ಅವರ ಆಹಾರ, ಅವರ ಮಾತು– ರೀತಿ ಇವರಿಗೆ ಆ ಭಾಷೆ ತಿಳಿಯದಿದ್ದರು ಆ ಭಾಷೆಗೂ ಭಾವನೆಗಳನ್ನು ಗ್ರಹಿಸಬಲ್ಲ ಸಹಾನುಭೂತಿಗುಣಗಳಿಂದ ಜಾನಪದ ವಂಗದ ಸುಂದರ ಚಿತ್ರಣವನ್ನು ನಮಗೆ ನೀಡಲು ಸಮರ್ಥರಾಗಿದ್ದಾರೆ. ಆ ಮುಗ್ಧ ತರುಣಿಯರೊಂದಿಗೆ ಮಾತನಾಡುವ ಸೊಗಸುಗಾರಿಕೆ ಈ ಪ್ರವಾಸ ನಿರೂಪಣೆಯ ರಸವತ್ತಾದ ಭಾಗ. ವಂಗ ಜಾನಪದ ಜನಾಂಗದ ಯುವತಿಯರ ಮುಗ್ಧ 'ನಯನೋಂಕೀ ಭಾಷಾ, ತಿಳಿಯಬಲ್ಲವರಾಗಿದ್ದರು'.

ಅದೇ ರೀತಿ ಪಟ್ಟಣದ ಜನಜೀವನ, ಅಲ್ಲಿಯ ವಾಹನಗಳು, ಕೋಲ್ಕತ್ತಾದ ಜನ ನಿಬಿಡ ಪ್ರದೇಶಗಳು ಪಟ್ಟಣದಲ್ಲಿಯ 'ಸ್ಲಂ' ಪ್ರದೇಶಗಳು, (ಮದರ್ ತೆರೆಸಾ ಆಸಕ್ತಿಯಿಂದ ಆ ಸ್ಲಂ ಮಕ್ಕಳನ್ನು ಜನಜೀವನದ ಮುಖ್ಯ ಪ್ರವಾಹದ ದಂಡೆಗೆ ತಂದು ನಿಲ್ಲಿಸಿದ ಸಾಹಸವನ್ನಿಲ್ಲಿ ನೆನೆಯಬಹುದು.)

ಕೃಷ್ಣಾನಂದರು ಕೇವಲ ಒಬ್ಬ ಕಲಾವಿದರಾಗಿ ವಂಗ ದೇಶದ ತರುಣಿಯರ ಬರಿಮೈ ಛಾಯಚಿತ್ರಗಳನ್ನು ತೆಗೆದರೆ, ತಮ್ಮ ಪತಿಯ ರಸ ದೃಷ್ಟಿಯನ್ನು ತಿಳಿದ ಪತ್ನಿ ಜ್ಯೋತ್ಸ್ನಾ ಅವರು ಪತಿಗೆ 'ಇವೇನು ಅಸಭ್ಯ ಫೋಟೋಗಳು?' ಎಂದು ಬೇಸರ ವ್ಯಕ್ತ ಮಾಡಿದವರಲ್ಲ.

ಪತಿಯ ಪತ್ನೀ ನಿಷ್ಠೆಯನ್ನು ಬಲ್ಲ ಅವರು ಕೃಷ್ಣಾನಂದರ ಮುಕ್ತ ಬರವಣಿಗೆಗೆ ಮುಕ್ತ ದ್ವಾರ ನೀಡಿದ್ದಾರೆ. ಹೀಗೆ ಉಭಯತರೂ ದಂಪತಿಗಳು ಬದುಕನ್ನು ಹೇಗೆ ಬದುಕಬೇಕೆಂಬ ಹದ ಬಲ್ಲವರು.

ಅಂತೆಯೇ ಕೃಷ್ಣಾನಂದರು ಇಷ್ಟೊಂದು ತೆರೆದ ಮನಸ್ಸಿನಿಂದ ವಂಗದೇಶವನ್ನು ಯಾವ ಕಂಗಳಿಂದ ಕಂಡು ಚಿತ್ರಿಸಿದ್ದಾರೋ ಆ ರಸನಿರೂಪಣೆಯನ್ನು ಮನಸಾರೆ ಮೆಚ್ಚಿ ಉತ್ತೇಜನ ಕೊಟ್ಟಿರುವುದನ್ನು ಈ ಲೇಖಕ ಈ ಪುಸ್ತಕದಲ್ಲಿ ಲೇಖಕರ ಪ್ರವಾಸ ಸಾಹಿತ್ಯದ, ಪ್ರವಾಸ ನಿರೂಪಣೆಯ ಎರಡು ಸಾಲುಗಳ ನಡುವಿನ ಧ್ವನಿಯನ್ನು ಗ್ರಹಿಸಿ ಮೆಚ್ಚಿಕೊಂಡಿದ್ದಾನೆ.

ವಂಗದೇಶದಲ್ಲಿ ಕಾಮತರು ವ್ಯಾಪಾರಮಾಡಿದ್ದು 'ಫ್ಲಾಯಿಪ್‌ವೇ ಲೇಡ್‌ಲಾಗಳಂತಹ ಶ್ರೀಮಂತರ ಅಂಗಡಿಗಳಲ್ಲಲ್ಲ, ಚಿಲ್ಲರೆ ವ್ಯಾಪಾರಿಗಳಲ್ಲಿ, ತರಕಾರಿ ಖರೀದಿಯೂ ಬೀದಿಗಳಲ್ಲಿ ಬುಟ್ಟ ಇಟ್ಟುಕೊಂಡು ಕುಳಿತ ತೊಪ್ಪಲು ಪಲ್ಲೆ-ಕೋಮ್ಯಾಕೆಗಳಂತರ ಸಂತೆಯ ಸಾಮಾನ್ಯ ಕಾಯಿಪಲ್ಲೆ ವ್ಯಾಪಾರಿಗಳಲ್ಲಿ. ಇಂತಹ ಬೀದಿಯ ವ್ಯಾಪಾರಿಗಳೇ ಹೆಚ್ಚು ಪ್ರಾಮಾಣಿಕರಾಗಿರುತ್ತಾರೆಂಬ ರಹಸ್ಯವನ್ನು ಕಾಮತರು ಬಲ್ಲರು.

ವಂಗದೇಶ ಭಾರತಕ್ಕೇ ಹೆಸರುತಂದ ಶ್ರೇಷ್ಠ ಮಹಾಪುರುಷರನ್ನು ಹಡೆದ ತಾಯಿನಾಡು. ೧೮೬೧ರಲ್ಲಿ ಕವೀಂದ್ರ ರವೀಂದ್ರರು, ೧೮೬೩ರಲ್ಲಿ ಸ್ವಾಮಿ ವಿವೇಕಾನಂದರು, ೧೮೭೨ರಲ್ಲಿ ಮಹಾಯೋಗಿ ಅರವಿಂದರು ಜನ್ಮ ತಾಳಿದರು.

ಭಾರತೀಯ ಸಂಸ್ಕೃತಿಗೆ ವಂಗದೇಶ ನೀಡಿದ ಮೌಲಿಕ ಕೊಡುಗೆ ದೊಡ್ಡದು. ಗುಜರಾತ್ ಒಬ್ಬ ವಿಶ್ವ ಪುರುಷ ಮಹಾತ್ಮ ಗಾಂಧಿಯನ್ನು ನಿರ್ಮಿಸಿದರೆ, ವಂಗದೇಶ ಮೇಲಿನ ಮೂವರು ಜಗತ್ ಪ್ರಸಿದ್ಧ ಮಹಾಪುರುಷರಿಗೆ ಜನ್ಮ ನೀಡಿತು.

ವಂಗದೇಶಕ್ಕೆ ಭೆಟ್ಟಿನೀಡುವುದೆಂದರೆ ಭಾರತದ ಸಂಸ್ಕೃತಿಯ ಕೇಂದ್ರಕ್ಕೆ ಭೆಟ್ಟಿಕೊಟ್ಟಂತೆ. ಭಾರತವು ಹಳ್ಳಿಗಳ ದೇಶವೆಂದರೆ ಶರತ್‌ಚಂದ್ರ ಚಟರ್ಜಿ ಅವರಂತಹ ಮಹಾ ಕಾದಂಬರಿಕಾರರು ವಂಗದೇಶದ 'ಪಲ್ಲಿ' ಸಮಾಜವನ್ನೇ ತಮ್ಮ ಕಾದಂಬರಿಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಇಂತಪ ಘನತೆವೆತ್ತ ವಂಗದೇಶಕ್ಕೆ ಭೆಟ್ಟಿಕೊಟ್ಟ ನಮ್ಮ ಕೃಷ್ಣಾನಂದ ಕಾಮತರು ಒಂದು ಜೀವಂತ ಸಮಾಜ, ಜೀವಂತ ಸಂಸ್ಕೃತಿ, ಹಳ್ಳಿಗಳ ಗುಚ್ಛವೆನಿಸುವಂಥ ನಾಡಿಗೆ ಭೆಟ್ಟಿಕೊಟ್ಟು ಆರ್ಥಿಕವಾಗಿ ಬೇಕಾದಷ್ಟು ವೆಚ್ಚಮಾಡಿದರೂ ಸಾರ್ಥಕವಾಗಿ ಮೌಲಿಕವಾದ, ಅಮೂಲ್ಯವೆನಿಸುವ ಸಾಮಗ್ರಿಯನ್ನು ತಂದು ತಮ್ಮ ಈ 'ವಂಗದರ್ಶನ' ದಲ್ಲಿ ಭಾಂಡಾರಿಸಿದ್ದರೆ. ಇದರಿಂದಾಗಿ ಈ ಕೃತಿಯಂತೆ, ಈ ಕೃತಿಕಾರ ಕೃಷ್ಣಾನಂದರೂ ಅಮರರೇ ಎಂದು ನನ್ನ ನಮ್ರ ಭಾವನೆ. ನಮನಗಳು!



# "ಮರುಪಯಣ" - ಒಂದು ಪರಿಚಯ

ನಾರಾಯಣ ಕುಲಕರ್ಣಿ

ಇಂದಿನ ಕನ್ನಡ ಸಾಹಿತ್ಯದ ಚಿಂತನಶೀಲ ಬರಹಗಾರರಲ್ಲಿ ಡಾ|| ಕೃಷ್ಣಾನಂದ ಕಾಮತರು ಪ್ರಮುಖರು. ಪ್ರವಾಸಕಥನ, ಸಾಮಾಜಿಕ ಕಾಳಜಿ, ಪರಿಸರ ಪ್ರಜ್ಞೆ, ಸಾಂಸ್ಕೃತಿಕ ಮೌಲ್ಯಗಳು ಹಾಗೂ ಸಸ್ಯಪ್ರಾಣಿ, ಪಕ್ಷಿ ಸಂಕುಲಗಳ ವಿಜ್ಞಾನ ಹೀಗೆ ವೈವಿಧ್ಯಮಯ ವಿಷಯಗಳನ್ನೊಳಗೊಂಡ ಅವರ ಸಾಹಿತ್ಯ ಕೃತಿಗಳು ಕನ್ನಡ ಸಾರಸ್ವತ ಲೋಕದ ಚಿಂತನಶೀಲ ಓದುಗರಿಗೆ ಚಿರಪರಿಚಿತವಾದವುಗಳು. ಸುಮಾರು ಅರವತ್ತರ ದಶಕದಲ್ಲಿ ಡಾ|| ಕಾಮತರು ತಮ್ಮ ಚೊಚ್ಚಲ ಕೃತಿ "ನಾನೂ ಅಮೇರಿಕೆಗೆ ಹೋಗಿದ್ದೆ" ಯಿಂದ ಕನ್ನಡ ಸಾಹಿತ್ಯಲೋಕವನ್ನು ಪ್ರವೇಶಿಸಿದರು. ತಮ್ಮ ಈ ಪ್ರಥಮ ಕೃತಿಯಿಂದಲೇ ಪ್ರಸಿದ್ಧಿಯನ್ನು ಪಡೆದರು. ನಂತರದಲ್ಲಿ ಅವರ "ವಂಗದರ್ಶನ", "ನಾ ರಾಜಸ್ಥಾನದಲ್ಲಿ", "ಬಸ್ತರ ಪ್ರವಾಸ" ಪ್ರಕಟಣೆಗೊಂಡು ಪಶ್ಚಿಮಬಂಗಾಲ, ರಾಜಸ್ಥಾನ ಹಾಗೂ ಮಧ್ಯಪ್ರದೇಶ ರಾಜ್ಯಗಳ ಜನಾಂಗೀಯ ಸಾಂಸ್ಕೃತಿಕ ದರ್ಶನವನ್ನು ಕನ್ನಡಿಗರಿಗೆ ಮಾಡಿಸಿದವು. "ಪ್ರಾಣಿ ಪರಿಸರ", "ಪಶುಪಕ್ಷಿ ಪ್ರಪಂಚ", "ಸಸ್ಯ ಪ್ರಪಂಚ", "ಕೀಟ ಜಗತ್ತು" ಇವುಗಳು ಡಾ. ಕಾಮತ್ ನಮ್ಮ ಕನ್ನಡ ವೈಜ್ಞಾನಿಕ ಸಾಹಿತ್ಯಕ್ಕೆ ಸಲ್ಲಿಸಿದ ಉತ್ತಮ ಕೊಡುಗೆಗಳಾಗಿವೆ. ಪ್ರಸ್ತುತ "ಮರುಪಯಣ" ಕೃತಿ ಡಾ. ಕಾಮತರ ಆಕಸ್ಮಿಕ ಮರಣದಿಂದಾಗಿ ಅವರ ಸಾಹಿತ್ಯ ಕೃತಿಗಳ "ಹಂಸಗೀತೆ"ಯಾದುದು ನಮ್ಮೆಲ್ಲರ ದುರ್ದೈವ.

"ಮರುಪಯಣ", ಪರಿಸರ ಪ್ರಜ್ಞೆಯ ಬಗೆಗೆ ಜನಜಾಗೃತಿ ಮೂಡಿಸುವ ಒಂದು ಅಪೂರ್ವ ಕೃತಿ. ಒಂದು ವಿಧದಲ್ಲಿ, ಪ್ರಕೃತಿ ವಿನಾಶದ ಇಂದಿನ ದಿನಗಳಲ್ಲಿ "ಎಚ್ಚರಿಕೆಯ ಗಂಟೆ" ಎಂದು ಹೇಳಿದರೆ ತಪ್ಪಾಗಲಾರದು. ಈ ಮಾತಿಗೆ ಸಮರ್ಪಕವಾಗಿ ಕೃತಿಯನ್ನು ಸುಪ್ರಸಿದ್ಧ ಪರಿಸರವಾದಿ ದಿ| ಕುಸುಮಾ ಸೊರಬ ಇವರಿಗೆ ಸಮರ್ಪಿಸಿದ್ದಾರೆ. ಲೇಖಕರ ಸಮಸ್ತ ಪರಿವಾರವು ನಿಸರ್ಗನೆಲೆಯಾದ ತಮ್ಮ ಹುಟ್ಟೂರು ಹೊನ್ನಾವರದಲ್ಲಿ ಕಾಯಂ ಆಗಿ ನೆಲೆಸಲು ಬಯಸಿದವರು. ಅಲ್ಲಿನ ಪರಿಸರನಾಶ, ಜನಜೀವನದಲ್ಲಿನ ಮೌಲ್ಯಗಳ ಕುಸಿತ ಇವುಗಳನ್ನು ಕಣ್ಣಾರೆ ಕಂಡು, ತಮ್ಮ ಮೊದಲಿನ ನಿರ್ಧಾರವನ್ನು ಬದಲಿಸಿ, ಮರಳಿ ತಮ್ಮ 'ಪಟ್ಟಣ' ಸೇರುವುದೇ ಈ ಕೃತಿಯ ಸಾರಾಂಶ. ಲೇಖಕರ ಕುಟುಂಬವರ್ಗದವರ ಸರಸ ಸಂಭಾಷಣೆಯೊಂದಿಗೆ ಪ್ರಸ್ತುತ ಪಡಿಸಲಿರುವ ವಿಷಯಗಳು ಕ್ರಮವಾಗಿ ಅನಾವರಣಗೊಳ್ಳುತ್ತ ಹೋಗುತ್ತವೆ. ಕ್ರಿಶ್ (ಲೇಖಕರು), ಜೋ (ಪತ್ನಿ), ವಿಕ್ (ಮಗ), ಕಿಮ್ (ಸೊಸೆ) ಹಾಗೂ ತುಳಸು (ತಮ್ಮ) ಹೀಗೆ ಕುಟುಂಬದ ಸದಸ್ಯರು ಲೇಖಕನನ್ನೇ, ಕೇಂದ್ರಬಿಂದುವನ್ನಾಗಿ ಇರಿಸಿಕೊಂಡು ಸಂಭಾಷಿಸುತ್ತಾ ಸ್ವಾತಂತ್ರ್ಯೋತ್ತರ ಭಾರತದ ಶೋಚನೀಯ ಸ್ಥಿತಿಯ ಬಗೆಗೆ ಚಿಂತನೆಯನ್ನು ಮಾಡುತ್ತಾ ಹೋಗುತ್ತಾರೆ. ತಮ್ಮ 'ಹೊನ್ನಿನ ಊರು' ಹೇಗೆ ತನ್ನ ಅಧೋಗತಿಯನ್ನು ಕಂಡಿತು ಎಂಬುದನ್ನು ಪರಿಣಾಮಕಾರಿಯಾಗಿ ನಿರೂಪಿಸಲಾಗಿದೆ. ಈ ಕೃತಿಯ ಮುನ್ನುಡಿಯಲ್ಲಿ ಹೇಳುವಂತೆ "ಹೊನ್ನಾವರ"ದ ಪತನ ಕೇವಲ ಸಾಂಕೇತಿಕವಷ್ಟೆ! ಇದು ಸಮಸ್ತ ಭಾರತದ ಹಳ್ಳಿಗಳ ಅಧಃಪತನದ ಚಿತ್ರಣವಾಗಿದೆ.

ನಮ್ಮ ನಾಡಿನ ಸಾರಿಗೆಯ ಅವ್ಯವಸ್ಥೆಯ ಚಿತ್ರಣದೊಂದಿಗೆ ಪ್ರಾರಂಭಗೊಂಡ ಲೇಖಕ ಹಾಗೂ ಅವರ ಪರಿವಾರದವರ ಪಯಣದ ಕತೆ, ಗಂಡು ಚಿಗರೆಯೊಂದು ಬಸ್ಸಿನ ಅಪಘಾತಕ್ಕೀಡಾಗಿ ಬಲಿಯಾದ ಹೃದಯವಿದ್ರಾವಕ ಸನ್ನಿವೇಶದಿಂದ ಪರ್ಯವಸಾನಗೊಂಡು ನಮ್ಮಲ್ಲಿನ ವ್ಯವಸ್ಥೆಯ ದುರಂತವನ್ನು ತೆರೆದು ತೋರಿಸುತ್ತದೆ. ಪ್ರಾಣಿ ಪ್ರಪಂಚದ ಬಗೆಗೆ ಇರುವ ನಮ್ಮ ಜನಗಳ 'ಅಸಡ್ಡೆ', 'ದುರುದ್ದೇಶ' ಇವುಗಳು ಬೆಳಕಿಗೆ ಬಂದು ಲೇಖಕನನ್ನು ತಲ್ಲಣಗೊಳಿಸುತ್ತದೆ. ಕೃತಿಯ ಉದ್ದಕ್ಕೂ ನಮ್ಮ ಪರಿಸರ, ಪ್ರಾಣಿ, ಪಕ್ಷಿಸಂಕುಲ ಇವುಗಳ ವಿನಾಶದ ಬಗೆಗೆ ತಮ್ಮ ಅಂತರ್ಯದ ತುಮುಲವನ್ನು ವ್ಯಕ್ತಪಡಿಸಿದ್ದಾರೆ. "ಜಲಮಾತೆಯನ್ನು ಇಪ್ಪತ್ತನಾಲ್ಕು ತಾಸು ದುಡಿಯಲು ಹಚ್ಚಿ, ಪುಕ್ಕಟೆ ವಿದ್ಯುತ್ತು ಪಡೆಯುವದು" "ಶತಮಾನಗಳಿಂದ ಪಾವನ ಗಂಗೆಯಾಗಿ ಹರಿಯುತ್ತಿದ್ದ ಶರಾವತಿಯ ಕರುಳನ್ನೇ ಬಗಿಯುವ ಉಗ್ರಕ್ರಮ" ಇವುಗಳ ಬಗ್ಗೆ ಕಿಡಿಕಾರಿದ್ದಾರೆ.

ನಮ್ಮ ಸ್ವಾತಂತ್ರ್ಯೋತ್ತರ ಭಾರತದೇಶದ ಬದಲಾದ "ಕಾರ್ಯವಿಧಾನ" ಹೇಗೆ ನಮ್ಮ ಜೀವನ ಮೌಲ್ಯಗಳನ್ನು ಅಪಮೌಲ್ಯಗೊಳಿಸಿವೆ ಎಂಬುದನ್ನು ಲೇಖಕರು ತಮ್ಮ ಮುಂದಿನ ಪ್ರಕರಣಗಳಲ್ಲಿ ಪರಿಣಾಮಕಾರಿಯಗಿ ನಿರೂಪಿಸಿದ್ದಾರೆ. ಯೋಜನೆಗಳನ್ನು ರೂಪಿಸುವುದರಲ್ಲಿ ನಾವು ಹೇಗೆ ವಿಫಲರಾದೆವು, ಎಂಬುದನ್ನು ಉದಾಹರಣೆ ಸಹಿತ ವಿವರಿಸುತ್ತಾರೆ. ಕಪಟಿಗರು, ವಂಚಕರು, ದರೋಡೆಕೋರರು ರಾಜಕೀಯ

ಕ್ಷೇತ್ರವನ್ನು ಪ್ರವೇಶಿಸಿ ನಮ್ಮ ದೇಶವನ್ನು ಹೇಗೆ ಅಧಃಪತನದ ಕಡೆಗೆ ಕೊಂಡೊಯ್ದರು ಎಂಬುದನ್ನು ವಿವರಿಸಿ, ಟೇಲರೇಸ್ ಯೋಜನೆ, ಹೊನ್ನಾವರದ ಕೆರೆಯ ಕಥೆ ಹಾಗೂ ಕರ್ನಲ್ ಹಿಲ್ ಇವುಗಳ ಯೋಜನೆಯ ವಿಫಲತೆಯನ್ನು ಉದಾಹರಿಸುತ್ತಾರೆ.

ಲೇಖಕರು ತಮ್ಮ ಬಾಲ್ಯದ ಸೀದಾ ಸಾದಾ ಸುಖೀ ಜೀವನದ ಸಂಗತಿಗಳನ್ನು ಉಲ್ಲೇಖಿಸಿ 'ಬ್ರಹ್ಮದೇವ ಅತ್ಯಂತ ಪ್ರಫುಲ್ಲ ಮನಸ್ಥಿತಿಯಲ್ಲಿದ್ದಾಗ ನಮ್ಮೂರು ನಿರ್ಮಿಸಿರಬೇಕು" ಎಂದು ನಿರೂಪಿಸುತ್ತಾ ತಮ್ಮ ಹಳ್ಳಿಯ ನಿಸರ್ಗ ಸೌಂದರ್ಯವನ್ನು ಮುಕ್ತಕಂಠದಿಂದ ಬಣ್ಣಿಸುತ್ತಾ ಹೋಗುತ್ತಾರೆ. ತಮ್ಮ ಹಳ್ಳಿಯ ಇತಿಹಾಸ, ಆಗಿನ ಕಾಲದ ಮತೀಯ ಸೌಹಾರ್ದತೆ ಅವರ ಮೇಲೆ ಬೀರಿದ ಪ್ರಭಾವವನ್ನು ವಿವರಿಸುತ್ತಾರೆ. ಆಗಿನ ಹಳ್ಳಿಗಳಲ್ಲಿ ನೆಲೆನಿಂತ ಗುಡಿಕೈಗಾರಿಕೆ, ಕಂಚುಗಾರರ ಪಂಚಲೋಹ ಪಾತ್ರೆಗಳ ತಯಾರಿಕೆ, ಕರಾವಳಿಯಲ್ಲಿನ ಚಿತ್ರಕಲೆ ಇವುಗಳ ಮಾಹಿತಿಯನ್ನು ವಿವರಿಸುತ್ತಾ ನಗರೀಕರಣದಿಂದ ಇವುಗಳು ನಾಶವಾದ ಪರಿಯನ್ನು ಬಣ್ಣಿಸುತ್ತಾರೆ. ಸ್ವಾತಂತ್ರ್ಯಪೂರ್ವದಲ್ಲಿ ರಾಷ್ಟ್ರಪಿತ ಗಾಂಧಿ 'ಗ್ರಾಮಸ್ವರಾಜ್ಯ'ದ ಕನಸು ಕಂಡಿದ್ದರು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿಗೆ ಸ್ವಾವಲಂಬನೆಯನ್ನು ಬೋಧಿಸಿದ್ದರು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ರಾಷ್ಟ್ರೀಯ ನೀತಿ ರೂಪಿಸುವವರು ಈ ದಿಶೆಯಲ್ಲಿ ಕಾರ್ಯವಿಧಾನವನ್ನು ನಿರ್ದೇಶಿಸಿದ್ದರೂ ರಾಜಕೀಯ ವಿಲಕ್ಷಣತೆಯಲ್ಲಿ ಅವುಗಳು ಕಾರ್ಯರೂಪದಲ್ಲಿ ಬರಲೇ ಇಲ್ಲ. ಈ ಎಲ್ಲ ವಿಫಲತೆಗಳನ್ನು ಉದಾಹರಣೆ ಸಹಿತ ಲೇಖಕರು ವಿವರಿಸಿದ್ದಾರೆ. "ಸರಕಾರಿ ಕೆಲಸ ದೇವರ ಕೆಲಸವಲ್ಲವೇ? ಅದನ್ನು ಸಕಾಲದಲ್ಲಿ ಮುಕ್ತಾಯಗೊಳಿಸುವ ಹೊಣೆ ದೇವರಿಗೆ ಬಿಟ್ಟಿದ್ದು" ಎಂಬ ಲೇಖಕರ ಉದ್ಗಾರ ಪರಿಸ್ಥಿತಿಯ ನಿಸ್ಸಹಾಯಕತೆಯನ್ನು ತೋರಿಸುತ್ತದೆ.

ಹಳ್ಳಿಗಳು 'ದಿಲ್ಲಿಗಳಾಗಿ ನಗರೀಕರಣವಾದಂತೆ ಮೊದಲಿದ್ದ "ಅಂದದ ಮಾಯಾನಗರಿ" "ಕೊಳಚೆಗುಂಡಿ"ಯಾಗಿರುವ ಶೋಚನೀಯ ಸ್ಥಿತಿಯನ್ನು "ಊರ ಹೊಲಸು" ಪ್ರಕರಣದಲ್ಲಿ ವಿವರಿಸಿದ್ದಾರೆ. "ಪರ್ಣ ಸಂಸ್ಕೃತಿ"ಯಲ್ಲಿ ಆಗಿನ ಜನ ಸಸ್ಯಗಳಿಂದ ಪಡೆಯುತ್ತಿದ್ದ ಆಹಾರ–ಔಷಧ ಪ್ರಯೋಜನಗಳನ್ನು ಸವಿಸ್ತಾರವಾಗಿ ಕಾಣಿಸಿದ್ದಾರೆ. ತಮ್ಮ ತಮ್ಮ ಜೇಬು ತುಂಬಿಕೊಳ್ಳಲು ಧನಿಕರ ಧನಪಿಪಾಸೆ, ಅರಣ್ಯನಾಶ ಮಾಡಿ ವ್ಯಾಪಾರ ಸೌಧಗಳನ್ನು ಕಟ್ಟಿಸಿ ಬಾಡಿಗೆ ಕೊಡುವ ಪರಿಯನ್ನು ವಿವರಿಸುತ್ತಾರೆ. "ಪಂಪ್ ಸೆಟ್" 'ಹನಿ ನೀರಾವರಿ'ಗಳು ದೊಟ್ಟೆ ನೀರಿನ ಪದ್ಧತಿಯನ್ನು ಇಲ್ಲವಾಗಿಸಿದವು; ಆಟೋ, ಟ್ರ್ಯಾಕ್ಟರ್‌ಗಳು ಬಂದು 'ಎತ್ತಿನ ಬಂಡಿ', 'ದೋಣಿ'ಗಳನ್ನು ಓಡಿಸಿ ಗ್ರಾಮೀಣರನ್ನು ನಿರ್ಗತಿಕರನ್ನಾಗಿ ಮಾಡಿದವು. ಕರಾವಳಿಯ ಉದ್ದಕ್ಕೂ ನೆಲೆನಿಂತಿರುವ ಮತ್ಸ್ಯೋದ್ಯಮ, ಪೆಟ್ರೋಲು ಉಗುಳುವ ಯಾಂತ್ರೀಕರಣ ನಾವೆಗಳಿಂದ ಮೀನು ಸಂತತಿಗೆ ಬಂದ ಸಂಚಕಾರವನ್ನು ವಿವರಿಸುತ್ತಾರೆ.

ಹೀಗೆ ಕೃತಿಯ ಉದ್ದಕ್ಕೂ 'ಹೊನ್ನಾವರ'ವೆಂಬ ಗ್ರಾಮದ ಅಧೋಗತಿಯ ಕರ್ಮಕಾಂಡವನ್ನು ಲೇಖಕರು ವಿವರಿಸುತ್ತಾ ಇಂದಿನ ಗ್ರಾಮೀಣ ಭಾರತದ ಸಂಸ್ಕೃತಿಯ ವಿನಾಶವನ್ನು ಪರಿಣಾಮಕಾರಿಯಾಗಿ ವಿವರಿಸಿದ್ದಾರೆ. 'ಜೋ' ಅವರ ಪಯಣದ ವಿವಿಧ ಸ್ಥಳಗಳ ಐತಿಹಾಸಿಕ ಟಿಪ್ಪಣಿಗಳು ಕೃತಿಯ ಮೌಲ್ಯವನ್ನು ಇನ್ನಷ್ಟು ಹೆಚ್ಚಿಸಿವೆ.

ಲೇಖಕರು ತಮ್ಮ ಈ ಕೃತಿಯ ಮೂಲೋದ್ದೇಶ ಹಾಗೂ ಆಶಯಗಳನ್ನು ತಮ್ಮ ಮುನ್ನುಡಿಯಲ್ಲಿ ಈ ರೀತಿ ಅಭಿವ್ಯಕ್ತಗೊಳಿಸಿದ್ದಾರೆ.

**"ಬಳಸಿದಷ್ಟು ಅರಣ್ಯ ಬೆಳೆಸಬೇಕು. ಮಳೆ ಬೀಳುವಷ್ಟೇ ನೀರನ್ನು ಬಳಸಬೇಕು. ಲಾಭಕ್ಕಾಗಿ ಸಹಜೀವಿಗಳ ಪಾಲನ್ನು ಕಸಿದುಕೊಳ್ಳಬಾರದು. ನಿಸರ್ಗದ ಸಮತೋಲನವನ್ನು ಕಾಯ್ದುಕೊಳ್ಳಬೇಕು".**

ಈ ಧ್ಯೇಯ ವಾಕ್ಯಗಳು ನಮ್ಮ ರಾಷ್ಟ್ರೀಯ ನೀತಿಯಾಗಿ ಮಾರ್ಪಾಟುಗೊಂಡರೆ ಈ ಕೃತಿ ಸಾರ್ಥಕತೆಯನ್ನು ಕಂಡುಕೊಳ್ಳುತ್ತದೆ. ಇದೇ, ನಾವು ಗತಿಸಿದ ಈ ಲೇಖಕರಿಗೆ ಸಲ್ಲಿಸುವ ಶ್ರದ್ಧಾಂಜಲಿ.



# Window to Indian Heritage

Pradeep Bellave

India, with its traceable history of more than 5,000 years is acknowledged as the cradle of civilization that has given the world one of the most diversified Cultures which, with their firm beliefs and thoughts has proved to be a model to the entire world. The treasure of knowledge that India has given to the world is unique and huge. To this day, amidst the chaotic world where the new is struggling to blend with the old, India is successfully taking-in the new while countinuing to revere the old. The strength it has given to us is enormous.

However, the onset of free trade since the last two decades has brought with it things that are totally alien to our Culture and the commoner is getting used to the new while steadily getting away from his own avowed rich heritage. An alarming situation indeed. Need of the hour therefore is to keep the commoner aware of the rich lineage to which he belongs. Internet, the most modern technology available to us today has proved to be a god-send in this regard.

The period of 1999-2000 will ever be remembered for the number of websites launched across the world by everyone who thought he/she had something to share with the world. Though such urge is as old as the hills, technology removed any constraints which would have hindered such free sharing of ideas.

A proliferation of websites followed - most of which disappeared in no time as the information content required to fill-up the sites were simply not forthcoming. It was also the time **www.kamat.com** arrived for those looking forward to some content on India and its rich heritage. Listed prominently by the search engines, it caught my attention as the name sounded familiar. And it turned out to be an effort by the young Vikas Kamat, son of the illustrious Mr Krishnanand Kamat who was familiar to the commoner in this part of the world with his photographs published in a wide variety of magazines.

**First impression, the best : -** "If the Kamats don't do it, who will?" those words of the veteren Kamat has been the guiding force behind this website. This Vikas Kamat-designed site is thus driven by the wish to make the site rich in content which he has sustained till date amidst constant changes the site has undergone. Be it the topics covered or the designing of the webside is one of lasting nature.

**Karnataka, the first stop :-** Remembering the place one hails from is one of the ways of paying respect to it. Dr. Krishnananda Kamat and wife Dr. Jyotsna Kamat have done it in their various writings. Vikas, under the guidance of his parents began his site with articles related to Karnataka. Honestly, I had imagined the amount of content that was to follow. Spreading its wings

far and wide, the site diversified, presenting the rich culture and heritage from every nook and corner of India in all its hue. Today, the site, which began with content on Karnataka stands almost unparalleled in its endeavour of presenting authentic India-related content to its readers.

**The perfect blend :-** Those who have the experience of designing a website will know how difficult it is to blend the text and photo portions of the site in right proportion. Not to exaggerate, the Kamats from the very beginning have planned it so well that today it is more than a benchmark for those looking to design quality websites. The fact that Dr. Krishnanand's photo collection is more than a whopping two lakh covering every gamut of life gives an idea of the cnormity of the task in maintaining the same. Vikas Kamat scores here too, with his planned selection of topics and relevant photographs. Today, the site has more than 8,000 photographs, every one of it capturing the attention of the reader with its detail and relevance.

**Something for everyone :-** If more than 20 American univrsities and various other schools of Europe and U.S. have cited **www.kamat.com** as an authentic source for sutdying Indian Culture, it comes as no surprise. Be it History, Festivals, Poverty in India, The Women of India - some of the sample articles - the wide range of issues covered by the site are laudable. And in my regular browsing of the site, I am yet to find any mails that have picked-up a flaw in the articles published. Which gives an idea as to why the site is perceived Authentic by students as well as professors across the world.

**The flip side too :-** Having a critical look about self is the best way for improvement. Some of the topics on the website may appear contradictory to the claims of India as cradle of civilazation to the world. Infact, topics such as Beggars of India or photographs showing Road digging back home initially annoyed me; but then, what is life without its flip side? Kamats have thus brought the truth home in no uncertain terms. And therein lies the beauty of this website!

**To conclude :-** The young pair of Vikas Kamat and his wife who are striving hard to present something different to the world, also have a lofty idea of sharing their expertise in web designing for the aspirants. With sections such as Tips and Tricks to build content rich websites, they are helping those interested design more professional websites. We can expect more from the house of Kamats in future.



# ಕಾಮತರ ಪುಸ್ತಕಗಳ ಪ್ರಕಟಿತ ವಿಮರ್ಶೆಗಳು
# ಮತ್ತು
# ಅವರ ವ್ಯಕ್ತಿ ವಿಶೇಷ

# 'ಮಧ್ಯಪ್ರದೇಶದ ಮಡಿಲಲ್ಲಿ'

## ವಿಮರ್ಶಕರು : ಡಾ। ಹಾ. ಮಾ. ನಾಯಕ

ಪ್ರವಾಸಕಥನ ಎಂದರೆ ಅದು ಸಾಮಾನ್ಯವಾಗಿ ವಿದೇಶದ್ದೇ ಆಗಿರಬೇಕೆಂದು ನಿರೀಕ್ಷಿಸುವವರು ನಾವು! ನಮಗೆ ನಮ್ಮದರಲ್ಲಿಯೇ ಆಸಕ್ತಿಯಿಲ್ಲ! ಪ್ರವಾಸಕಥನ ಪ್ರಕಾರ ನಮ್ಮ ಸಾಹಿತ್ಯದಲ್ಲಿ ಅಷ್ಟಾಗಿ ಬೆಳೆಯದಿರುವುದಕ್ಕೆ ಇದೂ ಒಂದೂ ಕಾರಣವಿರಬಹುದೆಂದು ನಾನು ಯೋಚಿಸಿದ್ದೇನೆ. ನಮ್ಮ ದೇಶದ ಇತರ ಭಾಗಗಳನ್ನು ಕಂಡು ಬರೆಯುವವರು ಬಹಳ ಕಡಿಮೆಯೆಂದೇ ಹೇಳಬೇಕು. ಪ್ರವಾಸಕಥನಕ್ಕೆ ಆ ದೇಶ ಈ ದೇಶವೆಂಬುದಿಲ್ಲ ಎಂಬುದಿನ್ನೂ ನಮ್ಮ ಗಮನಕ್ಕೆ ಬಂದಂತಿಲ್ಲ.

ಆದರೂ ಕೆಲವರು ನಮ್ಮ ದೇಶದ ಬೇರೆ ಬೇರೆ ಭಾಗಗಳನ್ನು ಕುರಿತು ಬರೆದಿದ್ದಾರೆ; ಸೊಗಸಾಗಿ ಬರೆದಿದ್ದಾರೆ. ನಮ್ಮ ಪ್ರವಾಸಕಥನದ ಆರಂಭ ವರ್ಷಗಳಲ್ಲಿಯೇ ಪ್ರಕಟವಾದ ವಿ.ಸೀ. ಅವರ 'ಪಂಪಾಯಾತ್ರೆ', ಗೋಸಾವಿಯವರ 'ಹಿಮಾಲಯಯಾತ್ರೆ', ಶಿವರಾಮ ಕಾರಂತರ 'ಅಬೂವಿಂದ ಬರಾಮಕ್ಕೆ' ಮೊದಲಾದ ಹಲವಾರು ಪ್ರವಾಸಕಥನಗಳು ನೆನಪಿಗೆ ಬರುತ್ತವೆ. ಒಂದು ಲೆಕ್ಕಾಚಾರದಂತೆ ಭಾರತಕ್ಕೆ ಸಂಬಂಧಿಸಿದ ಪ್ರವಾಸಕಥನಗಳು ನಮ್ಮಲ್ಲಿ ಸುಮಾರು ಎಪ್ಪತ್ತರಷ್ಟು ಇವೆಯಂತೆ. ಭಾರತದೊಳಗಿನ ಪ್ರವಾಸವನ್ನೇ ವಸ್ತುವನ್ನಾಗಿಸಿಕೊಂಡು ಬರೆದವರಲ್ಲಿ ಕೃಷ್ಣಾನಂದ ಕಾಮತರು. ಬಹಳ ಮುಖ್ಯರೆಂದು ನನ್ನ ಭಾವನೆ, ಅವರ 'ವಂಗದರ್ಶನ' (೧೯೭೨), 'ಕಾಲರಂಗ' (೧೯೮೨), 'ನಾ ರಾಜಸ್ಥಾನದಲ್ಲಿ' (೧೯೭೪), 'ಬಸ್ತರ ಪ್ರವಾಸ' (೧೯೯೦) ಈ ಕೃತಿಗಳು ಈಗಾಗಲೇ ಪ್ರಸಿದ್ಧವಾಗಿವೆ.

ಈಗ (೧೯೯೩) ಅವರ ಇನ್ನೊಂದು ಪ್ರವಾಸ ಕಥನ ಪ್ರಕಟವಾಗಿದೆ. ಅದು 'ಮಧ್ಯಪ್ರದೇಶದ ಮಡಿಲಲ್ಲಿ' (ಪ್ರಕಾಶಕರು: ಪುಸ್ತಕಾಲಯ, ಜಯನಗರ, ಬೆಂಗಳೂರು-೪೧. ಪುಟಗಳು: ಡೆಮ್ಮೈ ಆಕಾರದ ೧೩೫, ಬೆಲೆ: ಇಪ್ಪತ್ತೈದು ರೂಪಾಯಿಗಳು). ಉತ್ತರ ಕನ್ನಡದ ನವ ನಿರ್ಮಾಪಕರಲ್ಲಿ ಒಬ್ಬರೆನ್ನಿಸಿದ ಆರ್. ಎಸ್. ಕಾಮತ್ ಅವರ ಹೆಸರಿನಲ್ಲಿ ಹೊನ್ನಾವರದಲ್ಲೊಂದು ಸ್ಮಾರಕ ಪ್ರತಿಷ್ಠಾನವಿದ್ದು, ಆ ಸಂಸ್ಥೆ ಈ ಪುಸ್ತಕದ ಮುದ್ರಣ ವೆಚ್ಚ ವಹಿಸಿದೆ ಎಂಬುದು ಗಮನಾರ್ಹವಾಗಿದೆ. ಇಂಥ ನೆರವುಗಳು ಇಲ್ಲದಿದ್ದರೆ, ಈ ಬಗೆಯ ಪುಸ್ತಕಗಳು ಬೆಳಕು ಕಾಣುವುದು ಕಷ್ಟ. ಕೃಷ್ಣಾನಂದ ಕಾಮತ್ತರ ಪ್ರವಾಸಕಥನಗಳನ್ನು ಓದುತ್ತಿರುವಾಗ ನಮಗೆ ನಾವೇ ಅಪರಿಚಿತರಾಗಿ ಬಿಡುತ್ತೇವೆ. ನಮ್ಮ ದೇಶದಲ್ಲಿ ನಮಗೇ ಗೊತ್ತಿಲ್ಲದಿರುವ ಸಂಗತಿಗಳು ಎಷ್ಟೆಂದು ಆಶ್ಚರ್ಯವೂ ಆಗುತ್ತದೆ! ಇಂಥ ವೈವಿಧ್ಯಮಯ ಬದುಕನ್ನು ನಮ್ಮೆದುರು ಇಟ್ಟುಕೊಂಡೂ, ನಮ್ಮ ಪ್ರವಾಸ ಕಥನಗಳಿಗಾಗಿ ಲಂಡನ್, ಪ್ಯಾರಿಸ್, ನ್ಯೂಯಾರ್ಕ್ ಮೊದಲಾದ ಮಹಾನಗರಗಳನ್ನು ಹುಡುಕಿಕೊಂಡು ಹೋಗುವುದು ಅರ್ಥಹೀನವಾಗಿ ತೋರುತ್ತದೆ. ನಮ್ಮನ್ನು ನಾವು ತಿಳಿಯುವುದೇ ನಮ್ಮ ಮೊದಲನೆಯ ಆದ್ಯತೆಯಾಗಿರಬೇಕು. ಈ ದಿಕ್ಕಿನಲ್ಲಿ ಕೃಷ್ಣಾನಂದ ಕಾಮತ್ತರ ಕೆಲಸ ವಿಶಿಷ್ಟವಾದದ್ದು. ಭಾರತಕ್ಕೆ ಸಂಬಂಧಿಸಿದಂತೆ ಅವರಷ್ಟು ಪ್ರವಾಸಕಥನಗಳನ್ನು ಬರೆದಿರುವ ಲೇಖಕರು ನಮ್ಮಲ್ಲಿ ಮತ್ತೊಬ್ಬರಿಲ್ಲ. 'ಮಧ್ಯಪ್ರದೇಶದ ಮಡಿಲಲ್ಲಿ' ಪುಸ್ತಕದ ತಮ್ಮ 'ಮೊದಲ ಮಾತಿನಲ್ಲಿ ಕಾಮತ್ತರು ಹೇಳುತ್ತಾರೆ:

'ಮಧ್ಯಪ್ರದೇಶ ಒಂದು ಮಾಯಾಲೋಕವಿದ್ದಂತೆ ಅಲ್ಲಿ ವಿಂಧ್ಯ, ಸಾತಪುಡಾ ಪರ್ವತಾವಳಿಗಳು, ನರ್ಮದಾ, ತಾಪಿ ನದಿಗಳು, ಗುಡ್ಡಬೆಟ್ಟಗಳು, ಗಿರಿಕಂದರಗಳು, ಕಾಡುಮೇಡುಗಳು, ಗೊಂಡ ಕೊರ್ಕುಗಳಂಥ ಆದಿವಾಸಿಗಳು, ಅವರ ನೃತ್ಯ ಸಂಗೀತ, ಹಬ್ಬ ಹುಣ್ಣಿಮೆಗಳನ್ನು ನೆನಸಿಕೊಂಡಾಗೊಮ್ಮೆ ಅಲ್ಲಿಯ ಅನುಭವಗಳು ಸುಂದರಸ್ವಪ್ನದಂತೆ ಭಾಸವಾಗುತ್ತದೆ. ಅಶೋಕ, ವಿಕ್ರಮಾದಿತ್ಯ, ಭೋಜರಾಜ, ಚಂದೇಲ ಅರಸರು ಆ ರಾಜ್ಯವನ್ನು ವೈಭವ ಶಿಖರಕ್ಕೇರಿಸಿದ ಶಿಖಾಮಣಿಗಳು. ವರಕವಿ ಕಾಳಿದಾಸ ಆ ಭೂಮಿಯನ್ನು ಅಮರವಾಗಿಸಿದ. ಸಂಗೀತ ಸಮ್ರಾಟ್ ತಾನ್‌ಸೇನ್ ಗ್ವಾಲೇರದಲ್ಲಿ ಶಾಶ್ವತವಾದ ಕುರುಹು ಬಿಟ್ಟು ಹೋಗಿದ್ದಾನೆ. ಮಾಂಡುವಿನ ಬಾಝ್ ಬಹಾದೂರ ಮತ್ತು ರಾಣಿ ರೂಪಮತಿಯರ ಆದರ್ಶಪ್ರೇಮ ಅಜರಾಮರವಾಗಿದೆ. ಖಜುರಾಹೋ ತನ್ನ ಅಪೂರ್ವ ಶಿಲ್ಪಗಳಿಂದ ವಿಶ್ವಖ್ಯಾತಿ ಪಡೆದಿದೆ. ಇವೆಲ್ಲವುಗಳಿಗಿಂತ ಆಕರ್ಷಕವಾಗಿರುವ ಆದರೆ ಭರದಿಂದ ಕಣ್ಮರೆಯಾಗುತ್ತಿರುವ ಮೂಲಬುಡಕಟ್ಟಿನವರ ಅಪರೂಪದ ಸರಳ, ಸಭ್ಯ ಜೀವನ ಇಂದಿಗೂ ಹೊರಜಗತ್ತಿಗೆ ಅಜ್ಞಾತವಾಗಿಯೇ ಉಳಿದಿದೆ. ಅಲ್ಲಿ ಪಡೆದ ವಿಸ್ತಾರವಾದ ಅನುಭವಗಳೆಲ್ಲ ಈ ಒಂದು ಗ್ರಂಥದಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಗದಿದ್ದರೂ ಆ ರಾಜ್ಯದ ಇಣುಕು ನೋಟ ಕೊಡಲು ಸರ್ವಪ್ರಯತ್ನ ಮಾಡಿದ್ದೇನೆ."

ಮಧ್ಯಪ್ರದೇಶದ ಮೂಲ ಬುಡಕಟ್ಟು ಜನರ ಜೀವನ ವಿಧಾನಗಳನ್ನು ಅಭ್ಯಸಿಸುವುದರಲ್ಲಿ ಆಸಕ್ತರಾಗಿ ಕೃಷ್ಣಾನಂದ ಕಾಮತ್ತರು ಒಂದು ಜಿಲ್ಲೆಯ ಮುಖ್ಯ ಸ್ಥಳಕ್ಕೆ ಹೋಗಿ ಕೆಲವು ತಿಂಗಳುಗಳು ಅಲ್ಲಿದ್ದು, ಕಂಡ ಜೀವನವನ್ನೂ, ಅಧ್ಯಯನ ಮಾಡಿದ ಜೀವನ ವಿಧಾನವನ್ನೂ ಈ ಪುಸ್ತಕದಲ್ಲಿ ನಿರೂಪಿಸಿದ್ದಾರೆ. ಅವರ ಹಿಂದಿನ ಪ್ರವಾಸಕಥನಗಳನ್ನು ಓದಿರುವವರಿಗೆ ಅವರ ಬರವಣಿಗೆಯ ಬಗೆಯನ್ನೂ, ಬದುಕನ್ನು ಕುರಿತ ದೃಷ್ಟಿ ಧೋರಣೆಗಳನ್ನೂ ಹೊಸತಾಗಿ ಪರಿಚಯ ಮಾಡಿಕೊಡಬೇಕಾದ ಅಗತ್ಯವಿಲ್ಲ. ಅವರ ಬರವಣಿಗೆಯ ರೀತಿಯಾದರೂ ಹೆಚ್ಚುಕಡಿಮೆ ಅದೇ ಬಗೆಯದು.

ತಾವು ಹೋಗಿ ಮುಟ್ಟಬೇಕಾದ 'ಬೆಂಡವಾರಾ' ಅಲ್ಲ 'ಛಿಂದವಾಡಾ' ಎಂಬ ಊರಿಗೆ ರೈಲು ಟಿಕೇಟನ್ನು ಕೊಂಡುಕೊಂಡ ಪ್ರಸಂಗದಿಂದ ಕಥನ ತೊಡಗುತ್ತದೆ. ಆ ಪ್ರಸಂಗ ಆಡಳಿತ ವ್ಯವಸ್ಥೆಯನ್ನೂ ಕ್ಷ ಕಿರಣ ಹಚ್ಚಿ ತೋರಿಸುತ್ತದೆ. ರೈಲು ಹೊರಡಲು ಹತ್ತೇ ನಿಮಿಷಗಳಿದ್ದಾಗಲೂ ಟಿಕೆಟ್ ಕೊಡುವವರು ಪತ್ತೆಯಿಲ್ಲ. ಇವರು ಕೂಗಿಕೊಂಡದ್ದರಿಂದ ಟಿಕೆಟ್ ಕೊಡುವವನು ಬಂದು, ಇವರಿಗೆ ಮಾತ್ರ ಟಿಕೆಟ್ ಕೊಟ್ಟು ನಾಪತ್ತೆಯಾಗುತ್ತಾನೆ. "ಏದುತ್ತ ಹೊಗೆ ಕಾರುತ್ತ ನೀಲಗಿರಿ ಬೆಟ್ಟ ಹತ್ತಿ ಉದಕ ಮಂಡಲಕ್ಕೆ ಬುಸುಗುಡುತ್ತ ಮುಟ್ಟುವಂತಹದೇ ಆಟಿಗೆಯ ರೈಲು ಇಲ್ಲಿ ಉಸಿರಾಡದೇ ಸ್ತಬ್ಧವಾಗಿ ಹಳಿಗಳ ಮೇಲೆ ನಿಂತಿತ್ತು." ಮನಸ್ಸಿಗೆ ಬಂದಾಗ ಹೊರಡುವ ರೈಲು ಇದು ಎಂಬುದು ಹಮಾಲನೊಬ್ಬನ ತೀರ್ಪು. ಅದು ನಿಜವಲ್ಲಿ ಹಳ್ಳಿಗರಿಗೆ, ಆದಿವಾಸಿಗಳಿಗೆ ಮೀಸಲಾದ ರೈಲು. ಒಂದು ಇಲ್ಲ ಎರಡು ಸ್ಟೇಷನ್ನುಗಳ ಆಚೆ ಹೋಗುವವರು ಮಾತ್ರ ಈ ರೈಲಿನಲ್ಲಿ ಹೋಗುತ್ತಾರೆ. ನಾಗಪುರದಿಂದ ಛಿಂದವಾಡಕ್ಕೆ ನೇರ ಬಸ್ಸುಗಳಿವೆ. ಪ್ರಯಾಣದ ಅವಧಿ ಕೇವಲ ಮೂರು ಗಂಟೆಗಳು. ಆದರೆ ಈ ರೈಲಿನಲ್ಲಿ ದಿನವೆಲ್ಲಾ ಪಯಣಿಸಬೇಕು. ಆದರೆ ಕಾಮತ್ತರು ಪ್ರವಾಸವನ್ನೇ ಉದ್ಯೋಗ ಮಾಡಿಕೊಂಡವರು. "ಮಣ್ಣಿನ ಮಕ್ಕಳ ಜೀವರವಾಸನೆ ಪರೀಕ್ಷಿಸಲು" ಹೊರಟವರು. ಅವರಿಗೆ ಇದು ಹೇಳಿಮಾಡಿಸಿದ ಗಾಡಿ. ಈ ಆರಂಭವೇ ಆಕರ್ಷಕವಾಗಿದೆ; ಕುತೂಹಲಕಾರಿಯಾಗಿದೆ.

ರೈಲಿನಲ್ಲಿ ಕಾಮತ್ತರಿಗೆ ಹಸಿವಾಗುತ್ತದೆ. ಬಿಸಿಬಿಸಿ ಚಹಾ ಸಿಕ್ಕಲು ಐದು ಸ್ಟೇಷನ್ನುಗಳನ್ನಾದರೂ ಕಳೆಯಬೇಕು. ಇದನ್ನು ಅರಿತ ಹಳ್ಳಿಯ ಸಹಪ್ರವಾಸಿಯೊಬ್ಬ, ತಾನು ಮಕ್ಕಳಿಗಾಗಿ ಖರೀದಿಸಿದ್ದ ಕಡ್ಲೆಪುರಿಯನ್ನು ಕಾಮತ್ತರಿಗೆ ಕೊಡಬಂದ! ನಮ್ಮ ಸಾಮಾನ್ಯ ಜನರ ಹೃದಯವಂತಿಕೆಗೆ ಸಾಕ್ಷಿಯಾಗಲು ದೊಡ್ಡ ದೊಡ್ಡ ಆಧಾರಗಳೇನೂ ಬೇಡ. ಕಾಮತ್ತರ ಆ ಪ್ರವಾಸದ ಮೊದಲ ಅನುಭವವೇ "ಈ ರಾಜ್ಯದಲ್ಲಿ ಒಂದು ವರ್ಷ ಅಧ್ಯಯನ ಮಾಡುವುದಿರಲಿ, ಬದುಕಿರುವುದಾದರೂ ಹೇಗೆ?" ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವಂತೆ ಮಾಡುತ್ತದೆ! ಹೊಟೇಲಿಗೆ ಹೋದಾಗ ಒಂದು ಪ್ಲೇಟ್ ಜಿಲೇಬಿ ಎಂದರೆ, ಮಾಣಿ ಕೇಳುತ್ತಾನೆ: "ಐವತ್ತೋ ನೂರೋ?". ಐವತ್ತೋ ನೂರೋ ಎಂದರೆ ಎಷ್ಟು ಗ್ರಾಂ ಎಂದು ಪಕ್ಕದ ಗಿರಾಕಿ ವಿವರಿಸುತ್ತಾನೆ. ಕಾಮತ್ತರು "ಇನ್ನೂರೈವತ್ತು" ಎಂದಾಗ ಮಾಣಿಗೆ ನಂಬಿಕೆಯೇ ಬರುವುದಿಲ್ಲ!

ಪುಸ್ತಕದುದ್ದಕ್ಕೂ ಇಂಥದೇ ಎಷ್ಟೊಂದು ಪ್ರಸಂಗಗಳು! ಕಡ್ಲೆಕಾಯಿಗಳು ಕಮ್ಯುನಿಸ್ಟ್ ರಂಗ್ ತಳೆಯುತ್ತವೆ. ಕಾಕು ತಾಯಿಯವರ ಪ್ರೀತಿ, "ನಮ್ಮ ಈ ಕೆಲಸ ನಮ್ಮ ಮಕ್ಕಳಿಗೆ ಎಲ್ಲೋ ಎಂದೋ ಬೆಂಗಾವಲಾಗಿ ನಿಲ್ಲುತ್ತದೆ" ಎಂಬ ತಮ್ಮ ತಾಯಿಯವರ ಮಾತುಗಳನ್ನು ಕಾಮತ್ತರ ನೆನಪಿಗೆ ತರುತ್ತದೆ. "ಅನೇಕ ಕಡೆ ರಸ್ತೆಗಳೇ ಮಾಯವಾಗಿದ್ದವು" ಎಂಬ ಮಾತು ಸಾರಿಗೆ ವ್ಯವಸ್ಥೆಯ ನೈಜ ಚಿತ್ರ ಕೊಡುತ್ತದೆ! ಆದಿವಾಸಿಗಳಲ್ಲಿ ಹಚ್ಚೆ, ಫರೇವಾ ಕಲೆ, ಆದಿವಾಸಿಗಳ ಕಲೆ ಮುಂತಾದ ಅಧ್ಯಾಯಗಳಲ್ಲಿ ಈ ಆದಿವಾಸಿ ಬುಡಕಟ್ಟುಗಳ ಕಲಾವಂತಿಕೆ, ಸೌಂದರ್ಯಪ್ರಜ್ಞೆ, ಅವರು ಶೋಷಣೆಗೆ ಒಳಗಾಗುವ ಪರಿ ಇದನ್ನೆಲ್ಲ ಕಾಮತ್ತರು ತುಂಬಾ ಸೊಗಸಾಗಿ ಪರಿಣಾಮಕಾರಿಯಾಗಿ ವರ್ಣಿಸುತ್ತಾರೆ. ಅಲ್ಲಿನ ಗೊಂಡರೇ ಆಂಧ್ರಪ್ರದೇಶ ಮೂಲಕ ಕರ್ನಾಟಕಕ್ಕೆ ಬಂದು ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲಸಿರಬಹುದೆ ಎಂದು ಪ್ರಶ್ನಿಸಿ ಸಂಶೋಧಕರಿಗೆ ಸವಾಲು ಹಾಕುತ್ತಾರೆ! ಪುಟ ೧೧೫ರಲ್ಲಿರುವ ಒಂದು ಹಳೆಯ ಸತಿ ಪದ್ಧತಿ ಪ್ರಸಂಗ ಅಚ್ಚರಿಯನ್ನುಂಟು ಮಾಡುತ್ತದೆ. ಮಾವಾಶಿ ಚೆಲುವೆಯರು ಓದುಗರ ಮನಸ್ಸನ್ನು ಸೆಳೆಯುತ್ತಾರೆ. ತಾವು ಅವರ ಚಿತ್ರ ತೆಗೆದ ಸಾಹಸವನ್ನು ಕಾಮತ್ತರು ಚೆನ್ನಾಗಿ ವರ್ಣಿಸಿದ್ದಾರೆ. "ಮಾವಾಶಿಯ ರೂಪಸಿಯೊಬ್ಬಳನ್ನು ಮದುವೆ ಮಾಡಿಕೊಂಡಿದ್ದರೆ ಎಷ್ಟು ಚೆನ್ನಾಗಿತ್ತು" ಎಂಬ ಅವರ ವಿಚಾರವೇ ಯಾರನ್ನಾದರೂ ಮಧ್ಯಪ್ರದೇಶದ ಕಾಡುಗಳಿಗೆ ಹೋಗಲು ಪ್ರಚೋದಿಸಬಹುದೇನೊ!

ಇಷ್ಟು ಒಳ್ಳೆಯ ಪುಸ್ತಕ, ಅನೇಕ ಮುದ್ರಣ ದೋಷಗಳೊಡನೆ, ಪ್ರಕಟವಾಗಿರುವ ರೀತಿ ಹಿತವಾಗಿಲ್ಲ. ಮುಖಪುಟದ ಚಿತ್ರ ಚೆನ್ನಾಗಿದೆ. ಅದು ಬಳಕೆಗೊಂಡ ವಿನ್ಯಾಸ ಮಾತ್ರ ಆಕರ್ಷಕವಾದುದಲ್ಲ.

(ಕೃಪೆ : 'ಕರ್ಮವೀರ' ಜನವರಿ 25, 1994)

## ಪಶು-ಪಕ್ಷಿ ಪ್ರಪಂಚ - ೧

### ವಿಮರ್ಶಕರು : ಎಸ್. ಆರ್. ವಿಜಯಶಂಕರ

**'ಕತೆಯಂತೆ ಓದಿಸಿಕೊಳ್ಳುವ ವೈಜ್ಞಾನಿಕ ಬರವಣಿಗೆ'**

ದೇಶದ ಸರ್ವತೋಮುಖ ಅಭಿವೃದ್ಧಿಗೆ ಪ್ರಜೆಗಳು ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳುವುದು ಅತ್ಯವಶ್ಯ. ಆದ್ದರಿಂದ ಜನಸಾಮಾನ್ಯರೂ ಅರಿಯುವಂತಹ ಸುಲಭ ಭಾಷೆಯಲ್ಲಿ ವೈಜ್ಞಾನಿಕ ವಿಚಾರಗಳನ್ನು ಬರೆಯುವಲ್ಲಿ ಡಾ। ಕೃಷ್ಣಾನಂದ ಕಾಮತರ ಆಸಕ್ತಿ

ಅದಕ್ಕನುಗುಣವಾಗಿ ಲಲಿತ ಪ್ರಬಂಧದ, ನವುರು ಹಾಸ್ಯದ ಮನಮೋಹಕ ಧಾಟಿ ಈ ಪುಸ್ತಕದ ಹದಿನೆಂಟು ಲೇಖನಗಳಲ್ಲೂ ಗೋಚರಿಸುತ್ತದೆ. ನಮ್ಮ ಸುತ್ತಲಿನ ಪ್ರಪಂಚವನ್ನು ನೋಡುವ ಜೀವಂತ ಚಿತ್ರಣ ಸರಾಗವಾಗಿ ಮೂಡಿ ಬರುತ್ತದೆ.

ಕನ್ನಡದಲ್ಲಿ ವೈಜ್ಞಾನಿಕ ಬರವಣಿಗೆ ವೈವಿಧ್ಯಗಳಿಂದ ಬೆಳೆಯುತ್ತಿರುವುದು ಸಂತೋಷದ ಪ್ರಗತಿ. ವಿಜ್ಞಾನ ಪರಿಷತ್ತು ಇದಕ್ಕೊಂದು ಸ್ಪಷ್ಟರೂಪ ನೀಡಲು ಪ್ರಯತ್ನಿಸುತ್ತಿದೆ. ಡಾ। ಶಿವರಾಮ ಕಾರಂತರ ಬರವಣಿಗೆಯ ಶೈಲಿಯಲ್ಲಿ ಇಂಗ್ಲೀಷ್ ಭಾಷೆಯಲ್ಲಿರುವ ವೈಜ್ಞಾನಿಕ ವಿಚಾರಗಳನ್ನು ಕನ್ನಡ ಭಾಷೆಯಲ್ಲಿ ಹೇಳುವ ಒಂದು ಪ್ರಯತ್ನ. ಪ್ರೊ॥ ಜಿ. ಟಿ. ನಾರಾಯಣರಾವ್ ವೈಜ್ಞಾನಿಕ ವಿಚಾರಗಳನ್ನು ಹೇಳಲು ಕನ್ನಡಕ್ಕೊಂದು ಪಾರಿಭಾಷಿಕ ಬಂಧವನ್ನು ಒದಗಿಸುವ ಪ್ರಯತ್ನ, ಈ ಶೈಲಿಯಲ್ಲಿ ಜಿ. ಟಿ. ಎನ್. ವಿಚಾರಗಳ ಸೂಕ್ಷ್ಮಾತಿಸೂಕ್ಷ್ಮಗಳನ್ನೂ ವಿವರಿಸಿಕೊಳ್ಳಲು ಸಾಧ್ಯವಾಗುವಂತೆ ವೈಜ್ಞಾನಿಕ ಬರಹಗಳಲ್ಲಿ ಕನ್ನಡವನ್ನು ಬಳಸುತ್ತಾರೆ. ಇನ್ನೊಂದು ಶೈಲಿಯೆಂದರೆ ವಿಜ್ಞಾನವನ್ನು ಲಾಲಿತ್ಯದಲ್ಲಿ ಲಘು ಧಾಟಿಯಲ್ಲಿ ಹೇಳುವ ಡಾ। ಬಿ. ಜಿ. ಎಲ್. ಸ್ವಾಮಿಯಂತಹವರ ಶೈಲಿ. ನಾಗೇಶ ಹೆಗಡೆ, ವಾಸುದೇವ್ ಪತ್ರಿಕೋದ್ಯಮದ ಶೈಲಿ ಇವರಲ್ಲಿ ತಮ್ಮ 'ಪ್ರಾಣಿ ಪರಿಸರ' ಗ್ರಂಥದ ಕಾಲದಿಂದಲೇ ಡಾ। ಕೃಷ್ಣಾನಂದ ಕಾಮತ್ ಕನ್ನಡದಲ್ಲಿ ವೈಜ್ಞಾನಿಕ ಬರವಣಿಗೆಯ ಚಿಂತನ ಕ್ರಮದಲ್ಲಿ ಡಾ। ಬಿ. ಜಿ. ಎಲ್. ಸ್ವಾಮಿಯವರಿಗೆ ಹತ್ತಿರದವರು.

ಕನ್ನಡದಲ್ಲಿ ಪಕ್ಷಿ ವೀಕ್ಷಣೆಯ ಬಗೆಗೆ ಪುಸ್ತಕಗಳು ಬಂದಿವೆ. ಡಾ। ಕಾರಂತರ ಪುಸ್ತಕ ಶಾಸ್ತ್ರಬದ್ಧ ದಾಖಲೆಯಾಗಿ ಒಂದು ಪುಟ್ಟ ರೆಫರೆನ್ಸ್ ಪುಸ್ತಕವಾಗಿ ಸಹಕಾರಿ. ಪಕ್ಷಿ ವೀಕ್ಷಣೆ ಬಗ್ಗೆ ಕೃಷ್ಣಮೂರ್ತಿಯವರು ಬರೆದ ಕಿರು ಹೊತ್ತಗೆ ಇದ್ದಲ್ಲೇ ಒಂದು ಹವ್ಯಾಸವನ್ನು ಕುದುರಿಸಿಕೊಳ್ಳಲು ಸಹಕಾರಿಯಾಗುವಂತಿದೆ. ಡಾ। ಕಾಮತರ, ಇಲ್ಲಿನ ಬರವಣಿಗೆ ಹಿಂದೆ, ವೈಜ್ಞಾನಿಕ ದೃಷ್ಟಿಕೋನದಿಂದ ರೂಪಿತವಾದ, ಜೀವಕೋಟಿಯ ಸಹಬಾಳ್ವೆಯ ಒಂದು ತಾತ್ವಿಕ ದರ್ಶನ ಇದೆ. ಇಲ್ಲಿನ ಎಲ್ಲಾ ಬರವಣಿಗೆಯ, ನಾವು ಇನ್ನೊಬ್ಬ ಮನುಷ್ಯನನ್ನು, ಮಾನವ ಸಮಾಜವನ್ನು ಅರ್ಥ ಮಾಡಿಕೊಳ್ಳುವ ಕ್ರಮದಲ್ಲೇ, ಪಶು, ಪಕ್ಷಿ, ಸಸ್ಯ ಹೀಗೆ ಜೀವಕೋಟಿಯನ್ನು ಅರ್ಥಮಾಡಿಕೊಳ್ಳಲು ಪ್ರೇರೇಪಿಸುತ್ತದೆ. ನಾವು ನಿತ್ಯ ಕಾಣುವ ಕಾಗೆಯಿಂದ ಪ್ರಾರಂಭಿಸಿ ಮೈಸೂರು ಮೃಗಾಲಯದವರೆಗೆ, ನಗರ ಅಥವಾ ಇಂದಿನ ಹಳ್ಳಿಗಳ ಸಾಮಾನ್ಯ ಜನಜೀವನದ ನಡುವೆಯೇ ನಾವು ಪಶು–ಪಕ್ಷಿ ಪ್ರಪಂಚವನ್ನು ಹೇಗೆ ಕಾಣಬಹುದು, ಅವುಗಳ ಜೊತೆ ಎಂತಹ ಸಹಬಾಳ್ವೆ ಸಾಧ್ಯ ಎಂಬುದನ್ನು ಡಾ। ಕಾಮತರು ಸೂಚಿಸುತ್ತಾರೆ. ಬೆಳ್ಳೂರಿಗೆ, ವಲಸೆ ಬರುವ ಪೆಲಿಕನ್ ಹಕ್ಕಿಗಳ ಬಗ್ಗೆ ಬರೆದ ಲೇಖನಕ್ಕೆ 'ಅಕ್ಕಾ ಭಾವ ಬಂದ್ರು' ಎಂದು ಹೆಸರು. ತವರಿಗೆ ಹೆರಲು ಬರುವ ಹೆಣ್ಣುಮಗಳಿಗೆ ಹೋಲಿಸುವ ಈ ಮಗಳು ಅಳಿಯ ಕಲ್ಪನೆ ಡಾ। ಕಾಮತರ ಸಹಬಾಳ್ವೆಯ ಸಕಲಜೀವ ಕೌಟುಂಬಿಕ ಕಲ್ಪನೆಗೆ ಒಂದು ಪುಟ್ಟ ಉದಾಹರಣೆ.

ಡಾ। ಕೃಷ್ಣಾನಂದ ಕಾಮತ್ ಕತೆಯಂತೆ ಹೇಳುತ್ತಾ ಹೋಗುವಾಗ ಓದುಗನಿಗೆ ವಿಚಾರವನ್ನು ಗ್ರಹಿಸುವ ಆಯಾಸವೇ ಆಗದಂತೆ ನೋಡಿಕೊಳ್ಳುತ್ತಾರೆ. ಕೆಳಗಿನ ಎರಡು ಉದಾಹರಣೆಗಳಿಂದ ಅವರು ಹೇಳುವ ಕ್ರಮ ಮತ್ತು ಈ ಪುಸ್ತಕವನ್ನು ಓದುವ ಸಂತೋಷ ಅರ್ಥವಾಗಬಹುದು.

"ರಸಿಕ ಹಕ್ಕಿ ಸಂಧಿ ಸಾಧಿಸಿ ಹೆಣ್ಣು ಕಬ್ಬಾರೆಯೊಂದನ್ನು ಒಲಿಸಿಕೊಳ್ಳಲೆತ್ನಿಸಿದಾಗ, ಪ್ರತಿಸ್ಪರ್ಧಿ ಅದರ ಮೇಲೆ ಎರಗಿ 'ಮಗನೇ, ನಿನಗೇಕೋ ಅವಳ ಮೇಲೆ ಕಣ್ಣು' ಎಂದು. ಕಾದಾಟಕ್ಕೆ ಇಳಿಯುತ್ತವೆ. ಎರಡೂ ಬಣದ ಹಿತೈಷಿಗಳು, ಕಾಳಗಕ್ಕೆ ಸೇರಿ ಗಗನ ಮಂಡಲವೆಲ್ಲಾ ವ್ಯಾಪಿಸಿ ಚೀರಿಡುತ್ತಿದ್ದರೂ ಪ್ರತ್ಯಕ್ಷ ಕದನ ನಡೆಯುವುದಿಲ್ಲ ಬಂಗಾಲಿಗಳಂತೆಯೇ ಈ ಪಕ್ಕಿಗಳು "ಕೆಚಕ್ ಕೆಚಕ್" ಎಂದು ವಾಗ್ಯುದ್ಧದಲ್ಲಿ ಪ್ರವೀಣತೆ ಪಡೆದಂತಿದೆ. ಪಂಜಾಬಿಗಳಂತೆ ಹೋರಾಟಗಾರರಾಗಿದ್ದರೆ, ಎಷ್ಟು ಹೆಣ ಬೀಳುತ್ತಿದ್ದವೋ. ರೆಕ್ಕೆ ಬಿಡಿಸಿ ಒಂದು ಕಬ್ಬಾರೆ ಇನ್ನೊಂದನ್ನು ಆಕ್ರಮಿಸಲು ಹೊರಟಾಗ ಅದರ ಸೌಂದರ್ಯ ರಮ್ಯವಾಗಿರುತ್ತದೆ."

ಕೋಗಿಲೆ ಕಾಗೆ ಗೂಡಲ್ಲಿ ಮೊಟ್ಟೆಗಳನ್ನಿಟ್ಟು ಮರಿ ಮಾಡುವ ವಿಚಾರವನ್ನು ಡಾ। ಕಾಮತ್ ಹೇಳುವ ಕ್ರಮ ನೋಡಿ:

"ಪ್ರಸೂತಿಯ ಮಡಿವಂತಿಕೆಯಲ್ಲಿ ಕಾಕ ವರ್ಗಕ್ಕೆ ನಂಬಿಕೆಯಿಲ್ಲದ್ದರಿಂದ ಸರದಿಯಂತೆ ಗಂಡು ಹೆಣ್ಣು ಆಹಾರದ ಅನ್ವೇಷಣೆಯಲ್ಲಿ ಮತ್ತು ಕಾವು ಕೊಡುವುದರಲ್ಲಿ ಪಾಲುಗೊಳ್ಳುವವು. ಸೋಮಾರಿತನವೇ ಮೈವೆತ್ತ ಕೋಗಿಲೆ ಇದೇ ಅವಕಾಶಕ್ಕಾಗಿ ಕಾದುಕೊಂಡಿರುತ್ತದೆ. ಗಂಡುಕೋಗಿಲೆ, ಕಾಗೆಯ ಗೂಡಿನ ತೀರ ಸನಿಹಕ್ಕೆ ನುಸುಳಿಕೊಂಡು ಕೂ ಹೂ ಹೂ ಎಂದು ಚೀರಿಡುತ್ತದೆ. ತನ್ನ ಮೊಟ್ಟೆಗಳಿಗೆಲ್ಲ ಗಂಡಾಂತರ ಬಂದಿತೋ ಎಂದು ಕಾವು ಕೊಡುತ್ತಿದ್ದ ಕಾಗೆ ಅದನ್ನು ಬೆನ್ನಟ್ಟಿಕೊಂಡು ಓಡುತ್ತದೆ. ಅಷ್ಟರಲ್ಲಿ ಹೆಣ್ಣು ಕೋಗಿಲೆ ಒಂದೆರಡು ಮೊಟ್ಟೆಗಳನ್ನು ಕಾಗೆಯ ಗೂಡಿಗೆ ಸೇರಿಸಿ, ತನ್ನ ಕರ್ತವ್ಯ ಪಾಲನೆಯಿಂದ ಜಾರಿಕೊಂಡು ಬಿಡುತ್ತದೆ. ತನ್ನ ಗೂಡಿನತ್ತ ಸುಳಿದಾಡುತ್ತಿರುವ ಗಂಡು ಕೋಗಿಲೆಯನ್ನು ಓಡಿಸಿ ಜಂಬದಿಂದ ಹಿಂತಿರುಗಿದ ಕಾಗೆಗೆ ತನ್ನ ಮೊಟ್ಟೆಗಳ ಸಂಖ್ಯೆಯಲ್ಲಿ ಹೆಚ್ಚಳವಾದದ್ದು ಲಕ್ಷ್ಯಕ್ಕೆ ಬರುವುದೇ ಇಲ್ಲ, ಅವುಗಳ ಸಮಾಜದಲ್ಲಿ ಉತ್ತಮ ಗಣಿತ ಶಿಕ್ಷಕನ ಕೊರತೆ ಇದ್ದಂತಿದೆ"

ಮಕ್ಕಳಿಗೆ ಹೇಳುವ ಕಥಾ ಪ್ರಪಂಚದಂತೆ ರಮ್ಯವಾಗಿ ವೈಜ್ಞಾನಿಕ ವಿವರಗಳನ್ನು ಮಾನವ ಪ್ರಪಂಚದ ರೀತಿ ರಿವಾಜುಗಳಲ್ಲೇ ಪಶುಪಕ್ಷಿಗಳ ಪ್ರಪಂಚಕ್ಕೆ ವಿಸ್ತರಿಸಿ ಅರ್ಥೈಸಿಕೊಂಡಂತೆ ಇಲ್ಲಿ ಭಾಸವಾಗುತ್ತದೆ. ಹಿರಿಯರು ಕಿರಿಯರು ಎಲ್ಲರೂ ಖುಷಿಯಿಂದ ಓದಬಹುದಾದ ಪುಸ್ತಕ ಇದು. ಓದುವ ಆಯಾಸವಿಲ್ಲದೆಯೇ ಸಾಮಾನ್ಯ ಓದುಗನಿಗೂ ವಿಜ್ಞಾನದ ವಿವರಗಳನ್ನು ಈ ಕೃತಿ ಮನದಟ್ಟು ಮಾಡಿಕೊಡುತ್ತದೆ.

(ಕೃಪೆ : ಸಾಪ್ತಾಹಿಕ ಪ್ರಭ 06-10-1991)

## ಪಶು-ಪಕ್ಷಿ ಪ್ರಪಂಚ - ೨

**ವಿಮರ್ಶಕರು : ಎಚ್. ಆರ್. ಕೆ.**

**ಪ್ರಾಣಿ ಪರಿಸರ ಸಾಹಿತ್ಯಕ್ಕೆ ಉತ್ತಮ ಕೊಡುಗೆ**

ನಮಗೂ ಪ್ರಕೃತಿಗೂ ಇರುವ ಅನ್ಯೋನ್ಯ ಸಂಬಂಧದ ಕೊಂಡಿಗಳು ಒಂದೊಂದಾಗಿ ಕಳಚಿಕೊಳ್ಳುತ್ತಿರುವುದು ನಮ್ಮ ಜೀವನದ ಒಂದು ದೊಡ್ಡ ವಿಪರ್ಯಾಸ. ನಮ್ಮ ಸುತ್ತಮುತ್ತಲಿನ ಮರಗಿಡ, ಪ್ರಾಣಿಪಕ್ಷಿಗಳ ಸುಂದರ ಕೌತುಕಮಯ ಪ್ರಪಂಚಕ್ಕೆ ಕಣ್ಣುಕಿವಿಗಳನ್ನು ತೆರೆದಿಟ್ಟು ಸ್ಪಂದಿಸುವವರು ಬಹುವಿರಳ. ನಮ್ಮ ಶಿಕ್ಷಣಕ್ರಮ ಕೂಡ ಪ್ರಕೃತಿಯ ಬಗ್ಗೆ ಪ್ರೀತಿ ಆಸಕ್ತಿಗಳನ್ನು ಬೆಳೆಸುವುದಿಲ್ಲ. ಹೀಗಾಗಿ ನಮಗೆ ಚಿಕ್ಕದಿರುವುದೆಲ್ಲ ಗುಬ್ಬಚ್ಚಿ, ಬೆಳ್ಳಗಿರುವುದೆಲ್ಲ ಬೆಳ್ಳಕ್ಕಿ, ಹರಿದಾಡುವ ಜೀವಿಗಳೆಲ್ಲ ವಿಷಮಯ. ಅರಣ್ಯದ ಪ್ರಾಣಿಗಳೆಲ್ಲಾ ಅಪಾಯಕಾರಿ! ಇಂತಹ ಅಜ್ಞಾನದಿಂದ ನಾವು ಏನನ್ನು ಕಳೆದುಕೊಳ್ಳುತ್ತಿದ್ದೇವೆಂಬುದರ ಅರಿವಾಗುವುದು ಡಾ. ಕೃಷ್ಣಾನಂದ ಕಾಮತರ 'ಪಶು–ಪಕ್ಷಿ ಪ್ರಪಂಚ'ದಂತಹ ಪುಸ್ತಕಗಳನ್ನು ಓದಿದಾಗ ಮಾತ್ರ.

'ಪಶು–ಪಕ್ಷಿ ಪ್ರಪಂಚ' ಹದಿನೆಂಟು ಬಿಡಿ ಲೇಖನಗಳ ಸಂಕಲನ: ಕಾಗೆಯಿಂದ ಕಾಡಾನೆಯವರೆಗೆ, ಬೆಳ್ಳಕ್ಕಿಯಿಂದ ಬಿಳಿ ಹುಲಿಯವರೆಗೆ ನಮ್ಮ ಸುತ್ತಮುತ್ತಲಿನ ಹತ್ತು ಹಲವಾರು ಜೀವಿಗಳ ಜೀವನಕ್ರಮ ನಡಾವಳಿಗಳ ಬಗ್ಗೆ ಬೆಳಕು ಚೆಲ್ಲುವ ಈ ಲೇಖನಗಳು ಈ ಹಿಂದೆಯೇ ಕನ್ನಡದ ಹಲವಾರು ಪತ್ರಿಕೆಗಳಲ್ಲಿ ಪ್ರಕಟವಾಗಿರುವಂತಹವು: ಆಕಾಶವಾಣಿಯಿಂದ ಪ್ರಸಾರವಾಗಿರುವಂತಹವು. ವಿವಿಧ ಮಾಧ್ಯಮಗಳ ಬೇಡಿಕೆಗೆ ಅನುಗುಣವಾಗಿ ಬರೆದಿರುವುದರಿಂದ. ಲೇಖಕರೇ ಹೇಳಿಕೊಂಡಿರುವಂತೆ, ಲೇಖನಗಳಲ್ಲಿ ಸಹಜವಾಗಿಯೇ ಏಕಸೂತ್ರತೆ ಇಲ್ಲ.

ಪ್ರಾಣಿ ಪಕ್ಷಿಗಳ ಅಧ್ಯಯನದಲ್ಲಿ ಎರಡು ವಿಧ. ಸರ್ವೋಪಕರಣ ಸಜ್ಜಿತರಾಗಿ, ಅವುಗಳ ಬಗೆಗಿರುವ ಎಲ್ಲ ಶಾಸ್ತ್ರೀಯ ಗ್ರಂಥಗಳನ್ನೂ ಅಭ್ಯಾಸಮಾಡಿ. ದಿನಗಟ್ಟಲೆ ಪ್ರಾಣಿಪಕ್ಷಿಗಳನ್ನೂ, ಅವುಗಳ ವರ್ತನೆ, ಜೀವನಕ್ರಮಗಳನ್ನು ಗಮನಿಸಿ, ಮಾಹಿತಿಗಳನ್ನು ದಾಖಲಿಸುವುದು. ಎರಡನೆಯದು, ಈ ಯಾವ ಪೂರ್ವಸಿದ್ಧತೆಯೂ ಇಲ್ಲದೇ ಕಣ್ಣುಕಿವಿಗಳನ್ನು ತೆರೆದಿಟ್ಟು, ಕೇವಲ ಕುತೂಹಲದಿಂದ ಸಾಧ್ಯವಾದಾಗಲೆಲ್ಲ ವಾಯುವಿಹಾರಕ್ಕೆ ಹೋಗುವಾಗ. ಬಸ್ಸಿಗಾಗಿ ಕಾಯುತ್ತಿರುವಾಗ. ಮನೆಯಂಗಳದಲ್ಲಿ ಬಿಡುವಾಗಿ ಕುಳಿತು ಕಾಫಿ ಹೀರುತ್ತಿರುವಾಗ– ಪಶುಪಕ್ಷಿಗಳನ್ನು ಗಮನಿಸುವುದು. ಇಂತಹ ಸರಳ, ಆರಾಮ ವೀಕ್ಷಣೆ ಕೂಡ ಅತಿ ವಿಶಿಷ್ಟವಾದ ಮಾಹಿತಿಗಳನ್ನು ಒದಗಿಸಬಹುದು. ಈ ಪುಸ್ತಕದಲ್ಲಿ ನಾವು ಈ ಎರಡನೆಯ ಹಾದಿಯನ್ನು ಕಾಣುತ್ತೇವೆ.

ಕಾಗೆ, ಕಬ್ಬಾರೆ (ನೈಟ್ ಹೆರಾನ್). ಓಂಗಿಲೆ (ಹಾರ್ನ್‌ಬಿಲ್). ಕೊಕ್ಕರೆ, ಗೊರಿಲ್ಲಾ, ಬೆಳ್ಳಕ್ಕಿ, ಬಿಳಿಹುಲಿ, ಕಾಡಾನೆ ಮುಂತಾದವು ಈ ಪುಸ್ತಕದಲ್ಲಿ ಕಾಣುವ ಜೀವಿಗಳು. ಆದರೆ ಲೇಖಕರು ಈ ಜೀವಿಗಳನ್ನು ನೋಡಿರುವ ದೃಷ್ಟಿ ಮಾತ್ರ ಬಹು ವಿಶಿಷ್ಟ. ಕಾಳಗವೊಂದರಲ್ಲಿ ಚುಂಚನ್ನು ಮೊಂಡು ಮಾಡಿಕೊಂಡ 'ಕರಿಯಪ್ಪ' (ಕಾಗೆ) ತನ್ನ ವೈವಿಧ್ಯಮಯ ಚಟುವಟಿಕೆಗಳಿಂದ ಓದುಗರ ಮನರಂಜಿಸುತ್ತಾನೆ. ಬೆಳಗಿನ ಫಳಾರದಿಂದ ಕರಿಯಪ್ಪನ ಚಟುವಟಿಕೆ ಪ್ರಾರಂಭವಾಗುತ್ತದೆ. ಹೊಟ್ಟೆತುಂಬಿದ ನಂತರ ಓತಿಕೇತ, ಅಳಿಲುಗಳನ್ನು ಓಡಾಡಿಸಿ, ಶೆಟ್ಟರ ಪತ್ನಿ ಪಂಜರದಲ್ಲಿ ಸಿಕ್ಕಿಕೊಂಡಿದ್ದ ಇಲಿಯನ್ನು ರಸ್ತೆಯಲ್ಲಿ ಬಿಟ್ಟಾಗ ಅದರ ಬಾಲವನ್ನು ಹಿಡಿದೆತ್ತಿ ಮೋಕ್ಷ ತೋರಿಸಿ, ಪ್ರಿಯತಮೆ ಕಾಳಮ್ಮನೊಡನೆ ಸಲ್ಲಾಪ ನಡೆಸಿ, ಅಂಗಡಿಯಲ್ಲಿಟ್ಟಿದ್ದ ಭಜಿ ಕದಿಯಲು ಹೋಗಿ ಅಲ್ಲಿದ್ದ ಕತ್ತರಿಯಲ್ಲಿ ಕಾಲಿನ ಅರ್ಧಭಾಗ ಬಿಟ್ಟು ಬಂದು ಅಂಗವಿಕಲನಾದ ಕರಿಯಪ್ಪ ಒಂದೇ ತಿಂಗಳ ಅವಧಿಯಲ್ಲಿ ತನ್ನ ವಿಕಲತೆಗೆ ಹೊಂದಿಕೊಳ್ಳುತ್ತಾನೆ. ಕಡೆಗೊಮ್ಮೆ ತುಂಟ ಹುಡುಗರ ಕಲ್ಲಿಗೆ

ಬಲಿಯಾಗಿ ಜೀವನ ಮುಗಿಸುತ್ತಾನೆ. ನಾವು ಸದಾಕಾಲ ಹೊಡೆಮೋಡಿಸುವ ಕಾಗೆ, ಈ ಲೇಖನದಲ್ಲಿ ನಮಗೆ ಪ್ರಿಯವಾಗುತ್ತದೆ: ಅದರ ಅಂತ್ಯ ನಮ್ಮೆಲ್ಲರ ಮನಕರಗಿಸುತ್ತದೆ. 'ಇಂಥ ವರಬೇಕು' ಎಂಬ ಲೇಖನದಲ್ಲಿ ಮಡದಿ ಮಕ್ಕಳಿಗಾಗಿ ಸರ್ವಸ್ವವನ್ನೂ ತ್ಯಾಗ ಮಾಡುವ ಓಂಗಿಲಿಯ ಜೀವನ ಚಿತ್ರವಿದೆ. 'ನಮ್ಮ ಆಪ್ತ ಗೊರಿಲ್ಲ'. 'ಅಕ್ಕಾ ಭಾವ ಬಂದ್ರು', 'ಕಣ್ಮರೆಯಾಗುತ್ತಿರುವ ಕಾಡಾನೆಗಳು', ಮುಂತಾದ ಲೇಖನಗಳಲ್ಲಿ ಪ್ರಕೃತಿಯ ಸುಂದರ ಜೀವಿಗಳನ್ನು ನಾವು ನಡೆಸಿಕೊಳ್ಳುತ್ತಿರುವ ರೀತಿಯ ಬಗ್ಗೆ ಖೇದವಿದೆ. ಅವುಗಳ ಸಂರಕ್ಷಣೆಯ ಸಮಸ್ಯೆಗಳ ಬಗ್ಗೆ ಪ್ರಾಮಾಣಿಕ ಕಾಳಜಿಯಿದೆ.

ಪುಸ್ತಕದ ಉದ್ದಕ್ಕೂ ಏಕಪ್ರಕಾರವಾಗಿ ಮಿಂಚಿರುವ ಲೇಖಕರ ಹಾಸ್ಯಪ್ರಜ್ಞೆ ಈ ಕೃತಿಗೆ ವಿಶಿಷ್ಟವಾದ ಮೆರುಗು ನೀಡಿದೆ. ನಮ್ಮ ಜೀವನದಲ್ಲಿ ನಾವು ಪ್ರತಿನಿತ್ಯ ನೋಡುವ ಪ್ರೀತಿ. ಜಗಳ, ಕಾಮ, ಅಳು, ನಗು, ಪತಿ – ಪತ್ನಿಯರ ವಾಕ್‌ಪ್ರವಾಹ, ಹೊಟ್ಟೆ ಹೊರೆಯಲು ತೊಡುವ ವಿವಿಧ ವೇಷಗಳು, ಆಹಾರ ಸಂಪಾದಿಸುವ ಜಾಣತನ ಮುಂತಾದವುಗಳ ಪ್ರತಿಬಿಂಬವನ್ನೇ ನಾವು ಪಶು–ಪಕ್ಷಿ ಪ್ರಪಂಚದಲ್ಲಿ ಕಾಣುತ್ತೇವೆ. ಈ ವಿವಿಧ ಚಟುವಟಿಕೆಗಳನ್ನು ಪರಿಚಯ ಮಾಡಿಕೊಡುತ್ತಿರುವಂತೆಯೇ ನಮ್ಮಲ್ಲಿರುವ ಅನೇಕ ಅವಗುಣಗಳನ್ನು ಪ್ರಾಣಿ–ಪಕ್ಷಿಗಳ ಮೂಲಕವಾಗಿ ಪರೋಕ್ಷವಾಗಿ ತೋರಿಸಿಕೊಡುತ್ತಾರೆ. ಗೇಲಿ ಮಾಡುತ್ತಾರೆ. ಓಂಗಿಲೆಗಳ ಸಮಾಜದಲ್ಲಿ ಸ್ತ್ರೀ ಸ್ವಾತಂತ್ರ್ಯ, ಎಷ್ಟೇ ಸಿಟ್ಟು ವೈಮನಸ್ಸುಗಳಿದ್ದರೂ ಬಂಗಾಲಿಗಳಂತೆ ಬಾಯಿಮಾತಿನಿಂದಲೇ ಪರಿಹರಿಸಿಕೊಳ್ಳುವ ಕಬ್ಬಾರೆಗಳು, ಕವಡೆಗಳ ಮಹತ್ವ ಹುಡುಕ ಹೊರಟ ಮಾನವ ಶಾಸ್ತ್ರಜ್ಞರು, ಕಾವಲಳಿಂದ ಛೀಮಾರಿ ಹಾಕಿಸಿಕೊಂಡು ಕಡೆಗೊಮ್ಮೆ ಸ್ನಾನಮಾಡಲು ನಿರ್ಧರಿಸುವ ಕಾಕರಾಜ ಮುಂತಾದ ಪ್ರಸಂಗಗಳು ಓದುಗರನ್ನು ನಕ್ಕು ನಲಿಸುತ್ತವೆ. ಅತ್ಯಂತ ಆತ್ಮೀಯವಾದ ನೇರವಾದ ಶೈಲಿ ಮನಮುಟ್ಟುತ್ತದೆ.

ನಮ್ಮ ಸುತ್ತಮುತ್ತಲಿನ ಪ್ರಪಂಚವನ್ನು ಕಣ್ತೆರೆದು ನೋಡಲು ಡಾ. ಕಾಮತರು ನಮ್ಮನ್ನು ಆಹ್ವಾನಿಸುತ್ತಾರೆ. ಆದರೆ ಹೀಗೆ ನೋಡುವ 'ಕಲೆ' ಯನ್ನು ಬೆಳೆಸಿಕೊಳ್ಳುವುದರ ಬಗ್ಗೆ ಹೆಚ್ಚಿನ ಪರಿಚಯ ಮಾಡಿಕೊಡುವುದಿಲ್ಲ. ಪುಸ್ತಕವನ್ನೋದಿ, ಆಸಕ್ತಿ ತಳೆದು ಕಣ್ತೆರೆಯಲು ಪ್ರಯತ್ನಿಸುವವರಿಗೆ ಮಾರ್ಗದರ್ಶನ ಅವಶ್ಯಕವೆನಿಸುತ್ತದೆ. ಅತ್ಯುತ್ತಮ ಛಾಯಾಚಿತ್ರಕಾರರಾದ ಡಾ. ಕಾಮತರ ಚಿತ್ರಗಳು ಮುದ್ರಣದ ಹಂತದಲ್ಲಿ ಕಳಪೆಯಾಗಿವೆ. ಅನೇಕ ಕಡೆಗಳಲ್ಲಿ ಯಾವ ವಿವರಗಳೂ ತಿಳಿಯದೆ, ಕರಿಮುದ್ದೆಯಾಗಿ ನೆರಳು ಚಿತ್ರವಾಗಿ ನಿರಾಸೆಯನ್ನುಂಟು ಮಾಡುತ್ತವೆ. ಇದನ್ನು ಬಿಟ್ಟು ಉಳಿದಂತೆ ಪುಸ್ತಕ ಕುತೂಹಲ ಕೆರಳಿಸುವ ಕಥಾನಕದಂತಿದೆ. ಪ್ರಾಣಿ ಪಕ್ಷಿಗಳು ನೀಡುವ ಅಪೂರ್ವ ಆನಂದವನ್ನು ಅನುಭವಿಸಲು ಅವಕಾಶ ಮಾಡಿಕೊಡುವ ಪಶು–ಪಕ್ಷಿ ಪ್ರಪಂಚ ಕನ್ನಡದಲ್ಲಿನ ಪ್ರಾಣಿ, ಪರಿಸರ ಸಾಹಿತ್ಯ ಪ್ರಕಾರಕ್ಕೆ ಡಾ. ಕೃಷ್ಣಾನಂದ ಕಾಮತರ ಮತ್ತೊಂದು ಉತ್ತಮ ಕೊಡುಗೆ.

(ಕೃಪೆ : ಪ್ರಜಾವಾಣಿ 05-01-1992)

## ಪ್ರೇಯಸಿಗೆ ಪತ್ರಗಳು - ೧

### ವಿಮರ್ಶಕರು : ಪಿ. ಲಂಕೇಶ್

**'ಬರವಣಿಗೆಯ ಸಂತೋಷ'**

ಕೃಷ್ಣಾನಂದ ಕಾಮತ್ ಅವರು ಕನ್ನಡಿಗರಿಗೆ ಪರಿಚಿತ ಲೇಖಕರು. ಇವರ ಪ್ರವಾಸ ಸಾಹಿತ್ಯವನ್ನು ಬಹಳ ಜನ ಓದಿ ಮೆಚ್ಚಿದ್ದಾರೆ. ಅನೇಕ ವಸ್ತುಗಳನ್ನು ಕುರಿತು ಸ್ಪಷ್ಟವಾಗಿ, ಓದಿಸಿಕೊಳ್ಳುವಂತೆ, ವಿದ್ವತ್ಪೂರ್ಣವಾಗಿ ಬರೆಯಬಲ್ಲ ಕೃಷ್ಣಾನಂದ ಕಾಮತ್ ರು ಈಚೆಗೆ ಪ್ರಕಟಿಸಿರುವ "ಪ್ರೇಯಸಿಗೆ ಪತ್ರಗಳು" ಕನ್ನಡ ಸಾಹಿತ್ಯಕ್ಕೆ ನೀಡಿದ ಕುತೂಹಲಕರ ಕೃತಿ. ಈ ಬಗೆಯ ಪುಸ್ತಕ ಕನ್ನಡದಲ್ಲಿ ಬಹಳ ಇಲ್ಲ.

ಈ ಪುಸ್ತಕದಲ್ಲಿರುವ ೩೪ ಪತ್ರಗಳೂ ಕಾಮತ್‌ರು ತಮ್ಮ ಪತ್ನಿಗೆ ಬರೆದ ಪತ್ರಗಳು. "ವಧುವಿಗೆ", "ರೂಪಲಾವಣ್ಯ", "ಮೇಘದೂತ", "ತಿರುಗಾಟದ ವೇಳೆ", ಮುಂತಾದ ಪತ್ರಗಳನ್ನೊಳಗೊಂಡಿರುವ ಈ ಪುಸ್ತಕದಲ್ಲಿ ಕಾಮತ್‌ರು ತಮಗೆ ಜೀವನ ಒಂದು ಕ್ಷಣದಲ್ಲಿ ಅನ್ನಿಸಿದ್ದನ್ನು, ಒಂದು ದೃಶ್ಯ, ಘಟನೆ, ಕಾಳಜಿಯನ್ನು ತಮ್ಮ ಪತ್ನಿಯೊಂದಿಗೆ ಪಾಲುಗೊಂಡು ಸಂತೋಷಿಸಿದ್ದಾರೆ. ಬರೆಯುವ ಸಂತೋಷದಲ್ಲಿ ಅರೆಸತ್ಯವನ್ನು ಸತ್ಯವೆಂದೂ, ಸತ್ಯವನ್ನು ಕಾವ್ಯಸತ್ಯವೆಂದೂ ನಂಬುವುದು ಕೂಡ ಇಲ್ಲಿ ಕಂಡು ಬರುತ್ತದೆ. "ವಿದ್ಯಾಭ್ಯಾಸದ ಮೂಲ ಉದ್ದೇಶವಿರುವುದು ಮಾನವನ ಮಾನಸಿಕ ವಿಕಾಸಕ್ಕಾಗಿ. ಹಣಸಂಪಾದನೆ, ಸುಖಜೀವನಗಳೇ ಶಿಕ್ಷಣದ ಗುರಿಯಾಗಿದ್ದರೆ ಡಾರ್ವಿನ್,

ನ್ಯೂಟನ್, ಐನ್‌ಸ್ಟೈನ್‌ರಂಥವರು ಈ ವಿಶ್ವವನ್ನು ಶ್ರೀಮಂತವಾಗಿಸುತ್ತಿರಲಿಲ್ಲ. ಅದೇ ಮಾರವಾಡಿ, ಸಿಂಧಿಗಳು ಅಂಥ ಶಿಕ್ಷಣ ಪಡೆದೂ ಧನಿಕರಾಗಲು ಎಂದೂ ಹಿಂದೆ ಬಿದ್ದಿಲ್ಲ". ಈ ಮಾತಿನ ಅರ್ಥ ಚಿಂತಿಸಬಹುದು.

ಈ ಪುಸ್ತಕಕ್ಕೆ ಕಾಮತ್‌ರ ಪತ್ನಿ ಜ್ಯೋತ್ಸ್ನಾ ಕಾಮತ್ ತುಂಬ ಸ್ವಾರಸ್ಯವಾದ ಮುನ್ನುಡಿ ಬರೆದಿದ್ದಾರೆ. ಗಂಡ ದೂರದಲ್ಲಿದ್ದಾಗ ಉದ್ದುದ್ದನೆಯ ಪತ್ರ ಬರೆಯುವುದು, ಎದುರಿಗೇ ಇದ್ದಾಗ ಮಾತಾಡದೇ ಇರುವುದು. ಅವರ ಮುನ್ನುಡಿಯ ಹಿಂದಿನ ಭಾವನೆಗಳಲ್ಲಿ ಒಂದು. ಹಾಗೆಯೇ ಈ ಪತ್ರಗಳ ಮಿತಿಯನ್ನು ಕೂಡ ಹೇಳಬೇಕು. ಕಾಮತ್‌ರು ಪ್ರತಿಯೊಂದು ಪತ್ರ ಬರೆಯುವಾಗಲೂ ತಮ್ಮಲ್ಲಿ ಅದರ ಒಂದು ನಕಲು ಇಟ್ಟುಕೊಂಡಿರುತ್ತಾರೆ. ಅಂದರೆ ಅವರ ಒಂದೊಂದು ಪತ್ರವೂ ಮುಂದೆ ಪ್ರಕಟವಾಗುವ ಉದ್ದೇಶ ಹೊಂದಿದ್ದು ಪ್ರಬಂಧ ಅಥವಾ ಲೇಖಕನ ಗುಣ ಪಡೆದಿರುತ್ತದೆ. ಆದ್ದರಿಂದಲೇ ಅನಾಮಿಕವಾಗುವಾಗಿನ ತುಂಟತನ, ವೈಯಕ್ತಿಕತೆ, ಎಚ್ಚರ ತಪ್ಪಿದ ಸುಂದರ ಮಾತು ಅಲ್ಲಿ ತುಂಬ ಕಡಿಮೆ ಇರುತ್ತದೆ.

(ಕೃಪೆ : ಲಂಕೇಶ್ ಪತ್ರಿಕೆ ನವೆಂಬರ್ 18, 1990)

## ಪ್ರೇಯಸಿಗೆ ಪತ್ರಗಳು - ೨ (ಒಂದು ಪತ್ರರೂಪ ವಿಮರ್ಶೆ)

### ವಿಮರ್ಶಕರು : ಡಾ. ಬಸವರಾಜ ಸಾದರ

**'ಹಿರಿಯರಾದ ಡಾ. ಕೃಷ್ಣಾನಂದ ಕಾಮತ ಅವರಿಗೆ'**

ನಿಮ್ಮ ಪತ್ರಗುಚ್ಛ "ಪ್ರೇಯಸಿಗೆ ಪತ್ರಗಳು" ಪುಸ್ತಕವನ್ನು ಓದಿ ಈ ಪತ್ರ ಬರೆಯುತ್ತಿರುವೆ. ಪುಸ್ತಕದ ಪ್ರತಿಯೊಂದನ್ನು ಪ್ರೀತಿ-ವಿಶ್ವಾಸದಿಂದ ಕಳುಹಿಸಿದ ನಿಮಗೆ ಮೊದಲು ಅಭಿನಂದನೆಗಳು.

ಧ್ವನಿಪೂರ್ಣವಾದ ನಿಮ್ಮ ಪುಸ್ತಕದ Title ನೋಡಿದ ತಕ್ಷಣ ಮೊದಲ ನೋಟಕ್ಕೆ ಅನಿಸುವ ಅರ್ಥ ಪ್ರಣಯದ್ದು. ಬಿಸಿರಕ್ತದ ತರುಣರು ಆ ಅರ್ಥದಲ್ಲೇ ಇದನ್ನು ಓದಲು ತೊಡಗಿದಾಗ ಕಾಣುವ ಗಂಭೀರ ಜಗತ್ತೇ ಬೇರೆ. ನಿಮ್ಮ ಬದುಕಿನ ಅಗಾಧವಾದ ಸಂಯಮ, ಚೂರೂ ಬದಲಾಗದ ಗಟ್ಟಿ ಆದರ್ಶ ಗುಣ. ಜೀವ ವಿರೋಧಿಯಲ್ಲದ ಬದುಕಿನ ಗಂಭೀರ ಅನುಭವ, ಇಂಥ ಅನುಭವಗಳನ್ನು ಅಭಿವ್ಯಕ್ತಪಡಿಸುವಾಗಿನ (ಪತ್ರಗಳಲ್ಲಿ) ನಿರ್ಲಿಪ್ತತೆ, ತೊಳಲಾಟ, ಬಳಲಾಟ-ಈ ಎಲ್ಲವುಗಳೂ ನಿಮ್ಮ ಸಾಹಿತ್ಯಕ ಲೇಖನಿಯಿಂದ ಅಪೂರ್ವವಾದ ಜಗತ್ತೊಂದನ್ನು ಈ ಪುಸ್ತಕದಲ್ಲಿ ಕಂಡುಕೊಂಡಿವೆ.

ಇಲ್ಲಿರುವ ಒಂದೊಂದು ಪತ್ರಗಳನ್ನೂ ಕುರಿತು ಬರೆಯಬೇಕಾದಷ್ಟು ಸಾಮಗ್ರಿಯನ್ನು ಇವು ಸಂವೇದನಾಶೀಲ ಓದುಗನಿಗೆ ಒದಗಿಸುತ್ತವೆ. ಅದಕ್ಕೆ ಈ ಪತ್ರ ಸಾಲದು. ಒಟ್ಟು ನೋಟದಲ್ಲಿ ಎದ್ದು ಕಾಣುವ ಅಂಶವೆಂದರೆ, ಗಂಡ ಹೆಂಡತಿ ಎಷ್ಟೋ ಕಾಲ ದೂರದಲ್ಲಿದ್ದೂ ಆದರ್ಶಮಯ ದಾಂಪತ್ಯ ನಡೆಸಿದ್ದು. ಮದುವೆಯ ಮುನ್ನ, ಮದುವೆಯಾದ ಮೇಲೆ-ಒಂದಿಷ್ಟು ಕಾಲದಲ್ಲೇ ಜೀವನರಸವನ್ನು ಸಂಪೂರ್ಣ ಸೋರಿಸಿಕೊಂಡು, ಒಂದಾಗಿದ್ದೂ ವಿರಹಿಗಳಂತೆಯೇ ಬದುಕುವ ಬಹುಪಾಲು ಪ್ರಣಯಿಗಳಿಂದಲೇ ತುಂಬಿರುವ ಈ ಜಗತ್ತಿನಲ್ಲಿ ನಿಮ್ಮದೊಂದು ಆದರ್ಶ ದಾಂಪತ್ಯವೆಂದು ಹೆಮ್ಮೆಯಿಂದ ಹೇಳಬೇಕು. ಇಂಥ ಆದರ್ಶ ದಾಂಪತ್ಯದ ಪುರಾವೆಗಳಾಗಿವೆ ಈ ಪತ್ರಗಳು. ಅಂತೆಯೇ ದೂರದಲ್ಲಿದ್ದರೂ ಭಾವನಾತ್ಮಕ ಸಂಬಂಧದಲ್ಲಿ ನಿಮ್ಮನ್ನು ಬೆಸೆದ ಈ ಪತ್ರಗಳು ಬರೀ ಪತ್ರಗಳಾಗದೇ ಆಧುನಿಕ ಕೌಟುಂಬಿಕ ಜೀವನದ ಪಾಠಗಳಾಗಿವೆ.

"ಜೀವನವನ್ನು ಬೇಕಾದಂತೆ ರೂಪಿಸಿಕೊಳ್ಳುವುದು ನಮ್ಮ ಕೈಯಲ್ಲಿಯೇ ಇದೆ" (ಪುಟ. ೧೩೯) ಎಂಬ ಮಾತು ನನಗೆ ತುಂಬ ಆತ್ಮೀಯವಾಗಿದೆ. ಇದಕ್ಕೆ ಪೂರಕವಾಗಿ ಕೆಲಸ ಮಾಡಿದ ನಿಮ್ಮ ಪತ್ರಗಳಲ್ಲಿರುವ ವೈವಿಧ್ಯತೆ ಬೆರಗು ತರಿಸುತ್ತದೆ. ಇಲ್ಲಿ ಸಂಯಮದ ಪ್ರೀತಿಯಿದೆ. ಅರ್ಥಪೂರ್ಣ ಪ್ರಣಯವಿದೆ, ಕಾಂತಾ ಸಮ್ಮಿತದಂಥ ದೀಪವಿದೆ. ನೋವಿದೆ ನಲಿವಿದೆ-ಎಲ್ಲವನ್ನು ಬದುಕಿ ಸಾಧಾರಣೀಕರಣಗೊಳಿಸಿ ತೋರಿಸಿದ ಪ್ರಾಯೋಗಿಕ ಜೀವನವಿದೆ. ಪತ್ರದಲ್ಲಿ ಬಂದಿರುವ ವಿಷಯಗಳೆಲ್ಲ ಈ ಪ್ರಾಯೋಗಿಕ ಜೀವನದ ಫಲವಾಗಿರುವುದರಿಂದ ಅವುಗಳಿಗೆ ಸತ್ಯದ ಬುನಾದಿಯಿದೆ. ವಾಸ್ತವತೆಯ ನೆಲೆಯಿದೆ.

ಈ ಪತ್ರಗಳಲ್ಲಿ ನೀವು ಬರೆದ ವಿಷಯಗಳನ್ನು ಅವಲೋಕಿಸುತ್ತ ಹೋದಂತೆ, ತೆರೆದ ಕಣ್ಣಿನಿಂದ ಮುಕ್ತ ಮನಸ್ಸಿನಿಂದ ನಿಸ್ಪೃಹ ಭಾವದಿಂದ ಇಡೀ ಜಗತ್ತನ್ನು ನೀವು ನೋಡುವ, ನೋಡಿ ಅಭಿವ್ಯಕ್ತಪಡಿಸುವ ವಿಶಿಷ್ಟವಾದ ಪರಿಣತತೆಯೊಂದು ಎದ್ದು ಕಾಣುತ್ತದೆ.

ಈ ಪರಿಣತಿ ಅನುಭವಗಳಿಂದ ಗಟ್ಟಿಗೊಂಡಿರುವುದು, ಇನ್ನೂ ವಿಶಿಷ್ಟವಾಗಿದೆ. ಇಲ್ಲಿ ಇತಿಹಾಸವಿದೆ, ಸಂಸ್ಕೃತಿಯ ಪರಿಚಯವಿದೆ, ವಿಜ್ಞಾನವಿದೆ, ಕಲಾಪ್ರಪಂಚವಿದೆ, ವ್ಯವಹಾರ ಜ್ಞಾನವಿದೆ, ಮುಂದಾಲೋಚನೆ, ಆಹಾರವಿದೆ, ಪರಿಸರಪ್ರೇಮ, ಪರಿಸರ ವಿಜ್ಞಾನವಿದೆ, ತಿಳಿಹಾಸ್ಯವಿದೆ, ನಿಮ್ಮ ೫ ವರ್ಷಗಳ ಬದುಕಿನ ಪ್ರವಾಸ ಕಥನವಿದೆ. ನೋವನ್ನು ಬರೀ ನೋವಾಗಿ ಅನುಭವಿಸದೇ, ಇಂದಿನ ಕ್ರೂರ ವ್ಯವಸ್ಥೆಯ ಹಿನ್ನೆಲೆಯಲ್ಲಿ ಅದನ್ನೂ ಬದುಕಿನ ಪಾಠವಾಗಿ ಸ್ವೀಕರಿಸಿ ಕ್ರೂರ ವ್ಯವಸ್ಥೆಯನ್ನೂ ಮೆಟ್ಟನಿಂತ ನಿಮ್ಮ ಸಂಯಮ, ಎದೆಗಾರಿಕೆ, ಗಟ್ಟಿತನ – ಎಲ್ಲ ಇವೆ. ಮೇಡಂ ಮುನ್ನುಡಿಯಲ್ಲಿ ಹೇಳಿರುವಂತೆ 'ಕಾಮತರು ಬರೆಯದ ವಿಷಯವಿರಲಿಲ್ಲ' ಎಂಬ ಮಾತು ಸತ್ಯ. ಏನೇ ಬರೆದರೂ ಅವು ಜೀವನದ ಪಾಠಗಳೇ ಆಗಿರುವುದು ಇನ್ನೂ ಗಮನಾರ್ಹವಾದ ಸತ್ಯ.

ಇದಿಷ್ಟೂ ಪುಸ್ತಕದ ಬಗೆಗಿನ ಒಟ್ಟಾರೆ ಮಾತುಗಳು. ನನಗೆ ಹಿಡಿಸಿದ ಎರಡು ಭಾಗಗಳ ಬಗ್ಗೆ ಹೇಳುವೆ. ಮೊದಲನೆಯದು 'ಪಿತರ ಪರಲೋಕ ಪಯಣ' (ಹೊನ್ನಾವರ ೨೦-೧-೬೯) ಇದು ಪತ್ರ ಮಾತ್ರವಲ್ಲ, ಹೃದಯವನ್ನು ತೇವಗೊಳಿಸುವ ಸಂವೇದನಾತ್ಮಕ ಪ್ರಬಂಧ. ಸಾವನ್ನೂ ಸ್ಥಿತಪ್ರಜ್ಞೆಯಿಂದ ಕಾಣುವ ನಿಮ್ಮೆಲ್ಲ ಪರಿವಾರದ ಅಪೂರ್ವದಾದಿ ಮನೋಭಾವ ಇದರಲ್ಲಿ ಎದ್ದು ಕಾಣುತ್ತದೆ.

ಸತ್ವಪರೀಕ್ಷೆ, ಬಡಬಂಗಾಲಿಗಳು, ಅಭಿಮಾನಿ, ಶಿಕ್ಷಣದ ಗುರಿ, ಕುರುಡಲ್ಲದ ಕಾಂಚಾಣ–ಎಲ್ಲ ಪತ್ರಗಳೂ ಹೃದಯವನ್ನು ನೇರವಾಗಿ ತಟ್ಟುತ್ತವೆ. ಬದುಕಿಗೆ ಹೊಸದಾದ ದಾರಿಯೊಂದನ್ನು ಕಾಣಿಸುತ್ತವೆ. ಈ ಪತ್ರಗಳೆಲ್ಲ್ಲ ಸಮೃದ್ಧವಾದ ಸಾಹಿತ್ಯಾಂಶಗಳನ್ನು ಪಡೆದುಕೊಂಡದ್ದು 'ಚಕ್ಕಡಿಯ ಸವಾರಿ'. ಓದುತ್ತಾ ಹೋದಂತೆ ಕಣ್ಮುಂದೆ ಆ ಚಿತ್ರ ನಿಲ್ಲುತ್ತದೆ. ಓದುಗ ಚಕ್ಕಡಿಯಲ್ಲಿ ಪ್ರವಾಸ ಮಾಡಿದ ಅನುಭವವಾಗುತ್ತದೆ. ಒಂದು ಶಬ್ದಚಿತ್ರವೆಂಬಂತೆ ತೋರುವ ಈ ಪತ್ರ ಉತ್ತಮ ಲಲಿತ ಪ್ರಬಂಧವಾಗಿದೆ.

ಆಡಂಬರವಿಲ್ಲದ ಸರಳ ಶೈಲಿ, ನೇರ ನಿರೂಪಣೆಯ ಈ ಪತ್ರಗಳು ಯಾವ ತೊಂದರೆಯೂ ಇಲ್ಲದೆ ಓದುಗನ ಹೃದಯಕ್ಕಿಳಿಯುತ್ತವೆ.

ಪುಸ್ತಕದ ಮುನ್ನುಡಿ, ಸುಂದರ ಮೂಗಿಗೆ ಮುತ್ತಿನ ನತ್ತಿಟ್ಟಂತಾಗಿದೆ. ಒಂದರ್ಥದಲ್ಲಿ ಇದು ಪಕ್ಕಿನ (Right) ಮುನ್ನುಡಿ ಕೂಡಾ, ಪತ್ರಸಂಸಾರದ ಸಮಾನಾಂತರ ಚಲನೆಗೆ ಪೂರಕವಾಗಿ ಸಾಗಿದ ಮುನ್ನುಡಿಕಾರರೇ ಕನ್ನಡದಲ್ಲಿ ಮೊಟ್ಟ ಮೊದಲನೆಯದಾದ ಇಂಥ ಸಾಹಿತ್ಯ ಪ್ರಕಾರದ ಮೂಲ ಕಾರಣೀಭೂತರೆಂದು ಮುಕ್ತ ಮನಸ್ಸಿನಿಂದ ಹೇಳಬೇಕಾಗುತ್ತದೆ.

ಮುಖ ಪುಟ Title ನ ಮುಂದೆ ಆಶ್ಚರ್ಯವಾಚಕ ಚಿನ್ಹೆ ಇರಬೇಕಾಗಿತ್ತು. ಅಂದರೆ ಅದಕ್ಕೆ ಇನ್ನೂ ಹೆಚ್ಚಿನ ಧ್ವನಿರಮ್ಯತೆ ಸಾಧ್ಯವಾಗುತ್ತಿತ್ತು. ಬಹುಶಃ ಇದು ಕಣ್ತಪ್ಪಿನಿಂದ ಉಳಿದಿರಬೇಕೆನಿಸುತ್ತದೆ. (ಏಕೆಂದರೆ ಒಳಗಡೆ ಎಲ್ಲ ಕಡೆ ಅದು ಇದೆ). ಪು–೭೯ರಲ್ಲಿ Title ಕೆಳಗಿನ ದಿನಾಂಕದಲ್ಲಿ ತಿಂಗಳ ಸಂಖ್ಯೆ ೧೩ ಎಂದಿದೆ. (ಮುದ್ರಣ ದೋಷವಿರಬಹುದು).

ಮುಖಪುಟದ ವಿನ್ಯಾಸವಂತೂ ಅರ್ಥಪೂರ್ಣ, ಆಕರ್ಷಕವಾಗಿದೆ.

ಈ ಪತ್ರಗಳನ್ನು ಬರೆದ, ಬರೆಸಿಕೊಂಡ, ಪ್ರಕಟಿಸಿದ ಎಲ್ಲರೂ ಇಂಥ ಹೊಸ ಮಾದರಿಯ ಸಾಹಿತ್ಯ ಕೊಟ್ಟದ್ದಕ್ಕೆ ಅಭಿನಂದನಾರ್ಹರು.

(ಕಾಮತರಿಗೆ ಬರೆದ ಒಂದು ವೈಯಕ್ತಿಕ ಪತ್ರ)

## ಪ್ರೇಯಸಿಗೆ ಪತ್ರಗಳು - ೩

**ವಿಮರ್ಶಕರು : ಡಾ|| ಶ್ರೀನಿವಾಸ ಹಾವನೂರು**

ಈ ಪತ್ರಗಳನ್ನು ಬರೆದ ಡಾ. ಕೃಷ್ಣಾನಂದ ಕಾಮತರು ಖ್ಯಾತ ಲೇಖಕರು. ಕಲಾವಿಚಾರ, ಪ್ರಾಣಿ ಪ್ರಪಂಚ, ಮುಖ್ಯವಾಗಿ ವಿವಿಧ ಪ್ರದೇಶಗಳಲ್ಲಿಯ ಜನ ಜೀವನ, ಅವರ ಲೇಖನ ವಿಷಯಗಳು, ಇಂಥವೇ ಅಸಾಂಪ್ರದಾಯಕ ಸಾಹಿತ್ಯ – ಈ ಪತ್ರಗಳು. ಅವಕ್ಕೆ ಗಟ್ಟಿಯಾದ ತಳಹದಿಯೆಂದರೆ, ಅವರ ಪ್ರವಾಸ ಪ್ರಿಯತೆ.

ಇಲ್ಲಿಯ ಪ್ರೇಯಸಿ–ಪತ್ನಿ ಇನ್ನಾರೂ ಅಲ್ಲ, ಬೆಂಗಳೂರು ಆಕಾಶವಾಣಿಯ ನಿರ್ದೇಶಕಿ ಡಾ. ಜ್ಯೋತ್ಸ್ನಾ ಕಾಮತರು. ಅವರೂ ಲೇಖನ ಕಾರ್ಯದಲ್ಲಿ ಖ್ಯಾತನಾಮರು.

ಅವರದು 'ಪತ್ರ ಸಂಸಾರ'. ಎಂದರೆ ಕೃಷ್ಣಾನಂದರ ವಾಸ, ರಾಜಸ್ಥಾನದ ಜೋಬನೇರ, ಬಂಗಾಲದ ಪ್ಲಾಸಿ ಮುಂತಾದ ಕಡೆಗಳಲ್ಲಿ; ಪತ್ನಿಯದು ಧಾರವಾಡ, ಜಯಪುರ, ಮೈಸೂರುಗಳಲ್ಲಿ, ಹೀಗಾಗಿ ಕೃಷ್ಣಾನಂದರು ನಿಯಮಿತವಾಗಿ ಪತ್ರ ಬರೆಯುತ್ತಿದ್ದರು. ಅವುಗಳಲ್ಲಿ ಬಂದ ವಿಷಯ ವೈವಿಧ್ಯ, ವ್ಯಂಗ–ವಿನೋದಗಳಿಂದ ಕೂಡಿದ ಮಂಡನೆ ಅವಕ್ಕೆ ಸಾಹಿತ್ಯಿಕ ಮೌಲ್ಯವನ್ನು ತಂದುಕೊಟ್ಟಿವೆ.

ಆದರೆ ಈ ಪತ್ರಗಳಲ್ಲಿ ಪ್ರೇಮಸಲ್ಲಾಪಕ್ಕಿಂತ, ಅವರ ಜೀವನ ದೃಷ್ಟಿಕೋನ ನಮ್ಮನ್ನು ವಿಶೇಷವಾಗಿ ಸೆಳೆಯುತ್ತದೆ. ಮೇಲುನೋಟಕ್ಕೆ ಅದು ಸಾಮಾನ್ಯವೆಂದು ಕಂಡರೂ, ಯಾವುದೇ ಧ್ಯೇಯವನ್ನು ಕೃತಿಯಲ್ಲಿ ತರಲು ಅದರ ಬಗ್ಗೆ ನಮ್ಮ ನಿಲುವು ಸ್ಪಷ್ಟವಾಗಿರಬೇಕು. ಅದರ ಅನುಷ್ಠಾನದಲ್ಲಿ ಪ್ರಾಮಾಣಿಕ ಹಾಗೂ ನಿರಂತರ ಪ್ರಯತ್ನ ಇರಬೇಕು. ಅಂತೂ ನಮ್ಮಲ್ಲಿ ವಿಚಾರಪ್ರಚೋದನೆ ಮಾಡಬಲ್ಲ, ಅಲ್ಲಲ್ಲಿ ವಿನೋದ-ವ್ಯಂಗ್ಯಗಳಿಂದ ಕಚಗುಳಿ ಇಡುವ ಪತ್ರಗಳಿವು.

(ಕೃಪೆ : ಕಸ್ತೂರಿ - ಡಿಸೆಂಬರ್ ೧೯೯೧)



## ಪ್ರೇಯಸಿಗೆ ಪತ್ರಗಳು - ೪

**ವಿಮರ್ಶಕರು : ಸ. ಉಷಾ**

ಪತ್ರ ಸಾಹಿತ್ಯದ ಪ್ರಕಟಣೆ ಕನ್ನಡ ಸಾಹಿತ್ಯದಲ್ಲಿ ಸ್ವಲ್ಪ ವಿರಳವೇ, ಮೂರ್ತಿರಾಯರ ಚಿತ್ರಗಳು, ಪತ್ರಗಳು, ನವರತ್ನಾರಾಂ - ಅವರ 'ಪ್ಯಾರಿಸ್ಸಿನಿಂದ ಪ್ರೇಯಸಿಗೆ', ಮಾಸ್ತಿಯವರ 'ಪತ್ರಗಳು' ಇಂಥ ಪ್ರಕಟಿತ ಪತ್ರ ಸಾಹಿತ್ಯದ ಸಾಲಿಗೊಂದು ಹೊಸ ಸೇರ್ಪಡೆ, ಕೃಷ್ಣಾನಂದ ಕಾಮತರ 'ಪ್ರೇಯಸಿಗೆ ಪತ್ರಗಳು'.

ಈ ಕೃತಿ ಪ್ರಕಟಣೆಯ ಸಂದರ್ಭ ಕಾಮತ್ ದಂಪತಿಗಳ ೨೫ನೇ ವಿವಾಹ ವಾರ್ಷಿಕೋತ್ಸವ. ಮುನ್ನುಡಿ ಬರೆದವರು ಈ ಪತ್ರಗಳನ್ನು ಪಡೆದುಕೊಂಡ ಮೊದಲ ಓದುಗರಾದ ಪ್ರೇಯಸಿ-ಪತ್ನಿ ಶ್ರೀಮತಿ ಜ್ಯೋತ್ಸ್ನಾ ಕಾಮತರು. ಈ ರಮ್ಯ ಹಿನ್ನೆಲೆಯ ಪತ್ರಗಳ ಮುನ್ನುಡಿಯಲ್ಲಿ ಶ್ರೀಮತಿ ಕಾಮತರು ಪತ್ನಿಯಲ್ಲಿ ಪ್ರೇಯಸಿಯನ್ನು ಕಾಣುತ್ತಾ ಪತ್ರ ಬರೆಯುವ ಪತಿಯನ್ನು ಮೆಚ್ಚಿಕೊಂಡು, ಅವಕ್ಕೆ ಮಿತ್ರರ ಪ್ರತಿಕ್ರಿಯೆಗಳನ್ನು ದಾಖಲಿಸುತ್ತ ಹೀಗೆ ಪತ್ರ ಬರೆಯುವ ಪತಿ-ಪತ್ನಿ ಎದುರಿಗಿದ್ದಾಗ "ಪತಿಯ ಸಹಜ ದರ್ಪವನ್ನು" ಪ್ರದರ್ಶಿಸುವುದಕ್ಕೊ ಏನೋ ಆಗಾಗ ಗದರಿಸುತ್ತಲೇ ಇರುತ್ತಾರೆ ಎಂದು ಪತಿಯ ಬಹುರೂಪವನ್ನು ನಾಜೂಕಾಗಿ ಬಯಲು ಮಾಡಿಯೇ ಆಮೇಲೆ ಓದುಗರಿಗೆ ಪತ್ರಗಳನ್ನು ನೀಡಿದ್ದಾರೆ.

ಜೊಬನೇರದಲ್ಲಿ ತಮ್ಮ ಜೀವನದ ಬಗ್ಗೆ ಕಾಮತರು ಈಗಾಗಲೇ 'ನಾ ರಾಜಸ್ಥಾನದಲ್ಲಿ' ಕೃತಿಯಲ್ಲಿ ವಿವರವಾಗಿ ಬರೆದಿದ್ದಾರೆ. ಭವಿಷ್ಯ ಜೀವನವನ್ನು ಕುರಿತ ಆತಂಕಗಳು, ಹಿರಿಯ ದಂಪತಿಗಳು ನವಪ್ರೇಮಿಗಳಂತೆ ಇರುವುದರ ಬಗೆಗಿನ ಮೆಚ್ಚಿಗೆ, ರೂಪ ಲಾವಣ್ಯಗಳ ಬಗೆಗಿನ ವಿಚಾರ ಮೊದಲ ಹಂತದ ಪತ್ರಗಳಲ್ಲಿ ಇವೆ. ಪ್ರೇಮಿಯ ಮನಸ್ಸಿನ ಸ್ಥಿತಿಯ ಬಗ್ಗೆ ಕುಚೋದ್ಯದಿಂದ ತನ್ನನ್ನು ತಾನೇ ಗೇಲಿ ಮಾಡಿಕೊಳ್ಳುವುದೂ ಇದೆ. "ಜ್ಯೋತ್ಸ್ನಾ, ಇಂದಿನ ದಿನಗಳಲ್ಲಿ ನನಗೆ ಜೋಡಿ ಜಡೆ, ಜಂಬ, ಜ್ಯೋತಿ, ಜೋಗುಳ, ಜೋಕುಮಾರಗಳಂತಹ ಶಬ್ದಗಳು ವಿಶೇಷವಾಗಿ ಸೇರುತ್ತವೆ. ನಿನಗೆ ಕಾಗೆ, ಕಾವಿ, ಕಪಿ, ಕತ್ತೆ, ಕೀಟ ಕೀಲಿ ಮುಂತಾದ ಶಬ್ದಗಳು ಆಕರ್ಷಿಸುತ್ತಿರಬಹುದೇ?"

ಶುಭವಾರ್ತೆ, ಪರಿವರ್ತನೆ ಬಯಕೆಯೂಟ- ಈ ಅಧ್ಯಾಯಗಳಲ್ಲಿ ಅತಿಥಿ ಸತ್ಕಾರದ ಬಗ್ಗೆ ಹೊಸದಾಗಿ ಸಂಸಾರಸ್ಥನಾದ ಗೃಹಸ್ಥನಾದ ಗೃಹಸ್ಥನ ಭಾವನೆಗಳು, ಸ್ವಂತ ಸ್ಥಳದಿಂದ ದೂರವಿರುವ ದಂಪತಿಗಳ ಭಾವನೆಗಳು, ಸುಸಂಸ್ಕೃತನಾದ ವಿದ್ಯಾವಂತನ ಸ್ನೇಹಾರ್ದವಾದ, ಮಾನವೀಯವಾದ ಚಿಂತನೆಗಳು ವ್ಯಕ್ತಗೊಂಡಿವೆ. 'ಬಯಕೆಯೂಟದ ಸಂದರ್ಭದಲ್ಲಿ ಅತ್ತೆ, ತಾಯಿ, ಪತಿ, ಅಡಿಗೆಯವ ಮತ್ತು ಛಾಯಾಗ್ರಾಹಕವಾಗಿ ತವರಿನಿಂದ ದೂರದಲ್ಲಿರುವ ಮಡದಿಗೆ ತವರಿಗೆ ಸಂಭ್ರಮದ ಕೊರತೆ ಬಾರದಂತೆ ನೋಡಿಕೊಳ್ಳುವೆನೆಂಬ ಉತ್ಸಾಹ- ಅಪೇಕ್ಷೆಗಳು ಬರಹಗಾರನ ವ್ಯಕ್ತಿತ್ವದ, ಮಾರ್ದವ, ವೈಶಾಲ್ಯ ಅಂತಃಕರಣಗಳನ್ನು ಅನಾವರಣ ಮಾಡುವಂತಿದೆ.

ಈ ಪತ್ರಗಳಲ್ಲಿ ಆನುಷಂಗಿಕವಾಗಿ ವಿಶ್ವವಿದ್ಯಾನಿಲಯದ ರಾಜಕೀಯಗಳು, ನೌಕರಿ-ಸ್ವಾಭಿಮಾನ, ಹಣ ಸಂಪಾದನೆ ಮತ್ತು ಆಸಕ್ತಿಗಳ ತಾಕಲಾಟ, ಮಕ್ಕಳ ವಿದ್ಯಾಭ್ಯಾಸ, ಸರಳ ಜೀವನ, ಪರೋಪಕಾರ- ಈ ಎಲ್ಲ ಅಂಶಗಳ ಬಗೆಗಿನ ವೈಯಕ್ತಿಕ ನಿಲುವುಗಳು ಸಹಾ ದಾಖಲಾಗಿವೆ.

ಕಾಮತರು ತಾವು ನೋಡಿದ ಬೇರೆ ಬೇರೆ ಸ್ಥಳಗಳ ಅಲ್ಲಿನ ಜೀವನಗಳ ಬಗೆಗೆ ಕ್ಯಾಮರಾ ಮಾದರಿಯ ಸೂಕ್ಷ್ಮತೆಯಿಂದ ವಿವರಗಳನ್ನು ದಾಖಲಿಸುತ್ತಾರೆ. ಬೇರೆ ಬೇರೆ ಊರುಗಳನ್ನು ಪರಿಚಯಿಸುವಷ್ಟೇ ಆಸಕ್ತಿಯಿಂದ ಬೆಂಗಳೂರ ದರ್ಶನವನ್ನೂ ಮಾಡಿಸುತ್ತಾರೆ. ಕಾಮತರು ವರ್ಣಿಸಿದ ಬೆಂಗಳೂರು ಈಗ ಗತಕಾಲಕ್ಕೆ ಸೇರಿ ಹೋಗಿರುವುದರಿಂದ ಅದರ ಒಂದು ದರ್ಶನ ಮಾಡಬಹುದು.

"ಒಂದು ಸಂಪಿಗೆ ಮರವಿಲ್ಲದ ಸಂಪಿಗೆ ಮರದ ರಸ್ತೆಯ ಇಕ್ಕೆಲದಲ್ಲಿ ಹಳೆಯ ಮನೆ ಹೊಸ ಗ್ಯಾರೇಜುಗಳು ಅಂಗಡಿಗಳಾಗಿ ಮಾರ್ಪಟ್ಟಿವೆ. ಅತ್ಯಲ್ಪ ಬೆಲೆಗೆ ಹೊಟ್ಟೆ ತುಂಬ ನಾಷ್ತಾ ಬೇಕಿದ್ದರೆ ಇಲ್ಲಿಯೇ ಬರಬೇಕು. ಇಡ್ಲಿಗೆ ಹತ್ತು ಪೈಸೆ ಉದ್ದಿನವಡೆಗೆ ಹದಿನೈದು ಪೈಸೆ, ಘಮ ಘಮಿಸುವ ಕಪ್ ಕಾಫಿಗೆ ಇಪ್ಪತ್ತು ಪೈಸೆ"

ಆಹಾ! ಇಂಥಾ ಬೆಂಗಳೂರಿಗೆ ಹೋಗಬಹುದಿತ್ತು – ಆದರೆ ಅದು ಈಗಿಲ್ಲವಲ್ಲ. ರವೀಂದ್ರರ ಕಲ್ಕತ್ತಾ, ಶತಮಾನದ ಹಿಂದೆ ಮಾಯವಾದಂತೆ ಕಾಮತರ ಈ ಬೆಂಗಳೂರು ಸಹ ಮಾಯವಾಗಿದೆ.

(ಕೃಪೆ : ಸಂವಾದ ಜುಲೈ – ಆಗಸ್ಟ್ 1991)



# ಕೀಟ ಜಗತ್ತು

## ಪುಸ್ತಕ ಪರಿಚಯ : ದೇಶ ಕುಲಕರ್ಣಿ

ಈಗ ನಾವು ಪರಿಚಯ ಮಾಡಿಕೊಳ್ಳುವ ಪುಸ್ತಕ 'ಕೀಟ ಜಗತ್ತು' ೧೯೯೨ರಲ್ಲಿ ಬೆಂಗಳೂರಿನ ಸಮರ್ಥ ಪ್ರಕಾಶನದಿಂದ ಪ್ರಕಟವಾದ ಈ ಪುಸ್ತಕವನ್ನು ಬರೆದ ಲೇಖಕರು ಡಾ. ಕೃಷ್ಣಾನಂದಕಾಮತ್ ಅವರು. ಕೃಷ್ಣಾನಂದ ಕಾಮತ್ ಅವರು ಸಮರ್ಥ ಕೀಟ ಶಾಸ್ತ್ರದ ವಿಜ್ಞಾನಿಗಳು, ಸಂಶೋಧಕರು. ನಮ್ಮ ದೇಶದ ಅನೇಕ ವಿಶ್ವವಿದ್ಯಾಲಯಗಳಲ್ಲಿ, ಸಂಸ್ಥೆಗಳಲ್ಲಿ ಕೀಟಶಾಸ್ತ್ರಜ್ಞರಾಗಿ ವೃತ್ತಿ ಮಾಡಿದವರು. ಈ ಶಾಸ್ತ್ರದ ಜ್ಞಾನ, ಸಂಶೋಧನೆ ಮತ್ತು ಅನುಭವ ಕೀಟಗಳ, ವಿಷಯವಾಗಿ ಬರೆಯಲು ಅವರಿಗೆ ಅರ್ಹತೆ ಕೊಟ್ಟಿದೆ.

ಕೃಷ್ಣಾನಂದ ಕಾಮತರು ವೃತ್ತಿಯಲ್ಲಿ ಕೀಟಶಾಸ್ತ್ರಜ್ಞರೆಂಬುದು ನಿಜ. ಆದರೆ ನಮಗೆಲ್ಲ ಅವರು ಗೊತ್ತಿರುವುದು ಒಬ್ಬ ಒಳ್ಳೆಯ ಬರಹಗಾರರಾಗಿ. ಅನೇಕ ಪುಸ್ತಕಗಳನ್ನು ಅವರು ಬರೆದಿದ್ದಾರೆ. ಎಲ್ಲವೂ ಕೀಟಕ್ಕೋ ಪಶುವಿಗೋ ಸಂಬಂಧಿಸಿದವಲ್ಲ. ಈ ಬದುಕಿನಲ್ಲಿ ಅತೀವವಾದ ಶ್ರದ್ಧೆ ಮತ್ತು ಆಸಕ್ತಿ, ಸುತ್ತಲಿನ ಸಮಾಜದ ಕಳಕಳಿ ಅವರಿಗೆ ಇರುವುದರಿಂದ ಅವರ ದೃಷ್ಟಿ ಮತ್ತು ಕಾರ್ಯಕ್ಷೇತ್ರ ಸೀಮಿತವಾಗಿಲ್ಲ. ಅವರದು ಬಹುಮುಖ ಪ್ರತಿಭೆ ಅನ್ನಬಹುದು. ಅವರು ಬರೆದಿರುವ 'ನಾ ರಾಜಸ್ಥಾನದಲ್ಲಿ' ಅಥವಾ 'ವಂಗದರ್ಶನ' ಅಥವಾ 'ನಾನೂ ಅಮೇರಿಕೆಗೆ ಹೋಗಿದ್ದೆ' ಅನ್ನುವ ಪುಸ್ತಕಗಳನ್ನು ಉದಾಹರಣೆಗಾಗಿ ನೋಡಬಹುದು. ವೃತ್ತಿಯ ನೆಪದಲ್ಲಿ ಅವರು ರಾಜಸ್ಥಾನಕ್ಕೋ ಬಂಗಾಲಕ್ಕೋ ಯಾಕೆ ಅಮೆರಿಕೆಗೋ ಹೋಗಿರಬಹುದು. ಸ್ವಭಾವದಲ್ಲಿ ಅವರಿಗೆ ಜನಜೀವನ, ಊರು, ಸಂಗತಿ, ಕತೆ, ಇವೆಲ್ಲ ಇಷ್ಟ. ಆದುದರಿಂದಲೇ ಆ ಪುಸ್ತಕಗಳಲ್ಲಿ ಬರಿಯ ಪ್ರವಾಸವನ್ನೇ ಸೇರಿಸಿಲ್ಲ. ಪ್ರದೇಶದ ಏನೆಲ್ಲವನ್ನು ವಿವರಿಸುತ್ತಾರೆ. ಅಷ್ಟೇ ಅಲ್ಲ, ಘಟನೆಗಳು, ಸಂಗತಿಗಳು ಲೇಖಕರ ಮೂಲಕವೇ ನಡೆಯುತ್ತವೆ. ಆದ್ದರಿಂದ ಅವುಗಳಲ್ಲಿ ಆತ್ಮ ಕಥನದ ಅಂಶವೂ ಬಂದು ಬಿಡುತ್ತದೆ. ಅವರು ರಾಜಸ್ಥಾನದಲ್ಲಿದ್ದಾಗ ಬರೆದ ಪ್ರೇಯಸಿಗೆ ಪತ್ರಗಳು ಎನ್ನುವ ಪತ್ರದ ಸಂಚಯದಲ್ಲೂ ಹಾಗೆಯೇ. ಆ ಪ್ರದೇಶದ ಪರಿಚಯ ಜತೆಗೆ ಅವರ ಜೀವನ ಚರಿತ್ರೆಯ ಒಂದು ಭಾಗವೂ ಸಿಕ್ಕಿದ ಹಾಗೆ ಆಗುತ್ತದೆ.

ಬಹುಮುಖ ಪ್ರತಿಭೆ ಎಂದೆನಲ್ಲ, ಚಿತ್ರ ಮತ್ತು ಛಾಯಾಚಿತ್ರದಲ್ಲೂ ಅವರಿಗೆ ಆಸಕ್ತಿ. ಅವರು ಬರೆದ ಅನೇಕ ಪುಸ್ತಕಗಳಿಗೆ ಅವರೇ ರೇಖಾಚಿತ್ರಗಳನ್ನೂ ಛಾಯಾಚಿತ್ರಗಳನ್ನೂ ಬಿಡಿಸಿಕೊಟ್ಟಿದ್ದಾರೆ. ಆ ಕೃತಿಗಳಿಗೆ ಹೀಗೆ ಒಂದು ಪೂರ್ಣತೆ ಬರುತ್ತದೆ. ಇಂಥದು ನೋಡಿದಾಗ ಇನ್ನೊಂದು ದೈತ್ಯ ಪ್ರತಿಭೆ ಶಿವರಾಮಕಾರಂತ ಹೀಗೆಯೇ ಮಾಡುವುದು ನೆನಪಾಗುತ್ತದೆ. ಕಾಮತ್ ಅವರು ನಿವೃತ್ತಿಯಾದ ಮೇಲೂ ಅಷ್ಟೇ, ವಿಜ್ಞಾನಕ್ಕೆ ನೆರವಾಗುವಂತೆ ಛಾಯಾಚಿತ್ರಗಳನ್ನು ಸೂಕ್ಷ್ಮವಾಗಿ ಹಿಡಿದಿಡುತ್ತಾರೆ.

ವೃತ್ತಿ, ಭಾರವಾಗದೆ ಆಸಕ್ತಿಯ ವಿಷಯವಾಗುವುದು ಹೀಗೆಯೇ. ಕೀಟ ಜಗತ್ತು ಪುಸ್ತಕ ಓದಿದಾಗ ನನಗೆ ಕಾಮತರೇ ಬರೆದ ಇನ್ನೊಂದು ಪುಸ್ತಕ ಪಶು-ಪಕ್ಷಿ ಪ್ರಪಂಚ ಮನಸ್ಸಿಗೆ ಬಂದಿತು. ಇವೆರಡೂ ಎಷ್ಟೋ ರೀತಿಗಳಲ್ಲಿ ಸಮಾನವಾದಂಥವು ಮತ್ತು ಒಂದಕ್ಕೆ ಒಂದು ಪೂರಕವಾಗುವಂಥವು. ಪಕ್ಷಿ, ಪಶು ಮತ್ತು ಕೀಟಗಳು ಕೂಡ ಮನುಷ್ಯನಂತೆ ಈ ಪ್ರಪಂಚದ ಜೀವಿಗಳೇ. ನಾವು ನಮ್ಮದೇ ಆದ ಪ್ರಪಂಚವನ್ನು ನಿರ್ಮಿಸಿಕೊಳ್ಳುವಂತೆ ಈ ಜೀವಿಗಳೂ ತಮ್ಮದೇ ಆದ ಪ್ರಪಂಚ ನಿರ್ಮಿಸಿಕೊಳ್ಳುತ್ತವೆ. ಅವುಗಳ ಜೀವನ ಚರಿತ್ರೆ, ಸ್ವಭಾವ, ಬಂಧು ಬಳಗ, ಸಂಗತಿ, ಘಟನೆ, ಇತಿಹಾಸ ಈ ಎಲ್ಲ ಅಲ್ಲಿ ಅಡಗಿರುತ್ತವೆ. ಅವುಗಳ ಪ್ರಪಂಚವೇ ಅವಕ್ಕೆ ಅಂದಾಗ ಈ ಪುಸ್ತಕಗಳ ಹೆಸರಿಗೂ ಬೇರೆಯೇ ಅರ್ಥ ಬರುತ್ತದೆ ಅಲ್ಲವೇ? ಕಾಮತ್ ಅವರು ಪಶು-ಪಕ್ಷಿ ಪ್ರಪಂಚದಲ್ಲಿ ಕಾಗೆ, ಕೋತಿ, ಆನೆ ಮುಂತಾದುವನ್ನು ಕುರಿತು ಬರೆದ ಹಾಗೆ ಕೀಟ ಜಗತ್ತಿನಲ್ಲಿ ಪತಂಗ, ಇರುವೆ, ತಗಣೆ ಮುಂತಾದ ಅನೇಕ ಕೀಟಗಳನ್ನು ಕುರಿತು ಬರೆದಿದ್ದಾರೆ. ಇಂಥ ಒಂದು ಓರಣ ನಮಗೆ ಇಷ್ಟವಾಗುವದೇ?

ಕೀಟ ಜಗತ್ತಿನಂತಹ ಪುಸ್ತಕ ಯಾಕೆ ಓದಿದೆ ಮತ್ತು ಇದು ಯಾಕೆ ಮುಖ್ಯವಾಗುತ್ತದೆ, ಅನ್ನುವ ಪ್ರಶ್ನೆ ಕೇಳಿಕೊಂಡೆ. ಬರವಣಿಗೆಯ ಮೂಲಕ್ಕೆ ಇದು ಎಳೆಯುತ್ತದೆ. ಸೃಜನಶೀಲ ಸಾಹಿತ್ಯದಲ್ಲಿ ಲೇಖಕ ಭಾವವನ್ನೋ ಕತೆಯನ್ನೋ ಪಾತ್ರವನ್ನೋ ವ್ಯಕ್ತಪಡಿಸುತ್ತಾನೆ. ಸೃಷ್ಟಿಯಾದುದರಿಂದ ಇಂಥ ಬರಹಕ್ಕೆ ಸೂತ್ರ ಎಂಬುದಿಲ್ಲ. ವಿಚಾರ ಅಥವಾ ವಿಜ್ಞಾನ ಸಾಹಿತ್ಯದಲ್ಲಿ ಹಾಗಲ್ಲ, ಸೂತ್ರ ಬದ್ಧವಾಗಿಯೇ ನಿರೂಪಣೆ ಮಾಡಬೇಕು. ಇದೆಲ್ಲವನ್ನೂ ವಿಜ್ಞಾನದ ವಿದ್ಯಾರ್ಥಿ ಅರಿತುಕೊಳ್ಳುತ್ತಾನೆ. ವಿದ್ವಾಂಸ ಅರಿತುಕೊಳ್ಳುತ್ತಾನೆ. ಸಾಮಾನ್ಯ ಜನಕ್ಕೆ ಅದು ಶುಷ್ಕವಾಗಿ, ವಿವರಪೂರ್ಣವಾಗಿ ಕಾಣಬಹುದು. ಇವೆರಡೂ ಬೇರೆಯೇ ಆದ ಸೀಮೆಗಳು.

ಈ ಎರಡು ವೈಖರಿಗಳನ್ನು ಬೆರೆಸಬಹುದೆ? ನಮ್ಮ ಮನಸ್ಸನ್ನು ವೈಜ್ಞಾನಿಕವಾಗಿ ಮಾಡಬೇಕಾದರೆ, ನಮಗೆ ವಿಜ್ಞಾನದ ಪರಿಚಯ ಮಾಡಬೇಕಾದರೆ ಅದು ನಮಗೆ ಸ್ವಾರಸ್ಯವಾಗಬೇಕು. ಶಾಸ್ತ್ರವನ್ನು ಶುಷ್ಕವಾಗದೆ ಹಾಗೆ ಬರೆಯುವ ಪರಂಪರೆ ನಮಗೆ ಹೊಸದೇನಲ್ಲ. ಪ್ರಾಚೀನ ಕಾಲಕ್ಕೆ ಸೇರಿದ ಗಣಿತಶಾಸ್ತ್ರ ಪಂಡಿತ ಭಾಸ್ಕರ ತನ್ನ ಮಗಳು ಲೀಲಾವತಿಯ ಹೆಸರಿನಲ್ಲಿ ಗಣಿತವನ್ನು ಸುಂದರವಾಗಿ ಬರೆದಿದ್ದಾನೆ. ಬಣ್ಣಬಣ್ಣದ ಹೂವುಗಳು ಅವುಗಳಿಗೆ ಮುತ್ತುವ ಬಣ್ಣಬಣ್ಣದ ಚಿಟ್ಟೆಗಳನ್ನು ಕುರಿತು ಸಮೀಕರಣ ಲೆಕ್ಕವನ್ನು ಅವನು ಮಗಳಿಗೆ ಹೇಳುವಾಗ ವಿವರ ಮಸುಕಾಗಿ ವರ್ಣನೆ ಎದ್ದು ತೋರುತ್ತದೆ. ಈ ಚಮತ್ಕಾರವನ್ನು ಬಿಡಿಸುವ ಮನಸ್ಸಾಗುತ್ತದೆ. ಇದೇ ಪರಂಪರೆಗೆ ಈಗಿನ ಕಾಲಕ್ಕೆ ಸೇರಿಕೊಂಡವರು. ಬಿ. ಜಿ. ಎಲ್. ಸ್ವಾಮಿ. ಉದಾಹರಣೆಗೆ ಅವರ 'ಹಸಿರು ಹೊನ್ನು' ಪುಸ್ತಕವನ್ನು ನೋಡಬಹುದು. ಸ್ವಾಮಿ ಸಸ್ಯಶಾಸ್ತ್ರಜ್ಞರು. ಅಧ್ಯಾಪಕರು, ಪ್ರವಾಸವನ್ನು ನೆಪವಾಗಿಟ್ಟುಕೊಂಡು ಬಗೆಬಗೆಯ ವಿದ್ಯಾರ್ಥಿಗಳನ್ನು ಸೃಷ್ಟಿಸುತ್ತ ಸಸ್ಯವನ್ನು, ಬೆಳೆಯನ್ನೂ ಕುರಿತು ಇವರು ಬರೆಯುವಾಗ ವಿಜ್ಞಾನವನ್ನು ನಾವು ಓದುತ್ತಿದ್ದೇವೆ ಎಂಬುದನ್ನು ಮರೆತು ಹಾಸ್ಯದೊಂದಿಗೆ ಲೇಪವಾದ ಜ್ಞಾನವನ್ನು ಸಂಪಾದಿಸುತ್ತೇವೆ. ಅಷ್ಟೇ ಅಲ್ಲ, ಕಾಲೇಜುರಂಗ, ಪಂಚ ಕಲಶಗೋಪುರ, ತಮಿಳು ತಲೆಗಳ ನಡುವೆ ಮುಂತಾದ ಬೇರೆ ರೀತಿಯ ಪುಸ್ತಕಗಳನ್ನು ಸ್ವಾಮಿ ಬರೆದಿದ್ದಾರೆ. ಈ ಆಸಕ್ತಿ ಸ್ವಾರಸ್ಯ ವಿಜ್ಞಾನಕ್ಕೂ ಹರಿದಿರುವುದರಿಂದಲೂ ಅವರ ವಿಜ್ಞಾನದ ಪುಸ್ತಕಗಳು ಸ್ವಾರಸ್ಯಕರವಾಗಿರುತ್ತವೆ ಎಂಬುದನ್ನು ನಾನು ಗುರುತಿಸಿದ್ದೇನೆ.

ಈ ಪರಂಪರೆಗೆ ಕೃಷ್ಣಾನಂದ ಕಾಮತ್ ನಿಸ್ಸಂದೇಹವಾಗಿ ಸೇರುತ್ತಾರೆ. ಕೀಟಗಳೂ ನಮ್ಮ ಸಹಜೀವಿಗಳು, ಅವುಗಳ ಜೀವನಕ್ರಮವನ್ನೂ ಅರಿತುಕೊಂಡಾಗಲೇ ಒಳಿತು-ಕೆಡಕುಗಳನ್ನು ನಾವು ಮಾಡಲು ಸಾಧ್ಯ ಎಂದು ಅವರು ದೃಢವಾಗಿ ನಂಬಿದ್ದಾರೆ. ಈ ಉದ್ದೇಶದಿಂದ ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಕೀಟಗಳ ವಿಷಯಗಳೆಲ್ಲ ಈ ಪುಸ್ತಕದಲ್ಲಿ ಸಂಕಲನವಾಗಿವೆ. ಪುಸ್ತಕದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಪಾತರಗಿತ್ತಿ, ತಗಣೆ, ರೇಷಿಮೆ ಪತಂಗ, ಬೇರಿನ ಕೀಟ ಮುಂತಾದವುಗಳ ಬಗೆಗೆ ಲೇಖನಗಳಿವೆ. ಎರಡನೆಯ ಭಾಗದಲ್ಲಿ ಬಂಗಾಲದ ಇರುವೆಗಳನ್ನು ಕುರಿತು ಎಂಟು ಅಧ್ಯಾಯಗಳೇ ಇವೆ. ಇರುವೆಗೆ, ಕ್ಷುಲ್ಲಕವಾದ ಒಂದು ಜೀವಿಗೆ ಇಷ್ಟು ಅಧ್ಯಾಯವೇ ಎಂದು ಆಶ್ಚರ್ಯ ಪಡಬೇಕು. ಆದರೆ ಇರುವೆ ರಾಜ್ಯದಲ್ಲಿ ರಾಣಿ, ಸೈನಿಕರು, ಸೇವಕರು, ಯುದ್ಧ, ಗೋದಾಮು, ವ್ಯವಸಾಯ, ಗೂಡು ನಿರ್ಮಾಣ – ಇವನ್ನು ಕಾಮತ್ ಅವರು ಸಂಶೋಧಿಸಿರುವ ರೀತಿ ಅರಿಯುತ್ತ ಹೋದಂತೆ ಈ ಭಾಗವೂ ಸಾಲದೇನೋ ಅನ್ನಿಸುತ್ತದೆ. ಇರುವೆ ಸಣ್ಣದು-ಅದರ ಜಗತ್ತು ಅಪಾರ.

ಕೃಷ್ಣಾನಂದ ಕಾಮತರಿಗೆ ಆತ್ಮವಿಶ್ವಾಸ ಇರುವಂತೆಯೇ ಮಾಡುವ ಕೆಲಸವನ್ನು ತೃಪ್ತಿಕರವಾಗಿ ಮಾಡಬೇಕೆಂಬ ಬಯಕೆ ಇದೆ. ಇದನ್ನು ಅವರೇ ಒಂದು ಕಡೆ ಹೇಳಿಕೊಂಡಿದ್ದಾರೆ. ನಾವೆಲ್ಲ ಒಂದಿಲ್ಲೊಂದು ಕಾಲದಲ್ಲಿ ಜೀವಶಾಸ್ತ್ರವನ್ನು ಓದಿದವರೇ. ಕೀಟಗಳ ಹುಟ್ಟು-ಸಾವು, ಸಂತಾನ ಉತ್ಪತ್ತಿ, ಜೀವನ ಚರಿತ್ರೆ, ಆಹಾರ, ಶರೀರ ರಚನೆ, ಸ್ವಭಾವ, ಉಪಯುಕ್ತತೆ ಮತ್ತು ನಾಶಮಾಡುವ ವಿಧಾನ ಇವೆಲ್ಲ ಅಧ್ಯಯನದ ಹಂತಗಳು ಅಷ್ಟೆ. ಇದನ್ನು ಲೇಖಕರು ಬಿಡುವುದಿಲ್ಲ. ಆದರೆ ಇದನ್ನು ಹೇಳುವಾಗ ನಮಗೆಲ್ಲ ಗೊತ್ತಿರುವ ಜೀವನದ ಸಾಮಗ್ರಿಗಳನ್ನು ಬಳಸಿ ಹೇಳುತ್ತಾರೆ. ಹಾಸ್ಯವನ್ನು ಸಹಜವಾಗಿ ಸವರುತ್ತಾರೆ. ಸೂತ್ರ ಬದ್ಧವಾದರೆ ಶುಷ್ಕವಾಗಬಹುದು ಅನ್ನುವ ಭಯದಿಂದ ಸ್ವಾರಸ್ಯಪೂರ್ಣ ಮಾಡುತ್ತಾರೆ. ಈ ಬಗೆಯ ಸ್ವಾರಸ್ಯಕರ ವರ್ಣನೆಯಿಂದ ಬರವಣಿಗೆಗೆ ರುಚಿ ಬರುತ್ತದೆ. ವಿಜ್ಞಾನ ನಮಗೆ ಅಗತ್ಯವಾದ ಜ್ಞಾನವಾಗುತ್ತದೆ.

ಅಷ್ಟೇ ಅಲ್ಲ, ನಮಗೆ ಪರಿಚಿತವಾದ ವಸ್ತುಗಳು ಬಂದಾಗ ಸ್ಪಂದನ ಉಂಟಾಗುತ್ತದೆ. ಪಾತರಗಿತ್ತಿಯ ವಿಷಯ ಓದುವಾಗ ನಮ್ಮ ಬೀದಿಯಲ್ಲಿ ಹಾರಾಡುವ ಚಿಟ್ಟೆಗಳನ್ನು ಹಿಡಿಯಲು ಅವನ್ನು ಬೆನ್ನಟ್ಟುವ ಮಕ್ಕಳು ಮನಸ್ಸಿಗೆ ಬಂದವು. ಸುಮಾರು ೬ ತಿಂಗಳ ಕಾಲ ತಗಣೆಗಳು ಆಹಾರವಿಲ್ಲದೆ ಇರಬಲ್ಲವು ಎನ್ನುವಾಗ ಪಾರಸಿಗಳು ರಕ್ತ ದಾನಕ್ಕಾಗಿ ತಗಣೆ ರೂಮಿಗೆ ಹೋಗುವುದು ನೆನಪಾಯಿತು. ಪಾತರಗಿತ್ತಿ ಹಿಡಿಯುವ ಹವ್ಯಾಸ ಬಂದಾಗ ಬಲೆ ಮಾಡುವ ವಿಧಾನ ನೋಡಿ ನೆಟ್ ಹರಿದ ರಾಕೆಟ್ಟಿಗೆ, ಅಪ್ಪನ ಪಂಚೆಯ ತುಂಡನ್ನು ತ್ರಿಕೋನ ಚೀಲದಲ್ಲಿ ಜೋಡಿಸಿದರೆ ಬಲೆ ಸಿದ್ಧ, ಕಣ್ಣಿಗೆ ಕಟ್ಟುವ ವರ್ಣನೆ ಅಂದರೆ ಇದೇ, ಶುಷ್ಕ ವಿಧಾನದಲ್ಲಿ ಸ್ವಾರಸ್ಯಗಳೂ ಕಲೆಸಿ ಹೋಗುತ್ತವೆ. ಸಾಹಿತ್ಯ ವಿಧಾನದಲ್ಲಿ ಸ್ವಾರಸ್ಯದ ಮೂಲಕ ವಿಷಯ ದಕ್ಕುತ್ತದೆ. ಕಟ್ಟಿರುವೆ ಕೈಯಲ್ಲಿ ಶಿಕ್ಷೆಯ ಸಲುವಾಗಿ ಕಡಿಸಿಕೊಂಡು ಯಾತನೆ ಪಟ್ಟ ಬಾಲಕ, ಬೆಳೆದ್ದು ಆ ಇರುವೆ ಮೊಟ್ಟೆಯ ಭಾಜಿ ತುಂಬ ರುಚಿ ಎಂದು ಹೇಳುತ್ತಾನೆ. ಈ ಸಂತಾಲಿ ಬಾಲಕ, ಇರುವೆಯ ಎರಡು ಉಪಯೋಗಗಳನ್ನು ಅನುಭವಿಸಿದವನು. ಅಷ್ಟೇನೇ? ಈ ಘಟನೆಗಳಲ್ಲಿರುವ ಜೀವನ-ರೂಪಕ ಯಾವ ಸಾಹಿತ್ಯದ ವಿಪರ್ಯಾಸಕ್ಕೂ ಕಡಿಮೆಯಿಲ್ಲ. ಇರುವೆ, ತಗಣೆ, ಸಸ್ಯ, ಕೀಟಗಳ ಜೀವನ ಕ್ರಮವನ್ನು ಓದುತ್ತಿದ್ದ ಹಾಗೆ ನನ್ನ ಆಸಕ್ತಿ ಕೆರಳಿತು. ಇದೇ ತಾನೆ ಈ ಲೇಖಕರ ಉದ್ದೇಶ?

ಈ ಕೀಟ ಪ್ರಪಂಚಗಳ ಸೋಜಿಗವು ಅಗಾಧವಾದುದು. ಸಾಕಷ್ಟು ತಲೆಮಾರುಗಳನ್ನು ಒಂದೇ ಸಂತತಿ ನೋಡಬಲ್ಲದು; ಒಂದು ಬಗೆಯ ಸಸ್ಯಜೀವವನ್ನು ಇನ್ನೊಂದು ಬಗೆಯ ಸಸ್ಯಕೀಟ ನಾಶಮಾಡಬಲ್ಲುದು; ಒಂದು ಕೀಟ ನೀಡುವ ಸಿಹಿದ್ರವವನ್ನು ಇನ್ನೊಂದು ಕೀಟ ಕುಡಿಯಬಲ್ಲದು. ಅಷ್ಟೇ ಅಲ್ಲ, ಶೇಖರಿಸಿ ಬೇರೆ ತನ್ನ ಜಾತಿಯವರಿಗೆ ಕುಡಿಸಬಲ್ಲುದು; ಪರಾವಲಂಬಿ ಕೀಟವಂತೂ ತನ್ನ ತತ್ತಿಯನ್ನೇ ಬೇರೆ ಕೀಟದೊಳಗೆ ಇಡಬಲ್ಲದು- ಆ ಮೊಟ್ಟೆ ಪುಟ್ಟ ಮರಿಯಾದಾಗ ಬಕೀಟವನ್ನು ತಿಂದುಹಾಕಬಲ್ಲದು! ಇಂಥಾ ಸ್ವಾರಸ್ಯಗಳು ಒಂದೆರಡಲ್ಲ. ಸುಮ್ಮನೆ ಉದಾಹರಣೆಗಾಗಿ ಇದನ್ನು ಹೇಳಿದ್ದೇನೆ. ಕೀಟ ವಿನಾಶದ ಜತೆಗೇನೆ ಇದನ್ನು ತಿಳಿಯುವ ಅವಶ್ಯವನ್ನೂ ನಾನು ಮನಗಂಡಿದ್ದೇನೆ.

ಕಾಮತ್ ಅವರು ಬರೆಯುವುದು ಸರಳ ಗದ್ಯ. ನಿರೂಪಣೆ ಸಾಹಿತ್ಯ ರೀತಿಯದು. ಪ್ರತ್ಯೇಕ ಕೀಟಗಳನ್ನು ಕುರಿತು ದೇಹರಚನೆ, ಸ್ವಭಾವ ಬರೆಯುವುದೇನೋ ಸರಿ. ಆದರೆ ಒಂದೇ ವಿಷಯವನ್ನು ತೆಗೆದುಕೊಂಡು ಕೀಟಗಳಿಗೆ ಅನ್ವಯಿಸುತ್ತಾ ಅದನ್ನು ಸಾಮಾನ್ಯೀಕರಿಸುವುದು ಇನ್ನಷ್ಟು ಆಪ್ಯಾಯಮಾನ. ಇದರಿಂದ ಪುಸ್ತಕಕ್ಕೆ ವೈವಿಧ್ಯ ಬರುತ್ತದೆ. ಕೀಟಗಳಿಗಿರುವ ಮೀಸೆಯನ್ನು ಕುರಿತಂತೆಯೇ 'ಮೀಸೆ ಮಂಡೋದರಿಯರು' ಎಂದು ಬರೆದಿರುವ ಲೇಖನ ಒಂದು ಲಲಿತ ಪ್ರಬಂಧವೇ ಆಗಿದೆ. ಕೀಟಗಳಲ್ಲಿರುವ ಸ್ತ್ರೀ ಪ್ರಾಧಾನ್ಯ ಕುರಿತು ಸತಿ-ಪತಿ ಮಾಡುವ ಸರಸ ಸಂಭಾಷಣೆ ಮುದ್ದಣ ಮನೋರಮೆಯನ್ನು ನೆನಪಿಗೆ ಕರೆಯುತ್ತದೆ. ವಸ್ತು - ನಿರೂಪಣೆ ಎರಡರಲ್ಲೂ ಸಾರ್ಥಕವಾದಂತೆ ಇಂಥ ವಿಚಾರ- ವಿಜ್ಞಾನ ಪುಸ್ತಕಗಳನ್ನು ಕೊಟ್ಟ ಕೃಷ್ಣಾನಂದ ಕಾಮತರು ಅಭಿನಂದನೀಯರು. ಅವರಿಂದ ಇಂಥದೇ ಪುಸ್ತಕಗಳು ಇನ್ನಷ್ಟು ಬರಲಿ.

(ಕೃಪೆ : ತಿಂಗಳ ಪುಸ್ತಕ ಪರಿಚಯ : 12-09-1992, ಆಕಾಶವಾಣಿ, ಬೆಂಗಳೂರು)

# ಕೃಷ್ಣಾನಂದ ಕಾಮತರ ಸಾಹಿತ್ಯ

**ವಿಮರ್ಶಕರು : ಎಂ. ಜಿ. ಹೆಗಡೆ**

**ಅಜ್ಞಾತದ ಅನಾವರಣ**

ಹಿಂದೊಮ್ಮೆ ಡಾ. ಕೃಷ್ಣಾನಂದ ಕಾಮತರನ್ನು ಬೆಂಗಳೂರಿನಲ್ಲಿ ಭೆಟ್ಟಿಯಾದಾಗ ಅವರು ಮಾತನಾಡಿದ್ದೆಲ್ಲ ಉತ್ತರ ಕನ್ನಡದ ಕುರಿತೇ, ಕೃಷ್ಣಾನಂದರು ಹೊನ್ನಾವರದ ತಮ್ಮ ಬಾಲ್ಯದ ದಿನಗಳನ್ನು ನೆನಪಿಸಿಕೊಂಡರೆ ಅವರ ಶ್ರೀಮತಿ ಜ್ಯೋತ್ಸ್ನಾ ಗೋಕರ್ಣದ ತಮ್ಮ ಪ್ರೌಢಶಾಲೆಯ ದಿನಗಳನ್ನೂ ಕುಮಟಾ ಕೆನರಾ ಕಾಲೇಜಿನ ವಿದ್ಯಾರ್ಥಿ ಜೀವನವನ್ನೂ ನೆನಪಿಸಿಕೊಂಡರು. ಡಾ. ಕಾಮತರು ಸರಳ ಸ್ನೇಹಜೀವಿ. ಆದರೆ ಹೆಚ್ಚು ಮಾತು ಬೆಳೆಸುವವರಲ್ಲ. ಥಟ್ಟನೆ ಮೌನವಾಗಿಬಿಡುತ್ತಾರೆ. ಮೌನದಲ್ಲೇ ನಮ್ಮನ್ನು ತಟ್ಟುತ್ತಾರೆ. ಆದರೆ ಜ್ಯೋತ್ಸ್ನಾ ಕಾಮತರು ಇಬ್ಬರ ಪರವಾಗಿಯೂ ಮಾತನಾಡಬಲ್ಲರು! ಅವರಿಗೆ ಆಪ್ತ ವಿಷಯವಾದರೆ ಮಾತಿನಲ್ಲಿ ಪರವಶರಾಗುವವರು.

ಡಾ. ಕಾಮತರು ಬೆಂಗಳೂರಿನಲ್ಲಿದ್ದೂ ಅಲ್ಲಿಯ ಸಾಹಿತ್ಯ ವಲಯಗಳಿಂದ ಸಾಕಷ್ಟು ದೂರವಾಗಿದ್ದಾರೆ. ಓದುಗ ವಲಯದಲ್ಲಿ ತಮ್ಮ ಕೃತಿಗಳಿಂದ ಅವರು ಪರಿಚಿತರೆ ವಿನಃ ಮುಖಪರಿಚಯವಿಲ್ಲ. ಸಾಹಿತ್ಯ ಅಕಾಡೆಮಿಯ ಬಹುಮಾನ ಬಂದಾಗಲೂ ಸಮಾರಂಭಕ್ಕೆ ಅವರು ಹೋಗಲಿಲ್ಲ. ಅವರ ಶ್ರೀಮತಿಯವರು ಅವರಿಗೆ 'ಅಜ್ಞಾತವಾಸಿ' ಎಂದು ಬಿರುದಿತ್ತರೆ, ಡಾ. ಸೂರ್ಯನಾಥ ಕಾಮತರು ಅವರನ್ನು 'ಕೀರ್ತಿಪರಾಙ್ಮುಖಿ' ಎಂದು ವರ್ಣಿಸಿದ್ದಾರಂತೆ! ಈ ಅಜ್ಞಾತವಾಸದಿಂದಾಗಿ ಡಾ. ಕೃಷ್ಣಾನಂದರು ಬೆಂಗಳೂರಿನ ಹಲವು ಮಾಲಿನ್ಯಗಳಲ್ಲಿ ಒಂದಾದ 'ಲಿಟರರಿ ಪಾಲಿಟಿಕ್ಸ್' ನಿಂದ ದೂರವಾಗಿರುವದು ಸಾಧ್ಯವಾಗಿದೆ. ಅವರದೇ, ಮಾತಿನಲ್ಲಿ 'ಸುಖವಾಗಿ ನಿದ್ರಿಸಲು' ಸಾಧ್ಯವಾಗಿದೆ!

ಡಾ. ಕೃಷ್ಣಾನಂದ ಲಕ್ಷ್ಮಣ ಕಾಮತರು ಕುಮಟಾದ ಕೆನರಾ ಕಾಲೇಜಿನಲ್ಲಿ, ಆಮೇಲೆ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ವಿದ್ಯಾಭ್ಯಾಸ ಮುಗಿಸಿ ಅಮೇರಿಕಾದ ಪ್ರಸಿದ್ಧ ನ್ಯೂಯಾರ್ಕ್ ವಿಶ್ವವಿದ್ಯಾಲಯದಲ್ಲಿ ಶಿಷ್ಯವೃತ್ತಿ ಪಡೆದು ಕೀಟಶಾಸ್ತ್ರದಲ್ಲಿ ಪಿ.ಎಚ್.ಡಿ. ಪದವಿ ಪಡೆದು ಬಂದವರು. ಅಮೇರಿಕೆಯ ನಾಲ್ಕು ವರ್ಷಗಳ ಅನುಭವವನ್ನೆಲ್ಲ 'ನಾನೂ ಅಮೇರಿಕೆಗೆ ಹೋಗಿದ್ದೆ' (ಧಾರವಾಡ, ೧೯೬೯) ಪುಸ್ತಕದಲ್ಲಿ ನಿರೂಪಿಸಿದ್ದಾರೆ. ಪುಸ್ತಕದ ತಲೆಬರಹ ನೋಡಿ ಅದನ್ನು ಹಗುರವಾಗಿ ತೆಗೆದುಕೊಳ್ಳಬೇಕಾಗಿಲ್ಲ, ಅಮೇರಿಕನರ ವೈಭವ, ಪ್ರಗತಿಗಳನ್ನೆಲ್ಲ ಚಿಕಿತ್ಸಕ ದೃಷ್ಟಿಯಿಂದ ನೋಡುವ ಇವರು 'ಅಮೇರಿಕನ್ನರನ್ನು ಭಾರತೀಯ ದೃಷ್ಟಿಕೋನದಿಂದ ಸಿರಿವಂತರೆಂದು ಕರೆಯಬಹುದೆ? ಎಂದು ಪ್ರಶ್ನಿಸಿಕೊಳ್ಳುತ್ತಾರೆ. 'ಅಮೇರಿಕನ್ನರಿಗೆ ಜೀವನದುದ್ದಕ್ಕೂ ಪೀಡಿಸಿದ ಹಣದ ಸಮಸ್ಯೆ ಸತ್ತರೂ ಬೆನ್ನು ಬಿಡುವುದಿಲ್ಲ' ಎಂದು ಅಮೇರಿಕಾದ 'ವೈಭವ'ದ ಬದುಕಿನ ಕುರಿತು ಭಾರತೀಯರಲ್ಲಿ ಸಾಮಾನ್ಯವಾಗಿ ಇರುವ ಭ್ರಮೆಗಳು ಕಳಚಿಕೊಳ್ಳುವಂತೆ ಮಾಡುತ್ತಾರೆ. ಹೀಗೆ ಮಾಡುವಾಗಲೂ ಅಮೇರಿಕಾ ಸಂಸ್ಕೃತಿಯ ಧನಾತ್ಮಕ ಅಂಶಗಳನ್ನೂ ಮುಕ್ತಕಂಠದಿಂದ ಶ್ಲಾಘಿಸುತ್ತಾರೆ. ಈ ಪ್ರವಾಸ ಕಥನದ ಉದ್ದಕ್ಕೂ ಎದ್ದು ಕಾಣುವ ಸ್ವಾಭಿಮಾನಿ ಭಾರತೀಯನೊಬ್ಬನ ದೃಷ್ಟಿಕೋನ, ಕನ್ನಡದಲ್ಲಿ ವಿಪುಲವಾಗಿರುವ ಇತರ ಅಮೇರಿಕಾ ಪ್ರವಾಸ ಕಥನಗಳಿಗಿಂತ ಇದನ್ನು ವಿಭಿನ್ನವಾಗಿಸಿದೆ. ಅನನ್ಯವಾಗಿಸಿದೆ. ಸಹಜವಾಗಿಯೇ ಈ ಕೃತಿ ೧೯೬೯ರಲ್ಲಿ ಸಾಲಿನ ಉತ್ತಮ ಪ್ರವಾಸ ಕಥನವೆಂದು ಕರ್ನಾಟಕ ಹಾಗೂ ಬೆಂಗಳೂರು ವಿಶ್ವವಿದ್ಯಾಲಯಗಳ ಪದವಿ ವರ್ಗಗಳಿಗೆ ಪಠ್ಯಪುಸ್ತಕವಾಗಿಯೂ ಬಳಕೆಯಾಯಿತು. ನಾಲ್ಕು ಮುದ್ರಣಗಳನ್ನು ಕಂಡಿತು.

ಮುಂದೆ ಡಾ. ಕಾಮತರು ರಾಜಸ್ಥಾನದ ಉದಯಪುರ ವಿಶ್ವವಿದ್ಯಾಲಯಕ್ಕೆ ಸೇರಿದ ಜೋಬನೇರ ಕೃಷಿ ಕಾಲೇಜಿನಲ್ಲಿ ಮೂರು ವರ್ಷ ಕೆಲಸ ಮಾಡಿದರು. ಅಲ್ಲಿಯ ಅವರ ಅನುಭವ 'ನಾ ರಾಜಸ್ಥಾನದಲ್ಲಿ' (ಸಾಗರ ೧೯೭೪) ಪುಸ್ತಕದಲ್ಲಿ ನಿರೂಪಿತವಾಗಿದೆ. ಈ ಕೃತಿಯನ್ನು ಅವರು 'ಪ್ರದೇಶ ಪರಿಚಯ' ಎಂದು ಕರೆದಿದ್ದಾರೆ. ಆದರೆ ಇದು ಪ್ರದೇಶ ಪರಿಚಯಕ್ಕಿಂತ ಹೆಚ್ಚು ಆತ್ಮಕಥೆಯೇ ಆಗಿದೆ. ಅವರ ಆದರ್ಶಗಳು, ಕನಸುಗಳು, ಅದನ್ನು ನನಸಾಗಿಸಲು ಅವರು ನಡೆಸಿದ ಹೋರಾಟ, ಅನುಭವಿಸಿದ ಪರಾಭವ ಇವನ್ನೆಲ್ಲ ಇಲ್ಲಿ ಆತ್ಮೀಯವಾಗಿ ನಿರೂಪಿಸಿದ್ದಾರೆ. ಸುಸಂಸ್ಕೃತ ಮನಸ್ಸಿನ ಸುದೀರ್ಘವಾದ ಮೆಲುದನಿಯ ಹರಟೆಯ ಸುಖ – ಈ ಪುಸ್ತಕ ದೊರಕಿಸಿಕೊಡುವ ಅನುಭವ.

ಡಾ. ಕಾಮತರ ಮುಂದಿನ ಕಾರ್ಯಕ್ಷೇತ್ರ ಪಶ್ಚಿಮ ಬಂಗಾಳದ ಇತಿಹಾಸ ಪ್ರಸಿದ್ಧ ಪ್ಲಾಸಿ. ಬೆಂಗಳೂರಿನ ಅಂತಾರಾಷ್ಟ್ರೀಯ ಸಂಶೋಧನ ಸಂಸ್ಥೆಯೊಂದರ ಪ್ಲಾಸಿ ಶಾಖೆಯ ಮೇಲ್ವಿಚಾರಕರಾಗಿ ಎರಡು ವರ್ಷ ಅವರು ಕೆಲಸ ಮಾಡಿದರು. ಬಂಗಾಲಿ ಕಲಿತು ಬಂಗಾಳಿಗಳೊಂದಿಗೆ ಒಂದಾಗಿ ಬಾಳಿ ಅವರ ಸಾಮಾಜಿಕ ಸಾಂಸ್ಕೃತಿಕ ಬದುಕಿನ ರೀತಿ–ನೀತಿಗಳನ್ನೂ, ವೈಚಿತ್ರ್ಯ–ವೈಶಿಷ್ಟ್ಯಗಳನ್ನೂ, ಆ ಕಾಲದ ಬಂಗಾಲದ ಪ್ರಕ್ಷುಬ್ಧ ರಾಜಕೀಯ ಪರಿಸ್ಥಿತಿಯನ್ನೂ ಸ್ವಾನುಭವದ ಕನ್ನಡಿಯಲ್ಲಿ ಪ್ರತಿಬಿಂಬಿಸಿದಾಗ ರೂಪುಗೊಂಡಿದ್ದು ಅವರ

'ವಂಗ ದರ್ಶನ' (ಧಾರವಾಡ, ೧೯೭೨). ಆತ್ಮಚರಿತ್ರೆ ಪ್ರವಾಸಾನುಭವಗಳೂ ಸೊಬಗೂ ಮೇಳೈಸಿರುವ ಈ ಕೃತಿಯ ಕೆಲವು ಅಧ್ಯಾಯಗಳಂತೂ ಕಾದಂಬರಿಯ ಪರಿಮಾಣಗಳಿಸಿಕೊಂಡಿವೆ.

ಉನ್ನತ ಹುದ್ದೆಗೆ ರಾಜೀನಾಮೆ ನೀಡಿ ಡಾ.ಕಾಮತರು ತಮ್ಮ ಸ್ವತಂತ್ರ ಮನೋವೃತ್ತಿಗೂ ಅಭಿರುಚಿಗೂ ಹೊಂದುವಂತೆ ವೈಜ್ಞಾನಿಕ ಛಾಯಾಚಿತ್ರಕಾರರಾಗಿ ಕಳೆದ ಇಪ್ಪತ್ತು ವರ್ಷಗಳಿಂದ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ. ಪರ್ಯಟನೆ, ಬರವಣಿಗೆ, ಚಿತ್ರಕಲೆ, ಸಂಶೋಧನೆ, ಛಾಯಾಚಿತ್ರಗ್ರಹಣ ಹೀಗೆ ಹಲವು ರಂಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಕ್ರಿಯಾಶೀಲರಾಗಿದ್ದಾರೆ. ೧೯೭೬ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಶಿಷ್ಯವೇತನ ಪಡೆದು ಒಂದು ವರ್ಷಗಳ ಕಾಲ ಮಧ್ಯಪ್ರದೇಶದಲ್ಲಿ ಇದ್ದುಬಂದು ಅಲ್ಲಿಯ ಅನುಭವಗಳನ್ನೆಲ್ಲ 'ಕಾಲ ರಂಗ' (ಧಾರವಾಡ ೧೯೮೨), 'ಬಸ್ತರ ಪ್ರವಾಸ' (ಮೈಸೂರು ೧೯೯೧) ಹಾಗೂ 'ಮಧ್ಯಪ್ರದೇಶದ ಮಡಿಲಲ್ಲಿ' (ಬೆಂಗಳೂರು ೧೯೯೩) ಪುಸ್ತಕಗಳಲ್ಲಿ ದಾಖಲಿಸಿದ್ದಾರೆ. 'ಬಸ್ತರ ಪ್ರವಾಸ' ೧೯೯೧ರ ಸಾಲಿನ ಪ್ರವಾಸ ಸಾಹಿತ್ಯ ಪ್ರಕಾರದ ಉತ್ತಮ ಕೃತಿಯೆಂದು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ ಗಳಿಸಿತು. ಮಧ್ಯಪ್ರದೇಶದ ಜನಸಾಮಾನ್ಯರ–ಅದರಲ್ಲೂ ಮುಖ್ಯವಾಗಿ ಆದಿವಾಸಿ ಜನಾಂಗಗಳ ಬದುಕಿನ ಕುರಿತು ಒಳನೋಟಗಳನ್ನು ಕೊಡುವ ಈ ಕೃತಿಗಳು ನಾಗರಿಕ ಜಗತ್ತು ಅಧಿಕಾರಿಗಳ, ಸಾಹುಕಾರರ, ಪ್ರವಾಸಿಗಳ ರೂಪದಲ್ಲಿ ಆದಿವಾಸಿಗಳ ಬಣ್ಣದ ಬದುಕನ್ನು ಅಂದಗೆಡಿಸುತ್ತಿರುವ ಕುರಿತು ಕಳವಳ ಮೂಡಿಸುತ್ತವೆ. ಶೋಷಣೆಯ ನೂರು ಮುಖಗಳನ್ನು ಬಯಲುಗೊಳಿಸುತ್ತವೆ. 'ಬಡವರ ಶೋಷಣೆಯು ನಾಗರಿಕತೆಯ ಹೆಗ್ಗುರುತೆ?' ಎಂದು ಆಕ್ರೋಶದಿಂದ ಪ್ರಶ್ನಿಸುತ್ತವೆ. 'ಅಮೇರಿಕನ್ನರಂತೆ ಧನ ಸಂಪಾದನೆಯೇ ಸುಖದ ಹೆದ್ದಾರಿ ಎಂಬ ಸೂತ್ರವನ್ನು ನೆಚ್ಚಿಕೊಳ್ಳುವದಕ್ಕಿಂತ ಹಣದ ಆವಶ್ಯಕತೆಯೆ ಇಲ್ಲದ ಈ ಆದಿವಾಸಿಗಳ ಆದರ್ಶವನ್ನು ನಾವೇಕೆ ಬಳಸಬಾರದು?" ಎನ್ನುವ ಕಿವಿಮಾತು ಹೇಳುತ್ತವೆ. ಸಮಾಜ ವಿಜ್ಞಾನಿಯ ಚಿಕಿತ್ಸಕ ದೃಷ್ಟಿ ಈ ಕೃತಿಗಳಲ್ಲಿ ನಿಚ್ಚಳವಾಗಿದ್ದರೂ ಮಾನವೀಯ ನೆಲೆಯ ನಿರೂಪಣೆಯಿಂದಾಗಿ ಸಮಾಜ ವಿಜ್ಞಾನದ ಚೌಕಟ್ಟನ್ನು ಮೀರಿ ಅವು 'ಕಥನ'ದ ದಾಟಿಯನ್ನು ಪಡೆದುಕೊಂಡಿವೆ. ಕನ್ನಡಕ್ಕೆ ಅಪರಿಚಿತವಾದ ಆದಿವಾಸಿಗಳ ಮುಗ್ಧ, ಸ್ವಚ್ಛಂದ, ವೈವಿಧ್ಯಪೂರ್ಣ ಬದುಕಿನ ಬೆಡಗಿನ ಲೋಕವನ್ನು ಅನಾವರಣಗೊಳಿಸುತ್ತವೆ ಎನ್ನುವ ಕಾರಣದಿಂದಲೂ ಅವು ಗಮನಾರ್ಹ ಕೃತಿಗಳಾಗಿವೆ.

ತನ್ನದಲ್ಲದ ಹೊಸ ಪರಿಸರದಲ್ಲಿ ತಾನು ಕಂಡಿದ್ದು ಕೇಳಿದ್ದು ಅನುಭವಿಸಿದ್ದನ್ನೆಲ್ಲ ಇನ್ನೊಬ್ಬರೊಂದಿಗೆ ಹಂಚಿಕೊಳ್ಳುವ ತುಡಿತದಲ್ಲಿ ಪ್ರವಾಸ ಸಾಹಿತ್ಯ ಜನಿಸುತ್ತದೆ. ಹೀಗಾಗಿ ಪ್ರವಾಸ ಸಾಹಿತ್ಯದಲ್ಲಿ ಪ್ರವಾಸ ಮಾಡಿದ ಸ್ಥಳದ ವೈಶಿಷ್ಟ್ಯವೂ, ಪ್ರವಾಸ ಮಾಡಿದಾತನ ವ್ಯಕ್ತಿತ್ವ ವಿಶೇಷವೂ ಏಕಕಾಲದಲ್ಲಿ ಅನಾವರಣಗೊಳ್ಳುತ್ತದೆ. ವ್ಯಕ್ತಿ ವಿಶೇಷ ಹಾಗೂ ಪರಿಸರ ವೈಶಿಷ್ಟ್ಯಗಳ ಮುಖಾಮುಖಿಯೇ ಪ್ರವಾಸ ಸಾಹಿತ್ಯದ ಆಸಕ್ತಿ ಕೇಂದ್ರ, ಅಪರಿಚಿತನೊಂದಿಗೆ ಮುಖಾಮುಖಿಯಾಗುತ್ತ ಅದನ್ನು ಪರಿಚಿತವಾಗಿಸಿಕೊಳ್ಳುತ್ತ ಆಮೇಲೆ ಇತರರಿಗೆ ಪರಿಚಯಿಸುವಷ್ಟು ಆತ್ಮೀಯವಾಗುತ್ತ ಹೋಗುವುದು ಇವುಗಳ ಕ್ರಮ. ಅಜ್ಞಾತದೊಂದಿಗೆ ಅಪರಿಚಿತತೆಯೊಂದಿಗೆ ಮುಖಾಮುಖಿಯಾಗುವ, ಅದಕ್ಕೆ ಆತ್ಮೀಯನಾಗುವ, ಅದನ್ನು ಪರಿಚಯಿಸುವ ಉತ್ಸಾಹವೇ ಕೃಷ್ಣಾನಂದ ಕಾಮತರ 'ಪ್ರಾಣಿ ಪ್ರಪಂಚ' (ಧಾರವಾಡ, ೧೯೭೫), 'ಪಶು–ಪಕ್ಷಿ ಪ್ರಪಂಚ' (ಮೈಸೂರು, ೧೯೯೦), 'ಕೀಟ ಜಗತ್ತು' (ಬೆಂಗಳೂರು, ೧೯೯೧), 'ಸಸ್ಯ ಪ್ರಪಂಚ' (ಬೆಂಗಳೂರು, ೧೯೯೨) ಹಾಗೂ 'ಸಸ್ಯ ಪರಿಸರ' (ಬೆಂಗಳೂರು, ೧೯೯೪) ಪುಸ್ತಕಗಳಲ್ಲೂ ಕಂಡುಬರುತ್ತದೆ. ಹೀಗಾಗಿ ಒಂದು ದೃಷ್ಟಿಯಿಂದ ಇವೂ ಪ್ರವಾಸ ಕಥನಗಳೆ. ಮನುಷ್ಯ ಪ್ರಪಂಚದ ಪ್ರವಾಸದಷ್ಟೇ ಪಶು–ಪಕ್ಷಿ–ಸಸ್ಯ ಲೋಕಗಳಲ್ಲಿ ಸಂಚರಿಸುವದೂ ರೋಚಕವಾದದ್ದಾಗಿದೆ. ಪ್ರವಾಸಿಗನ ನಿರೀಕ್ಷಣಾ ಸಾಮರ್ಥ್ಯ ಎರಡೂ ಬಗೆಯ ಪ್ರವಾಸ ಸಾಹಿತ್ಯದಲ್ಲೂ ಗುಣಮಟ್ಟವನ್ನು ನಿರ್ಣಯಿಸುವ ಅಂಶಗಳಾಗಿವೆ.

ಸೂಕ್ಷ್ಮ ನಿರೀಕ್ಷಣಾ ಸಾಮರ್ಥ್ಯ ಹಾಗೂ ಸರಳ ನಿರೂಪಣಾ ಕೌಶಲ ಡಾ. ಕಾಮತರ ಪ್ರವಾಸ ಕಥನಗಳಲ್ಲೂ ವೈಜ್ಞಾನಿಕ ಬರಹಗಳಲ್ಲೂ ಸಮಾನವಾಗಿ ಕಾಣುವ ಅಂಶ. ಅವರ ಗದ್ಯ ನಿರಾಭರಣ ಸುಂದರ. ಮಾದರಿಗಾಗಿ ಎರಡು ಉದ್ಧೃತ ಭಾಗಗಳನ್ನು ನೋಡಬಹುದು. ಮೊದಲನೆಯದು 'ಕೀಟ ಜಗತ್ತು' ಪುಸ್ತಕದ್ದು:

**"ಪಯಣಕ್ಕೆ ಹೊರಟಾಗ ಎಲ್ಲಕ್ಕೂ ಮುಂದೆ ಅಂಗರಕ್ಷಕರು. ದವಡೆಗಳಲ್ಲಿ ಕಚ್ಚಿ ಹಿಡಿದ ಆಹಾರ ಸಾಮಗ್ರಿಯನ್ನು ಬೇರೆ ಪಂಗಡದವರು ಕಸಿದುಕೊಳ್ಳದಂತೆ ಆಚೆ ಈಚೆ ಕಾಲ್ದಳದವರು ಹೊರಟಿದ್ದರು. ಇವುಗಳ ಹಿಂದೆ ಬೆಳವಣಿಗೆಯ ವಿವಿಧ ಹಂತಗಳಲ್ಲಿ ಮರಿಗಳನ್ನು ಹೊತ್ತವರು ಹೊರಟಿದ್ದರು. ಕೊನೆಯಲ್ಲಿ ಈರ್ವರು ರಾಣಿಯರನ್ನು ಅಂಗರಕ್ಷಕ ದಳದವರು ಸುತ್ತುವರಿದಿದ್ದರು. ಮದುವೆಯ ದಿಬ್ಬಣದಂತೆ ಹೊರಟ ಈ ಮೆರವಣಿಗೆಯನ್ನು ನಿಟ್ಟಿಸುವುದೇ ಮೋಜಾಯಿತು"** (ಪುಟ. ೨೨೦-೨೨೧)

ಇದು ಬಂಗಾಳದ ಪ್ಲಾಸಿಯಲ್ಲಿ ಕಾಣಸಿಗುವ ಇರುವೆಗಳ ಒಂದು ವರ್ಣನೆ! ಅವುಗಳನ್ನು ಕಾಮತರು 'ಮಡಿವಂತ ಕೋಮಲಾಂಗಿಯರು' ಎನ್ನುತ್ತಾರೆ! ಇನ್ನೊಂದು ಉದಾಹರಣೆ 'ಬಸ್ತರ ಪ್ರವಾಸ'ದಲ್ಲಿ ಬರುವ ಆದಿವಾಸಿ ಹೆಣ್ಣುಗಳ ವರ್ಣನೆ:

**"ಮೂವರು ಹುಡುಗಿಯರು ತಮ್ಮ ಫೋಟುಲದ ನೃತ್ಯಾಲಂಕಾರಗಳೊಂದಿಗೆ ನಗುತ್ತ ಕಲೆಯುತ್ತ ಬರಲಾರಂಭಿಸಿದ್ದರು. ಉಣ್ಣೆಹಾಕಿ ಮಾಟವಾಗಿ ಬಾಚಿಕೊಂಡ ಕೇಶರಾಶಿಯನ್ನು ಹತ್ತಾರು ಬಾಚಣಿಕೆಗಳಿಂದ ಅಲಂಕರಿಸಿಕೊಂಡಿದ್ದರು. ಕೆಂಪು, ಹಳದಿ, ರಿಬ್ಬನ್‌ಗಳನ್ನು ಹೂವಿನಂತೆ ಕಟ್ಟಿಕೊಂಡು ಕವಡೆಸರಗಳನ್ನು ನೇತುಬಿಟ್ಟಿದ್ದರು. ಕೊರಳ ತುಂಬ ಹಸಿರು. ನೀಲಿ, ಕೆಂಪು ಬಿಂಗಿ ಮಣಿಗಳ ಸರಗಳು, ಬರಿದು ಎಂದು ತೋರುವ ಅಂಗಾಂಗಗಳ ಭಾಗದ ಮೇಲೆ ಹಚ್ಚೆ ಹಾಕಿಸಿದ್ದರು. ಕೈ ತುಂಬ ಬಳೆಗಳು, ಕೆಂಪು, ಕೇಸರಿ ಬಣ್ಣದ ರಬ್ಬಾದ ತುಂಡು ಸೀರೆಗಳು, ಕಾಲುಗಳಿಗೆ ಕಡಗ, ಸುತ್ತುಂಗುರಗಳು"**

ಪ್ರವಾಸಾನುಭವ ನಿರೂಪಣೆಯಾಗಲಿ ವೈಜ್ಞಾನಿಕ ಬರವಣಿಗೆಯಾಗಲಿ ಶುದ್ಧ ಸೃಜನಶೀಲ ಸಾಹಿತ್ಯ ಪ್ರಕಾರಗಳಲ್ಲ. ಆದರೆ ಬರಹಗಾರನ ಸೃಜನಶಕ್ತಿ ಈ ಬಗೆಯ ಬರವಣಿಗೆಗಳಲ್ಲೂ ಕಾವ್ಯಾತ್ಮಕ ಭಾವಪೂರ್ಣ ಗದ್ಯವನ್ನು ಬಳಸಬಹುದಾಗಿದೆ ಹಾಗೂ ಧ್ವನಿಶಕ್ತಿಯನ್ನು ತುಂಬಬಹುದಾಗಿದೆ. ಅಂತಹ ಗದ್ಯ, ಪ್ರತಿಮೆಗಳ ನಕ್ಷತ್ರ ಲೋಕವಾಗಿರುತ್ತವೆ. ಆದರೆ ಹೀಗಾಗುವುದು ಕ್ವಚಿತ್ತಾಗಿ ಮಾತ್ರ. ಡಾ.ಕಾಮತರ ಬರವಣಿಗೆಯಲ್ಲಿ ಅಂತಹ ಅಪರೂಪದ ಸಾಧನೆಯ ಮಾದರಿಗಳು ದೊರಕುತ್ತವೆ ಎನ್ನುವುದಕ್ಕಾಗಿಯೇ ಅವು ಮಹತ್ವದ ಬರಹಗಳಾಗಿವೆ.

ಉತ್ತರ ಕನ್ನಡದ ಕುರಿತು 'ಇಷ್ಟೆಲ್ಲ ಅರಣ್ಯ ಸಂಪತ್ತು ಇದ್ದು ಅಮೇರಿಕೆಯ ಹೆಸರುವಾಸಿಯಾದ ಅರಣ್ಯಶಾಸ್ತ್ರದ ಕಾಲೇಜಿನಲ್ಲಿ ಉಚ್ಚ ತರಬೇತಿ ಮತ್ತು ಪದವಿಗಳನ್ನು ಪಡೆದ ಒಬ್ಬರನ್ನು ಸಾಕುವ, ಅವರ ತರಬೇತಿಯ ಲಾಭ ಪಡೆಯುವ ಅವಕಾಶ ನಮ್ಮ ಜಿಲ್ಲೆಗೆ ಇಲ್ಲದೆ ಹೋಯಿತೇ?' ಎಂದು ಒಂದೆಡೆ ಕೃಷ್ಣಾನಂದ ಕಾಮತರು ಬರೆದುಕೊಂಡಿದ್ದಾರೆ. ಒಮ್ಮೆ ಭೆಟ್ಟಿಯಾದಾಗ 'ಜಿಲ್ಲೆಯಲ್ಲಿ ಇಷ್ಟತ್ತೆಂಟು ಶೈಕ್ಷಣಿಕ ಸಂಸ್ಥೆಗಳನ್ನು ಕಟ್ಟಿದ ಡಾ. ದಿನಕರ ದೇಸಾಯಿಯವರನ್ನು ಸೋಲಿಸಿ ಜಿಲ್ಲೆಯ ಹೊರಗಿನವರನ್ನು ಗೆಲ್ಲಿಸಿದವರು ನಾವು' ಎಂದು ಜ್ಯೋತ್ಸ್ನಾ ಕಾಮತ್ ನೊಂದುಕೊಂಡರು. ಜಿಲ್ಲೆಯ ಪ್ರಸಿದ್ಧ ಲೇಖಕರಾದ ಗೌರೀಶ ಕಾಯ್ಕಿಣಿ ಹಾಗೂ ದಿ|| ವಿ. ಜಿ. ಭಟ್ಟರ ಸಾಹಿತ್ಯದ ಕುರಿತು ಈ ದಂಪತಿಗಳಿಗೆ ತುಂಬ ಉತ್ಸಾಹ ಹಾಗೂ ಅಭಿಮಾನ. ಡಾ. ಕೃಷ್ಣಾನಂದ ಕಾಮತರು ದಿ|| ವಿ. ಜಿ. ಭಟ್ಟರೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು. ಭಟ್ಟರೂ ಇವರ ಪ್ರವಾಸ ಕಥನಗಳನ್ನು ಮೆಚ್ಚಿಕೊಂಡಿದ್ದರಂತೆ. ಭಟ್ಟರ ಕೊನೆಯ ಕವನ ಸಂಕಲನ 'ಪ್ರಾರ್ಥನೆ'ಯಲ್ಲಿ ಕಾಮತ ದಂಪತಿಗಳ ಕುರಿತೇ ಒಂದು ಪದ್ಯ ಇದೆ.

ಜಿಲ್ಲೆಯ ಪ್ರತಿಭಾವಂತ ಲೇಖಕ ಡಾ. ಕೃಷ್ಣಾನಂದ ಕಾಮತರಿಗೆ ಗೌರೀಶ ಕಾಯ್ಕಿಣಿ ಪ್ರತಿಷ್ಠಾನದ ೧೯೯೬ನೇ ಸಾಲಿನ ಪ್ರಶಸ್ತಿ ದೊರಕಿದೆ. ಈ ಜಿಲ್ಲೆಯ ಮಟ್ಟಿಗಾದರೂ ಅವರ ಅಜ್ಞಾತವಾಸ ಕೊನೆಗಾಣುವಂತಾಗಲಿ!

(ಕೃಪೆ : ಧ್ಯೇಯನಿಷ್ಠ ಪತ್ರಕರ್ತ 04-12-1996)



## 'ನೆಟ್ ನೋಟ'

**ಲೇಖಕರು : ಹಾ. ನಾ. ಸುಧೀಂದ್ರ**

ಇವರಿಗೊಂದು ವಿಳಾಸವಿಲ್ಲ, ಹೋಗಲಿ, ಕಂಪ್ಯೂಟರ್ ಆದರೂ ಇದೆಯೇ? ಉಹೂಂ. ಗಂಡ-ಹೆಂಡತಿ ಲೇಖನಗಳನ್ನು ಕೈಯಲ್ಲಿ ಬರೆದು, ಚಿತ್ರಗಳನ್ನು ಸ್ಟುಡಿಯೋದಲ್ಲಿ ಅಚ್ಚುಹಾಕಿಸಿ, ಲಕೋಟೆಯಲ್ಲಿಟ್ಟು ದೂರದ ಅಮೇರಿಕದಲ್ಲಿನ ಮಗನ ವಿಳಾಸಕ್ಕೆ ಅಂಚೆಯಲ್ಲಿ ಕಳುಹಿಸುತ್ತಾರೆ. ಮಗ-ಸೊಸೆ ತಮ್ಮ ಕಂಪ್ಯೂಟರ್‌ನಲ್ಲಿ ಮತ್ತೆ ಲೇಖನಗಳನ್ನು ಟೈಪಿಸಿ, ಚಿತ್ರಗಳನ್ನು ಸ್ಕ್ಯಾನ್ ಮಾಡಿ ವೆಬ್ ಸೈಟ್‌ಗೆ ತುಂಬುತ್ತಾರೆ.

ಗಂಡ-ಹೆಂಡತಿ-ಮಗ-ಸೊಸೆ ಈ ನಾಲ್ವರ ಕುಟುಂಬಕ್ಕೊಂದು ವೆಬ್ ಸೈಟ್ ಇದೆ. ವೈಯಕ್ತಿಕವೆಂದು ವರ್ಗೀಕರಿಸಲಾಗದಷ್ಟು ಸಾರ್ವಜನಿಕ ವ್ಯಕ್ತಿಗಳಿವರು. ಈ ನಾಲ್ವರ ನಡುವೆ ಅದೆಷ್ಟು ಪದವಿಗಳು ಹಂಚಿಹೋಗಿವೆ ಗೊತ್ತೆ? ಮೂರು ಡಾಕ್ಟರೇಟ್, ಐದು ಸ್ನಾತಕೋತ್ತರ ಮತ್ತು ಏಳು ವಿವಿಧ ಪದವಿಗಳು! ಈ ಎಲ್ಲ ಮುತ್ಸದ್ದಿಗಳು ಒಡಗೂಡಿ ನಿರ್ಮಿಸಿರುವ ವೆಬ್‌ಸೈಟ್ www.kamat.com. ಈ ಹೊಸ ಚಿಗುರ ಸೊಬಗಿಗೆ ಮನಸೋತು ಒಳಹೊಕ್ಕರೆ ಹಳೆ ಬೇರುಗಳ ಸೊಗಡು ಕಾಣುವುದಿಲ್ಲ.

ಭಾರತೀಯ 'ಅಲಂಕಾರಕ್ಕೆ ಐದು ಸಹಸ್ರ ವರ್ಷಗಳ ಇತಿಹಾಸವಿದೆಯಂತೆ. ಹೆಂಗಳೆಯರ ಮನಸೆಳೆವ ಒಡವೆಗಳನ್ನು ನಾಜೂಕಾಗಿ ಸೃಷ್ಟಿಸುವ ಕಲೆ ರಾಜಾಶ್ರಯದಲ್ಲಿ ಬೆಳೆದು ಬಂದದ್ದು ಹೇಗೆ ? ಧಾರ್ಮಿಕವಾಗಿ ಇವುಗಳ ಮಹತ್ವವೇನು? ಕಣ್ಮನ ಸೆಳೆಯು ಚಿತ್ರಗಳೊಂದಿಗೆ ವಿಶೇಷ ಪುಟಗಳು ಇಲ್ಲಿವೆ. ಅನಾದಿ ಕಾಲದಲ್ಲಿ ಭಾರತೀಯ ಶಿಕ್ಷಣ ಪದ್ಧತಿ ಹೇಗಿತ್ತು? ಚಿತ್ರಕಲಾ ಪ್ರದರ್ಶನದ ಸರಮಾಲೆಯೊಂದು ಇಲ್ಲಿದೆ. ಆಧುನಿಕ ಜೀವನಶೈಲಿಯ ಅವಿಭಾಜ್ಯ ಅಂಗಗಳಾದ ಟೀವಿ, ಇಂಟರ್‌ನೆಟ್, ಕಾರು ಕೊನೆಗೆ ಫೋನ್ ಕೂಡಾ ನಿಮಗೆ ಬೇಸರ ತಂದಿದ್ದಾರೆ. ಮರಳಿ ಹಳ್ಳಿಗೆ ಎನ್ನುತ್ತದೆ ಈ ವೆಬ್ ಸೈಟ್. ಜೀವನವನ್ನು ಆಸ್ವಾದಿಸಲು ಹಸುರು ಕಣಿವೆಗಳಿದ್ದ ನಮ್ಮ ಭಾರತದಲ್ಲಿ ಸಾಕಷ್ಟಿವೆ. ಬನ್ನಿ ಎಂಬ ತುಂಬು ಹೃದಯದ ಆಹ್ವಾನವಿದೆ. ಹೋಗುವ ಮುನ್ನ ಈ ಸುಂದರ ತಾಣಗಳ ಬಗ್ಗೆ ಪರಿಚಯ ಮಾಡಿಕೊಡುವ ಸಚಿತ್ರ ಲೇಖನಗಳು ಇಲ್ಲಿನ ಪುಟಗಳಲ್ಲಿವೆ.

www.kamat.com. ಎಂಬ ಈ ವೆಬ್ ಸೈಟನ್ನು ಇಂಥದೇ ಒಂದು ಗುಂಪಿಗೆ ಸೇರಿಸುವುದು ಬಲು ಕಷ್ಟ. ಅದರ ಸೃಷ್ಟಿಕರ್ತ ಡಾ. ಕೃಷ್ಣಾನಂದ ಲಕ್ಷ್ಮಣ ಕಾಮತರಷ್ಟೇ ವಿಲಕ್ಷಣ. ಛಾಯಾಗ್ರಾಹಣ ಮತ್ತು ಕೀಟ ವಿಜ್ಞಾನದಲ್ಲಿನ ತಮ್ಮ ಅನುಭವಗಳನ್ನು ಜನಪ್ರಿಯ ಶೈಲಿಯಲ್ಲಿ ಓದುಗರೊಂದಿಗೆ ಹಂಚಿಕೊಂಡವರು. ಸರಳ ಸಜ್ಜನಿಕೆಯೊಂದಿಗೆ ಹಾಸ್ಯಮಂತಿಕೆ, ಕಲೆಯೊಂದಿಗೆ ಜೀವನ ಪ್ರೀತಿ ಬೆಳೆಸಿಕೊಂಡಿದ್ದ ಅನನ್ಯ ಲೇಖಕ ಇಂಥ ಅಸಾಧಾರಣ ವ್ಯಕ್ತಿ ನಿರ್ಮಿಸಿದ ಸೈಟನ್ನು ಜಾಲಾಡುತ್ತಾ ಹೊರಟರೆ ಏನುಂಟು ಏನಿಲ್ಲ? ಬುದ್ಧ, ಗಾಂಧಿ, ಹನುಮರ ನಡುವೆ ಮೊಗಲರಿದ್ದಾರೆ. ಭಕ್ತಿಯಿದೆ, ಪಕ್ಷಿಯಿದೆ, ಜೊತೆಗೆ ಕಾಶ್ಮೀರದಲ್ಲಿನ ದಳ್ಳುರಿಯ ಬಗ್ಗೆ ವಿಶ್ಲೇಷಣೆಯಿದೆ. ಕಲೆ, ಇತಿಹಾಸ, ಕರಕುಶಲ ವಸ್ತುಗಳು, ದೇವಾಲಯಗಳು, ಹಬ್ಬ-ಹರಿದಿನಗಳು, ವಾಸ್ತುಶಿಲ್ಪ... ಮತ್ತಿತರ ವಿಷಯಗಳಿಗೆ ಪ್ರತ್ಯೇಕ ಸಂಪುಟಗಳು ಇಲ್ಲಿದೆ.

ಫೆಬ್ರವರಿ ಇಪ್ಪತ್ತರಂದು ನಮ್ಮನ್ನಗಲಿದ ಕೃಷ್ಣಾನಂದ ಕಾಮತ್ ಕುಟುಂಬದ ಈ ವೆಬ್‌ಸೈಟ್‌ನ ವೈಶಿಷ್ಟ್ಯವನ್ನು ಒಂದು ನೆಟ್ಟ ನೋಟದಿಂದ ಸೆರೆಹಿಡಿಯಲಾಗದು. ಸ್ವತಃ ಇ-ಮೆಲ್ ವಿಳಾಸ ಹೊಂದಿರದಿದ್ದ ಕೃಷ್ಣಾನಂದರಿಗೆ ಬರುತ್ತಿದ್ದ ಪತ್ರಗಳನ್ನು ಅಮೇರಿಕದಲ್ಲಿರುವ ಮಗ ವಿಕಾಸ ಓದುತ್ತಿದ್ದರು. ಉತ್ತರಿಸುವಾಗ ಒಮ್ಮೊಮ್ಮೆ ಅಪ್ಪನ ಸಲಹೆಯನ್ನು ದೂರವಾಣಿ ಕರೆ, ಪತ್ರ ಮುಖೇನ ಪಡೆಯುತ್ತಿದ್ದರು. ಅಮೆರಿಕದ ಪತ್ರಕರ್ತನೊಬ್ಬ ಅಭಿಪ್ರಾಯಪಡುವಂತೆ 'ಅತ್ಯಂತ ಕನಿಷ್ಠ ತಂತ್ರಜ್ಞಾನ ಬಳಸಿಕೊಳ್ಳುತ್ತಿರುವ ಸೈಟ್' ಇದು. ಈ ಬಗ್ಗೆ ಕೃಷ್ಣಾನಂದರು 'ನನ್ನಂತೆಯೇ ಈ ಜಗತ್ತಿನ ಪ್ರತಿಶತ ತೊಂಬತ್ತೊಂಬತ್ತು ಮಂದಿಗೆ ಇ-ಮೇಲ್ ವಿಳಾಸವಿಲ್ಲ' ಎಂದಿದ್ದಾರೆ.

ಈ ಸೈಟ್ ಅನ್ನು ಆಕರ್ಷಕವಾಗಿಸಲು ಕೃಷ್ಣಾನಂದರ ಮಡದಿ ಡಾ. ಜ್ಯೋತ್ಸ್ನಾ ಮತ್ತು ಸೊಸೆ ಹಿರಿಯಂಗ್ ಅವರು ತಮ್ಮದೇ ಆದ ಕಾಣಿಕೆಯನ್ನಿತ್ತಿದ್ದಾರೆ. ಇವರೆಲ್ಲರ ಲೇಖನಗಳ ನಡುವೆ ಕೃಷ್ಣಾನಂದರ ಛಾಯಾಚಿತ್ರಗಳು ಸೈಟಿನ ಅಂದವನ್ನು ಹೆಚ್ಚಿಸಿವೆ. ಮುಗ್ಧತೆ ತುಳುಕುವ ಹುಡುಗ, ಕೊಂಕಣಿಗರ ಮನೆಯಲ್ಲಿನ ಊಟದ ಸಮಾರಾಧನೆ, ಕಡೆಗೋಲಿನಿಂದ ಬೆಣ್ಣೆ ತೆಗೆಯುವ ಅಜ್ಜಿ, ಹೊನ್ನಾವರದ ಹಸುರು ಕಣಿವೆ, ಹಳೆ ಸೀರೆ ತುಂಡುಗಳಿಂದ ಬೆಚ್ಚನೆಯ ಕೌದಿ ಹೊಲಿಯುವ ಮುದುಕಿ... ನೋಡುತ್ತಿದ್ದಂತೆ ಭಾರತೀಯ ಜನಜೀವನ ನಿಮ್ಮ ಕಣ್ಮುಂದೆ ಸಾಗುತ್ತದೆ.

ದೇಶ ವಿದೇಶಗಳ ಪತ್ರಿಕೆಗಳಲ್ಲಿ ಈ ವಿಶಿಷ್ಟ ಸೈಟಿನ ಬಗ್ಗೆ ಪ್ರಶಂಸೆಗಳ ಸುರಿಮಳೆಯಾಗಿದೆ. ಕಾಮತ್ ಕುಟುಂಬದ ನಲ್ಮೆಯ ಚಿತ್ರಗಳಿವೆ. ಛಾಯಾಗ್ರಹಣ ಮಾಡಲು ಊರಿಂದೂರಿಗೆ ಹೊರಡುತ್ತಿದ್ದ ಕಾಮತರಿಗೆ ಚಿತ್ರಕಲೆಯ ಬಗ್ಗೆ ಅಪಾರ ಆಸಕ್ತಿ. ಅವರ ಈ ಪ್ರತಿಭೆಯನ್ನು ಖಂಡಿತಾ ವೀಕ್ಷಿಸಬೇಕು. ತುಮಕೂರು ಜಿಲ್ಲೆಯ ಇತಿಹಾಸ ಪ್ರಸಿದ್ಧ ಶ್ರೀ ಸೀಬಿ ನರಸಿಂಹಸ್ವಾಮಿ ದೇವಾಲಯದ ಗೋಡೆಗಳ ಮೇಲೆ ಅಪರೂಪದ ವರ್ಣಚಿತ್ರಗಳಿವೆ. ಇವುಗಳನ್ನು ಸಾಕಷ್ಟು ಕಷ್ಟಪಟ್ಟು ಕಾಮತರು ತಮ್ಮ ಕ್ಯಾಮರಾದಲ್ಲಿ ಸೆರೆಹಿಡಿದಿದ್ದಾರೆ.

ಅಮೇರಿಕದಲ್ಲಿ ಕೀಟವಿಜ್ಞಾನದ ಬಗ್ಗೆ ಅತ್ಯುನ್ನತ ಪದವಿ ಪಡೆದು ಭಾರತಕ್ಕೆ ಹಿಂದಿರುಗಿದ ಕಾಮತರನ್ನು ಅಹಂ ಎಂದೂ ಕಾಡಲಿಲ್ಲ, ಹೊನ್ನಿಗೆಂದೂ ಆಸೆ ಪಡದಿದ್ದ ಅವರಿಗೆ ತಮ್ಮ ಹುಟ್ಟಿದೂರು ಹೊನ್ನಾವರ ಅಲ್ಲಿನ ಮಣ್ಣು-ನೀರು-ಗಾಳಿಗಳೆಂದರೆ ಮೈನವಿರೇಳುತ್ತಿತ್ತಂತೆ. ಪ್ರಾಚೀನ ಪದ್ಧತಿಗಳಲ್ಲೇ ಸಂತೃಪ್ತಿ ಕಾಣುತ್ತಿದ್ದ ಕಾಲಭಾಗವೊಂದರ ಬಗ್ಗೆ 'ನಮ್ಮೂರ ಕಣಿವೆಗಳು ಹೇಗೆ ಅಚ್ಚ ಹಸುರಾಗಿದ್ದುವು' ಎಂಬ ನೆನಪಿನಾಳದ ಲೇಖನದಲ್ಲಿ ಬಣ್ಣಿಸಿದ್ದಾರೆ. ಯಾಂತ್ರಿಕತೆಯ ಜಂಜಾಟವನ್ನು ಮರೆಯಲೊಮ್ಮೆ ಕಾಮತರ ಊರ ಓಣಿಗಳಲ್ಲಿ, ನೀರ ದೋಣಿಗಳಲ್ಲಿ ನೀವೂ ಅಡ್ಡಾಡಿ ಬನ್ನಿ.

'ನಾನೂ ಅಮೇರಿಕೆಗೆ ಹೋಗಿದ್ದೆ' ಎಂಬ ಪ್ರವಾಸ ಕಥನ ಬರೆದಿದ್ದ ಕಾಮತರ ಈ ವೆಬ್‌ಸೈಟ್ ವಿಹರಿಸಿದರೆ 'ನಾನು ಇಡೀ ಜಗತ್ತನ್ನು ಸುತ್ತಾಡಿ ಬಂದೆ' ಎಂಬ ಸಂತೃಪ್ತಿ ನಿಮ್ಮದಾಗಬಹುದು! ಈಗ ಕಾಮತರು ಛಾಯಾಚಿತ್ರವಾಗಿಬಿಟ್ಟಿದ್ದಾರೆ ಎನ್ನುವ ನೋವು ಮಾತ್ರ ಎಲ್ಲರದೂ ಆಗಬಹುದು.

(ಕೃಪೆ : ವಿಜ್ಞಾನ ಸಂಗಾತಿ ಏಪ್ರಿಲ್ 2002)

# ಡಾ. ಕೃಷ್ಣಾನಂದ ಕಾಮತರ ಸಂದರ್ಶನ

**ಸಂದರ್ಶಕರು : ವಿಠ್ಠಲದಾಸ ಕಾಮತ**

**ಸಾಹಿತ್ಯಸಾಹಿತಿ ರಾಜಕೀಯದಿಂದ ದೂರವಿರಬೇಕು ಎಂದು ಖ್ಯಾತ ಪ್ರವಾಸಿ ಲೇಖಕ, ಸಾಹಿತಿ ಡಾ. ಕೃಷ್ಣಾನಂದ ಕಾಮತ್ ಹೇಳಿದರು. ಹೊನ್ನಾವರದಲ್ಲಿ ಕಳೆದವಾರ ಜರುಗಿದ ಉತ್ತರ ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಅವರು ಸಾಹಿತ್ಯ ಸಮ್ಮೇಳನದಲ್ಲಿ ಪ್ರಥಮ ಬಾರಿಗೆ ಪಾಲ್ಗೊಂಡಿದ್ದ ಹಿನ್ನೆಲೆಯಲ್ಲಿ ಸಮ್ಮೇಳನದ ನಂತರ ಆಡಿದ ಮಾತಿದು.**

ಮೂರವಲ್ಲಿ ಸಾಹಿತ್ಯ ಸೇವೆ ಮಾಡಿಕೊಂಡಿದ್ದ ಅವರನ್ನು ಈ ಬಾರಿ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪಟ್ಟ ನೀಡಿ ಮೊದಲ ಬಾರಿಗೆ ಇಂತಹ ಸಮ್ಮೇಳನಕ್ಕೆ ಕರೆತರಲಾಗಿತ್ತು.

ಸಾಹಿತ್ಯ ಸಮ್ಮೇಳನದ ಬಗ್ಗೆ ಏನೇನೋ ಸಿಹಿ ಕಲ್ಪನೆ ಹೊತ್ತು ಬಂದಿದ್ದ ಅವರಿಗೆ ಸಮ್ಮೇಳನದಲ್ಲಿ ಪಾಲ್ಗೊಂಡ ಮೇಲೆ ರಾಜಕೀಯಕ್ಕೆ ದೊರೆತ ಪ್ರಾಧಾನ್ಯತೆ, ಸಮ್ಮೇಳನದ ಅಸ್ತವ್ಯಸ್ತತೆ ಕಂಡು ತಣ್ಣೀರೆರಚಿದ ಅನುಭವವಾಗಿತ್ತು. ಆದರೂ ಮೂರು ದಿನಗಳ ಕಾಲ ಮುಗುಳುನಗುತ್ತಾ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದ ಕೃಷ್ಣಾನಂದ ಕಾಮತರನ್ನು 'ಪತ್ರಕರ್ತ' ಮಾತಿಗೆಳೆದಾಗ ಮನಬಿಚ್ಚಿ ಮಾತನಾಡಿದರು.

"ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತ್ಯಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿದ್ದರೂ ಇಲ್ಲಿ ರಾಜಕೀಯಕ್ಕೆ ಹೆಚ್ಚಿನ ಮಹತ್ವ ನೀಡಲಾಯಿತು. ರಾಜಕಾರಣಿಗಳು ತಾಸುಗಟ್ಟಲೇ ಮಾತನಾಡಿದರಾದರೂ ಸಾಹಿತಿಗಳಿಗೆ ದೊರೆತ ಅವಕಾಶ ಅತ್ಯಲ್ಪ" ಎಂದು ಅವರು ವಿಷಾದಿಸಿದರು.

"ಕೆಲ ಸಾಹಿತಿಗಳು ರಾಜಕೀಯದ ತಪ್ಪು ಹುಡುಕುವವರಲ್ಲೇ ತೊಡಗಿದ್ದರೆ ವಿನಃ ಸಾಹಿತ್ಯಕ್ಕೆ ತಮ್ಮ ಕೊಡುಗೆ ಏನು ಎನ್ನುವುದರತ್ತ ಅವರಿಗೆ ಗಮನವೇ ಇರಲಿಲ್ಲ" ಎಂದರು ಕೃಷ್ಣಾನಂದ ಕಾಮತ್.

ಪ್ರಾರಂಭದ ದಿನದಿಂದಲೇ ಈ ಸಾಹಿತ್ಯ ಸಮ್ಮೇಳನ ಅಸ್ತವ್ಯಸ್ತತೆಯಿಂದ ಕೂಡಿತ್ತು. ಮುಂಜಾನೆ ಪ್ರಾರಂಭವಾಗಬೇಕಾಗಿದ್ದ ಸಮ್ಮೇಳನ ಆರಂಭಗೊಂಡಿದ್ದು ಭಣಗುಟ್ಟುವ ಬಿಸಿಲಿನಲ್ಲಿ. ಸಮ್ಮೇಳನದ ಅಧ್ಯಕ್ಷರನ್ನು ತೆರೆದ ಜೀಪಿನಲ್ಲಿ ಮೆರವಣಿಗೆಯಲ್ಲಿ ಕೊಂಡೊಯ್ಯಬೇಕಾಗಿದ್ದರೂ ಜೀಪಿನ ವ್ಯವಸ್ಥೆ ಇಲ್ಲದ್ದರಿಂದ ಕಾಮತರು ಉರಿ ಬಿಸಿಲಿನಲ್ಲಿ ನಡೆದುಕೊಂಡೇ ಸಾಗಿದ್ದರು. ಮಾತು ಇದರತ್ತ ಸಾಗಿದಾಗ ಈ ಬಗ್ಗೆ ಅವರ ಮುಖದಲ್ಲಿ ನೋವಿತ್ತಾದರೂ ಅದನ್ನವರು ಹೊರಗೆ ಬಿಡಲಿಲ್ಲ.

"ಅಂದು ಮುಂಜಾನೆ ೮ ಗಂಟೆಗೆ ನಾನು ತಯಾರಾಗಿ ಕುಳಿತಿದ್ದೆ, ಆದರೆ ಮೆರವಣಿಗೆಯ ಬಗ್ಗೆ ಯಾವ ಮಾಹಿತಿಯೂ ನನಗಿರಲಿಲ್ಲ. ಕೊನೆಗೂ ಉರಿಬಿಸಿಲಿನಲ್ಲಿ ಮೆರವಣಿಗೆ ಪ್ರಾರಂಭವಾಯಿತು. ಸಂಘಟಕರು ಸಮಯಕ್ಕೆ ಹೆಚ್ಚಿನ ಮಹತ್ವ ನೀಡಬೇಕಾಗಿತ್ತು. ಅದಾಗಲಿಲ್ಲ" ಎಂದು ಕೃಷ್ಣಾನಂದ ಕಾಮತ ಹೇಳಿದರು.

ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷರು ಭಾಷಣ ಮಾಡಲಿಲ್ಲ ಎಂದು ಕೆಲವರು ಆಕ್ಷೇಪ ವ್ಯಕ್ತಪಡಿಸಿದ ಬಗ್ಗೆ ಪ್ರಶ್ನಿಸಿದಾಗ ಅವರು ಹೇಳಿದ್ದು ಹೀಗೆ:

"ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷರು ಭಾಷಣದ ಪ್ರತಿಗಳನ್ನು ಮುದ್ರಿಸಿ ಎಲ್ಲರಿಗೂ ಹಂಚುವದು ಪರಿಪಾಠ. ಆದರೆ ಇಲ್ಲಿ ನನ್ನ ಭಾಷಣದ ಪ್ರತಿ ಕೆಲವರಿಗೆ ಮಾತ್ರ ನೀಡಲಾಯಿತೇ ವಿನಃ ಎಲ್ಲರಿಗೂ ದೊರೆಯಲಿಲ್ಲ. ಸಮ್ಮೇಳನದ ಪ್ರಾರಂಭದಿಂದ ರಾಜಕಾರಣಿಗಳು ಮತ್ತಿತರರು ಮಾತನಾಡಿ ನನಗೆ ಅವಕಾಶ ದೊರೆತದ್ದು ಊಟದ ಸಮಯದಲ್ಲಿ. ಉರಿಬಿಸಿಲಿನಲ್ಲಿ ಹಸಿದ ಹೊಟ್ಟೆಗಳ ಎದುರು ನಾ ಏನು ಭಾಷಣ ಮಾಡಲಿ?" ಎಂದು ಕೃಷ್ಣಾನಂದ ಕಾಮತ ಪ್ರಶ್ನಿಸಿದರು.

"ಅಧ್ಯಕ್ಷರ ಅವಧಿಯನ್ನು ಉಳಿದವರು ಉಪಯೋಗಿಸಿದ್ದರಿಂದ ಅನಿವಾರ್ಯವಾಗಿ ನನ್ನ ಭಾಷಣ ಮೊಟಕುಗೊಳಿಸಬೇಕಾಯಿತು. ನನಗೆ ಭಾಷಣ ಮಾಡಲು ಬರದು ಎನ್ನುವುದು ಇದರರ್ಥವಲ್ಲ" ಎಂದರು ಅವರು.

"ಸಾಹಿತ್ಯ ಸಮ್ಮೇಳನದ ಆಮಂತ್ರಣ ಪತ್ರಿಕೆ ಹಲವರಿಗೆ ಸಿಗಲಿಲ್ಲ. ಜನರನ್ನು ಸಮ್ಮೇಳನದಲ್ಲಿ ತೊಡಗಿಸುವ ಪ್ರಯತ್ನ ನಡೆಯಲಿಲ್ಲ. ನನ್ನನ್ನು, ಸಮ್ಮೇಳನದ ಅಧ್ಯಕ್ಷರನ್ನಾಗಿ ಅವಿರೋಧವಾಗಿ ಆಯ್ಕೆ ಮಾಡಿದ ಬಗ್ಗೆ ನನಗೇ ಅಧಿಕೃತ ಪತ್ರವಿರಲಿಲ್ಲ" ಎಂದು ಅವರು ತಿಳಿಸಿದರು.

ಸಾಹಿತ್ಯ ಸಮ್ಮೇಳನದಲ್ಲಿ ನಡೆಯುವ ಗೋಷ್ಠಿಗಳು ಹೊಸತನ್ನು ನೀಡಬೇಕು, ಕನ್ನಡ ಸಾಹಿತ್ಯದಲ್ಲಿ ನಡೆದಿರುವ ಹೊಸ ಸಂಶೋಧನೆ– ಹೊಸ ವಿಚಾರಗಳ ಬಗ್ಗೆ ಈ ಗೋಷ್ಠಿಗಳು ಬೆಳಕು ಚೆಲ್ಲಬೇಕು. ಆದರೆ ಇಲ್ಲಿ ನಡೆದ ಎಲ್ಲ ಗೋಷ್ಠಿಗಳು ಹಳೇ ವಿಚಾರಗಳಿಗೆ ಜೋತು ಬಿದ್ದಿದ್ದರಿಂದ ಜನರನ್ನಾಕರ್ಷಿಸಲು ವಿಫಲವಾದವು ಎಂದು ಅವರು ಅಭಿಪ್ರಾಯಪಟ್ಟರು.

ಒಟ್ಟಾರೆಯಾಗಿ ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತ್ಯಕ್ಕೆ ಮೊದಲ ಮಣೆಯಾಗಬೇಕು. ಕನ್ನಡ ಸಾಹಿತ್ಯದ ಹೊಸ ವಿಚಾರಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಬೇಕು. ಸಾಹಿತ್ಯ ಸಮ್ಮೇಳನಗಳು ಕೇವಲ ಹರಕೆಗೆ ಎಂಬಂತೆ ಅಥವಾ ಯಾರದೋ ಪ್ರತಿಷ್ಠೆಗಾಗಿ ನಡೆಯದೆ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಪೂರಕವಾಗಿ ನಡೆಯಬೇಕು ಎಂಬುದು ಕೃಷ್ಣಾನಂದ ಕಾಮತರ ಅಭಿಪ್ರಾಯವಾಗಿತ್ತು.

"ನನಗೆ ವೈಯಕ್ತಿಕವಾಗಿ ಯಾರ ಮೇಲೂ ಅಸಮಾಧಾನವಿಲ್ಲ, ಲಕ್ಷಾಂತರ ರೂಪಾಯಿ ವ್ಯಯಿಸಿ ನಡೆಯುವ ಈ ಸಮ್ಮೇಳನಗಳು ಇನ್ನಷ್ಟು ಶಿಸ್ತುಬದ್ಧವಾಗಿ, ಜನರನ್ನು ತೊಡಗಿಸಿಕೊಳ್ಳುವ ಮೂಲಕ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಸಹಕಾರಿಯಾಗುವಂತೆ ನಡೆಯಬೇಕು, ಎನ್ನುವುದೇ ನನ್ನ ಆಶಯ" ಎನ್ನಲು ಕೃಷ್ಣಾನಂದ ಕಾಮತರು ಮರೆಯಲಿಲ್ಲ.

(ಕೃಪೆ : ಧ್ಯೇಯನಿಷ್ಠ ಪತ್ರಕರ್ತ 02-05-1997)



## 'ತಾಯ್ನೆಲದಲ್ಲೇ ನಿಂತ ಪ್ರತಿಭೆ' - ಕಾಮತ್

**ಲೇಖಕರು : ಸಮುದ್ರಗುಪ್ತ**

"ಅ ಆ ಬರೆಯಲು ಕಲಿತೊಡನೆ ಸಾಹಿತಿಯಾಗಲು ಸಾಧ್ಯವೇ?" ಅಮೇರಿಕಾದಲ್ಲಿ ಡಾಕ್ಟರೇಟ್ ಪಡೆದು, ಭಾರತಕ್ಕೆ ಮರಳಿಬಂದು ವಿವಾಹಿತರಾಗಿ, ಅಮೇರಿಕಾ ನೋಡದ ಪತ್ನಿಗೆ ಅಲ್ಲಿಯ ಅನುಭವಗಳನ್ನೆಲ್ಲಾ ರಂಗು ರಂಗಾಗಿ ವರ್ಣಿಸುತ್ತಿದ್ದ ಪತಿಯನ್ನು ಕಾಡುತ್ತಿದ್ದ ಪ್ರಶ್ನೆ, ಗಂಡ ವರ್ಣಿಸುತ್ತಿದ್ದ ಅಮೇರಿಕಾದ ವರ್ಣನೆಯನ್ನು ಕನ್ನಡದಲ್ಲಿ ಬರೆಯಬೇಕೆಂಬುದು ಪತ್ನಿಯ ಒತ್ತಾಯ. ನಿಮ್ಮ ಹತ್ತಿರ ಅಪೂರ್ವ ಅನುಭವಗಳಿವೆ ಬರೆಯುವ ಶೈಲಿಯಿದೆ. ಬರೀರೀ"! ಎಂದು ಕೈಹಿಡಿದವಳು ಪಟ್ಟುಹಿಡಿದಾಗ ಉಪಾಯವಿಲ್ಲದೆ ಪತಿ ವಿರಾಮದ ವೇಳೆಯಲ್ಲಿ ಅಮೆರಿಕಾದ ಅನುಭವಗಳನ್ನು ಬರೆಯಲಾರಂಭಿಸಿದ.

ಬರೆದದ್ದನ್ನು ತೋರಿಸಿದಾಗ "ತೀರ ಸಂಕ್ಷಿಪ್ತ ಬರಹ. ತಂತಿ ಸಮಾಚಾರದ ಭಾಷೆಯ ಬರವಣಿಗೆ ಸಾಹಿತ್ಯವಾಗಲಾರದು" ಎಂದು ಪತ್ನಿಯ ಆಕ್ಷೇಪ. "ಸ್ವಲ್ಪದರಲ್ಲಿ ತಿಳಿಸುವುದು, ವಿಜ್ಞಾನದ ರೀತಿ" ಎಂದು ಪತಿ ಪಟ್ಟುಹಿಡಿದ ಪರಿಣಾಮವಾಗಿ ಬರವಣಿಗೆ ಕೆಲಕಾಲ ಸ್ಥಗಿತಗೊಂಡಿತು. ಕೊನೆಗೆ ಅರ್ಧಾಂಗಿಯೇ ಸೋತು ಬರೆದದ್ದನ್ನು ಒಪ್ಪಿಕೊಂಡಾಗ ಬರವಣಿಗೆ ಮುಂದುವರೆಯಿತು. ಹಸ್ತಪ್ರತಿ ಸಿದ್ಧವಾದಾಗ ಅದನ್ನು ಧಾರವಾಡದ ಮನೋಹರ ಗ್ರಂಥಮಾಲೆಗೆ ಕಳುಹಿಸಿಯೂ ಆಯಿತು. ಒಂದೇ ರಾತ್ರಿಯಲ್ಲಿ ಓದಿ ಮುಗಿಸಿದ ಜಿ. ಬಿ. ಜೋಶಿ ಅವರು ಅದನ್ನು ಪ್ರಕಟಿಸಿಯೂಬಿಟ್ಟರು.

"ರಾತ್ರಿ ಬೆಳಗಾಗುವುದರೊಳಗೆ ನಾನೊಬ್ಬ ಸಾಹಿತಿಯಾಗಿಬಿಟ್ಟಿದ್ದೆ". ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಬರಹಗಾರ ಎನಿಸಿಕೊಂಡಿರುವ ಡಾ. ಕೃಷ್ಣಾನಂದ ಕಾಮತ್ ತಮ್ಮ ಪ್ರಥಮ ಕೃತಿ 'ನಾನೂ ಅಮೇರಿಕೆಗೆ ಹೋಗಿದ್ದೆ'. ರೂಪುಗೊಂಡ ಬಗ್ಗೆ ವಿವರಿಸುವಾಗ, ಸಾಹಿತಿಯಾಗಿ ಅವರನ್ನು ರೂಪಿಸಿದ ಬಾಳಸಂಗಾತಿ ಜ್ಯೋತ್ಸ್ನಾ ಕಾಮತ್ ನಗುತ್ತಾ ತಮ್ಮ ಸೊಲ್ಲುಗಳನ್ನು ಸೇರಿಸುತ್ತಾರೆ. ಕನ್ನಡ ಸಾಹಿತ್ಯಕ್ಕೆ ಈ ದಂಪತಿಗಳು ನೀಡಿದ ಕೊಡುಗೆ ವಿಶಿಷ್ಟ ಬಗೆಯದು ಮಾತ್ರವಲ್ಲ ಅಷ್ಟೇ ವೈವಿಧ್ಯಮಯ. ಪ್ರವಾಸ ಕಥನ, ಕಾದಂಬರಿ, ವೈಜ್ಞಾನಿಕ ಬರವಣಿಗೆ ಪತ್ರ ಸಾಹಿತ್ಯ, ಚಿತ್ರಕಲೆ ಹೀಗೆ ಹಲವು ಬಗೆಯಲ್ಲಿ ಕೃಷ್ಣಾನಂದ ಕಾಮತರು ಅನೇಕ ಕೃತಿಗಳನ್ನು ಕನ್ನಡದಲ್ಲಿ ಬರೆದರೆ, ಪತ್ನಿ ಜ್ಯೋತ್ಸ್ನಾ ಕಾಮತ್ ಇತಿಹಾಸ ಪ್ರಬಂಧ, ಶಿಕ್ಷಣ, ಹಾಸ್ಯ– ಹೀಗೆ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ಪ್ರಶಸ್ತಿ– ಪುರಸ್ಕಾರ ಪಡೆಯುವುದರಲ್ಲೂ ದಂಪತಿಗಳ ನಡುವೆ ಸ್ಪರ್ಧೆ ನಡೆದಿದೆ ಎನ್ನಬಹುದು.

"ಎಳನೆಯ ವಯಸ್ಸಿನಲ್ಲೇ ತಾಯಿಯನ್ನು ಕಳೆದುಕೊಂಡ ನನ್ನ ಬೌದ್ಧಿಕ ಜೀವನವನ್ನು ರೂಪಿಸುವಲ್ಲಿ ಮೂವರು ಪುರುಷರು ಕಾರಣರಾಗಿದ್ದಾರೆ. ತಂದೆ, ವಿದ್ಯಾಗುರುಗಳು ಹಾಗೂ ಪತಿ", ತಮ್ಮ ಬಾಳಿನ ಅಭ್ಯುದಯದ ರೂಪು-ರೇಷಗಳನ್ನು ವಿಶ್ಲೇಷಿಸುತ್ತಾ ಡಾ. ಜ್ಯೋತ್ಸ್ನಾ ಕಾಮತ್ ಹೇಳುವ ಮಾತು.

ಜ್ಯೋತ್ಸ್ನಾ ಅವರ ತಂದೆ ಬಿರ್ಡೆ ಗಣೇಶರಾಯರು. ಪೋಸ್ಟ್ ಮಾಸ್ಟರ್ ಆಗಿ ಚಿಕ್ಕ ದೊಡ್ಡ ಊರುಗಳಿಗೆ ವರ್ಗವಾಗುತ್ತ ಸೇವೆಸಲ್ಲಿಸಿದವರು. ವಾಚನಾಸಕ್ತಿಯ ಬಗ್ಗೆ ವಿಶೇಷ ಒಲವು ಹೊಂದಿದ್ದ ಗಣೇಶರಾಯರು, ತಮ್ಮ ಸಣ್ಣ ಸಂಬಳದಲ್ಲೂ ಕೊಂಡ ಪುಸ್ತಕಗಳಿಗೆ ಲೆಕ್ಕವಿಲ್ಲ. ಮನೋಹರ ಗ್ರಂಥಮಾಲೆಯ ಪ್ರಾರಂಭದ ವರ್ಷಗಳಿಂದೂ ಚಂದಾದಾರರು. ವರ್ಗ ಆದಲ್ಲಿ ಮೊದಲು ಊರಿನಲ್ಲಿ ವಾಚನಾಲಯಗಳ ಸದಸ್ಯರಾಗುತ್ತಿದ್ದರು. ಕಾರವಾರದ ಗ್ರಂಥಾಲಯದಿಂದ ಅಂಚೆಯಲ್ಲಿ ಪುಸ್ತಕ ತರಿಸಿ ಓದುತ್ತಿದ್ದ ಬಿರ್ಡೆಯವರ ಚಟದಲ್ಲಿ ಭಾಗಿಯಾದವರಲ್ಲಿ ಗೌರೀಶ ಕಾಯ್ಕಿಣಿ ಅವರೂ ಒಬ್ಬರು.

"ತಂದೆ ತಾವು ಮಾತ್ರ ಓದಿದ್ದಲ್ಲ. ತಮ್ಮ ಮೂರು ಮಕ್ಕಳಿಗೂ ವಾಚನಾಭಿರುಚಿ ಬೆಳೆಯುವಂತೆ ನೋಡಿಕೊಂಡರು. 'ಕಾರಂತರ ಬಾಲಪ್ರಪಂಚ' ಸಂಪುಟಗಳನ್ನು ನೆಲದಮೇಲೆ ಹರಡಿ, ಲಾಂದ್ರದ ಬೆಳಕಿನಲ್ಲಿ ಬಾಲ್ಯದಲ್ಲಿ ಓದುತ್ತಿದ್ದ ನೆನಪು ಬಾಳಿನುದ್ದಕ್ಕೂ ಮಾಸಲಾರದ ಚಿತ್ರ" ಎಳಮೆಯ ದಿನಗಳನ್ನು ಕಣ್ಣಿಗೆ ಕಟ್ಟುವಂತೆ ಜ್ಯೋತ್ಸ್ನಾ ವರ್ಣಿಬಸಬಲ್ಲರು. ನಾಲ್ಕೂರಿನಲ್ಲಿ ಪ್ರಾಥಮಿಕ ಶಿಕ್ಷಣ ಪಡೆದ ಜ್ಯೋತ್ಸ್ನಾ ಗೋಕರ್ಣದ ಭದ್ರಕಾಳಿ ಹೈಸ್ಕೂಲ್ ಮುಗಿಸಿದ ಬಳಿಕ ಸೇರಿದ್ದು ಕುಮಟಾದ ಕೆನರಾ ಕಾಲೇಜ್.

**ಅಧ್ಯಯನ ಆಸಕ್ತಿ**

"ಕಾಲೇಜ್ ದಿನಗಳಲ್ಲಿ ನನ್ನ ಓದಿನ ಚಟ ಇನ್ನೂ ಜೋರಾಯ್ತು! ಆಸ್ಕರ್ ವಾಯ್ಲ್ಡ್, ವೆಲ್ಸ್, ಶಾ., ಹೆಮಿಂಗ್‌ವೇ, ಠಾಗೂರ್, ಜೇನ್ ಆಸ್ಟಿನ್, ಪರ್ಲ್ ಬಕ್ ಮುಂತಾದವರ ಕೃತಿಗಳನ್ನು ಆಗಲೇ ಓದಿದ್ದು. ಕನ್ನಡ ಪುಸ್ತಕ-ಪತ್ರಿಕೆ ಯಾವುದು ಕೈಗೆ ಸಿಕ್ಕರೂ ಓದಿ ಮುಗಿಸುತ್ತಿದ್ದೆ. ಓದುಬರಹಕ್ಕೆ ಇರುವ ನಂಟನ್ನು ಆಗ ಅರಿತುಕೊಂಡಿರಲಿಲ್ಲ. ಇತಿಹಾಸ ಪ್ರೀತಿಯ ವಿಷಯವಾಗಿತ್ತು. ಜೊತೆಗೆ ಸಂಸ್ಕೃತಕ್ಕೆ ಆಗ ಡಾ. ಕೆ. ಕೃಷ್ಣಮೂರ್ತಿ ಅವರಂಥ ಘನ ವಿದ್ವಾಂಸರೂ, ಪ್ರೊ. ಲಿಂಗೇಶ್ ಶರ್ಮರಂಥ ಒಳ್ಳೆಯ ಉಪನ್ಯಾಸಕರು ಸಿಕ್ಕಿದ್ದರು. ನಂತರದ ನನ್ನ ಸಂಶೋಧನೆಗಳಿಗೆ ಅಷ್ಟೇ ಏಕೆ ಈಗಿನ ದಿನಗಳಲ್ಲೂ ಕೂಡ ಅಂದು ನಾನು ಪಡೆದ ಸಂಸ್ಕೃತ ಭಾಷೆಯ ಜ್ಞಾನವೇ ಭದ್ರವಾದ ನೆಲಗಟ್ಟನ್ನು ಒದಗಿಸಿದ್ದು ಎಂಬುದನ್ನು ಅಲ್ಲಗಳೆಯುವಂತಿಲ್ಲ" ಎನ್ನುತ್ತಾರೆ.

ಆಟ, ನಾಟಕ, ಡಿಬೇಟ್‌ಗಳಲ್ಲಿ ಭಾಗವಹಿಸುತ್ತಿದ್ದ ಜ್ಯೋತ್ಸ್ನಾ ಕೆನರಾ ಕಾಲೇಜಿಗೆ ಮೊದಲಿಗರಾಗಿ ಬಿ. ಎ. (ಆನರ್ಸ್) ಮುಗಿಸಿದರು. ಎಂ. ಎ.ಗೆ ಪ್ರವೇಶ ಹಾಗೂ ಶಿಷ್ಯವೇತನ ದೊರೆಯುವ ಸಾಧ್ಯತೆ ಇದ್ದರೂ ಆರ್ಥಿಕ ಸ್ವಾವಲಂಬನೆ ಅಂದಿನ ಅವರ ತುರ್ತು ಅಗತ್ಯ ಆಗಿತ್ತು, ಅದೇ ಸಮಯದಲ್ಲಿ ತಂದೆಯವರಿಗೆ ಧಾರವಾಡಕ್ಕೆ ವರ್ಗವಾದಾಗ ಜ್ಯೋತ್ಸ್ನಾ ಬಿ.ಎಡ್. ಪಠ್ಯಕ್ರಮವನ್ನು ಒಳಗೊಂಡ ಜೀವನ ಶಿಕ್ಷಣ ತರಬೇತಿಯ ಪದವಿಗೆ ಸೇರಿದರು. ಇಲ್ಲಿ ಟ್ರೈನಿಂಗ್ ಪಡೆದ ಬಳಿಕ ಪ್ರಾಥಮಿಕ ಶಿಕ್ಷಕಿಯರ ಟ್ರೈನಿಂಗ್ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಗೆ ಸೇರಿದರು.

"ಟ್ರೈನಿಂಗ್ ಕಾಲೇಜಿನಲ್ಲಿ ಕಲಿಸುತ್ತಲೇ ಎಂ.ಎ. ಪದವಿ ಪಡೆಯಲು ಹವಣಿಸಿದೆ. ಕರ್ನಾಟಕ ಇತಿಹಾಸ ಕ್ಷೇತ್ರದಲ್ಲಿ ಹೆಸರು ಪಡೆದ ಡಾ. ಬಿ. ಎ. ಸಾಲೆತ್ತೂರ್. ಡಾ. ಪಾಂಡುರಂಗರಾವ್ ದೇಸಾಯಿ ಹಾಗೂ ಡಾ. ಜಿ. ಎಸ್. ದೀಕ್ಷಿತ್ ಅವರನ್ನು ಪ್ರಾಧ್ಯಾಪಕರನ್ನಾಗಿ ಪಡೆಯುವ ಭಾಗ್ಯ ನನ್ನದಾಯಿತು. ಎಂ.ಎ.ಯನ್ನು ಮೊದಲಿಗಳಾಗಿ ಮುಗಿಸಿದೆ" ಎನ್ನುವ ಜ್ಯೋತ್ಸ್ನಾ ಕಾಮತ್ ಮೂರುವರ್ಷಗಳ ಕಾಲ ಶಿಕ್ಷಕಿಯಾಗಿ ದುಡಿದರು. ಅನಂತರ ಕರ್ನಾಟಕ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದಲ್ಲಿ ಪ್ರೊ. ಜಿ ಎಸ್. ದೀಕ್ಷಿತರಿಗೆ ಸಂಶೋಧನಾ ಸಹಾಯಕಿಯಾಗಿ ಸೇರಿಕೊಂಡರು.

ಜ್ಯೋತ್ಸ್ನಾ ಅವರಿಗೆ ಭದ್ರವಾದ ನೌಕರಿಯ ಅಗತ್ಯವಿದೆ ಎಂಬುದನ್ನು ಮನಗಂಡ ಪ್ರೊ. ದೀಕ್ಷಿತರು ಆಕಾಶವಾಣಿಯ ಕಾರ್ಯನಿರ್ವಾಹಕಿ ಆಗಿ ಜ್ಯೋತ್ಸ್ನಾ ನೇಮಕಗೊಳ್ಳಲು ಪ್ರೋತ್ಸಾಹಿಸಿ, ಯು.ಪಿ.ಎಸ್.ಸಿ. ಪರೀಕ್ಷೆ ಕೂಡುವಂತೆ ನೋಡಿಕೊಂಡರು. ನಂತರ ಆಕಾಶವಾಣಿ ಸೇವೆ ಪ್ರಾರಂಭವಾಯಿತು. (1964)

**ವಿವಾಹಯೋಗ**

ಈ ಎಲ್ಲಾ ಜಂಜಾಟಗಳ ನಡುವೆ ಜ್ಯೋತ್ಸ್ನಾ ಅವರಿಗೆ ವಿವಾಹದ ವಯಸ್ಸು ಮೀರಿತ್ತು. "ಆರ್ಥಿಕ ಸ್ವಾವಲಂಬನೆ. ವೈಚಾರಿಕ ಸ್ವಾತಂತ್ರ್ಯವೆಂಬ ಪೊಳ್ಳು ಅಭಿಮಾನದ ಜೊತೆಗೆ, ಸ್ವಭಾವ ವೈಚಿತ್ರ್ಯ ನನ್ನ ವೈವಾಹಿಕ ಜೀವನಕ್ಕೆ ಅಡ್ಡಿ ತರಬಹುದೆಂಬ ಆತಂಕ ನನಗಿತ್ತು. ಶೀಘ್ರಕೋಪ, ಅಸಹನೆ, ಅವ್ಯವಹಾರಿಕತೆಗಳು ನನ್ನ ದೌರ್ಬಲ್ಯಗಳು. ಜೊತೆಗೆ ಬಾಳಸಂಗಾತಿ ಆಗುವಾತ ಧೀಮಂತ ವ್ಯಕ್ತಿಯಾಗಿರಬೇಕು ಎಂಬ ಕನಸು ಬೇರೆ, ನನ್ನ ಸ್ವಭಾವಕ್ಕೆ ಹೊಂದಿಕೊಳ್ಳುವಂಥ ವ್ಯಕ್ತಿ ಸಿಕ್ಕರೆ ಮದುವೆ ಆಗುವುದು ಇಲ್ಲದಿದ್ದರೆ ಕನ್ಯೆಯಾಗಿಯೇ ಉಳಿದುಬಿಡುವುದು ಎಂಬ ನಿರ್ಧಾರಕ್ಕೆ ಬಂದಿದ್ದೆ. ಈಗ ಆಫೀಸರ್ ಬೇರೆ ಆಗಿ ವಿವಾಹದ ಅವಕಾಶ ಇನ್ನೂ ದೂರವಾಯಿತೆಂದು ಕೊಂಡಿದ್ದೆ. ಆದರೆ ವಿವಾಹ ಯೋಗವೆಂಬುದು ವಿಧಿಯ ಕೈವಾಡ ಎಂದು ಒಮ್ಮೊಮ್ಮೆ ಅನ್ನಿಸುವುದುಂಟು. ತಡವಾಗಿಯಾದರೂ ಅತ್ಯಂತ

ಸುಲಭವಾಗಿ ನನ್ನ ಜೀವನದಲ್ಲಿ ಅದು ಘಟಿಸಿತು. ಬಹುಮುಖ ಪ್ರತಿಭೆಯ ವ್ಯಕ್ತಿ ನನ್ನ ಕೈ ಹಿಡಿದ ಪತಿ" ಎಂದು ಕೃಷ್ಣಾನಂದ ಕಾಮತರ ಬಗ್ಗೆ ಹಾಗೂ ವಿವಾಹದ ದಿನಗಳನ್ನು ನೆನಪಿಸಿಕೊಳ್ಳುತ್ತ ನಗುತ್ತಾ ನುಡಿಯುತ್ತಾರೆ ಜ್ಯೋತ್ನಾ.

"ಸ್ತ್ರೀ ಸೌಂದರ್ಯದ ಶೋಧದಲ್ಲಿ ಹೊರಟ ಕೃಷ್ಣಾನಂದ ಕಾಮತರಿಗೆ, ಶಾಲಾ ಕಾಲೇಜು ದಿನಗಳಿಂದಲೂ ಕಾವ್ಯದ ತುಣುಕುಗಳ ವಾಚನದಿಂದ ಪ್ರಭಾವಿತರಾಗಿ ಅಪೂರ್ವ ಸುಂದರಿಯನ್ನೇ ಪತ್ನಿಯಾಗಿ ಹೊಂದುವ ಕನಸು. ಆ ಯತ್ನದಲ್ಲಿ ಅವರು ಯೂರೋಪ್ ಅಮೆರಿಕಾಗಳಲ್ಲದೆ ಕಾಶ್ಮೀರ, ಬಂಗಾಲ, ರಾಜಸ್ಥಾನದಲ್ಲೂ ಶೋಧನೆ ನಡೆಸಿದ್ದರು. ಆದರೆ ವಿಧಿ ಅವರಿಗೆ ಕಟ್ಟಿಟ್ಟ 'ಕೂಸು' ಅವರ ಊರಿಗೆ ಹನ್ನೆರಡೇ ಮೈಲಿ ದೂರದಲ್ಲಿತ್ತು" ವಧು ಅನ್ವೇಷಣಾ ಕಾರ್ಯದಲ್ಲಿ ಬಂದ ಕಾಮತರನ್ನು ಕಂಡ ಮೊದಲ ದಿನಗಳನ್ನು ಜ್ಯೋತ್ನಾ ವರ್ಣಿಸುವ ಬಗೆ ಇದು.

ಹುಟ್ಟಿನಿಂದ ಲಕ್ಷ್ಮೀಪುತ್ರನೆನಿಸಿಕೊಂಡರೂ, ಅನಂತರ ಸರಸ್ವತಿಯ ದತ್ತಕ ಪುತ್ರನಾಗಿ, ಕನ್ನಡ ಸಾಹಿತ್ಯ ಲೋಕದಲ್ಲಿ ವಿಶಿಷ್ಟ ಸ್ಥಾನ–ಮಾನ ಪಡೆದ ಕೃಷ್ಣಾನಂದ ಕಾಮತರು ತಾವು ಕಳೆದ, ಅರ್ಧ ಶತಮಾನದ ಹೋರಾಟದ ಬದುಕನ್ನು ನಿರೂಪಿಸುವ ರೀತಿಯೇ ಬೇರೆ.

"ಹೊನ್ನಾವರದಲ್ಲಿ ಹುಟ್ಟಿ ಬೆಳೆದ ನಾನು ಅಲ್ಲಿಯ ಕಸಬಾ ಗಂಡುಮಕ್ಕಳ ಶಾಲೆ ಸೇರಿದ್ದು ಏಳು ವರ್ಷ ತುಂಬಿದ ಬಳಿಕವೇ. ಆಗ ನಿಯಮವೇ ಹಾಗಿತ್ತು. ಮಾಧ್ಯಮಿಕ ಶಾಲಾ ಶಿಕ್ಷಣಕ್ಕಾಗಿ 'ನ್ಯೂ ಇಂಗ್ಲಿಷ್ ಸ್ಕೂಲ್' ಸೇರಿದ್ದಾಯ್ತು. ಅಲ್ಲಿ ಪ್ರತಿ ತಿಂಗಳಿಗೊಬ್ಬರು ಹೊಸ ಶಿಕ್ಷಕರು ಬಂದು ಸೇರುತ್ತಿದ್ದರಂತೆ. ರಾಜೀನಾಮೆ ಕೊಟ್ಟು ಹೋಗಿಬಿಡುತ್ತಿದ್ದರು. ಮುಂದೆ ಹೈಕೋರ್ಟ್ ನ್ಯಾಯಾಧೀಶರಾದ ಜಿ. ಎನ್. ಸಭಾಹಿತ, ಕವಿ ವಿ. ಜಿ. ಭಟ್ಟ, ಜಾನಪದ ಸಂಶೋಧಕ ಡಾ. ಎಲ್. ಆರ್. ಹೆಗ್ಡೆ ಮುಂತಾದವರು, ಮೊದಲಲ್ಲಿ ಮೇಷ್ಟ್ರು ಆಗಿದ್ದು ನಮ್ಮ ಶಾಲೆಯಲ್ಲೇ! ಮುಂದೆ ಹೆಚ್ಚಿನ ಶಿಕ್ಷಣಕ್ಕೆ ಕೆನರಾ ಕಾಲೇಜ್ ಸೇರಿದಾಗ ಪ್ರೊ. ಗೋಪಾಲಕೃಷ್ಣ ಅಡಿಗ, ಡಾ. ಜಿ. ಎಸ್. ಆಮೂರರಂಥ ಮೇಧಾವಿ ಉಪನ್ಯಾಸಕರಿದ್ದರು. ಅಲ್ಲಿಂದ ಮುಂದೆ ಧಾರವಾಡದ ಕರ್ನಾಟಕ ಕಾಲೇಜ್ ಸೇರಿ ಪದವಿ ಹಾಗೂ ಅಲ್ಲಿಯೇ ವಿಶ್ವವಿದ್ಯಾಲಯದಲ್ಲಿ ಎಂ. ಎಸ್ಸಿ. ಪಡೆದೆ"

ಎರಡು ವರ್ಷಕಾಲ ಕರ್ನಾಟಕ ಕಾಲೇಜಿನಲ್ಲಿ ಶಿಕ್ಷಕರಾಗಿದ್ದು. ಆಮೇಲೆ ಶಿಷ್ಯವೇತನ ಪಡೆದು ನ್ಯೂಯಾರ್ಕ್ ವಿಶ್ವವಿದ್ಯಾಲಯದಲ್ಲಿ ಪಿ.ಎಚ್‌ಡಿ. ಪದವಿ ಪಡೆದರು. ಅದೇ ಅವಧಿಯಲ್ಲಿ ಅಮೆರಿಕ ಸರ್ಕಾರದ ಕೃಷಿ ಖಾತೆ ಏರ್ಪಡಿಸಿದ್ದ ಅರಣ್ಯ ವೀಕ್ಷಣೆ ತರಬೇತಿಯನ್ನು ಪಡೆದರು.

"ಕೈತುಂಬ ಸಂಬಳ ತರುವ ವೃತ್ತಿಯೊಂದನ್ನು ಹಿಡಿದು ಅಲ್ಲೇ ನೆಲಸಬಹುದಾಗಿತ್ತು. ಆದರೆ ನಾನು ಹುಟ್ಟಿ ಬೆಳೆದ ನೆಲ–ಜಲ ಕೈಬೀಸಿ ಕರೆಯುತ್ತಿತ್ತು. ಬೇರೊಂದು ದೇಶದಲ್ಲಿ ಪರಕೀಯನಾಗಿ ಬಾಳಲು ಮನಸ್ಸು ಬಾರದೇ ಸ್ವದೇಶಕ್ಕೆ ಮರಳಿದೆ. ಅರಣ್ಯ ಶಾಸ್ತ್ರದ ಡಾಕ್ಟರೇಟ್ ವಿಶೇಷ ತರಬೇತಿಗಳ ಪ್ರಯೋಜನ ನನ್ನ ನಾಡಿಗೆ ಜಿಲ್ಲೆಗೆ ಆಗಲಿ ಎಂಬುದು ನನ್ನ ಆಗಿನ ಕನಸಾಗಿತ್ತು"–ತಮ್ಮ ಧ್ಯೇಯ ಉದ್ದೇಶಗಳು ಬಗ್ಗೆ ಕೃಷ್ಣಾನಂದ ಕಾಮತರು ನೀಡುವ ವಿವರಣೆ.

ಭಾರತಕ್ಕೆ ಮರಳಿ ಕಾಮತರು ವಧು ಅನ್ವೇಷಣಾಕಾರ್ಯ ಕೈಗೊಂಡಾಗ ಸಿಕ್ಕವರು ಜ್ಯೋತ್ನಾ. ಈ ಪ್ರೇಮಿಗಳ ಪ್ರೇಮದ ಫಲವೇ ಕನ್ನಡ ಸಾಹಿತ್ಯಕ್ಕೆ ದೊರೆತ ಅಪೂರ್ವ ಕೃತಿ ಮನೋಹರ ಗ್ರಂಥ ಮಾಲೆ ಪ್ರಕಟಿಸಿದ 'ಪ್ರೇಯಸಿಗೆ ಪತ್ರಗಳು'.

"ಜೊತೆಯಲ್ಲಿದ್ದಾಗ ಮಿತ ಭಾಷಿ ಆಗಿರುತ್ತಿದ್ದ ಕಾಮತರು. ಪತ್ರಗಳಲ್ಲಿ ತುಂಬ ವಾಚಾಳಿ. ಪ್ರೇಮಗೀತ ಸಖೀಗೀತಗಳನ್ನು ಬರೆದ ಕವಿಗಳು ಕನ್ನಡದಲ್ಲಿ ಕಡಿಮೆಯೇನಿಲ್ಲ ಆದರೆ ದಶಲಕ್ಷಗಟ್ಟಲೆ ಪತ್ರ ಬರೆಯಲು ಪತ್ನಿಯಲ್ಲಿ ಪ್ರೇಮಿಯನ್ನು ಕಲ್ಪಿಸಿಕೊಂಡ ಕಾಮತ್ ಅಂಥವರು ಇರಲಿಕ್ಕಿಲ್ಲ" ಎನ್ನುತ್ತಾರೆ ಜ್ಯೋತ್ನಾ ಕಾಮತ್. ಹಲವು ವರ್ಷಗಳ ನಂತರ ಭೇಟಿಯಾದ ಆಪ್ತರಲ್ಲಿ ಕೆಲವರು ಈಗಲೂ ನಿನ್ನ ಗಂಡ ಹಿಂದಿನ ತೀವ್ರತೆಯಿಂದಲೇ ಪತ್ರ ಬರೆಯುತ್ತಾರೆಯೇ? ಎಂದು ಪ್ರಶ್ನಿಸುತ್ತಾರಂತೆ.

ಹಲವಾರು ಕನಸುಗಳನ್ನು ಕಟ್ಟಿಕೊಂಡು ಭಾರತಕ್ಕೆ ಮರಳಿ ಬಂದಿದ್ದ ಕೃಷ್ಣಾನಂದ ಕಾಮತರಿಗೆ ಎಲ್ಲೆಡೆ ನಿರಾಶೆ.

"ಶೇಕಡಾ ೮೦ ರಷ್ಟು ಅರಣ್ಯವಿದ್ದ ಉತ್ತರ ಕನ್ನಡ ಜಿಲ್ಲೆಯಲ್ಲಿ ನನ್ನ ಪರಿಣತಿ ಬಳಸಲಾಗಲಿಲ್ಲ. ಆದ್ದರಿಂದ ಭಾರತ ಸರಕಾರ ನನ್ನ ಸೇವೆಯನ್ನು ಕಾಡೇ ಇಲ್ಲದ ಮರುಭೂಮಿಯ ರಾಜಸ್ಥಾನಕ್ಕೆ ಎರವಲು ಕೊಟ್ಟಿತು. ಉದಯ್‌ಪುರ ಕೃಷಿ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಮೂರು ವರ್ಷ ಪಾಠ ಹೇಳಿದರೂ, ಸೇವೆ ಪಡೆದ ಸಂಸ್ಥೆಯು ನನ್ನನ್ನು ಸಿಬ್ಬಂದಿ ವರ್ಗದಲ್ಲಿ ಸೇರಿಸಿಕೊಳ್ಳಲು ಒಪ್ಪದಿದ್ದದ್ದರಿಂದ ಕಬ್ಬಿನ ಕೀಟ ನಿಯಂತ್ರಣ ಕೈಗೊಂಡಿದ್ದ ಕಾಮನ್ ವೆಲ್ತ್ ಸಂಸ್ಥೆ ನಡೆಸುತ್ತಿದ್ದ ಪಶ್ಚಿಮ ಬಂಗಾಲದ ಇತಿಹಾಸ ಪ್ರಸಿದ್ಧ ಪ್ಲಾಸಿಗೆ ಧಾವಿಸಿದೆ. ಅಲ್ಲಿ ಆಗಲೇ ರಕ್ತಪಾತದಲ್ಲಿ ತೊಡಗಿದ್ದ ನಕ್ಸಲೀಯರಿಂದ ಸಂರಕ್ಷಿಸಿಕೊಳ್ಳಲು ಎರಡೇ ವರ್ಷಗಳಲ್ಲಿ ಕಂಬಿ ಕೀಳಬೇಕಾಯಿತು. ನೌಕರಿ ಸಿಗದಿದ್ದರೂ ಶಿಕ್ಷಣ ಸಂಶೋಧನೆಗಳ ಸಾಮೀಪ್ಯವಿರಲಿ ಎಂದು ಬೆಂಗಳೂರಿನ ಮಲ್ಲೇಶ್ವರಂನಲ್ಲಿ ವೈಜ್ಞಾನಿಕ ಛಾಯಾಗ್ರಹಣ ಲ್ಯಾಬೋರೇಟರಿ ಪ್ರಾರಂಭಿಸಿದೆ".

ಹೀಗೆ ಹೊಸ ಉದ್ಯೋಗ ಪ್ರಾರಂಭಿಸಿದ ಕಾಮತರಿಗೆ ಆ ವಿಷಯದಲ್ಲಿ ಪೂರ್ವ ತರಬೇತಿ ಏನೂ ಇರಲಿಲ್ಲ. ಸ್ವಾಧ್ಯಾಯದಲ್ಲಿ ಅಚಲ ವಿಶ್ವಾಸ ಹೊಂದಿದ ಅವರು ಹೊಸ ಉದ್ಯೋಗದಲ್ಲೂ ಸ್ವಯಂ ಪರಿಣತಿ ಪಡೆದಿರುವರು. ಕಳೆದ ಕಾಲು ಶತಮಾನದಲ್ಲಿ ರಾಷ್ಟ್ರೀಯ, ಅಂತಾರಾಷ್ಟ್ರೀಯ ಸ್ನಾತಕೋತ್ತರ ಸಂಶೋಧನಾ ಸಂಸ್ಥೆಗಳ ಪ್ರಾಧ್ಯಾಪಕರಿಗೆ, ವಿದ್ಯಾರ್ಥಿಗಳಿಗೆ ವೈಜ್ಞಾನಿಕ ಛಾಯಾಗ್ರಹಣದ ನೆರವು ನೀಡಿದ್ದಾರೆ. ಬೆಂಗಳೂರಿನಲ್ಲಿರುವ 'ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್', 'ನಿಮ್ಹಾನ್ಸ್', 'ನ್ಯಾಷನಲ್ ಡೈರಿ ರಿಸರ್ಚ್ ಲ್ಯಾಬ್', ಹಾರ್ಟಿಕಲ್ಚರಲ್ ಇನ್‌ಸ್ಟಿಟೂಟ್ ಆಫ್ ಇಂಡಿಯಾ' ಮುಂತಾದ ವಿವಿಧ ಸಂಸ್ಥೆಗಳಿಗೆ ವಿವಿಧ ಬಗೆಯ ವೈಜ್ಞಾನಿಕ ಛಾಯಾಗ್ರಹಣ ಕೈಕೊಂಡು ಬೆನ್ನು ತಟ್ಟಿಸಿಕೊಂಡಿದ್ದಾರೆ.

**ಸಾಹಿತ್ಯ ಸಂಪರ್ಕ**

ಹಲವಾರು ಆಕಾಶವಾಣಿ ನಿಲಯಗಳಲ್ಲಿ ಕಾರ್ಯ ನಿರ್ವಹಿಸಿದ ಜ್ಯೋತ್ಸ್ನಾ ಎಂದೂ ಸಾಹಿತ್ಯದ ಸಂಪರ್ಕದಿಂದ ದೂರವಾಗಲಿಲ್ಲ.

"ಕಲ್ಕತ್ತಾದಲ್ಲಿ ಸುಮಾರು ಮೂರು ವರ್ಷಗಳ ಕಾಲ ವಾಸ್ತವ್ಯ ಮಾಡಿದ್ದರ ಫಲವಾಗಿ ಬಂಗಾಲಿ ಸಾಹಿತ್ಯದ, ರಂಗದ, ಭಾಷೆಯ ನಿಕಟ ಪರಿಚಯ ಒದಗಿದವು. ಚರಿತ್ರೆ, ಸಂಗೀತ, ನಾಟಕ, ಸಾಹಿತ್ಯ ಕ್ಷೇತ್ರಗಳ ಪ್ರಚಲಿತ ಮೇಧಾವಿಗಳನ್ನು ಭೇಟಿ ಮಾಡುವಂತಾಯಿತು" ಎನ್ನುವ ಜ್ಯೋತ್ಸ್ನಾ ಕಾಮತ್ ಆಕಾಶವಾಣಿ ವೃತ್ತಿಯು ನನಗೆ ನೆಮ್ಮದಿ, ಹುಮ್ಮಸ್ಸು ಹಾಗೂ ಜೀವಕಳೆ ತುಂಬಲು ಸಹಕಾರಿಯಾಯಿತು ಎನ್ನುತ್ತಾರೆ.

ಮೈಸೂರು ಆಕಾಶವಾಣಿಯಲ್ಲಿ ಕೆಲಸ ಮಾಡಿದ ದಿನಗಳು ಜ್ಯೋತ್ಸ್ನಾ ಅವರ ಬಾಳಿನಲ್ಲಿ ಒಂದು ಅಪೂರ್ವ ಅಧ್ಯಾಯ. "ದಶಕಗಳ ಕಾಲ ಮುಚ್ಚಿಯೇ ಹೋಗಿದ್ದ ಕೇಂದ್ರಕ್ಕೆ ಜೀವಕಳೆ ತುಂಬಲು ಸಾಕಷ್ಟು ಹೋರಾಡಬೇಕಾಯಿತು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಓದುತ್ತಿದ್ದ ೩೩ ದೇಶಗಳ ವಿದ್ಯಾರ್ಥಿಗಳನ್ನು ಬರಮಾಡಿಕೊಂಡು 'ವಿಶ್ವ ಭಾರತಿ' ಕಾರ್ಯಕ್ರಮ ಏರ್ಪಡಿಸಿದ್ದು, ಮೈಸೂರು ಆಕಾಶವಾಣಿಯ ಚಿನ್ನದ ಹಬ್ಬ, ವಿಶ್ವ ಕನ್ನಡ ಸಮ್ಮೇಳನ ನಡೆದಾಗ ಇಡೀ ಸಿಬ್ಬಂದಿ ಹಗಲು ರಾತ್ರಿಯ ಪರಿವೆಯಿಲ್ಲದೇ ದುಡಿದದ್ದು, 'ಯುಗಾದಿ ಕವಿಮೇಳ', 'ಗಾಂಧಿ ಒಂದು ಪ್ರದರ್ಶನ' ಮುಂತಾದ ಪುಸ್ತಕಗಳನ್ನು ಪ್ರಕಟಿಸಿ ಉಚಿತವಾಗಿ ಹಂಚಿದ್ದು" ಹೀಗೆ ಜ್ಯೋತ್ಸ್ನಾ ಅವರ ಕಾರ್ಯಸಾಧನೆಯ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಅಲ್ಲದೆ ಕುವೆಂಪು. ಪ್ರೊ. ಎಸ್. ವಿ. ರಂಗಣ್ಣ, ಫೀಲ್ಡ್ ಮಾರ್ಷಲ್ ಕಾರ್ಯಪ್ಪ, ರಾಜಾರಾವ್. ಕೆ.ಕೆ. ಹೆಬ್ಬಾರ್, ಆರ್.ಕೆ. ನಾರಾಯಣ, ಆರ್. ಕೆ. ಲಕ್ಷ್ಮಣ ಮುಂತಾದವರ ಧ್ವನಿ ಮುದ್ರಿಸಿಕೊಂಡು ಸಂಗ್ರಹಿಸಿದ್ದು ಜ್ಯೋತ್ಸ್ನಾ ಅವರ ಅಪೂರ್ವ ಸಾಧನೆ ಎನ್ನಬಹುದು.

ಮುಂಬೈಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಜ್ಯೋತ್ಸ್ನಾ ನಿವೃತ್ತಿಯ ಪೂರ್ವದಲ್ಲಿ ಬೆಂಗಳೂರಿಗೆ ಬಂದರು. ಹಾಗೇ ಬಂದಾಗಲೂ ಇಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಬಾನುಲಿ ಬರವಣಿಗೆ ಸಂಗೀತ ಕಾರ್ಯಕ್ರಮಗಳಿಗೆ ಹಿಮ್ಮೇಳ ಒದಗಿಸುವ ಕುರಿತು ವಾದ್ಯ ಕಲಾವಿದರಿಗೆ ತರಬೇತಿ, ಶಬ್ದಚಿತ್ರದ ತರಬೇತಿ. ಸಾಹಿತ್ಯ ಅಕಾಡೆಮಿ, ಸಾಹಿತ್ಯ ಪರಿಷತ್ತು, ಕ್ರೈಸ್ಟ್ ಕಾಲೇಜ್‌ಗಳ ಸಹಯೋಗದಿಂದ ಏಳೆಂಟು ಬಾನುಲಿ ಬರವಣಿಗೆಯ ಗ್ರಂಥಗಳನ್ನು ಹೊರತರುವುದರಲ್ಲಿ ಜ್ಯೋತ್ಸ್ನಾ ಅವರ ಪರಿಶ್ರಮ ಅಪಾರವಾದದ್ದು. ನಿವೃತ್ತಿಯ ಬಳಿಕವೂ ಜ್ಯೋತ್ಸ್ನಾ ಅವರು ಕನ್ನಡ, ಇಂಗ್ಲಿಷ್, ಕೊಂಕಣಿ ಭಾಷೆಗಳಲ್ಲಿ ಬರವಣಿಗೆ ಮುಂದುವರಿಸಿಕೊಂಡು ಬಂದಿದ್ದಾರೆ. ಕರ್ನಾಟಕ ಇತಿಹಾಸ ಅಕಾಡೆಮಿಯ ವಾರ್ಷಿಕ ಅಧಿವೇಶನಗಳಲ್ಲಿ ಪ್ರಬಂಧ ಮಂಡಿಸುತ್ತಾ ಬಂದಿದ್ದಾರೆ. ಮೂರು ಗ್ರಂಥಗಳು ಹಸ್ತ ಪ್ರತಿ ರೂಪದಲ್ಲಿವೆ. "ಅವುಗಳು ಬೆಳಕು ಕಾಣುವಂತಾದಾಗ ಶಾಶ್ವತ ನೆಮ್ಮದಿ ನನ್ನದಾಗುತ್ತದೆ." ಎನ್ನುತ್ತಾರೆ.

ವಿಕಾಸ, ಕಾಮತ್ ದಂಪತಿಗಳ ಏಕಮಾತ್ರ ಪುತ್ರ. ಅಮೇರಿಕದಲ್ಲಿ ಕಂಪ್ಯೂಟರ್ ವಿಜ್ಞಾನದಲ್ಲಿ ಮಾಸ್ಟರ್ ಪದವಿ ಪಡೆದು ಸ್ವಂತದ ಸಾಫ್ಟವೇರ್ ಉದ್ಯೋಗ ಕೈಗೊಂಡಿದ್ದಾನೆ. ಭಾರತ ಸ್ವಾತಂತ್ರ್ಯ ಸುವರ್ಣೋತ್ಸವದ ಸಂದರ್ಭದಲ್ಲಿ, ತನ್ನ ದೇಶ ಕುರಿತಾದ ಇಂಟರ್ನೆಟ್ ಕಾರ್ಯಕ್ರಮ ಪ್ರಾರಂಭಿಸಿ ತನ್ನ ತಂದೆ ಸೆರೆಹಿಡಿದ ಛಾಯಾಚಿತ್ರಗಳನ್ನೂ, ಪೂರಕ ಮಾಹಿತಿಗಳನ್ನೂ ಬಳಸಿಕೊಳ್ಳುತ್ತಿದ್ದಾನೆ. ಭಾರತ ದೇಶದ ಜನರ ಜೀವನ ಅತ್ಯಂತ ವೇಗದಿಂದ ಬದಲಾಗಿದೆ, ಬದಲಾಗುತ್ತಿದೆ, ಎಂದು ಚಿತ್ರಿಸುವಲ್ಲಿ ಕಾಮತರು ಎಂದೋ ಕ್ಲಿಕ್ಕಿಸಿದ ಚಿತ್ರಗಳು ಇಂದು ಅತ್ಯಪೂರ್ವ ಎನಿಸಿಕೊಳ್ಳುತ್ತಿವೆ. "ಕಾಮತ್ ಪಾಟ್‌ಪುರಿ" ಹಾಗೂ "ಕಾಲರಂಗ" ಎಂಬ ಶಿರೋನಾಮೆಯಡಿಯಲ್ಲಿ ಪ್ರಸಾರವಾದ 'ಈ ಮೇಲ್' ಕಾರ್ಯಕ್ರಮ ವಿಶ್ವದ ಮೂಲೆ ಮೂಲೆಯಿಂದ ಕುತೂಹಲಕಾರಿಯಾದ ಆಕರ್ಷಣೆಯಾಗಿ ಕಂಡಿದೆ. ಶಿಕಾಗೋ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರೊಬ್ಬರಿಗೆ ಭಾರತೀಯ ಮಾರಾಟಗಾರರ ಪದ್ಧತಿ ಆಕರ್ಷಕವಾಗಿ ಕಂಡರೆ ಆಸ್ಟ್ರೇಲಿಯಾದವರಿಗೆ ಭಿಕ್ಷುಕರ

ಕುರಿತಾದ ಮಾಹಿತಿ ಇನ್ನಷ್ಟು ಬೇಕು ಎನಿಸಿತಂತೆ! ಇಟಲಿಯ ಪ್ರೇಕ್ಷಕನೊಬ್ಬನಿಗೆ ಕರ್ನಾಟಕದ ಸುಗ್ಗಿ ಕುಣಿತ ಕಂಡು ತನ್ನ ಪೂರ್ವಜರು ಭಾರತದಿಂದ ಬಂದಿರಬಹುದೇ ಎಂಬ ಸಂಶಯ. ಜರ್ಮನ್ ಸಂಶೋಧಕಿ ಒಬ್ಬಳಿಗೆ ಭಾರತೀಯ ಸೀರೆ ಕುರಿತು ಮಾಹಿತಿ ಅಪೂರ್ವ ಎನಿಸಿತಂತೆ. ದಿನಾ ೧೫೦೦ ಕ್ಕೂ ಹೆಚ್ಚು ಜನ ಈ ಕಾರ್ಯಕ್ರಮವನ್ನು ವೀಕ್ಷಿಸುತ್ತಿದ್ದಾರೆಂದು ವಿಕಾಸನ ಕಂಪ್ಯೂಟರ್ ವರದಿ ಸೂಚಿಸಿದೆ. ಕಾಮತರ ೧೪ ಪುಸ್ತಕ ಹಾಗೂ ನೂರಕ್ಕೂ ಮಿಕ್ಕಿದ ಬಿಡಿ ಲೇಖನಗಳನ್ನು ಓದಿದ ಕನ್ನಡಿಗರ ಸಂಖ್ಯೆ ಕಡಿಮೆ ಎನ್ನಬಹುದು. ತೀರ ಹೊಸದಾದ ಮಲ್ಟಿಮೀಡಿಯಾ ಮಾಧ್ಯಮಕ್ಕೆ ಹೇಳಿ ಮಾಡಿಸಿದ ಪ್ರತಿಭೆ ಕಾಮತರದು.

(ಕೃಪೆ : ಮಯೂರ, ಜುಲೈ, 1998)



# ಸಮಕ್ಷಮ

**ಲೇಖಕರು : ಶಶಾಂಕ**

"ನಾನು ಸಾಹಿತಿ ಆದದ್ದು ಕೇವಲ ಆಕಸ್ಮಿಕ" ಎನ್ನುವ ಡಾ. ಕೃಷ್ಣಾನಂದ ಕಾಮತ್ ಮೂಲತಃ ವಿಜ್ಞಾನಿ. ಕಾಮತರು ಸಾಹಿತಿಯಾಗಲು ಮುಖ್ಯ ಕಾರಣರು ಅವರ ಬಾಳ ಸಂಗಾತಿ ಜ್ಯೋತ್ಸ್ನಾ ಕಾಮತ್, ಮದುವೆಯಾದ (೧೯೬೬) ಹೊಸದರಲ್ಲಿ ಅಮೇರಿಕಾಗೆ ಹೋಗಿಬಂದ ಕಾಮತ್, ಪತ್ನಿಗೆ ವಿವರಿಸಿದ್ದು ಅಲ್ಲಿಯ ಅನುಭವವನ್ನು. ವರ್ಣನೆಯನ್ನು ಕೇಳಿದ ಜ್ಯೋತ್ಸ್ನಾ ಪುಸ್ತಕ ರೂಪದಲ್ಲಿ ಬರೆಯುವಂತೆ ಪತಿಯನ್ನು ಒತ್ತಾಯಿಸಿದರು. ಅದರ ಫಲವೇ ಕನ್ನಡ ಸಾಹಿತ್ಯದ ವಿಶಿಷ್ಟ ಪ್ರವಾಸಕಥನ ಎಂದು ಸ್ಥಾನ ಪಡೆದಿರುವ ಕಾಮತರ ಪ್ರಥಮ ಕೃತಿ 'ನಾನೂ ಅಮೇರಿಕೆಗೆ ಹೋಗಿದ್ದೆ' (೧೯೬೯).

ಸಾಹಿತಿ-ವಿಜ್ಞಾನಿಯಾಗಿ ಮಾತ್ರವಲ್ಲ ಛಾಯಾಗ್ರಾಹಕರಾಗಿ ಚಿತ್ರಕಾರರಾಗಿ ಪರಿಸರ-ಪ್ರಾಣಿ ಸಾಹಿತ್ಯ ಲೇಖಕರಾಗಿ ಪ್ರಸಿದ್ಧರಾಗಿರುವ ಕಾಮತರು ಮೂಲತಃ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದವರು. ವ್ಯಾಪಾರಸ್ಥರ ಕುಟುಂಬದಲ್ಲಿ ಜನನ (೧೯೩೪). ತಂದೆ ಲಕ್ಷ್ಮಣ ವಾಸುದೇವ ಕಾಮತ್. ತಾಯಿ ರಮಾಬಾಯಿ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕೀಟವಿಜ್ಞಾನದಲ್ಲಿ ಎಂ.ಎಸ್ಸಿ. ಪಡೆದ ಕಾಮತ್‌ರು ಪಿ.ಎಚ್‌ಡಿ. ಪದವಿ ಪಡೆದದ್ದು, ಅಮೇರಿಕಾದ ನ್ಯೂಯಾರ್ಕ್ ಸ್ಟೇಟ್ ವಿಶ್ವವಿದ್ಯಾಲಯದಲ್ಲಿ (೧೯೬೫, ವಿಷಯ : ಪರಿಸರ ಮತ್ತು ಅರಣ್ಯ ವಿಜ್ಞಾನ).

ಅಮೇರಿಕಾದಿಂದ ಭಾರತಕ್ಕೆ ಮರಳಿ ಬಂದ ಕಾಮತರು ರಾಜಸ್ಥಾನದ ಉದಯಪುರ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಸೇರಿದ ಜೋಬನೇರ ಕೃಷಿ ಕಾಲೇಜಿನಲ್ಲಿ ಮೂರು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಅಲ್ಲಿ ಅವರು ಪಡೆದ ಅನುಭವವೇ ಕೃತಿಯಾಗಿ ಮೈತಳೆದದ್ದು 'ನಾ ರಾಜಸ್ಥಾನದಲ್ಲಿ'.

ಕಾಮತ್‌ರ ಮುಂದಿನ ಕಾರ್ಯಕ್ಷೇತ್ರ ಪಶ್ಚಿಮ ಬಂಗಾಳದ ಇತಿಹಾಸ ಪ್ರಸಿದ್ಧ ಪ್ಲಾಸಿ. ಅಲ್ಲಿನ ಏಕೈಕ ಸಕ್ಕರೆ ಕಾರ್ಖಾನೆಯ ಆಸುಪಾಸಿನ ಕಬ್ಬಿನ ಹೊಲಗಳಿಗೆ ದಾಳಿಯಿಡುವ ದಿಂಡುಕೊರಕ ಹುಳುಗಳ ನಿಯಂತ್ರಣಕ್ಕಾಗಿ ಬೆಂಗಳೂರಿನ ಜೈವಿಕ ನಿಯಂತ್ರಣ ಸಂಶೋಧನಾ ಸಂಸ್ಥೆಯ ಶಾಖೆಯ ಮೇಲ್ವಿಚಾರಕರಾಗಿ ಪ್ಲಾಸಿಯನಲ್ಲಿ ಅವರಿದ್ದದ್ದು ಎರಡು ವರ್ಷಗಳ ಕಾಲ. ಬಂಗಾಲಿ ಭಾಷೆ ಕಲಿತು, ಅಲ್ಲಿಯ ಜನರೊಡನೆ ಬೆರೆತು, ಬಂಗಾಲದ ರಾಜಕೀಯ ಸಾಂಸ್ಕೃತಿಕ ಸಾಮಾಜಿಕ ಒಳನೋಟಗಳ ಮೇಲೆ ಬೆಳಕು ಚೆಲ್ಲುವ ಮೂಲಕ ಕನ್ನಡಿಗರಿಗೆ ಕಾಮತರು ನೀಡಿದ ವಿಶಿಷ್ಟ ಕೊಡುಗೆ 'ವಂಗ ದರ್ಶನ'.

ಆತ್ಮಚರಿತ್ರೆ, ಪ್ರವಾಸಾನುಭವಗಳ ವ್ಯಂಗ್ಯ ಮಿಶ್ರಿತ ನವಿರು ಹಾಸ್ಯದ ನಿರೂಪಣೆಯ ಸೊಬಗನ್ನೊಳಗೊಂಡಿರುವ 'ವಂಗದರ್ಶನ'ದ ಕೆಲವು ಅಧ್ಯಾಯಗಳಂತೂ ಕಾದಂಬರಿ ಓದಿದಷ್ಟು ಸೊಗಸು. ಅವರ 'ಪ್ರೇಯಸಿಗೆ ಪತ್ರಗಳು' ಮತ್ತೊಂದು ಮಹತ್ವದ ಕೃತಿ.

ನೌಕರಿಗೆ ರಾಜೀನಾಮೆ ನೀಡಿ, ೧೯೭೧ರಿಂದ ಬೆಂಗಳೂರಿನಲ್ಲಿ ನೆಲಸಿರುವ ಕಾಮತ್, ವೈಜ್ಞಾನಿಕ ಛಾಯಾಚಿತ್ರಗ್ರಾಹಕರಾಗಿ ಸ್ವತಂತ್ರ ಜೀವನ ನಡೆಸುತ್ತಿದ್ದಾರೆ. ಬರವಣಿಗೆ, ಚಿತ್ರಕಲೆ, ಸಂಶೋಧನೆ, ಛಾಯಾಚಿತ್ರಗ್ರಹಣ, ಹೀಗೆ ಅವರ ಹವ್ಯಾಸ ಹತ್ತು ಹಲವು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಶಿಷ್ಯವೇತನ ಪಡೆದ ಅವರು, ಒಂದು ವರ್ಷಕಾಲ (೧೯೭೬) ಮಧ್ಯಪ್ರದೇಶದಲ್ಲಿ ಇದ್ದು ಅಲ್ಲಿಯ

ಅನುಭವಗಳನ್ನು 'ಕಾಲರಂಗ', 'ಬಸ್ತರ ಪ್ರವಾಸ', 'ಮಧ್ಯಪ್ರದೇಶದ ಮಡಿಲಲ್ಲಿ' ಈ ಮೂರು ಕೃತಿಗಳಲ್ಲಿ ದಾಖಲಿಸಿದ್ದಾರೆ.

ಕೇವಲ ಮನುಷ್ಯ ಪ್ರಪಂಚದಲ್ಲಿ ಪ್ರವಾಸ ಮಾಡಿ ಕಾಮತರು ಕೃತಿ ರಚಿಸಿದ್ದು ಮಾತ್ರವಲ್ಲ; ಪ್ರಾಣಿ-ಸಸ್ಯಗಳ ಕುರಿತು ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ. 'ಪ್ರಾಣಿ ಪರಿಸರ', 'ಪಶು-ಪಕ್ಷಿ ಪ್ರಪಂಚ', 'ಕೀಟ ಜಗತ್ತು', 'ಸಸ್ಯ ಪ್ರಪಂಚ', 'ಸಸ್ಯ ಪರಿಸರ' ಅವರು ರಚಿಸಿರುವ ಕೃತಿಗಳಲ್ಲಿ ಪ್ರಮುಖವಾದವು.

ಇದುವರೆಗೆ ಹದಿನಾಲ್ಕು ಕೃತಿಗಳನ್ನು ರಚಿಸಿರುವ ಕಾಮತರು, ಅವುಗಳಲ್ಲಿ ಮೂರು ಪುಸ್ತಕಗಳಿಗಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದ್ದಾರೆ. ವಿಶ್ವಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅವರ 'ಪ್ರಾಣಿ ಪರಿಸರ' ಕೃತಿಯನ್ನು ರಿಯಾಯಿತಿ ದರದಲ್ಲಿ ಪ್ರಕಟಿಸಲಾಗಿದೆ. 'ಗೌರೀಶ ಕಾಯ್ಕಿಣಿ ಪ್ರತಿಷ್ಠಾನದ ಪ್ರಶಸ್ತಿ' ಪಡೆದಿರುವ (೧೯೯೪) ಕಾಮತ್, ಈ ವರ್ಷ ನಡೆದ ಉತ್ತರ ಕನ್ನಡ ಜಿಲ್ಲಾ ಒಂಬತ್ತನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವ ಪಡೆದಿರುವರು. ಅಲ್ಲದೆ ಕಾಮತರ ಅನೇಕ ಕೃತಿಗಳು, ರೇಖಾ -ಛಾಯಾಚಿತ್ರಗಳು, 'ಇಂಟರ್ ನೆಟ್' ನಲ್ಲೂ ಪ್ರಸಾರವಾಗಿವೆ.

"ನಾನು ಕನ್ನಡ ಸಾಹಿತ್ಯವನ್ನು ಹೆಚ್ಚು ಓದಿಕೊಂಡವನಲ್ಲ" ಎಂದು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವ ಕಾಮತ್‌ರು ಬಾಲ್ಯದಿಂದಲೂ ಸಾಹಿತ್ಯ ಹಾಗೂ ಚಿತ್ರಕಲೆಯಲ್ಲಿ ವಿಶೇಷ ಆಸಕ್ತಿಯುಳ್ಳವರು. ಕುಮಟಾದಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ (೧೯೫೪) ಭಾಗವಹಿಸಿದ ನೆನಪು ಈಗಲೂ ಅವರ ನೆನಪಲ್ಲಿ ಅಚ್ಚ ಹಸಿರು. ಆಗ ಸೆರೆಹಿಡಿದ ಹಲವಾರು ಹಿರಿಯ ಸಾಹಿತಿಗಳ ಭಾವಚಿತ್ರಗಳು ಈಗಲೂ ಕಾಮತರ ಸಂಗ್ರಹದಲ್ಲಿರುವ ಅಮೂಲ್ಯ ಆಸ್ತಿ. "ಸಾಹಿತ್ಯದ ಬರವಣಿಗೆಯಲ್ಲಿ ವಿಜ್ಞಾನದ ಸಂಕ್ಷಿಪ್ತತೆ ಅತ್ಯವಶ್ಯ" ಎಂದು ನಂಬಿ ಆ ನಿಟ್ಟಿನಲ್ಲಿ ಸಾಹಿತ್ಯ ಕೃಷಿ ಮಾಡಿ ಸಾಧನೆಗೈಯುತ್ತಿರುವ ಕಾಮತರಿಗೆ ಪ್ರೊ. ಎ.ಎನ್. ಮೂರ್ತಿರಾವ್ ಮತ್ತು ಪ್ರೊ. ಬಿ.ಜಿ.ಎಲ್. ಸ್ವಾಮಿ ಅವರ ಬರಹದ ಶೈಲಿ ಬಹಳ ಅಚ್ಚುಮೆಚ್ಚು. "ಸಾಹಿತಿಯಾದವರಲ್ಲಿ ಬಹುಮುಖ ಪ್ರತಿಭೆ, ವಿಭಿನ್ನ ಆಸಕ್ತಿಗಳು ಇರಬೇಕು. ಆಗ ಮಾತ್ರ ಯಾವುದನ್ನೇ ಆದರೂ ವಿಭಿನ್ನ ದೃಷ್ಟಿಯಿಂದ ಗ್ರಹಿಸಲು ಸಾಧ್ಯ" ಎಂಬ ವಿಶ್ವಾಸ ಅವರದು.

(ಕೃಪೆ : ಸುಧಾ, 07, ಸೆಪ್ಟೆಂಬರ್ 1997)



# ೧. ಸ್ಫೂರ್ತಿಯ ನೆಲೆಯಾಗಿ ವಿ. ಸೀ.

ಕನ್ನಡದಲ್ಲಿ ಪ್ರಪ್ರಥಮವಾಗಿ, ಅಂದರೆ ೧೮೭೦ರಲ್ಲಿ ಪ್ರವಾಸ ಕಥನವನ್ನು ಪ್ರಕಟಿಸಿದ ಶ್ರೇಯಸ್ಸು, ಕವಿ, ನಾಟಕಕಾರ, ಕರ್ಕಿ ವೆಂಕಟರಮಣಶಾಸ್ತ್ರಿ ಸೂರಿ, ಅವರಗೆ ಸಲ್ಲುತ್ತದೆ. ತುಂಬ ವರ್ಷಗಳ ತರುವಾಯ, ೧೯೨೭ರಲ್ಲಿ ದ್ವಿತೀಯ ಸ್ಥಾನ, ಪಂಪಾಯಾತ್ರೆ ಬರೆದ ವಿ. ಸೀತಾರಾಮಯ್ಯವರಿಗೆ ಸೇರುತ್ತದೆ. ಬಾಲಕನಾಗಿದ್ದಾಗಲೇ, ವಿ. ಸೀ. ಅವರ ಈ ಕೃತಿಯನ್ನು ಓದಿ ಪ್ರಭಾವಿತನಾಗಿದ್ದೆ. ಕಂಡದ್ದನ್ನೆಲ್ಲ ಮನಸ್ಸಿಗೆ ಮುಟ್ಟುವಂತೆ ವರ್ಣಿಸುವ ಕಲಾವಿದನ ಕಣ್ಣು, ಹಾಗೂ ಕವಿ ಹೃದಯ ಅವರದು, ಎಂದು ಮುಂದೆ ಮತ್ತೆ ಮತ್ತೆ ಓದಿದ್ದನ್ನು ಸ್ಮರಿಸಿಕೊಳ್ಳುತ್ತಿದ್ದಾಗ ಅನಿಸತೊಡಗಿತು. ಚೇಳುಗಳ ಬಾಧೆಗೆ ಒಳಗಾದ ಪ್ರಸಂಗದಲ್ಲೂ ನವಿರಾದ ಹಾಸ್ಯ ಹೊರಹೊಮ್ಮಿಸುವ ಚಾಕಚಕ್ಯತೆ ಅವರಿಗಿತ್ತು. ಹತ್ತಿರದ ಗೇರಸೊಪ್ಪಾದ ನಗರಬಸದಿಗಳನ್ನು ನೋಡಹೋದಾಗ, ಅಲ್ಲಿ ಹಾಳುಬಿದ್ದ ವಿಗ್ರಹಗಳು, ಶಿಲಾ ಶಾಸನಗಳನ್ನು ನೋಡುತ್ತಿದ್ದರೆ, 'ಪಂಪಾಯಾತ್ರೆ' ಕಣ್ಣೆದುರು ಬರುತ್ತಿತ್ತು. ಹಾಡವಳ್ಳಿ (ಸಂಗೀತಪುರ) ವೀರಗಲ್ಲುಗಳು, ಜಿನಾಲಯ, ಇತರ ಅವಶೇಷಗಳು, ಗೋಚರಿಸಿದಾಗ, ವಿ. ಸೀ. ಅವರು, ಈ ಸ್ಥಳಗಳಿಗೆ ಭೇಟಿ ಕೊಟ್ಟಿದ್ದಿದ್ದರೆ, ಪ್ರವಾಸ ಕಥನ ಬರೆಯುವಂತಾಗಿದ್ದರೆ, ಇವೆಲ್ಲ ಅವರ ಕೃತಿಗಳಲ್ಲಿ ಹೇಗೆ ರೂಪಗೊಳ್ಳುತ್ತಿದ್ದಿರಬಹುದು! ಎಂಬ ಕಲ್ಪನಾವಿಲಾಸ ಹರಿಯುತ್ತಿತ್ತು. ಅಷ್ಟೊಂದು ಮೆಚ್ಚಿಕೊಂಡ, ಲೇಖಕರನ್ನೊಮ್ಮೆ ಕಣ್ಣಾರೆ ಕಾಣಬೇಕೆಂಬ ಲವಲವಿಕೆ ಉಂಟಾಯಿತು. ಆದರೆ ಕರಾವಳಿಯ ಚಿಕ್ಕ ಊರಿನಲ್ಲಿ ಶಾಲಾವಿದ್ಯಾರ್ಥಿಯಾಗಿದ್ದಾತನಿಗೆ ಬೆಂಗಳೂರಿನಲ್ಲಿರುತ್ತಿದ್ದ ವಿ. ಸೀ. ಅವರನ್ನು ಭೇಟಿ ಮಾಡುವದು, ನನಸಾಗದ ಕನಸಾಗಿತ್ತು.

೧೯೫೫ರಲ್ಲಿ ಕುಮಟಾದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ಮಾನ್ಯ ವಿ. ಸೀ. ಅವರು ಅಲಂಕರಿಸಲಿದ್ದಾರೆಂಬ ವಾರ್ತೆ ಓದಿ ಭಾರೀ ಸಂತೋಷಪಟ್ಟವರಲ್ಲಿ ನಾನೊಬ್ಬನಾಗಿದ್ದೆ. ನನ್ನೂರಾದ ಹೊನ್ನಾವರದಿಂದ ಕುಮಟಾ, ಕೇವಲ ಹನ್ನೆರಡು ಮೈಲಿ ದೂರದಲ್ಲಿದ್ದರೂ, ಹೋಗಿಬರುವ ವಾಹನ ಸೌಕರ್ಯ ತೃಪ್ತಿಕರವಾಗಿರಲಿಲ್ಲ. ಅಂತೆಯೇ ಯಾರದೋ ಶಿಫಾರಸಿನಿಂದ, ಕುಮಟೆಯ ಪರಿಚಿತರೊರ್ವನ ಕೊಠಡಿಯಲ್ಲಿ ಮೂರು ದಿನ, ವಾಸದ ಏರ್ಪಾಡು ಮಾಡಿಕೊಂಡೆ. ಆ ಅಪರೂಪದ ಕಾರ್ಯಕ್ರಮದ ಸಂಪೂರ್ಣ ಲಾಭ ಪಡೆಯುವ, ಮುಖ್ಯತಃ ಮೆಚ್ಚಿನ ವಿ. ಸೀ. ಅವರ ಭಾವಚಿತ್ರವನ್ನು ಸೆರೆಹಿಡಿಯುವ, ಹಂಬಲ ಇದ್ದೇ ಇತ್ತು. ಅಂದಿನ ದಿನಗಳಲ್ಲಿ ಕ್ಯಾಮರಾ ನನ್ನಂಥ ವಿದ್ಯಾರ್ಥಿಗೆ ಎಟಕುವ ಸಾಧನವಾಗಿರಲಿಲ್ಲ. ನನ್ನ ಸಹವಾಸಿ ಎಲ್ಲಿಂದಲೋ ಹದಿನೇಳು ರೂಪಾಯಿಯ ಬಾಕ್ಸ ಕ್ಯಾಮರಾ ಪಡೆಯುವದರಲ್ಲಿ ಸಫಲನಾದ. ಫಿಲ್ಮಿಗಾಗಿ ಹಣ ಎಲ್ಲಿಂದ ತರುವದು? ಜಾತ್ರೆ, ತೇರು, ಹಬ್ಬ ಇತ್ಯಾದಿಗಳಿಗೆ ಅಜ್ಜ, ಸೋದರಮಾವ ಮುಂತಾದವರು ಕೊಡಮಾಡಿದ ಪುಡಿಗಾಸು, ವರ್ಷಗಳಿಂದ ಕಾದಿರಿಸಿದ್ದು, ಆಗ ನೆರವಿಗೆ ಬಂದಿತು. ಈ ಸುಲಭ ಸಾಮಗ್ರಿಗಳಿಂದಲೇ ವಿ. ಸೀ. ಅವರಂಥ ಸರಳ ವ್ಯಕ್ತಿಯ ಛಾಯಾಗ್ರಹಣ ಮಾಡುವ ಸಾಹಸದ ಕಲ್ಪನೆಯೇ ರೋಮಾಂಚಕಾರಿಯಾಗಿತ್ತು. ನನ್ನ ಈ ಅನುಭವಗಳೇ ವಿ. ಸೀ ಅವರವೂ ಆಗಿದ್ದರೆ, ಅವರೆಷ್ಟು ಅವನ್ನು ರಸಭರಿತವಾಗಿಸಿ ಓದುಗರಿಗೆ ಉಣಬಡಿಸುತ್ತಿದ್ದರೋ! ಅನಿಸಿತು.

ಸಾಹಿತ್ಯ ಸಮ್ಮೇಳನದ ಉದ್ಘಾಟನೆ. ಇತ್ಯಾದಿ ಕಾರ್ಯಕಲಾಪಗಳಿಗೆ ವಿ. ಸೀ. ಅವರು ನಮ್ಮಗಳ ಖೋಲಿಯ ಮುಂದಿನಿಂದಲೇ ಹಾದು ಹೋಗಬೇಕಾಗಿತ್ತು. ಹೀಗಾಗಿ ರಸ್ತೆಗೆ ಹೊಂದಿದ್ದ ಕಿರಿದಾದ ಕಿಟಕಿಗೆ ಅಂಟಿಕೊಂಡೇ ಕುಳಿತಿದ್ದೆ. ಸರಿಯಾಗಿ ಬೆಳಿಗಿನ ಒಂಬತ್ತು ಗಂಟೆಗೇ, ಅಧ್ಯಕ್ಷರು, ಶ್ರೀ ಗೌರೀಶ ಕಾಯಕಿಣಿ ಮತ್ತು ಇನ್ನಿತರ ಸಾಹಿತಿ-ಬಂಧುಗಳೊಡನೆ ಪಾದಚಾರಿಗಳಾಗಿಯೇ ಹೊರಟಿದ್ದರು. ಅವರ ಓರಣವಾದ ಪೇಟಾ, ಶುಭ್ರವಾದ ಕೋಟು, ಗರಿಗರಿಯಾದ ಪಂಚೆಗಳೇ ಇವರು ವಿ.ಸೀ. ಎಂದು ಪರಿಚಯಿಸಿದವು. ಕಲ್ಪನೆಯಲ್ಲಿ ರೂಪಿಸಿಕೊಂಡ ವ್ಯಕ್ತಿ, ಸಾಕ್ಷಾತ್ ರೂಪತಾಳಿ ಕಾಣುವಂತಾದ ಪುಲಕ ಅಷ್ಟಿಷ್ಟಲ್ಲ! ಲಗುಬಗೆಯಿಂದ ನಾಷ್ಟಾ ಮುಗಿಸಿ ಹತ್ತಿರದ ಗಿಬ್ ಹ್ಯಾಸ್ಕೂಲಿನಲ್ಲೇ ತಲೆ ಎತ್ತಿನಿಂತ ಸಾಹಿತ್ಯ ಸಮ್ಮೇಳನದ ಮಹಾವೇದಿಕೆಯತ್ತ ಧಾವಿಸಿದೆ. ಪ್ರಾಸ್ತಾವಿಕ ಭಾಷಣಗಳು ಆದಾಗಲೇ ಪ್ರಾರಂಭವಾಗಿದ್ದವು. ಕನ್ನಡ ಸಾಹಿತ್ಯದಲ್ಲಿ ಆದ, ಆಗಬೇಕಾದ ಬರವಣಿಗೆ, ಪ್ರಕಟನೆಗಳ ಕುರಿತಾದ ಗಂಭೀರ ವಿಚಾರಗಳು ತಲೆಗೆ ಹೋಗದಿದ್ದರೂ ಸಾಹಿತ್ಯದೇವಿಯ ಆರಾಧನೆ ನಡೆದಿದೆ, ಪಾಲುಗೊಳ್ಳುವ ಭಕ್ತನೆಂಬ ಭಯ-ಭಕ್ತಿಯಿಂದ ಸಾಧ್ಯವಿದ್ದಷ್ಟು ಮುಂದುಗಡೆಯ ಸಾಲಿನಲ್ಲಿ ಕುಳಿತಿದ್ದೆ. ಇಂಥ ಅಪೂರ್ವದ ಮಹಾಸಭೆಯಲ್ಲೂ ಹೆಚ್ಚಿನ ಆಸನಗಳು ಬರಿದಾಗಿಯೇ ಇದ್ದವು. ಅಪರೂಪದ ಮೇಧಾವಿಗಳು, ಸಾಹಿತ್ಯಪ್ರಿಯರು ನಮ್ಮಲ್ಲಿ ಆಗಮಿಸಿದಾಗ ಇದೆಂತಹ ಅಸಡ್ಡೆ! ಎಂದು ಅನಿಸದೇ ಇರಲಿಲ್ಲ.

ವಿ. ಸೀ. ಅವರ ಫೋಟೋ ಕ್ಲಿಕ್ಕಿಸಿಲು ಸದಾಕಾಲ ಹೊಂಚು ಹಾಕಿಯೇ ಕುಳಿತಿದ್ದೆ. ಸಮಯ ಜಾರುತ್ತಲೇ ಇತ್ತು ನನ್ನ ಕ್ಯಾಮರಾಕ್ಕೆ (ಫ್ಲ್ಯಾಶ್ ಅಲ್ಲ) ಬೆಳಕು ಒಂದಿಷ್ಟು ಕಡಿಮೆಯಾದರೂ ನಡೆಯುತ್ತಿರಲಿಲ್ಲ. ರಣರಣಬಿಸಿಲಲ್ಲಿ ಮಾತ್ರ ಚಿತ್ರವನ್ನು ಸೆರೆಹಿಡಿಯಲು ಸಾಧ್ಯವಿತ್ತು! ಬೆಳಕು ಅಸಮರ್ಪಕವಾಗಿದ್ದ ವೇದಿಕೆ, ಮಂಟಪ, ಪೆಂಡಾಲ್ ಆವರಣದಲ್ಲಿ ಕುಳಿತಾಗ, ಭಾಷಣಮಾಡುವಾಗ ಚರ್ಚೆ ನಡೆವಾಗ ಕ್ಲಿಕ್ಕಿಸುವದು ಸಾಧ್ಯವೇ ಇರಲಿಲ್ಲ. ಹೇಗೆ ಮುಂದರಿಯುವದೆಂಬ ಯೋಚನೆಯಲ್ಲಿಯೇ ಮೊದಲ ದಿನ ಜಾರಿಕೊಂಡಿತು. ಮಾರನೆಯ ದಿನ ಏನಿದ್ದರೂ ಛಾಯಾಗ್ರಹಣ ಮಾಡಿಯೇ ತೀರುವದು, ಎಂಬ ನಿರ್ಧಾರಕ್ಕೆ ಬಂದೆ. ಕರಾವಳಿಯ ತೀವ್ರ ಸೆಕೆ, ಬೆವರುಗಳಿಂದಾಗಿಯೋ ಏನೋ ವಿ.ಸೀ. ಅವರು ತಮ್ಮ ಸುವಿಖ್ಯಾತ ಪೇಟಾ, ಕೋಟುಗಳಿಗೆ ಅಲ್ಪವಿರಾಮ ಕೊಟ್ಟಿದ್ದರು! ಅದರಿಂದ ನನಗೆ ಸ್ವಲ್ಪ ನಿರಾಸೆಯೇ ಆಯಿತು. ಭೋಜನಕ್ಕಾಗಿ ಹೊರಗೆ ಹೊರಟಾಗ, ಕಾದೇ ನಿಂತಿದ್ದ ನಾನು, ಲಗುಬಗೆಯಿಂದ ಓಡಿ, ಅವರತ್ತ ಹೋಗಿ, ನಿಮ್ಮದೊಂದು ಫೋಟೋ ತೆಗೆಯಬಹುದೇ? ಎಂದು ಹಿಂಜರಿಯುತ್ತ ಕೇಳಿದಾಗ, ಅಲ್ಲಲ್ಲ ವಿನಯದಿಂದ ಬಿನ್ನವಿಸಿಕೊಂಡಾಗ, ಓಹೋ! ಧಾರಾಳವಾಗಿ! ಎನ್ನುತ್ತ ನಡುರಸ್ತೆಯಲ್ಲೇ ಕ್ಯಾಮರಾ ಇದುರಿಗೆ ಹೇಳದೆಯೇ ನನಗೆ ಅನುಕೂಲವಾಗುವಂತೆ, ನಿಂತೇಬಿಟ್ಟರು. ಅವರನ್ನು ಕ್ಲಿಕ್ಕಿಸುವಾಗ ಆದ ಪರಮಾನಂದ ನೆನೆಸಿಕೊಂಡರೆ ಇಂದಿಗೂ ಖುಷಿಯಾಗುತ್ತದೆ.

ಈ ಯಶಸ್ಸಿನಿಂದ ಹಿಗ್ಗಿದೆ. ಶಿವರಾಮ ಕಾರಂತರು ಬರುತ್ತಿದ್ದಂತೆ ಅವರಿಗೂ ಕೇಳಿಕೊಂಡೆ. ಅವರ ಕೈಯಲ್ಲಿ 'ಹನಿಡ್ಯೂ' ಸಿಗರೇಟಿನ ಡಬ್ಬ ಇತ್ತು. ನಿಮ್ಮ ಚಿತ್ರದಲ್ಲಿ ಇದರ ಪ್ರದರ್ಶನ ಬೇಡ! ಎಂದು ತುಂಟ ನಗೆ ಬೀರಿ, ಬೆನ್ನಹಿಂದೆ ಅದನ್ನು ಹಿಡಿದು ನಿಂತು ಫೋಟೋ ತೆಗೆಸಿಕೊಂಡು ಸಹಕರಿಸಿದರು. ಸರಿ, ಸಫಲವಾಗುತ್ತಿದ್ದ ಇದೇ ತಂತ್ರವನ್ನು ಬಳಸಿ, ಪ್ರೊ. ಎ. ಎನ್. ಮೂರ್ತಿರಾಯರು, ತೀ. ನಂ. ಶ್ರೀಕಂಠಯ್ಯನವರು, ದ.ರಾ. ಬೇಂದ್ರೆ, ಗೋಪಾಲಕೃಷ್ಣ ಅಡಿಗರು ಮೊದಲಾದವರನ್ನೆಲ್ಲ ನಿಲ್ಲಿಸಿಕೊಂಡು ಛಾಯಾಚಿತ್ರರೂಪದಲ್ಲಿ ಸೆರೆಹಿಡಿದೇ ಬಿಟ್ಟೆ! ಆ ಬಾಕ್ಸ್ ಕ್ಯಾಮರಾ ಚಿತ್ರಗಳೆಲ್ಲ ಪ್ರಥಮ ದರ್ಜೆಯದಲ್ಲವಾದರೂ ಚಾರಿತ್ರಿಕವಾಗಿ ದುರ್ಲಭವಾದವು. ಮಹಾ ಸಾಹಿತಿಗಳನ್ನೆಲ್ಲ ಅಲ್ಲಲ್ಲಿ ನಿಲ್ಲಿಸಿ ಕ್ಲಿಕ್ಕಿಸಿದ ಸಾಹಸವನ್ನೊಳಗೊಂಡವು. ಹೀಗಾಗಿ ನನ್ನೊಂದಿಗೆ ಭಾವಾತ್ಮಕ ನಂಟು ಹೊಂದಿದವು. ಆದ್ದರಿಂದ ಹೋದ ಕಡೆಯೆಲ್ಲಾ ತಪ್ಪದೇ ಕೊಂಡೊಯ್ಯುತ್ತಿದ್ದೆ. ಕಳೆದ ನಲವತ್ನಾಲ್ಕು ವರ್ಷಗಳಿಂದಲೂ ಅವನ್ನು ಸಂರಕ್ಷಿಸಿಕೊಂಡು ಬಂದಿದ್ದೇನೆಂದರೆ ಅವು ನನಗೆ ಎಷ್ಟು ಸಮೀಪದವೆಂಬ ಕಲ್ಪನೆ ಬಂದೀತು!

ಎಷ್ಟೋ ವರ್ಷಗಳ ಬಳಿಕ ಪ್ರೊ. ವಿ.ಸೀ. ಅವರು ನಮ್ಮ ಹೊನ್ನಾವರ ಊರಿನ ಕಾಲೇಜದ ಪ್ರಾಂಶುಪಾಲರಾಗಿ ಬಂದ ಬಳಿಕ ಒಮ್ಮೆ ಅಲ್ಲಿಯ ನ್ಯೂ ಇಂಗ್ಲಿಷ್ ಶಾಲೆಯಲ್ಲಿ ಒಟ್ಟಿಗೆ ಸೇರಿದ್ದೆವು. ಆದರೆ, ನಮ್ಮಲ್ಲಿ ಪರಸ್ಪರರನ್ನು ಪರಿಚಯಿಸುವ ಸೌಜನ್ಯದ ಪರಿಪಾಠ ಅಷ್ಟಾಗಿ ಬೆಳೆದು ಬಂದಿಲ್ಲ. ಹೀಗಾಗಿ ನಾನೊಬ್ಬ ಅಪರಿಚಿತನಾಗಿಯೇ ಉಳಿದೆ. ಮುಂದಾಗಿ ಹೋಗಿ, ಯಾರೊಬ್ಬರಿಗೂ ಪರಿಚಯ ಹೇಳಿಕೊಂಡು ಕೈಕುಲುಕುವ ಅಥವಾ ನಮಸ್ಕರಿಸುವ ಜಾಯಮಾನಕ್ಕೆ ಸೇರಿದವ ನಾನಲ್ಲ. ಮುಂದಿನ ಕೆಲದಿನ ಅಲ್ಲಿದ್ದಾಗ, ಕಡಲ ತೀರದ ವಿಹಾರಕ್ಕೆ ಅವರು ಹೊರಟಿದ್ದಾಗ ನಾನು ವಿರುದ್ಧ ದಿಕ್ಕಿನಲ್ಲಿ ಗುಡ್ಡ ಬೆಟ್ಟಗಳತ್ತ ಹೊರಟದ್ದುಂಟು. 'ನಮಸ್ಕಾರ ಸರ್' ಅಂದಾಗ ಅವರೂ ನಮಸ್ಕರಿಸುತ್ತಿದ್ದರು. ಯಾರೋ ವಿದ್ಯಾರ್ಥಿ ಅಥವಾ ಅಲ್ಪ ಪರಿಚಿತನೆಂದು ಅವರು ಊಹಿಸಿಕೊಂಡು ಮುನ್ನಡೆಯುತ್ತಿದ್ದರು. ನಮ್ಮ ಊರವರ ಸಣ್ಣತನ, ಕಾಲೇಜಿನ ಹಣಕಾಸಿನ ದುರವಸ್ಥೆ, ವಿದ್ಯಾರ್ಥಿಗಳ ಬೇಶಿಸ್ತಿನ ವರ್ತನೆಗಳಿಂದಾಗಿ ಅವರು ರಾಜೀನಾಮೆ ಕೊಟ್ಟರು ಎಂಬ ಸುದ್ದಿ ಕೇಳಿದೆ. ತುಂಬ ನೊಂದುಕೊಂಡವರಲ್ಲಿ ನಾನೊಬ್ಬನಾಗಿದ್ದೆ. ಅವರಿಂದ ಯಾವೊಂದೂ ಸಾಹಿತ್ಯಿಕ ಪ್ರಯೋಜನವನ್ನು ನಮ್ಮವರು ಪಡೆಯಲಿಲ್ಲ ಎಂಬ ಕೊರಗು ಇಂದಿಗೂ ಇದೆ.

ನನಗೆ ಸಾಹಿತ್ಯದಲ್ಲಿ ಆಸಕ್ತಿ ಇದ್ದರೂ, ನಾನೋರ್ವ ಸಾಹಿತಿ ಆಗಲು ಆಸೆ ಪಟ್ಟವನಲ್ಲ. ಶಾಲೆ, ಕಾಲೇಜುಗಳಲ್ಲಿ ಯಾವೊಂದು ಕತೆ ಕವನ, ಪ್ರಬಂಧ, ಲೇಖ ಬರೆದವನಲ್ಲ ಆದರೆ ಅಮೇರಿಕೆಯಲ್ಲಿ ಪಡೆದ ಅನುಭವಗಳನ್ನು ಪ್ರವಾಸಕಥನರೂಪದಲ್ಲಿ ರಚಿಸಲು ಆಮಂತ್ರಣ ಬಂದಾಗ, ಸಾಹಿತ್ಯದ ಈ ಪ್ರಕಾರದಲ್ಲಿ ಯಾರ ಮೇಲ್ಪಂಕ್ತಿ ಅನುಸರಿಸಲಿ, ಎಂಬ ಗೊಂದಲ ಆಗಲೇ ಇಲ್ಲ! ನನಗರಿಯದೆಯೇ ವಿ. ಸೀ. ಅವರು ಈ ಏಕಲವ್ಯನ ಗುರುಗಳಾಗಿಬಿಟ್ಟಿದ್ದರು. ನನ್ನ ಪ್ರಥಮ ಕೃತಿಯನ್ನು ತಿಳಿಯಾದ ಶೈಲಿಯಲ್ಲಿ, ನವಿರಾದ ಹಾಸ್ಯಲೇಪದಲ್ಲಿ ಬರೆದಿದ್ದೇನೆಂದು ವಿಮರ್ಶಕರು ಗುರುತಿಸುತ್ತಾರೆ. ಅದು ಅಪಾರ ಜನಪ್ರಿಯತೆಗಳಿಸಿತು. ಆರೇಳು ಮುದ್ರಣಗಳನ್ನು ಕಂಡಿತು. ಆ ಬಳಿಕ ಇನ್ನೂ, ಐದು ಪ್ರವಾಸ ಕಥನಗಳು ಬೆಳಕು ಕಂಡಿವೆ. ಎಲ್ಲವುಗಳಲ್ಲಿ ಇವೇ ಸೂತ್ರಗಳ ಬಳಕೆಯಾಗಿದೆ. ಆದ್ದರಿಂದ ಮುಂದೊಮ್ಮೆ ನನ್ನ ಪ್ರವಾಸ ಕಥನಗಳ ಆಳವಾದ ಅಭ್ಯಾಸವನ್ನು ಯಾರಾದರೂ ಕೈಕೊಂಡರೆ, ಇವರದು, ವಿ. ಸೀ. ಪ್ರೋತ್ಸಾಹಿತ ಬರವಣಿಗೆ, ಎಂಬ ತೀರ್ಮಾನಕ್ಕೆ ಬಂದರೆ ಅಚ್ಚರಿಯಿಲ್ಲ!

❑

# ೨. ಕನ್ನಡ ವಿಶ್ವಕೋಶದ ಪ್ರಾಣಿಶಾಸ್ತ್ರ ವಿಭಾಗ

(ಸಂಪುಟ: ೧ ಪುಟ-೧೧ ಅಂಕುಶ ಕಪಾಲಿ, ೧೩೫ ಅಂಬಲಿಮೀನು, ೧೩೬ ಅಂಬುಳ, ೧೪೦ ಅಕಶೇರುಕಗಳು, ೩೨೪ ಅಪ್ಸರೆಕೀಟ (Nymph), ೫೧೬ ಅಲಕಪಾದಿಗಳು: ಸಿರ್ರಿ ಪೀಡಿಯ, ೫೧೬ ಲಿಪಾಸ್ (Lepas), ೫೧೯ ಅಲಿಗೇಟರ್-ಮೊಸಳೆ, ೫೫೭ ಅವಳಿಗಳು, ೬೦೭ ಅಸ್ಥಿಮತ್ಸ್ಯಗಳು (Bony fish), ೬೪೬ ಅಂಥೊಜೋವ (Anthozoa), ೬೫೦ ಅನಿಮೂನ (ಎನಿಮೋನ್), ೬೨೭ ಅಂಬ್ಲಿಪ್ರೋಡ, ೭೯೮ ಆಪ್ಟೇರಿಗೋಟಾ, ೮೭೬ ಆರ್ಕಿಯಾಪ್ಟೆರಿಕ್ಸ್. ೮೮೧ ಆರ್ಟಿಯೋಡ್ಯಾಕ್ಟೈಲ, ೮೮೭ ಆರ್ಥಾಪ್ಟೆರಾ (Orthoptera).

ಸಂಪುಟ: ೨ ಪುಟ-೭ ಅಲಿಗೊ ಕೀಟ, (Oliga cheata) (ಇದು ವರ್ಗದ ಹೆಸರು, ಒಂದೇ ಶಬ್ದವಾಗಬೇಕಿತ್ತು.) ೧೦೪ ಆಸ್ಟೆರ್ಯಾಡಿಯಾ, ೭೩೬ ಉರಗಪಕ್ಷಿ, ೭೩೮ ಅಲ್ಲೊಸಾರಸ್, ೭೩೮ ಟ್ರೈಸೆರ್ ಟಾಪ್ಸ್, ೭೪೨ ಬ್ರಾಂಟೊಸಾರಸ್, ೮೬೦ ಎಕಿನ್ಯಾಡಿಯಾ, ೮೬೦ ಎಕಿನೊಡರ್ಮೆಟಾ, (Echinodermata). ೮೬೧ ಜನಪರಿಚಲನಾಂಗ, ೮೬೭ ಎಕಿಯೂರ್ಯಾಡಿಯ, ೮೭೦ ಎಕ್ಟೋಫ್ರಾಕ್ಟ.

ಸಂಪುಟ: ೩ ಪುಟ-೨೧-ಎರೆಹುಳು, ೩೩ ಎಲುಗುಟ್ಟು, ಅಕಶೇರುಕಗಳು, ೩೩ ಖೈಟಿನ್ (Chitin), ೩೦೭ ಐಸೊಪ್ರೋಡ ೪೩೯ ಒಡೊಂಟಾರ್ನಿಥಿಸ್, ೪೩೯ ಒಡೊನೇಟಾ (Odonata), ೫೩೬ ಸ್ಪೈರಕಲ್ಲು (Spiracle), ೫೯೫ ಕಠಿಣಚರ್ಮಿಗಳು, ಕಂಬಳಿಹುಳು ೬೦೩ ಕಡಲ ಆನೆ, ೬೦೫ ಕಡಲ ಗಿಣಿ, ೬೦೬೦ ಕಡಲ ಚಿಟ್ಟೆ, ಕಡಲ ಚಿರತೆ, ೬೦೭ ಕಡಲ ಬೀಸಣಿಕೆ, ೬೦೯ ಕಡಲ ಹೂ ೬೨೬ ಕಣಜಕ್ಕೆ ಹತ್ತುವ ಹುಳುಗಳು, ೬೪೩ ಕತ್ತರಿಹುಳುಗಳು (Cutworms), ೮೪೩ ಕನ್ಯಾಕೀಟ, ೮೫೯ ಕಪ್ಪೆ (ಪೆರಿಫ್ರಾಕ್ಟಾ. ಎಂಡೊಸೈಕ್ಲಿಕ್.)

**(ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದ ಕನ್ನಡ ವಿಶ್ವಕೋಶದ 3 ಸಂಪುಟಗಳಲ್ಲಿ, ಮೇಲ್ಕಂಡ ವಿಷಯಗಳ ಬಗ್ಗೆ ಇರುವ ಲೇಖನಗಳನ್ನು ಇಲ್ಲಿ ಪರಿಶೀಲಿಸಿದೆ.**

**ಈ ಲೇಖನದಲ್ಲಿ ಮುಂದೆ ಕೊಡುವ ರೋಮನ್ ಅಂಕಿಗಳು ಸಂಪುಟಕ್ಕೂ, ಸಾದಾ ಅಂಕಿಗಳು ಆಯಾ ಸಂಪುಟದಲ್ಲಿನ ಪುಟಸಂಖ್ಯೆಗೂ ಅನ್ವಯಿಸುತ್ತವೆ.)**

ವಿಶ್ವಕೋಶವು ಜ್ಞಾನ ವಿಜ್ಞಾನಗಳು ಛಟ್ಟೆಯಿಳಿದ ಸಾರ ಸಂಗ್ರಹವಾಗಿ, ಜ್ಞಾನ ಪ್ರಸಾರ ಮಾಧ್ಯಮವಾಗಿ, ಸುಲಭಗ್ರಾಹ್ಯವಾಗಿ ಸರ್ವರಿಗೂ ಅಕ್ಷಯನಿಧಿಯಾಗಿರಬೇಕೆಂದು ಪ್ರಥಮ ಸಂಪುಟದ ಪೀಠಿಕೆಯಲ್ಲಿ ಹೇಳಲಾಗಿದೆ. ಲೇಖನಗಳು ಚಿಕ್ಕವಾಗಿ, ಚೊಕ್ಕಟವಾಗಿ, ಭಾಷೆ ಸರಳವಾಗಿ, ಅಂತರ್ ರಾಷ್ಟ್ರೀಯ ಶಬ್ದಗಳನ್ನೆ ಬಳಸಬೇಕು ಎಂಬುದು ವಿಸ್ವಕೋಶದ ಸಂಪಾದಕ ಮಂಡಳಿ ಇಟ್ಟುಕೊಂಡು ಧ್ಯೇಯ. ಈ ದೃಷ್ಟಿಕೋನವಿಟ್ಟುಕೊಂಡು ಪ್ರಥಮ ಮೂರು ಸಂಪುಟಗಳಲ್ಲಿಯ ಪ್ರಾಣಿಶಾಸ್ತ್ರದ ಲೇಖನಗಳನ್ನು ಅಭ್ಯಸಿಸಿ, ವೈದ್ಯಕೀಯ ಸಸ್ಯ ಅರಣ್ಯಶಾಸ್ತ್ರ ವಿಭಾಗಗಳನ್ನು ಓದಿದ್ದೇನೆ: ಉಳಿದ ಲೇಖನಗಳ ಮೇಲೆ ಕಣ್ಣು ಹಾಯಿಸಿದ್ದೇನೆ. ಮುಂದಿನ ಸಂಪುಟಗಳಲ್ಲಿಯಾದರೂ ಕೆಳಕಾಣಿಸಿದ ತೀರ ಎದ್ದು ಕಾಣುವ ಲೋಪದೋಷಗಳಿರದಿರಲಿ ಎಂಬ ಉದ್ದೇಶದಿಂದ ಈ ಲೇಖನ ಬರೆಯುವ ಸಾಹಸ ಮಾಡಿದ್ದೇನೆ.

ಜನಸಾಮಾನ್ಯರಿಗೂ ಜ್ಞಾನಪ್ರಸಾರದ ಮಾಧ್ಯಮವಾಗಬೇಕಾದ ವಿಶ್ವಕೋಶದ ಲೇಖಕರು ದೊಡ್ಡ ದೊಡ್ಡ ಪದವಿಗಳನ್ನು ಪಡೆದವರಾಗಲೀ, ಸಂಸ್ಥೆಯ ಮುಖ್ಯಸ್ಥರಾಗಲೀ, ಇರಬೇಕೆಂಬ ನಿಯಮವಿಲ್ಲ. ವಿಶ್ವಕೋಶದ ಲೇಖಕರು ಗಡುಚಾದ ವಿಷಯಗಳನ್ನು ಅರಗಿಸಿಕೊಂಡು ವಿದ್ಯಾರ್ಥಿಗಳಿಗೆ ತಿಳಿಹೇಳುವಂತೆ ತಿಳಿಯಾದ ಕನ್ನಡದಲ್ಲಿ ಮೂಡಿಸಬೇಕು. ಈ ಮಾಪನದಿಂದ ಅಳೆದರೆ ಅತಿ ಕಡಿಮೆ ಲೇಖಕರು ಫಲಕಾರಿಯಾಗಿ ತಮ್ಮ ವಿಷಯವನ್ನು ಮಂಡಿಸಿದ್ದಾರೆ. ಹೆಚ್ಚಿನ ಲೇಖನಗಳು ಬೇರೆ ಭಾಷೆಯಿಂದ ಅನುವಾದ ಹೊಂದಿದವು. ಅಸ್ಥಿಮತ್ಸ್ಯಗಳು (I-607) ಈ ಲೇಖ ಜನಸಾಮಾನ್ಯರಿಗೆ ತಿಳಿಯುವುದಿರಲಿ ಪ್ರಾಣಿಶಾಸ್ತ್ರವನ್ನು ಆಳವಾಗಿ ಅಭ್ಯಸಿಸಿದವರಿಗೂ ಸುಲಭವಾಗಿ ಅರ್ಥವಾಗುವಂತಿಲ್ಲ. ಇದರಂತೆ ಆರ್ಕಿಯಾಪ್ಟೆರಿಕ್ಸ್ (I-876) ಆರ್ಟಿಯೊಡ್ಯಾಕ್ಟೈಲ್ (I-883) ಉರಗಪಕ್ಷಿ (II-736) ಉರಗವರ್ಗ (II-737) ಮುಂತಾದ ಲೇಖನಗಳು ಗಡಚಾಗಿವೆ. ಪಠ್ಯಪುಸ್ತಕಗಳಲ್ಲಿ ಪ್ರಾಣಿಶಾಸ್ತ್ರದ ವಿದ್ಯಾರ್ಥಿಗಳಿಗೆ ತಿಳಿಯಬೇಕಾದ ತುಲನಾತ್ಮಕ

ವಿವರಣೆಗಳನ್ನು ಕೊಟ್ಟಿರುತ್ತಾರೆ. ಇಂತಹ ಲೇಖನಗಳು ಕನ್ನಡ ಪಠ್ಯಪುಸ್ತಕ, ವಿಷಯಕೋಶಗಳಿಗೆ ಮೀಸಲಾಗಿರಬೇಕಲ್ಲದೇ ವಿಶ್ವಕೋಶಕ್ಕೆ ಅಲ್ಲ. ಉರಗವರ್ಗ (II-737) ದ ಬಗ್ಗೆ ಹದಿನೆಂಟು ಕಾಲಮಿನಷ್ಟು ಬರೆಯಲಾಗಿದೆ. ಅದರಲ್ಲಿಯ ಎಂಟು ಕಾಲಮುಗಳನ್ನು ಜೀರ್ಣಿಸಿಕೊಳ್ಳುವ ಕನ್ನಡಿಗರು ಕೈಬೆರಳುಗಳ ಮೇಲೆ ಎಣಿಸುವಷ್ಟು ಇರುವರೋ ಇಲ್ಲವೋ! ಎರಡು ಕಾಲಮಿನಷ್ಟು ಬರೆದು ಹೆಚ್ಚಿನ ವಿವರಗಳನ್ನು ಎಲ್ಲಿಂದ ಪಡೆಯಬಹುದು ಎಂದು ಸೂಚಿಸಿದರೆ ಸಾಕಿತ್ತು.

ವಿಜ್ಞಾನಿಗಳೆಲ್ಲ ಸಾಹಿತಿಗಳಾಗಬೇಕಿಲ್ಲವಾದರೂ ಲೇಖನಗಳನ್ನು ಚಿಕ್ಕದಾಗಿ ಚೊಕ್ಕಟವಾಗಿ ಬರೆಯಲು ಬೇಕಾಗುವ ಪರಿಣಾಮಕಾರಿ ಭಾಷೆ ಅವರಿಗೆ ಕರಗತವಾಗಿರಬೇಕು. ಲೇಖಕರಿಗೆ ಭಾಷೆಯ ಮೇಲೆ ಹಿಡಿತವಿಲ್ಲದಿದ್ದಾಗ ಸಂಪಾದಕರು ಆ ಕೆಲಸವನ್ನು ವಹಿಸಿಕೊಳ್ಳಬೇಕಾಗುವುದು. ವಿಶ್ವಕೋಶದಲ್ಲಿ ಈ ಕೆಲಸ ದಕ್ಷತಾಪೂರ್ವಕವಾಗಿ ನಡೆದಿಲ್ಲ ಎಂಬುದಕ್ಕೆ ಹಲವಾರು ಉದಾಹರಣೆಗಳನ್ನು ಕೊಡಬಹುದಾಗಿದೆ. ಉದಾ: ಆರ್ಥೋಪ್ಟೆರಾ (I-798) "12 ಖಂಡಗಳು (ಉಂಗುರದಂಥ ರಚನೆ) ಉದರದಲ್ಲಿವೆ." "ಪ್ರಾಯದ ಕೀಟದ ಹೊಟ್ಟೆಯಲ್ಲಿ 12 ಖಂಡಗಳಿವೆ." ಓದುಗನಿಗೆ ಈ ವಾಕ್ಯಗಳಿಂದ ಕೀಟದ ಹೊಟ್ಟೆಯಲ್ಲಿ 12 ಖಂಡಗಳಿವೆ ಎಂಬ ತಪ್ಪು ಕಲ್ಪನೆ ಬರುವ ಸಾಧ್ಯತೆಗಳಿವೆ. "ಶರೀರ 12 ಖಂಡಗಳಿಂದ ಕೂಡಿದ್ದಾಗಿದೆ" ಎಂದರೆ ಅಪಾರ್ಥಕ್ಕೆ ಅವಕಾಶವೇ ಇರುತ್ತಿರಲಿಲ್ಲ. ಆರ್ಟಿಯೋಡ್ಯಾಕ್ಟೈಲ್ (I-881) ದ ಎರಡು ಕಾಲಮಿನಲ್ಲಿ 27 ಬಾರಿ ಈ ಗುಂಪಿನ ಹೆಸರನ್ನು ಬರೆಯಲಾಗಿದೆ! ಶಿರೋನಾಮೆಯಲ್ಲಿ ಬಳಸಿದ ಹೆಸರನ್ನು ಪ್ರತಿಸಲ ಬಳಸುವ ಆವಶ್ಯಕತೆ ಏನಿದೆ? ಸರ್ವನಾಮಗಳನ್ನು ಉಪಯೋಗಿಸಿದರೆ ಆರು ಸಾಲುಗಳ ಸ್ಥಳವನ್ನು ಉಳಿತಾಯ ಮಾಡಬಹುದಾಗಿತ್ತು. ಕೆಲವು ಲೇಖನಗಳಲ್ಲಂತೂ ಇಂಗ್ಲಿಷ್ ಮಿಶ್ರಿತ ಕ್ಲಿಷ್ಟ ಕನ್ನಡ ಭಾಷೆಯನ್ನು ಬಳಸಲಾಗಿದೆ. ಉದಾ: ಎಕಿನಾಯ್ಡಿಯ (II-860) "ಕವಚದ ಮೇಲ್ಭಾಗದಲ್ಲಿ ಒಂದು ಗುಂಪಾಗಿ ಜೋಡಿಸಲ್ಪಟ್ಟಿರುವ ಹತ್ತು ತಟ್ಟೆಗಳಿವೆ. ಇದಕ್ಕೆ ಎಪಿಕಲ್ ಸಮೂಹ ಎಂದು ಹೆಸರು. ಇವುಗಳ ಮಧ್ಯದ ತಟ್ಟೆಗೆ ಪೆರಿಫ್ರಾಕ್ಟ ಎಂದು ಹೆಸರು. ಎಂಡೋಸೈಕ್ಲಿಕ್ಗಳಿಗೆ ಪೆರಿಫ್ರಾಕ್ಟದ ಮತ್ತು ಎಪಿಕಲ್ ಸಮೂಹದ ಹೊರಗೆ ಇರುತ್ತದೆ." ಆಂಗ್ಲಶಬ್ದಗಳನ್ನು ಆದಷ್ಟು ಕಡಿಮೆ ಬಳಸಿ ಸಾಮಾನ್ಯರಿಗೆ ತಿಳಿಯುವಂತೆ ವಿವರಿಸಿ ಬರೆದಿದ್ದರೆ ಎಷ್ಟು ಉತ್ತಮವಾಗಿರುತ್ತಿತ್ತು? ಒಂದೇ ಪ್ರಾಣಿಗೆ ಒಂದು ಲೇಖದಲ್ಲಿ 'ಸಮುದ್ರದ ಅನಿಮೋನ' (I-650) ಎಂದು ಕರೆದರೆ ಇನ್ನೊಂದು ಲೇಖನದಲ್ಲಿ "ಕಡಲಹೂ" (III-609) ಎಂದು ಕರೆಯಲಾಗಿದೆ. ಈ ಎರಡೂ ಹೆಸರುಗಳು ಒಂದೇ ಪ್ರಾಣಿಗೆ ಅನ್ವಯಿಸುತ್ತವೆ ಎನ್ನುವುದು ಲೇಖಕರಿಗೂ, ಸಂಪಾದಕರಿಗೂ ತಿಳಿಯದಿದ್ದಾಗ ಸಾಮಾನ್ಯನ ಗತಿ ಏನು?

ವಿಜ್ಞಾನ ಲೇಖನದಲ್ಲಿ ಅಪಾರ್ಥವಾಗುವಂತಹ ಮಾಹಿತಿ ಹೋಗದಂತೆ ಎಚ್ಚರವಹಿಸಬೇಕು. ಹಲಲವಾರು ಲೇಖನಗಳಲ್ಲಿ ಇಂತಹ ತಪ್ಪುಗಳು ಉಳಿದುಬಿಟ್ಟಿವೆ. ಹಾರುವ ಅಳಿಲು (I-634) : ಇದರ ಬಗ್ಗೆ ವಿವರಿಸುವಾಗ ಇದರ ಶರೀರದ ಎರಡೂ ಬದಿಗೆ ಪಸರಿಸಿಕೊಂಡ, ಸಡಿಲಾದ ಪ್ಯಾರಾಚೂಟದಂತಹ ಚರ್ಮವೆ ಇದರ ರೆಕ್ಕೆ. ಇವುಗಳ ಸಹಾಯದಿಂದ ಅವು ಹಾರುತ್ತವೆಂದು ಬರೆಯಲಾಗಿದೆ. ಹಾರುವ ಅಳಲಿಗ ರೆಕ್ಕೆಗಳಿರುವುದಿಲ್ಲ. ಅದು ಹಾರುವುದಿಲ್ಲ. ಮುಂಗಾಲು ಹಿಂಗಾಲುಗಳ ನಡುವೆ ಹರಡಿಕೊಂಡ ಪರೆಯಿಂದ ಉಂಟಾದ ಚೀಲದಲ್ಲಿ ಹವೆ ತುಂಬಿಕೊಳ್ಳುವುದರಿಂದ ಎತ್ತರದ ಮರದಿಂದ ಕೆಳಕ್ಕೆ ಹವೆಯಲ್ಲಿ ತೇಲಬಹುದಾಗಿದೆ. ಪ್ಯಾರಾಚೂಟಿನಿಂದ ಕೆಳಕ್ಕೆ ಇಳಿಯುವ ಮಾನವನನ್ನು ಹಾರುತ್ತಾನೆ ಎನ್ನಬಹುದೆ? "ಕೆಲವು ಕಂಬಳಿ ಹುಳುಗಳ ಶರೀರ ದ್ರವ್ಯವೂ ವಿಷಪೂರಿತವಾಗಿರುತ್ತವೆ" (III-636) ಕಂಬಳಿ ಹುಳುವಿನಲ್ಲಿ ಇರುವುದು ಉರಿಯನ್ನು ಎಬ್ಬಿಸುವ ದ್ರವ್ಯ. ವಿಷಕಾರಿಯಲ್ಲ. "ಅರಗಿನ ಕೀಟಕ್ಕೆ ರೆಕ್ಕೆಯಿಂದ ಹೆಚ್ಚೇನೂ ಪ್ರಯೋಜನವಿಲ್ಲ (I-445), 'ರೆಕ್ಕೆಗಳಿದ್ದುದರಿಂದಲೇ ಅವು ದೂರದೂರದ ವರೆಗೂ ಪಸರಿಸಲು ಸಾಧ್ಯವಾಗುವುದು. ಎಲ್ಲ ಕಾಲದಲ್ಲಿಯೂ ರೆಕ್ಕೆಗಳಿಲ್ಲದ ಸಂತತಿ ಅವುಗಳಿಗಿದ್ದರೆ ಹತ್ತಿರದ ಮರಗಳಿಗೂ ಧಾಪಿಸುವುದು ಸಾಧ್ಯವಾಗುತ್ತಿತ್ತೋ ಇಲ್ಲವೋ! ಅಲಿಗೇಟರ (I-519) "ಸುಮಾರು ಮೂರು ತಿಂಗಳು ಕಾವು ಕೊಟ್ಟ ಮೇಲೆ ಮೊಟ್ಟೆ ಒಡೆದು ಮರಿ ಹೊರಗೆ ಬರುವುದು." ಅಲಿಗೇಟರ ಶಿಸಿರಕ್ತದ ಪ್ರಾಣಿಗಳಲ್ಲದ್ದರಿಂದ ಅವು ಪಕ್ಕಿಗಳು ಕಾವು ಕೊಟ್ಟಂತೆ ಕೊಡಲಾರವು. ವೈರಿಗಳಿಂದ ಮೊಟ್ಟೆಗಳನ್ನು ರಕ್ಷಿಸಲು ಅವು ಕಾವಲು ಕೂತಿರುತ್ತವೆ.

ಪ್ರಾಣಿಶಾಸ್ತ್ರದಲ್ಲಿ ವಿಶ್ವದ ತುಂಬೆಲ್ಲ ಸಮಾನತೆ ಇರಬೇಕು ಎಂದು ಅಂತರ್ ರಾಷ್ಟ್ರೀಯ ಪ್ರಾಣಿಶಾಸ್ತ್ರದ ನಿಯಮಾವಳಿಯಿದೆ. ಅದರ ಪ್ರಕಾರ ಯಾವುದೇ ಪ್ರಾಣಿಯ ವೈಜ್ಞಾನಿಕ ಹೆಸರು ಎರಡು ಶಬ್ದಗಳಿಂದ ಒಡಗೂಡಿದ್ದು ಇರಬೇಕು ಮತ್ತು ಅವುಗಳನ್ನು ಸಣ್ಣ ಅಕ್ಷರಗಳಲ್ಲಿ (Italics) ಬರೆಯಬೇಕು. ಅದನ್ನು ಟಾಯಿಪ್ ಮಾಡಿಸಿದಾಗ ಇಲ್ಲವೇ ಮುದ್ರಿಸಿದಾಗ ಅದರ ಅಡಿಯಲ್ಲಿ ಗೀಟು ಎಳೆದು

ತೋರಿಸಬೇಕು. ಉದಾ: ಭಾರತೀಯ ಕಪ್ಪೆಯ ಹೆಸರು– ರಾಣಾ ಟೈಗ್ರೀನಾ ಎಂದು ಬರೆಯಬೇಕು. ಈ ನಿಯಮವನ್ನು ಯಾವ ಲೇಖಕರೂ ಪಾಲಿಸಿಲ್ಲ. ಪ್ರಾಣಿಗಳ ವರ್ಗೀಕರಣದಲ್ಲಿ ಮಹಾಕುಟುಂಬ, ಕುಟುಂಬ, ಉಪಕುಟುಂಬ, ಪಂಗಡ ಮೊದಲಾದವುಗಳ ಅಂತ್ಯ ಅಕ್ಷರಗಳು– ಒಯ್ಡಿಯ (-oidea) –ಇಡಿ (-idae) –ಇನಿ (-inae) ಮತ್ತು ಅಯನಿ (-ini) ಮುಂತಾದವು ಇರಬೇಕೆಂಬ ನಿಯಮವಿದೆ. ಈ ನಿಯಮವನ್ನು ಅನುಸರಿಸಿದರೆ ಅರ್ಥಾಪ್ಟೆರ (I-889); ಫಾಸ್ಮಿಟೆಡ್ (I-888); ಆಸ್ಪೆರಾಯ್ಡಿಯ (II-104); ಎಕಿನೋಡರ್ಮಟ (II-860); ಈ ಹೆಸರುಗಳು ಒರ್ಥೋಪ್ಟೆರಾ. ಫೆಸ್ಮಿಡಿ, ಒಸ್ಟರಾಯ್ಡಿಯಾ, ಎಕಿನೊಡರ್ಮೆಟಾ ಎಂದಾಗಬೇಕಾಗಿತ್ತು.

ಆಂಗ್ಲಭಾಷೆಯ ಹೆಸರುಗಳನ್ನು, ಅವರು ಉಚ್ಚರಿಸಿದಂತೆ ಬರೆದರೆ ಯಾವ ಗೊಂದಲಕ್ಕೂ ಕಾರಣವಾಗುವುದಿಲ್ಲ. ಕರ್ನಾಟಕದ ವಿವಿಧ ಭಾಗಗಳಲ್ಲಿ ಆಂಗ್ಲಶಬ್ದಗಳ ಉಚ್ಚಾರಣೆಯ ಪದ್ಧತಿ ಬೇರೆ ಬೇರೆ ಇರುವುದರಿಂತ ಒಂದೇ ರೀತಿಯಾಗಿ ಹೆಸರುಗಳನ್ನು ಬರೆಯುವುದು ಅತ್ಯವಶ್ಯ. ಆಂಗ್ಲ ಹೆಸರುಗಳು– oe - oi - eu - ei - ai - au ಎಂದು ಅಂತ್ಯಗೊಂಡರೆ ಇ, ಒಯ್, ಯು, ಆಯ್, ಎ, ಒ, ಎಂದು ಉಚ್ಚರಿಸಬೇಕು. ಇದರಂತೆ 'c' ಅಕ್ಷರದ ಮುಂದೆ ae, e, oe, i, y ಗಳು ಬಂದರೆ ಅವನ್ನು "ಸ್" ಎಂದು ಮತ್ತು a, o, oi, u ಬಂದರೆ 'ಕ' ಎಂದೂ, 'ch' ಇದ್ದರೆ 'ಕೆ' ಎಂದೂ ಉಚ್ಚಾರ ಮಾಡಬೇಕು. 'G' ಅಕ್ಷರದ ಮುಂದೆ ae, e, oe, y ಗಳು ಬಂದರೆ 'ಜ' ಎಂದೂ a, o, oi, u ಗಳು ಬಂದರೆ 'ಗ' ಎಂದೂ ಉಚ್ಚಾರ ಮಾಡಬೇಕು. ಈ ನಿಯಮಗಳು ಮುಂಬರುವ ಸಂಪುಟಗಳಲ್ಲಿಯಾದರೂ ಪಾಲಿಸಲ್ಪಡಬಹುದು ಎಂದು ನಿರೀಕ್ಷಿಸೋಣವೆ?

ಒಂಟೆಹುಳ (I-887); ಒಂಟೆಯಂತೆಯೇ ಇರದೇ ಹುಳವೂ ಆಗಿರದಿದ್ದರೂ ಈ ಹೆಸರು ಬಂದುಬಿಟ್ಟಿದೆ. ಆದರೆ ಇಂಗ್ಲೀಷಿನಲ್ಲಿ ಅದನ್ನು 'Camel worm' ಎಂದು ಕರೆಯಬಹುದೆ? ಎಷ್ಟೋ ಲೇಖನಗಳಲ್ಲಿ ಆಂಗ್ಲ ಹೆಸರುಗಳನ್ನು ಹೀಗೆಯೇ ಕನ್ನಡಕ್ಕೆ ಭಾಷಾಂತರಿಸಲಾಗಿದೆ. ಉದಾಹರಣೆ: ಅಂಬಲಿಮೀನು (Jelly Fish) (I-135); ಅಪ್ಸರೆಕೀಟ (Nymph) (I-375); ಕಡಲಚಿಟ್ಟೆ (Sea-butterfly) (III-605); ಕಡಲಲಿಂಬೆ (Sea-lemon) (III-607); ಕಡಲ ಹೂ (Sea-animone) (III-609); ಕತ್ತರಿಹುಳ (Cut-worm) (III-643); ಕನ್ಯಾಕೀಟ (Dansel-fly) (III-843); ಮುಂತಾದುವು. ಲಿಪಾಸ್ (I-516); ಖೈಟಿನ್ (III-33); ಸ್ಪೈರಕಲ್ (III-536) ಗಳಂತಹ ಆಂಗ್ಲ ಶಬ್ದಗಳನ್ನು ಆಂಗ್ಲರು ಉಚ್ಚರಿಸುವಂತೆ ಲೆಪಸ್, ಕಾಯ್‌ಟಿನ್, ಸ್ಪಾಯ್ ರೆಕಲ್ ಎಂದೇ ಬರೆದರೆ ಗೊಂದಲಕ್ಕೆ ಆಸ್ಪದವೇ ಇರುತ್ತಿರಲಿಲ್ಲ. ಊರುಗಳ ಹೆಸರಗಳನ್ನು ಕೆಲವೆಡೆ ಓದುಗರಿಗೆ ಅರ್ಥವಾಗದಂತೆ ಬದಲಾಯಿಸಲಾಗಿದೆ. ಉದಾಹರಣೆ! ಅಂಕೋಲಾ (I-12) ಅಂದಮಾನ (I-72) ದಾಂಡೇಲಿ (I-450) ಆಗ್ರಾ (I-702) ಎರಿಝೋನಾ (I-471) ಗಳನ್ನು ಅಂಕೋಲ, ಅಂಡಮಾನ್, ದಂಡೇಲಿ, ಆಗ್ರಾ, ಅರಿಜೋನ ಎಂದು ನಮೂದಿಸಲಾಗಿದೆ. ರಾಜಾಸ್ಥಾನದ ಇತಿಹಾಸ ಪ್ರಸಿದ್ಧ ಭರತಪುರವನ್ನು ಉತ್ತರಪ್ರದೇಶಕ್ಕೆ ಸೇರಿಸಿಬಿಟ್ಟಿದ್ದಾರೆ. ಭೂಗೋಲ ಲೇಖನ ಒಂದರಲ್ಲಿ. ಕೆಲವು ಲೇಖನಗಳ ಧಾಟಿ ಉದ್ದಿಮೆಯ ಮೇಲಧಿಕಾರಿ, ವಾರ್ಷಿಕ ಸಭೆಯಲ್ಲಿ ಮಾಡಿದ ಭಾಷಣವೋ ಎನಿಸುವಂತಿದೆ. ಉದಾ: (I-450) ಬಿದಿರನ್ನು ರೇಯಾನ್ ಆಗಿ ಉಪಯೋಗಿಸಲು ಮೊದಲು ಭಾರತಕ್ಕೆ ತೋರಿಸಿಕೊಟ್ಟ ಹಿರಿಮೆ ಈ ಸಂಸ್ಥೆಯದು. ಅರಗಿನ ಕೀಟ ಸಾಕಲು ವಿವಿಧ ವೃಕ್ಷಗಳ ಬಳಕೆಯನ್ನು ಜನಸಮಾನ್ಯರಿಗೆ ಪರಿಚಯ ಮಾಡಿಸಿ ಅರಗಿನ ತಯಾರಿಕೆ ಹೆಚ್ಚು ಮಾಡಿರುವ ಹಿರಿಮೆ ಈ ಸಂಸ್ಥೆಗೇ ಸಲ್ಲುತ್ತದೆ. ಈ ಸಂಸ್ಥೆ ಮಾಡಿರುವ ಮತ್ತೊಂದು ಕೆಲಸವೆಂದರೆ ಔಷಧಿ ಸಸ್ಯಗಳ ಕನ್ನಡದ ಹೆಸರುಗಳನ್ನೆಲ್ಲಾ ಕಲೆಹಾಕಿ ಅವುಗಳಿಗೆ ಲ್ಯಾಟಿನ್ ನಾಮಗಳನ್ನು ನಿರ್ಧರಿಸಿ ಆಯುರ್ವೇದೀಯ ವೈದ್ಯರಿಗೆ ಸಹಾಯ ಮಾಡಿರುವುದು." ೧೯೩೬ರಿಂದ ಅಸ್ತಿತ್ವದಲ್ಲಿ ಇದ್ದ ಪ್ರಯೋಗಾಲಯವು ಸಾಧಿಸಿದ್ದು ಇಷ್ಟೆಯೇ ಎಂದು ಓದುಗನಲ್ಲಿ ವಿಚಾರ ಬಾರದಿರದು.

ತಿಳಿವಳಿಕೆಗೆ ಸಹಾಯವಾಗುವಲ್ಲಿ ಚಿತ್ರಗಳನ್ನು ಕೊಡುವುದು ವಾಡಿಕೆ. ಆದರೆ ವಿಶ್ವಕೋಶದ ಮೂರು ಸಂಪುಟಗಳಲ್ಲಿ ಬೇಕು ಬೇಡಗಳನ್ನು ವಿಚಾರಿಸದೆಯೇ ಸುಲಭವಾಗಿ ಸಿಗುವ ವರ್ಣ, ಛಾಯಾ, ರೇಖಾ ಚಿತ್ರಗಳನ್ನು ಸೇರಿಸಲಾಗಿದೆ. ವರ್ಣ ಚಿತ್ರಗಳನ್ನು ಸಂಗ್ರಹಿಸುವುದೂ ಮುದ್ರಿಸುವುದೂ ತುಂಬಾ ಖರ್ಚಿನದಾಗಿದ್ದರೂ ಆವಶ್ಯಕತೆಯಿಲ್ಲದಲ್ಲಿ ಚಿತ್ರಗಳನ್ನು ಸೇರಿಸಲಾಗಿದೆ. ಆನೆ, ಎಮ್ಮೆ ಕಪ್ಪೆ, ಹುಲಿ, ಸಿಂಹಗಳನ್ನು ನೋಡದ ಭಾರತೀಯರಿದ್ದಾರೆಯೇ? ಆದರೂ ಅವುಗಳ ವರ್ಣಚಿತ್ರಗಳು ವಿಶ್ವಕೋಶದಲ್ಲಿ ರಂಜಿಸುತ್ತವೆ.

ಆನೆಯ (I-449) ಮೂರು ಚಿತ್ರಗಳನ್ನು ಕೊಡಲಾಗಿದೆ. ಈ ಮೂರು ಚಿತ್ರಗಳನ್ನು ಒಂದೇ ಕಾಡಿನಲ್ಲಿ ಒಂದೇ ಗುಂಪಿನ (ಬಹುಶಃ ಒಬ್ಬನೇ ಚಿತ್ರಕಾರನು ತೆಗೆದದ್ದರಿಂದ) ವಾದ್ದರಿಂದ ಅವು ಒಂದರಿಂದೊಂದು ಯಾವ ವಿಧದಲ್ಲೂ ಭಿನ್ನವಾಗಿಲ್ಲ. ಕಪ್ಪೆಯ ಮೊಟ್ಟೆ ತೋರಿಸಬೇಕಾದ ವರ್ಣಚಿತ್ರ (I-860) ದಲ್ಲಿ ಕಗ್ಗತ್ತಲು ಆವರಿಸಿದೆ. ಬಿಳಿಯ ಕಪ್ಪೆ (I-860 ಚಿತ್ರ 5) ಇರಬೇಕಾದಲ್ಲಿ ಬೂದು ಬಣ್ಣದ ಕಪ್ಪೆ ಎಂದಿದೆ.

ಛಾಯಾಚಿತ್ರಗಳನ್ನು ವಿಶ್ವಕೋಶಕ್ಕಾಗಿಯೇ ತೆಗೆದವು ಯಾವುವು. ಇನ್ನಿತರ ಕಡೆಯಿಂದ ಸಂಪಾದಿಸಿದವು ಯಾವುವು ಎಂದು ನಮೂದಿಸಬೇಕಾಗಿತ್ತು. ಲೇಖಕರ ಹೆಸರುಗಳನ್ನು ಲೇಖನದ ಕೆಳಗೆ ಸೂಚಿಸಿದಂತೆ ಚಿತ್ರಗಾರರ ಹೆಸರನ್ನು ಕೊಡಬೇಕಾಗಿತ್ತು. ಗತಕಾಲದ ಪ್ರಾಣಿಗಳ ಚಿತ್ರಗಳನ್ನು (I-738) ಛಾಯಾಚಿತ್ರಗಳೆಂಬಂತೆ ಕೊಡಲಾಗಿದೆ. ಅವುಗಳ ಅಸ್ಥಿಗಳ ಆಧಾರದ ಮೇಲಿಂದ ಕಲಾಕಾರರು ನಿರ್ಮಿಸಿದ ಕಾಲ್ಪನಿಕ ಚಿತ್ರಗಳೆಂದು ತಿಳಿಸಿ ಹೇಳಬೇಕಾಗಿತ್ತು. ಇರುವೆಗಳ ಸಂಘಜೀವನ ತೋರಿಸಬೇಕಾದ ಛಾಯಾಚಿತ್ರದಲ್ಲಿ (II-420) ಯಾವ ವಿವರಗಳೂ ಕಾಣದ್ದರಿಂದ ಅದನ್ನು ಬಿಟ್ಟರೂ ಯಾವ ಹಾನಿಯಿರಲಿಲ್ಲ. ಕೆಲವು ಪ್ರಾಣಿಗಳ ಒಂದಕ್ಕಿಂತ ಹೆಚ್ಚು ಚಿತ್ರಗಳನ್ನು ಕೊಡಲಾಗಿದೆ. ಉದಾ: ಹಾರುವ ಅಳಿಲು (I-634 ಮತ್ತು II-572) ಕಡಲ ಹೂ (I-650 ಮತ್ತು III-609) ಕಂಬಳಿಹುಳ (III-207 ಮತ್ತು 536). ಪ್ರತಿಯೊಂದು ಚಿತ್ರಕ್ಕೂ ಅನುಕ್ರಮ ನಂಬರು, ಶಿರೋನಾಮೆ ಕೊಟ್ಟಿದ್ದರೆ ಬೇರೆಡೆಗೆ ಅದರ ಉಲ್ಲೇಖನ ಬಂದಾಗ ನೋಡಿ..............ಎಂದು ಬರೆದರಾಗುತ್ತಿತ್ತು. ಜನಸಾಮಾನ್ಯರಿಗೆ ಪರಿಚಯವಿದ್ದಂತಹ ಅಡಿಕೆ, ಯಾಲಕ್ಕಿ, ತುಳಸಿ. ಬಿಲ್ವಪತ್ರೆಕಾಯಿ, ಪರಂಗಿಕಾಯಿ, ಕಡಲೆ ಮೊದಲಾದುವುಗಳ ೧ ರಿಂದ ೬ ಚಿತ್ರಗಳನ್ನು ಕೊಡುವುದಕ್ಕಿಂತ ಬರೆದದ್ದನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುವಂತೆ ಅಂಬ್ಲಿಪೋಡ (I-672) ಐಸೋಪೋಡ (I-307) ಕಡಲ ಗಿಣಿ (I-605) ಕಡಲ ಚಿರತೆ (I-605) ಕಡಲ ತೋಳ (I-605) ಕಡಲ ಲಿಂಬೆ (III-606) ಕಡಲ ಬೀಸಣಿಕೆ (II-607) ಕಣಜಕ್ಕೆ ಹತ್ತುವ ಹುಳುಗಳು (I-636) ಮೊದಲಾದುವುಗಳ ಚಿತ್ರಗಳನ್ನು ಕೊಟ್ಟಿದ್ದರೆ ಚೆನ್ನಾಗಿರುತ್ತಿತ್ತು. ಛಾಯಾಚಿತ್ರಗಳು ಸುಲಭವಾಗಿ ಸಿಗದಿದ್ದಲ್ಲಿ ಉತ್ತಮ ರೇಖಾಚಿತ್ರಗಳನ್ನು ಬಳಸಬಹುದು. ವಿವಿಧ ಪ್ರಕಾರದ ಎರೆಹುಳು (III-21) ಇರುವೆಯ ವಿಧಗಳು (II-420) ತೋರಿಸಲು ತೆಗೆದ ಚಿತ್ರ ರೇಖಾಚಿತ್ರಗಳ ತಮ್ಮ ಧ್ಯೇಯವನ್ನು ಮುಟ್ಟಲಾರದಾಗಿವೆ. ಫೈಸಮಾರದ ಚಿತ್ರ ತಿರುಗು ಮುರುಗಾಗಿ ಬಿದ್ದಿದೆ. ವಿಶ್ವಕೋಶದವರು ಪ್ರಯತ್ನಿಸಿದ್ದರೆ ಇದಕ್ಕೂ ಉತ್ತಮ ವರ್ಣ, ಛಾಯಾ ರೇಖಾ ಚಿತ್ರಗಳನ್ನು ವಿವಿಧ ಕಲಾಕಾರರಿಂದ, ವಿಜ್ಞಾನಿಗಳಿಂದ ಸಂಪಾದಿಸಬಹುದಾಗಿತ್ತು.

ಲೇಖಕರು ಇನ್ನೂ ಶ್ರಮವಹಿಸಿದರೆ, ಸಂಪಾದಕರೂ ಇನ್ನೂ ಬಿಚ್ಚುಗಣ್ಣಿನಿಂದ ಲೇಖನಗಳನ್ನು ಅವಲೋಕಿಸಿದರೆ, ಯೋಗ್ಯವಿದ್ದಲ್ಲಿ ಉತ್ತಮ ಚಿತ್ರಗಳನ್ನು ಬಳಸಿದರೆ, ಕನ್ನಡ ವಿಶ್ವಕೋಶಕ್ಕೆ ಅಂತರ್ರಾಷ್ಟ್ರೀಯ ಸ್ಥಾನ ದೊರಕುವುದರಲ್ಲಿ ಸಂದೇಹವಿಲ್ಲ.

(ಸಾಕ್ಷಿ, ಜನವರಿ 1972 – ಹೇಮಂತ ಸಂಚಿಕೆಯಲ್ಲಿ ಪ್ರಕಟಿತ)



# ೩. ನಾಗರಿಕತೆಯ ಬೇನೆಗಳಿಂದ ಮುಕ್ತವಾದ ಮಾರಿಯ ಜನರ ನಗೆ ನಲಿವಿನ ಬದುಕು

ನೃತ್ಯ ಮಾರಿಯರ 'ಘೋಟುಲ್' ಪಲ್ಲಿಯ ಒಂದು ಮುಖ್ಯವಾದ ಚಟುವಟಿಕೆ. ಪ್ರತಿ ರಾತ್ರಿ ದೈನಂದಿನ ಚಟುವಟಿಕೆಗಳು ಮುಗಿದ ನಂತರ ಮಲಗುವ ಮುನ್ನ ಕೆಲ ಹೊತ್ತಾದರೂ ನೃತ್ಯದ ತಾಲೀಮು ಮಾಡುವುದಕ್ಕಾಗಿ ಮೀಸಲಿಡಲಾಗುತ್ತದೆ. ಢೋಲಿನ ಮೇಲೆ ಕೈಯಾಡಿಸಿ ಕೊಳಲಿನ ನಾದ ಹೊರಡಿಸಿದರೆಂದರೆ, ಯುವಕ-ಯುವತಿಯರು ಧಾವಿಸಿ, ಗ್ರಾಮದ ಬೈಲಿನಲ್ಲಿ ಇಳಿಯುತ್ತಾರೆ. ಇಬ್ಬರಿಂದ ಹಿಡಿದು ಇನ್ನೂರು ಜನ ಇದ್ದರೂ ನರ್ತಿಸುವ ಕಲೆಯನ್ನು ಅವರು ಕರಗತ ಮಾಡಿಕೊಂಡಿದ್ದಾರೆ. ನರ್ತಕರ ಅಭಾವವಿದ್ದಾಗ ಮುಂಭಾಗದಲ್ಲಿ ಯುವಕರು, ಅವರನ್ನು ಹಿಂಬಾಲಿಸಿ ಹೆಂಗಳೆಯರು, ಮುಂದಿನವರು ಹಾಡಿದ್ದನ್ನೇ ಪುನರುಚ್ಚರಿಸುತ್ತ ಕುಣಿಯುವರು. ಕಿರಿದಾದ ಹೆಜ್ಜೆ ಹಾಕುತ್ತ ಮುಂದೆ ಹೋಗಿ ನಂತರ ಹಿಂಗಾಲು ಹಾಕಿ ಹೊರಟಲ್ಲಿ ಬರುವದು ಅವರ ವಾಡಿಕೆ.

ಪ್ರಾರಂಭದಲ್ಲಿ 'ಲಿಂಗೊ' ದೇವರನ್ನು ಕುರಿತು ಹಾಡುವುದು ಸಂಪ್ರದಾಯ. ನಂತರ ಉಳಿದ ಹಾಡುಗಳನ್ನು ಹಾಡುವರು. ತೀರ ಕ್ಷೀಣ ಸ್ವರದಲ್ಲಿ ಪ್ರಾರಂಭಿಸಿ ನಡುವೆ ಒಮ್ಮೆಲೇ ತಡೆ ಹಾಕಿ, ತಿರುಗಿ ಹಾಡುವುದರಿಂದ, ಮಲೆನಾಡಿನ ತುಂತುರು ಮಳೆ ಮಾಡಿನ ಮೇಲೆ ಬಿದ್ದು ಹೊರಡಿಸುವ ನಾದ, ನೆನಪಿಗೆ ಬರುತ್ತದೆ. ನರ್ತಕರು ಬಹು ಸಂಖ್ಯೆಯಲ್ಲಿ ಇದ್ದರೆ ಗಂಡಸರು ಅರ್ಧ ವರ್ತುಲಾಕಾರದಲ್ಲಿ (ವರ್ತುಲ ನೃತ್ಯ) ಹೆಂಗಸರು ಇನ್ನೊಂದು ಅರ್ಧದಲ್ಲಿ ನಿಂತು ವರ್ತುಲ ಪೂರ್ಣಗೊಳಿಸಿ ನರ್ತಿಸುತ್ತಾರೆ. ನೃತ್ಯಕಾರರು ತಮ್ಮ ಬಲದಿಕ್ಕಿಗೆ ಹೆಜ್ಜೆ ಹಾಕುವದರಿಂದ ಈ ವರ್ತುಲ, ಗಡಿಯಾರದ ಚಲನೆಯ ವಿರುದ್ಧ ದಿಕ್ಕಿಗೆ ತಿರುಗುತ್ತದೆ. ಹಿರೆ ಮಾಣೆಯನ್ನು ಯುವ, ಯುವತಿ, ನೃತ್ಯಗಾರರು ವರ್ತುಲಾಕಾರದಲ್ಲಿ ಸುತ್ತುವರಿದಾಗ, ಅವನು ಮಾಂದ್ರಾ (ಮೃದಂಗ) ನುಡಿಸುತ್ತಾ ನರ್ತಿಸುತ್ತಾ ಮಾರ್ಗದರ್ಶನ ಮಾಡುವನು.

ತುಂಬ ಸಮಯದ ತನಕ ಸತತವಾಗಿ ನರ್ತಿಸುವುದರಿಂದ ಮಾರಿಯರ ಕುಣಿತವೆಂದರೆ ಕಠಿಣ ವ್ಯಾಯಾಮವಿದ್ದಂತೆ. ಈ ಕಲೆಯಲ್ಲಿ ಸಂಪೂರ್ಣ ಸಿದ್ಧಿ ಸಾಧಿಸಿದ ಹೊರತು ಘೋಟುಲ್‌ನ ಹೊರಗೆ ನೃತ್ಯ ಮಾಡಕೂಡದೆಂಬ ಕಡ್ಡಾಯವಿದೆ.

## ಅಮೂಲ್ಯ ಆಸ್ತಿ

ಸಾಮಾನ್ಯವಾಗಿ ಸಿಂಗರಿಸಿಕೊಂಡ ವಾದ್ಯಗಾರರು, ಹೆಂಗಳೆಯರು, ಜೊತೆಗೂಡಿ ನರ್ತಿಸುವದು ವಾಡಿಕೆಯಾದರೂ ಅಲಂಕಾರ-ವಾದ್ಯಗಳಿಲ್ಲದಿದ್ದರೂ ಅವರು ಕುಣಿಯಬಲ್ಲರು. ನೃತ್ಯಾಲಂಕಾರಗಳನ್ನು ತಮ್ಮ ಅಮೂಲ್ಯ ಆಸ್ತಿಯೆಂಬಂತೆ ಬಹಳ ಜೋಪಾನವಾಗಿ ಸಂಗ್ರಹಿಸಿಡುತ್ತಾರೆ. ವಾದ್ಯಾಗಳಿಗೂ ಪೂಜೆ ಸಲ್ಲಿಸುವ ಪರಿಪಾಠ ನಡೆದು ಬಂದಿದೆ. ನೆರೆ ಹೊರೆಯ ಹಳ್ಳಿಯಲ್ಲಿ ಎಲ್ಲಿಯೇ ಹಬ್ಬ-ಜಾತ್ರೆಯಿರಲಿ. ಮದುವೆಯಿರಲಿ, ಘೋಟುಲದ ತಂಡ, ಅಲ್ಲಿಗೆ ಹೋಗಿ ನರ್ತಿಸಿ ಆಹಾರ-ಮದ್ಯಗಳನ್ನು ಪಡೆಯುವರು. ಬೇರೆ ಊರಿಗೆ ಹೋಗಬೇಕಾದರೆ ನಸುಕಿನಲ್ಲಿಯೇ ಎದ್ದು ತಮ್ಮ ಅಲಂಕಾರದ ಸಾಮಾನುಗಳಿದ್ದ ಬೆತ್ತದ ಬುಟ್ಟಿಗಳನ್ನು ಹೊತ್ತು ಹೊರಡುತ್ತಾರೆ. ಶಾಂತವಾದ ನದಿಯ ದಡದಲ್ಲಿ ಇಲ್ಲವೆ ಹೆಮ್ಮರವೊಂದರ ಆಶ್ರಯದಲ್ಲಿ ಬೀಡು ಬಿಟ್ಟು ಮದುವೆ ಮನೆಯನ್ನು ಅಣಿಗೊಳಿಸುವದರಲ್ಲಿ ಇತರ ಕೆಲಸಗಳಲ್ಲಿ ಸಹಾಯ ಮಾಡಿ ಆಹಾರ-ಸೆರೆಗಳನ್ನು ಪಡೆದು ಬೀಡಿಗೆ ಹಿಂದಿರುಗಿ, ಅಡಿಗೆ ಮಾಡಿ ಉಂಡು, ಹರಟೆ, ಹಾಡು ತಮಾಷೆಗಳಲ್ಲಿ ಕಾಲ ಕಳೆಯುವರು. ಈ ಚಟುವಟಿಕೆಗಳಲ್ಲಿ ಸ್ತ್ರೀಯರೂ ನಿಸ್ಸಂಕೋಚವಾಗಿ ಭಾಗವಹಿಸುತ್ತಾರೆ. ಬೇರೆ ಬೇರೆ ಘೋಟುಲ್‌ದ ತಂಡಗಳು ಆಗಮಿಸಿದಾಗ ಅವರೊಡನೆ ಗೆಳೆತನ ಬೆಳೆಸಿ ಒಂದಾಗಿ ನಡೆದುಕೊಳ್ಳುವರು.

## ಸಾಂಘಿಕ ತಳಹದಿ

ಸುಗ್ಗಿ ಹಬ್ಬದ ಕುಣಿತವೆಂದರೆ, ಕಾಡಿನ ಎಳೆಯರಿಗೆ ಶಾಲೆ-ಕಾಲೇಜುಗಳ ವಾರ್ಷಿಕೋತ್ಸವ ಇದ್ದಂತೆ. ಆ ದಿನವನ್ನು ಘೋಟುಲದ ಸದಸ್ಯರು ಸದಾಕಾಲ ಎದುರು ನೋಡುತ್ತಿರುತ್ತಾರೆ. 30-40 ಕಿಲೋ ಮೀಟರ್ ದೂರದಿಂದಲಾದರೂ ಭಾಗವಹಿಸಲು ಸಮಾರಂಭದ ಸ್ಥಾನಕ್ಕೆ ನಡೆದೇ ಬರುತ್ತಾರೆ. ತೀರ ತಿಳಿ ಹೃದಯದ ತರುಣ ಜನಾಂಗ ಗಂಡು-ಹೆಣ್ಣೆಂಬ ಭೇದಭಾವವಿಲ್ಲದೇ ನಗುತ್ತ ಕಲೆಯುತ್ತಾ ಹಾಡುತ್ತಾ, ಕುಣಿಯುತ್ತಾ ದೂರದ ಹಾದಿ ತುಳಿದು ಬರುವುದನ್ನು ನೋಡುವುದೇ ಒಂದು ಆನಂದ. ಅವರೆಲ್ಲ ವೈಯಕ್ತಿಕ ಸ್ವಾತಂತ್ರ್ಯದಲ್ಲಿ ಬೆಳೆದು ಬಂದವರಾದ್ದರಿಂದ ಪಾಲಕರ ಮಾರ್ಗದರ್ಶನವಿಲ್ಲದೆ ತಮ್ಮ ಚಟುವಟಿಕೆಗಳನ್ನೆಲ್ಲ ಸಾಂಘಿಕ ತಳಹದಿಯ ಮೇಲೆಯೇ

ರೂಪಿಸಿಕೊಳ್ಳುತ್ತಾರೆ. ಪ್ರತಿ ವ್ಯಕ್ತಿಯೂ ತಾನು ಘೋಟುಲದ ಒಂದು ಅಂಗವೆಂದು ನಂಬಿರುವುದರಿಂದ ಸ್ವಾರ್ಥಕ್ಕೆ, ಸಂಕುಚಿತ ವಿಚಾರಕ್ಕೆ ಆಸ್ಪದವಿಲ್ಲ. ನರ್ತನದ ಸ್ಥಳಕ್ಕೆ ಆಗಮಿಸಿದ ನಂತರ ತಮ್ಮಲ್ಲಿ ಸಾಮಾನು-ಸರಂಜಾಮುಗಳನ್ನು ಗಿಡ-ಮರಗಳ ಆಶ್ರಯದಲ್ಲಿ ಇಟ್ಟು ವಿರಮಿಸುವರು. ಹೊಸಬರ ಪರಿಚಯ ಮಾಡಿಕೊಳ್ಳುತ್ತ, ಪರಿಚಿತರೊಡನೆ ವಿಚಾರ ವಿನಿಮಯ, ನಗೆ ಚಾಟಿಕೆ ನಡೆಸುವರು. ಅವಶ್ಯಕ ವಸ್ತುಗಳ ಕೊಡು-ಕೊಳ್ಳಿಯನ್ನು ನಡೆಸುವರು.

ಸುಗ್ಗಿ ಹಬ್ಬ, ಮಾರಿಯ ಆದಿವಾಸಿಗಳು ವಾಸಿಸುವ ಎಲ್ಲ ಕಡೆ ಪ್ರಚಲಿತವಿದ್ದರೂ ಅವುಗಳಲ್ಲಿ ಕೆಲವು ಮಾತ್ರ ಹೆಸರುವಾಸಿಯಾಗಿದೆ. ಬಸ್ತರ್ ಜಿಲ್ಲೆಯ ನಾರಾಯಣಪುರ, ತಾಲೂಕಿನ ಮುಖ್ಯ ಊರಾದ್ದರಿಂದ ಮತ್ತು ಅದರ ನಾಲ್ಕೂ ಕಡೆ ಗ್ರಾಮಗಳ ಘೋಟುಲ್‌ಗಳು ಇದ್ದುದರಿಂದ ಅಲ್ಲಿಯ 'ಮೇಲಾ' (ಜಾತ್ರೆ) ಖ್ಯಾತಿ ಪಡೆದಿದೆ. ಕೊಂಡಾಗಾಂವ್, ದೌಡಾಯಿ, ಘೋಟೆ ಡೊಂಗರ್‌ಗಳ ಸುಗ್ಗಿ ಹಬ್ಬಗಳು ನಾರಾಯಣಪುರಕ್ಕಿಂತ ಕಿರು ಪ್ರಮಾಣದಲ್ಲಿ ನಡೆಯುವಂಥವು.

ದೇವರ ಹೆಸರಿನಲ್ಲಿ ನಡೆಯುವ ಈ ನೃತ್ಯಗಳು ರಾತ್ರಿ ಸುಮಾರು ಒಂಬತ್ತು, ಗಂಟೆಗೆ ಪ್ರಾರಂಭವಾಗಿ, ಬೆಳಗಾಗುವ ತನಕ ನಡೆಯುವಂಥವು. ಸೂರ್ಯದೇವನು ದಿನದ ಕರ್ತವ್ಯ ನಿರ್ವಹಿಸಿ, ಗೃಹಾಭಿಮುಖಿಯಾದಾಗ, ನರ್ತಕರು ಚುರುಕಾಗುತ್ತಾರೆ. ತಮ್ಮ ಕವಡೆ-ಹರಳುಗಳ ಅಲಂಕಾರಗಳ ಬುಟ್ಟಿಯನ್ನು ಎಳೆದು, ಹಳೆಯದೋ ಒಡೆದದ್ದೊ ಕನ್ನಡಿಯೆದುರು ಕುಳಿತು ಅಲಂಕರಿಸಿಕೊಳ್ಳುವರು. ಕೆಲವರು, ಹತ್ತಿರದ ಹೊಂಡ ಕೆರೆಗಳಿಗೆ ಹೋಗಿ ಕೈ-ಕಾಲು ಮುಖ ತೊಳೆದುಕೊಂಡರೆ, ಇನ್ನೂ ಕೆಲವರು, ಗಡ್ಡ-ಮೀಸೆಗಳನ್ನು ನುಣ್ಣಗೆ ಬೋಳಿಸಿಕೊಳ್ಳುವರು, ನಂತರ ಬೇಕಾದ ಅಲಂಕಾರದ ಒಡವೆಗಳನ್ನು ತೊಟ್ಟುಕೊಳ್ಳುವರು. ಯಕ್ಷಗಾನ ಮೇಳದವರಂತೆ ಪ್ರತಿಯೊಬ್ಬ ನರ್ತಕನೂ ಹೇಗೆ ಅಲಂಕರಿಸಿಕೊಳ್ಳಬೇಕೆಂದು ತಾನೇ ನಿರ್ಧರಿಸುತ್ತಾನೆ.

## ಗರಿಗಳ ತುರಾಯಿ

ಮಾರಿಯ ಗಂಡಸರಿಗೆ ಉದ್ದವಾಗಿ ಕೂದಲು ಬೆಳೆಸುವುದೆಂದರೆ ತುಂಬ ಇಷ್ಟ. ಕೆಲವರು ಮುಂದಲೆಯ ಕೂದಲಷ್ಟೇ ಕತ್ತರಿಸಿ ಹಿಂದಿನದನ್ನು ಉದ್ದ ಬೆಳೆಸುತ್ತಾರೆ. ಕೂದಲನ್ನು ನಡುವೆ ಬೈತಲೆ ತೆಗೆದು ಗಾಳಿಯಲ್ಲಿ ತೂರಬಿಡಬಹುದು. ಇಲ್ಲವೇ ಹಿಂದಕ್ಕೆ ಬಾಚಿ ಮುಡಿ ಕಟ್ಟಬಹುದು. ಮುಡಿ ಎತ್ತರವಾಗಿ ಹೊರಗೇ ಕಾಣುವಂತೆ ರುಮಾಲನ್ನು ಸುತ್ತಿಕೊಳ್ಳುವರು. ನೃತ್ಯ ಮಾಡುವಾಗ ರುಮಾಲು ಬಿಚ್ಚಿಕೊಳ್ಳದಂತೆ ನೂಲಿನಿಂದಾಗಲೀ, ಕ್ಲಿಪ್‌ಗಳಿಂದಾಗಲೀ ಭದ್ರಗೊಳಿಸುವರು. ಕೆಂಪು-ಬಿಳಿ ಮಣಿಗಳ ಸರಗಳನ್ನು ಕವಡೆಸರಗಳನ್ನು, ಎಡ, ಬಲಭಾಗಗಳಿಂದ ತೂಗ ಬಿಡುವರು. ಹಲವರ ಬಳಿ ಇಂಥ 3-4 ಸರಗಳು ಇದ್ದರೆ, ಕೆಲವರ ಬಳಿ ಇಪ್ಪತ್ತರಿಂದ ಮೂವತ್ತು ಸರಗಳು ಇರುತ್ತವೆ.

ನರ್ತಕರು, ತಲೆಯ ಹಿಂಭಾಗವನ್ನು ಅತಿ ಜಾಗರೂಕತೆಯಿಂದ ಸಿಂಗರಿಸಿಕೊಂಡಿರುತ್ತಾರೆ. ಕಾಡು ಹಂದಿಯ ಜೋಡಿ ಕೋರೆ ಹಲ್ಲುಗಳನ್ನು ವರ್ತುಲಾಕಾರದಲ್ಲಿ ರುಮಾಲಿಗೆ ಜೋಡಿಸಿಕೊಂಡಿರುತ್ತಾರೆ. ಈ ಕೋರೆಗಳಿಗೆ ಕೆಂಪು, ಬಿಳಿ, ಹಳದಿ, ನೀಲಿ ಮಣಿಸರಗಳನ್ನು ತೂಗ ಬಿಡುತ್ತಾರೆ. ಸರಗಳ ತುದಿಗೆ ಕೆಂಪು ವರ್ಣದ ಗೊಂಡೆಗಳು ಇರುವುದರಿಂದ ಇನ್ನೂ ಹೆಚ್ಚು ಆಕರ್ಷಕವಾಗಿ ಕಾಣುತ್ತದೆ. ಅಲಂಕಾರಕ್ಕೆ ಕಲಶವಿಟ್ಟಂತೆ ಗರಿಗಳ ತುರಾಯಿ ಕಟ್ಟಿ ಜೋಡಿಸುತ್ತಾರೆ. ತೀರ ವಿರಳವಾದ ಪಕ್ಷಿಗಳ ಗರಿಗಳೂ ಇದ್ದು, ಅವನ್ನು ಬಲು ಜೋಪಾನವಾಗಿ ಕಾದಿರಿಸುತ್ತಾರೆ. ಆದಿವಾಸಿಗಳ ಲೆಕ್ಕಾಚಾರದಲ್ಲಿ ಕೂಡ, ಇಂಥ ಗರಿ-ಗೊಂಚಲುಗಳು ನೂರಾರು ರೂಪಾಯಿ ಬೆಲೆಬಾಳುವಂಥವು. ಇಷ್ಟು ಬೆಲೆ ಬಾಳುವ ಗರಿ-ಗೊಂಚಲು ಇಲ್ಲದವರು ಇತರ ಪಕ್ಷಿಗಳ ಗರಿಗಳನ್ನು ಧರಿಸುತ್ತಾರೆ. ಕೆಲವರು ನವಿಲುಗರಿಗಳ ತುರಾಯಿ ಧರಿಸುತ್ತಾರೆ. ಹೆಚ್ಚು ಆಭರಣಗಳಿಲ್ಲದವರು ಆಕರ್ಷಣೆಗಾಗಿ ಗೊಂಡೆ ಹೂಗಳನ್ನು ಮುಡಿಯುವುದುಂಟು. ಕೆಲವರು ಕಿರಿಗಾಜು ಕನ್ನಡಿಗಳನ್ನು ರುಮಾಲಿಗೆ ಜೋಡಿಸಿಕೊಂಡರೆ, ಇನ್ನೂ ಕೆಲವರು ಇಳಿ ಬಿಟ್ಟ ಕೂದಲಿಗೆ ಬಾಚಣಿಗೆಯನ್ನು ಸಿಕ್ಕಿಸಿಕೊಂಡಿರುತ್ತಾರೆ.

## ಮಣಿ ಸರಗಳ ಮೋಜು

ಕೊರಳಿಗೆ ಎರಡರಿಂದ ಇಪ್ಪತ್ತರವರೆಗೆ ವಿವಿಧ ಬಣ್ಣಗಳ ಮಣಿಗಳ ಸರಗಳನ್ನು ತೊಡುವರಲ್ಲದೇ ಹೆಂಗಳೆಯರು ತೊಡುವಂತಹ ಬೆಳ್ಳಿಯ ಗೋಟುಗಳನ್ನು ಧರಿಸುವರು. ಕೆಲವರು ಯಕ್ಷಗಾನ ಪಾತ್ರಧಾರಿಗಳಂತೆ ರಟ್ಟಿನ ಕಂಠದ ಅಲಂಕಾರಗಳನ್ನೂ ಧರಿಸುವರು. ನೃತ್ಯಕ್ಕೆ ಹಿಮ್ಮೇಳ ಪೂರೈಸುವ ಢೋಲುಗಳನ್ನು ಮಾರಿಯರು ಸೊಂಟಕ್ಕೇ ಬಿಗಿದುಕೊಳ್ಳುವರು. ಭಾರವಾದ ಗೆಜ್ಜೆ ಗಂಟೆಗಳನ್ನು ಹೊತ್ತು

ನರ್ತಿಸಬೇಕಾಗುವದರಿಂದ ಅವನ್ನು ಸಮತೋಲ ಕಾದು ಕುಣಿಯಲು ಸಾಧ್ಯವಾಗುವಂತೆ ಹತ್ತು ಸಲ ಕಟ್ಟಿ, ಬಿಡಿಸಿ, ಮತ್ತೆ ಕಟ್ಟಬೇಕಾಗುವುದು. ಈ ಗೆಜ್ಜೆ ಸೊಂಟ ಪಟ್ಟಿಗಳನ್ನೆಲ್ಲ ಗಟ್ಟಿಯಾದ ದಪ್ಪ ಹುರಿ ಇಲ್ಲವೇ ತೊಗಟೆಗೆ ಪೋಣಿಸಿ ಇಡುವುದರಿಂದ ಹರಿದು ಬೀಳುವ ಸಂಭವ ಇರುವುದಿಲ್ಲ. ಕೆಂಪು, ಹಸಿರು ಗೀಟು ಇರುವ ಘಟಕಿ ವಸ್ತ್ರವನ್ನು ಮುಕ್ಕಾಲು ಕಾಲು ಮುಚ್ಚುವಂತೆ ನೆರಿಗೆ ಹಾಕಿ ಹೆಂಗಳೆಯರ ಪರಿಕರಕ್ಕೆ ಹೋಲುವಂತೆ ಉಡುತ್ತಾರೆ. ಕರಿ ಇಲ್ಲವೆ ಬಿಳಿ ಬನಿಯನ್ ತೊಡುತ್ತಾರೆ.

ಬಾಣ-ಬಿಲ್ಲು ಹೆಗಲಿಗೇರಿಸಿ, ಕಾಡೆಲ್ಲ ಅಲೆಯುವ ಮಾರಿಯರಿಗೆ ನರ್ತಿಸುವಾಗಲೂ ಏನಾದರೊಂದು ಹೆಗಲ ಮೇಲೆ ಇರಲೇಬೇಕು. ಸರ್ವ ಸಾಧಾರಣವಾಗಿ ಇವರು ಬಳಸುವ ಆಯುಧ, ಹರಿತವಾದ ಕಿರಿ ಕೊಡಲಿ, (ಟಾಂಗಿ) ಯನ್ನು ಕೆಲವರು, ಹಿಡಿದರೆ, ಇನ್ನು, ಕೆಲವರು ಕುರಿ, ಕೋಳಿ ಹಂದಿಗಳನ್ನು ಬಲಿ ಕೊಡುವದಕ್ಕಾಗಿ ಬಳಸುವ, ಕಂಡರೇ ಹೆದರಿಕೆಯಾಗುವಂತಹ, ಭಾರಿ ಕೊಡಲಿ (ಪರ್ಶಿ)ಯನ್ನು ಹೊತ್ತಿರುತ್ತಾರೆ. ಇಂಥ ಕ್ರೂರ ಆಯುಧಗಳಲ್ಲಿ ವಿಶ್ವಾಸವಿಡದವರು, ತಮ್ಮ ಕೊಡೆ ಇಲ್ಲವೇ ಲಾಠಿಗೆ ಒಂದು ಅಂಗ -ವಸ್ತ್ರವನ್ನು ಪತಾಕೆಯಂತೆ ಸುತ್ತಿ ಬಳಸುವರು.

## ಗಂಡಿನದೇ ಆಕರ್ಷಣೆ

ಯುವಕರ ಅಲಂಕಾರಕ್ಕೆ ಹೋಲಿಸಿದಾಗ, ಯುವತಿಯರು, ಅಷ್ಟೊಂದು ಆಕರ್ಷಣೀಯವಾಗಿ ಅಲಂಕರಿಸಿಕೊಳ್ಳುವುದಿಲ್ಲ. ಇದು ನಾಗರಿಕರೆಂದುಕೊಳ್ಳುವ ಸಮಾಜದ ಅಭ್ಯಾಸಗಳಿಗೆ ವಿರುದ್ಧವಾದ ಪದ್ಧತಿ. ಬಹುಶಃ ಇವರು ಪ್ರತಿದಿನ ನೋಡುವ ಪಶು ಪಕ್ಷಿಗಳನ್ನು ಅನುಕರಿಸಿ, ಆಚರಣೆಯಲ್ಲಿ ತಂದಿರಬೇಕು. ಆಕರ್ಷಕ ಗರಿಗಳನ್ನು ಹರವಿ ನರ್ತಿಸುವುದು ಗಂಡು ನವಿಲು. ಸುಂದರ ಕಂಠದಿಂದ ಹಾಡುವುದು ಗಂಡು ಹಕ್ಕಿಗಳ ಹಕ್ಕು. ಮಾಟವಾದ ಕೊಂಬುಗಳನ್ನು ಹೊಂದಿ ಕಂಗೊಳಿಸುವುದು ಗಂಡು ಜಿಗರೆ. ಆನೆ, ಸಿಂಹ ಇತ್ಯಾದಿ, ಎಲ್ಲ ಪ್ರಾಣಿಗಳಿಗೂ ಇದೇ ಮಾತು ಅನ್ವಯಿಸುತ್ತದೆ. ಅವುಗಳಲ್ಲಿ ಹೆಣ್ಣು ಗಂಡಿಗೆ ಆಕರ್ಷಿತವಾಗುತ್ತದೆಯೇ ಹೊರತು ಮಾನವನಂತಲ್ಲ. ಬಹುಶಃ ಮಾರಿಯರು ಈ ಜೀವಿಗಳೊಂದಿಗೆ ಹಾಸು ಹೊಕ್ಕಾಗಿ ಹೋಗಿರುವುದರಿಂದ, ಯುವತಿಯರು ತಮ್ಮತ್ತ ಆಕರ್ಷಿತರಾಗುವಂತೆ ಯುವಕರು ಅಲಂಕರಿಸಿಕೊಂಡರೆ ಆಶ್ಚರ್ಯವಿಲ್ಲ,

ಹೆಂಗಳೆಯರು ತಲೆಸುತ್ತ ಎರಡರಿಂದ ಆರು ಬಿಳಿ ಮಣಿಸರಗಳನ್ನು ಧರಿಸಿರುತ್ತಾರೆ. ಹಿಂಬದಿಗೆ ಅವುಗಳಿಗೆ ಪುರುಷರಂತೆಯೇ ಕೆಂಪು ಗೊಂಡೆಗಳನ್ನು ತೂಗ ಬಿಡುತ್ತಾರೆ. ಅಲ್ಯೂಮಿನಿಯಂನ ಮುಳ್ಳುಗಳನ್ನು ಚುಚ್ಚಿಕೊಂಡಿರುತ್ತಾರೆ. ಕೇಶರಾಶಿಯನ್ನು ಮುಡಿಯಾಗಿ ಬಿಗಿದುಕೊಂಡು ಬಾಚಣಿಗೆ ಸಿಗಿಸುತ್ತಾರೆ. ಕೆಲವರು ಕನ್ನಡಿ, ಇನ್ನು ಕೆಲವರು ರಿಬ್ಬನ್ನಿನಿಂದ ತಯಾರಿಸುವ ಹೂವುಗಳನ್ನು ಜೋಡಿಸಿರುತ್ತಾರೆ. ಅಲ್ಲೊಬ್ಬಳು ಇಲ್ಲೊಬ್ಬಳು ಕಾಗದದ ಬೀಸಣಿಗೆ, ತಿರುಗು ಚಕ್ರ (ಗಿರಗಿಟ್ಲೆ) ಸಿಗಿಸಿರುವುದೂ ಉಂಟು. ಕಿವಿಗೆ ಬುಗುರಿಯಾಕಾರದ ಹಿತ್ತಾಳೆ ಬೆಂಡೋಲೆ ಧರಿಸಿದರೆ ಮೂಗಿಗೆ ಚಿಕ್ಕ ಮೂಗುತಿ ಧರಿಸಿರುತ್ತಾರೆ. ಕೊರಳಿಗೆ ಬೆಳ್ಳಿ ನಾಣ್ಯಗಳ ಸರ ಇದ್ದೇ ಇರುತ್ತದೆ. ಅದು ನಿಯಮ. ಅದರೊಟ್ಟಿಗೆ ಬೆಳ್ಳಿಸರ. ಮಣಿಸರಗಳೂ ಇರಬಹುದು. ಕೈಗೆ ದಿನಬಳಕೆಯ ಬಳೆಗಳು, ಬೆಟ್ಟಿಗೆ ಬೆಳ್ಳಿಯ ಉಂಗುರಗಳು. ಹೆಚ್ಚಿನವರು ಕಾಲಿಗೆ ಏನೂ ಧರಿಸುವುದಿಲ್ಲ ಒಂದಿಬ್ಬರು ಮಾತ್ರ ಬಂಗಾರದಂತೆ ಹೊಳೆಯುವ ಹಿತ್ತಾಳೆಯ ಕಡಗಗಳನ್ನು ತೊಟ್ಟಿದ್ದರು. ಕಿರಿ ಸೆರಗು ಉಬ್ಬಿದೆಯನ್ನು, ಮುಚ್ಚಲು ಅಸಮರ್ಥವಾಗಿರುವುದರಿಂದ ನರ್ತಿಸುವಾಗ ಬೇರೆಯ ಬಟ್ಟೆಯಿಂದ ಎದೆಯನ್ನು ಮುಚ್ಚಿಕೊಂಡಿರುತ್ತಾರೆ. ಕೆಲವೇ ಹೆಂಗಳೆಯರು ನರ್ತಿಸುವಾಗ ಕೋಲು ಹಿಡಿದಿರುತ್ತಾರೆ.

## ಆಮಂತ್ರಣ

ಕಗ್ಗತ್ತಲು ರಾಜ್ಯವಾಳತೊಡಗಿದೊಡನೆ ಕೆಲವು ಯುವಕ-ಯುವತಿಯರು ನರ್ತನದ ಸ್ಥಳಕ್ಕೆ ಬಂದು ಮೆಲು ದನಿಯಲ್ಲಿ ಹಾಡುತ್ತ ಕುಣಿತ ಪ್ರಾರಂಭಿಸುವರು. ಹಾಡುಗಾರಿಕೆ ಮತ್ತು ಗಂಟೆಗಳು ಸದ್ದು ಇತರರಿಗೆ ಆಮಂತ್ರಣವಿದ್ದಂತೆ, ಅವರೂ ಬರಲಾರಂಭಿಸುವರು. ಯುವಕರು ಮೊದಲು ಹಾಡಿ ಅದಕ್ಕನುಗುಣವಾಗಿ ಏಕಕಾಲಕ್ಕೆ ಸೊಂಟದ ಗಂಟೆಯಿಂದ ನಾದ ಹೊರಡಿಸಿಯಾದ ಮೇಲೆ ಅವರನ್ನು ಹಿಂಬಾಲಿಸಿ ಹೆಂಗಳೆಯರು ಹಾಡಿ ಹೆಜ್ಜೆ ಹಾಕುವರು. ಇಂಥ ನೃತ್ಯಕೂಟಗಳಲ್ಲಿ ಪುರುಷರೇ ಬಹು ಸಂಖ್ಯಾತರಿರುವುದು ವಾಡಿಕೆ. ಈ ನೃತ್ಯಗಳಿಗೆ ಶಾಸ್ತ್ರ ಪದ್ಧತಿಗಳ ಕಾನೂನು ಇಲ್ಲವಾದ್ದರಿಂದ ಹೆಂಗಳೆಯರು ಹರಟುತ್ತ ನರ್ತಿಸಿದರೆ, ಗಂಡಸರು ಬೀಡಿ ಸೇದುತ್ತ ಹೆಜ್ಜೆ

ಹಾಕುತ್ತಿರುತ್ತಾರೆ.

ಮನಸ್ಸಿಗೆ ಬಂದಾಗ, ಗೆಳೆಯ-ಗೆಳತಿಯರು, ನೃತ್ಯ ಸಮೂಹ ಬಿಟ್ಟು ಉರಿಯುವ ಬೆಂಕಿಯಿಂದ ಕಾಸಿಕೊಂಡು, ಮದ್ಯ ಸೇವನೆಯಿಂದ ಕಾವೇರಿಸಿಕೊಂಡು, ತಿರುಗಿ ಬಂದು ನೃತ್ಯದಲ್ಲಿ ಸೇರಿಕೊಳ್ಳುವರು. ಈ ಪದ್ಧತಿಯಿಂದಾಗಿ ಮಾರಿಯರ ನೃತ್ಯ ಪಾಶ್ಚಿಮಾತ್ಯರವನ್ನು ನೆನಪಿಗೆ ತರುತ್ತವೆ. ನರ್ತಕರು ಹೆಚ್ಚಾದಾಗ. ಎರಡು, ಮೂರು, ನಾಲ್ಕು ತಂಡಗಳ ವಿವಿಧ ವರ್ತುಲಗಳನ್ನಾಗಿ ಮಾಡಿಕೊಂಡು ಕುಣಿಯುತ್ತಾರೆ. ಆಗೊಮ್ಮೆ ಈಗೊಮ್ಮೆ ಒಂದು ತಂಡ ನಿರ್ಗಮಿಸಿ ಇನ್ನೊಂದು ತಂಡ ಬಂದು ಸೇರಿಕೊಳ್ಳುತ್ತವೆ. ಮೋಜಿನ ವಿಚಾರವೆಂದರೆ ಈ ನೃತ್ಯಕ್ಕೆ ಮಾರ್ಗದರ್ಶಕರೂ ಇರುವುದಿಲ್ಲ, ನಿರ್ದೇಶನ ಮಾಡುವವರೂ ಇರುವುದಿಲ್ಲ.

### ನಡುರಾತ್ರಿಯ ದ್ರುತಗತಿ

ಕಾಡಿನ ನಡುವೆ ನಡೆಯುವ ಈ ನೃತ್ಯಕೂಟಗಳಿಗೆ ನಡುರಾತ್ರಿಯಲ್ಲಿ ನಡುಕ ಬರುವುದು ಸಹಜವಿದೆ. ಆದರೆ ಕುಣಿದು ರಕ್ತ ಚಲನೆ ತೀವ್ರವಾಗಿ, ಸೇವಿಸಿದ ಸೆರೆಯ ಪ್ರಮಾಣವೂ ಹೆಚ್ಚಾಗಿ ಅವರ ಹೆಜ್ಜೆಗಳು ನಿಧಾನವಾಗುವ ಬದಲಾಗಿ ತೀಕ್ಷ್ಣವಾಗುತ್ತವೆ. ಜೊತೆಗೆ ಗಂಡು-ಹೆಣ್ಣುಗಳ ನಡುವೆ ಆಕರ್ಷಣೆಯೂ ಹೆಚ್ಚಾಗುತ್ತದೆ. ಜೋಡಿ, ಜೋಡಿಗಳು ಚಳಿ ಕಾಸಲು ಸೆರೆ ಸೇವಿಸಲು ಹೋಗಿ ಬರುವ ಪ್ರಮಾಣವು ಜಾಸ್ತಿಯಾಗುತ್ತದೆ. ಎಲ್ಲೆಡೆ ಕಗ್ಗತ್ತಲು ನೃತ್ಯಕೂಟದ ಸುತ್ತಲೂ ಮಂದವಾಗಿ ಉರಿಯುವ ಬೆಂಕಿ, ಎತ್ತರವಾಗಿ ಬೆಳೆದು ನಿಂತ ಮರಗಳೆಲ್ಲ ಕಣ್ಣಿಗೆ ಹಬ್ಬವಾದರೆ ಆಶ್ಚರ್ಯವಿಲ್ಲ. ಕಾಮದೇವನಿಗೂ ಇಂತಹ ವಾತಾವರಣ ಇಷ್ಟವೆಂದು ತೋರುತ್ತದೆ. ಅಂತೆಯೇ ಆತನ ಆಶೀರ್ವಾದದಿಂದ ಯುವ ಜೋಡಿಗಳು ನೃತ್ಯಕೂಟದಲ್ಲಿ ನಡು ನಡುವೆ ಬಿಟ್ಟು ಮರದ ಮರೆಯಲ್ಲಿ ಪವಡಿಸಿ, ಸುಖಪಟ್ಟು ಹಿಂದಿರುಗುತ್ತಾರೆ. ಆ ವಾತಾವರಣದಲ್ಲಿ ವಿವಾಹಿತರಿಗೂ ಪರಸ್ತ್ರೀಯ ಬಗ್ಗೆ ಆಸೆಯಾದರೆ ಅದೇನೂ ತ್ಯಾಜ್ಯವಲ್ಲ. ಮದವಾಗಿ ಉರಿಯುವ ಮೇಣದ ಬತ್ತಿಗಳ ಬೆಳಕಿನಲ್ಲಿ ಇಂಥ ಚಟುವಟಿಕೆಗಳಲ್ಲಿ ಮೈ ಮರೆಯುವ ಪಾಶ್ಚಿಮಾತ್ಯರಿಂದ ಹಿಂದುಳಿದ ಜನಾಂಗವೆ ನಿಸಿಕೊಳ್ಳುವ ಮಾರಿಯರು ಯಾವ ದೃಷ್ಟಿಯಲ್ಲಿ ಕಡಿಮೇ ಎಂದೆನಿಸದೇ ಇರುವುದಿಲ್ಲ.

(ಸಂಕೇತ ಪತ್ರಿಕೆ, ಆಗಸ್ಟ್ 31, 1989 ರಲ್ಲಿ ಪ್ರಕಟಿತ)

❑

## ೪. ಉತ್ತರ ಕನ್ನಡದಲ್ಲಿಯ ಮಳೆಗಾಲ

ಪ್ರತಿವರ್ಷ ಬರಲಿರುವ ಮಳೆಗಾಲ, ಉತ್ತರಕನ್ನಡದಲ್ಲಿ ಕಳೆದ ಬಾಲ್ಯದ ನೆನಪುಗಳನ್ನು ಹೊತ್ತು ತರುತ್ತದೆ. ಬೇಸಿಗೆಯ ಉರಿಬಿಸಿಲು ಹೆಚ್ಚುತ್ತಿದ್ದಂತೆ ಮಳೆರಾಯನ ಸ್ವಾಗತಕ್ಕೆ ಸಕಲ ಸಿದ್ಧತೆಗಳು ಪ್ರಾರಂಭವಾಗಿ ಬಿಡುವವು. ಮನೆ ಮನೆಯಲ್ಲಿ, ಹೆಣೆದ ತೆಂಗಿನ ಗರಿ ಹಾಗೂ ಹುಲ್ಲುಗಳ ಹೊದಿಕೆಗಳು ಕಟ್ಟಡಗಳನ್ನು ಹೇರಲು ಸಿದ್ಧವಾಗುತ್ತಿದ್ದವು. ಕೋತಿಗಳ ಜಿಗಿದಾಟದಿಂದ ಮತ್ತು ತೆಂಗಿನ ಕಾಯಿ, ಮಡಲು ಬಿದ್ದೋ ಜಾರಿದ, ಒಡೆದ ಹಂಚುಗಳನ್ನು ಸರಿಪಡಿಸುವದು, ಹಿತ್ತಲಲ್ಲಿ ನೀರು ನಿಲ್ಲದಂತೆ ತಗ್ಗುಗಳನ್ನು ತುಂಬಿ, ಕಾಲುವೆಗಳನ್ನು ಬಿಡಿಸಿಕೊಡುವದು, ಮಳೆಗಾಲಕ್ಕಿಡೀ ಸಾಲುವಂತೆ ದನಕರುಗಳ ಸೆಗಣಿರಾಶಿಯಿಂದ ಕುಳ್ಳು (ಬೆರಣಿ)ಗಳನ್ನು ತಟ್ಟುವುದು, ಅಡಿಗೆ ಒಲೆ, ಬಚ್ಚಲೊಲೆಗೆ ಬೇಕಾದ ಉರವಲು, ಮುಖ್ಯವಾಗಿ ಕಲ್ಪವೃಕ್ಷ. ತೆಂಗಿನ ಗಿಡದ ಸಕಲ ಅವಯವಗಳನ್ನೆಲ್ಲ ಬೇರ್ಪಡಿಸಿ, ಶೇಖರಿಸುವುದು, ಬಿದ್ದ, ಒಣಗಿದ ಮರದ ಟೊಂಗೆಗಳನ್ನು ಭಾಗಗಳನ್ನು 'ಜಲಾವ್' (ಇಂಧನ) ಸೌದೆಯನ್ನಾಗಿಸುವುದು ಮುಖ್ಯ ಚಟುವಟಿಕೆಯಾದರೆ, ಇವನ್ನೆಲ್ಲ ಮಳೆರಾಯನ ಪ್ರಕೋಪಕ್ಕೆ ತುತ್ತಾಗದಂತೆ ಸಂರಕ್ಷಿಸುವದೇ ಮಹಾಸಮಸ್ಯೆ!

ಜಡಿಮಳೆ ಪ್ರಾರಂಭವಾದಾಗ ಸಾರಿಗೆ-ಸಂಪರ್ಕ ನಿಂತೇ ಹೋಗುತ್ತಿತ್ತು. ಹೀಗಾಗಿ ತರಕಾರಿ, ಮೀನು ದುರ್ಲಭವಾಗುತ್ತಿದ್ದವು. ಇಂಥ ದುರ್ಭರ ದಿನಗಳಿಗಾಗಿ ವಿಶೇಷ ಏರ್ಪಾಡು ಮಾಡಿಕೊಳ್ಳಲೇ ಬೇಕಿತ್ತು. ಬಲಿತ ಮೊಗ್ಗೆಕಾಯಿ (ಬಣ್ಣದ ಸೌತೆಕಾಯಿ) ಗಳ ಸೊಂಟಕ್ಕೆ ಬಾಳೇ ಪಟ್ಟೆಗಳನ್ನು ಬಿಗಿದು ಬಿದಿರಿಗೆ ನೇತು ಹಾಕಿದಾಗ, ಯಾರೋ ಮಹಾನುಭಾವರ ಸ್ವಾಗತಕ್ಕಾಗಿ ಮನೆಯನ್ನು ಸಜ್ಜುಗೊಳಿಸಿದ ಭಾವನೆ ಬರುತ್ತಿತ್ತು. ಹಿತ್ತಿಲಲ್ಲಿ ಬೆಳೆದ ಸುವರ್ಣಗಡ್ಡೆ, ಕೆಸುವಿನ ಗಡ್ಡೆಗಳನ್ನು ಕಿತ್ತು, ತೊಳೆದು ದಾಸ್ತಾನು ಕೋಣೆಗೆ ಸೇರಿಸಬೇಕು. ಈರುಳ್ಳಿಗೊಂಚಲುಗಳನ್ನು ತೋರಣಾಕಾರಾದಲ್ಲಿ ತೂಗಹಾಕಬೇಕು. ಹುಣಿಸೆಹಣ್ಣು ಕೊಂಡು ತಂದು ಹೊರಕವಚ,

ಬೀಜಗಳನ್ನು ಬಡಿದು ತೆಗೆದು, ನಾರನ್ನು ಬೇರ್ಪಡಿಸಿ, ಉಪ್ಪಿನೊಂದಿಗೆ ದೊಡ್ಡ ಮುದ್ದೆಗಳನ್ನು ಕಟ್ಟಿ, ಮಡಕೆಗೆ ಸೇರಿಸಬೇಕು. ಉದ್ದು, ಹೆಸರು, ಕಡಲೆ ಇತ್ಯಾದಿ ಧಾನ್ಯಗಳನ್ನು ಸ್ವಚ್ಛಗೊಳಿಸಿ ಒಣಗಿಸಿ, ಕೀಟಬಾಧೆ ತಗಲದಂತೆ ಎಣ್ಣೆ ಸವರಿ ಇಡಬೇಕು. ಗದ್ದೆಯಿಂದ ಬಂದ ಅಥವಾ ಖರೀದಿಸಿದ ಅಕ್ಕಿಯನ್ನು ಹುಲ್ಲಿನ ಮೂಡೆಗಳಲ್ಲಿ ರಕ್ಷಿಸಿಡಬೇಕು.

ಹಪ್ಪಳ-ಸಂಡಿಗೆಗಳ ಸಂಭ್ರಮ ಮನೆ ಮನೆಯಲ್ಲಿ ಕಂಡು ಬರುತ್ತಿತ್ತು. ಆ ದಿನಗಳಲ್ಲಿ ದಿನದ ಊಟ-ತಿಂಡಿಗಳನ್ನು ಮೊಟಕುಗೊಳಿಸಿಯೋ ಸಾದಾ ರೀತಿಯಲ್ಲೊ ಬಗೆಹರಿಸಲಾಗುತ್ತಿತ್ತು. ನೆರವಿಗಾಗಿ ಕೇರಿಯ ಹೆಂಗಳೆಯರು, ಹುಡುಗಿಯರು ಲಟ್ಟಣಿಗೆಯನ್ನು ಹಿಡಿದು ಬಂದೇ ಬಿಡುವರು. ಅವರ ಮನೆಯಲ್ಲಿ ಹಪ್ಪಳದ ಹಿಟ್ಟು ಕಲಸಿದಾಗ ಈ ಮನೆಯವರು ಹೊರಡುವರು. ಉದ್ದಿನಬಿಳೀ ಕೆಂಪು ಹಪ್ಪಳ, ಹಲಸಿನಕಾಯಿ, ಬಾಳೇಕಾಯಿ, ಗೋದಿ ಹಪ್ಪಳಗಳ ಉತ್ಪಾದನೆಯ ಸಡಗರ. ಹಪ್ಪಳಗಳ ಲಟಾಯಿಸುವಿಕೆಯ ಸಪ್ಪಳದೊಂದಿಗೆ ಮಾತು-ಕತೆ. ಹರಟೆ, ಕಥೆ, ಪ್ರಶ್ನೋತ್ತರ. ಸಿನಿಮಾಸುದ್ದಿ, ಹಾಡು ಸ್ವಾರಸ್ಯ ಸಂಗತಿಗಳ ಬಿತ್ತರಣೆ ನಡೆದೇ ಇರುತ್ತದೆ. ಮಕ್ಕಳು ಕಿರಿಹಪ್ಪಳ ಮಾಡಿಕೊಟ್ಟುವನ್ನು ದೊಡ್ಡವರು ಹಿರಿದಾಗಿಸುತ್ತಾರೆ. ಕೊಂಚ ದೊಡ್ಡ ಮಕ್ಕಳು ಲಟ್ಟಿಸಿ ತಯಾರಾದವನ್ನು ಬಿಸಿಲಿನಲ್ಲಿ ಹರವಿ ಒಣಹಾಕುತ್ತಾರೆ. ಆಗೊಮ್ಮೆ ಈಗೊಮ್ಮೆ ಹಪ್ಪಳದ ಉಂಡೆಗೆ ತಗ್ಗು ತೆಗೆದು ಕೊಂಚ ಎಣ್ಣೆಹಾಕಿ ಬಾಯಲ್ಲಿಟ್ಟರೆ ಸ್ವಾದ ಅವರ್ಣನೀಯ! ಜಾಸ್ತಿ ಹಿಟ್ಟುಕೇಳಿ ಬೈಸಿಕೊಳ್ಳುವದು ಸಾಮಾನ್ಯ. ಹಪ್ಪಳಗಳ ಕಟ್ಟು ಡಬ್ಬಗಳಿಗೆ ಸೇರಿಸಿದ ಬಳಿಕ ಸಂಡಿಗೆಯ ಸಂಭ್ರಮ. ಚಿಕ್ಕ ಮಗುವನ್ನು ಮಲಗಿಸಬಹುದಾದ ದೊಡ್ಡ ಕೆಸುವಿನ ಎಲೆಯ ಮೇಲೆ ಬೂದುಗುಂಬಳ ಸಂಡಿಗೆ, ಉದ್ದಿನ ಸಂಡಿಗೆ, ಜೋಳ, ಸಾಬುದಾಣಿ, ಬಟಾಣಿ ಇನ್ನೂ ನಾನಾತರದವು ಚಿಕ್ಕ ದೊಡ್ಡ ಆಕಾರಗಳನ್ನು ತಾಳುತ್ತವೆ. ಮಳೆಗಾಲದಲ್ಲಿ ಹಪ್ಪಳ ಸಂಡಿಗೆಗಳೇ ಬಾಳಕಗಳೇ ಗೃಹಿಣಿಯರಿಗೆ ಸಕಾಲಕ್ಕೆ ಒದಗಿದ ತರಕಾರಿಗೆ ಪರ್ಯಾಯಗಳು. ಜನಬಲವಿದ್ದಲ್ಲಿ ಗೋದಿಯನ್ನು ನಯವಾಗಿ ರುಬ್ಬಿ ಸೇವಿಗೆ ಮಾಡಿಡುತ್ತಿದ್ದರು. ಸೊಕ್ಕಿದ್ದವರು ಕೂವೆಹಿಟ್ಟನ್ನು ಪಡೆಯಲು ಅದರುಗಡ್ಡೆಗಳನ್ನು ಕೊಚ್ಚಿ ಅರೆದು, ಸೋಸಿ, ಬಿಸಲಿಗೆ ಒಣಗಿಸಿ ಹಿಟ್ಟು ಪಡೆಯುತ್ತಿದ್ದರು. ಘಟ್ಟದ ಮೇಲಿನ ಕಾಡುಗಳಲ್ಲಿ ದೊರೆಯುವ ಅಪ್ಪಿಮಿಡಿ ಜೀರಿಗೆ ಪರಿಮಳದ ಮಾವಿನಕಾಯಿಗಳನ್ನು ಕಷ್ಟಪಟ್ಟು ದೊರಕಿಸಿ ತೊಳೆದು ಚೆನ್ನಾಗಿ ಒರೆಸಿ, ಅವುಗಳ ಮೇಲೆ ಭಾರ ಹೊರಿಸಿ ಬಾಯಿ ನೀರೂರುವ ಮತ್ತು ವರ್ಷಗಟ್ಲೆ ತಾಳಿಕೆ ಬರುವ ಉಪ್ಪಿನ ಕಾಯಿ ತಯಾರಿಸುತ್ತಿದ್ದರು. ಈ ಉಪ್ಪಿನಕಾಯಿ ತಯಾರಿಕೆ ಕೆಲವರಿಗಷ್ಟೇ ಹಸ್ತಗತವಾಗಿ ಸೀಝನ್ನಿನಲ್ಲಿ ಅವರ 'ಕೈಗುಣಕ್ಕೆ' ವಿಪರೀತ ಬೇಡಿಕೆ! ಗಂಜಿಯೂಟಕ್ಕೆ ಗೊರಸುಗಾಯಿ ಗೊಜ್ಜು ಬೇಕಲ್ಲ? ಗೊರಟೆ ಮಾವಿನಕಾಯಿಗಳನ್ನು ಉಪ್ಪಿನಲ್ಲಿ ಕಾಯ್ದಿರಿಸಲಾಗುತ್ತಿತ್ತು. ಕೋತಿ ಜೀಳಿಸಿದ, ಬಿರುಗಾಳಿಗೆ ನೆಲಕ್ಕುರುಳಿದ, ಬಳಸಿ ಉಳಿದ ಮಾವಿನಕಾಯಿಗಳನ್ನು ಸಿಪ್ಪೆತೆಗೆದು ಕೊಯ್ದು ಆಮಚೂರ್ ಮಾಡುವದೂ ಇತ್ತು. ಹುಣಿಸೆಹಣ್ಣಿಗೆ ಬದಲಾಗಿ ಇವು ಒದಗುತ್ತಿದ್ದವು. ಮಾವಿನ ಹಣ್ಣು ಹೇರಳವಾಗಿ ಪಡೆಯುವ ಅದೃಷ್ಟವಂತರ ಮನೆಯಲ್ಲಿ ಮಾವಿನರಸ ಒಣಗಿಸಿದ 'ಸಾಕ್', ಮಳೆಗಾಲದಲ್ಲಿ 'ಟಾಫಿ'ಯಾಗಿ ಮಕ್ಕಳ ಬಾಯಿ 'ತೋಡು' ತೀರಿಸುತ್ತಿತ್ತು.

ಮಳೆರಾಯನ ಆಗಮನ, ಯಕ್ಷಗಾನದ ಕಟ್ಟು ವೇಷ, ರಂಗಪ್ರವೇಶವನ್ನು ಮಾಡುವ ಆರ್ಭಟದಂತೆ, ಕಣ್ಣಿಗೆ ಕಟ್ಟುತ್ತಿತ್ತು. ಧೂಳೆಬ್ಬಿಸುತ್ತ, ಮರಗಳನ್ನು ನೆಲಕ್ಕುರುಳಿಸುತ್ತ, ಅಬ್ಬರದ ಗಾಳಿ ಬೀಸುತ್ತಿತ್ತು. ಕಿವಿಕಣ್ಣು ಕುರುಡಾಗಿಸುವ ಗುಡುಗು-ಮಿಂಚುಗಳು, ಇವುಗಳೆಲ್ಲ ಜನ-ಮನದಲ್ಲಿ ಹುಟ್ಟಿಸುವ ಕಾತರ-ಪ್ರತೀಕ್ಷೆಗಳು, ಬೇಸಿಗೆಯ ಭಯಂಕರ ಸೆಕೆಯನ್ನು ಇಲ್ಲವಾಗಿಸಿದ ನೆಮ್ಮದಿಯನ್ನುಂಟುಮಾಡುತ್ತಿದ್ದವು. ಇಷ್ಟೆಲ್ಲ ಆರ್ಭಟ ನಡೆದರೂ ಮಳೆರಾಯ, ಕೂಡಲೇ ಪ್ರತ್ಯಕ್ಷ ಆಗಲೊಲ್ಲ! ಬರಿ ವಾಕರಿಕೆ ತೆಗೆಯುವ ನವಗರ್ಭಿಣಿಯಂತೆ! ನಂತರ ಕಾಣಿಸಿಕೊಳ್ಳುವ ಬಾಣಂತನದ ಸಂಭ್ರಮ ಮಾತ್ರ ಯಾರಿಂದಲೂ ಊಹಿಸಲಾಗದ ತೀವ್ರತೆಯಿಂದ ಕೂಡಿರುತ್ತದೆ. ಗಗನಮಂಡಲಕ್ಕೆ ಬಿರುಕುಬಿದ್ದಂತೆ ಧಾರಾಕಾರ ಮಳೆ ಒಮ್ಮೆ ಪ್ರಾರಂಭವಾಯಿತೆಂದರೆ, ವಾರವಿಡೀ ನಿಲ್ಲದೇ ಹೋದೀತು. ಬಾವಿಗಳಲ್ಲಿ ನೀರೇರಿಸುವ ಮಳೆ ಬಂದಿದೆ. ಸೌತೆಕಾಯಿ, ಮೊಗ್ಗೆಕಾಯಿ ಕುಂಬಳ ಬಳ್ಳಿಗಳಿಗೆ ಹೂಬಿಟ್ಟು ಮಿಡಿ ಒಡಿಯುವ ಕಾಲದಲ್ಲಿ ಬಿಟ್ಟು ಬಿಟ್ಟು ಬರುವ ಮಳೆ ಮೊಗ್ಗೆಕಾಯಿ ಮಳೆ ಅನಿಸಿಕೊಳ್ಳುತ್ತದೆ. ಕೆಲವೊಮ್ಮೆ ಕರಿಮೋಡಗಳು ಹಾರುತ್ತ ಹೋದಲ್ಲೆಲ್ಲ ನೀರು ಹನಿಸುತ್ತ ಹೋದಾಗ ಅಲ್ಲಲ್ಲಿ ನಾಯಿಕೊಡೆ (ಅಣಬೆ)ಗಳು ತಲೆಯೆತ್ತಲಾರಂಭಿಸುತ್ತವೆ. ಇದಕ್ಕೆ 'ಅಣಬೆ ಮಳೆ' ಎನ್ನುವದುಂಟು. ಒಮ್ಮೊಮ್ಮೊಮ್ಮೆ ಹವಾಮಾನ ಬದಲಾಗಿ, ಕೆಟ್ಟಗಾಳಿ ಬೀಸಿ, ನೆಗಡಿ-ಕೆಮ್ಮುಗಳು ಕಾಣಿಸಿಕೊಂಡು ಹಲವರು ಅನಾರೋಗ್ಯದಿಂದ ಬಳಲುವಂತೆ ಆಗುತ್ತದೆ. ರೋಗಿಗಳು, ಹಣ್ಣು ಹಣ್ಣು ಮುದುಕರು, ದಣಿದ ಹಿರಿಯರು, ಜೀವನ ಕಂಡಿದ್ದು ಸಾಕೆನ್ನು! ಎಂದು ಈವಾಗಲೇ ಕೊನೆಯುಸುರು ಎಳೆಯುವದರಿಂದ, 'ಕಾಲರಾಯನ ಮಳೆ' ಎಂಬ ಅನ್ವರ್ಥಕ ಹೆಸರು ಪಡೆದದ್ದೂ ಇದೆ. ವರ್ಷ ಋತುಮಾನ ಕೊನೆಗೊಳ್ಳುವದಕ್ಕೆ ಮೊದಲು ಪ್ರಖರ ಬಿಸಿಲು ಕಾಣಿಸಿಕೊಂಡು, ಆಗೊಮ್ಮೆ, ಈಗೊಮ್ಮೆ ಮಳೆಬಿದ್ದು ಗಗನಮಂಡಲದಲ್ಲಿ ಕಾಮನಬಿಲ್ಲು ಮೂಡುವದಿದೆ. ಇದಕ್ಕೆ 'ಇಂದ್ರ ಧನುಷ್ ಮಳೆ' ಎಂದು ಕರೆಯುವದುಂಟು.

ಬೇಸಿಗೆ ರಜೆ ಕಳೆದು ಧೋ! ಧೋ! ಮಳೆ ಪ್ರಾರಂಭವಾದಾಗಲೇ ಮಕ್ಕಳಿಗೆ ಶಾಲೆಯ ಪುನರಾರಂಭವಾಗುತ್ತಿತ್ತು. ಅಂತೆಯೇ ಮಕ್ಕಳಿಗೆಲ್ಲ ತಾಳೆಯ ಹೊಸಕೊಡೆಗಳು ಕೈಗೆ ಬರುತ್ತಿದ್ದವು. ಕಳೆದು, ಕದ್ದು ಹೋಗದಂತೆ ಅದರ ಮೇಲೆ ಮಾಲಿಕನ ಹೆಸರನ್ನು ಕರೇ ಡಾಂಬರದಿಂದ ಬರೆದದ್ದು ಎಂಥ ದೃಷ್ಟಿಮಾಂದ್ಯದವರಿಗೂ ಗೋಚರಿಸುತ್ತಿತ್ತು. ಇಷ್ಟಾದರೂ, ಥಾಲುಗಳಂತೆ ಅವನ್ನು ಬಳಸದೇ ಗದೆಯಂತೆ ಪ್ರಯೋಗಿಸಿ ಛತ್ರಿಕಾಳಗದಲ್ಲಿ ಅವನ್ನು ಹರಿದೋ ಮುರಿದೋ ಹಿರಿಯರಿಂದ ಮಂಗಳಾರತಿ ತಪ್ಪಿದ್ದಲ್ಲ. ಹಿರಿಯರು ದೊಡ್ಡದಾದ ಛತ್ರಿ (ಸಾತ್ರ) ಉಪಯೋಗಿಸಿದರೆ ಹಳ್ಳಿಗರು ತಾಳೆಯಗರಿಗಳಿಂದಲೇ ಹೆಣೆದ 'ಗೊರಬು' ಬಳಸುತ್ತಿದ್ದರು. ಕೃಷಿಕರಿಗೆ, ಶ್ರಮಿಕರಿಗೆ ಅಡೆ-ತಡೆಯಿಲ್ಲದೇ ಕೆಲಸ ಮುಂದರಿಸಲು. ಅದು ಸಾಧ್ಯವಾಗಿಸುತ್ತಿತ್ತು. ಮಳೆಗಾಲದಲ್ಲಿ ಕಂಬಳಿಗಳಿಗೆ ವಿಶೇಷ ಬೇಡಿಕೆ. ಕಂಬಳಿಕೊಪ್ಪೆ' ಯಿಂದ ಮಳೆಯ ಶೀತಬಾಧೆಯಿಂದ ರಕ್ಷಣೆ ಪಡೆಯಬಹುದು. ಶರೀರವನ್ನು ಬೆಚ್ಚಗಿಡುವಂತೆ, ಸುಖನಿದ್ರೆಗೂ ಸಹಾಯಮಾಡುತ್ತದೆ ಕಂಬಳಿ.

ಎಲ್ಲ ವಿದ್ಯಾರ್ಥಿಗಳದ್ದೂ ಒಂದೇ ಮೊರೆ ಶಾಲೆ ಪ್ರಾರಂಭವಾಗುತ್ತಿದ್ದಂತೆ ವಿಪರೀತ ಜಡಿಮಳೆ ಪ್ರಾರಂಭವಾಗಿ ರಜೆಯನ್ನು ಘೋಷಿಸಬೇಕು. ನಂತರ ಸೂರ್ಯದೇವನು ಪ್ರತ್ಯಕ್ಷನಾಗಿ, ಕಣ್ಣುಮುಚ್ಚಾಲೆ, ಚಂಡು, ಚಿಣಿಫಣಿ, ಗೋಲಿಗಳಾಟ ಆಡುವಂತಾಗಬೇಕು. ಇವೂ ಈಡೇರದಿದ್ದರೆ ಮನೆಯಲ್ಲಿ ಬೆಚ್ಚಗೆ ಕುಳಿತು ಬಕಾಸುರನ ಭಕ್ತರಾಗಬೇಕು. ಹಲಸಿನ ಹಪ್ಪಳ, ಅವಲಕ್ಕಿಗಳಿಂದ ಹಸಿವೆ ತಗ್ಗದು! ಹಲಸಿನ ಬೀಜ, ಗೆಣಸು ಕೋನದ 'ಮೂಡ್ಲ' ಗಳನ್ನು ಬಚ್ಚಲೊಲೆಯ ಬಿಸಿ ಬೂದಿಯಲ್ಲಿ ಸೇರಿಸಿಟ್ಟು ಸ್ಫೋಟಗೊಂಡಾಗ ಅವನ್ನು ಸುಲಿದು ತಿಂದರೇ ತೃಪ್ತಿ! ಆಮೇಲೆ ಚೌಕಾಬಾರಾ, ಚೆನ್ನಂಗಿ ಮಣೆಯಾಟ, ಸುತ್ತ ಗೋಲಾಕಾರದಲ್ಲಿ ಕುಳಿತು, 'ಅಟ್ಟು-ಮುಟ್ಟು' ಅದಲು-ಬದಲು-ಕಂಬೇ ಬದಲು ಆಡುವದು.

ಕಣ್ಣಾಡಿಸಿದಲ್ಲೆಲ್ಲ ನಿಸರ್ಗಮಾತೆ, ಹಚ್ಚಹಸುರಾಗಿ ಕಂಗೊಳಿಸುತ್ತಿರುತ್ತಾಳೆ. ನೆಲಕ್ಕೆ ಹಾಸಿದ ಪಾಚಿ ರತ್ನಗಂಬಳಿಯಾದರೆ, ಪಾಗಾರ-ಬಾವಿ, ಕಟ್ಟೆಗಳಲ್ಲೆಲ್ಲ ಗಿಣಿಯ ಹಸಿರು ಪುಕ್ಕಗಳಂತಿರುವ ಫರ್ನಗಳು ತಲೆಯಾಡಿಸುತ್ತ ಕಂಗೊಳಿಸುತ್ತವೆ. ಅಲ್ಲಲ್ಲಿ ಮಡುಗಟ್ಟಿ ನಿಂತ ನೀರಿನಲ್ಲಿ ಸಂಸಾರ ಹೂಡಿ, ಸುಖ-ಶಾಂತಿ ಪಡೆಯುತ್ತಿರುವ ಕಪ್ಪೆಗಳ ಸಂತತಿಭಕ್ಷಣೆಗೆ ಕೇರೆ ಹಾವುಗಳು ಹವಣಿಸುತ್ತಿರುತ್ತವೆ. ಬಂಡೆಗಳನ್ನು ಆವರಿಸಿದ ಮುಳ್ಳುಪೊದೆಗಳೂ ಕೆಂಪು, ನೀಲಿ, ಜಾಂಬಳಿ ಹೂಗಳನ್ನು ಹೊತ್ತು ನಿಂತಿರುತ್ತವೆ. ವೃಕ್ಷಗಳ ಆಶ್ರಯ ಪಡೆದ ಪರಪುಟ್ಟ ಸೀತಾದಂಡೆಯೂ ಹೂವಿನ ಮಂಟಪ ಪಡೆದು ನಾಚುತ್ತ ನಿಂತಿರುತ್ತದೆ. ಅಲ್ಲಲ್ಲಿ ಬೆಟ್ಟದ ಕೊರಕಲುಗಳಿಂದ ಧುಮುಕುವ ಝರಿಗಳಿಂದ ನೂರಾರು ತಡಸಲುಗಳು ಕಾಣಿಸಿಕೊಳ್ಳುತ್ತವೆ. ತಪ್ಪಲಲ್ಲಿ, ಬತ್ತದ ಸಸಿಗಳ 'ನಾಟಿ'ಯಲ್ಲಿ ಮೈಮರೆತ ಗ್ರಾಮೀಣ ಹೆಂಗಳೆಯರ ವರ್ಣಮಯ ಸೀರೆಗಳ ಆಕೃತಿಗಳು ಛಾಯಾಚಿತ್ರಕಾರನಿಗೆ ದೊಡ್ಡ ಆಕರ್ಷಣೆಯಾಗಿ ಕಂಡರೆ ಆಶ್ಚರ್ಯವಿಲ್ಲ. ಸಹ್ಯಾದ್ರಿ ಪರ್ವತ ಶಿಖರಗಳು, ತೇಲುವ ಕರಿಮೋಡಗಳನ್ನು ಬಿಗಿದಪ್ಪಿ, ಚುಂಬಿಸಿ, ಆನಂದಬಾಷ್ಪ ಹರಿಸಿಯೇ ಮುಂದೆ ಹೋಗಗೊಡುವವು. ಎಲ್ಲೆಡೆ ಬಿದ್ದ ಧಾರಾಕಾರ ಮಳೆಯಿಂದಾಗಿ, ಹೊಳೆ, ಹಳ್ಳ-ನದಿಗಳೆಲ್ಲ ತುಂಬಿ ಉಕ್ಕಿ ಹರಿಯದೇ ಉಳಿದಾವೇ? ಅಂತೆಯೇ ದಾರಿಯಲ್ಲಿ ಸಿಕ್ಕ ಗಿಡ-ಮರ, ಜಾನುವಾರ ತೆಂಗಿನಕಾಯಿಗಳನ್ನೆಲ್ಲ ಜೊತೆಗೊಯ್ದು ಕೊಚ್ಚಿಕೊಂಡು ಹರಿಯುತ್ತವೆ. ಅವನ್ನು ತಮ್ಮವನ್ನಾಗಿಸುವ ಹವಣಿಕೆಯಲ್ಲಿ ಕೆಲವರಾದರೂ ಜೀವ ಕಳೆದುಕೊಳ್ಳದೇ ಇರುವದಿಲ್ಲ. ಅಬ್ಬರದ ಗಾಳಿಯಿಂದ ನದಿ-ಸಮುದ್ರಗಳಿಗೆ ತೂಫಾನು ಬಂದಾಗ ನಾವೆಗಳು ಮುಳುಗಿ ಮಾಲುಗಳ ಹಾನಿ, ಪ್ರಾಣಹಾನಿಗಳು ಸಾಮಾನ್ಯ.

ಹೊರಾಂಗಣದ ಚಟುವಟಿಕೆಗಳೆಲ್ಲ ಕಷ್ಟಮಯ ಚಟುವಟಿಕೆಗಳೆಲ್ಲ ಕಷ್ಟಮಯವಾದ್ದರಿಂದ ಹೆಚ್ಚಿನ ಹಬ್ಬ-ಹುಣ್ಣಿಮೆಗಳನ್ನು ಮಳೆಗಾಲದಲ್ಲಿ, ಊರಮಠಗಳಲ್ಲಿಯೇ ಆಚರಿಸುವರು. ತೇರು,ಜಾತ್ರೆ ಬಂಡಿಹಬ್ಬ, ಹಗರಣಗಳೆಲ್ಲ ಬೇಸಿಗೆಯಲ್ಲಿ ಮುಗಿದಿರುತ್ತವೆ. ನೂಲು ಹುಣ್ಣಿಮೆ, ಕೃಷ್ಣಾಷ್ಟಮಿ, ಗಣೇಶ ಚತುರ್ಥಿಗಳೆಲ್ಲ ಒಂದರ ಮೇಲೆ ಇನ್ನೊಂದು ಬರುತ್ತಲೇ ಇರುತ್ತವೆ. ಈ ದಿನಗಳಲ್ಲಿ ಸಿಹಿಭಕ್ಷ್ಯಗಳ ಊಟ ಮಾಡಿ, ಹೊಟ್ಟೆ ಭಾರವಾದ ಬಳಿಕ ಬೆಚ್ಚಗೆ ಕಂಬಳಿ ಹೊದ್ದು ಮಲಗಿಯೋ ಒರಗಿಯೋ ಸಿಗುವ ಸುಖ ಸ್ವರ್ಗಲೋಕದಲ್ಲಿಯೂ ದುರ್ಲಭವೇ!

ಇಷ್ಟಾದರೂ, ಭವಿಷ್ಯಕ್ಕಾಗಿ ಹುಟ್ಟು ನೆಲಕ್ಕೆ ಕಚ್ಚಿಕೊಳ್ಳದೇ ದೂರದೂರದ ಊರುಗಳಿಗೆ ಪಯಣ ಬೆಳೆಸದೇ ನಿರ್ವಾಹವೇ ಇರಲಿಲ್ಲ. ಉಚ್ಚ ಶಿಕ್ಷಣಕ್ಕಾಗಿ ಧಾರವಾಡಕ್ಕೆ ತೆರಳಿದಾಗ ಅಲ್ಲಿ ಕೊಡೆಬೇಕಿಲ್ಲ. ಮಾರ್ಗದಂಚಿನ ಹುಲುಸಾಗಿ ಬೆಳೆದು ನಿಂತ ಹುಣಸೇ ಮರದ ಆಶ್ರಯ ಪಡೆದೇ ಮಳೆಯನ್ನು ಕಳೆದು ಹೋಗಬಹುದು ಎಂದು ಅರಿತಾಗ ಮೋಜೆನಿಸಿತ್ತು. ಅಮೇರಿಕೆಯ ನ್ಯೂಯಾರ್ಕ್ ರಾಜ್ಯದ ಸ್ಯಾರೆಕ್ಯೂಸ್‌ದಲ್ಲಿ, ಒಂದೇ ದಿನದಲ್ಲಿ ಎಲ್ಲ ಋತುಗಳ ದರ್ಶನದಿಂದ ದಂಗಾಗಿ ಹೋಗಿದ್ದೆ. ಮುಂಜಾನೆ ಪುಲಕಿತಗೊಳಿಸುವ

ಸೂರ್ಯಕಿರಣಗಳು ಬೇಸಿಗೆಯನ್ನು ಪ್ರತಿನಿಧಿಸಿದರೆ, ಆ ನಂತರ ಗಗನಮಂಡಲವನ್ನು ಮುಸುಕಿಡುವ, ನೀರುಹೊತ್ತ ಕರಿಮೋಡಗಳು ಮಳೆರಾಯನ ಆಗಮನ ಸೂಚಿಸುತ್ತವೆ. ಸಂಜೆಯಾಗುತ್ತಿದ್ದಂತೆ ತಾಪಮಾನದಲ್ಲಿ ವಿಪರೀತ ಇಳಿಮುಖವಾಗಿ ರಾತ್ರಿಯಿಡೀ ಹಿಮವೃಷ್ಟಿಯಾಗಿ ಚಳಿಗಾಲದ ನಿಜದರ್ಶನವಾಗುತ್ತಿತ್ತು. ಉಪಜೀವನಕ್ಕೆಂದು ರಾಜಸ್ಥಾನದ ಜೊಬನೇರಕ್ಕೆ ಹೋದಾಗ ಮರುಭೂಮಿಯ ಮಹಾನ್ ವೃಕ್ಷವೆನಿಸಿದ ಔಡಲ ಮರದ ನೆರವು ಕೂಡ ಮಳೆಗಾಲದಲ್ಲಿ ಬೇಕಾಗುವದಿಲ್ಲವೆಂದು ಪ್ರಥಮಬಾರಿಗೆ ಅರಿತೆ. ಈಗ ಬಹುಕಾಲ ಬೆಂಗಳೂರಿನಲ್ಲಿ ನೆಲೆಸಿ, ಇಲ್ಲಿ ಅನಾವೃಷ್ಟಿ, ಅತಿವೃಷ್ಟಿಗಳನ್ನು ವರ್ಷವರ್ಷವೂ ಒಮ್ಮೆತ್ತಲೇ ಎದುರಿಸುತ್ತ ಬಾಲ್ಯದ ಮಳೆಗಾಲದ ದಿನಗಳನ್ನು ನೆನೆಸಿಕೊಳ್ಳುವುದರಿಂದಲೇ ಅದೆಷ್ಟೋ ನೆಮ್ಮದಿ ಎನಿಸುತ್ತದೆ.

(ಧ್ಯೇಯನಿಷ್ಠ ಪತ್ರಕರ್ತದ ಸಾಪ್ತಾಹಿಕ ಪುರವಣಿಯಲ್ಲಿ ಪ್ರಕಟಿತ)

❑

# ೫. ಷಷ್ಠ್ಯಬ್ದಿಯ ಸವಿ

ಇಂದು ನನಗೆ ಸರಿಯಾಗಿ ಅರವತ್ತು ತುಂಬಿದವು. ಉಳ್ಳವರು, ಈ ದಿನವನ್ನು 'ಶಾಂತಿ ಹೋಮ' ಏರ್ಪಡಿಸಿ ಆಚರಿಸುತ್ತಾರೆ. ಪ್ರಚಾರ ಪ್ರಸಿದ್ಧಿಗಳಿಗಾಗಿ ಅದ್ದೂರಿಯ ಏರ್ಪಾಡು ಆಗುತ್ತದೆ. ಆಪ್ತ–ಮಿತ್ರರಿಗೆ ಭೋಜನ ಕೂಟ, ಉಡುಗೊರೆಗಳ ವಿನಿಯೋಗ ಮಾಡಿ ಬೆನ್ನು ಚಪ್ಪರಿಸಿಕೊಳ್ಳುತ್ತಾರೆ........ಹೋಟೇಲಿನ ಮಾಲಿಕರು ಇಪ್ಪತ್ತೊಂದು ಲಕ್ಷ ರೂಪಾಯಿಗಳನ್ನು ಬಳಸಿ ತಮ್ಮೂರಾದ ಉತ್ತರಕನ್ನಡ ಜಿಲ್ಲೆಯ ವೆಂಕಟಾಪುರದಲ್ಲಿ ದೊಡ್ಡ ಉತ್ಸವವನ್ನು ಏರ್ಪಡಿಸಿದ್ದರು. ಈ ಸಮಾರಂಭಕ್ಕೆ ಹಾಜರಿದ್ದ ನಮ್ಮ ನೆಂಟರಬಾಯಿಂದ ಅವರ ವರ್ಣನೆ ಕೇಳುವದೇ ಮೋಜಾಗಿತ್ತು. ಅವರ ತುತ್ತೂರಿ ಊದುವದು ಮುಗಿದ ನಂತರ "ಆ ಹಣವನ್ನು ಬಡ ಕೊಂಕಣಿ ಹುಡುಗರ ವಿದ್ಯಾರ್ಜನೆಗೆ ಸಹಾಯವಾಗುವಂತೆ ಬಳಸಬಾರದಿತ್ತೆ? ಅವರಂತೆಯೇ ಬಡತನದಿಂದ ಕಷ್ಟಪಟ್ಟು ಶಿಕ್ಷಣಕ್ಕೆ ಪರದಾಡುವ ಎಳೆಯರು ಎಷ್ಟೊಂದಿಲ್ಲ?" ಎಂದು ನಾನು ಅನ್ನದೇ ಇರಲಿಲ್ಲ.

ನಾನು ಷಷ್ಠ್ಯಬ್ದಿಯ ದಿನ ನನ್ನ ಸ್ವಭಾವಕ್ಕೆ ಅನುಗುಣವಾಗಿ ಮನೆಯ ಶಾಂತ, ಏಕಾಂತದ "ಕಮ್ಮಟ"ದಲ್ಲಿ ಕುಳಿತು, ಪುತ್ರನಿಗೆ ಪತ್ರ ಬರೆದು ಜನ್ಮದಿನ ಆಚರಿಸುತ್ತಿದ್ದೇನೆ. ಜ್ಯೋತ್ಸ್ನಾ ಹೊನ್ನಾವರದಲ್ಲಿದ್ದಾಳೆ. ಊಟ–ತಿಂಡಿಯಲ್ಲಿ ವ್ಯತ್ಯಾಸವಿಲ್ಲ. ಎಂದಿನ ಸ್ವಯಂಪಾಕ. ಅನ್ನ, ಬೇಳೆ, ಮೊಸರು, ಉಪ್ಪಿನಕಾಯಿಯ ಊಟ....... ಅದ್ದೂರಿಯ ಆಚರಣೆಯಲ್ಲಿ ವಿಶ್ವಾಸವಿಲ್ಲದವರೂ ಈ ಹೊತ್ತಿನಲ್ಲಿ ತಮ್ಮ 'ಗೌರವಗ್ರಂಥವನ್ನು ಇತರರು ಹೊರತರುವಂತೆ ನೋಡಿಕೊಳ್ಳುತ್ತಾರೆ. ಈ ಎಲ್ಲ ಆಚರಣೆಗಳಿಂದ ಹರದಾರಿ ದೂರವಿದ್ದ ನಾನು 'ನಡೆದುಬಂದ ದಾರಿ'ಯನ್ನು ನೆನಪಿಸಿಕೊಳ್ಳುತ್ತ ನನ್ನ ಯತ್ನ–ಯಶಸ್ಸುಗಳನ್ನು ನಿನ್ನೊಂದಿಗೆ ಹಂಚಿಕೊಳ್ಳುತ್ತಿದ್ದೇನೆ.

ಈರ್ವರು ಅಕ್ಕಂದಿರ ಬಳಿಕ ನಾನು ಭೂಮಿಯ ಮೇಲೆ ಅವತರಿಸಿದ್ದರಿಂದ ಕಾಕಾ–ಕಾಕಿಯರಿಗೆ ಹೆಚ್ಚಿನ ಸಂತೋಷವಾಗಿತ್ತು. ಆದರೆ ಅಪರೂಪದ ಮಗನೆಂದು ಯಾವ ಸವಲತ್ತನ್ನೂ ಕೊಡಮಾಡಲಿಲ್ಲ. ಚಿಕ್ಕಂದಿನಲ್ಲಿ ಯಕೃತ್ತಿನ ತೊಂದರೆಯಿಂದಾಗಿ ನನ್ನ ಆರೋಗ್ಯ ಅಷ್ಟೊಂದು ಚೆನ್ನಾಗಿರುತ್ತಿರಲಿಲ್ಲ. ಶಾಲೆಯಲ್ಲಿ ಕಲಿಸುವ ಪಾಠಕ್ಕಿಂತ ನನ್ನ ಸುತ್ತಮುತ್ತ ನಡೆಯುವ ಘಟನೆಗಳಲ್ಲಿ ಹೆಚ್ಚಿನ ಆಸ್ಥೆಯಿತ್ತು. ಮಳೆಯ ನೀರು, ಏರಿಯ ಮೇಲಿನಿಂದ ಗಟಾರದಲ್ಲಿ ರಸ್ತೆಯ ಮೇಲೆ ಹೇಗೆ ಹರಿಯುತ್ತದೆ? ಎಂದು ನೋಡುತ್ತ ನಿಲ್ಲುವುದು, ತಾಮುಟಕಾರನು (ತಾಮ್ರದ ಕೆಲಸಗಾರ) ತನ್ನ ಬಡಿತಗಳಿಂದಲೇ ತಗಡನ್ನು ತಾಮ್ರದ ಚೊಂಬು ಕೊಡಪಾನಗಳನ್ನಾಗಿ ಹೇಗೆ ಪರಿವರ್ತಿಸುತ್ತಾನೆ? ಎಂದು ವಿಸ್ಮಯ ಪಡುವದು, ಗುಡಿಗಾರನು ಉಕ್ಕಿನ ಚಾಣದಿಂದ ಶ್ರೀಗಂಧದಲ್ಲಿ ದೇವ–ದೇವತೆಗಳ ಮೂರ್ತಿಗಳನ್ನು ಹೇಗೆ ಕಟೆಯುತ್ತಾನೆ? ಎಂದು ವೀಕ್ಷಿಸುವದು, ಸುವರ್ಣಕಾರರ ಆಭರಣ ರಚನೆ, ಕಂಚುಗಾರರ ಎರಕ ಹೊಯ್ದು ಜಾಗಟೆ, ತಾಳ ಸಮೆಗಳ ತಯಾರಿಕೆ, ದರ್ಜಿಗಳ ಮಿಶನ್ ತಿರುಗಿಸುತ್ತ ಜರುಗಿಸುವ ಬಟ್ಟೆ–ಜೋಡಣೆಯ ಚಮತ್ಕಾರ, ಮೊದಲಾದವನ್ನು ಬೆಪ್ಪಾಗಿ ನಿಂತು ನೋಡುವದು ನನಗೆ ಪ್ರಿಯವಾಗಿದ್ದವು. ಗಣೇಶನ ವಿಗ್ರಹ ತಯಾರಿಕೆ, ಕಾವಿಕಲೆಯ ಚಿತ್ರ ನಿರ್ಮಾಣಗಳಂತೂ ನನಗೆ ತುಂಬ ಇಷ್ಟವಾಗಿದ್ದವು. ನಾನೊಬ್ಬ ನಿರುಪದ್ರವಿ ಪ್ರಾಣಿಯಾಗಿದ್ದರಿಂದ ಆಯಾ ಕಲಾಕಾರರೆಲ್ಲ ಆತ್ಮೀಯರಾಗಿ ಮಾತನಾಡಿಸುವದೇ ಅಲ್ಲದೇ ಚಿಕ್ಕಪುಟ್ಟ ಚಟುವಟಿಕೆಗಳಲ್ಲಿ ಪಾಲುಗೊಳ್ಳಲು ಆಮಂತ್ರಿಸುತ್ತಿದ್ದರು. ಪಾಸ್ಕುನ ಮಶೀನು ಬಳಸಿ ಹೊಲಿಗೆ ಮಾಡಿದ್ದೇನೆ. ಗಣಪತಿಯ ವಿಗ್ರಹಕ್ಕೆ ಬಣ್ಣ ಬಳಿದಿದ್ದೇನೆ. ಇಂದು ಇವೆಲ್ಲ ಅಭಿಮಾನದಿಂದ ನೆನಪಿಸಿಕೊಳ್ಳುವ ಘಟನೆಗಳಾಗಿವೆ.

ಶಾಲೆ, ಕಾಲೇಜು ವಿಶ್ವವಿದ್ಯಾಲಯ, ಅಮೇರಿಕೆಗಳಲ್ಲಿ ನಾನೆಂದೂ ಪುಸ್ತಕದ ಹುಳುವಾಗಲೇ ಇಲ್ಲ. ತಿಳಿಯದ ವಿಷಯವನ್ನು ಪರೀಕ್ಷೆಗಳಲ್ಲಿ ಹೆಚ್ಚಿನ ಗುಣಪಡೆಯುವದಕ್ಕಾಗಿ ಕಂಠಪಾಠ ಮಾಡಿರಲಿಲ್ಲ. ಅರಿತುದನ್ನು ಶಾಶ್ವತವಾಗಿ ನನ್ನದನ್ನಾಗಿ ಮಾಡಿಕೊಂಡಿದ್ದೇನೆ.

ಇಂದಿನ ರ್‍ಯಾಂಕ್ ಪಡೆದವರನ್ನು ಕಂಡಾಗ ನಾನು ಎಷ್ಟೋ ವಾಸಿ! ಎಂದು ಅನಿಸುತ್ತದೆ. ಕಪಟರಹಿತ ವರ್ತನೆ, ಸತತೋದ್ಯೋಗ, ಸರಳ ವ್ಯವಹಾರಗಳಿಂದ ನನ್ನ ಶಿಕ್ಷಕರೆಲ್ಲ ನನ್ನನ್ನು ಮೆಚ್ಚಿಕೊಳ್ಳುತ್ತಿದ್ದರು. ನನ್ನ ವಿದ್ಯಾಜೀವನದ ಯಶಸ್ಸಿಗೆ ಇವೇ ಮುಖ್ಯಕಾರಣವೆಂದು ನನ್ನ ಅನಿಸಿಕೆ. ನನ್ನಂತೆ ಡಾಕ್ಟರೇಟ್ ಮಾಡಲು ಅಮೇರಿಕೆಗೆ ಬಂದ ಧಾರವಾಡದ ಇನ್ನೊಬ್ಬ ವಿದ್ಯಾರ್ಥಿಯನ್ನು ಒಂದಿಷ್ಟು ಮುಲಾಜು ಇಲ್ಲದೆ ಮೂರೇ ತಿಂಗಳಲ್ಲಿ ವಾಪಸ್ ಕಳಿಸಿದ್ದರು. ಸ್ನಾತಕೋತ್ತರ ಪದವಿ ಪಡೆಯಲು ಕೀಟಶಾಸ್ತ್ರ ವಿಭಾಗ ಸೇರಿದ ಎಂಟು ಜನ ಅಮೇರಿಕನ್ ವಿದ್ಯಾರ್ಥಿಗಳನ್ನು ಒಂದು ಸೆಮೆಸ್ಟರ್ ಮುಗಿಯುವದರೊಳಗಾಗಿ ಮನೆಗೆ ಹಿಂದಿರುವಂತೆ ಅಪ್ಪಣೆ ಕೊಡಿಸಿದರು. ಡಾಕ್ಟರೇಟ ಪದವಿಗಾಗಿ ನಾಲ್ಕು ವರ್ಷ ಮಣ್ಣು ಹೊತ್ತ ಜಿಮ್ ಕಾರ್ಟಮನ್‌ಗೆ ಕೊನೆಗೂ ಪಿಎಚ್.ಡಿ. ಸಿಗದೇ ಹೋದದ್ದು ದೊಡ್ಡ ದುರಂತ. ಇದನ್ನೆಲ್ಲ ಪರಿಗಣಿಸಿದಾಗ, ನನಗೆ ಶಿಷ್ಯವೇತನದ ಜೊತೆಗೆ ಪದವಿ ದೊರಕಿದ್ದು ದೊಡ್ಡ ಸಾಧನೆ! ಅನಿಸುತ್ತದೆ. ನಾನು ಕಲಿಸಿದ ವಿದ್ಯಾರ್ಥಿಗಳು, ಇಂದಿಗೂ ಬಂದು ಭೇಟಿಯಾಗುತ್ತಾರೆ, ಎಂದರೆ, ನಾನೊಬ್ಬ ಒಳ್ಳೆಯ ಶಿಕ್ಷಕನಾಗಿದ್ದರಿಂದ, ಎಂದು ಭಾವಿಸಿದ್ದೇನೆ. ಜೋಬನೇರ (ರಾಜಸ್ಥಾನ) ದಲ್ಲಿದ್ದ ಜೆ.ಎನ್. ಸಚಾನರು ಕಾಲುಶತಮಾನದ ನಂತರ ನನ್ನನ್ನು ಹುಡುಕಿಕೊಂಡು ಬಂದರೆಂದರೆ, ಒಳ್ಳೆಯ ಸಹೋದ್ಯೋಗಿ! ಎನಿಸಿರಬೇಕು. ಪ್ಲಾಸಿಯಲ್ಲಿದ್ದ ಪ್ರಧಾನಬಾಬು, ಇಂದಿಗೂ ಬೆಂಗಳೂರಿಗೆ ಬಂದಾಗ, ತಪ್ಪದೇ ಭೇಟಿಯಾಗುತ್ತಾನೆಂದರೆ ನಾನೊಬ್ಬ ಒಳ್ಳೆಯ ಮೇಲ್ವಿಚಾರಕ ಅನಿಸಿರಬೇಕು. ವೈಜ್ಞಾನಿಕ ಛಾಯಾಗ್ರಹಣ, ಬರವಣಿಗೆಯ ಬಗ್ಗೆ ಬೇರೆ ಬರೆಯಬೇಕಾಗಿಯೇ ಇಲ್ಲ!

Old age is full of regrets. (ಇಳಿವಯಸ್ಸು ಪಶ್ಚಾತ್ತಾಪಗಳ ಆಗರ) ಎಂದು ವಯಸ್ಕರು ಆಗಾಗ ಗೊಣಗುವದನ್ನು ಕೇಳಿದ್ದೇನೆ. ತೀರ ಚಿಕ್ಕ ವಯಸ್ಸಿನಿಂದಲೂ, ಪ್ರತಿಯೊಂದು ಕೆಲಸವನ್ನು ಸಾರಾಸಾರ ವಿಚಾರ ಮಾಡಿ, ಮುಂದಾಲೋಚನೆಯಿಂದ, ಕೈಗೊಳ್ಳುತ್ತಿದ್ದೆ. ನನಗಿರುವ ಅಡಚಣೆಗಳನ್ನು ಗಮನಿಸುತ್ತಿದ್ದೆ. ನನ್ನ ಅರವತ್ತು ವರ್ಷಗಳ ಜೀವನದಲ್ಲಿ ಪಶ್ಚಾತ್ತಾಪ ಪಡುವಂತಹ ಒಂದೇ ಒಂದು ಘಟನೆಯನ್ನು ಎದುರಿಸಿಲ್ಲ ಎಂದರೆ ಯಾರೂ ನಂಬಲಿಕ್ಕಿಲ್ಲ! ಆದರೆ ಇದು ಸತ್ಯ. ಇಂದು ನಾನು ತಿರುಗಿ ಮೊದಲಿನಿಂದ ಜೀವನ ನಡೆಸುವಂತಿದ್ದರೆ, ಇದಕ್ಕಿಂತ ಬೇರೊಂದು ಜೀವನವನ್ನು ಅಪೇಕ್ಷಿಸಲಾರೆ. ಸದಾಕಾಲವೂ ನನಗೆ ಮಾನಸಿಕ ಶಾಂತಿ, ವ್ಯಕ್ತಿ ಸ್ವಾತಂತ್ರ್ಯಗಳು ಅತ್ಯಂತ ಪ್ರಿಯವಾದವುಗಳು. ಇವುಗಳನ್ನು ನನ್ನವನ್ನಾಗಿ ಮಾಡಿಕೊಳ್ಳಲು ಅಧಿಕಾರ, ಐಶ್ವರ್ಯ, ಆಧುನಿಕ ಆಕರ್ಷಣೆಗಳು, ವಿನೋದಾವಳಿಗಳು, ಆಪ್ತೇಷ್ಟರ ಭೇಟಿಗಳನ್ನು ಬುದ್ಧ್ಯಾಪೂರ್ವಕವಾಗಿ ದೂರವಿಟ್ಟೆ. ಇಷ್ಟಾದರೂ ನನ್ನ ಬಗ್ಗೆ ಅಭಿಮಾನ ಇಟ್ಟುಕೊಂಡವರ ಸಂಖ್ಯೆಗೇನೂ ಕಡಿಮೆ ಇಲ್ಲ. ಅದೆಷ್ಟೋ ಜನರಿಗೆ ನನಗಿರುವ ಚಿತ್ತಶಾಂತಿ ನೋಡಿದಾಗ, ತಮಗೂ ಬೇಕು ಅನಿಸುತ್ತದಂತೆ! ಆದರೆ ಅದನ್ನು ಸಾಧಿಸಲು ನಾನು ಕೈಕೊಂಡ ಹೋರಾಟದ ಕಲ್ಪನೆ ಅವರಿಗೆ ಇದ್ದಂತಿಲ್ಲ. ನನ್ನನ್ನು ಸುಲಭವಾಗಿ ಯಾರಿಂದಲೂ ಅರ್ಥಮಾಡಿಕೊಳ್ಳಲು ಆಗುವುದಿಲ್ಲ. ಇಷ್ಟಾದರೂ ಮೂರುದಶಕಗಳ ಕಾಲ, ಯಶಸ್ವಿ ಸಂಸಾರ ನಡೆಸಿಕೊಂಡು ಬರಲು ಸಕಲ ರೀತಿಯಿಂದ ನೆರವಾದ ಪತ್ನಿಯ ಸಹಕಾರವೂ ಅಸಾಧಾರಣವೆಂದೇ ತಿಳಿದಿದ್ದೇನೆ. ಒಬ್ಬನೇ ಮಗನಿದ್ದರೂ, ಅವನನ್ನು ಮುದ್ದಿಸಿ, ಅಟ್ಟಕ್ಕೇರಿಸಿ, ತಾನು ಅದ್ವಿತೀಯ! ಎಂಬ ಭಾವನೆ ಮೂಡದಂತೆ ಸಕಲ ಪ್ರಯತ್ನ ಮಾಡಿದ್ದೇವೆ. ಗೆಳೆಯರು ಪಾಲಕರೆಲ್ಲರೂ ತಮ್ಮ ಮಕ್ಕಳಿಗೆ ಕೊಡಮಾಡುವ ಸವಲತ್ತುಗಳನ್ನು ನೋಡಿದಾಗ, ಮಗನಿಗೆ ತಾನು ಇವುಗಳಿಂದ ವಂಚಿತನಾಗಿದ್ದೇನೆ, ಅನಿಸಿರಬೇಕು. ಆದರೆ ಇಂದಲ್ಲ ನಾಳೆ, ತನ್ನ ತಂದೆ ಅದೆಷ್ಟು ಮುಂದಾಲೋಚನೆಯಿಂದ ನಡೆದುಕೊಂಡಿದ್ದಾನೆ. ಜೀವನದ ಮೌಲ್ಯಗಳನ್ನು ನಾನಾಗಿ ತಿಳಿದುಕೊಳ್ಳುವಂತೆ ಮಾಡಿದ್ದಾನೆ, ಎಂದು ಪ್ರಶಂಸೆ ಮಾಡದಿರಲಾರ! ನಾನು ಸಾಧ್ಯವಾದಲ್ಲೆಲ್ಲ ಇನ್ನೊಬ್ಬರನ್ನು ಸುಖಿಯಾಗಿಸಲು ಯತ್ನಿಸಿದ್ದೇನೆ. ಯಾರೂ ನೊಂದುಕೊಳ್ಳುವಂತೆ ಮಾಡಿದ ನೆನಪೇ ಇಲ್ಲ.- ಶಾನಭಾಗರು ನನ್ನ ಮೇಲೆ ದ್ವೇಷ ಸಾಧಿಸಲು ಎಷ್ಟೊಂದು ಯತ್ನಿಸಿದರು! ನಾನು ಅವರ ಒಳಿತನ್ನೇ ಬಯಸಿದ್ದೇನೆ. ಕೊನೆಯ ಗಳಿಗೆಯಲ್ಲಿ ಹಿಂದಿನದೆಲ್ಲ ಮರೆತುಬಿಡಲು ತುಳಸಿದಾಸನ ಹತ್ತಿರ ಹೇಳಿ ಕಳಿಸಿದರಂತೆ.- ದೇಸಾಯಿ ಅವರಿಗೂ ಈ ಮಾತು ಅನ್ವಯಿಸುತ್ತದೆ.

"ಅರವತ್ತರ ಅರುಳು ಮರಳು" ಎಂಬ ಗಾದೆ ಇದೆ. ಈವಾಗ ಬಾಲಿಶ ಬುದ್ಧಿ ಬರುವದು ನಿಜವೇ? ಕಳೆದ ಆರುದಶಕಗಳಲ್ಲಿ ಜೀವನದ ಸಂಪೂರ್ಣ ಸ್ವಾದವನ್ನು ಪಡೆದಿದ್ದೇನೆ. ಆದ್ದರಿಂದ ಮುಂಬರುವ ಜೀವನಕ್ಕಾಗಿ ತಲೆಕೆಡಿಸಿಕೊಳ್ಳಲಿಲ್ಲ! ಸರ್ವೀಸಿನ ಹೆಚ್ಚು ಕಾಲ ದೂರವೇ ಇರುತ್ತಿದ್ದ ಪತ್ನಿ ನಿವೃತ್ತಿಯ ಬಳಿಕ ಜೊತೆಗಿದ್ದು ಜೀವನ ನಡೆಸಲಾರಂಭಿಸಿದ್ದರಿಂದ- ಇವರಿಬ್ಬರೂ ಹೇಗೆ ಹೊಂದಿಕೊಳ್ಳುವರೋ! ಎಂದು ಕೆಲವರಿಗಾದರೂ ಕಳವಳ ಆಗಿದ್ದಿರಬೇಕು. ಮಗನೂ ಹಿಂತಿರುಗಿ ಬಂದರೆ ಮೂವರು ಮೂರು ದಿಕ್ಕಿನಲ್ಲಿ ಯೋಚಿಸುವವರು, ಒಟ್ಟಿಗೆ ಹೇಗೆ ಬದುಕಬಲ್ಲರು? ಎಂದು ನಮ್ಮ 'ಹಿತ-ಚಿಂತಕ'ರಿಗೆ ಯೋಚನೆಗೆ ಇಟ್ಟುಕೊಂಡಿರಬೇಕು. ಪುತ್ರನು ಹೇಗೋ ಹೊಂದಿಕೊಂಡಾನು! ಎಂದು ಇಟ್ಟುಕೊಳ್ಳೋಣ. ಅವನ ವಿವಾಹದ ನಂತರ ಬರುವ ಸೊಸೆ, ಹಳೆಯ ವಿಚಾರಗಳ ಅತ್ತೆ-ಮಾವಂದಿರಿಗೆ ಹೊಂದಿಕೊಳ್ಳುವದು ನಿಜವೇ? ಎಂದು ಕಂಗಾಲಾಗಿರಬೇಕು. ಅನೇಕ ಸಲ ಸಣ್ಣ ಕಾರಣಗಳಿಗೆ ನಮ್ಮಲ್ಲಿ ವಾದ ವಿವಾದಗಳು ನಡೆಯುವದರಿಂದ ಇನ್ನಿತರರಿಗೆ, ನಮ್ಮಲ್ಲಿ ಜೀವನದ ದೃಷ್ಟಿಕೋನದ ಬಗ್ಗೆ ಒಮ್ಮತವಿದೆ, ಎಂದು ಅರಿವಾಗುವದೇ ಇಲ್ಲ! ಜ್ಯೋತ್ಸ್ನಾಳ

ಓಮುಗಾರಿಕೆಯ ಹವ್ಯಾಸಕ್ಕೆ ನಾನು ಎಂದೂ ಅಡ್ಡಿ-ಆತಂಕಗಳನ್ನು ಒಡ್ಡಲು ಸಾಧ್ಯವೇ? ನನ್ನ ಛಾಯಾಗ್ರಹಣ ಬರವಣಿಗೆ, ಚಿತ್ರಕಲೆಗಳ 'ಚಟ'ಕ್ಕೆ ಪತ್ನಿ-ಪುತ್ರರು ಆಕ್ಷೇಪವೆತ್ತಲು ಎಂದಾದರೂ ಸಾಧ್ಯವೇ? ಅದರಂತೆ ಪುತ್ರನ ಪ್ರತಿಭೆ ಅರಳಲು ನಾವು ಪ್ರೋತ್ಸಾಹಿಸದೇ ಇರುತ್ತೇವೆಯೇ? ಬರುವ ಸೊಸೆ ಕೂಡ ನಮ್ಮ ಜೀವನದ ರೀತಿ-ನೀತಿಗಳಿಗೆ ಹೊಂದಿಕೊಳ್ಳುವ ಸಾಧ್ಯತೆ ಬಲವಾಗಿದೆ. ಇಷ್ಟಾಗಿ ಹೊಂದಿಕೊಳ್ಳದ ಸ್ವಭಾವವಾಗಿದ್ದರೆ ನಿನ್ನ ಪತಿಯೊಂದಿಗೆ ನೀನು ಸುಖವಾಗಿರಮ್ಮ! ಎಂದು ಬೆಂಗಳೂರು ಮನೆಯನ್ನು ಅವರಿಬ್ಬರಿಗೆ ಬಿಟ್ಟುಕೊಟ್ಟು, ನಾವಿಬ್ಬರೂ ಧಾರವಾಡ- ಇನ್ನಾವುದೇ ಸ್ಥಳದಲ್ಲಿಯೊ ಹೊಸ ಅಧ್ಯಾಯ ಪ್ರಾರಂಭಿಸಲು ನಮ್ಮ ಅಭ್ಯಂತರವಿಲ್ಲ. ಮಗ-ಸೊಸೆ ಜೊತೆಗಿರಲು ಇಷ್ಟಪಟ್ಟರೆ ಅದೂ ಮಾನ್ಯ. ಲೇಖನ, ಪುಸ್ತಕಗಳನ್ನು ಪ್ರಕಟಿಸಲೇ ಬೇಕು, ಎಂಬ ಹಂಬಲವಿಲ್ಲ. ಧನ ಸಂಗ್ರಹಣ ಮಾಡಬೇಕೆಂಬ ಕನಸು ಇಲ್ಲ. ಖ್ಯಾತಿಯ ಹಪಹಪ ಇಲ್ಲ. ಜನಸಾಮನ್ಯರೊಡನೆ ಬೆರೆತು ಅವರ ಆಚಾರ, ವಿಚಾರ, ಆಸೆ-ಆಕಾಂಕ್ಷೆಗಳನ್ನು ಅರಿಯುವದು. ನನಗೆ ಅತ್ಯಂತ ಪ್ರಿಯವಾದದ್ದು. ಈ ಕೆಲಸಕ್ಕೆ ಕ್ಯಾಮರಾ ಫಿಲ್ಮ ಕೂಡ ಬೇಕೆಂದಿಲ್ಲ. ಹಾದಿಹೋಕರನ್ನು ನೋಡುತ್ತ ಅವರ ಚಲನವಲನ ವೀಕ್ಷಿಸುತ್ತ ಗಂಟೆಗಟ್ಟಲೆ ಕಳೆದರೆ ಏನೋ ಆನಂದ ನನಗೆ. ಇಂಥ ನಿರಪಾಯಕಾರಿ ಹವ್ಯಾಸಗಳಿದ್ದವನಿಗೆ ಕೀಟಲೆ ಕೊಡಲು ಎಂಥವನಿಗೂ ಹೆಚ್ಚಿನ ಪರಿಶ್ರಮ ಮಾಡಬೇಕಾಗುತ್ತದೆ! ಅರವತ್ತರ ಹೊಸಲು ದಾಟಿ ಅತ್ತ ಹೆಜ್ಜೆ ಇಡುತ್ತಿದ್ದಾಗ ಬಂದ ಕೆಲ ವಿಚಾರಗಳನ್ನು ಬರೆಯಲು ಯತ್ನಿಸಿದ್ದೇನೆ. (29-09-1994)

❑

## ೬. ಮೋಡಗಳ ಮಾಯಾಲೋಕ

ಮನೆಯಲ್ಲಿ ವಿದ್ಯುತ್ ಪೂರೈಕೆ ನಿಂತೊಡನೆ ಬೆಡ್ ರೂಮಿನ ಬಾಲ್ಕನಿಗೆ ಧಾವಿಸಿ ಗಗನವಿಹಾರಿಗಳಾದ ಮೋಡಗಳ ವೀಕ್ಷಣೆ ಪ್ರಾರಂಭಿಸಿದ್ದೇನೆ. ನನ್ನ ಮೊದಲಿನ ಸ್ಥಳವಾದ ಡ್ರಾಯಿಂಗ್ ರೂಮಿನ ಬಾಲ್ಕನಿಯ ಎದುರು ರಸ್ತೆಯಲ್ಲಿ ಪೈಪು ಒಡೆದು ಕಕ್ಕಸು ನೀರು ರಸ್ತೆಯುದ್ದಿ ಹರಿಯುತ್ತಿರುವುದರಿಂದ ಅಲ್ಲಿ ಕುಳಿತು ಬರಹೋಗುವವರನ್ನು ನೋಡುವದಾಗುವದಿಲ್ಲ. ನಿತ್ಯ ನೂತನವಾದ ಈ ಮೋಡಗಳತ್ತ ಇಷ್ಟು ದಿನ ಏಕೆ  ಲಕ್ಷ್ಯ ಹರಿಸಲಿಲ್ಲ? ಎಂದು ಈಗ ಅನಿಸುತ್ತಿದೆ. ಎಮ್. ಎಫ್. ಹುಸೇನರ ತೈಲಚಿತ್ರ ಒಂದಕ್ಕೆ ಹನ್ನೆರಡು ಲಕ್ಷ ರೂಪಾಯಿಗಳ ಮೌಲ್ಯವೆಂದೇ ತಿಕೀಟುಕೊಂಡು ಅದನ್ನು ನೋಡಲು ಹೋಗುವವರು, ಕೇವಲ ಹನ್ನೆರಡು ನಿಮಿಷ ಮೌನವಾಗಿ ಈ ಮೋಹಕ ಮೋಡಗಳ ವಿನ್ಯಾಸವನ್ನು ವೀಕ್ಷಿಸುವದಿಲ್ಲ. ಈ ವೀಕ್ಷಣೆ ರೂಢಿಸಿಕೊಂಡರೆ, ಚಿತ್ರಸಂಪತ್ತಿನ ವೀಕ್ಷಣೆಯ ಆನಂದವನ್ನು ಪಡೆಯಬಹುದಾಗಿದೆ. ಈ ಮೋಡಗಳು ಅತ್ಯಂತ ಚಂಚಲವಾಗಿರುವದರಿಂದ ಎಲ್ಲೂ ಸ್ಥಾಯಿಯಾಗಿರಲಾರವು!

ನಮ್ಮ ಕಣ್ಣೆದುರಿನಲ್ಲೇ ಮೇಘ ಮಾಯಾಂಗನೆಯರು, ತಮ್ಮ ವೇಷಭೂಷಣ, ಅಲಂಕಾರಗಳನ್ನು ಬದಲಿಸುತ್ತ ವಿವಿಧ ಪಾತ್ರಗಳನ್ನು ನಿರ್ವಹಿಸುತ್ತಲೇ ಇರುತ್ತಾರೆ. ಇದಕ್ಕೆ ಅವರು ಗ್ರೀನರೂಂ ಕೇಳುವದಿಲ್ಲ, ರಂಗಸ್ಥಳ ಬೇಕೆನ್ನುವದಿಲ್ಲ. ಅವರುಗಳ ನೃತ್ಯಕ್ಕೆ ಮೃದಂಗ, ಕೊಳಲು ಬೇಕಿಲ್ಲ. ತಾತ್ಥೈ! ಎನ್ನುವ ನಟ್ಟುವಾಂಗವೂ ಬೇಕಿಲ್ಲ. ಆದರೂ ಸರ್ವಾಲಂಕಾರ ಮಾಡಿಕೊಂಡು ಗೆಜ್ಜೆಯ ನಾದ ಹೊರಡಿಸುತ್ತ ನರ್ತಿಸುವವರಿಗಿಂತ, ನಾಜೂಕಿನ ನೃತ್ಯಕೂಟ ನಡೆಸಿರುತ್ತವೆ. ಒಮ್ಮೆ ಐರಾವತದಂತೆ ಬೃಹದಾಕಾರ ತಳೆದರೆ, ಇನ್ನೊಮ್ಮೆ ಒಂಟೆಯಂತೆ ಬಡಕಲಾಗಿ ಎತ್ತರವಾಗಿ ಬಿಡುತ್ತವೆ. ಮಗುದೊಮ್ಮೆ ಕಾದಾಟಕ್ಕೆ ಇಳಿದ ಗೂಳಿಗಳನ್ನು ನೆನಪಿಗೆ ತರುತ್ತವೆ. ಚಿಗರೆಯಂತೆ ನಾಗಾಲೋಟ ಹಾಕುವವೂ ಕಾಣಸಿಗುತ್ತವೆ. ನಕಾಶೆಯೆಂದರೆ ಮೂಗು ಮುರಿಯುವವರು ಮೋಡಗಳನ್ನು ಅಭ್ಯಸಿಸಬೇಕು. ಒಮ್ಮೆ ಏಶಿಯಾ ಖಂಡದಂತೆ ಬೃಹದಾಕಾರ ತಳೆದರೆ ಮರುಗಳಿಗೆಯಲ್ಲೇ ಶ್ರೀಲಂಕಾ ಗೋಚರಿಸುತ್ತದೆ! ಕೆಲವೊಮ್ಮೆ ಒಂದನ್ನೊಂದು ಅಗಲಿ ಉತ್ತರ ಮತ್ತು ದಕ್ಷಿಣ ಅಮೇರಿಕೆಗಳಾಗಿ ಬಿಡುವವು. ಗ್ರೀನಲಂಡ, ಮಡಗಾಸ್ಕರ, ಸಿಸಿಲಿಗಳನ್ನು ಸುಲಭವಾಗಿ ಗುರುತಿಸಬಹುದು.

ಮೋಡಗಳ ವರ್ಣಸಂಯೋಜನೆ ಅಪೂರ್ವವಾದದ್ದು. ಒಮ್ಮೆ ಅವು ಹಿಮದ ರಾಶಿಯ ಭ್ರಮೆ ಹುಟ್ಟಿಸಿದರೆ, ಇನ್ನೊಮ್ಮೆ ಶುಭ್ರವಷ್ಟು ಪಾರದರ್ಶಕವಾಗಿರುತ್ತವೆ. ಭೂಮಾತೆಯ ಬಾಯಾರಿಕೆಯನ್ನು ನಿವಾರಿಸುವ ಅರ್ಹತೆ ಹೊತ್ತು ಹೊರಟ ಮೋಡಗಳು ಕರಿಯಣ್ಣನಂತಿದ್ದರೆ, ಗಗನ ಮಂಡಲವು ಶುಭ್ರ ಇರುವಾಗ ಆವರಿಸುವ ನೀಲಿವರ್ಣವು, ಕಲಾಕಾರರಿಗೆ ಅತ್ಯಂತ ಆಕರ್ಷಕ. ಸೂರ್ಯೋದಯ ಹಾಗೂ ಸೂರ್ಯಾಸ್ತದ ಹೊತ್ತಿಗೆ ಮೋಡಗಳೆಲ್ಲ ಝಗಝಗಿಸುವ ಸುವರ್ಣ ವರ್ಣ ತಳೆದಿರುತ್ತವೆ. ಆ ಹೊಳಪು, ಆ ಮಿಂಚು ಎಂಥ ಚತುರ ಅಕ್ಕಸಾಲಿಗನೂ ತನ್ನ ಕಸಬಿನಲ್ಲಿ ಬಿಂಬಿಸಲಾರ. ಇಂಥ ಮೋಡಗಳ ಸೌಂದರ್ಯ, ಕಡಲ ನೀರಿನಲ್ಲಿ ಅವರ ಪ್ರತಿಬಿಂಬದಲ್ಲಂತೂ ವರ್ಣಿಸಲಾಗದಷ್ಟು ಅಪೂರ್ವ ಅನುಭವ!

ಅಪರೂಪಕ್ಕೆ ಸೂರ್ಯದೇವನು ರಕ್ತದೋಕುಳಿ ಆಡಿದನೋ ಎಂದು ಅನುಮಾನ ಪಡುವಷ್ಟು ಮೋಡಗಳು ಕೆಂಪಾಗಿ ಕಾಣುತ್ತಿರುತ್ತವೆ. ಮಳೆಗಾಲದ ಹುಣ್ಣಿಮೆರಾತ್ರಿಯಲ್ಲಿ ಮೋಡಗಳು ಚಂದ್ರನೊಡನೆ ಮುಟ್ಟಾಟದಲ್ಲಿ ತೊಡಗಿರುತ್ತವೆ. ಆಗ ಮೇಘರಾಶಿಗಳು ತಿಳಿ ಹಳದಿ ವರ್ಣವನ್ನು ತಳೆದಿರುತ್ತವೆ. ಆದರೆ ಅವು ತಮ್ಮ ಮುಖದ ಕಳೆಯನ್ನು ಬದಲಿಸಲು ಹೆಚ್ಚು ಸಮಯ ತೆಗೆದುಕೊಳ್ಳುವುದಿಲ್ಲ. ಚೀತ್ಕಾರದ ಧ್ವನಿಯಲ್ಲಿ ಗುಡುಗುತ್ತಾ, ಕಣ್ಣುಗಳಿಂದ ಮಿಂಚು ಹೊರಹಾಕುತ್ತ, ಏಕಪ್ರಕಾರವಾಗಿ ಮಳೆಯನ್ನು ಸುರಿಸಲಾರಂಭಿಸುತ್ತವೆ. ಇವುಗಳ ಕೃಪಾಕಟಾಕ್ಷದಿಂದಾಗಿ ಭೂಮಂಡಲದಲ್ಲಿ ಅತಿವೃಷ್ಟಿ, ಅನಾವೃಷ್ಟಿಗಳು ಸಂಭವಿಸಿ, ಮಂತ್ರಿಮಹೋದಯರಿಗೆಲ್ಲ ತಮ್ಮ ಜೇಬುಗಳನ್ನು ತುಂಬಿಸಿಕೊಳ್ಳಲು ಸಾಧ್ಯವಾಗುವದು!

ಇನ್ನು, ಈ ಮೋಹಕ ಮೋಡಗಳ ಛಾಯಾಗ್ರಹಣವೋ ಕಾಲೇಜ ವಿದ್ಯಾರ್ಥಿನಿಯರನ್ನು ಕ್ಲಿಕ್ಕಿಸುವದಕ್ಕಿಂತ ಬಿಗಿಯಾದದ್ದು! ಹಕ್ಕಿ ಹಾಗೂ ಹೆಣ್ಣುಗಳಂತೆ ಅವುಗಳ ಭಾವ ಹಾಗೂ ಚಲನವಲನಗಳನ್ನು ಮೊದಲು ಆಳವಾಗಿ ಅಭ್ಯಸಿಸಬೇಕು. ಸ್ವಚಾಲಿತ ಕ್ಯಾಮರಾಗಳ ಕಣ್ಣಿಗೆ ಇವು ಸುಲಭವಾಗಿ ಮಣ್ಣು ಎರಚುವವು. ಪ್ರಕೃತಿಗಿಂತ ಎಷ್ಟೋ ಪಾಲು ಇವು ತೇಜ. ಪುಂಜವಾಗಿರುವದರಿಂದ ಬೇರೇಯೇ ರೀತಿಯಲ್ಲಿ ಇವನ್ನು ಸೆರೆಹಿಡಿಯಬೇಕಾಗುತ್ತದೆ. ಈ ಕಾರಣಕ್ಕಾಗಿ ಸರ್ವಸಾಧಾರಣ ಜನರು ತೆಗೆದ ಸೃಷ್ಟಿ ಸೌಂದರ್ಯದ ಛಾಯಾಚಿತ್ರಗಳಲ್ಲಿ ಮೊಡಗಳು ಮೂಡುವದೇ ಇಲ್ಲ! ಅವುಗಳನ್ನು ಮೂಡಿಸಲು ಹಳದಿ, ಕಿತ್ತಳೆ, ಇಲ್ಲವೇ ಕೆಂಪು ಫಿಲ್ಟರ್‌ಗಳನ್ನು ಬಳಸಬೇಕಾಗುತ್ತದೆ. ಇಲ್ಲವೇ ಮೋಡಗಳನ್ನೇ ಪ್ರತ್ಯೇಕವಾಗಿ ಕ್ಲಿಕ್ಕಿಸಿ, ನಂತರ ಕತ್ತಲೆಕೋಣೆಯಲ್ಲಿ ಅವುಗಳನ್ನು ಹೊಂದಿಸಿಕೊಳ್ಳಬೇಕಾಗುತ್ತದೆ. ಕಳೆದ ಮೂರು ತಿಂಗಳಲ್ಲಿ ಒಂದು ಸಹಸ್ರ ಮೋಡಗಳ ಛಾಯಾಚಿತ್ರಗಳನ್ನು ತೆಗೆದಿದ್ದೇನೆ ಎಂದರೆ ಯಾರೂ ನಂಬಲಿಕ್ಕಿಲ್ಲ! ಮೋಡಗಳ ಚಿತ್ರೀಕರಣಕ್ಕೆ ಕಪ್ಪು-ಬಿಳುಪು ಫಿಲ್ಮ್ ವಾಸಿ. ಇನ್ನು ಮುಂದೆ ಮುದ್ರಿಸಬೇಕೆಂದಿರುವ ಹಣ್ಣು, ಹೂ ಹಕ್ಕಿಗಳಿಗೆ ಹಿನ್ನೆಲೆಯಾಗಿ ಈ ಮೋಡಗಳನ್ನು ಜೋಡಿಸಿದರೆ, ಅವು ಕಣ್ಣಿಗೆ ಹಬ್ಬವಾಗುವದರಲ್ಲಿ ಅನುಮಾನವಿಲ್ಲ! (20-11-1995)



## ೭. ಸೌಗಂಧಿಕಾಪರಿಣಯದಲ್ಲಿ ಸಸ್ಯಶಾಸ್ತ್ರ

ಎಲ್ಲೆಲ್ಲಿಯೂ ಸಸ್ಯ ಕೋಟಿ ತಲೆಯೆತ್ತಿ ವಿರಾಜಿಸುತ್ತಿದ್ದ ಕಾಲದಲ್ಲಿಯೂ ಪೂರ್ವಜರು ಅದರಲ್ಲಿ ದೈವೀರೂಪವನ್ನು ಕಂಡಿದ್ದರು. ದೈನಂದಿನ ಜೀವನದ ಮೇಲೆ ಸಸ್ಯಗಳು ಬೀರುವ ಪ್ರಭಾವವನ್ನು ಚೆನ್ನಾಗಿ ಗುರುತಿಸಿದ್ದರು. ಅಂತೆಯೇ ಗಿಡಮರಗಳನ್ನು ನೆಡುವುದನ್ನೇ ಒಂದ ವ್ರತವನ್ನಾಗಿಸಿ, ವೃಕ್ಷ ನೋಂಪಿ/ಕ್ಷಿತಿರುಹ ನೋಂಪಿ ಮುಂತಾದವನ್ನು ಆಚರಿಸುವದರಲ್ಲಿ ಸಾರ್ಥಕತೆ ಕಂಡರು. "ವೃಕ್ಷಾಯುರ್ವೇದ"ವನ್ನು ಶಾಸ್ತ್ರವಾಗಿ ಅಭ್ಯಸಿಸಿದರು. ಗಿಡಮರಗಳ ಸಂರಕ್ಷಣೆ, ಪಂಡಿತರಿಂದ ಪಾಮರರವರೆಗೆ ಎಲ್ಲರಿಗೂ ಸಂಬಂಧಪಟ್ಟ ವಿಷಯುವೆಂಬುದನ್ನು ತುಂಬ ಹಿಂದೆಯೇ ಮನಗಂಡು ಅರಸರಾದಿಯಾಗಿ ಎಲ್ಲರೂ ಆಭ್ಯಸಿಸಬೇಕಾದ ವಿಷಯುವನ್ನಾಗಿ ವೃಕ್ಷಾಯುರ್ವೇದವನ್ನು ರೂಪಿಸಿಕೊಂಡರು. ಕ್ರಿಸ್ತ ಪೂರ್ವ ಒಂದನೆಯ ಶತಮಾನದಲ್ಲಿ ರಚಿತವಾದದ್ದೆಂದು ಹೇಳಲಾಗುವ ವರಾಹ ಮಿಹಿರನ ಬೃಹತ್ ಸಂಹಿತೆಯಲ್ಲಿ ಸಸ್ಯಶಾಸ್ತ್ರದ ಅವಶ್ಯಕತೆ, ಅಭ್ಯಸನಗಳನ್ನು ಗುರುತಿಸಲಾಗಿದೆ. ಕರ್ನಾಟಕದಲ್ಲಿ ಅರಸರಿಂದ ಸಾಮಾನ್ಯರವರೆಗೆ ಅಧ್ಯಯನ ಯೋಗ್ಯವಾಗಿದ್ದ ಚಾವುಂಡರಾಯನ ಲೋಕೋಪಕಾರಂ (ಕ್ರಿ. ಶ. ೧೦೨೫) ಎಂಬ ವಿವಿಧ ಶಾಸ್ತ್ರಗಳ ಕನ್ನಡ ಕೈಪಿಡಿ, ಸಾರ್ವಜನಿಕ ಜನೋಪಯೋಗಿ ಗ್ರಂಥವಾಗಿದೆ. ಕಲ್ಯಾಣದ ಚಾಲುಕ್ಯ ದೊರೆ, ಮುಮ್ಮಡಿ ಸೋಮೇಶ್ವರನು (ಕ್ರಿ. ಶ. ೧೧೨೬-೧೧೩೮) ರಚಿಸಿದ 'ಮಾನಸೋಲ್ಲಾಸ' ಅಥವಾ 'ಅಭಿಲಷಿತಾರ್ಥ ಚಿಂತಾಮಣಿ'ಯು, ಸಂಸ್ಕೃತದಲ್ಲಿ ರಚಿತವಾದ ಅರಸರು ಅಭ್ಯಸಿಸಬೇಕಾದ ಹಲವಾರು ವಿಷಯಗಳ ಕೈಪಿಡಿಯಾಗಿದ್ದರೆ ಕೆಳದಿಯ ಅರಸು ಬಸವಪ್ಪ ನಾಯಕನ (ಕ್ರಿ. ಶ. ೧೬೮೪-೧೭೧೦) 'ಶಿವತತ್ವರತ್ನಾಕರ'ವು ಸಂಸ್ಕೃತ ಭಾಷೆಯಲ್ಲಿದ್ದು ಅಂದಿನ ವಿಶ್ವಕೋಶದಂತಿದೆ. ಈ ಮೂರು ಗ್ರಂಥಗಳಲ್ಲಿ ಸಸ್ಯಶಾಸ್ತ್ರದ ವಿವರಗಳಿದ್ದು ಹೆಚ್ಚು-ಕಡಿಮೆ ಒಂದೇ ಆಗಿವೆ. ಈ ಲೋಕೋಪಯೋಗಿ ಶಾಸ್ತ್ರದ ಅಧ್ಯಯನ ಪರಂಪರೆಯನ್ನು ಮೈಸೂರರಸರೂ ಮುಂದುವರಿಸಿಕೊಂಡು ಬಂದರು.

ಮೈಸೂರು ಅರಮನೆಯ ಆವರಣದಲ್ಲಿರುವ ಕೃಷ್ಣಸ್ವಾಮಿ ದೇವಾಲಯದ ಹೊರಜಗಲಿಯಲ್ಲಿ ನಿಲ್ಲಿಸಿದ ಮುಮ್ಮಡಿ ಕೃಷ್ಣರಾಜ ಒಡೆಯರ ಕ್ರಿ. ಶ. ೧೮೫೯ರ ಶಾಸನವು ಅವರ ಆಳ್ವಿಕೆಯ ಮಹತ್ತರ ಸಾಧನೆಗಳನ್ನು ಸಾರುತ್ತದೆ. 'ಶ್ರೀತತ್ವನಿಧಿ' ಮತ್ತು 'ಸೌಗಂಧಿಕಾ ಪರಿಣಯ' ಎಂಬ ಎರಡು ಅಪೂರ್ವ ಗ್ರಂಥಗಳನ್ನು ಕನ್ನಡದಲ್ಲಿ ಬರೆಯಲಾಗಿದೆ ಎಂದು ಆ ಶಾಸನದಿಂದ ಅರಿತು ಅದೇ ಪಟ್ಟಣದ

ಓರಿಯಂಟಲ್ ಗ್ರಂಥಾಲಯದಲ್ಲಿರುವ 'ಶ್ರೀ ತತ್ವನಿಧಿ' ಗ್ರಂಥದ ಮೇಲೆ ಕೆಲ ನಿಮಿಷ ಕಣ್ಣು ಓಡಿಸಲು ಸದವಕಾಶ ಲಭಿಸಿತ್ತು! ಇನ್ನೊಂದು ಕೃತಿಯಲ್ಲಿಯೂ ಇಂಥ ಅಪೂರ್ವ ಚಿತ್ರಗಳಿರಬಹುದೇ? ಎಂಬ ಕುತೂಹಲದಿಂದ ಓರಿಯರಲ್ಲಿ ವಿಚಾರಿಸಿದಾಗ ಹಳೇ ಕಲ್ಲಚ್ಚಿನ ಪ್ರತಿ ಕಾಣುವಂತಾದರೂ ಅದರಲ್ಲಿ ಚಿತ್ರಗಳಿರಲಿಲ್ಲ. ಬೆಂಗಳೂರಿನಲ್ಲಿ ಸಚಿತ್ರ ಪ್ರತಿ ಸಿಗುವ ಸಾಧ್ಯತೆಯಿದೆ, ಎಂದರಿತು ಯತ್ನಿಸಿದಾಗ, ಖ್ಯಾತ ಸಂಶೋಧಕ, ಸಾಹಿತಿ ಡಾ॥ ಎಂ. ಚಿದಾನಂದ ಮೂರ್ತಿಗಳು ತಮ್ಮಲ್ಲಿರುವ ಪ್ರತಿಯನ್ನು ಅಭ್ಯಸಿಸಲು ಅನುವು ಮಾಡಿಕೊಟ್ಟರು. ಲೇಖಕನು ಅವರಿಗೆ ಋಣಿಯಾಗಿರುವ.

ಕೃತಿಸ್ವಾಮ್ಯದ ಜಂಜಾಟವಿಲ್ಲದ ಹಿಂದಿನ ಯುಗದ ಗ್ರಂಥಕರ್ತರಿಗೆಲ್ಲ, ಅರಿವು ಜನರಿಗೆ ತಲುಪುವುದೇ ಮುಖ್ಯ ಉದ್ದೇಶವಾಗಿತ್ತು. ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಬೇರೆ ಬೇರೆ ಶತಕಗಳಲ್ಲಿ ಬರೆದರೂ ಸಸ್ಯಶಾಸ್ತ್ರ ವಿಷಯವೆಲ್ಲ ಒಂದೇ ತೆರನಾಗಿದೆ. ಸೌಗಂಧಿಕಾ ಪರಿಣಯ ೧೯ನೆಯ ಶತಕದ ಕೃತಿಯಾದರೂ ಅದರಲ್ಲಿ ಈ ಸಂಬಂಧಿತ ವಿಷಯದಲ್ಲಿ 'ಲೋಕೋಪಕಾರಂ' ಮತ್ತು 'ಮಾನಸೋಲ್ಲಾಸಗಳ ಛಾಯೆ ದಟ್ಟವಾಗಿದೆ ಮತ್ತು 'ಶಿವ ತತ್ವರತ್ನಾಕರ'ಕ್ಕೆ ತೀರ ಹತ್ತಿರವಾಗಿದೆ ಅನಿಸದಿರದು. ಇದರಲ್ಲಿ ಸಸ್ಯಶಾಸ್ತ್ರದ ಕುರಿತಾದ ಮಾಹಿತಿ ೧೦೪೩ ಪರಿಚ್ಛೇದದಿಂದ ೧೦೭೨ರ ವರೆಗೆ ಹರಡಿಕೊಂಡಿದೆ. ಪ್ರಜೆಗಳ ಆಹಾರ, ಅಲಂಕಾರ, ಫಲಪುಷ್ಪಗಳಿಗಾಗಿ, ಶಾರೀರಿಕ ಮತ್ತು ಮಾನಸಿಕ ಅಭಿವೃದ್ಧಿಗಾಗಿ, ಅರಸನು ಅಲ್ಲಲ್ಲಿ ಹೂದೋಟ ಬೆಳೆಸಬೇಕು, ಎನ್ನಲಾಗಿದೆ. ಅವು ಹೇಗೆ ಇರಬೇಕು, ಎಂದರೆ, ಒಂದೆಡೆಯಲ್ಲಿ ಹವಳದಂತೆ ಕೆಂಪಾದ ಲತೆಗಳಿಂದ ಪರ್ಣಗಳಿಂದ ಕೂಡಿರುವಂತೆ, ಅರಳಿತ ಹೂಗಳಿಂದ ಸುಗಂಧ ಹೊರ ಹೊಮ್ಮುವಂತೆ, ಅವುಗಳಿಗೆ ಆಕರ್ಷಿತವಾಗಿ ದುಂಬಿಗಳು ಝೇಂಕರಿಸುತ್ತ ಹಾರಾಡುತ್ತಿರುವಂತೆ, ಲತಾಗೃಹಗಳನ್ನು ನಿರ್ಮಿಸಬೇಕು. ಇನ್ನೊಂದೆಡೆಗೆ ವೃಕ್ಷಗಳಿಂದ ಉಯ್ಯಾಲೆಗಳನ್ನು ಇಳಿಬಿಟ್ಟು ಪ್ರೇಮಿಗಳು ಮೈಗಂಟಿ ಕುಳಿತುಕೊಂಡು ತೂಗಿಕೊಳ್ಳುತ್ತ ವಿಶ್ವವನ್ನೇ ಮರೆಯುವಂತಿರಬೇಕು. ಅವರ ಸುತ್ತಮುತ್ತಲ ವಾತಾವರಣ ಚಿಗುರುತ್ತಿರುವ ಗಿಡಮರಗಳಿಂದ ಕೂಡಿರಬೇಕು. ಲತೆಗಳು ಫಲಪುಷ್ಪಗಳ ಭಾರ ತಾಳಲಾರದೇ ಬಾಗುತ್ತ ಬಳುಕುತ್ತಿರಬೇಕು. ಹತ್ತಿರದಲ್ಲಿಯೇ ವನವಿಹಾರಕ್ಕಾಗಿ ಬರುವವರಿಗೆ ಆಸನಗಳು, ಬಂಡೆಕಲ್ಲುಗಳು ಇರಬೇಕು. ಪಕ್ಕದಲ್ಲಿ ಭೂಗರ್ಭದಿಂದ ಪುಟಿಯುವ ಕಾರಂಜಿಯನ್ನು ರಚಿಸಿ, ಸಂಚಯವಾದ ನೀರಿನಲ್ಲಿ ಆನಂದದಿಂದ ನಲಿಯುವ ಆಮೆಗಳನ್ನು ಸಾಕಬೇಕು. ಗಗನವು ಕಾರ್ಮೋಡಗಳಿಂದ ಆವರಿಸಿದಾಗ ಗರಿಬಿಚ್ಚಿ ನರ್ತಿಸುವ ನವಿಲುಗಳು ಎಲ್ಲೆಡೆ ಕಾಣಸಿಗಬೇಕು. ಅಲ್ಲಲ್ಲಿ ನೀರಿನ ಹೊಂಡಗಳನ್ನು ನಿರ್ಮಿಸಿ ಹಂಸ ಪಕ್ಷಿಗಳು ಹಾರಿ ಬಂದು ಈಜುವಂತೆ ಮಾಡಬೇಕು. ನೀರಿನ ಆಳದಲ್ಲಿ ಕೂರ್ಮ ಸಂಸಾರಗಳು ಸುಖವಾಗಿ ಬದುಕುವಂತೆ ಇರಬೇಕು. ಇಂಥ ಪರಿಸರದಲ್ಲಿ ಪ್ರೇಮಿಗಳು ಜಲವಿಹಾರ ಮಾಡುತ್ತ ನಲಿಯುವಂತೆ ಕಿರುನಾವೆಗಳನ್ನು ಇಟ್ಟಿರಬೇಕು. ಹೀಗೆ ಮಾಡಿದಾಗಲೇ ಪ್ರಜೆಗಳಿಗೆ ತಮ್ಮ ಜೀವನದ ಸಾರ್ಥಕತೆ ಕಾಣಲು ಸಾಧ್ಯ.

ಉತ್ತಮ ಗಿಡಮರಗಳನ್ನು ಬೆಳೆಸುವ ಕ್ರಿಯೆ, ಬೀಜಗಳ ಆಯ್ಕೆಯಿಂದಲೇ ಪ್ರಾರಂಭಿಸಬೇಕು. ವೃಕ್ಷಗಳಲ್ಲಿಯೇ ಹಣ್ಣಾದ ಫಲಗಳ ಬೀಜಗಳು ಸ್ವಾಭಾವಿಕವಾಗಿಯೇ ಉದುರಿಬಿದ್ದಾಗ ಅವುಗಳಿಂದ ಆರಿಸಿದವುಗಳನ್ನು ಹಸುವಿನ ಹಾಲಿನಲ್ಲಿ ನೆನೆಹಾಕಿ, ಗೋಮಯ ಸವರಿ ಒಣಗಿಸಬೇಕು. ಅವು ಕ್ರಿಮಿ-ಕೀಟಗಳಿಗೆ ಆಹುತಿಯಾಗದಂತೆ ಧೂಪದ, ವಾಯುವಿಳಂಗ-ತುಪ್ಪಗಳ ಹೊಗೆಯ ಚಿಕಿತ್ಸೆ ಮಾಡಬೇಕು. ಇಂಥ ಬೀಜಗಳನ್ನು ಬಿತ್ತುವಾಗ ನಿರ್ಮಲ ಮನಸ್ಸಿನಿಂದ ಮಿಂದು, ಮಡಿಯುಟ್ಟು ಗುರುವಿಗೆ ವಂದಿಸಿ, ಇಷ್ಟದೇವರನ್ನು ಪೂಜಿಸಬೇಕು, ನೇರಳೆ, ಹಲಸು, ಮಾವು, ಕಿತ್ತಳೆಗಳಂತಹ ಜಾತಿಫಲಗಳ ಬೀಜಗಳನ್ನು ಈ ರೀತಿ ನೆಟ್ಟರೆ ಬಹುಬೇಗ ಚಿಗುರಿಕೊಳ್ಳುವವು. ಅಪರೂಪದ ಬೀಜಗಳನ್ನು ಹುಲಿಯ ಹಾಲಿನಲ್ಲಿ ನೆನೆ ಹಾಕುವದು ಮೇಲು ಎಂದು ಸೂಚಿಸಿದರೂ ಅದನ್ನು ಪಡೆಯುವ ವಿಧಾನವನ್ನು ಸೂಚಿಸಿಲ್ಲ! ಬೀಜ ಅಂಕುರಿಸಿ ಹುಲುಸಾಗಿ ಬೆಳೆಯುವ ಸಸಿಗಳನ್ನು ಅರೆಧನುಷ್ಯದ ನಿರ್ದಿಷ್ಟ ಆಳತೆಯ ಕುಣಿ ತೆಗೆದು ನೆಡಬೇಕು. ಇದಕ್ಕಾಗಿ ಶ್ರವಣಾದಿ ನಕ್ಷತ್ರಗಳಲ್ಲಿ ನೆಲವನ್ನು ಶೋಧಿಸಿ, ಹದಮಾಡಿ, ಸೂಸುಮಣ್ಣಿನ ಗೊಬ್ಬರವನ್ನು ಸೇರಿಸಬೇಕು. ಬೆಳೆವ ಸಸಿಗಳಿಗೆ ಆಣೇಕಲ್ಲು ಸಿಡಿಲುಗಳಿಂದ ರಕ್ಷಿಸಲು ಮೊಸರನ್ನ ಬೂದಿಗಳನ್ನು ಸೇರಿಸಬೇಕು.

ಉತ್ತಮ ಉದ್ಯಾನಕ್ಕಾಗಿ ಸತ್ವಯುತವಾದ ಭೂಮಿಯ ಆಯ್ಕೆ ಅತ್ಯವಶ್ಯವಾದುದು. ವಿಷಕಲ್ಲಿನ ರಾಶಿ, ಹಾವಿನ ಹುತ್ತಗಳು, ಇಲಿ, ಹೆಗ್ಗಣಗಳ ಬಿಲಗಳು, ಬೆಣಚುಕಲ್ಲುಗಳು, ಆರ್ದ್ರತೆಯ ಕೊರತೆ ಇರುವಲ್ಲಿ ಬೀಜಗಳನ್ನು ಬಿತ್ತಲೇ ಕೂಡದು. ಜವಳು ಭೂಮಿ, ಜಲಕ್ಷಾಮ ಇರುವಲ್ಲಿ ವೃಕ್ಷಗಳನ್ನು ಬೆಳೆಯುವ ಸಾಹಸ ಮಾಡಲೇ ಕೂಡದು. ಕರಿಭೂಮಿ, ಹೊಂಬಣ್ಣದ ಬೂಮಿ, ಶಂಖ, ಮಲ್ಲಿಗೆಯ ಹೂವಿನ ಬಣ್ಣದ ಭೂಮಿ ಹುಲ್ಲು ಹುಲಸಾಗಿ ಬೆಳೆಯುವ ಮಣ್ಣಿನಲ್ಲಿ, ಕಲ್ಮಶ ರಹಿತ ಭೂಮಿಯಲ್ಲಿ ಸಕಲ ಸಸ್ಯಕೋಟಿಗಳು ಆಹ್ಲಾದಕರವಾಗಿ ಬೆಳೆಯುವವು. ಸೀಮಿತ ನೀರು ಇರುವಲ್ಲಿಯೂ ನುಗ್ಗೆ, ಬಿಲ್ವ, ವೀಳ್ಯದೆಲೆ, ಬಾಳೆ, ಕರಿ ಏಲಕ್ಕಿ, ಅಶೋಕ, ಬನ್ನಿ, ದೊಡ್ಡ ಬಿದಿರು,

ಯಲಚಿ, ನಾಗಸಂಪಿಗೆ, ಬೇವುಗಳನ್ನು ಬೆಳೆಯಬಹುದು. ಹಿತವಾದ ಜಲಪೂರೈಕೆ ಇರುವಲ್ಲಿ ಹಲಸು, ಕಿತ್ತಳೆ, ಕರಿ ಬಿದಿರು, ಸೀಬೆ, ನೆಲ್ಲಿ, ಆಲ, ಅತ್ತಿ, ಬೇವು, ಈಚಲ, ಕದಂಬ, ಖರ್ಜೂರ, ಅಡಿಕೆ, ಬಾಳೆ, ದ್ರಾಕ್ಷಿ, ತೆಂಗುಗಳು ರಭಸದಿಂದ ಬೆಳೆಯುವವು, ಸಾಧಾರಣವಾದ ಭೂಮಿಯಲ್ಲಿ ಬೇಲದ ಮರ, ಮಾವು, ಪ್ರಿಯಂಗು, ದಾಳಿಂಬದಂತಹ ಗಿಡಗಳನ್ನು ಬೆಳೆಯಿಸಬೇಕು.

ಬೆಳೆಯುತ್ತಿರುವ ಗಿಡಮರಗಳಿಗೆ ಸದಾಕಾಲ ನೀರಿನ ಪೂರೈಕೆ ಅತ್ಯವಶ್ಯವಾದ್ದರಿಂದ ಜಲಶೋಧನೆಯ ತತ್ವಗಳನ್ನು ಕೂಲಂಕಷವಾಗಿ ವಿವರಿಸಲಾಗಿದೆ. ಅಷ್ಟದಿಕ್ಕುಗಳಿಂದಲೂ ನೀರಿನ ಝರಿ ಹರಿಯವ ಶಿಲೆಗಳಿದ್ದರೆ ಅಲ್ಲಿ ತೋಡಿದ ಬಾವಿಗಳಲ್ಲಿ ಮೂರುವರೆ ಆಳು ನೀರು ನಿಲ್ಲುವದು. ಇಂಥವಲ್ಲಿ ಅರ್ಧ ಆಳು (ಪುರುಷ) ಅಗೆದರೆ ಬಿಳಿಕಪ್ಪೆ, ಹೊಂಬಣ್ಣದ ಮಣ್ಣು ಕಂಡು ಬರುವದು; ಅನಂತರ ಇರುವ ಶಿಲೆಗಳ ಅಡಿಯಲ್ಲಿ ನೀರು ಸಂಚಯವಾಗುತ್ತದೆ. ನೇರಳೆ ಮರದ ಪೂರ್ವಕ್ಕೆ ಹುತ್ತವಿದ್ದರೆ ಅದರ ದಕ್ಷಿಣಕ್ಕೆ ಎರಡು ಆಳು ನೀರು ಇರುತ್ತದೆ. ಹುತ್ತದ ಮೇಲೆ ಲಕ್ಕೀಗಿಡ ಇರುವಲ್ಲಿ ಅಗೆಯುತ್ತ ಹೋದರೆ, ಅರ್ಧ ಪುರುಷ ಆಳದಲ್ಲಿ ಕಪಿಲವರ್ಣದ ಮಣ್ಣು ಬೆಣಚುಗಲ್ಲುಗಳಿದ್ದು ಅಲ್ಲಿ ನೀರು ಸಂಚಯವಾಗಿರುತ್ತದೆ. ಯಲಚಿ ವೃಕ್ಷದ ಪೂರ್ವಕ್ಕೆ ಹುತ್ತವಿದ್ದು ಅಲ್ಲಿ ಅಗೆದರೆ ಅರೆಆಳದಲ್ಲಿ ಬಿಳಿ ಹಲ್ಲಿ, ನಂತರ ಮೂರು ಆಳ ನೀರು ಕಾಣುವದು. ಶಿಲೆಯನ್ನು ಭೇದಿಸಲು ಮುತ್ತುಗದ ಸೌದೆ, ತಿಂದುಕ ಕಾಷ್ಠಗಳಿಂದ ಅವನ್ನು ಸುಟ್ಟು ಸುಣ್ಣದ ನೀರು ಸಿಂಪಡಿಸಲು ಅವು ಸೀಳುವವು, ಓರ್ವ ಪುತ್ರನನ್ನು ಪಡೆದ ಪುಣ್ಯವನ್ನು ಪಡೆಯಲು ಹತ್ತು ಸದಾಕಾಲ ನೀರಿರುವ ಬಾವಿ, ಇಲ್ಲವೇ ನೂರು ಇಳಿಯುವ ಬಾವಿ ಅಥವಾ ಸಹಸ್ರ, ಹಗ್ಗದಿಂದ ನೀರು ಎಳೆಯುವ ಬಾವಿಗಳನ್ನು ತೋಡಿಸಬೇಕು ಎನ್ನಲಾಗಿದೆ.

ಸಾರ್ವಜನಿಕರಿಗಾಗಿ ಸಸ್ಯಗಳನ್ನು ಬೆಳೆಸುವದು, ಸಂರಕ್ಷಿಸುವುದು. ಇಷ್ಟದೇವತೆಯನ್ನು ಮೆಚ್ಚಿಸುವಷ್ಟೇ ಮಹತ್ವದ ಕಾರ್ಯ ಎನ್ನಲಾಗಿದೆ. ಪಾಪ. ಪುಣ್ಯಗಳ ಪರಿಕಲ್ಪನೆ.ಯಿಂದ ಇದನ್ನು ಮನದಟ್ಟು ಮಾಡಿಕೊಡಲು ಯತ್ನಿಸಲಾಗಿದೆ. ಅಳರಸನು ಸಕಲ ಜೀವಿಗಳಿಗೆ ಮುದ ನೀಡುವ ಉದ್ಯಾನಗಳನ್ನು ನಿರ್ಮಿಸುವದರಿಂದ ಪರಮೇಶ್ವರನನ್ನು ಮೆಚ್ಚಿಸಬಹುದು. ಸಕಲ ಪಾಪಗಳಿಂದ ಮುಕ್ತನಾಗಲು ಒಂದು ಅರಳಿ, ಒಂದು ಬೇವು, ಒಂದು ಆಲ, ಮೂರು ಬಿಲ್ವ, ಮೂರು ನೆಲ್ಲಿ, ಮೂರು ಬ್ಯಾಲ (ಬೇಲ), ಒಂಬತ್ತು ಮಾವು ಮತ್ತು ಹತ್ತು ಹುಣಸೆ ಮರಗಳನ್ನು ಬೆಳೆಸಬೇಕಂತೆ. ಧನದೌಲತ್ತುಗಳನ್ನು ದಯಪಾಲಿಸುವ ಲಕ್ಷ್ಮಿಯನ್ನು ಮೆಚ್ಚಿಸಲು ಬಿಲ್ವವೃಕ್ಷಗಳನ್ನು ಹೆಚ್ಚಾಗಿ ನೆಡಬೇಕು. ಪಾರಿಜಾತ, ಎಲ್ಲ ವೃಕ್ಷಗಳಲ್ಲಿ ಶ್ರೇಷ್ಠವಾದದ್ದಂತೆ. ಮನೆಯ ಪೂರ್ವಕ್ಕೆ ಆಲ, ಪಶ್ಚಿಮಕ್ಕೆ ಅರಳಿ, ಉತ್ತರಕ್ಕೆ ಬಸರಿ ಮರಗಳನ್ನು ಬೆಳೆಸಬೇಕು ಎಂದು ಸೂಚಿಸಲಾಗಿದೆ. ಆದರೆ ಎಂತಹದೇ ಮರವನ್ನು ಹೆಬ್ಬಾಗಿಲಿನ ಎದುರು ನೆಡಲೇ ಕೂಡದಂತೆ. ಮನೆಯ ದಕ್ಷಿಣ ಭಾಗ, ಉದ್ಯಾನಕ್ಕೆ ಪ್ರಶಸ್ತ ತಾಣವಲ್ಲ, ಬಂಜರುಭೂಮಿಯಲ್ಲಿ ಅತ್ಯಂತ ಪ್ರಯಾಸದಿಂದ ವೃಕ್ಷಗಳನ್ನು ಹುಲುಸಾಗಿ ಬೆಳೆಸಿದರೆ ಅಧಿಕ ಪುಣ್ಯ ಲಭಿಸುವದೆಂದು ಹೇಳಿದೆ.

ವೃಕ್ಷಗಳ ಲಕ್ಷಣಗಳನ್ನು ಆಧರಿಸಿ ಅವುಗಳಲ್ಲಿ ನಾಲ್ಕು ಪ್ರಭೇದಗಳನ್ನು ಮಾಡಲಾಗಿದೆ. ಪುಷ್ಪಗಳನ್ನು ತಳೆಯದೇ ಫಲಗಳನ್ನು ಧರಿಸುವ ಸಸ್ಯಗಳು "ವನಸ್ಪತಿ"ಗಳು. ಹೂ, ಕಾಯಿ ಹಣ್ಣುಗಳಾಗಿ ಪರಿವರ್ತಿತವಾಗುವ ಗಿಡಗಳು 'ದ್ರುಮ' ಗುಂಪಿಗೆ ಸೇರಿವೆ. ಅನೇಕ ಬೇರು, ಶಾಖೋಪಶಾಖೆಗಳಿಂದ ಕೂಡಿದವು 'ಗುಲ್ಮ'. ಹುಲುಸಾಗಿ ಕವಲೊಡೆದು, ನೆಲದ ಮೇಲೆ ದಟ್ಟವಾಗಿ ಹಬ್ಬುವ ಸಸ್ಯಗಳು 'ಲತೆಗಳು. ಬೀಜ, ಗಡ್ಡೆ, ಕೊಂಬುಗಳಿಂದ ಸಂತಾನೋತ್ಪತ್ತಿ ಮಾಡುವ ಸಸ್ಯಗಳನ್ನು ಗುರುತಿಸಲಾಗಿದೆ. ನೇರಳೆ, ಹಲಸು, ಸುರಹೊನ್ನೆ, ನಾಗಸಂಪಿಗೆ, ಹುಣಸೆ, ಬ್ಯಾಲ, ಬಿಲ್ವ, ಯಲಚಿ, ಕುಂಭಕಾರಿ, ಪ್ರಿಯಂಗು, ಸಂಪಿಗೆ, ಹಿಪ್ಪೆ, ಮಾವು ಮುಂತಾದುವುಗಳು ಬೀಜದಿಂದ ಉತ್ಪನ್ನವಾಗುವವು. ವೀಳ್ಯದೆಲೆಯ ಬಳ್ಳಿ, ಬಂಧುವಾರ, ತಗರ ಜಾತಿಯವನ್ನು ಕೊಂಬು ನೆಟ್ಟು ಬೆಳೆಸಬಹುದು. ಯಾಲಕ್ಕಿ, ತಾವರೆ, ನೈದಿಲೆಗಳು ಸಸ್ಯಗಳಿಂದಲೇ ಬೆಳೆಯುವಂಥವು. ಪಾದರಿ, ದಾಳಿಂಬೆ, ಬಸರಿ, ಕಣಗಿಲೆ, ಆಲ, ಮರಮಲ್ಲಿಗೆ ಮೊದಲಾದವನ್ನು ಬೀಜ ಇಲ್ಲವೇ ರೆಂಬೆಗಳನ್ನು ನೆಟ್ಟು ಬೆಳೆಸಬಹುದು.

ಬೆಳೆಯುತ್ತಿರುವ ಸಸ್ಯಗಳಿಗೆ ಮಂಜು, ಬಿರುಗಾಳಿ, ಕೀಟ, ಹೊಗೆ, ಬೆಂಕಿಗಳಿಂದ ಸಂರಕ್ಷಣೆ ನೀಡಬೇಕು. ವಿಳಂಗ, ಅರಿಸಿನಗಳ ಧೂಪಗಳು ಹಾರಾಡುವ ಕೀಟಗಳನ್ನು ನಿಯಂತ್ರಿಸಿದರೆ, ಇಂಗು, ಬಜೆ, ಮೆಣಸು, ಕೇರಬೀಜ, ಸಾಸಿವೆ, ಗುಬ್ಬಿ ಬಳ್ಳಿಗಳನ್ನು ಗೋಮೂತ್ರದಲ್ಲಿ ಕೊಳೆಯಿಸಿ ಗಿಡಮರಗಳ ಸುತ್ತಲೂ ಹರವಿದರೆ ಕಾಂಡ ಬಾಧೆ, ಕೀಟಗಳನ್ನು ಹೋಗಲಾಡಿಸಬಹುದು. ಕುಡಿ ಮುರಿಯುವದು, ಮುದುಡಿಕೊಳ್ಳುವದು, ನರುಕಿ ಹೋಗುವದನ್ನು ಕಂಡಾಗ, ಆ ಭಾಗವನ್ನು ಕತ್ತರಿಸಿ ಅಲ್ಲಿ ಬಿಸಿತುಪ್ಪ, ವಿಳಂಗ ಮತ್ತು ಕರಿಯ ಮಣ್ಣು ತುಂಬಬೇಕು. ವಿವಿಧ ಜಾತಿಗೆ ಸೇರಿದ ಹುಳಗಳ ಬಾಧೆ ಹೆಚ್ಚಾದಾಗ, ಮೀನುಗೊಬ್ಬರ, ಸಾಸಿವೆ, ತುಪ್ಪದ ಮಿಶ್ರಣ, ಬಾಳೆಯೆಲೆಗಳ ಧೂಪ ಕೊಡಬೇಕು. ಅನಂತರ ಇಂಗು, ಬಜೆ ಮೊದಲಾದ ಪದಾರ್ಥಗಳನ್ನು ಅರೆದು ಗಿಡಗಳಿಗೆ ಬಳಿಯಬೇಕು.

ಕೃತ್ರಿಮವಾಗಿ ವಿಚಿತ್ರವಾಗಿ ಫಲ-ಪುಷ್ಪಗಳನ್ನು ಪಡೆಯುವ ವಿಧಾನಗಳನ್ನು ವಿವರವಾಗಿ ನಮೂದಿಸಲಾಗಿದೆ. ಒಂದೇ ಗಿಡದಿಂದ ಎರಡು ಬಗೆಯ ಹಣ್ಣುಗಳನ್ನು ಪಡೆಯಲು, ನೆಡುವ ಬೀಜ ಇಲ್ಲವೇ ಕೊಂಬನ್ನು ಸಮನಾಗಿ ಸೀಳಿ ತುಪ್ಪ, ಜೇನುಗಳನ್ನು ಚೆನ್ನಾಗಿ ಬಳಿದು ಎರಡೂ ಭಾಗಗಳನ್ನು ಸೇರಿಸಿ ಕಟ್ಟಿ ನೆಡಬೇಕು. ಒಂದೇ ಬಳ್ಳಿಗೆ ಕಮಲ, ಕುಮುದ, ನೀಲೋತ್ಪಲಗಳು ಬಿಡುವಂತೆ ಮಾಡಲು ಅವುಗಳ ಜಲ-ಗಡ್ಡೆಗಳನ್ನು ದ್ವಿಭಾಗಿಸಿ ಆಜ್ಯ-ಮಧು (ತುಪ್ಪ, ಜೇನುತುಪ್ಪ) ಗಳನ್ನು ತೊಡೆದು ತಿರುಗಿ ಒಂದಾಗಿಸಿ ಕಟ್ಟಿ ಹರಿಣದ ಮಾಂಸದ ಜಲವನ್ನು ಬೇರುಗಳ ಬುಡಕ್ಕೆ ಸೇರಿಸಬೇಕು. ಹುಳಿ ಮಾವನ್ನು ಉತ್ತಮ ಜಾತಿಯದೊಂದಿಗೆ ಕಸಿ ಮಾಡಬಹುದು. ದಪ್ಪವಾದ ತಿಳಲು, ಬಗೆ ಬಗೆಯ ಸುವಾಸನೆ, ರುಚಿಗಳುಳ್ಳ ಹಣ್ಣುಗಳನ್ನು ಪಡೆಯಬಹುದು. ಇದರಂತೆ ರಸಭರಿತ ಬಾಳೆ, ದಾಳಿಂಬ, ಹಲಸುಗಳನ್ನು ಬೆಳೆಯಲು, ತೆಂಗು-ಕಿತ್ತಳೆಗಳಿಂದ ಹೇರಳ ಫಲ ಪಡೆಯಲು, ಸಲಹೆಗಳನ್ನು ಕೊಡಲಾಗಿದೆ. ಬೀಜರಹಿತ ಹಣ್ಣು ಪಡೆಯಲು, ಮಧುಕ, ಮಧುಕ ಪುಷ್ಪ ಮಧು ಮತ್ತು ಕೋಷ್ಠಗಳನ್ನು ಮರಗಳಡಿ ಹೂಳಬೇಕಂತೆ ಅಶೋಕ, ಬಕುಳ, ಪನ್ನಾಗ, ಚಂಪಕ ವೃಕ್ಷಗಳು ಹೆಚ್ಚು ಫಲ ಕೊಡಲು ಸ್ತ್ರೀಯ ಪಾದ ಪ್ರಹಾರ ಮಾಡಬೇಕು. ಕುಲೀನ ಸ್ತ್ರೀಯರಿಂದ ಮದ್ಯವನ್ನು ಮುಕ್ಕಳಿಸಿ ವೃಕ್ಷಗಳ ಮೇಲೆ ಉಗುಳುವಂತೆ ಮಾಡುವದರಿಂದ ಫಲ, ಪುಷ್ಪಗಳಲ್ಲಿ ಅಭಿವೃದ್ಧಿಯಾಗುವದಂತೆ! ಇದರಂತೆ ಕೆಂಪು ದಾಸವಾಳಗಳನ್ನು ಬಿಳಿ ಮಾಡುವದು; ಮಲ್ಲಿಗೆ ಜಾಜಿಗಳ ಸುವಾಸನೆಯನ್ನು ಅದಲು-ಬದಲು ಮಾಡಬಹುದು. ವಾಸನೆಯಿಲ್ಲದ ಹೂಗಳಿಗೆ ಸುವಾಸನೆ ಬರಿಸುವುದು, ಕುಂಬಳ ಬಳ್ಳಿಯಲ್ಲಿ ಬದನೆಕಾಯಿ ಬೆಳೆಯುವದು, ಔದಲಗಿಡದಲ್ಲಿ ಹಾಗಲ ಕಾಯಿಗಳನ್ನು ಬಿಡಿಸುವ ಚಮತ್ಕಾರಗಳನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ.

ಹೊಸಗನ್ನಡವೆಂದು ತೋರಿದರೂ ೧೯ನೇ ಶತಮಾನದ ಈಕೃತಿಯಲ್ಲಿ ಹಳಗನ್ನಡದ ಛಾಯೆ ಸಾಕಷ್ಟು ಉಳಿದುಕೊಂಡಿದೆ. ಮತ್ತು ಮೋಡೀ ಅಕ್ಷರಗಳಾದ್ದರಿಂದ ಕಷ್ಟಪಟ್ಟು ಓದಬೇಕಾಗುತ್ತದೆ. ಜೊತೆಗೆ ಮೂರು-ನಾಲ್ಕು ಶಬ್ದಗಳನ್ನು ಒಟ್ಟೊಟ್ಟಿಗೆ ಬರೆಯಲಾಗಿದೆ. ಇದ ದಲಾಗಿ 'ಯ' 'ಒ'ದ ಬದಲಿಗೆ 'ವ' 'ಹ'ದ ಬದಲಿಗೆ 'ಪ' ಅಕ್ಷರಗಳನ್ನು ಬಳಸಲಾಗಿದೆ. ಚಿತ್ರಗಳ ವಿವರಗಳನ್ನು ಬರೆಯುವಾಗ ಸ್ಥಳವಿದ್ದಲ್ಲೆಲ್ಲ ಒಂದೊಂದು ಶಬ್ದ ಇಲ್ಲವೇ ಅರ್ಧ ಶಬ್ದವನ್ನಷ್ಟೇ ಬರೆಯಲಾಗಿದೆ. ಅವಶ್ಯವಿದ್ದಲ್ಲಿ, ಇಲ್ಲದಿದ್ದಲ್ಲಿ ಸಹ ಚಿತ್ರಗಳನ್ನು ಸೇರಿಸಲಾಗಿದೆ. 'ಶ್ರೀ ತತ್ವನಿಧಿ'ಯ ಕಲಾಕಾರರೇ ಅಥವಾ ಆ ಶೈಲಿಯನ್ನು ಕರಗತ ಮಾಡಿಕೊಂಡವರೇ ಈ ಚಿತ್ರಗಳನ್ನು ರಚಿಸಿದ್ದಾರೆಂದು ನೋಡಿದಾಕ್ಷಣ ಅನಿಸಿಬಿಡುವದು. 'ವೃಕ್ಷಾಯುರ್ವೇದ' ಭಾಗದಲ್ಲಿ ಅಷ್ಟೇ ಅಲ್ಲದೇ ಉಳಿದ ಅಧ್ಯಾಯಗಳಲ್ಲೂ ಧಾರಾಳವಾಗಿ ಸಸ್ಯ-ಗಿಡಗಳ ಚಿತ್ರಗಳನ್ನು ಸೇರಿಸಲಾಗಿದೆ. ಅರಮನೆಯ ಆವಾರ, ಬೇಟೆಯ ಅರಣ್ಯ ದೃಶ್ಯಗಳು, ಕ್ರೀಡಾಂಗಣದ ಪರಿಸರಗಳಲ್ಲೆಲ್ಲ ವೃಕ್ಷರಾಜಿಯನ್ನು ಕಾಣಬಹುದಾಗಿದೆ. ಹೂಬಿಡದ, ಅಶೋಕ ವೃಕ್ಷ ಪುಷ್ಪಧರನಾಗುವಂತೆ ಮಾಡಲು 'ಪದ್ಮಿನಿ' ಜಾತಿಯ ಸ್ತ್ರೀ ತನ್ನ ಎಡಗಾಲಿನಿಂದ ಒದೆಯುತ್ತಿದ್ದಾಳೆ. 'ಶೀಲ'ವೃಕ್ಷ ಫಲಬಿಡಲು ಸ್ತ್ರೀಯ ಬೊಗಸೆಗಣ್ಣಿನ ನೋಟವೇ ಸಾಕಾಗುತ್ತದಂತೆ. ಗೋರಂಟಿ ಗಿಡ ಹೂತಳೆಯಲು ರೂಪವತಿಯ ಆಲಿಂಗನವನ್ನು ಅಪೇಕ್ಷಿಸುವಂತಿದೆ. ಕರ್ಣಿಕಾರ ವೃಕ್ಷ ಸ್ತ್ರೀಯ ಮಾತುಗಾರಿಕೆಯಿಂದ ತೃಪ್ತಿ ಪಡೆದು ಫಲಭರಿತವಾಗುವದು. ಶೀಬೀ ವೃಕ್ಷ (?) ಸ್ತ್ರೀಯು ತಂತಿ ವಾದ್ಯ ನುಡಿಸಿ ಹಾಡುವದರಿಂದ ತೃಪ್ತಿಗೊಂಡು ಫಲಬಿಡುವುದು. ಒಂದೇ ಮರ ವಿವಿಧ ತರದಹೂ ತಳೆದು ನಿಂತಿದ್ದನ್ನು ತೋರಿಸಲಾಗಿದೆ. ಅದರಂತೆ ಒಂದೇ ವೃಕ್ಷಕ್ಕೆ ವಿವಿಧ ಜಾತಿಯ ಹಣ್ಣು ಹಂಪಲು ಬಿಟ್ಟಿದ್ದನ್ನು ಚಿತ್ರಿಸಲಾಗಿದೆ.

ನಮ್ಮ ಪೂರ್ವಜರು ಸಸ್ಯಗಳನ್ನು ಮಾನವರ ಸರಿಸಮಾನವೆಂದು ಪರಿಗಣಿಸಿದ್ದರಿಂದ ಅವೂ ಪಿತ್ತ, ವಾತ, ಕಫ ಪ್ರಕೃತಿಯ ಉಷ್ಣಶೀತಗಳ ವ್ಯಾಧಿಯಿಂದ ಬಳಲುತ್ತವೆಂದು ಭ್ರಮಿಸಿದ್ದರು. ಅದರಂತೆ ಸ್ತ್ರೀಯರ ಸ್ಪರ್ಶಸುಖವನ್ನು ಅವು ಅನುಭವಿಸುತ್ತಿದ್ದಿರಬೇಕು ಎಂಬ ಕಲ್ಪನೆಯಿದ್ದಿರಬೇಕು! ಗ್ರಂಥದಲ್ಲಿ ಕಾಣಿಸಿದ ಅನೇಕ ಸೂಚನೆಗಳು ಪ್ರಯೋಗದಿಂದ ಸಿದ್ಧಪಡಿಸಿದವು ಆಗಿರದೇ ಯತ್ನಾಯತ್ನಗಳಿಂದ ಯಶಸ್ಸು ಪಡೆದ, ಪರಂಪರಾಗತವಾಗಿ ನಡೆದುಬಂದ ವಿಧಾನಗಳಾಗಿರಬೇಕು. ಇವುಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿದರೆ ಹಲವಾದರೂ ಯಶಸ್ವಿಯಾಗಬಲ್ಲವು ಅನಿಸುತ್ತದೆ. ವೈಜ್ಞಾನಿಕವಾಗಿ ತೋಟಗಾರಿಕೆ ಮಾಡುವವರು, ಹಿಂದಿನವರ ಅನೇಕಾನೇಕ ಸೂಚನೆಗಳನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಸ್ಥಳದ ಆಯ್ಕೆ, ನೀರಿನ ಪೂರೈಕೆ, ಬೀಜಗಳ ಪರಿಷ್ಕರಣೆ, ಸಸಿಗಳ ಸಂರಕ್ಷಣೆ, ಅತಿರಿಕ್ತವಾದ ಆಹಾರ, ಗೊಬ್ಬರ ಹಾಕುವದು, ಇತ್ಯಾದಿ. ಕೀಟಗಳಿಗೆ ಹೊಗೆಯಿಂದ ಉಸಿರು ಕಟ್ಟುವದರಿಂದ ಅವು ಪಲಾಯನ ಮಾಡುತ್ತವೆ ಎಂಬುದು ಎಲ್ಲರಿಗೂ ತಿಳಿದ ವಿಷಯ. ಗಿಡಬಳ್ಳಿಗಳು ಮತ್ಸ್ಯಾಹಾರ ಸೇವಿಸಿ ಪುಷ್ಟವಾಗುತ್ತವೆ ಎಂಬುದು ಕರಾವಳಿಯವರು ತೀರ ಹಿಂದಿನಿಂದ ಅರಿತುಕೊಂಡ

ಅನುಭವ. ತುಂಬ ಮೀನು ಬಲೆಯಲ್ಲಿ ಬಿದ್ದಾಗ ಅವನ್ನು ಗೊಬ್ಬರವಾಗಿ ತೆಂಗಿನ ತೋಟಕ್ಕೆ, ಇತರ ಗಿಡಮರಬಳ್ಳಿಗಳಿಗೆ ಹಾಕುತ್ತಾರೆ. ಹೆಂಗಳೆಯರು, ಪ್ರತಿದಿನ ತೀರದ ವಾಗ್ಯುದ್ಧದಲ್ಲಿ ತೊಡಗಿರುವದರಿಂದ ತೆಂಗಿನ, ಅಡಕೆಯ ತೋಟಗಳಲ್ಲಿ ಹೆಚ್ಚಿನ ಫಲ ಬಿಡುತ್ತದೆ ಎಂಬ ಸಾಮಾನ್ಯ ನಂಬಿಕೆಯೂ ಅಲ್ಲಿ ಇದೆ! ಕೇರಳದ ಯಶಸ್ವಿ ಕೃಷಿಕರೊಬ್ಬರು ಇತ್ತೀಚೆಗೆ ತಮ್ಮ ಅಡಿಕೆ ತೋಟದಲ್ಲಿ ಧ್ವನಿ ವರ್ಧಕಗಳನ್ನು ಹಚ್ಚಿ, ಬೆಳಿಗ್ಗೆ, ಸಂಜೆ, ಭಕ್ತಿಗೀತೆಗಳನ್ನು ಬಿತ್ತರಿಸಿ ಐದು ವರ್ಷಕ್ಕೆ ಫಲ ಬಿಡುವ ಸಸಿಗಳು ಮೂರು ವರ್ಷಕ್ಕೆ 'ಪ್ರಾಯಕ್ಕೆ ಬರುವಂತೆ ಮಾಡಿದರಂತೆ! ಕೆಲವರ್ಷಗಳ ಹಿಂದೆ ಮದ್ರಾಸ ವಿಶ್ವವಿದ್ಯಾಲಯದ ಸಸ್ಯ ವಿಭಾಗದವರು, ಪಿಟೀಲು ನುಡಿಸಿ, ಮೃದಂಗ ಬಾರಿಸಿ, ಸಸ್ಯಗಳ ಪ್ರತಿಕ್ರಿಯೆ ಅರಿಯಲು ಲಕ್ಷಾಂತರ ರೂಪಾಯಿಗಳನ್ನು ವ್ಯಯಿಸಿದ್ದರು. ಆದರೆ ಕೊನೆಯ ಪರಿಣಾಮ ಇನ್ನೂ ತಿಳಿದು ಬಂದಿಲ್ಲ. ನಿಸರ್ಗ ಚಿಕಿತ್ಸೆಯಲ್ಲಿ ವಿಶ್ವಾಸವಿಟ್ಟವರು ಮಾನವನ ಕಾಯಿಲೆಗಳಿಗೆ ಮೂತ್ರ ಚಿಕಿತ್ಸೆಯನ್ನು ಮಾಡುವಾಗ, ಶತಕಗಳ ಹಿಂದೆ ಗೋವುಗಳ ಮಲ ಮೂತ್ರಗಳನ್ನು ಸಸ್ಯ ಸಂರಕ್ಷಣೆ ಪಾಲನೆಗಳಲ್ಲಿ ಬಳಸಿದ್ದರೆ ಆಶ್ಚರ್ಯವಿಲ್ಲ. ಸಸ್ಯ ತಳಿಗಳನ್ನು ಹೆಚ್ಚು ಫಲವತ್ತಾಗಿಸಲು ಈಗ ಕಸಿ ಮಾಡುವ ಪದ್ಧತಿ ಸರ್ವಸಾಮಾನ್ಯವಿದ್ದರೂ ಅದು ಶತಕಗಳ ಹಿಂದಿನಿಂದ ಕರ್ನಾಟಕದಲ್ಲಿ ರೂಢಿಯಲ್ಲಿದ್ದುದ್ದು ವಿಶೇಷ. ಒಂದೇ ಗಿಡದಿಂದ ಮೆಣಸಿನಕಾಯಿ, ಬದನೇಕಾಯಿ, ಟೊಮ್ಯಾಟೊ ಪಡೆದಿದ್ದೇನೆ ಎಂದು ಓರ್ವ 'ವಿಜ್ಞಾನಿ' ಸಾರಿಕೊಂಡಿದ್ದಾನೆ. ಹೂಗಳ ಬಣ್ಣ ಬದಲಾವಣೆ, ಮಾನವನಿಗೆ ಹುಚ್ಚು ಹಿಡಿಸಿದೆ. ಕಪ್ಪು ಗುಲಾಬಿ ಬೆಳೆಸಲು ಊಟಿಯಲ್ಲಿ ಪಟ್ಟ ಶ್ರಮಕ್ಕೆ ಎಣೆಯಿಲ್ಲ. ಈಥರ್, ಬೆನ್‌ಝೆನ್ ಆಲ್ಕೊಹಾಲ್‌ಗಳಂತಹ ರಸಾಯನಗಳು ಬಣ್ಣದ ಕಣಗಳನ್ನು ಕರಗಿಸುತ್ತವೆ. ಮದ್ಯವನ್ನು ಬಳಸಿ ಕೆಂಪು ದಾಸವಾಳವನ್ನು ಬಿಳಿಯದನ್ನಾಗಿ ಮಾಡಿದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ವರ್ಣಮಯ ಹತ್ತಿಯನ್ನು ಬೆಳೆಯಲು ಅನೇಕಾನೇಕ ಪ್ರಯೋಗಗಳು ನಡೆಯುತ್ತಲೇ ಇವೆ. ಹಿಂದೊಮ್ಮೆ ರಶಿಯನ್ನರು ತಾವು ಈ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದೇವೆ, ಎಂದು ಘೋಷಿಸಿದರೂ ಅದು ಈ ತನಕ ಪೇಟೆಯಲ್ಲಿ ಬಂದಿಲ್ಲ, ಮೊನ್ನೆ ಮೊನ್ನೆ ಧಾರವಾಡದ ಕೃಷಿ ಕಾಲೇಜಿನವರು ತಾವು ಈ ದಿಸೆಯಲ್ಲಿ ಯಶಸ್ವಿಯಾಗಿ, ಇನ್ನು ಮುಂದೆ ಬಟ್ಟೆಗೆ ಬೇರೆಯಾಗಿ ಬಣ್ಣ ಹಾಕುವ ಅವಶ್ಯಕತೆ ಇಲ್ಲವೆಂದೂ, ಇದಕ್ಕಾಗಿ ಹತ್ತಿಯ ಬೆಲೆ ಶೇಕಡಾ ಐವತ್ತರಷ್ಟು ಕುಸಿಯಬಹುದೆಂದೂ ಭವಿಷ್ಯ ನುಡಿದಿದ್ದಾರೆ.

ಪರಂಪರಾಗತವಾಗಿ ನಡೆದು ಬಂದ ನಮ್ಮ ಗ್ರಂಥಗಳಲ್ಲಿ ಬರೆಯಲಾದ ಸಸ್ಯಶಾಸ್ತ್ರಗಳಲ್ಲಿ ಗಟ್ಟಿ ಅಂಶವೆಷ್ಟು ಟೊಳ್ಳೆಷ್ಟು? ಎಂದು ನಿರ್ಧಾರವಾಗಬೇಕಾಗಿದೆ. ನಮ್ಮಲ್ಲಿ ತಲೆಯೆತ್ತಿಕೊಂಡ ಅನೇಕಾನೇಕ ಕಾಲೇಜು ವಿಶ್ವವಿದ್ಯಾಲಯಗಳು, ಕೃಷಿಸಂಸ್ಥೆಗಳು, ಸಂಶೋಧನೆಗಾಗಿಯೇ ಮೀಸಲಾದ ತೋಟಗಾರಿಕಾ ವಿಭಾಗಗಳು ಇಂಥವುಗಳತ್ತ ಲಕ್ಷ್ಯ ಹಾಕಬಾರದೇಕೆ?

## ಆಧಾರ ಗ್ರಂಥಗಳು


೧. ಸೌಗಂಧಿಕಾಪರಿಣಯಂ (ಸಚಿತ್ರ ಕಲ್ಲಚ್ಚಿನ ಪ್ರತಿ) ಕ್ರಿ.ಶ. ಸು. ೧೮೨೫

೨. ಎಚ್. ಶೇಷಯ್ಯಂಗಾರ್ (ಸಂ) 'ಲೋಕೋಪಕಾರಂ' ಮದ್ರಾಸು ೧೯೫೦ ಅಧ್ಯಾಯ ೬

೩. ಜಿ.ಕೆ. ಶ್ರೀಗೊಂದೇಕರ್ (ಸಂ) ಮಾನಸೋಲ್ಲಾಸ : ಭಾಗ ೩ ಪುಟಗಳು ೧೭೨–೧೮೪ ಬಡೋದಾ ೧೯೬೧

೪. ಎಚ್. ದೇವೀರಪ್ಪ (ಪ್ರ. ಸಂ) ಶಿವತತ್ವರತ್ನಾಕರ : ಭಾಗ ೧ ಕಲ್ಲೋಲ ೬; ತರಂಗ ೧೦ ಪು. ೫೮೪–೫೯೩, ಮೈಸೂರು ೧೯೬೭


**('ಸಮದರ್ಶಿ' - ಪ್ರೊ॥ ಎಚ್ಚೆಸ್ಕೆ ಅಭಿನಂದನಾ ಗ್ರಂಥದಲ್ಲಿ ಪ್ರಕಟಿತ)**



## ಅ. ಕಾಲರಂಗ - ಸಿಡಿರೋಂಗೆ ಬರೆದ ಪ್ರಸ್ತಾವನೆ

To the reader of the new media

Througout my photographic career of fifty years, I have tried to capture Indian motifs that subside time. I have been strongly attracted to the Indian way of life that is untouched by the wars, the technologies and the consumerism. I have seen people live in forests just like they lived thousands of years ago, as truely children of God and mother nature. Due to the nature of my work, I came in contact with several historical researchers, young and old, who introduced me to the historical wealth that is India. Due to destiny, I got to venture into the remotest corner of Rajastan and West Bengal and suffer humiliation of petty politics as well as experience true fulfilment of life among the tribals of Madhya Pradesh. The Kalaranga CDROM, is a sample of my notes, photographs and artifacts during all these years of living. Much of its content did not see light previously, because of the high cost of production of books involving photographs. The developments in new technology have enabled me to bring these to a wider audience.



Kalaranga (kaa-la-runga), the title itself is derived from Hindu Philosphies, means theater of time. It also connotes that the World is a stage where a timeless entity (God) is performing. I have deliberately left out commonly known/ asked topics about India such as religous customs, Taj Mahal and the trourist attractions, to focus on the theme *The Timeless India.* You will find pre-historic rock paintings to the social life of the contemporary Halakki community. You will find the glory of the jewels of the Mysore Maharaja to the exploitation of Tribals by government officials. You will find stories, photo essays, line sketches, historical cross references, art archives and experiences of vagabond traveller.

Credits are certainly due to my wife Dr. Jyotsna Kamat, various depertments of the Government of Karnataka for making several resources available over the years the Bangalore University, the Government of India, and all the people who have lent me a helping hand (holding the ladders and the like.) The Kalaranga CD-ROM project has been the brain-child of my son Vikas Kamat who also edited the contents.

I welcom, your feedback.



# ೯. ಬನವಾಸಿ ಪರಿಸರದ ಕಾವಿಕಲೆ

ಗೋವಾದಿಂದ ಕರ್ನಾಟಕದ ಕರಾವಳಿಗೆ ಹರಿದು ಬಂದ ಕಾವಿ-ಕಲೆಗೆ ಸಹ್ಯಾದ್ರಿ ಪರ್ವತಾವಳಿಗಳನ್ನು ದಾಟಿಕೊಂಡು ಘಟ್ಟದ ಪ್ರದೇಶದಲ್ಲಿ ಹಬ್ಬಿಕೊಳ್ಳಲು ವಿಳಂಬವಾಗಲಿಲ್ಲ. ಆದರೆ ಇಂದು ಬಹುಸಂಖ್ಯಾತ ಕಾವಿಚಿತ್ರಗಳು ಛಿನ್ನಾವಶೇಷಗಳಾಗಿ ನಿಂತಿವೆ. ದಶಕಗಳಲ್ಲಿ ಅವುಗಳ ಮೇಲೆ ಸಂಚಿತವಾದ ಧೂಳು ಝಾಡಿಸುವವರಿಲ್ಲದೆ ಅವು ಕಳೆಗುಂದಿವೆ. ಬಿಸಿಲು, ಗಾಳಿ, ಮಳೆಗಳಿಂದ ಬಿರುಕು ಬಿಟ್ಟಿವೆ. ಕಟ್ಟಡಗಳ ಸೂರಿನ ಹಂಚುಗಳು ಒಡೆದು, ಮಳೆನೀರು ಧಾರೆಯಾಗಿ ಹರಿದು ಪಾಚಿ ಯಥೇಷ್ಟವಾಗಿ ಆವರಿಸಿದೆ. ಇಷ್ಟೆಲ್ಲ ಸಾಲದೆಂಬಂತೆ, ದೇವದರ್ಶನದ ನೆಪದಲ್ಲಿ ಬರುವ ರಸಿಕರು, ಪೋಲಿಗಳು, ತಮ್ಮ ಹಾಗೂ ತಮ್ಮ ಗೆಳತಿಯರ ಹೆಸರುಗಳನ್ನು ಚಿತ್ರಗಳ ಮೇಲೆಲ್ಲಾ ಕೊರೆದು ಸ್ವಂತ ಶಾಸನಗಳನ್ನಾಗಿ ಪರಿವರ್ತಿಸಿದ್ದಾರೆ! ರತಿ-ವಿಜ್ಞಾನ ಪ್ರಚಾರಕ್ಕಾಗಿಯೂ ಈ ಸ್ಥಳವನ್ನು ಕೆಲವೆಡೆ ಬಳಸಿಕೊಳ್ಳಲಾಗಿದೆ. ಅಭಿಮಾನ ಶೂನ್ಯರಾದ ನಾವು ಈ ಚಿತ್ರಗಳನ್ನು ಭರದಿಂದ ನಾಶಮಾಡಹತ್ತಿದ್ದರಿಂದ, ಲಭ್ಯವಿದ್ದ ಚಿತ್ರ – ಮಾಹಿತಿ ಅತ್ಯಲ್ಪ. ಅಂತೆಯೇ ಈ ಅಧ್ಯಯನದ ಸಂಶೋಧನೆ ತೀರ ಸೀಮಿತವಾಗಿದೆ.

ಕಾವಿಚಿತ್ರಗಳನ್ನು ಬೇರೆಲ್ಲ ಭಿತ್ತಿಚಿತ್ರಗಳಿಗಿಂತ ಭಿನ್ನವಾಗಿ ರಚಿಸಬೇಕಾಗುತ್ತದೆ. ಇವುಗಳ ನಿರ್ಮಾಣದ ಸಕಲ ಹಂತಗಳನ್ನು ಗಿಲಾಯಿ, ಹಸಿ ಇದ್ದಾಗಲೇ ಮಾಡಿ ಮುಗಿಸಬೇಕಾದ್ದರಿಂದ ಚಿತ್ರಗಳ ಯಾವತ್ತೂ ವಿವರಗಳನ್ನು ಮುಂಚಿತವಾಗಿಯೇ ನಿರ್ಧರಿಸಬೇಕಾಗುತ್ತದೆ. ಈ ಕಾರ್ಯವನ್ನು ಕಲಾನಿಪುಣರಾದ ಗಾರೆ ಕೆಲಸದವರು ನಿರ್ವಹಿಸುತ್ತಾರೆ. ಭಿತ್ತಿ ಚಿತ್ರಗಳ ಮೇಲೆ ರೂಪಿಸಬೇಕಾದ ಚಿತ್ರಗಳನ್ನು ಮೊದಲಿಗೆ ಕತ್ತೆ ಕಾಗದದ ಮೇಲೆ ಮೂಡಿಸಿ ನಂತರ ಅವನ್ನು ಗೋಡೆಗಳಿಗೆ ವರ್ಗಾಯಿಸುತ್ತಾರೆ. ಭಿತ್ತಿಯ ಮರಗಲ್ಲುಗಳನ್ನು ಜೋಡಿಸಿದಂತಹ ಗಚ್ಚನ್ನೇ ಗಿಲಾಯಿಗಾಗಿ ಬಳಸುತ್ತಾರೆ. ಬೆಣ್ಣೆಯಷ್ಟು ನುಣುಪಾದ, ಹಿಮದಷ್ಟು ಬಿಳಿಯಾದ, ಸಿದ್ಧ ಸುಣ್ಣದಲ್ಲಿ ಕಾವಿ (ಮರಮುಂಜಿ) ಹುಡಿಯನ್ನು ಸೇರಿಸಿ, ಪಾಯಸದಷ್ಟು ದಪ್ಪ ಮಿಶ್ರಣವನ್ನು ಸಿದ್ಧಮಾಡಿಕೊಳ್ಳುತ್ತಾರೆ. ಇದನ್ನು ಚಿತ್ರನಿರ್ಮಿತಿಯ ಸ್ಥಳದಲ್ಲಿ ತಾಪಿಯಿಂದ ಏಕಪ್ರಕಾರವಾಗಿ ಲೇಪಿಸಿಕೊಳ್ಳುತ್ತಾರೆ. ಒಂದು ಗಳಿಗೆಯ ನಂತರ ಅನವಶ್ಯಕ ಮಿಶ್ರಣವನ್ನು ತಾಪಿಯಿಂದಲೇ ಕೆಡುಹುತ್ತ ಬರುತ್ತಾರೆ. ಈಗ ಶುಭ್ರ ಹಿನ್ನೆಲೆಯಲ್ಲಿ ನಸ್ಯ-ಗೆಂಪು ಬಣ್ಣದ ಚಿತ್ರಗಳು ನಲಿಯಲಾರಂಭಿಸುತ್ತವೆ. ಅತಿ ಸೂಕ್ಷ್ಮವಾದ ರೇಖೆಗಳನ್ನು ಎಳೆಯಲು ಉಕ್ಕಿನ ಕಂಟ (ಟಂಕ) ಗಳನ್ನು ಬಳಸುತ್ತಾರೆ. ಇಚ್ಛಿಸಿದಕ್ಕಿಂತ ಅಧಿಕ ಪ್ರಮಾಣದಲ್ಲಿ ಕಾವಿ ಲೇಪನ ಕಿತ್ತು ಬಂದರೆ, ತೀರ ಸುಲಭದಲ್ಲಿ ಅದನ್ನು ದುರುಸ್ತಿ ಮಾಡುತ್ತಾರೆ. ಒಣಗಿದ ಲೇಪ ಬಿರುಕು ಬಿಡದಂತೆ, ಒಂದು ದಿನ ಕಳೆದ ಬಳಿಕ ಪ್ರತಿ ನಾಲ್ಕು ತಾಸಿಗೊಮ್ಮೆ ನೀರು ಸಿಂಪಡಿಸುತ್ತಿರುತ್ತಾರೆ. ಇದನ್ನು ಒಂದು ವಾರದವರೆಗೆ ಮುಂದುವರಿಸುತ್ತಿರುತ್ತಾರೆ. ಹೀಗೆ ಸಿದ್ಧವಾದ ಚಿತ್ರಗಳು ಚಪ್ಪಟೆಯಾಗಿ ಏಕವರ್ಣೀಯವಾದರೂ, ಸರಳ ಸ್ನಿಗ್ಧ ಸೌಂದರ್ಯದಿಂದ ಶೋಭಿಸುತ್ತವೆ.

ಶಿಲ್ಪಿ, ಉಬ್ಬು ಚಿತ್ರಕಾರರು, ಭಿತ್ತಿ ಚಿತ್ರಕಾರರು, ಬಳಸಿದಂತಹ ಪೌರಾಣಿಕ ಸನ್ನಿವೇಶಗಳನ್ನೇ ಕಾವಿಚಿತ್ರಕಾರನು ಬಳಸಿಕೊಂಡರೂ ಅವನ್ನು ರೂಪಿಸುವ ಶೈಲಿ ತೀರ ಭಿನ್ನ. ಪ್ರತಿಯೊಂದು ಅಂಕಣದಲ್ಲಿ ಸೇರ್ಪಡೆ ಮಾಡಿದ ವಿವರಗಳು, ಚಿತ್ರಣದ ನಯ-ನಾಜೂಕುಗಳು ಚಿತ್ರಕಾರನ ಅಭಿರುಚಿಯ ದ್ಯೋತಕವಾಗಿರುತ್ತವೆ. ಪಳಗಿದ ಕೈಗಳು ಅತ್ಯಂತ ನಿಪುಣತೆಯಿಂದ, ತಾರತಮ್ಯತೆಯಿಂದ ಮೂಡಿಸುವದರಿಂದ ಅವನ್ನು ವೀಕ್ಷಿಸಿದಾಗ, ಬಹುವರ್ಣೀಯ ಭಿತ್ತಿಚಿತ್ರಗಳು ನೀಡುವ ರಸಾನುಭವ ನಮ್ಮದಾಗುತ್ತದೆ. ಚಿತ್ರಕ್ಕಾಗಿ ಮೀಸಲಿಟ್ಟ ಸಂಪೂರ್ಣಸ್ಥಳವನ್ನು ಸಮುಪಯೋಗಿಸಿಕೊಳ್ಳುವುದು ಕಲಾಕಾರನ ಕನಸು. ಅಂತೆಯೇ ಅಂಕಣದ ಚೌಕಟ್ಟನ್ನು ವಿವಿಧ ಆಕೃತಿಗಳಿಂದ ತುಂಬಿಸುತ್ತಾನೆ. ಹಲವಾರು ಚಿತ್ರಗಳು ವಿವಿಧ ಪ್ರಕಾರದ ಪ್ರಭಾವಳಿಗಳಿಂದ ಅಲಂಕೃತವಾಗಿರುತ್ತವೆ. ಅಂತೆಯೇ ಈ ಚಿತ್ರ ವೀಕ್ಷಣೆಗೆ ಕೆಲವೇ ಕ್ಷಣಗಳನ್ನು ಮೀಸಲಿಟ್ಟರೆ ಸಾಲದು. ಇದ್ದ ಎರಡು ಕಣ್ಣು ಹತ್ತು ಮಾಡಿಕೊಂಡು, ಬಿಚ್ಚು ಮನಸ್ಸಿನಿಂದ ನೋಡಿ ಅಭ್ಯಸಿಸಿದಾಗಲೇ ಅವುಗಳಲ್ಲಿ ಹುದುಗಿಕೊಂಡಿರುವ ಕಲಾವೈಖರಿ ಗೋಚರಿಸುವದು. ಕುಸ್ತಿ, ಕಾಳಗ, ಯುದ್ಧಗಳ ಸನ್ನಿವೇಶ-ಚಿತ್ರಣಕ್ಕೆ ಎರಡು ಮೂರು ಅಂಕಣಗಳನ್ನು ಬಳಸುವದು ತೀರ ಸಾಮಾನ್ಯ.

ಚಿತ್ರಗಳಿಗೆ ರೂಪಸಿಗಳ ಕೃತಕ ಮೋಹಕತೆ ಕೊಡುವ ಯತ್ನವನ್ನು ಕಾವಿಕಲಾಕರರು ಎಲ್ಲಿಯೂ ಮಾಡಲೇ ಇಲ್ಲ. ಅಂತೆಯೇ ಬೆಳಕು-ನೆರಳುಗಳ ಸಂಯೋಜನೆಯಿಂದ ಶರೀರದ ಉಬ್ಬು-ತಗ್ಗುಗಳನ್ನು ಚಿತ್ರಿಸಿ ಕಣ್ಣಿಗೆ ಹಬ್ಬ ಮಾಡುವ ಸಾಹಸ ಕಾಣುವದೇ ಇಲ್ಲ. ದೇಹದ ವಿವರಗಳು ಕಂಡು ಬರುವಂತೆ ರೇಖೆಗಳನ್ನು ಎಳೆದು ಮಾಡಿದ ಚಿತ್ರರಚನೆಯೇ ಈ ಕಲಾಕಾರರ ವೈಶಿಷ್ಟ್ಯ. ಸರಾಗವಾಗಿ ಓಡುವ ರೇಖಾಲಾಲಿತ್ಯ ಮತ್ತು ಅವುಗಳ ಸಕ್ರಿಯ ಮಿಲನವೇ ಈ ಚಿತ್ರಗಳ ವಿಶೇಷ ವೈಖರಿ. ಸಂದರ್ಭಾನುಸಾರವಾಗಿ ದೈನ್ಯ, ದ್ವೇಷ, ಭಕ್ತಿ-

ಭಾವಗಳನ್ನು ಮುಖಮಂಡಲದಲ್ಲಿ ಅರಳಿಸಲಾಗುತ್ತದೆ. ತೀರ ಚಿಕ್ಕ ಮಾನವಾಕೃತಿಗಳನ್ನೂ ಲಕ್ಷಣವಾಗಿ, ಶಕ್ತಿಶಾಲಿಯಾಗಿ, ಬಿಂಬಿಸಲು ಕಲಾಕಾರನು ಶಕ್ತಿಮೀರಿ ದುಡಿಯಲೇಬೇಕು. ಅಂತೆಯೇ ಈ ಚಿತ್ರಗಳನ್ನು ವೀಕ್ಷಿಸುತ್ತಿದ್ದಂತೆ, ಅದರಲ್ಲಿ ಚಿತ್ರಿತವಾಗಿದ್ದ ದೇವ-ದೇವತೆಗಳಿಗಿಂತ ಅವನ್ನು ನಿರ್ಮಿಸಿದ ಕಲಾಕಾರರ ಬಗೆಗೇ ಹೆಚ್ಚಿನ ಗೌರವ ಮೂಡುತ್ತದೆ. ಇಂಥ ಅಪೂರ್ವ ಕಲಾಕಾರರ ಜೀವನ ವೃತ್ತಾಂತದ ಬಗೆಗೆ ನಮಗೆ ಕಿಂಚಿತ್ತೂ ತಿಳಿಯದೇ ಇರುವದು ತೀರ ಶೋಚನೀಯ.

ಕ್ರಿ.ಶ. ೧೩೧೨ ಮತ್ತು ೧೪೭೨ರಲ್ಲಿ ಧರ್ಮಾಂಧ ಮಹಮ್ಮದೀಯರ ವಶಕ್ಕೆ ಈ ಪ್ರದೇಶ ಒಳಗಾದಾಗ, ಶಾಂತಿಪ್ರಿಯ ಸ್ಥಾನೀಯರ ಅಸ್ತಿತ್ವಕ್ಕೇ ಸಂಚಕಾರ ಒದಗಿತು. ಸಾಲದ್ದಕ್ಕೆ ಪೋರ್ಚುಗೀಸರು ಕ್ರಿ. ಶ. ೧೫೧೦ರಲ್ಲಿ ಗೋವೆಯನ್ನು ಗೆದ್ದುಕೊಂಡು ಪೂರ್ವದೇಶಗಳಲ್ಲಿಯ ತಮ್ಮ ವಸಾಹತುಗಳ ಪ್ರಧಾನ ಕಚೇರಿಯನ್ನು ಅಲ್ಲಿ ಸ್ಥಾಪಿಸಿದರು. ಅಧಿಕಾರಿಗಳೊಂದಿಗೇ ಆಗಮಿಸಿದ ಕ್ರಿಶ್ಚಿಯನ್ ಧರ್ಮಾಧಿಕಾರಿಗಳು ಹಿಂದುಗಳನ್ನು ಬಲಾತ್ಕಾರದಿಂದ ಧರ್ಮಾಂತರ ಮಾಡಲಾರಂಭಿಸಿದರು. ಕ್ರಿ.ಶ. ೧೫೬೦ರ ಹೊತ್ತಿಗೆ, ಕಡ್ಡಾಯವಾಗಿ ಎಲ್ಲರನ್ನೂ ಕ್ರೈಸ್ತರನ್ನಾಗಿಸುವ ಕಾರ್ಯಕ್ರಮಕ್ಕೆ ಆದ್ಯತೆ ನೀಡಲಾರಂಭಿಸಿದ್ದರಿಂದ ಸ್ಥಳೀಯರು ಕಂಗೆಟ್ಟರು. ಅಂತೆಯೇ ಗೋವೆಯ ಧರ್ಮಿಷ್ಠ ಹಿಂದುಗಳು ತಮ್ಮ ಇಷ್ಟದೇವತೆಗಳ ವಿಗ್ರಹಗಳೊಂದಿಗೆ ಸ್ವಾದಿ ಅರಸರ ಆಡಳಿತಕ್ಕೆ ಸೇರಿದ ಪೊಂಡಾ ಬಿಚೋಲಿ ಕಾಣ್‌ಕೋಣಗಳಿಗೆ ವಲಸೆ ಬಂದರು. ತಾವು ತ್ಯಜಿಸಿ ಬರಬೇಕಾಗಿದ್ದ ಮೂಲ ಗೋವೆಯ ದೇವಾಲಯಗಳ ಕಾವಿಚಿತ್ರಗಳಿಂದ ಅಲಂಕೃತ ಮಾದರಿಯಲ್ಲಿಯೇ ಹೊಸ ಹೊಸ ದೇಗುಲಗಳನ್ನು ಕಟ್ಟಿಕೊಂಡರು. ಆದರೆ ದುರ್ದೈವವಶಾತ್ ಮುಂದೆ ಪೋರ್ಚುಗೀಸರು ಈ ಪ್ರದೇಶಗಳನ್ನು ಗೆದ್ದುಕೊಂಡದ್ದರಿಂದ ಮತ್ತೆ ಸ್ಥಳೀಯರು ಮಹಾರಾಷ್ಟ್ರ-ಕರ್ನಾಟಕ ಕರಾವಳಿಗಳಿಗೆ ವಲಸೆ ಹೋಗಬೇಕಾಯಿತು. ಬಹು ಸಂಖ್ಯಾತರು ಕರಾವಳಿಗುಂಟ ನೆಲೆಸಿದರೂ, ಕೆಲವರಾದರೂ ಸ್ವಾದಿ (ಸೋಂದಾ) ಸೇರಿದ ಪ್ರದೇಶದಲ್ಲಿ ಉಳಿದುಕೊಂಡಿರಬೇಕು. ಹೊಸ ತಾಣದಲ್ಲಿ ಕಟ್ಟಿಸಿಕೊಂಡ ದೇವಾಲಯಗಳಲ್ಲೆಲ್ಲ ಕಾವಿಚಿತ್ರಗಳಿಗೆ ಅಗ್ರಸ್ಥಾನ ಕೊಡಲಾಯಿತು. ಕಾಲಕ್ರಮೇಣ ಈ ಕಲೆ ಸ್ವಾದಿ ಪ್ರದೇಶದಿಂದ ಹತ್ತಿರದ ಸಿರ್ಸಿ, ಬನವಾಸಿ, ಸಿದ್ಧಾಪುರ, ಬೀಳಗಿಗಳಿಗೆ ಹರಡಿಕೊಂಡಿರಬೇಕು. ಈ ದೇವಾಲಯಗಳನ್ನೆಲ್ಲ ಕ್ರಿ.ಶ. ೧೫೧೦ ರಿಂದ ೧೯೪೯ ರವರೆಗಿನ ಕಾಲಾವಧಿಯಲ್ಲಿ ಕಟ್ಟಲಾಗಿದೆ.

ಐದು ದಶಕಗಳ ಹಿಂದಿನವರೆಗೂ ಕಾವಿಚಿತ್ರ-ನಿರ್ಮಾಣದ ಪರಂಪರೆ ಯಾವ ಅಡೆ-ತಡೆಗಳಿಲ್ಲದೇ ಏಕ ಪ್ರಕಾರವಾಗಿ ನಡೆದು ಬಂದಿತು. ಇವುಗಳ ರಚನೆಯಲ್ಲಿ ಪರಿಣತರಾದ ಕಲಾಕಾರರನ್ನು ರತ್ನಗಿರಿಜಿಲ್ಲೆ (ಮಹಾರಾಷ್ಟ್ರ) ಇಲ್ಲವೇ ಗೋಮಂತಕದಿಂದ ಬರಮಾಡಿಕೊಳ್ಳುತ್ತಿದ್ದರು. ದೇಗುಲ-ನಿರ್ಮಾಣಕ್ಕೆ ಸಂಬಂಧಿಸಿದ ಮನೆತನದವರು ಅವರನ್ನು ಆದರ-ವಿಶ್ವಾಸಗಳಿಂದ ಸ್ವಾಗತಿಸಿ, ವಾಸಕ್ಕಾಗಿ ಮನೆ, ಖರ್ಚಿಗಾಗಿ ಮುಂಗಡ ಹಣ ಒದಗಿಸುತ್ತಿದ್ದರು. ಇವರೆಲ್ಲ ತಂತಮ್ಮ ಸಂಸಾರಗಳನ್ನು ಊರಿನಲ್ಲಿಯೇ ಬಿಟ್ಟು ಬರುತ್ತಿದ್ದುದರಿಂದ ಊಟೋಪಚಾರಗಳನ್ನು ಸ್ವತಃ ನಿರ್ವಹಿಸಿಕೊಳ್ಳಬೇಕಾಗುತ್ತಿತ್ತು. ದೇವಾಲಯಗಳ ಆಡಳಿತಗಾರರು ಊರ ಪ್ರತಿಷ್ಠಿತರು, ಮನೆ-ಮಠ, ಅಂಗಡಿಗಳ ನಿರ್ಮಾಣ ಹಾಗೂ ಅವುಗಳ ಅಲಂಕರಣಕ್ಕಾಗಿ ಕಾವಿಚಿತ್ರ ನಿರ್ಮಾಣಕ್ಕೆ ಕರಾರು ಮಾಡಿಕೊಂಡು, ಫಲ-ತಾಂಬೂಲಗಳೊಂದಿಗೆ ಸಂಚಕಾರ (ಮುಂಗಡ ಹಣ) ಕೊಡುತ್ತಿದ್ದರು. ಹಲವರು, ಕಾಳು-ಕಡ್ಡಿ, ಬಟ್ಟೆ-ಬರೆಗಳ ರೂಪದಲ್ಲಿ ಅವರ ವೇತನವನ್ನು ಸಂದಾಯ ಮಾಡುತ್ತಿದ್ದರು. ಈ ಕಲಾಕಾರರು ನಸುಕಿನಲ್ಲೆದ್ದು ಬಾವಿಕಟ್ಟೆಯ ಮೇಲೆಯೇ ತಣ್ಣೀರು ಸ್ನಾನಮಾಡಿ, ಅಲ್ಪೋಪಹಾರ ಸೇವಿಸಿ ಕಟ್ಟಡ, ಚಿತ್ರರಚನೆಯಲ್ಲಿ ತೊಡಗುತ್ತಿದ್ದರು. ಸೂರ್ಯಾಸ್ತದ ಬಳಿಕವೇ ಅವರು ಅಡಿಗೆ- ಊಟಗಳನ್ನು ಮುಗಿಸಿ, ನಿದ್ರಾದೇವಿ ಆವರಿಸುವವರೆಗೆ, ನೆರೆಹೊರೆಯ ಮಕ್ಕಳಿಗೆ ಪೌರಾಣಿಕ ಕಥೆಗಳನ್ನು ಮನದಟ್ಟಾಗುವಂತೆ ಹೇಳುತ್ತ, ಇರುತ್ತಿದ್ದರು.

ಕಾವಿ ಕೃತಿಗಳ ರೂಪ-ರೇಷೆಗಳನ್ನು ಮರಳಲ್ಲಿ ರಚಿಸಿ, ಒಪ್ಪಿಗೆಯಾದ ನಂತರವೇ ಅವನ್ನು ಭಿತ್ತಿ-ಚಿತ್ರ ರಚನೆಗೆ ಅಳವಡಿಸಿಕೊಳ್ಳುತ್ತಿದ್ದರು.

ಕಾವಿಚಿತ್ರಕಾರರೂ, ಶಿಲ್ಪಿ, ಭಿತ್ತಿ ಚಿತ್ರಕಾರನಂತೆ ಧಾರ್ಮಿಕ ಗ್ರಂಥಗಳನ್ನು ಪುರಾಣ-ಪುಣ್ಯಕಥೆಗಳನ್ನು ಅರಿತಿರಬೇಕಾಗುತ್ತಿತ್ತು. ರಾಮಾಯಣ, ಮಹಾಭಾರತ, ದೇವಿ ಭಾಗವತ, ವಿಷ್ಣು- ಶಿವ ಪುರಾಣಗಳಲ್ಲಿಯ ಪ್ರಸಂಗಗಳೆಲ್ಲ ಅವರಿಗೆ ಕಂಠಪಾಠ ಇರಲೇ ಬೇಕಾಗಿತ್ತು. ಅವುಗಳಲ್ಲಿ ಬರುವ ಸನ್ನಿವೇಶಗಳನ್ನು ಅವರು ಸಂದರ್ಭಾನುಸಾರವಾಗಿ ಆರಿಸಿಕೊಳ್ಳುತ್ತಿದ್ದರು. ಪ್ರತಿಮಾ ಲಕ್ಷಣಗಳನ್ನೆಲ್ಲ ತಿಳಿದುಕೊಳ್ಳುವುದು ಅತ್ಯವಶ್ಯವಾಗಿತ್ತು. ಧ್ಯಾನಶ್ಲೋಕಗಳನ್ನು ಮನನ ಮಾಡಿಕೊಳ್ಳಲೇ ಬೇಕಾಗಿತ್ತು ಇವುಗಳ ಗಟ್ಟಿ ಹಿನ್ನೆಲೆಯಲ್ಲಿ, ಮೂಡಿಸಬೇಕಾಗಿದ್ದ ಚಿತ್ರಗಳು ಅವರ ಅಂತಃಚಕ್ಷುವಿನ ಎದುರು ತಂತಾನೇ ರೂಪಗೊಳ್ಳುವಂತೆ ಆಗುತ್ತಿತ್ತು. ಸಾಮಾಜಿಕ ಸನ್ನಿವೇಶಗಳನ್ನು ಸ್ವಾನುಭವದಿಂದಲೂ, ಸಮಕಾಲೀನ ಆಗು-ಹೋಗುಗಳನ್ನು ವೀಕ್ಷಣೆಯಿಂದಲೂ ಅರಿಯುತ್ತಿದ್ದರು. ಮನಸ್ಸಿನಲ್ಲಿ ಮೂಡಿಬಂದ ಕೃತಿಗಳಿಗೆ ಮೂರ್ತರೂಪ ಕೊಡಲು

ಸ್ಪಷ್ಟ ಮಳಲರಾಶಿ ಇದ್ದೇ ಇರುತ್ತಿತ್ತು. ಒಪ್ಪಿಗೆಯಾದಾಗ ಮಾತ್ರ ಅಂತಿಮ ಕೃತಿ ರಚನೆಯನ್ನು ಕೈಗೆತ್ತಿಕೊಳ್ಳುತ್ತಿದ್ದರು. ಬೇಕೆನಿಸಿದಾಗ ಸ್ಥಳೀಯ ಕಲಾಕಾರರಾಗಿದ್ದ ಗುಡಿಗಾರರ ಸಲಹೆ-ಸೂಚನೆಗಳನ್ನು ಪಡೆಯದೇ ಇರುತ್ತಿರಲಿಲ್ಲ.

ದೇವ-ದೇವತೆಗಳೆಲ್ಲ ಮಾನವಾಕೃತಿಗಳನ್ನು ತಳೆದರೂ, ಅವರು ಅತಿಮಾನವರಲ್ಲವೇ? ಅಂತೆಯೇ ಅವರನ್ನು ಚಿತ್ರಿಸಲು ಕಲಮಟ್ಟಿಗೆ ಅವಾಸ್ತವ ಅಸ್ವಾಭಾವಿಕ ಸ್ವರೂಪವನ್ನು ನೀಡಲೇಬೇಕಾಗುತ್ತದೆ. ಪಶು-ಪ್ರಾಣಿಗಳ ಅಂಗಾಂಗಗಳನ್ನು, ಅನೇಕಾನೇಕ ಕೈಗಳನ್ನು, ಹಲವಾರು ಶಿರಗಳು, ಚಿತ್ರ-ವಿಚಿತ್ರ ಭಂಗಿಗಳು, ಅಸಂಗತ ವಾಹನಗಳು, ವಿಚಿತ್ರ ಆಯುಧಗಳು ಇವನ್ನು ಚಿತ್ರಿಸಿ ಅತೀಂದ್ರಿಯ ರೂಪವನ್ನು ಹೊಂದಿಸಬೇಕಾಗುತ್ತಿತ್ತು. ಕೆಲವೊಮ್ಮೆ ವಿಕೃತ ರೂಪಗಳೂ ಸಹಾಯಮಾಡುತ್ತಿದ್ದವು. ನಿಂತಿರುವ, ಅಥವಾ ನರ್ತಿಸುವ (ಸ್ಥಾನಕ), ಕುಳಿತಿರುವ (ಆಸೀನ), ಮಲಗಿರುವ (ಶಯನ,), ಪಯಣಿಸುವ (ಯಾನಕ), ಭಂಗಿಗಳನ್ನು ಹೆಚ್ಚಾಗಿ ಬಳಸಲಾಗುತ್ತದೆ. ಈ ದೇವ-ದೇವತೆಗಳಿಗೆ ಎರಡು, ನಾಲ್ಕು, ಆರು, ಎಂಟು, ಹತ್ತು ಕೈಗಳಿರುವುದು ಸಾಮಾನ್ಯ. ವಿಷ್ಣುವು ತನ್ನ ಕೈಗಳಲ್ಲಿ ಶಂಖ, ಚಕ್ರ, ಗದೆಗಳನ್ನು ಹಿಡಿದರೆ, ಶಿವನು ತ್ರಿಶೂಲ, ಡಮರುಗ, ಅಗ್ನಿಶಿಖೆಗಳನ್ನು ಹಿಡಿದಿರುವ. ಅದರಂತೆ, ಕೈಗಳಲ್ಲಿ ಹಿಡಿದ ಪಾಶ, ಅಂಕುಶಗಳಿಂದ ಗಣೇಶ, ಬಿಲ್ಲುಬಾಣಗಳಿಂದ ಶ್ರೀರಾಮ, ವೀಣೆ, ಅಕ್ಷಮಾಲೆ, ಪುಸ್ತಕಗಳಿಂದ ಸರಸ್ವತಿ, ಕಮಂಡಲ, ದಂಡ, ಅಕ್ಷಮಾಲೆಗಳಿಂದ ಬ್ರಹ್ಮ ಶೂಲ, ಟಂಕ, ವಜ್ರಗಳಿಂದ ಸುಬ್ರಹ್ಮಣ್ಯ, ಕೊಡಲಿಗಳಿಂದ ಪರಶುರಾಮ, ನೇಗಿಲಿನಿಂದ ಬಲರಾಮ, ಉತ್ಪಲಗಳಿಂದ ಪಾರ್ವತಿ, ಕಮಲದಿಂದ ಲಕ್ಷ್ಮೀದೇವಿ, ಎಂದು ತಕ್ಷಣ ಗುರುತಿಸಬಹುದಾಗಿದೆ. ಇವರೆಲ್ಲ ಬಹುಹಸ್ತರಾದರೂ, ದ್ವಿಪಾದಿಗಳು. ಶಿವಭಕ್ತ ಬೃಂಗಿ ಮಾತ್ರ ತ್ರಿಪಾದಿ. ಸಂದರ್ಭಾನುಸಾರವಾಗಿ ಆಯಾದೇವತೆಗಳ ಮುಖಮಂಡಲದಲ್ಲಿ ಮಂದಹಾಸ, ಶೃಂಗಾರ, ರೌದ್ರ, ಉಗ್ರ, ತಾಮಸ ಭಾವಗಳನ್ನು ಮೂಡಿಸಲಾಗುತ್ತದೆ.

ಹಿಂದೊಮ್ಮೆ ಶಿರಸಿಯ ಶ್ರೀಮಾರಿಕಾಂಬಾ ದೇವಾಲಯವು ಕಾವಿಚಿತ್ರಗಳ ಆಗರವೇ ಆಗಿತ್ತು. ಬಾಲ್ಯದಲ್ಲಿ ನಾನು ಪ್ರತಿರಜೆಯಲ್ಲಿ ಅಲ್ಲಿಯ ಅಜ್ಜನ ಮನೆಗೆ ಧಾವಿಸಿಹೋಗಲು ಈ ಚಿತ್ರಗಳ ಆಕರ್ಷಣೆ ಬಲವಾಗಿತ್ತು. ಅವುಗಳಲ್ಲಿಯ ಪೌರಾಣಿಕ ಹಾಗೂ ರಾಮಾಯಣ, ಮಹಾಭಾರತಗಳ ವ್ಯಕ್ತಿ-ಸನ್ನಿವೇಶಗಳನ್ನು ಗುರುತಿಸಲು ನಮ್ಮಲ್ಲಿ ಸ್ಪರ್ಧೆಯೇ ಏರ್ಪಡುತ್ತಿತ್ತು. ಶರೀರದ ಮೇಲೆ ಕತ್ತೆ, ಕೋಣ ಕೋತಿಗಳೆಲ್ಲ ಹರಿದಾಡಿದರೂ ಎಚ್ಚರಗೊಳ್ಳದ ಕುಂಭಕರ್ಣನ ನಿದ್ರಾಭಂಗಮಾಡುವಂತಹ ಯಾವ ಯಾವ ಕ್ರಮ ಜಾರಿಗೆ ತರುತ್ತಿದ್ದಿರಬಹುದು? ಎಂಬ ವಿಚಾರ ವಿಮರ್ಶೆ ಹಾಗೂ ಕಾಲ್ಪನಿಕ ಲೋಕದಲ್ಲಿ ಮುಳುಗಿ ತೇಲುತ್ತಿದ್ದೆವು. ಆ ಭವ್ಯ ದೇವಾಲಯದ ಹೊರ ಜಗಲಿಯಲ್ಲಿ ಧರ್ಮಶಾಲೆ, ಭಿಕ್ಷುಕರಿಗೆ ಮೀಸಲಾಗಿತ್ತು. ಅಡಿಗೆಗೆ ಅವರು ಉಪಯೋಗಿಸುತ್ತಿದ್ದ ಕೊರಡು ಕಸ-ಕಡ್ಡಿಗಳ ಹೊಗೆಯಿಂದ ಹೊರ ಚಾವಣಿಯ ಚಿತ್ರಗಳೆಲ್ಲ ಮಸುಕಾಗಲಾರಂಭಿಸಿದಾಗ, ಆ ನೋಟದಿಂದ ಕರುಳು ಕಿವಿಚಿದಂತಾಗುತ್ತಿತ್ತು.

ಕೆಲವರ್ಷಗಳ ಬಳಿಕ ಅಲ್ಲಿಯ ಆವಾರ ಸ್ವಚ್ಛಗೊಳಿಸಿ ಭಿಕ್ಷುಕರನ್ನು ಅಲ್ಲಿಂದ ಕಂಬಿಕೀಳುವಂತೆ ಮುನಸಿಪಾಲ್ಟಿಯವರು-ನೋಡಿಕೊಂಡರು. ಅದರಿಂದ ನೆಮ್ಮದಿಯ ಉಸಿರು ಬಿಡುವಂತೆ ಆಯಿತು. ಆದರೆ ಆ ಆವರಣದಲ್ಲಿಯೇ ಊರ ಕಿರಿಯರಿಗೆ ಬ್ಯಾಡ್ಮಿಂಟನ್, ರಿಂಗ್ ಟೆನಿಸ್ ಆಡಲು ಕ್ರೀಡಾಂಗಣ ಏರ್ಪಟ್ಟು ಊದುವದು ಕೊಟ್ಟು ಬಾರಿಸುವದನ್ನು ಕೊಂಡಂತಾಯಿತು. ದೇವಾಲಯದ ಶಾಂತ, ಗಂಭೀರ ವಾತಾವರಣ ಹೋಗಿಬಿಟ್ಟಿತು.

ಮಾರಿಕಾಂಬೆಯ ಭಕ್ತಾದಿಗಳು ಕೊಡಮಾಡುವ  ಉದಾರ ದೇಣಿಗೆಯಿಂದಾಗಿ ದೇವಾಲಯದ ಬೊಕ್ಕಸ ಸದಾಕಾಲ ತುಂಬಿ ತುಳುಕುತ್ತಲೇ ಇರುವದರಿಂದ ಅದರ ವಹಿವಾಟುದಾರರಾಗಲು ಅತಿ ತುರುಸಿನ ಸ್ಪರ್ಧೆ ನಡೆದೇ ಇರುತ್ತದೆ. ಹೊಸ ಆಡಳಿತಗಾರರು ಪಟ್ಟವೇರಿದಾಕ್ಷಣ, ಕಟ್ಟಡದ ಜೀರ್ಣೋದ್ಧಾರ, ನವೀನೀಕರಣಗಳ ನೆಪದಲ್ಲಿ ಬೊಕ್ಕಸ ಬರಿದಾಗಿ ಹೋಗುವದು ಇಲ್ಲಿಯ ಪರಂಪರೆ! ಬೊಕ್ಕಸ ಸೋರತೊಡಗಿದಾಗ, ಹತ್ತಾರು ಕುಳಗಳ ಜೇಬುತುಂಬಲು ಸಾಧ್ಯವೆಂದು ಬೇರೆ ಹೇಳಬೇಕಾಗಿಲ್ಲ. ಈ ನವೀನೀಕರಣದ ಸೂತ್ರ, ಕಾರ್ಯಾಚರಣೆಯಲ್ಲಿ ತರುವಾಗ ಹಳೆಯದನ್ನೆಲ್ಲ ಹೋಳಿಮಾಡುವದು ತೀರ ಸಾಮಾನ್ಯ. ಇತ್ತೀಚೆಗೆ ಕಲಾಕಾರ-ಆಡಳಿತಗಾರರೊರ್ವರು ಕಾವಿಚಿತ್ರಗಳ ದುರಸ್ತಿಯನ್ನು ಸೂಚಿಸಿ, ಅತಿ ಅಪರೂಪವಾಗಿದ್ದ ಕಾವಿಚಿತ್ರಗಳು ಸರ್ವಕಾಲಕ್ಕೆ ನಾಶವಾಗುವಂತೆ ಮಾಡಿದ್ದು ದೊಡ್ಡಮರುತ. ತರಬೇತಿಯಿಲ್ಲದ ಬಣ್ಣಗಾರನಿಗೆ ಕಾವಿಚಿತ್ರಗಳನ್ನೆಲ್ಲ ಕೆಂಪು ಎನಾಮಲ್ ಪೇಂಟ್‌ದಿಂದ ತಿದ್ದುವ ಕೆಲಸ ಒಪ್ಪಿಸಿದರೆ ಏನಾದೀತು? ಅಂತೆಯೇ ದೇವ-ದೇವತೆಗಳೆಲ್ಲ ಕೈಕಾಲು, ಮುಖಗಳಲ್ಲೆಲ್ಲ ವಿಕಾರಹೊಂದಿ, ಕುಷ್ಟರೋಗ ಪೀಡಿತರಾದಂತೆ ಭಾಸವಾಗುತ್ತವೆ! ಹೀಗಾಗಿ ಈ ಚಿತ್ರಗಳೆಲ್ಲ ನಮ್ಮ ವಿಶಿಷ್ಟ ರೀತಿಯ ಕಲಾಪ್ರಕಾರವೊಂದನ್ನು ಪ್ರತಿನಿಧಿಸುತ್ತವೆ ಎಂದು ಹೇಳಿಕೊಳ್ಳಲೂ ಅವಮಾನಕರವಾಗಿದೆ.

ಮಂಗಳೂರು ಹಂಚಿನ ಎರಡು ಸೂರುಗಳಿರುವ ಮೂರು ಅಂತಸ್ತಿನ ಈ ದೇವಾಲಯವನ್ನು ಸಿಂಗರಿಸಲು ಜಾಮಿತಿ ಚಿತ್ರ ಪಟ್ಟಿಕೆ ಮತ್ತು ವರ್ತುಲ ವೃಕ್ಷಗಳನ್ನು ಧಾರಾಳವಾಗಿ ಬಳಸಲಾಗಿದೆ. ಮಹಾದ್ವಾರದ ಎಡಬಲದಲ್ಲಿ ಇನ್ನೂ ಎಂಟು ಕಿರುಬಾಗಿಲುಗಳಿವೆ. ಅಲ್ಲದೇ ತೋರಿಕೆಯ (ಕೃತ್ರಿಮ) ಕಿಡಕಿ, ಕಂಬಗಳನ್ನು ರಚಿಸಲಾಗಿದೆ. ವರ್ತುಲ, ಲಂಬ ವರ್ತುಲ, ಚೌಕೋನ, ಮೊಗ್ಗು ಪಕಳೆಗಳಿಂದ ಅಂಚುಗಳನ್ನು ಅಲಂಕರಿಸಿಲಾಗಿದೆ. ನಡುನಡುವೆ ವಿವಿಧ ವರ್ತುಲಾಕೃತಿಗಳು, ವರ್ತುಲವೃಕ್ಷಗಳನ್ನು ಜೋಡಿಸಿದ್ದರಿಂದ, ಇಡೀ ದೇವಾಲಯವೇ ಸಿಂಗರಿಸಲ್ಪಟ್ಟ ದಿವಾನಖಾನೆಯನ್ನು ನೆನಪಿಗೆ ತರುತ್ತದೆ. ಕೇವಲ ಕೈವಾರವನ್ನು ಬಳಸಿ ಕಾವಿಕಲಾಕಾರರು ಅದೆಷ್ಟು ಬಗೆಯ ಜಾಮಿತಿ, ನಕ್ಷೆಗಳನ್ನು ರಚಿಸಿದ್ದಾರಲ್ಲ! ಎಂದು ವಿಸ್ಮಯಪಡುವಷ್ಟು ಚಿತ್ರಪಟ್ಟಿಕೆಗಳನ್ನು ನೋಡಬಹುದಾಗಿದೆ. ಈ ಚಿತ್ರಗಳಲ್ಲಿ ಅಶ್ವತ್ಥ, ಆಲ, ಮುತ್ತುಗದ ಎಲೆಗಳನ್ನು ಸುಲಭವಾಗಿ ಗುರುತಿಸಬಹುದು. ಅತಿ ಎತ್ತರದಲ್ಲಿ, ಒಂಟಿ ಸಾಲಿನಲ್ಲಿ ರಚಿಸಲಾದ ವರ್ತುಲಗಳಲ್ಲಿ ವಿವಿಧ ಜಾಮಿತಿ ಆಕಾರಗಳಿಂದ ವಿವಿಧ ಜಾಮಿತಿ ಆಕೃತಿಗಳನ್ನು ತುಂಬಿಸಲಾಗಿದೆ. ಕರ್ನಾಟಕದ ಉದ್ದಗಲಕ್ಕೆ ಲಭ್ಯವಿರುವ ತಾಳೆಗರಿಯ ಹಸ್ತಪ್ರತಿಗಳಲ್ಲೂ ಇಂಥವೇ ಚಿತ್ರಾಲಂಕಾರಗಳು ಕಂಡು ಬರುತ್ತವೆ, ಎಂದು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

ಒಳಜಗಲಿಗಳಿಗೆ ಆತುಕೊಂಡಿದ್ದ ಗೋಡೆಗಳನ್ನು ಚಿತ್ರ-ಅಂಕಣಗಳಿಂದ ಅಲಂಕರಿಸಲಾಗಿದೆ. ಒಂದರಲ್ಲಿ ಹರೆಯದ ಯುವತಿ, ಕೈಯಲ್ಲಿದ್ದ 'ಗಿರಗಿಟ್ಲೆ' ಆಡಿಸುವದರಲ್ಲಿ ಮೈಮರೆತಾಗ, ಸನಿಹದಲ್ಲಿದ್ದ ಪಾರಿವಾಳ ಹಕ್ಕಿ, ತಾನು ಚತುಷ್ಪಾದಿಯಾಗಿದ್ದರೆ, ಇಂಥ ಆಟ ಆಡಬಹುದಿತ್ತಲ್ಲ! ಎಂದು ಧೇನಿಸುವಂತೆ ಚಿತ್ರಿಸಲಾಗಿದೆ. ನಂದಿಯ ಮೇಲೆ ಸವಾರಿ ಮಾಡುವ ಶಿವನ ಅಂಕಣದಲ್ಲಿ ಪಾರ್ವತಿ, ಮಗುವಿನಂತೆ ಪತಿಯ ಎಡತೊಡೆಯನ್ನು ಏರಿ ಕುಳಿತಿದ್ದಾಳೆ. ಸನಿಹದಲ್ಲಿ ಗಣೇಶನು ನರ್ತಿಸುವಾಗ, ಅವನ ವಾಹನವಾದ ಮೂಷಕವು ವಿಸ್ಮಯದಿಂದ ನೋಡುತ್ತಿದೆ. ಚಿತ್ರಗಳಲ್ಲಿ ಚಿಗರೆ, ಛತ್ರಧಾರಿ, ವಿನೋದಿ ಕುಬ್ಜರೂಪದ ಗಣವರ್ಗದವರನ್ನು ಸೇರಿಸಲಾಗಿದೆ. ಗಾಢನಿದ್ರೆಯಲ್ಲಿರುವ ಕುಂಭಕರ್ಣನ ಎಡಭುಜದ ಮೇಲೆ ಆನೆಯ ಸವಾರಿ ಹೊರಟರೆ, ಎಡಗಾಲ ಮೇಲೆ ಕುದುರೆಯೊಂದು ನಾಗಾಲೋಟ ಹಾಕುತ್ತಿದೆ. ಇನ್ನೊಂದು ಅಂಕಣದಲ್ಲಿ ರಾಕ್ಷಸನೋರ್ವನು ಪ್ರಿಯತಮೆಗೆ ಸುರೆಯ ಬಟ್ಟಲು ನೀಡುತ್ತಿರುವಂತೆ ತೋರಿಸಲಾಗಿದೆ. ಕೈಯಲ್ಲಿ ಖಡ್ಗಹಿಡಿದು ಹುಲಿಯೊಂದಿಗೆ ಸೆಣಸಾಡುತ್ತಿರುವ ವ್ಯಕ್ತಿ ಟೀಪುಸುಲ್ತಾನ! ಎಂದು ಸ್ಥಳೀಯರೊಬ್ಬರು ಪರಿಚಯಿಸಿದರೂ ಅದನ್ನು ನಂಬಲಾಗದು. ಅಲ್ಲಿ ಇನ್ನೂ ಅನೇಕಾನೇಕ ಕಾವಿಚಿತ್ರಗಳು ಇದ್ದರೂ, ಅವುಗಳನ್ನು ಸ್ಪಷ್ಟವಾಗಿ ಗುರುತಿಸಲಾಗದಷ್ಟು ಕೆಂಪು ಎನೆಮಲ್ ಪೇಂಟ್ ಬಳಿದು ವಿದ್ರೂಪ ಮಾಡಿಬಿಟ್ಟಿದ್ದಾರೆ. ಅಂತೆಯೇ ಅವನ್ನು ಈಗ ಪಳೆಯುಳಿಕೆಗಳು ಎಂದಿಷ್ಟೇ ಭಾವಿಸಬೇಕಾಗಿದೆ.

ಹತ್ತಿರದ ಸಿದ್ದಾಪುರ ತಾಲೂಕಿಗೆ ಸೇರಿದ ಬೀಳಗಿ ಊರಿನ ನಾರಾಯಣ ದೇವಾಲಯದಲ್ಲಿ ಅನೇಕಾನೇಕ ಅಪೂರ್ವ ಕಾವಿಚಿತ್ರಗಳನ್ನು ಕಾಣಬಹುದಾಗಿದೆ. ಹಲವಾರು ಅಂಕಣಗಳಲ್ಲಿ ಚಿತ್ರಿತವಾದ ವ್ಯಕ್ತಿಗಳ ಹೆಸರುಗಳನ್ನು ದೇವನಾಗರಿಯಲ್ಲಿ ನಮೂದಿಸಿದ್ದರಿಂದ ಅವನ್ನು ಗುರುತಿಸುವುದು ಅತಿ ಸುಲಭ. ಮಧ್ವಾಚಾರ್ಯರ ಚಿತ್ರ ನೋಡುತ್ತಿದ್ದಂತೆ ಉಡುಪಿಯ ಮಠ ಸ್ಥಾಪನಾಚಾರ್ಯರನ್ನು ಜೀವಂತವಾಗಿ ನೋಡಿದ ಭಾಸವಾಗುತ್ತದೆ. ವ್ಯಾಸಪೀಠಸ್ಥರಾಗಿ ಬೋಧನ ಭಂಗಿಯಲ್ಲಿ ಪದ್ಮಾಸನದಲ್ಲಿ ವಿರಾಜಮಾನರಾಗಿದ್ದಾರೆ. ಗೋಪಿಚಂದನ ಚಿಹ್ನ-ನಾಮಗಳು ಅಂಗಾಂಗಗಳಲ್ಲಿ ನಿಚ್ಚಳವಾಗಿ ಮೂಡಿ ಬಂದಿವೆ. ಎಡಗೈಯಲ್ಲಿ ತಾಳೆಗರಿಯ ಗ್ರಂಥವಿದೆ. ವ್ಯಾಸತೀರ್ಥ (ವೇದವ್ಯಾಸ!) ರ ಅಂಕಣವೂ ಗಮನಾರ್ಹ. ಹುಲಿಯ ಚರ್ಮದ ಮೇಲೆ ಆರೂಢರಾಗಿ, ಕಾಲುಗಳನ್ನು ಬಟ್ಟೆಯಿಂದ ಬೆನ್ನಿಗೆ ಬಿಗಿದುಕೊಂಡಿದ್ದಾರೆ. ಉದ್ದ ತಲೆಕೂದಲನ್ನು ಬೆನ್ನಹಿಂದೆ ಇಳಿಬಿಡಲಾಗಿದೆ. ಗಡ್ಡಮೀಸೆಗಳನ್ನು ಬಿಟ್ಟಿದ್ದಾರೆ. ಕೊರಳಲ್ಲಿ ರುದ್ರಾಕ್ಷಮಾಲೆಗಳಿವೆ. ಎಡಗೈಯಲ್ಲಿ ಗ್ರಂಥ ಒಂದನ್ನು ಹಿಡಿದು ಬಲಗೈ ಬೋಧನ ಮುದ್ರೆಯಲ್ಲಿದೆ. ಬಳಿಯ ಟವಣೆ ಕೋಲಿನಲ್ಲಿ ಇನ್ನೊಂದು ಗ್ರಂಥವನ್ನು ಇಡಲಾಗಿದೆ.

ಶ್ರೀ ವಿಷ್ಣು ಪರಮಾತ್ಮನ ದಶಾವತಾರಗಳನ್ನು ವಿಶಿಷ್ಟ ರೀತಿಯಲ್ಲಿ ಚಿತ್ರಿಸಲಾಗಿದೆ. ನರಸಿಂಹನು ತೊಡೆಯ ಮೇಲಿನ ಹಿರಣ್ಯಕಶಿಪುವಿನ ಕರುಳುಗಳನ್ನು ಬಗೆದು ಹೊರಗೆಳೆಯುತ್ತಿರುವಾಗ ಅಂಕಣದಲ್ಲಿ ಚಿತ್ರಿತ ಹೂಗೊಂಚಲು ಸಮ್ಮತಿ ಸೂಚಕವಾಗಿದೆ! ಇನ್ನೊಂದು ಅಂಕಣದಲ್ಲಿ ಕಲ್ಕಿ ಅವತಾರಿಯು ಅಶ್ವವನ್ನು ನಿಯಂತ್ರಿಸಲು ಯತ್ನಿಸುವಂತೆ ಚಿತ್ರಿತವಾಗಿದೆ. ಈ ಕುದುರೆ ಅಲೌಕಿಕವಾಗಿದ್ದರಿಂದ ಅದಕ್ಕೆ ಗಗನವಿಹಾರಿಯಾಗಲು ಅನುಕೂಲವಾಗುವಂತೆ ಜೋಡಿರೆಕ್ಕೆಗಳನ್ನು ಹೊಂದಿಸಲಾಗಿದೆ. ಸಾಲದ್ದಕ್ಕೆ ಹಾರುವ ಯಕ್ಷನು ಪುಷ್ಪವೃಷ್ಟಿ ಮಾಡುತ್ತಿದ್ದಾನೆ. ಅಂಕಣದ ತುಂಬ ಹೂ-ಬಳ್ಳಿಗಳನ್ನು ತುಂಬಿಸಲಾಗಿದೆ. ಭೂಲೋಕದ ಭಕ್ತಾದಿಗಳು ಮೊರೆಯಿಟ್ಟಾಗ, ಬೆಂಬಿಡದ ಈರ್ವರು ಪತ್ನಿಯರೊಂದಿಗೇ ಶ್ರೀವಿಷ್ಣುವು ಗರುಡವಾಹನನಾಗಿ ಸಂಚರಿಸುತ್ತ ಇಳಿಯುತ್ತಿದ್ದಾನೆ. ವೇಗವಾಗಿ ಹಾರುವ ಗರುಡನು ಪಂಜಗಳಲ್ಲಿ

ಸರ್ಪವನ್ನು ಬಂಧಿಸಲು ಮರೆತಿಲ್ಲ. ಯಾವುದೇ ವಾಹನ ಸೌಕರ್ಯವಿಲ್ಲದ ನಾರದ ಮುನಿಯು ತ್ರಿಲೋಕ ಸಂಚಾರಿ. ಪಾದಚಾರಿಯಾಗಿ ದಣಿವು ಭಾಸವಾಗದಂತೆ ಬಲಗೈಯಲ್ಲಿ ತಂಬೂರಿ, ಎಡಗೈಯಲ್ಲಿ ಚಿಪರಿ ನುಡಿಸುತ್ತ ಹಾಡುತ್ತ ಹೊರಟಂತೆ ಚಿತ್ರಿತನಾಗಿದ್ದಾನೆ. ತುರ್ತು ಪರಿಸ್ಥಿತಿ ಒದಗಿದರೆ, ಕೂಡಲೇ ಸ್ವರ್ಗಲೋಕಕ್ಕೆ ಸಂದೇಶ ಕಳಿಸುವದಕ್ಕಾಗಿ ಶಾಂತಿದೂತರಾದ ಪಾರಿವಾಳಗಳನ್ನು ಸೇರಿಸಲಾಗಿದೆ!

ಕಾಳಿಯ ಮರ್ದನ'ದ ಅಂಕಣದಲ್ಲಿ ಶ್ರೀಕೃಷ್ಣನು ಆ ಮಹಾಸರ್ಪದ ಹೆಡೆಯೇರಿ, ಮರ್ದನದಲ್ಲಿ ನಿರತನಾದಾಗ, ಹತ್ತಿರದಲ್ಲಿ ಪುಟ್ಟ ಹಕ್ಕಿಯೊಂದನ್ನು ಚಿತ್ರಿಸಲಾಗಿದೆ. ಇದು ಯಾವ ನೀರ ಹಕ್ಕಿ? ಎಂದು ನಿರ್ಧರಿಸಲು ಎಂಥ ಪಕ್ಷಿಪರಿಣತನಿಗೂ ಸಾಧ್ಯವಾಗಲಿಕ್ಕಿಲ್ಲ!

ಮಹಾರಾಷ್ಟ್ರಕ್ಕೆ ಸೇರಿದ ಪಂಢರಪುರದಲ್ಲಿ ನಲೆನಿಂತ ಕರ್ನಾಟಕದ ವಿಠ್ಠಲನನ್ನು ಪುಷ್ಕಳ ಪುಷ್ಪಲತೆಗಳಿಂದ ಅಲಂಕರಿಸಲಾಗಿದೆ ಅದರಂತೆ ಬಿಲ್ಲಿಗೆ ಬಾಣಹೂಡಿ ಕಾಳಗಕ್ಕೆ ಹೊರಟ ಕರ್ಣನ ಸುತ್ತಲೂ ಹೂ-ಬಳ್ಳಿಗಳು ಬೆಳೆದಿವೆ! ಒಂಭತ್ತು ಗಜದ ಸೀರೆಯುಟ್ಟು ರೂಪಸಿಯೊರ್ವಳು ಲತಾಮಂಟಪಕ್ಕೆ ಕೈಯೂರಿ ಪ್ರಿಯತಮನನ್ನು ಆತಂಕದಿಂದ ನಿರೀಕ್ಷಿಸುತ್ತಿದ್ದಾಳೆ.

ಬನವಾಸಿಯಲ್ಲಿ ಕೆಲವು ಪುರಾತನ ಕಟ್ಟಡಗಳಿಗೆ ಕಾವಿಚಿತ್ರಗಳು ಸೀಮಿತವಾಗಿವೆ. ಆದರೆ ವಿಶಿಷ್ಟವಾಗಿವೆ. ಅಲ್ಲಿಯ ಮಧುಕೇಶ್ವರ ದೇವಾಲಯದ ಆವಾರದಲ್ಲಿ ಮಣ್ಣುಗೂಡಲಿದ್ದ ಗುಡಿಯೊಂದರಲ್ಲಿ (೧೯೮೮ರ ಸುಮಾರಿಗೆ) ಎರಡು ಅಪೂರ್ವ ಚಿತ್ರಗಳಿದ್ದವು. ಮೊದಲನೆಯದು ಓರ್ವ ದ್ವಾರಪಾಲಕನದು. ಇದನ್ನು ಕಾವಿ ಚಿತ್ರದ ಸಾಂಪ್ರದಾಯಿಕ ರೀತಿಯಲ್ಲಿ ರಚಿಸದೇ, ಗೋಡೆಗೆ ಮೆತ್ತಿದ ಗಚ್ಚು ಮತ್ತು ಕಾವಿ ಮಿಶ್ರಣದ ಮೇಲೆ ಉಕ್ಕಿನ ಕಂಟ ಓಡಿಸಿ ಗೀರು ಚಿತ್ರಗಳಲ್ಲಿ ಮೂಡಿಸಿದ್ದಾರೆ. ವ್ಯಕ್ತಿಯೋರ್ವ, ತಲೆಗೆ ಎತ್ತರದ ಟೋಪಿ ಧರಿಸಿದ್ದಾನೆ. ಉಟ್ಟ ಉದ್ದ ಪಂಚೆಯ ನಿರಿಗೆಗಳು ನೆಲವನ್ನು ಚುಂಬಿಸಮಂತಿವೆ. ಕಿವಿ, ಕೊರಳು, ಕೈಕಾಲುಗಳಲ್ಲಿ ಆಭರಣಗಳಿವೆ. ಅಡ್ಡಗಾಲು ಹಾಕಿ ನಿಂತ ಭಂಗಿ. ಬಲಗೈಯಿಂದ ಇಳಿಬಿಟ್ಟ ಉದ್ದಗದೆಯನ್ನು ಎಡಗೈಯಿಂದ ಬಿಗಿಯಾಗಿ ಹಿಡಿದಿದ್ದಾನೆ. ತಲೆಯ ಸುತ್ತ ಮುತ್ತ ನಿಂತ ಪೀಠದ ಅಕ್ಕ-ಪಕ್ಕ ವಿಪುಲವಾದ ಹೂ ಬಳ್ಳಿಗಳನ್ನು ಸೇರಿಸಲಾಗಿದೆ. ಇನ್ನೊಂದು ಅಂಕಣದಲ್ಲಿ ಚಿತ್ರಿತನಾಗಿರುವ ಶ್ರೀ ವಿಷ್ಣುವು, ಪ್ರಥಮದರ್ಶನಕ್ಕೆ ಟಿಬೇಟಿನ ಕೊರಡು ಅಚ್ಚಿನಲ್ಲಿ ಕಾಣಸಿಗುವ ಚಿತ್ರವನ್ನು ಹೋಲುತ್ತಾನೆ. ಎಲ್ಲದರಲ್ಲೂ ಕೋಮಲತೆ ತಾಂಡವವಾಡುತ್ತದೆ. ಬೌದ್ಧಧರ್ಮದ ವರ್ಚಸ್ಸು ಇರುವ ದೇಶಗಳಲ್ಲಿ ಇಂಥ ಪಡಿಯಚ್ಚುಗಳನ್ನು ಇಂದಿಗೂ ಕಾಣಬಹುದಾಗಿದೆ. ಹಿಂದೊಮ್ಮೆ ಬನವಾಸಿ ನಾಡು, ಬೌದ್ಧ ಧರ್ಮದ ಬಲವಾದ ಪ್ರಭಾವಕ್ಕೆ ಒಳಪಟ್ಟಿತ್ತು, ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಆದ್ದರಿಂದ ಆ ವರ್ಚಸ್ಸಿಗೆ ಒಳಗಾದ ಕಾಲದ ಚಿತ್ರ ಇದು ಆಗಿರಬಹುದೇ? ಎಂಬುದು ಅತ್ಯಂತ ಕುತೂಹಲಕಾರಿಯಾದ ಪ್ರಶ್ನೆ.

ಈ ವ್ಯಕ್ತಿಯ ತಲೆಗೆ ಥ್ಯಾಲ್ಯಾಂಡಿನ ನರ್ತಕರು ಧರಿಸುವಂತಹ ಕಿರೀಟ, ಕರ್ಣಕುಂಡಲಗಳಿವೆ. ಚತುರ್ಭುಜನಾಗಿದ್ದು, ಪ್ರತ್ಯೇಕ ಕೈಗಳಲ್ಲಿ ಶಂಖ, ಚಕ್ರ ಛತ್ರ, ಗದೆಗಳನ್ನು ಹಿಡಿದಿದ್ದಾನೆ. ಪಾದಗಳವರೆಗೆ ಬರುವಂತೆ ಪಂಚೆಯುಟ್ಟು ಹಿಂಗಚ್ಚೆ ಹಾಕಿಕೊಂಡಿದ್ದಾನೆ. ಎರಡು ಭುಜಗಳ ಮೇಲಿನಿಂದ, ಉದ್ದನೆಯ ಶಾಲು ಇಳಿಬಿಡಲಾಗಿದೆ. ಮೈ ಮೇಲೆ ಬಗೆಬಗೆಯ ಆಭರಣಗಳಿವೆ.

ಸೋಂದಾದಲ್ಲಿ ಇಂದು ಹೆಚ್ಚಿನ ಕಾವಿ ಚಿತ್ರಗಳು ಉಳಿದಿಲ್ಲ. ಕೆಲವು ಹಳೆಯ ಗುಡಿಗಳಲ್ಲಿ ಮಾಮೂಲಿ ಹೂಬಳ್ಳಿಗಳು, ಜಾಮಿತಿ ಚಿತ್ರಗಳಿವೆ. ಅಳಿದುಳಿದ ಕೆಲವೇ ಚಿತ್ರಗಳನ್ನು ನಾವೇ ಭರದಿಂದ ನಾಶಮಾಡುತ್ತಿದ್ದೇವೆ. ಸರ್ವನಾಶವಾಗುವ ಪೂರ್ವದಲ್ಲಿಯೇ ಕಲಾಭಿಮಾನಿಗಳು ಉಳಿದ ಕೆಲವನ್ನಾದರೂ ಚಿತ್ರಿಸಿ, ಛಾಯಾಗ್ರಹಣದಲ್ಲಿ ಸೆರೆಹಿಡಿದು, ಗ್ರಂಥ ರೂಪದಲ್ಲಿ ಬರೆದು ಇಟ್ಟರೆ, ಬರುವ ಪೀಳಿಗೆಯವರಾದರೂ ಸಾವಿರಾರು ವರ್ಷಗಳಿಂದ ನಡೆದು ಬಂದಿದ್ದ ಕಲಾಪ್ರಕಾರವನ್ನಾದರೂ ಅರಿಯುವಂತೆ ಆಗುತ್ತದೆ. ಇದೊಂದೆ ನಾವು ನಮ್ಮ ನಾಡಿಗೆ ವಿಶಿಷ್ಟವಾಗಿದ್ದ ಕಾವಿಕಲೆಗೆ ಅಲ್ಪ ಗೌರವ-ಸ್ಮಾರಕ ಸಲ್ಲಿಸುವ ವಿಧಾನವಾಗಿದೆ.

(೨೮-೪-೨೦೦೦)

**ಗ್ರಂಥಸೂಚಿ**


೧. ಉಲ್ಫಗಾಂಗ್ ಸ್ಟೆಡ್‌ಲರ್ : ಯುರೋಪಿಯನ್ ಆರ್ಟ್ ಹರ್ಡರ್ ಎಂಡ ಕರ್ಡರ್, ನ್ಯೂಯಾರ್ಕ್, ೧೯೮೮

೨. ಶಿವರಾಮ ಕಾರಂತ : ಕರ್ನಾಟಕದ ಚಿತ್ರಕಲೆ, ಪ್ರಸಾರಾಂಗ, ಮೈಸೂರು, ೧೯೭೨

೩. ಹಾವೆಲ್ ಇ. ಬಿ. : ಆರ್ಟ್ ಹೆರಿಟೇಜ್ ಆಫ್ ಇಂಡಿಯ, ತಾರಾಪುರವಾಲ ಅಂಡ್ ಸನ್ಸ್, ೧೯೬೪ (ಮರು ಮುದ್ರಣ)

೪. ಶಿವರಾಮ ಮೂರ್ತಿ ಸಿ. : ಇಂಡಿಯನ್ ಪೇಂಟಿಂಗ್ಸ್, ನ್ಯಾಶನಲ್ ಬುಕ್‌ಟ್ರಸ್ಟ್, ನ್ಯೂದಿಲ್ಲಿ, ೧೯೭೦

೫. ಹೆಮ್ಲಿನ್ ಪಾಲ್ : ಗ್ರೀಕ್ ಮೈಥಾಲಜಿ (ನಾಲ್ಕನೆಯ ಆವೃತ್ತಿ), ಲಂಡನ್, ೧೯೬೭

## ಕೃಪ್ಣಾನಂದರು ಮಗನಿಗೆ ಬರೆದ ಪತ್ರಗಳು

# ೧. ಸೊಸೆಯ ಶೋಧದಲ್ಲಿ

ನಿನ್ನನ್ನು ನೀನೇ ಕಂಡುಕೊಳ್ಳಲು ಪ್ರಾರಂಭಿಸಿದ ಪ್ರಯತ್ನದ ಕುರಿತಾದ ನಿನ್ನ ೨೫-೨-೧೯೯೮ರ ಪತ್ರ ಓದಿ ಅತೀವ ಆನಂದವಾಯಿತು. ಇದಕ್ಕಿಂತ ಅಭಿಮಾನದ ವಿಷಯ ಇನ್ನೊಂದಿಲ್ಲ. ಮಾನವನು ಬುದ್ಧಿಜೀವಿ. ಅಂತೆಯೇ ಅವನು ತಾನು ಕೈಕೊಳ್ಳುವ ಪ್ರತಿ ವಿಷಯದ ಕುರಿತು ಬುದ್ಧಿಯನ್ನು ಉಪಯೋಗಿಸಬೇಕು, ಮುಂದಾಗಿ ವಿಚಾರ ಮಾಡಲೇಬೇಕು. ಹಾಗೆ ಮಾಡಿದಾಗ ಮಾತ್ರ ಜೀವನಕ್ಕೊಂದು ಅರ್ಥಬರುತ್ತದೆ. ತೃಪ್ತಿ-ಸಮೃದ್ಧಿಗಳನ್ನು ನಮ್ಮದಾಗಿಸಲು ಸಾಧ್ಯವಾಗುತ್ತದೆ. ನನ್ನ ಜೀವನನೌಕೆಯ ಚುಕ್ಕಾಣಿಯನ್ನು ಕಳೆದ ನಲವತ್ತು ವರ್ಷಗಳಿಂದ ನಾನೇ ನಿಯಂತ್ರಿಸುತ್ತ ಬಂದಿದ್ದೇನೆ. ಅಬ್ಬರದ ತೆರೆಗಳಿಗೆ ಅದು ಉರುಳದಂತೆ ಬಂಡೆಗಲ್ಲಿಗೆ ಅಪ್ಪಳಿಸಿ ನುಚ್ಚು ನೂರಾಗದಂತೆ, ಅತ್ಯಂತ ಮುಂಜಾಗ್ರತೆಯಿಂದ ನಡೆಸಿಕೊಂಡು ಬಂದಿದ್ದೇನೆ. ಅಂತೆಯೇ ನಮ್ಮದೊಂದು ಅಪರೂಪದ ಕುಟುಂಬ! ಎಂದು ಇನ್ನಿತರರು ಪರಿಗಣಿಸುವಂತಾಗಿದೆ.

ಜ್ಯೋತ್ಸ್ನಾಳನ್ನು ಬೀಳ್ಕೊಳ್ಳುವ ಸಮಾರಂಭದಲ್ಲಿ. ನನ್ನ ಸುತರಾಂ ಪರಿಚಯವಿಲ್ಲದವರು, ಕಂಡರೂ ಅರಿಯದವರು ಕೂಡ ತಮ್ಮ ಭಾಷಣದಲ್ಲಿ, "ನಮ್ಮ ಮ್ಯಾಡಂ ಅವರು ತಮ್ಮ ಯಜಮಾನರ ಸಹಕಾರದಿಂದ, ಪ್ರಭಾವದಿಂದ, ಬೆಂಬಲದಿಂದ ಅತ್ಯಂತ ದಕ್ಷ ಆಡಳಿತಗಾರರಾಗಲು ಸಾಧ್ಯವಾಯಿತು. ಯಾವ ಸಾಂಸಾರಿಕ ಸಮಸ್ಯೆಗಳೂ ಬಾಧಿಸಲಿಲ್ಲ..... ಟ್ರಾನ್ಸಫರ್ ಮಾಡಿದೆಡೆಯೆಲ್ಲ ಹೋಗಿ ಬಂದರು!" ಎಂದೆಲ್ಲ ಹೇಳಿದರಂತೆ.

ನಿನ್ನ ಅಪ್ಪ ಯಾರ ಹತ್ತಿರವೂ ಒಂದು ಪೈಸಾದ ಸಹಾಯ ಬೇಡಿದವನಲ್ಲ. ತಂದೆ, ಸೋದರರು, ಪತ್ನಿ, ಪುತ್ರರಿಗೆ ಕ್ವಚಿತ್ತಾಗಿ ಕೂಡ ಹಣಕ್ಕಾಗಿ ಕೇಳಿದವನಲ್ಲ. ಇದರ ಅರ್ಥ ಆತನಿಗೆ ಹಣದ ಕೊರತೆ ಎಂದೂ ಉಂಟಾಗಲಿಲ್ಲ ಎಂದರ್ಥವಲ್ಲ. ಆದರೆ ಅಂಥ ದಿನಗಳು ಬಂದಾಗ ವಿಚಲಿತನಾಗದೇ, ಮುಂಬರುವ ದಿನಗಳಿಗಾಗಿ ಶಾಂತಚಿತ್ತನಾಗಿ ಕಾಯುವದನ್ನು ರೂಢಿಸಿಕೊಂಡಿರುವವ. ಎಂದೂ ಒಳ್ಳೆಯ ಊಟಕ್ಕಾಗಿ, ಅತ್ಯುತ್ತಮ ಬಟ್ಟೆ-ಬರೆಗಳಿಗಾಗಿ ಹಂಬಲಿಸಿದವನಲ್ಲ. ಆದರೆ ಸಂಸಾರದ ಜೀವನಾವಶ್ಯಕತೆಗಳನ್ನು ಎಂದೂ ಅಲಕ್ಷಿಸಿದವನಲ್ಲ. ಖರ್ಚಿನಲ್ಲಿ ಕಡಿತಮಾಡಿ, ಅಲ್ಪ ಪ್ರಮಾಣದಲ್ಲಿ ಉಳಿತಾಯಮಾಡಿ, ಸಂಚಿತ ಹಣವನ್ನು ಮನೆಕೊಳ್ಳಲು, ಕೊಂಚ ಜಾಗ ಕೊಳ್ಳಲು ತೊಡಗಿಸಿದ. ಈ ಮುಂದಾಲೋಚನೆಯಿಂದಾಗಿ ನಿವೃತ್ತ ಜೀವನವನ್ನು ಸಮೃದ್ಧಿಯಿಂದ ಕಳೆಯುವಂತೆ ಆಗಿದೆ. ಅನೇಕಾನೇಕ ನಮ್ಮ ಸಂಬಂಧಿಕರಿಗೆ ನಮ್ಮನ್ನು ಕಂಡಾಗ ತಾವೂ ನಮ್ಮಂತೆ ಇರಬೇಕು, ಅನಿಸುವದು ಸ್ವಾಭಾವಿಕ. ಆದರೆ ಅದಕ್ಕಾಗಿ ನಾವು ಮಾಡಿದ ತ್ಯಾಗ ಹಾಗೂ ತೆತ್ತ ಮುಂದಾಲೋಚನೆಯ ಬೆಲೆಯ ಕಲ್ಪನೆ ಅವರಾರಿಗೂ ಸಾಧ್ಯವಿಲ್ಲ.

ಸ್ಥಾಯಿ ಆಸ್ತಿಯಲ್ಲಿ ನಿನ್ನ ಉಳಿತಾಯವನ್ನು ತೊಡಗಿಸುವ ನಿನ್ನ ವಿಚಾರಕ್ಕೆ ಸುಸ್ವಾಗತ. ಕೇವಲ ಒಂದು ದಶಕದ ಹಿಂದೆ ಶಲಿಕಿರಣದ ಈ ಮನೆಗೆ ನಾವು ಕೊಟ್ಟ ಹಣ ೧.೫ ಲಕ್ಷ ಮಾತ್ರ! ಇಂದು ಅದರ ಹತ್ತೂವರೆ ಪಟ್ಟು ತೆತ್ತರೂ ಈ ಸ್ಥಳದಲ್ಲಿ ಇಂಥ ಸುಂದರ, ಸುಭದ್ರ ಮನೆ ಸಿಗಲಿಕ್ಕಿಲ್ಲ. ಹೆಬ್ಬಾಳದ ಸೈಟಿನ ಇತಿಹಾಸ ನಿನಗೆ ತಿಳಿದೇ ಇದೆ. ಈ ದಿನಗಳಲ್ಲಿ ಹೊನ್ನಾವರದಲ್ಲಿಯೂ ಆಸ್ತಿ-ಪಾಸ್ತಿಗಳ ಬೆಲೆ ಗಗನಕ್ಕೇರಿದೆಯಂತೆ. ಚೌಕಮಾರ್ಗದ ಅಂಗಡಿಯೊಂದು ಮೂರುವರೆ ಲಕ್ಷಕ್ಕೆ ಮಾರಾಟವಾಗಿದೆಯಂತೆ! ಅಲ್ಲಿ ಆಗೀಗ ಸಿದ್ಧವೇ ಆದ ಇಮಾರತು ಇದ್ದ ಓಣಿಯ ಒಳ್ಳೆ ಮನೆ ಮಾರಾಟಕ್ಕೆ ತೆಗೆಯುವ ಸಾಧ್ಯತೆ ಇದ್ದೇ ಇದೆ. ಅಂಥ ಸಂದರ್ಭ ಬಂದಾಗ ತಿಳಿಸಲು ತುಳಸುವಿಗೆ ವಿನಂತಿಸಿಕೊಂಡಿದ್ದೇನೆ.

ಈಗಲೇ ನಿನ್ನ ಹತ್ತಿರ ಅಷ್ಟು ಹಣ ಇಲ್ಲವೆಂದು ನನಗೆ ಖಂಡಿತ ಗೊತ್ತು. ಆದ್ದರಿಂದ ಸದ್ಯ ನನ್ನ ಉಳಿತಾಯದ ಹಣ ತೊಡಗಿಸಿ ಅಂಥ ಮನೆ ಸಿಕ್ಕಾಗ ನಿನ್ನ ಹೆಸರಿಗೆ ಕೊಂಡುಕೊಳ್ಳಬೇಕೆಂದಿದ್ದೇನೆ. ಅಂದರೆ ನಿನಗೆ ಅಷ್ಟೊಂದು ಹಣವನ್ನು ಝುಕ್ಕಿಸಿ ಉಳಿತಾಯ ಮಾಡಲೇಬೇಕಾಗುತ್ತದೆ! ಇದು ನನ್ನ ವಿಚಾರ. ಹೀಗೆ ಮಾಡಿದರೆ ನಿನಗೆ ಹೊನ್ನಾವರ, ಧಾರವಾಡ, ಬೆಂಗಳೂರು ಇಲ್ಲವೇ ಬರ್ಮಿಂಗ್ ಹ್ಯಾಮ್‌ಗಳಲ್ಲಿ, ಯಾವುದಾದರೂ ಒಂದು ಊರಿನಲ್ಲಿ ಸ್ಥಾಯಿಯಾಗಿ ವಾಸಿಸಲು ಬರುತ್ತದೆ. ಯಾವುದೇ ಆಸ್ತಿಬೇಡ ಎಂದೆನಿಸಿದರೆ ಅಥವಾ ಯಾವುದೇ ಕಾರಣಕ್ಕೆ ಹಣದ ಉಬ್ಬರ ಕಾಣಿಸಿಕೊಂಡರೆ, ಲಾಭಮಾಡಿಕೊಂಡು ಜಾಗ ಮಾರುವದೂ ಸಾಧ್ಯವಾಗುತ್ತದೆ.

ಜೀವನದ ಅನೇಕಾನೇಕ ಸವಲತ್ತುಗಳು ನಿನಗೆ ದಟ್ಟಾಬಂದಿರುವದರಿಂದ ಸಾರ್ಥಕ ಬಾಳನ್ನು ನಡೆಸಲು ಯಾವ ಅಡ್ಡಿ-ಆತಂಕಗಳೂ ಬರಲಾರವು! ಎಂದು ನನ್ನ ಅನಿಸಿಕೆ. ಇದ್ದ ಜೂರು ಆಸ್ತಿ-ಪಾಸ್ತಿಯ ಮೇಲ್ವಿಚಾರಣೆ ನಡೆಸಿದರೇ ಸಮೃದ್ಧಿಯ ಜೀವನ ತೂಗಿಸಿಕೊಂಡು ಹೋಗಲು ಸಾಧ್ಯವಿದೆ. ಇನ್ನಿತರರಿಗೆ ಅಲ್ಪ ಸ್ವಲ್ಪ ನೆರವನ್ನೂ ನೀಡಬಹುದು. ಇವರಲ್ಲಿ ಅಸಹಾಯಕರನ್ನು ದೋಚುವವರಿಂದ ಬೇರ್ಪಡಿಸುವದನ್ನು ಕಾಯುವದು ಅತಿ ಮುಖ್ಯ. ತಮ್ಮ ಲಾಭಕ್ಕಾಗಿ ನಮ್ಮ ಪರಿಚಯ, ಸ್ನೇಹ, ಆತ್ಮೀಯತೆಗಳನ್ನು ಬಯಸುವವರನ್ನು ಗುರುತಿಸಿ, ಅಂಥವರು ಹತ್ತಿರ ಸುಳಿಯದಂತೆ ಮಾಡಿದ್ದರಿಂದ ಇಂದು ನಾವು ಸಮೃದ್ಧಿಯಿಂದ ಇರುವಂತಾಗಿದೆ. ಮತ್ತೆ ಕೆಲದಿನಗಳಿಂದ ಜ್ಯೋತ್ಸ್ನಾಳಲ್ಲಿ ಅನಾರೋಗ್ಯ ಕಾಣಿಸಿಕೊಂಡಿದೆ. ಆಗಾಗ ನಿನ್ನನ್ನು ನೆನೆಸಿಕೊಳ್ಳುತ್ತಿರುತ್ತಾಳೆ. ಆದ್ದರಿಂದ ಹೋದ ವಾರ ನಿನಗೆ ಬರೆದ ಪತ್ರದಲ್ಲಿ ಅವಳು ನಿನಗೆ ಭಾರತಕ್ಕೆ ಹಿಂದಿರುಗಿ ಬರುವಂತೆ ಸೂಚಿಸಿದ್ದಾಳೆ. ಇದು ಮಾತೃಹೃದಯದ ಅನಿಸಿಕೆಯೇ ಹೊರತು, ವ್ಯಾವಹಾರಿಕ ಸೂಚನೆಯಲ್ಲ ಎಂದು ಬೇರೆ ಹೇಳಬೇಕಿಲ್ಲ. ಕಷ್ಟಪಟ್ಟು ದೊರಕಿಸಿದ ನೌಕರಿಬಿಟ್ಟು ಹಾಗೆಯೇ ಹಿಂದಿರುಗಿ ಬರಲು ಸಾಧ್ಯವೇ? ಅದೂ ಮೈತುಂಬ ಸಾಲ ಇರುವಾಗ? ಆದರೆ ಹಣಗಳಿಕೆಯ ಯಂತ್ರವಾಗಿ ಶಾಶ್ವತವಾಗಿ ಅಮೇರಿಕೆಯಲ್ಲಿ ನೆಲೆಸುವದೂ ಸರಿಯಲ್ಲ, ಆದ್ದರಿಂದ ನಿನ್ನ ಭವಿಷ್ಯದ ಬಗ್ಗೆ ಬಂದು ಖಚಿತವಾದ ನಿರ್ಣಯಕ್ಕೆ ಬಂದು ಅದಕ್ಕೆ ಅನುಗುಣವಾಗಿ, ಕಾರ್ಯೋನ್ಮುಖಿಯಾಗುವದು ಸರ್ವದೃಷ್ಟಿಯಿಂದ ಕ್ಷೇಮಕರ. ನಿನ್ನ ಕನಸುಗಳನ್ನೆಲ್ಲ ನನಸುಮಾಡಲು ನೀನು ಕೈಕೊಳ್ಳುವ ಶ್ರಮಗಳೆಲ್ಲ ನನಗೆ ಸರ್ವಸಮ್ಮತವೆಂದು ಬೇರೆ ಹೇಳಬೇಕೇ?

ನೀನು ಅಮೇರಿಕೆಯ ವಿಶ್ವವಿದ್ಯಾಲಯದಿಂದ ಮಾಸ್ಟರ್ಸ್ ಪದವಿ ಪಡೆದು, ವಿಳಂಬವಾಗದೇ ನೌಕರಿಗಿಟ್ಟಿಸಿ, ಕಾರುಕೊಂಡು ಓಡಾಡುತ್ತಿರುವ ಸಮಾಚಾರ, ಊರಿನಲ್ಲಿ ಕಾಡುಗಿಚ್ಚಿನಂತೆ ಹಬ್ಬಿದೆ! ಅಂತೆಯೇ ಕನ್ಯಾಪಿತೃಗಳೆಲ್ಲ ನಿನ್ನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು ಪೈಪೋಟಿ ನಡೆಸಿದ್ದಾರೆ. ವಶೀಲಿ ಹಚ್ಚುತ್ತಿದ್ದಾರೆ. ಮೊನ್ನೆ ಬಂದ ಪ್ರದೀಪನು ಮೂವರು ಕನ್ಯೆಯರ ಜಾತಕ, ಫೋಟೋಗಳನ್ನು ತಂದಿದ್ದಾನೆ. ಒಬ್ಬಳು ನಮ್ಮೂರಿನ ಜನಪ್ರಿಯ ಡಾಕ್ಟರ.....ರ ಪುತ್ರಿ ಬಿ.ಡಿ.ಎಸ್. ಮುಗಿಸಲಿದ್ದಾಳೆ. ಭರತನಾಟ್ಯ ಕಲಿತಿದ್ದಾಳೆ. ಪ್ರಥಮ, ದ್ವಿತೀಯ ವಿಶ್ವವಿದ್ಯಾಲಯ ಪರೀಕ್ಷೆಗಳಲ್ಲಿ ರ್‍ಯಾಂಕ್ ಗಿಟ್ಟಿಸಿದ್ದಾಳೆ; ಫೋಟೋದಲ್ಲಿ ಚೆಲುವೆಯಾಗಿ ಕಾಣಿಸುತ್ತಾಳೆ. ಎರಡನೆಯವಳು... ಭಟ್ಟರ ಮಗಳು, ಐದು ಅಡಿ, ಎರಡಂಗುಲ ಎತ್ತರ. SSLC ಪಾಸುಮಾಡಿದ್ದಾಳೆ. ವರ್ಣಚಿತ್ರದಲ್ಲಿ ತೆಳ್ಳಗೆ ಬೆಳ್ಳಗೆ ಚೆನ್ನಾಗಿದ್ದಾಳೆ. ಮೂರನೆಯವಳು..... ಅವಳ ಅಕ್ಕ ನಿನ್ನೊಡನೆ ಬಾಲ್ಯದಲ್ಲಿ ಕ್ರಿಕೆಟ್ ಆಡಲು ಬರುತ್ತಿದ್ದಳು. ಬಿ.ಎಸ್‌ಸಿ. ಮೊದಲ ವರ್ಷ ಓದುತ್ತಿದ್ದಾಳೆ. ಅವಳಿಗೆ ಹದಿನೆಂಟು ವರ್ಷಮಾತ್ರ. ಯಾರನ್ನೂ ಸೊಸೆ ಮಾಡಿಕೊಳ್ಳುವಂತೆ ಇಲ್ಲವಾದರೂ ಮಗನಿಗೆ ಜಾತಕಗಳು ಬರಲಾರಂಭಿಸಿವೆ! ಎಂದು ಜ್ಯೋತ್ಸ್ನಾ ಸಂತೋಷದಲ್ಲಿದ್ದಾಳೆ ಕೆಲ ದಿನಗಳ ಹಿಂದೆ, ಈ ವಿಚಾರದಲ್ಲಿ ನಿರಾಸೆ ವ್ಯಕ್ತಪಡಿಸಿದ್ದಳು.

ಒಂದು ವಾರದ ಹಿಂದೆ ನಾನು ಲ್ಯಾಬಿಗೆ ಹೋಗಿದ್ದಾಗ ಮನೀಷಾ ಪೈ ತಂದೆ, ನಮ್ಮ ಮನೆಗೆ ಬಂದು, "ತಮ್ಮ ಮಗಳನ್ನು ಸೊಸೆ ಮಾಡಿಕೋ! ಅವಳು ನಿಮ್ಮ ಮಗನು ಇಲ್ಲಿ ಕೆಲ ಕಾಲ ನೌಕರಿ ಮಾಡಿದ ಕಂಪನಿಯಲ್ಲಿ ಸಹೋದ್ಯೋಗಿಯಾಗಿದ್ದಳು!" ಎಂದೆಲ್ಲ ಹೇಳಿ, ಮಗನಿಗೆ ಫೋನಿಸಿದರೆ ಅವನು ತಕ್ಷಣ ಒಪ್ಪಿಕೊಂಡು ಬಿಡುತ್ತಾನೆ! ಎಂಬಂತೆ ಮಾತನಾಡಿ ಹೋದರಂತೆ. ಎರಡು ದಿನಗಳ ಬಳಿಕ, ರಸ್ತೆಯಲ್ಲಿ ಸಿಕ್ಕಾಗ, 'ವಿಕಾಸನು ಏನೆಂದ? ಎಂದು ಕೇಳಿದರು 'ಸದ್ಯ ಸಂಸಾರಸ್ಥನಾಗುವ ವಿಚಾರವಿಲ್ಲ ಎಂದು ಹೇಳಿದ್ದಾನೆ" ಎಂದೆ. ಮತ್ತೆ  ಕೊರೆತ ಆರಂಭಿಸಿದಾಗ, ಮನಸ್ಸು ಬದಲಾಯಿಸಿದರೆ ಫೋನಮಾಡಿ ತಿಳಿಸುವದಾಗಿಯೂ ಹೇಳಿದ್ದಾನೆ! ಎಂದು, ನಾನು ಮುಂದುವರಿದೆ. ಅವಳ ತಾಯಿ ಮನೆಯ ಪರಿಚಯ ನನಗೆ ಚೆನ್ನಾಗಿ ಗೊತ್ತು! ಹುಡುಗಿಯ ಬಗ್ಗೆ ನಿನಗೆ ಗೊತ್ತು.

ತುಳಸೀದಾಸನು ಇಲ್ಲಿಗೆ ಬಂದಾಗ ಮಾಲಿ, ಮಂಗಲಾ, ನಮ್ಮ ಮನೆಯಲ್ಲಿ ಸೇರಿದ್ದರು. ಆಗ ವಿಕಾಸನಿಗೆ ಎಂತಹ ಕನ್ಯೆಬೇಕು? ಎಂದು ಅವರೆಲ್ಲ ಒಕ್ಕೊರಳಿನಿಂದ ಪ್ರಶ್ನಿಸಿದ್ದರು. "ವಿಕಾಸನ ಬೇಕು-ಬೇಡ ಅರಿತುಕೊಂಡು, ಮಾತೃಹೃದಯದಿಂದ ಅವನನ್ನು ಸಂಭಾಳಿಸಿಕೊಂಡು, ಸಂಸಾರ ನಡೆಸಬಲ್ಲ ಆರೋಗ್ಯವಂತ ಕನ್ಯೆಬೇಕು" ಎಂದು ಒಂದೇ ವಾಕ್ಯದಲ್ಲಿ ಉತ್ತರಿಸಿದ್ದೆ. ಅರ್ಥಾತ್, ಕನ್ಯೆ ಅತಿ ಹೆಚ್ಚು ಕಲಿತಿರಬೇಕೆಂದಿಲ್ಲ. ಅತಿ ಸುಂದರಿಯಾಗಬೇಕೆಂದಿಲ್ಲ. ಅತ್ಯಾಧುನಿಕಳಾಗಿರುವ ಅವಶ್ಯಕತೆ ಇಲ್ಲ. ವರದಕ್ಷಿಣೆ-ಆಡಂಬರದ ಮದುವೆ ಕೂಡ ಬೇಕೆಂದಿಲ್ಲ. ಇಂದಿನ ದಿನಗಳಲ್ಲಿ ಒಳ್ಳೆಯ ವರಗಳು ಸಿಗುವದು ವಿರಳವಾದಂತೆ, ಒಳ್ಳೆಯ ವಧುಗಳೂ ಕ್ವಚಿತ್ತಾಗಲಾರಂಭಿಸಿದ್ದಾರೆ! ಎಲ್ಲಿ ನೋಡಿದರೂ ವಿರಸದಾಂಪತ್ಯಗಳು ಕಂಡು ಬರುತ್ತಿವೆ. ಕೆಲ ನವವಿವಾಹಿತ ಕನ್ಯೆಯರೇ ವಿಚ್ಛೇದನಕ್ಕೆ ಮುಂದುವರಿದದ್ದು ಇದೆ. ಅವರಿಗೆ ಜೀವನವೇ ಮಕ್ಕಳಾಟದಂತೆ ಕಂಡಿರಬೇಕು ನಮ್ಮ ಭಾಸ್ಕೇರಿ ಕಾಮತ ಕುಟುಂಬದ ವರಮಹಾಶಯರೆಲ್ಲ ಗಡಿಬಿಡಿಯಿಂದ ಮದುವೆ ಮಾಡಿಕೊಂಡವರೇ! ಹೀಗಾಗಿ ಅವರಾರಿಗೂ ಪಸಂದಾದ ಪತ್ನಿ ಸಿಕ್ಕಿಲ್ಲ! ಎಂಬುದು ಪ್ರದೀಪನ ವಾದ.

'ವಿಕಾಸನ ಮದುವೆಯನ್ನು ಮಾಡಿ ಮುಗಿಸಿಬಿಡು. ಇಲ್ಲವಾದರೆ ಅವನು ಅಲ್ಲಿಯವಳನ್ನು ಮದುವೆ ಮಾಡಿಕೊಳ್ಳಬಹುದು' ಎಂಬ ಬುದ್ಧಿವಾದಕ್ಕೆ ಏನೇನೂ ಕೊರತೆ ಇಲ್ಲ ಇಂಥವರೆಲ್ಲ ಯಾವಳೋ ಕನ್ಯೆಯ ಉದ್ಧಾರಕ್ಕಾಗಿಯೇ ಈ ಬೋಧನೆ ಮಾಡುತ್ತಿದ್ದಾರೆ, ಎಂದೂ ಗೊತ್ತು. ಇನ್ನೆರಡು ವರ್ಷಗಳ ಕಾಲ ಮದುವೆ ಆಗುವ ಮನಸ್ಸು ವಿಕಾಸನಿಗಾಗಲಿ, ಮಾಡುವ ತರಾತುರಿ ನಮಗಾಗಲಿ ಇಲ್ಲ. ಅವನಿಗೆ ಯೋಗ್ಯಳೆಂದು ಕಂಡ ಕನ್ಯೆಯನ್ನು ವರಿಸಲು ಅವನು ಸಂಪೂರ್ಣ ಸ್ವತಂತ್ರ! ಅವನು ಸಂಸಾರದಲ್ಲಿ ಸುಖಿಯಾಗಿರಬೇಕೆಂದು ನಮ್ಮ ಸರ್ವ ಪ್ರಯತ್ನ, ನಾವು ಆರಿಸಿದ ವಧು ಮಾತ್ರ ಅವನಿಗೆ ಸುಖ-ಸಂತೋಷಗಳನ್ನು ತರುತ್ತಾಳೆ, ಎಂಬ ಭ್ರಮೆ ನಮಗಿಲ್ಲ'. ಎಂಬ ಚುಟುಕಿನ ಉತ್ತರದಿಂದ ಇಂಗು ತಿಂದ ಮಂಗನಂತೆ ಜೋಲು ಮುಖ ಹಾಕಿ ಹಿಂದಿರುಗುತ್ತಾರೆ. ಅದೆಷ್ಟೋ ಕನ್ಯಾಪಿತೃಗಳು ಬಂಧುಗಳ ಮುಖಾಂತರ ಯತ್ನಿಸಿ ವಿಫಲರಾಗುತ್ತಿದ್ದಾರೆ. ಮೋಜಿನ ಮಾತೆಂದರೆ, ಕನ್ಯೆಯರು ಹೇಗೇ ಇರಲಿ ವರನು ಮಾತ್ರ ಅತ್ಯುತ್ತಮನಾಗಿರಬೇಕು! ನಮ್ಮ ಮಗನು ವಿರಳವಾದ ವರರಲ್ಲಿ ಸೇರ್ಪಡೆಯಾಗಿದ್ದಾನೆ, ಎಂದು ಜ್ಯೋತ್ಸ್ನಾ ಸಡಗರ ಪಟ್ಟಳು.

ನಾವು ಯಾವ ಪಾಲಕರಿಗೂ ಆಶ್ವಾಸನೆ ನೀಡಿಲ್ಲ. ಆಸೆ ತೋರಿಸಿಲ್ಲ. ಓಡಾಡುವಂತೆಯೂ ಮಾಡುತ್ತಿಲ್ಲ. ಮನೆಗೆ ಬಂದವರ ವಿಳಾಸ ಬರೆದುಕೊಂಡು, ಚಹಾ-ಕಾಫಿ ಕುಡಿಸಿ, ಸಮಯ ಬಂದಾಗ ನಾವೇ ಅವರೊಂದಿಗೆ ಸಂಪರ್ಕ ಬೆಳೆಸುವದಾಗಿ ಹೇಳಿ ಬೀಳ್ಕೊಳ್ಳುತ್ತೇವೆ. ಇಷ್ಟಾದರೂ, ಎಷ್ಟೊಂದು ಜನ ಫೋನ ಮೂಲಕ, ಪರಿಚಯದವರ ಮೂಲಕ ಕಾಡುತ್ತಾರೆ. ಕೀಟಲೆ ಕೊಡುತ್ತಾರೆ. ಯಾರ ಯಾರದೋ ವಶೀಲಿ ಹಚ್ಚುತ್ತಾರೆ. ಇಲ್ಲದ ಪರಿಚಯ, ನೆಂಟಸ್ತಿಕೆ ಹೇಳಿಕೊಳ್ಳುತ್ತಾರೆ. ಒಮ್ಮೊಮ್ಮೆ ಹೀಗೆ ಬಂದವರನ್ನು ಸಾಗಹಾಕುವದು ಕಷ್ಟವಾಗುತ್ತದೆ!

ಎಂತಹ ಸೀತೆ, ಸಾವಿತ್ರಿಯನ್ನು ಹುಡುಕಿ ಸೊಸೆ ಮಾಡಿಕೊಂಡರೂ ಸಂಸಾರದಲ್ಲಿ ಸಾಮರಸ್ಯಕ್ಕಾಗಿ ಯತ್ನಿಸುವದು ಅತಿಮುಖ್ಯ. ನಾವು ಮಗನನ್ನು ಮುದ್ದಿಸಿದಷ್ಟೇ ಸೊಸೆಯೂ ನಮ್ಮವಳೆಂದೇ ಕಾಣಲು ಕಲಿಯಬೇಕು. ಅವಳಲ್ಲಿಯ ಕುಂದುಕೊರತೆಗಳನ್ನು ಹುಡುಕುವ ಬದಲಾಗಿ, ಅವಳ ಸಾಧನೆಗಳನ್ನು ಗುರುತಿಸಲು ಕಲಿಯಬೇಕು. 'ಬಂದವಳೂ ಪತಿಯ ಆವಶ್ಯಕತೆಗಳನ್ನು ಗುರುತಿಸಿ ಅನುರೂಪ ಪತ್ನಿಯಾಗಲು ಸರ್ವಪ್ರಯತ್ನ ಮಾಡಬೇಕು' ಎಂದು ನಿರೀಕ್ಷಿಸುವಾಗ, ಅವಳು ತನ್ನ ಒಡಹುಟ್ಟಿದವರನ್ನೆಲ್ಲ ಹಿಂದೆಬಿಟ್ಟು ಹೊಸಜೀವನದ ಬೆನ್ನಟ್ಟಿ ಬಂದಿದ್ದಾಳೆಂದು ಮರೆಯಕೂಡದು. ಸಂಕ್ಷಿಪ್ತವಾಗಿ ಹೇಳಬೇಕೆಂದರೆ ವೈವಾಹಿಕ ಜೀವನ ಸುಖಮಯವಾಗಬೇಕಿದ್ದರೆ. ಒಬ್ಬರನ್ನೊಬ್ಬರು ಸರಿಯಾಗಿ ಅರಿತುಕೊಂಡು ಹೊಂದಾಣಿಕೆ ಮಾಡಿಕೊಳ್ಳಲೇಬೇಕು. ನಿನ್ನ ಅಪ್ಪ, ಅಮ್ಮ ತೀರ ವಿರುದ್ಧವಾದ ಹಿನ್ನೆಲೆಯಲ್ಲಿ ಬೆಳೆದವರು! ಹೀಗಾಗಿ ಇಬ್ಬರೂ ಸಾಮರಸ್ಯದಿಂದ ಜೀವಿಸಬೇಕಾದರೆ ಬಹಳಷ್ಟು ಗುದ್ದಾಡಬೇಕಾಯಿತು. ಇಂದಿಗೂ ಈ ಹೊಂದಾಣಿಕೆಯ ಪ್ರಯತ್ನ ನಡೆದೇ ಇದೆ. ಅಂತೆಯೇ ಇನ್ನಿತರರಿಂದ "ಭಲೇ ಜೋಡಿ!" ಎಂದು ಬೆನ್ನು ತಟ್ಟಿಸಿಕೊಳ್ಳುತ್ತಿದ್ದೇವೆ. ನಲವತ್ತು ವರ್ಷಗಳ ಬಳಿಕ ಭೇಟಿಯಾದ ಸಹಪಾಠಿ ಶಿವಪ್ಪನಾಯ್ಕನ ಮಾತುಗಳು ಇಲ್ಲಿ ಹೆಚ್ಚು ಸಮಂಜಸ ಎನಿಸಬಹುದೇನೋ! "ನಿನ್ನ ಪ್ರೇಯಸಿಗೆ ಪತ್ರಗಳು" ನನಗೆ ತುಂಬ ಸೇರಿತು. ಸಹಧರ್ಮಿಣಿ ಬರೆದ ಮುನ್ನುಡಿ ಒಂದು ತೂಕ ಹೆಚ್ಚೇ ಸೇರಿತು. ರುಕ್ಮಿಣಿಯಲ್ಲೇ ರಾಧೆಯನ್ನು ಕಾಣುವ ಮತ್ತು ಪಡೆಯುವ ಭಾಗ್ಯ ತೀರ ಕೆಲವರ ಪಾಲಿಗಷ್ಟೇ ಬರುತ್ತದೆ. ಈ ವಿರಳರಲ್ಲಿ ನೀನೊಬ್ಬನೆಂದು ನಿನ್ನನ್ನು ಭಾಗ್ಯವಂತನೆನ್ನುವೆ!"

(ವಿಕಾಸ್ ೧೯೯೭ರಲ್ಲಿ ತನ್ನ ಸಹಪಾಠಿ, ಸಹೋದ್ಯೋಗಿ, ದಕ್ಷಿಣಕೋರಿಯ ಸಂಜಾತೆ, ಹಿಯ್ಯೊಂಗ್ ಕಿಮ್‌ಳನ್ನು ವಿವಾಹವಾದ. ಕಿಮ್ ಕಂಪ್ಯೂಟರ್ ಗಣಿತಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದಿದ್ದಾಳೆ. ಕಾಮತ್ ವೆಬಸೈಟ್ ನ ನಾಲ್ಕು ಆಧಾರ ಸ್ತಂಭಗಳಲ್ಲಿ ಒಬ್ಬಳು)

(17-03-1994)



## ೨. ನಗರದ ನಿಸರ್ಗ

ಈ ದಿನಗಳಲ್ಲಿ ನಮ್ಮ ಮನೆಯ ಸುತ್ತ ಮುತ್ತಲು ಬಂಡಿಪುರ-ನಾಗರಹೊಳೆಯ ವಾತಾವರಣವಿದೆ. ಮಲ್ಲೇಶ್ವರಂ, ಕೆಲ ರಸ್ತೆಗಳ ಉದ್ದ-ಅಗಲಕ್ಕೂ ಅರಣ್ಯಖಾತೆಯವರು ನೆಟ್ಟು ಬೆಳೆಸಿದ ಗುಲ್‌ಮೊಹರ ಮರಗಳು ನವವಧುವಿನಂತೆ ಅಸಂಖ್ಯಾತ ಬಿಳಿ, ಕೇಸರಿ ರಕ್ತ ವರ್ಣ ಹೂಗಳನ್ನು ಹೊತ್ತು ಬಳುಕುತ್ತ, ನಾಚುತ್ತ ನಿಂತಿವೆ. ಮರಗಳು ರಸ್ತೆ ಅಂಚಿನಲ್ಲಿ ನಿಂತರೂ, ಅವುಗಳ ರೆಂಬೆಗಳು ನಮ್ಮ ಮನೆಯ ಗ್ಯಾಲರಿಗೂ ಕೈಚಾಚಿ ಬಂದಿವೆ. ಒಂದು ಟೊಂಗೆಯಂತೂ ಅಸಂಖ್ಯಾತ ಹೂಗಳನ್ನು ತಳೆದು ನಮ್ಮ ಕೈಗೆ ಎಟಕುವಷ್ಟು ವಾಲಿದೆ. ಈ ಮರ, ಹೂಗಳನ್ನು ನೋಡುತ್ತ ಕೂಡ್ರುವುದೇ ಸುಖ! ಈಗ ಕಾಗೆಯಂತಹ ನಯನಾಜೂಕು ಅರಿಯದಂತಹ ಹಕ್ಕಿಗಳೂ ರಸಿಕತೆಯನ್ನು ವ್ಯಕ್ತಪಡಿಸಲಾರಂಭಿಸಿವೆ. ಎಲೆಗಳ ಮರೆಯಲ್ಲಿ ಅವಿತು ಕುಳಿತು, ತೀರ ಮೆಲು ಧ್ವನಿಯಲ್ಲಿ ಪ್ರಿಯತಮೆಯನ್ನು ಕೂಗಿ ಕರೆಯುತ್ತವೆ. 'ಅವಳು' ಕವಿಯ ಮೇಲೆ ಹಾಕಿಕೊಳ್ಳದಿದ್ದಾಗ, ಕಾಕರಾಜ ಗರಿಯಬಿಚ್ಚಿ, ಪುಚ್ಛ ಹರವಿ, ನವಿಲನ್ನು ನೆನಪಿಗೆ ತರುವಂತೆ ನರ್ತಿಸಿದ! ತಂದೆಯಾಗಲಿರುವ ಕಾಕರಾಜ, ತನ್ನ ಭಾವಿ ಸಂತತಿಗೆ ಗೂಡುಕಟ್ಟಲು ಏನು ಬಳಸುತ್ತದೆ, ಏನು ಇಲ್ಲ, ಎಂದು ಹೇಳಲು ಬರುವುದಿಲ್ಲ. ಒಂದು ಕಾಗೆ ಜಪ್ಪಾಗಿ ಮಲಗಿದ ಎಮ್ಮೆ ಕರುವಿನ ಕೂದಲುಗಳನ್ನು ಕಿತ್ತು, ಕಿತ್ತು ಒಯ್ಯುತ್ತಿರುತ್ತದೆ. ಇನ್ನೊಂದು ರಸ್ತೆ ಬದಿಗೆ ನಿಂತ ಕತ್ತೆ ಮರಿಯ ಬೆನ್ನನ್ನೇ ಕುಕ್ಕಲಾರಂಭಿಸಿತ್ತು!

'ಶಶಿಕಿರಣ'ದ ಸುತ್ತಮುತ್ತಲಿರುವ ವೃಕ್ಷಗಳು, ಗೂಡುಕಟ್ಟಲು ಅಷ್ಟೊಂದು ಸುರಕ್ಷಿತವಲ್ಲವೆಂದು, ಅವು ನಗರಕರ ಬೃಹತ್ ಮಾವಿನ ಮರವನ್ನು ತಮ್ಮದನ್ನಾಗಿ ಮಾಡಿಕೊಂಡಿವೆ. ಅವುಗಳ ಗೂಡಿನಲ್ಲಿ ಮೊಟ್ಟೆ ಇಡಲು ಹವಣಿಸುವ ಕೋಗಿಲೆಗೂ ಕಾಗೆಗಳಿಗೂ ಆಗಾಗ ಘೋರ ವಾಗ್‌ಯುದ್ಧವಾಗುತ್ತಿರುತ್ತದೆ. ಇಷ್ಟಾದರೂ ಕಾಗೆ, ಗಂಡು ಕೋಗಿಲೆಯನ್ನು ಓಡಿಸಿಕೊಂಡು ಹೋದಾಗ, ಹೆಣ್ಣು ತನ್ನ ಮೊಟ್ಟೆಯನ್ನು ಕಾಗೆಯ ಗೂಡಿನಲ್ಲಿ ಸೇರಿಸದೇ ಬಿಡುವುದಿಲ್ಲ. ಗೂಡುಗಳು ಇರುವ ಮರದ ಹತ್ತಿರ ಹದ್ದು ಹಾರಾಡಿದರೆ, ಕಾಗೆಗಳ ಸೈನ್ಯವೇ ಅದನ್ನು ಅಟ್ಟಿಸಿಕೊಂಡು ತಮ್ಮ ಸರಹದ್ದನ್ನೇ ದಾಟಿ ಹೋಗುವಂತೆ ಮಾಡುತ್ತವೆ. ಕೆಂಪು ಮೂತಿಯ ಕೋತಿಗಳು, ಹಿಂಡು ಕಟ್ಟಿಕೊಂಡು 'ಹಿಂದಿವಾಲಾ'ರಿಗೆ ದರ್ಶನ ಕೊಟ್ಟು, ಅವರು ನೀಡುವ ಬಾಳೆಹಣ್ಣು ಮಿಠಾಯಿಗೆ ಆಸೆಪಟ್ಟು ಬರುವದುಂಟು. ಅಂತಹ ಸಮಯದಲ್ಲಿ ಮೊಟ್ಟೆಗಳನ್ನು ಕಾಯುತ್ತಿರುವ ಕಾಗೆಗಳು, ಅವುಗಳ ಮೈಗೆಲ್ಲ ಕುಕ್ಕಿ ಪಲಾಯನ ಮಾಡುವಂತೆ ಮಾಡುವವು. ಇಂದಿನ ದಿನಗಳಲ್ಲಿ ಕೋಗಿಲೆಗಳಿಗೆ ಕಾಮಜ್ವರದಿಂದ ರಾತ್ರಿಯಿಡೀ ನಿದ್ರೆಬರುವಂತೆ ಕಾಣುವದಿಲ್ಲ. ಅಂತೆಯೇ ವಿಪರೀತ ಸೆಕೆಯಿಂದ ನಿದ್ರೆ ಬಾರದವರಿಗೆ. ಸ್ವಲ್ಪ ಜೋಂಪು ಹತ್ತುವದರಲ್ಲಿ ಇದ್ದಾಗ, ಈ ಕೋಕಿಲವೃಂದ ತಮ್ಮ ಪ್ರಣಯಕಲಹ, ಪ್ರೇಮಗೀತಗಳನ್ನು ಪ್ರಾರಂಭಿಸಿ ಬಿಡುವವು! ಬೆಳಗಿನ ಜಾವವೇ ಗಂಡು ಬಾರ್‌ಬೆಟ್ ಗಳು ಮರಗಳು ತುತ್ತ ತುದಿಯೇರಿ, ನಮಾಜ್‌ಗೆ ಬರಲು ಕರೆ ಕೊಡುವ 'ಮುಅಜ್ಜಿನ್' ನಂತೆ, ಕೊಟರ್! ಕೊಟರ್!. ಎಂದು ಕರೆ ಕೊಡಲಾರಂಭಿಸುವವು. ಒಂದು ಕಿರಚಲಾರಂಭಿಸಿದರೆ ಹತ್ತಾರು ಧ್ವನಿಕೂಡಿಸುವದು, ಅವುಗಳ ಅಭ್ಯಾಸ. ಇಂದಿನ ದಿನಗಳಲ್ಲಿ, ಸುದೀರ್ಘ ಸುಖನಿದ್ರೆಯಲ್ಲಿದ್ದ ಸಾಯಕೆಡಾಗಳು ಮೇಲಕ್ಕೆ ಬಂದು ಏಕಪ್ರಕಾರವಾಗಿ ಕಿರ್‌SS ಗುಡುತ್ತಿರುತ್ತವೆ. ಬೆಳಗಿನ ನಾಲ್ಕೂ ಮುಕ್ಕಾಲು ಗಂಟೆಗೆ, ನಾವಿಬ್ಬರೂ ತಿರುಗಾಟಕ್ಕೆ ಹೊರಟಾಗ, ದೀಪಗಳು ಇಲ್ಲದಾಗ, ಯಾವುದೋ ಅರಣ್ಯದಲ್ಲಿ ಇದ್ದ ಹಾಗೆ ಭಾಸವಾಗುತ್ತದೆ. ಮುಂಜಾನೆಯ ಆರು ಗಂಟೆಯ ನಂತರ ನಮ್ಮ ಮಲ್ಲೇಶ್ವರಂ, ಬೇರೆಯೇ ರೂಪ ತಳೆದುಬಿಡುತ್ತದೆ. ಅಂತೆಯೇ ನಮ್ಮ ಮುಂಜಾನೆಯ ತಿರುಗಾಟಕ್ಕೆ ಎಂತಹ ಬೆಲೆಯನ್ನು ತೆತ್ತಲು ಸಿದ್ಧರಿರುತ್ತೇವೆ.

(4-5-1995)

❑

## ೩. ಪುಟ್ಟ ಜೀವಲೋಕ

ಹೋದವರ್ಷ, ವಸಂತಋತು ಭೂಮಿಗೆ ಇಳಿದು ಬರುವಾಗ ಅದರ ಸ್ವಾಗತಕ್ಕಾಗಿ ಗಿಡಮರಗಳು ಹೂಬಿಟ್ಟು, ಗಿಳಿ-ಕೋಗಿಲೆಗಳು ಹಾಡುತ್ತ ಎಲ್ಲೆಡೆಯಲ್ಲಿ ಅಡರಿದ ಸಡಗರ ಕುರಿತಾಗಿ ಬರೆದಿದ್ದೆ. ಈಗ ನಾನು ಬೆಳೆಸಿದ ಗೊಂಡೆ ಹೂವಿನ ತೋಟದ ಕುರಿತಾಗಿ ಬರೆಯಬೇಕೆಂದಿರುವೆ. ಆಸೆಯಿಂದ ಬೀಜ ಬಿತ್ತಿದ್ದೆ. ನಮ್ಮ ಬೆಡ್‌ರೂಮಿನ ಬಾಲ್ಕನಿಯ ಮಣ್ಣು ಶಕ್ತಿಹೀನವಾಗಿದ್ದರಿಂದ, ಸುಂದರ ಹೂಗಳನ್ನು ಬೆಳೆಸುವದು ಅಸಾಧ್ಯವೆಂದು ಭ್ರಮಿಸಿದ್ದೆ. ಆದರೆ ನಂದ ಕೇಶರದಂತೆ ನಾಜೂಕಾಗಿದ್ದ ಗೊಂಡೆ ಬೀಜ ಮೊಳಕೆ ಒಡೆದು ಜೀವಕಳೆ ತುಂಬಿಕೊಂಡಾಗ ಹೊಸ ಆಸೆ ಮೂಡಿತು. ಅಬ್ಬರದಗಾಳಿ ಬೀಸಿದಾಗ, ನೀರು ಹನಿಸಿದಾಗ, ಸಸಿಗಳು ನೆಲಸಮವಾಗುತ್ತಿದ್ದರಿಂದ

ಬೀಜಗಳು ನಿತ್ರಾಣವಾಗಿವೆ ಅಂದುಕೊಂಡಿದ್ದೆ. ಆದರೆ ಕೇವಲ ನೀರನ್ನು ಕುಡಿದು, ಬಾಲ್ಯಾವಸ್ಥೆಯನ್ನು ಕಳೆದು ಮೈ-ಕೈತುಂಬಿಕೊಂಡು 'ಪುಷ್ಪವತಿ'ಯರಾದ ನಳನಳಿಸುವ ಗಿಡಗಳನ್ನು ಕಂಡಾಗ ನಿಸರ್ಗ ಅದೆಷ್ಟು ಅಮೋಘವಾಗಿದೆ! ಎಂದು ಅಚ್ಚರಿಪಟ್ಟೆ. ಒಂದು ದೇಟಿಗೆ ಮಳೆಯ ಹನಿಗಾತ್ರದ ಒಂದು ಮೊಗ್ಗು. ಅದರ ಹಚ್ಚ ಹಸಿರು ಕವಚಗಳು ತೆರೆಮುಕೊಳ್ಳುತ್ತಿದ್ದಂತೆ, ಒಳಗೆ ಅಡಗಿಕುಳಿತಿದ್ದ ಸುವರ್ಣವರ್ಣದ ಪಕಳೆಗಳೂ ಕಾಣಲಾರಂಭಿಸಿದವು. ಮುಂಜಾನೆಗಿಂತ ಸಂಜೆ, ಇಂದಿನಕ್ಕಿಂತ ನಾಳೆ ಹೂಗಳು, ಪ್ರಫುಲ್ಲವದನ ತಾಳಿದವು. ಆಚೆ ಈಚೆ ಬಳಕುತ್ತ, ಒಂದನ್ನೊಂದು ತಬ್ಬಿಕೊಳ್ಳುತ್ತ, ಮಂದಮಾರುತನನ್ನು ಬರಮಾಡಿಕೊಳ್ಳುತ್ತ. ಕಣ್ಣಿಗೆ ಹಬ್ಬವನ್ನುಂಟು ಮಾಡಲಾರಂಭಿಸಿದವು.

ಒಂದು, ಎರಡು, ಹತ್ತು, ಇಪ್ಪತ್ತು, ನೂರಾರು, ಹೂಗಳು ಹೊತ್ತುನಿಂತ ಗಿಡಗಳಿಗೆ ಪರ್ಣಗಳು ತೀರ ಕಡಿಮೆ ಇದ್ದುದರಿಂದ ದಾರಿಹೋಕರಿಗೂ ನಮ್ಮ ಮಹಡಿಯ ಬಾಲ್ಕನಿ, ಆಕರ್ಷಿಸಲಾರಂಭಿಸಿತು! ಪ್ರತಿಯೊಂದು ಹೂವೂ ಬೆಳೆದು ನಿಂತಾಗ, ಒಂದು ಬೊಗಸೆಯ ಗಾತ್ರದಷ್ಟು ಅಗಲವಾಗಿದ್ದವು. ಅವನ್ನು ನೋಡುತ್ತ ನಿಲ್ಲುವದೇ ಒಂದು ಅಪೂರ್ವ ಅನುಭವ, ಒಂದು ಹೂ ಇನ್ನೊಂದರಂತಿಲ್ಲ. ಅವುಗಳೆಲ್ಲ ಕೇಸರಿ ಬಣ್ಣದವು ಆದರೂ ಕೆಲವು ತಿಳಿಹಳದಿಯವು. ಇನ್ನೂ ಕೆಲವು ರಬ್ಬಾಗಿ ಶೋಭಿಸುತ್ತಿದ್ದವು. ಸಸ್ಯಶಾಸ್ತ್ರಜ್ಞರು ಇವನ್ನು ಸಂಯುಕ್ತ ಹೂ ಎಂದು ಗುರುತಿಸುತ್ತಾರೆ. ಅವುಗಳಲ್ಲಿ ಪಕಳೆಗಳು ಒಂದೊಂದು ಹೂವನ್ನು ಪೋಣಿಸಿದ ರೀತಿ ತೀರ ಚಮತ್ಕಾರಿಕವಾಗಿತ್ತು. ಮುತ್ತು, ರತ್ನ ವಜ್ರ, ಕೆಂಪುಮಣಿಗಳನ್ನು ಸುವರ್ಣಕಾರನು ಜೋಡಿಸಿ, ಭಾರಿ ಬೆಲೆಬಾಳುವ ಆಭರಣಮಾಡಿದರೂ ಕಾಸಿಲ್ಲದ ಈ ನೈಸರ್ಗಿಕ ಆಭರಣಕ್ಕೆ ಸರಿಸಾಟಿ ಇಲ್ಲವೆನಿಸಿತು.

ನಮ್ಮ ಊರಿನಲ್ಲಿ ದೀಪಾವಳಿಯ ದಿನ, ಹಂಡೆ, ಕೊಡಪಾನ ಚರಿಗೆಗಳನ್ನೆಲ್ಲ ಗೊಂಡೆ ಹೂವಿನ ಮಾಲೆಗಳಿಂದ ಅಲಂಕರಿಸುತ್ತಾರೆ. ಗೋ ಪೂಜೆಯ ದಿನ, ಇಂಥವೇ ಮಾಲೆಗಳಿಂದ ಸಿಂಗರಿಸುತ್ತಾರೆ. ಪುಷ್ಪಲೋಕದಲ್ಲಿ ಈ ಗೊಂಡೆ ಹೂ, ದೀನದಲಿತರ ವರ್ಗಕ್ಕೆ ಸೇರಿರುವದರಿಂದ ಜಾನವಾರಗಳಿಗೆ ತೊಡಿಸಲು ಉಪಯೋಗಿಸುತ್ತಾರೆ! ಎಂದುಕೊಂಡಿದ್ದೆ. ಆದರೆ ಗಿಡದಲ್ಲಿ ಪುಷ್ಕಳವಾಗಿ ಅರಳಿನಿಂತು ನಲಿಯುವ ಚೆಲುವನ್ನು ಕಂಡಾಗ ನನ್ನ ಅನಿಸುವಿಕೆಯಲ್ಲಿ ಹುರುಳಿಲ್ಲ ಎಂದು ಅನಿಸದೇ ಇರಲಿಲ್ಲ.

ಈ ಪುಟ್ಟ ಕೈದೋಟದಿಂದಾಗಿ ಅಲ್ಲಿ ಒಂದು ಹೊಸ 'ಜೀವವಿಶ್ವ' ತಲೆ ಎತ್ತಲಾರಂಭಿಸಿತು. ಸಸ್ಯ ತಗಣೆ (ಎಫಿಡ್) ಗಳಿಗೆ ರೆಕ್ಕೆಗಳಿದ್ದರೂ, ಅಬ್ಬರದ ಗಾಳಿಯ ನೆರವಿನಿಂದ ತೇಲುತ್ತ ಬಂದು ಪರ್ಣಗಳ ಮೇಲೆ ಬೇರುಬಿಟ್ಟವು. ವಾಸಸ್ಥಾನದಲ್ಲಿಯೇ ವಿಪರೀತ ಆಹಾರ ಲಭ್ಯವಿದ್ದರಿಂದ ಬೃಹತ್ ಪ್ರಮಾಣದಲ್ಲಿ ಸಂತಾನೋತ್ಪತ್ತಿಯಲ್ಲಿ ತೊಡಗಿದವು. ಈ ಗುಟ್ಟನ್ನು ಅದು ಹೇಗೋ ಇರುವೆಗಳು ಅರಿತು, ಆಹಾರ ಹುಡುಕುತ್ತಾ, ಅಡಿಗೆ ಮನೆಗೆ ದಾಳಿ ಇಡುವ ಬದಲಾಗಿ ಈ ಗಿಡಗಳನ್ನೇರಲಾರಂಭಿಸಿದವು! ತತ್ತರ ವೆತ್ತರ ನಡಿಗೆಯಲ್ಲಿ ಎಫಿಡ್‌ಗಳ ಸಮೂಹವನ್ನು ಗುರುತಿಸಿ ಅವುಗಳ ಬೆನ್ನುಗಳನ್ನು ತಮ್ಮ ಮೀಸೆಗಳಿಂದ ಸ್ಪರ್ಶಿಸಿ, ಈ ಸುಖದಿಂದ ಹೊರಹೊಮ್ಮಿಸಿದ ಸಿಹಿದ್ರವ್ಯವನ್ನು ಹೊತ್ತು ಗೂಡಿಗೆ ಧಾವಿಸಲಾರಂಭಿಸಿದವು. ಈ ಇರುವೆಗಳಿಗೆ ಆಸೆಪಟ್ಟು ಒಂದು 'ಮರಿಶಿವನಕುದುರೆ', ಹೂವಿನ ಮರೆಯಲ್ಲಿ ಅವಿತು ಕುಳಿತು ಭೋಜನ ನಡೆಸಲಾರಂಭಿಸಿತು.

ಉದ್ದಜಿಗಿತದಲ್ಲಿ ಸಹಜವಾಗಿ ಪ್ರಥಮಸ್ಥಾನ ಪಡೆಯಬಹುದಾದ 'ಚಿಟ್ಟೆ' ಮರಿಯೊಂದು ಎಲ್ಲಿಂದಲೋ ಜಿಗಿಯುತ್ತ ಬಂದು ದೊಡ್ಡದಾದ ಹೂವೊಂದರ ಮೇಲೆ ಆಕ್ರಮಣ ನಡೆಸಿತು. ಹಳದಿ ಹೂವಿನ ಮಧ್ಯದಲ್ಲಿ ಹಚ್ಚ ಹಸಿರು ಚಿಟ್ಟೆಯೊಂದು ಕುಳಿತು ಪ್ರತಿದಿನವೂ ಮುದನೀಡುತ್ತಿತ್ತು. ಕಶ್ರಗಿನ ಚಿಕ್ಕ ಮಿಶ್ರಿ ಜೇನ್ನೊಣಗಳು, ಮಧುವಿಗಾಗಿ ಆಸೆಪಟ್ಟು, ಹೂವಿನಿಂದ ಹೂವಿಗೆ ನುಗ್ಗಲಾರಂಭಿಸಿದವು. ಜೇನಿನ ಉತ್ಪಾದನೆಗೆ ಅತ್ಯವಶ್ಯವಿದ್ದ ಪರಾಗ ಕಣಗಳನ್ನು ಶೇಖರಿಸಲು ಜೇನ್ನೊಣಗಳು, ಭರ್ ಎಂದು ಹಾರಿ ಬಂದು ಅವಸರವಸರವಾಗಿ ಕಣಗಳನ್ನು ತಮ್ಮ ಹಿಂಗಾಲ ತಗ್ಗುಗಳಲ್ಲಿ ಸೇರಿಸಿ ಗೂಡಿಗೆ ಹಿಂದಿರುಗಿದವು. ಕುಬ್ಜ ಪತಂಗಗಳು, ವಿರಾಮವಾಗಿ ಹೂವುಗಳ ಮೇಲೆ ಆರೂಢವಾಗಿ ಮಧು ಹೀರಿ, ಮತ್ತವಾದಾಗ ತಮ್ಮ ರೆಕ್ಕೆಗಳನ್ನು ಬಿಚ್ಚುತ್ತ, ಮುಚ್ಚುತ್ತ, ತಾವು ಅದೆಷ್ಟು ಆಕರ್ಷಕ! ಎಂದು ಮೆರೆದವು. ಚಂಚಲ ಸ್ವಭಾವದ ಪತಂಗಗಳು ಎಲ್ಲಿಂದಲೋ ಹಾರುತ್ತ ಬಂದು ಹೂವುಗಳನ್ನು ಸ್ಪರ್ಶಿಸುತ್ತ ಬೇರೆಲ್ಲಿಗೋ ಹಾರಿಹೋದವು. ಈ ಕೀಟಗಳ ಹಾರಾಟ, ಜಿಗಿದಾಟಗಳನ್ನು ಕಂಡು, ಜೇಡ ಹುಳುವಿಗೆ ಬಾಯಿ ನೀರು ಬಂದಿರಬೇಕು. ಅಂತೆಯೇ ಅದೂ ಅವೆಲ್ಲ ಹಾರಿ ಬರುವ ದಾರಿಗೆ ಅಡ್ಡವಾಗಿ ಬಲೆಯೊಂದನ್ನು ಹೆಣೆಯಲು ಪ್ರಾರಂಭಿಸಿತು. ಅತ್ಯಂತ ಜಿನುಗಾದ ದಾರವನ್ನು ಹೊರಹೊಮ್ಮಿಸುತ್ತ ಒಂದು ಗಿಡದಿಂದ ಇನ್ನೊಂದಕ್ಕೆ ಚಲಿಸುತ್ತ. ಅಡಿಪಾಯ ಸಿದ್ಧವಾದ ನಂತರ ಚಕ್ರಾಕಾರದಲ್ಲಿ ಚಲಿಸಲಾರಂಭಿಸಿತು. ಶರೀರದ ಹಿಂಭಾಗದಿಂದ ಹೊರಹಾಕಿದ ಎಳೆಗಳನ್ನು ಹಿಂಗಾಲಿನಿಂದ ಒಂದನ್ನೊಂದು ಅದು ಜೋಡಿಸುತ್ತ ಹೋಗುವದು ಅತ್ಯಂತ ಚಮತ್ಕಾರಿಕವಾದದ್ದು! ನಮ್ಮ ಶಾಲೆ-ಕಾಲೇಜುಗಳಲ್ಲಿ ಜೀವಿಗಳ ಈ ಚಮತ್ಕಾರಿಕ ನಡಾವಳಿಕೆಗಳನ್ನು ಕೈ,ಕಾಲು ಮೀಸೆಗಳನ್ನು ಎಣಿಸಲು ಹಚ್ಚಿ ಪದವಿಯನ್ನು ದಯಪಾಲಿಸಿ ಕಳಿಸುತ್ತಾರೆ. ಅಂತೆಯೇ ಹೆಚ್ಚಿನ ವಿದ್ಯಾರ್ಥಿಗಳು ಪ್ರಾಣಿಜೀವನ ಕುರಿತು ಅಜ್ಞಾನಿಯಾಗಿಯೇ ಇರುತ್ತಾರೆ!

ಒಂದು ಮಧ್ಯಾಹ್ನ, ಗಿಡಗಳಿಗೆ ನೀರು ಹನಿಸಲು, ಬಾಲ್ಕನಿ ಬಾಗಿಲು ತೆರೆದಾಗ, ಹೂವುಗಳನ್ನೆಲ್ಲ ಹರಿದು, ಪಕಳೆಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಹರಡಿದ್ದನ್ನು ಕಂಡು, ಎದೆ ಝಲ್! ಎಂದಿತು. ಇಲ್ಲಿ ಮಕ್ಕಳು, ಮರಿ, ನೆರೆ-ಹೊರೆಯವರಾರೂ ಬರುವದು ಸಾಧ್ಯವಿಲ್ಲದ್ದರಿಂದ, ಈ ದುಷ್ಕೃತ್ಯವನ್ನು ಯಾರು ಮಾಡಿರಬಹುದು? ಎಂದು ಎಷ್ಟು ಯೋಚಿಸಿದರೂ ಹೊಳೆಯಲಿಲ್ಲ. ಮರುದಿನ ಮುಂಜಾನೆ ಬಾಲ್ಕನಿಯಲ್ಲಿ ಏನೋ ಸಪ್ಪಳ! ಹಠಾತ್ ಬಾಗಿಲು ತೆಗೆದಾಗ, ಗಂಡು ಇಣಚಿಯೊಂದು ಪಲಾಯನ ಮಾಡಿತು. ಕಳ್ಳನಾರು? ಎಂದು ಕೊನೆಗೂ ಪತ್ತೆ ಹಚ್ಚುವಂತೆ ಆದದ್ದರಿಂದ ನೆಮ್ಮದಿಯಾಯಿತು. ಅದು ಖಂಡಿತ ತಿರುಗಿ ಬರಲಿದೆ ಎಂದು ಅನಿಸಿದ್ದರಿಂದ ಕಿಡಕಿಯ ಹಿಂದೆ ಅವಿತು ನಿಂತು ಅದರ ಬರವನ್ನು, ಚಟುವಟಿಕೆಯನ್ನು, ಕಾಣಲು ಕಾತರದಿಂದ ಕಾದೆ. ಶ್ರೀರಾಮನ ಆಶೀರ್ವಾದವನ್ನು ಪಡೆದ ಅಳಿಲು, ಬಂದೇ ಬಂದಿತು! ಬಾಲವನ್ನು ಗಾಳಿಯಲ್ಲಿ ಹಾರಬಿಟ್ಟು ಹಿಂಗಾಲ ಮೇಲೆ ಮಂಡಿಯೂರಿ ಕುಳಿತು, ಮುಂಗಾಲಗಳನ್ನೆ ಕೈಯಾಗಿಸಿ, ಪಕ್ವವಾದ ಹೂವನ್ನು ಕಿತ್ತು ಅದರ ಒಡಲಲ್ಲಿ ಇರುವ 'ಕೊಬ್ಬರಿ'ಯಂತಹ ಬೀಜದ ಮೇಲೆ 'ನಾಶ್ತಾ' ನಡೆಸಿತು. ಹೀಗೆ ಮಾಡುತ್ತಿದ್ದಾಗಲೇ ಅನತಿದೂರದಲ್ಲಿ ಇಣಚಿ ಅಪ್ಸರೆಯೋರ್ವಳು, ಹೋಗುತ್ತಿರುವದನ್ನು ಕಂಡಿತು. ಈಗ ಹಸಿವನ್ನೂ ಮರೆತು, ಅವಳನ್ನು ಮರುಳುಗೊಳಿಸಲು, ನಾಗಾಲೋಟದಿಂದ ಹಿಂಬಾಲಿಸಿತು. ಹೂವುಗಳನ್ನು ಹರಿದು ಚೆಲ್ಲಾಪಿಲ್ಲಿ ಮಾಡಿದ್ದಕ್ಕೆ ಇಣಚಿಯ ಮೇಲೆ ರೇಗುವ ಬದಲಾಗಿ, ಇದೂ ಒಂದು ನಿಸರ್ಗದ ಪ್ರಕ್ರಿಯೆ ಅಲ್ಲವೇ? ಎಂದು ಅರಿವಾಗಿ ಸಮಾಧಾನವಾಯಿತು. ಅವಾಗಲೇ ಗಿಡಗಳು ಸಾಕಷ್ಟು ಹೂಗಳನ್ನು ಹೊರಗೆ ಹಾಕಿ ಮುದಿಯಾಗಿ ಒಣಗಲಾರಂಭಿಸಿದ್ದವು. ಅವುಗಳನ್ನೆಲ್ಲ ಕಿತ್ತುಹಾಕಿ, ಮಳೆ ಚೆನ್ನಾಗಿ ಬೀಳಲಾರಂಭಿಸಿದಾಗ, ಹೊಸ ಬೀಜ ಬಿತ್ತಲು ತಯಾರಿಮಾಡಿಕೊಂಡು ಕಾಯಲಾರಂಭಿಸಿದೆ.

(6-6-1996)



# ೪. ಸದಾಸಿದ್ಧ!

ನಿನ್ನ ವಯಸ್ಸಿಗೆ ನನ್ನ ವಯಸ್ಸಿನವರ ವಿಚಾರ ಸರಣಿಯನ್ನು ಅರಿತುಕೊಳ್ಳುವದು ತುಂಬ ಕಷ್ಟ! ನಾನು ಇದಾಗಲೇ ನಾಡಿನ ಜೀವನ ಮುಗಿಸಿ, ಕಾಡಿನ ಜೀವನಕ್ಕೆ ಅಣಿಯಾಗುತ್ತಿದ್ದೇನೆ. ಕಾಕಾರವರು ತಮ್ಮ ಅರವತ್ತೇಳನೆಯ ವರ್ಷಕ್ಕೆ ಸ್ವರ್ಗಸ್ಥರಾಗಿದ್ದರೆಂದು ಇಲ್ಲಿ ನೆನೆಸಿಕೊಳ್ಳಬಹುದು. ಇದಾಗಲೇ ನನ್ನ ಸಮವಯಸ್ಕರು, ಕೆಲಕಿರಿಯರೂ ಕೂಡ, ಸ್ವರ್ಗದ ಬಾಗಿಲು ತಟ್ಟಿ ಒಳಗೆ ಸೇರಿಕೊಂಡೂ ಆಯಿತು. ನನ್ನ ಸ್ನೇಹಿತ ಎಸ್.ಪಿ. ಆಚಾರ್ಯನ ನಿಧನದ ವಿಚಾರ ನಿನಗೆ ತಿಳಿಸಿಯೂ ಇದ್ದೇನೆ ಆಮ್ಮಾರ ಸಹೋದ್ಯೋಗಿ, ಲೇಖಕ, ಚಿಂತಕ, ಆಕಾಶವಾಣಿಯ ಎಮ್.ಎಸ್.ಕೆ. ಪ್ರಭು, ನನಗಿಂತ ಚಿಕ್ಕವರಾದರೂ ಯಮಧರ್ಮರಾಯ ಅವರನ್ನು ಸೆಳೆದುಕೊಂಡುಬಿಟ್ಟ. ಪಿ. ಲಂಕೇಶ್ ಕೂಡ ಹೋಗಿಬಿಟ್ಟರು. ದೂರದರ್ಶನದ ಶಿರಹಟ್ಟಿಯ ಪತ್ನಿ ನಾಲ್ಕು ಮಕ್ಕಳನ್ನು ಅನಾಥವಾಗಿಸಿ ನಡೆದೇ ಬಿಟ್ಟಳು! ಹೀಗೆ ಪರಿಚಿತರು. ಸರಿವಯಸ್ಕರು ಕಿರಿಯರೆಲ್ಲ ಸಾವನ್ನಪ್ಪುವದನ್ನು ಕಂಡಾಗ ನಾವೂ ಅದಕ್ಕಾಗಿ ಸದಾ ಸಿದ್ಧರಾಗಿಯೇ ಇರಬೇಕಲ್ಲವೇ? ಕಾಕಾ, ಸೀತಾರಾಮಣ್ಣರಂಥವರ ಸಾವು ಬರುವದಾದರೆ ನಾನು ಈ ಕ್ಷಣವೂ ಸಿದ್ಧನಾಗಿಯೇ ಇದ್ದೇನೆ. ನನಗೆ ಹೆಚ್ಚು ಕಾಲ ಬದುಕಿರಬೇಕು, ಎಂಬ ಯಾವ ಹಪಾಹಪಿಯೂ ಇಲ್ಲ. ಆದರೆ ಬದುಕಿ ಇದ್ದಷ್ಟು ಕಾಲ, ಆರೋಗ್ಯದಿಂದ ಇರಬೇಕೆಂಬ ಹಂಬಲ ಮಾತ್ರ ಖಂಡಿತ ಇದೆ. ಆದ್ದರಿಂದ ಸುರಕ್ಷಿತ ಅನಿಸದ ಯಾವ ಕೆಲಸವನ್ನೂ ಕೈಕೊಳ್ಳುವದಿಲ್ಲ. ಕಾಕಿಯವರನ್ನು ನೋಡಲು ಹೊನ್ನಾವರಕ್ಕೂ ಹೋಗದೇ ಮೂರು ವರ್ಷಗಳಾದವು. ಛಾಯಾಗ್ರಹಣಕ್ಕೆ ಬೇಕಾಗುವ ಸಾಮಗ್ರಿಗಳನ್ನು ಕೊಳ್ಳಲು ಮೆಜೆಸ್ಟಿಕ್‌ಗೆ ಕೂಡ ಹೋಗುವದಿಲ್ಲ. ಬನ್ನೇರಘಟ್ಟದ ಮಾರ್ಗದಲ್ಲಿರುವ ಮಾಲಿ, ಮಂಗಲಾರ ಮನೆಗೆ ಕೂಡ ಹೋಗುವ ಸಾಹಸ ಮಾಡಲಿಲ್ಲ.

ಇಂದಿನ ದಿನಗಳಲ್ಲಿ ಅತಿ ಕ್ರಮಬದ್ಧವಾದ ಜೀವನ ನಡೆಸುತ್ತಿದ್ದೇನೆ. ಬೆಳಗ್ಗೆ ನಾಲ್ಕು ಘಂಟೆಗೆ ಚಹಾ-ಟೋಸ್ಟ್ ಸೇವಿಸಿ ಕೆಲಸ ಪ್ರಾರಂಭಿಸುತ್ತೇನೆ, ಏಳು ಗಂಟೆಗೆ ಲಘುನಾಶ್ತಾ. ಹನ್ನೊಂದು ಗಂಟೆಗೆ ಊಟ. ನಂತರ ವಾಮಕುಕ್ಷಿ. ಒಂದು ಗಂಟೆಗೆ ಚಹ. ನಾಲ್ಕು ಗಂಟೆಗೆ ತಿಂಡಿ, ಸೂಪ್, ಸೇವಿಸಿ ಒಂದೆರಡು ಗಂಟೆ ತಿರುಗಾಟ ಮತ್ತು ಶಾಪಿಂಗ್. ಏಳುವರೆ ಗಂಟೆಗೆ ಅರೆ ಹೊಟ್ಟೆ ಊಟ. ಒಂಬತ್ತು ಗಂಟೆಗೆ ಮಲಗಿಬಿಡುತ್ತೇನೆ. ಹೊರಗೆ ಹೋಗುವಾಗ ನನ್ನ ವಿಳಾಸ, ಫೋನು ನಂಬರಗಳಿದ್ದ ಚೀಟಿಯನ್ನು ಸದಾ ಜೇಬಿನೊಳಗೆ ಇಟ್ಟುಕೊಂಡಿರುತ್ತೇನೆ. 'ಫೋಟೋತೀಟಿ'ಗೆ ರವೀಂದ್ರ ಕಲಾಕ್ಷೇತ್ರ, ಇನ್ನಿತರ ಕಡೆ ಹೋಗುವಾಗ, ಆಮ್ಮಾರನ್ನು ಕರೆದುಕೊಂಡು ಹೋಗುತ್ತೇನೆ. ಇಷ್ಟೊಂದು ಆರೋಗ್ಯದ ಕಾಳಜಿ ತೆಗೆದುಕೊಳ್ಳುತ್ತಿರುವದರಿಂದ ನನ್ನ ರಕ್ತ ಒತ್ತಡ, ಮಧುಮೇಹಗಳು ಸಂಪೂರ್ಣ ನಿಯಂತ್ರಣದಲ್ಲಿವೆ.

ಆದರೂ ಇದಕ್ಕಾಗಿ ಸೇವಿಸುವ ಔಷಧಗಳ ಪರಿಣಾಮವಾಗಿ, ಶರೀರದಲ್ಲಿ ಸಕ್ಕರೆಯ ಅಭಾವದಿಂದಾಗಿ, ಎಂದಾರೊಮ್ಮೆ ತಲೆ ಸುತ್ತುತ್ತಿರುತ್ತದೆ. ಪುಪ್ಪುಸಗಳಲ್ಲಿ ಕಫ ತುಂಬಿಕೊಳ್ಳುತ್ತಿರುತ್ತದೆ. ಈ ಕುರಿತು ಡಾಕ್ಟರರಿಗೆ ತೋರಿಸಿದಾಗ, "ಈ ವಯಸ್ಸಿಗೆ, ಹಾಗೂ ಔಷಧ ಸೇವನೆಗೆ ಇದು ಸಾಮಾನ್ಯ. ಪರಿಸರ ಮಾಲಿನ್ಯವೂ ಕಫಕ್ಕೆ ಕಾರಣ!" ಎಂದರು. ಆದರೆ ಒಮ್ಮೊಮ್ಮೆ ತಲೆ ಸುತ್ತಿಬಂದರೆ, ಸೇವಿಸಲು ಮಾತ್ರೆಗಳನ್ನು ಬರೆದುಕೊಟ್ಟಿದ್ದಾರೆ. ನಮ್ಮ ಅಜ್ಜನವರಿಗೆ, ಕಾಕಿಯವರಿಗೆ ಆಗಾಗ ತಲೆ ಸುತ್ತುವದು ಇತ್ತು, ಎಂದು ಇಲ್ಲಿ ಜ್ಞಾಪಿಸಿಕೊಳ್ಳಬಹುದು, ನಾನು ಎಲ್ಲಿಯೇ ಹೊರಗೆ ಹೋಗಲಿ, ಎಲ್ಲಿಗೆ ಹೋಗುತ್ತೇನೆ, ಯಾವಾಗ ಹಿಂದಿರುಗಬಹುದು. ಎಂದು ಅಮ್ಮಾಗೆ ಹೇಳಿಯೇ ಹೋಗುತ್ತೇನೆ. ಇಷ್ಟಾದರೂ ಬರಲು ಐದು ನಿಮಿಷ ತಡವಾದರೂ ಅಮ್ಮಾ ಕಾಳಜಿ ಮಾಡುತ್ತಾಳೆ!

ನಾವಿಬ್ಬರೂ ತುಳಿಯುತ್ತಿರುವ ಹಾದಿಯಿಂದ ಇನ್ನೂ ಕೆಲವರ್ಷ ಸುಸೂತ್ರವಾಗಿ ಹೋಗಬಹುದು ಎಂದು ಅನಿಸುತ್ತದೆ. ಆರೋಗ್ಯ ನೆಮ್ಮದಿಗಳ ಜೊತೆಗೆ ರಚನಾತ್ಮಕ ಚಟುವಟಿಕೆಗಳನ್ನು ನಡೆಸುತ್ತಿದ್ದೇನೆ. ಈ ಇಳಿವಯಸ್ಸಿನಲ್ಲಿ ಇದಕ್ಕೂ ಉತ್ತಮ ಜೀವನ ಹೇಗಿರುತ್ತದೆ? ಎಂದು ನಾನು ಬೇರೆ ಅರಿಯೆ! ದೇಹ ಗಟ್ಟಿಮುಟ್ಟಾಗಿ ಇದ್ದಾಗ, ಸಾಕಷ್ಟು ಅಲೆದಿದ್ದೇನೆ, ಬಗೆ ಬಗೆಯ ಸಾಹಸ ಮಾಡಿದ್ದೇನೆ. ಈಗ ಕೈಯಲ್ಲಿ ರುದ್ರಾಕ್ಷಿಮಾಲೆ ಹಿಡಿದು ಶಿವಶಿವ! ಎಂದು ಜಪಿಸುವ ಬದಲಾಗಿ ಕಾಗದ, ಪೆನ್ನು, ಕ್ಯಾಮರಾ ಹಿಡಿದು, ಇಷ್ಟುವರ್ಷ ಗಳಿಸಿದ ಅನುಭವ, ತರಬೇತಿ, ಮಾಹಿತಿಗಳ ಪ್ರಯೋಜನವನ್ನು ಪಡೆದುಕೊಳ್ಳಲು ಹವಣಿಸುತ್ತಿದ್ದೇನೆ. ಈ ಜೀವನದಿಂದ ವಂಚಿತನಾಗಿದ್ದರೆ, ಇಷ್ಟೊಂದು ಪುಲಕಿತನಾಗುತ್ತಿದ್ದೇನೆಂದು ನನಗನಿಸುವದಿಲ್ಲ. ಇಲ್ಲಿ ಇಲ್ಲದ ಯಾವ ಸುಖ, ಸಂತೋಷ, ನೆಮ್ಮದಿ ಅಮೇರಿಕೆಯಲ್ಲಿದೆ? ಎಂದು ತಿಳಿಯುವದಿಲ್ಲ. ನಿನ್ನ ಆಮಂತ್ರಣದಂತೆ ನಾನು ಅಮೇರಿಕೆಗೆ ಬಂದು, ನಿನ್ನ ಯಶಸ್ಸನ್ನು ಕಣ್ಣಾರೆ ಕಂಡು, ಅತಿಸಂತೋಷ ಪಡುತ್ತೇನೆ, ಎಂದು ನನಗನಿಸುವದೇ ಇಲ್ಲ. ಆದ್ದರಿಂದ ನೀನು ತಿರುತಿರುಗಿ ಅಮೇರಿಕೆಗೆ ಬರುವಂತೆ ಆಗ್ರಹಿಸುವದು ಸರಿಯಲ್ಲ. ನನಗೆ ಇದಕ್ಕಿಂತ ನೆಮ್ಮದಿಯ ಜೀವನ, ಬೇರೆಲ್ಲಿಯೂ ಸಿಗುವದೆಂದು ಅನಿಸುವದೇ ಇಲ್ಲ!

–ನಾನು ಜೀವನದುದ್ದಕ್ಕೂ ಸ್ವತಂತ್ರ ಜೀವನ ನಡೆಸಿದ್ದೇನೆ. ಹಣಕ್ಕಾಗಿ ಎಂದೂ ಕಾಕಾರಿಗೆ ತೊಂದರೆ ಕೊಡಲಿಲ್ಲ. ಪಿತ್ರಾರ್ಜಿತ ಆಸ್ತಿಯ ಪಾಲಿಗಾಗಿ ಸಹೋದರರನ್ನು ಕೇಳಲಿಲ್ಲ. ನನ್ನ ಹವ್ಯಾಸಗಳಿಗಾಗಿ ತಪ್ಪಿ ಕೂಡ ಅಮ್ಮಾರ ಸಂಬಳವನ್ನು ಬಳಸಿಕೊಳ್ಳಲಿಲ್ಲ. ಇಳಿವಯಸ್ಸಿನಲ್ಲಿ ಪುತ್ರನಿಂದ ಯಾವ ಸಹಾಯವನ್ನೂ ಕೋರಲಿಲ್ಲ. ಮುದಿವಯಸ್ಸಿನಲ್ಲಿ ಯೋಗಕ್ಷೇಮವನ್ನು ಬೇರೊಬ್ಬರು ನೋಡಿಕೊಳ್ಳಬೇಕು! ಎಂಬುದು ಸರಿಯಲ್ಲ. ಅಂತೆಯೇ ತೀರ ಅಸಹಾಯಕ ಸ್ಥಿತಿಯಲ್ಲಿ ಏನು ಮಾಡಬೇಕು? ಎಂದು ಯೋಚಿಸಿ ನಿರ್ಣಯವನ್ನು ಕೈಕೊಂಡಿದ್ದೇನೆ. ಕೈ–ಕಾಲುಗಳಲ್ಲಿ ಶಕ್ತಿ–ಸಾಮರ್ಥ್ಯಗಳು ಇರುವವರೆಗೆ 'ಶಶಿಕಿರಣ'ದಲ್ಲಿಯೇ ಇರುವದು. ಜನಬಲ ಬೇಕೇಬೇಕು! ಅನಿಸಿದಾಗ, ಸೋದರ, ಸೋದರಿಯರಲ್ಲಿ ಯಾರಾದರೂ ನೆರವಾಗುವಂತಿದ್ದರೆ ಹೊನ್ನಾವರ, ಕುಮಟಾಕ್ಕೆ ಹೋಗಿ ನೆಲೆಸುವದು. ಅಂತಹ ನೆರವು ಸಿಗುವ ಸಾಧ್ಯತೆ ಇಲ್ಲದಿದ್ದರೆ, ಬೆಂಗಳೂರಿನ ಆಸುಪಾಸಿನಲ್ಲಿ ತಲೆ ಎತ್ತುತ್ತಿರುವ ವೃದ್ಧಾಶ್ರಮದಲ್ಲಿ, ಆಶ್ರಯ ಪಡೆಯುವದು ಎಂದು ನಿರ್ಧರಿಸಿದ್ದೇನೆ. ಇದಕ್ಕಾಗಿ ಪೆನ್ಶನ್, ಹಾಗೂ ಉಳಿತಾಯವನ್ನು ಖರ್ಚಿಗೆ ಮೀಸಲಿಟ್ಟಿದ್ದರಿಂದ ತಲೆ ಕೆಡಿಸಿ ಕೊಳ್ಳಬೇಕಾಗಿಲ್ಲ,

೧೯೯೦ರಲ್ಲಿ ನೀನು ಅಮೇರಿಕೆಗೆ ಹೊರಟು ನಿಂತಾಗಲೇ ನೀನು ತಿರುಗಿ ಬಂದು ನಮ್ಮೊಡನೆ ಬಾಳುವೆ ನಡೆಸುವ ಸಾಧ್ಯತೆ ತೀರ ಕಡಿಮೆ! ಎಂದು ಅಮ್ಮಾರಿಗೆ ಮನವರಿಕೆ ಮಾಡಿದ್ದೆ. ಆದರೆ ನೀನು ನಂಬಿರಲಿಲ್ಲ. ಅಷ್ಟೇ ಅಲ್ಲ, ತಿರುಗಿಬರುವದು ಖಂಡಿತ! ಎಂದು ಆಗಾಗ ಪತ್ರ ಬರೆದು ಆಸೆಯ ಸಸಿ ಕಮರಿ ಹೋಗದಂತೆ ಮಾಡುತ್ತಿದ್ದಿ. ನಂತರದ ವರ್ಷಗಳಲ್ಲಿ ನಡೆದ ಘಟನೆಗಳು ನನ್ನ ಮೂಲ ಅಭಿಪ್ರಾಯದ ಸತ್ಯಾಂಶವನ್ನು ಎತ್ತಿ ತೋರಿಸುತ್ತವೆ. ನಿನ್ನ ಜೀವನವನ್ನು ರೂಪಿಸಿಕೊಳ್ಳುವ ಅಧಿಕಾರ ನಿನಗೆ ಇದ್ದೇ ಇದೆ. ಇದಕ್ಕೆ ಯಾವ ರೀತಿಯ ಅಡ್ಡಿ, ಆತಂಕಗಳು ಬರದಂತೆ ಎಚ್ಚರಿಕೆ ವಹಿಸುತ್ತಲೇ ಬಂದಿದ್ದೇನೆ. ಅಂತೆಯೇ ೧೯೯೭ರಲ್ಲಿ ಕೊನೆಯಲ್ಲಿ ರಕ್ತಪೂರೈಕೆಯ ಅಭಾವದಿಂದ ನನ್ನ ಆರೋಗ್ಯ ಒಮ್ಮೊಮ್ಮೆ ಕೆಟ್ಟಾಗಲೂ, ನೀನು ಇಲ್ಲಿ ಧಾವಿಸಿಬಾರದಂತೆ ಎಚ್ಚರಿಕೆ ವಹಿಸಿದ್ದೆ. ನಾನು ಇಂದು ಇದ್ದೇನೆ: ನಾಳೆ ಇಲ್ಲ, ಆದ್ದರಿಂದ ನನಗಾಗಿ ನೀನು ಒಂದಿಷ್ಟೂ ತ್ಯಾಗ ಮಾಡುವದು ನನಗೆ ಇಷ್ಟವಿಲ್ಲ. ನಿನಗೆ ಯಾವುದು ಸರಿಹೋಗುತ್ತದೋ ಹಾಗೆ ಮಾಡುವಲ್ಲಿ ನೀನು ಸ್ವತಂತ್ರ. ಬೇರೆಯವರು ಏನು ಅಂದುಕೊಂಡಾರು! ಎಂದು ನೀನು ಅಳುಕಬೇಕಾಗಿಲ್ಲ. ಈ ಪತ್ರದಲ್ಲಿ ಬರೆದ ಅನೇಕ ವಿಚಾರಗಳನ್ನು ನಿನಗೆ ಈಗಾಗಲೇ ಬರೆದಿದ್ದೇನೆ. ನೀನು ಓದಿ ಮರೆತಿರಬೇಕು.

ಯಾವುದೇ ಕಾರಣಕ್ಕೆ ನೀನು ಭಾರತಕ್ಕೆ ಮರಳಿ ಬರುವದಾಗಲಿ, ಇಲ್ಲಿ ಸ್ಥಾಯಿಯಾಗುವದಾಗಲಿ ವಿಚಾರ ಮಾಡಿದರೆ, ಅದಕ್ಕೂ ಸಂಪೂರ್ಣ ಸ್ವಾಗತ. ನಾವು ಮನೆಯನ್ನು ನಿನಗೆ ಬಿಟ್ಟುಕೊಟ್ಟು, ಧಾರವಾಡದ ಮನೆ ರಿಪೇರಿ ಮಾಡಿಸಿಕೊಂಡು ಅಲ್ಲಿ ಹೋಗಿ ಇರುತ್ತೇವೆ. ಇಲ್ಲವೇ ಹೊಸ್ಪಾವರದಲ್ಲಿ ಪುಟ್ಟ ಮನೆ ಕಟ್ಟಿಸುತ್ತೇವೆ. ಇಲ್ಲವೇ ಕೊಂಡುಕೊಳ್ಳುತ್ತೇವೆ. ನನ್ನ, ನಮ್ಮ ಭವಿಷ್ಯ ಯೋಜನೆಯನ್ನು ವಿವರವಾಗಿ ಬರೆದಿದ್ದೇನೆ. ನೀನು ನಿನ್ನ ಭವಿಷ್ಯದ ಬಗ್ಗೆ ಗಂಭೀರವಾಗಿ ಯೋಚಿಸಿ ನಿರ್ಧಾರಕ್ಕೆ ಬಂದು ಕಾರ್ಯೋನ್ಮುಖಿಯಾಗು. ಅಮೇರಿಕೆಯ ಜೀವನವೇ ನಿಜವಾದ ಸುಖದ ಅಥವಾ ನೆಮ್ಮದಿಯ ಜೀವನ. ಭಾರತದಲ್ಲಿ ಇರುವವರೆಲ್ಲ ಅಜ್ಞಾನಿಗಳು, ಸುಖದ ನೆಲೆ ಕಂಡರಿಯದವರು! ಎಂಬ ಮಾತನ್ನು ನಾನು ಒಪ್ಪುವದೇ ಇಲ್ಲ. ನೆಮ್ಮದಿಯ ಜೀವನ ನಡೆಸುವದು ನಮ್ಮ ಕೈಯಲ್ಲಿಯೇ ಇದೆ. ಇಂದಿನ ಪೀಳಿಗೆಯವರೆಲ್ಲ ಏನೇನೋ ಕನಸುಗಳನ್ನು ಕಟ್ಟಿಕೊಂಡು ಅಮೇರಿಕೆಗೆ ಧಾವಿಸುವದನ್ನು ನೋಡಿದಾಗ, ಅಯ್ಯೋ! ಎಂದು ಅನಿಸದೇ ಇರುವದಿಲ್ಲ. ಒಮ್ಮೆ ಹೋದ ಬಳಿಕ, ತಿರುಗಿ ಇಲ್ಲಿ ಬರಲು ಮನಸ್ಸು ಮಾಡುವದಿಲ್ಲ. ಸ್ವತಃ ಅಮೇರಿಕನ್ನರಿಗೆ ಧನಪಿಶಾಚಿ ಬೆನ್ನತ್ತಿ ಲೌಕಿಕ ಸುಖಗಳ ಮೋಹ ಹತ್ತಿಸಿ ಈಗ ಜೀವನವೆಂದರೆ ಇಷ್ಟೇನೆ? ಎಂದು ಬರಡು ಭಾವನೆ ಬೆಳೆಯುತ್ತಿದೆಯಂತೆ. ಅವರಲ್ಲಿ ಕೆಲವರಾದರೂ ಭಾರತೀಯರಿಂದ ಅಧ್ಯಾತ್ಮವಿದ್ಯೆ, ದೈವಭಕ್ತಿಗಳನ್ನು ಕಲಿಯಲಾರಂಭಿಸಿದ್ದಾರೆ! ಎಂದು ಅಪ್ಪಟ ಅಮೇರಿಕನ್‌ಳಾದ ಕಾರ್ಲಾ ಕಿಂಗ್, ಹೇಳಿದಾಗ ನೆಮ್ಮದಿ ಅನಿಸದೇ ಇದ್ದೀತೆ? (02-03-2000)



## ಶ್ರೀ ಮಲ್ಲಿಕಾರ್ಜುನ ಅವರಿಗೆ ಬರೆದ ಪತ್ರಗಳು

### ಪತ್ರ ೧. (ತಾ॥ ೨೭-ಡಿಸೆಂಬರ್ ೨೦೦೧)

ನಿಮ್ಮ ೨೪-೧೨-೨೦೦೧ ರ ಪತ್ರ ಮುಟ್ಟಿ ಖುಷಿಯಾಯಿತು. ಯಾಕೆ ಗೊತ್ತೆ? ಇಂದಿನ ಟಿ.ವಿ./ಇಂಟರ್‌ನೆಟ್ ಯುಗದಲ್ಲಿಯೂ ಪುಸ್ತಕಗಳನ್ನು ಓದುವ ಹವ್ಯಾಸ ಇಟ್ಟುಕೊಂಡವರು ಇದ್ದಾರೆ ಎಂದು. ಇಪ್ಪತ್ತು ಪುಸ್ತಕಗಳನ್ನು ಪ್ರಕಟಿಸಿದ ನಂತರವೂ ಕನ್ನಡ ಲೇಖಕನಿಗೆ ಆಗುವ ತೃಪ್ತಿ, ನೆಮ್ಮದಿಗಳ ಬಗ್ಗೆ ನನಗೆ ಶಂಕೆ ಬೆಳೆಯುತ್ತಲೇ ಇದೆ ಎಂದರೆ ನಂಬುವಿರಾ? ಪ್ರಕಟಿತ ಪುಸ್ತಕಗಳ ಪ್ರತಿಗಳು ಲಭ್ಯವೇ ಇಲ್ಲವೆಂದು ತಿಳಿಸದೇ ಇರುವ ಪ್ರಕಾಶಕರು, ಗೌರವಧನ ಕೊಡುವ ಮಾತು ದೂರವೇ ಉಳಿಯಿತು! ಇದರಿಂದಾಗಿ ನನ್ನ ಹೆಚ್ಚಿನ ಕೃತಿಗಳ ಪ್ರತಿಗಳು ಸಿಗುತ್ತಿಲ್ಲ! ಎಂದು ವಿಷಾದದಿಂದಲೇ ಹೇಳಬೇಕಾಗುತ್ತದೆ. ಪ್ರತಿಗಳಿಗಾಗಿ ನೀವು ಪ್ರಕಾಶಕರಿಗೆ ಬರೆದು, ಅದಕ್ಕವರು ಉತ್ತರ ಬರೆಯುವ ಸೌಜನ್ಯ ತೋರಿಸಿದರೆ, ಅದೇ ಪುಣ್ಯ! ಎಂದು ತಿಳಿಯಬೇಕು.

1) ಭಗ್ನ ಸ್ವಪ್ನ 2) ನಾ ರಾಜಸ್ಥಾನದಲ್ಲಿ 3) ಕಾಪಿಕಲೆ ಪುಸ್ತಕಗಳು ಸಿಗುವ ಸಾಧ್ಯತೆ ತೀರ ಕಡಿಮೆ. 'ಪುಸ್ತಕಾಲಯ'ದವರು ಪ್ರಕಾಶನ ಮುಚ್ಚಿ ತಮ್ಮಲ್ಲಿದ್ದ ಎಲ್ಲ ಪ್ರತಿಗಳನ್ನೂ 'ಸಮಾಜ ಪುಸ್ತಕಾಲಯ ಧಾರವಾಡ 580001' ದವರಿಗೆ ಕೊಟ್ಟುಬಿಟ್ಟು ಕೈ ತೊಳೆದುಕೊಂಡಿದ್ದಾರೆ. ನನಗೆ ತಿಳಿದಮಟ್ಟಿಗೆ 'ಪಶು ಪಕ್ಷಿ ಪ್ರಪಂಚ' ಪ್ರತಿಗಳೂ ಸಿಕ್ಕುತ್ತಿಲ್ಲ. ಉಳಿದವುಗಳಿಗೆ ಸಮಾಜ ಪುಸ್ತಕಾಲಯದವರಿಗೆ ಬರೆದು ವಿಚಾರಿಸಬಹುದು. 'ಸರ್ಪ ಸಂಕುಲ' ಪ್ರಕಾಶಿಸಿದ್ದಾರೋ ಇಲ್ಲವೋ ಅದೂ ತಿಳಿದಿಲ್ಲ! 'ಇರುವೆಯ ಇರವು' ಹಾಗೂ 'ಕಾಗೆಯ ಕಾಯಕ' ಕೃತಿಗಳನ್ನು 'ಪ್ರಿಸಮ್ ಬುಕ್ ಹೌಸ್, ಪ್ರೈ ಲಿ. ನಂ1865, 32ನೇ ಕ್ರಾಸ್, ಬನಶಂಕರಿ ಎರಡನೆ ಹಂತ, ಬೆಂಗಳೂರು 560 070 ಇವರಿಂದ ಪಡೆಯಬಹುದು. 'The Timeless Theatre' ಇದು ನಮ್ಮ ಸಿ.ಡಿ. ರೊಮ್' ಅಮೇರಿಕೆಯಲ್ಲಿ ಇದಕ್ಕೆ ೬೦ ಡಾಲರ್ ಬೆಲೆ ಇಡಲಾಗಿದೆ. ಶೇಕಡಾ ೫೦% ರಷ್ಟು ರಿಯಾಯಿತಿ ಪಡೆದರೂ ಮೂವತ್ತು ಡಾಲರುಗಳಾಗುತ್ತವೆ!

ನನ್ನ ಪತ್ನಿಯ ಕೃತಿಗಳಾದ 'ಸಂಸಾರದಲ್ಲಿ ಸ್ವಾರಸ್ಯ', 'ಕರ್ನಾಟಕ ಶಿಕ್ಷಣ ಪರಂಪರೆ' ಹಾಗೂ Social Life in Medieval Karnataka' ಪ್ರತಿಗಳು ಸಿಗುತ್ತಿಲ್ಲ. 'ನೆನಪಿನಲಿ ನಿಂತವರು' ಕೃತಿಯನ್ನು 'ಮಹಿಳಾ ಸಾಹಿತ್ಯಿಕಾ', ಕಾರ್ತಿಕಶ್ರೀ ೨೭, ಎಚ್.ಆಯ್.ಜಿ. ನವನಗರ, ಹುಬ್ಬಳ್ಳಿ 580 025 ಇವರಿಂದ ಪಡೆಯಬಹುದಾಗಿದೆ. ಪುಸ್ತಕಾಲಯ ಪ್ರಕಟಿಸಿದ ಕೃತಿಗಳಿಗಾಗಿ ಧಾರವಾಡದ ಸಮಾಜ ಪುಸ್ತಕಾಲಯದವರನ್ನು ವಿಚಾರಿಸಬಹುದು.

ನಮ್ಮ ಇಂಟರ್‌ನೆಟ್‌ಗೆ ಪ್ರತಿವಾರವೂ ಸಚಿತ್ರ ಲೇಖನಗಳನ್ನು ಕಳಿಸುತ್ತಲೇ ಇರಬೇಕಾದ್ದರಿಂದ ನನಗೆ ಇನ್ನಿತರ ಚಟುವಟಿಕೆಗಳಿಗೆ ಬಿಡುವು ಸಿಗುವದಿಲ್ಲ. ಅದರಿಂದ ಇನ್ನಿತರರಿಗೆ ಛಾಯಾಗ್ರಹಣ, ಚಿತ್ರಕಲೆ, ಕಲಿಸುವ ಮಾತು ದೂರವೇ ಉಳಿಯಿತು. ಅದೆಷ್ಟೋ ಕಾಲ ನಾನು ಪ್ರಸಿದ್ಧಿ ಪ್ರಚಾರಗಳಿಂದ ದೂರವೇ ಇದ್ದೆ. ಆದರೆ ಉದಯ ಟಿ.ವಿ. ಅವರ ಸಂದರ್ಶನ ಇದನ್ನೆಲ್ಲ ಬದಲಿಸಿಬಿಟ್ಟಿತು! ದಾರಿಹೋಕರು ಕೂಡ ಆಗೊಮ್ಮೆ ಈಗೊಮ್ಮೆ ನೀವೇ ಡಾ। ಕೃಷ್ಣಾನಂದ ಕಾಮತರು ಇದ್ದಿರಬೇಕು. ಇಲ್ಲದಿದ್ದರೆ ಇಷ್ಟು ಪ್ರತಿಭೆಯಿದ್ದಾತ ಅಸಾಧ್ಯವಾದ ಜನಸಾಮಾನ್ಯನಂತೆ ಚೀಲ ಹೊತ್ತು ನಡೆದೇ ಹೋಗುವದು ಇನ್ನಿತರರಿಗೆ ಅಸಾಧ್ಯವಾದ ಮಾತು!' ಎಂದು ನೀಡುವ ತೀರ್ಪನ್ನು ಆಗೀಗ ಕೇಳುವ ಸಂದರ್ಭಗಳು ಬರುವದುಂಟು.

ನಿಮಗೆ ಇನ್ನೇನಾದರೂ ಮಾಹಿತಿ ಬೇಕಿದ್ದರೆ ತಿಳಿಸಿ. ಖಂಡಿತ ಕಳಿಸಿಕೊಡುತ್ತೇನೆ. ಇದಕ್ಕಾಗಿ ಸ್ವವಿಳಾಸದ ಕಾರ್ಡು, ಕವರು ಕಳಿಸಬೇಕಾಗಿಲ್ಲ.!!!!

❑

## ಪತ್ರ ೨. (ತಾ।। ೨೧, ಜನವರಿ ೨೦೦೨)

ಹೆಚ್ಚಿನ ಅಭಿಮಾನವಿಟ್ಟು ನೀವು ಬರೆದ ೬-೧-೨೦೦೨ ರ ಪತ್ರ ಆತ್ಮೀಯವೆನಿಸಿತು. "ಪ್ರಸಿದ್ಧಿ ಪ್ರಚಾರ ಪರಾಙ್ಮುಖಿ" ಎಂದು ನನಗೆ ಬಿರುದು ಸಂದಿದೆ! ಹೀಗಾಗಿ ಓರ್ವನೇ ಓದುಗನಿಂದ ಮೆಚ್ಚಿಗೆಯ ಪ್ರತಿಕ್ರಿಯೆ ಬಂದಾಗ ಗೆಲುವಾಗದೇ ಇರುತ್ತದೆಯೇ?

'ಪ್ರೇಯಸಿಗೆ ಪತ್ರಗಳು' ನಿಮಗೆ ಇಷ್ಟವಾದರೆ ಸಂತಸದ ಸಂಗತಿ. ಅನೇಕ ಪ್ರತಿಭಾವಂತರು (ಕೆ.ವಿ. ಸುಬ್ಬಣ್ಣ, ಬಿ.ವಿ. ಕಾರಂತ, ರಾಜೀವ ತಾರಾನಾಥ, ಕುಬಾರ) ಅದನ್ನು ಕೊಂಡಾಡಿದ್ದಾರೆ. 'ಕಸ್ತೂರಿ' ಮಾಸ ಪತ್ರಿಕೆ, ಪುಸ್ತಕ ವಿಭಾಗದಲ್ಲಿ ಅದನ್ನು ಸಂಗ್ರಹಿಸಿ ಪ್ರಕಟಿಸಿತು. ಪ್ರೇಯಸಿ ಪತ್ನಿಗೆ ಆ ಪತ್ರಗಳನ್ನು ಬರೆಯುತ್ತಿದ್ದ ದಿನಗಳಲ್ಲಿ ನಾನು ಒಂದು ಶಬ್ದ ಅಕ್ಷರವನ್ನು ಎಲ್ಲೂ ಪ್ರಕಟಿಸಿರಲಿಲ್ಲ! ಅಲ್ಲದೇ ನನ್ನಿಂದ ಸಾಹಿತ್ಯ ನಿರ್ಮಾಣ ಸಾಧ್ಯ! ಎಂತಲೂ ತಿಳಿದಿರಲಿಲ್ಲ. ವರ್ಷಗಳ ಬಳಿಕ ಈ ಪತ್ರಸಂಕಲನ ಪ್ರಕಟಗೊಂಡಾಗ, ಪ್ರಕಾಶನಕ್ಕಾಗಿಯೇ ಬರೆದ ಪತ್ರಗಳು! ಎಂಬ ತೀರ್ಪನ್ನು ಒಂದು ಪತ್ರಿಕೆ ಕೊಟ್ಟುಬಿಟ್ಟಿತು. ಆದರೆ ಅವನ್ನು ಬರೆದ ೩೫ ವರ್ಷಗಳ ಬಳಿಕವೂ ಅಲ್ಲಿ ಉಲ್ಲೇಖಿತ ಜೀವನವನ್ನೇ ನಾವು ನಡೆಸುತ್ತಿರುವದು ನಮ್ಮ ವೈಶಿಷ್ಟ್ಯ. ಇಂದಿಗೂ ನಮ್ಮಲ್ಲಿ ರೆಫ್ರಿಜರೆಟರ್, ಟೆಲಿವಿಜನ್, ಕಂಪ್ಯುಟರ್, ಅಥವಾ ಯಾವುದೇ ವಾಹನ ಇಲ್ಲವೆಂದರೆ ನಂಬುವಿರಾ? ನಾನು ಎಲ್ಲೆಡೆ ಕಾಲು ನಡಿಗೆಯಿಂದಲೇ ಹೋಗಿ ಬರುತ್ತೇನೆ.

ಇನ್ನೂ ೫ ಸಂಕಲನಗಳಾಗುವಷ್ಟು ಪತ್ರ ಸಂಪತ್ತು ನಮ್ಮಲ್ಲಿದೆ. ಅವುಗಳಲ್ಲಿ ಸಾಹಿತ್ಯದೊಂದಿಗೆ ಜೀವನ ಮೌಲ್ಯಗಳೂ ಇವೆ. ಇಂಥ ಪತ್ರಗಳನ್ನು ಪ್ರಕಟಿಸಲು ವಾರ-ಪತ್ರಿಕೆಯೊಂದು ಮುಂದೆ ಬಂದಾಗ ನೆಮ್ಮದಿಯೆನಿಸಿತ್ತು. ಆದರೆ ಕೊನೆಗೆ ಎಲ್ಲ ಸೇರಿಸಿ ಒಂದೇ ಒಂದು ಲೇಖನ ಬರೆದು ಕಳಿಸಿ! ಎಂದು ತಿಳಿಸಿದಾಗ ಸಂಪಾದಕರ ಜಿಪ್ಪುತನಕ್ಕೆ ಮರುಗದೇ ಬೇರೆ ಏನೂ ಮಾಡುವಂತಿರಲಿಲ್ಲ. ನಂತರ ಪತ್ರ ಪ್ರಕಟನೆಯ ಯತ್ನವನ್ನು ಬಿಟ್ಟುಬಿಟ್ಟೆ. ಕನ್ನಡ ಸಾಹಿತ್ಯ ಸಮ್ಮೇಳನಗಳಿಗೆ ಲಕ್ಷ! ಕೋಟಿ ರೂಪಾಯಿಗಳ ಹೊಳೆ ಹರಿಸುತ್ತಾರೆ ಅದರಲ್ಲಿ ಕಿಂಚಿತ್ ಅಂಶವನ್ನು ಅಪರೂಪದ ಸಾಹಿತ್ಯ ಪ್ರಕಟನೆಗೆ ಬಳಸಬಹುದಿತ್ತು.

ಅಮೇರಿಕೆಯ ಪ್ರವಾಸಕಥನ, ನನ್ನ ಚೊಚ್ಚಲು ಕೃತಿ. ಅದು ಆರು ಆವೃತ್ತಿಗಳನ್ನು ಕಂಡಿದೆ. ಎರಡು ವಿಶ್ವವಿದ್ಯಾಲಯಗಳು ಪಠ್ಯಪುಸ್ತಕವನ್ನಾಗಿಸಿದವು. ಕರ್ನಾಟಕ ರಾಜ್ಯ ಸಾಹಿತ್ಯ ಆಕಾಡೆಮಿ ಪ್ರಶಸ್ತಿ ಬಂದಿತು. 'ಪುಟ-ಬಂಗಾರ'ದಲ್ಲಿ ೫೦ ವರ್ಷಗಳ ಉತ್ತಮ ಕೃತಿಗಳಲ್ಲಿ ಒಂದೆಂದು ಪುನರ್ ಮುದ್ರಿತವಾಗಿದೆ. ಪ್ರಕಟಗೊಂಡು ಮೂವತ್ತು ಮೂರು ವರ್ಷಗಳು ಕಳೆದರೂ ಜನಪ್ರಿಯತೆ ಕುಂದಿಲ್ಲ. ಆದರೂ ಪ್ರತಿಗಳು ಲಭ್ಯವಿಲ್ಲ! ನಿಮ್ಮಿಂದಲೇ, ಪ್ರಕಾಶಕರು ಅದರ ಮರುಮುದ್ರಣದ ವಿಚಾರದಲ್ಲಿದ್ದಾರೆ, ಎಂದು ತಿಳಿದು ನೆಮ್ಮದಿಯಾಯಿತು.

೧೯೬೧ರಲ್ಲಿ ನನ್ನ ಪ್ಲಾಸಿಕೀಟಗಳ ಕದನ ಮುಗಿಸಿ ಮುಂದೇನು? ಎಂದು ಯೋಚಿಸುತ್ತ ಬೆಂಗಳೂರಿಗೆ ಬಂದು 'ವೈಜ್ಞಾನಿಕ ಛಾಯಾಗ್ರಹಣ' ವನ್ನು ವೃತ್ತಿ ಸೇವೆ ಎಂದು ಪ್ರಾರಂಭಿಸಿದೆ. ಈ ಕ್ಷೇತ್ರದಲ್ಲಿ ನನಗೆ ಯಾವುದೇ ತರಬೇತಿ, ಅನುಭವಗಳೂ ಇರಲಿಲ್ಲ. ಆದರೆ ಹುಚ್ಚು ಧೈರ್ಯಕ್ಕೆ ಕೊರತೆ ಇರಲಿಲ್ಲ. ಶ್ರಮವಹಿಸಿ ಹಗಲು-ರಾತ್ರಿ ದುಡಿದು ಯಶಸ್ಸನ್ನು ನನ್ನದಾಗಿಸಿದೆ. ಬೆಂಗಳೂರಿನ ಅನೇಕ

ಸಂಶೋಧನಾಲಯಗಳು ವೈಜ್ಞಾನಿಕ ಛಾಯಾಗ್ರಹಣದಲ್ಲಿ ನನ್ನ ನೆರವನ್ನು ಯಾಚಿಸಿದವು. ಕೆಲವೊಮ್ಮೆ ಮೈಸೂರು, ತಿರುಪತಿ, ಮುಂಬೈಗಳಿಂದಲೂ ಬೇಡಿಕೆ ಬಂದದ್ದುಂಟು, ಕಾಲು ಶತಮಾನದ ತನಕ ಈ ಸೇವೆ ಸಲ್ಲಿಸಿ ೧೯೯೫ರಲ್ಲಿ ಮಂಗಳ ಹಾಡಲೇ ಬೇಕಾಯಿತು.

ಸುಂದರವಾದ ಹಸ್ತಾಕ್ಷರ, ಚಿತ್ರಕಲೆ, ಛಾಯಾಗ್ರಹಣಗಳಲ್ಲಿ ಆಸಕ್ತಿ ಮುಂತಾದವುಗಳಿಂದ ನೀವೂ ಒಳ್ಳೆಯ ಬರಹಗಾರನಾಗಬಹುದಾಗಿದೆ. ಆದರೆ ಕನ್ನಡ ಬರಹಗಾರನಿಗೆ ಆದಾಯದ ಅಥವಾ ಪ್ರತಿಫಲದ ಆಸೆ ಇರಲೇ ಕೂಡದು! ಎಂದು ಮೊದಲಲ್ಲೇ ಹೇಳಿಬಿಡುತ್ತೇನೆ. ಈಗ ನಾನು ಲೇಖನ, ಪುಸ್ತಕ ಪ್ರಕಟನೆ ಹಿಂದೆ ಹಾಕಿ ಇಂಟರನೆಟ್ ವೆಬ್‌ಸೈಟನ್ನು ಕಳೆದ ನಾಲ್ಕು ವರ್ಷಗಳಲ್ಲಿ ನನ್ನ ಮಾಧ್ಯಮವನ್ನು ಮಾಡಿಕೊಂಡು 'ವಿಶ್ವಮಾನವನಾಗಿ ಬಿಟ್ಟಿದ್ದೇನೆ! ಪ್ರತಿದಿನ ಹದಿನೈದರಿಂದ ಐವತ್ತು ಸಹಸ್ರ ವೀಕ್ಷಕರು ವಿಶ್ವದಾದ್ಯಂತ ನೋಡುತ್ತಾರೆ. ಅಲ್ಲದೇ ತಮ್ಮ ಅನಿಸಿಕೆಗಳನ್ನು 'ಈ ಮೇಲ್' ಮುಖಾಂತರ ತಿಳಿಸುವ ಸೌಜನ್ಯ ತೋರುತ್ತಾರೆ. ಮೊನ್ನಿನ ನಮ್ಮ ೫೪ನೇ ಸ್ವಾತಂತ್ರ್ಯೋತ್ಸವದ ದಿನ ಎಂಬತ್ತು ಸಹಸ್ರ ನೋಡುಗರು ನಮ್ಮ ವೆಬ್‌ಸೈಟ್ ವೀಕ್ಷಿಸಿ ಹೊಸ ದಾಖಲೆ ನಿರ್ಮಿಸಿದರು. ಇಂದಿನ ದಿನಗಳಲ್ಲಿ ನನ್ನ ಕೆಲ ಲೇಖನಗಳು ಸ್ಪ್ಯಾನಿಶ್, ಜರ್ಮನ್, ರಶಿಯನ್, ಸಂಸ್ಕೃತ ಭಾಷೆಗಳಲ್ಲೂ ಅನುವಾದಗೊಳ್ಳುತ್ತಿವೆ. ನನ್ನ ಬಗ್ಗೆ ಬರೆದುಕೊಂಡದ್ದು ಜಾಸ್ತಿಯಾಯಿತೆಂದು ತೋರುತ್ತದೆ.!

ನಿಮ್ಮ ಮಾವನ ಮನೆಗೆ ಬಂದಾಗ ನಮ್ಮಲ್ಲೂ ಬನ್ನಿ! ನನ್ನ ಚಟುವಟಿಕೆಗಳು ವೈವಿಧ್ಯಮಯ. ಮನೆಯಲ್ಲಿ ಇರುವ ಸಮಯ ಖಚಿತವಾಗಿ ಹೇಳಲು ಬರುವದಿಲ್ಲವಾದ್ದರಿಂದ, ಫೋನಿಸಿ ಬರುವದು ಕ್ಷೇಮಕರ. ನಮ್ಮ ಮನೆಯ ಫೋನ ನಂಬರು ೩೩೪೨೨೩೨.

ಶುಭಾಶಯ ಪತ್ರಗಳನ್ನು ಕೊಂಡು ಕಳಿಸುವದಕ್ಕಿಂತ ನೀವೇ ರಚಿಸಿ ಕಳಿಸುವಂತೆ ಮನ ಒಲಿಸಿದ ನಿಮ್ಮವಳಿಗೆ ಅಭಿನಂದನೆಗಳು. ನಾನು ಪ್ರತಿವರ್ಷ ದೀಪಾವಳಿಗೆ, ಹೊಸ ವರ್ಷಕ್ಕೆ, ಅಂಚೆಕಾರ್ಡಿನಲ್ಲಿ ಸ್ವರಚಿತ ಶುಭಾಶಯದ ಹಾರೈಕೆಗಳನ್ನು ರಚಿಸುತ್ತ ಬಂದಿದ್ದೇನೆ. ನನ್ನವಳು ತನ್ನ ಸ್ನೇಹಿತೆಯರಿಗೆಲ್ಲ ಅವನ್ನು ಕಳಿಸಿ ಬೆನ್ನು ಚಪ್ಪರಿಸಿಕೊಳ್ಳುತ್ತಿದ್ದಳು. ಈಗ ಅಂಚೆಕಾರ್ಡಿನ ದರವೂ ಹದಿನೈದು ಪೈಸೆಯಿಂದ ಐವತ್ತು ಪೈಸೆಗೇರಿದ್ದರಿಂದ ಈ ಹಿಂದಿನ 'ಚಾಳಿ' ಕಡಿಮೆ ಮಾಡಬೇಕೆಂದಿದ್ದೇನೆ.



## ಪತ್ರಿಕೆಗಳಿಗೆ ಬರೆದ ಪತ್ರಗಳು

### ಪತ್ರ ೧

A lot of controversy is going on on "Scientists in India" and you have published many letters on the subject. I have a doctorate degree from the New York State University and wish to enlighten your readers with my story.

I was about to complete my studies when the U.P.S.C. sent a high official to persuade Indian Scientists to return to India. I was interviewed in 1965 in New York for Class I post and was informed that I would be taken up on a suitable job on return to India. (Later on we understood that the offiical's main purpose was to visit his daughter studying in U.S.A.). Along with others I spurned lucrative jobs ( then avaialble) in the U.S.A. No employment was forth-coming in India on return. After much correspondence C.S.I.R. appointed me as a scientist Pool Officer and loaned my services to Udaipur University College of Agriculture. Jobner (Rajasthan) where no research worth the name could be carried out. I was given teaching work without library or - Laboratory facilities. While I was with the Udaipur University two posts most suited to my training and experience were vacant and the authorities informed the C.S.I.R. that I would be absorbed by the University. Hence, the C.S.I.R. allowed me to continue in the post for33 months, but politicians

inside and outside the University saw to it that these posts were not filled as long as I was with them, by postponing and cancelling interviews and appointments.

While I was in the Pool, I applied for all posts suggested by the C.S.I.R. as also for others advertised in the news papers. The advertisements are merely a facade put up to appoint their own nominees. The Scientist prepares the application in so many copies with certificates attached; then travels at his own cost and comes back. Once the time limit given for interview was so short, that I had to go by Air from Jaipur to Banglaore. The interviews sometimes were very interesting, though they ultimately spelt misery for me. The interview committee pretends to judge my scientific ability within 15 minutes. First four minutes are spent in narrating my educational qualifications, next First five minutes in asking questions which have no relevance to the post, and the last few minutes in obtaining information about the caste of the candidate, what he would do if not appointed, and such inane topics. At a Delhi interview I was asked whether I was a Lingayat! and the questioner was a Minister of the Legislature now elected on secular and anit-caste commitments! Needless to say such inquiries jarred on my ears attuned to secular talk in the free society of Europe and America. In another interview I was offered an alternate post, but later the post was readvertised on the insistence of a politician and was filled-in by a candidate from his State. It is not uncommon for the committee members to ask questions for which they themselves have no answers. In one case the Registrar was absent when the committee interviewed me and the memebers thereof were innocent of higher Science. Finally, I could get only a temporary appointment to work in a PL 480-financed project. I had to resign from the post after twenty months' service as the project was about to be closed and new projects were not cleared by the I.C.A.R.

I did not commit suicide like Dr. Shah but opted for a daily death for the sake of my family. I am nowself-employed after bidding good-bye to academic career, scientific training and research aptitudes.

It is evident that the politicians have corrupted all the fountains of learning, research and appointments. I have no doubt that undue influence was brought to bear on the appointing authorities by some interested policitians in Dr. Shah's case. And now they are after Dr. Swaminathan's blood; some scapegoat is required to mollify public opinion. But public memory is short. The report will be filled as usual and the beauracratic caravan will pass on.

(* Indin express / ಗೆ ಬರೆದಿದ್ದ ಪತ್ರ. 1972 ರಲ್ಲಿ 'A Scientists' Sad Story' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗಿತ್ತು.)

❑

ಪತ್ರ ೨

Your editorial on 'Neglected Forests' (5-8-1973) should be an eye opener to the public and the government. It is a pity that our leaders are totally ignorant of possibilities of using forestry for creating national wealth and employment openings. In USA it is estimated that a doctorate degree-holder in forestry will generate employment for one hundred other people. In our country a Ph.D. degree holder in forestry is himself unemployed!

I studied at New York State University, College of Forestry, (Supposed to be one of the pioneer forestry colleges in USA) and was able to secure a fellowship and a Ph.D. degree. On my initiative, the Indian Embassy arranged for my practical training with U.S. Forest Service. Fully equipped with up to-date knowledge about forestry in general, and forest entomology in particular, I returned to India with a hope to secure a post suitable for my qualifications and training. Contrary to the impression, the Indian Embassay gave to me, I realized that our forestry has not made much progress and my country cannot use my education to develop forestry. The Forest Research Institute, Dehra Doon, only one institute of its kind in India, could have utilised my specialization but as usual they did not have any vacancies, but were hopeful that some more posts will be sanctioned in the next Five Year Plan!

In post-independence period Arts & Science colleges are blooming like mushrooms but not a single forestry college was opened in the country. We have added precious little to the forestry knowledge that we inherited from the British. The only institute they built is a temple to us, and forestry book they wrote is a bible for us.

Sometime back I had prepared a plan to start a forestry college in our state and sent it to our M.P. He took keen interest in the plan but unfortunately the new wave defeated him in the election and the plan had its natural burial. Our present minister for Agriculture & Forests has too many plans on paper and we should be happy even if he makes bigining in developing Forestry of the State in right direction. I have no doubts that well-developed forestry can yeild as much National Wealth and employment opportunities as agriculture or any other industry.

(' Indin express ನಲ್ಲಿ ಪ್ರಕಟವಾಗಿತ್ತು. ಪತ್ರದ ತಾರೀಖು 10, ಆಗಸ್ಟ್ 1973)



# ಕೃಷ್ಣಾನಂದ ಕಾಮತರ ಒಂದು ಕವಿತೆ

## ನನ್ನ ನಲ್ಲೆ

ಚಳಿ ಹಿಮಗಳಿಗಾಗಿ ಪ್ರಸಿದ್ಧವಿದೆ ಸಾಯರೆಕ್ಯೂಸ
ಮುವತ್ತು ನಾಲವತ್ತು ಇಂಚು ಹಿಮ ಬೀಳುತಿಪದು ದಿನಕೆ

ಹರಿವ ನೀರು ಹಿಮ ಗಡ್ಡೆಯಾಗವಷ್ಟು ಪಾರಜದ ಎತ್ತರವು
ಇಳಿಯುತಿದೆ ಉಷ್ಣತಾಮಾಪಕಯಂತ್ರದೊಳು

ಮದುವೆಯಾಗುವ ಯುವಕ ಯುವತಿಯರು 'ದಿನಾಂಕ'* ಮಾಡುವದು ಇಲ್ಲಿ ರೂಢಿ
ಶುಕ್ರವಾರ ಸಂಜೆಯೇ ಹೋಗುತಿಹರು ಇಬ್ಬರೂ ಕೂಡಿ

ಪಾರ್ಕುಗಳಲಿ, ಥೀಟರಿನಲ್ಲಿ, ರಾತ್ರೆಯ ಸಂಘಗಳಲಿ+
ಕುಡಿಯವರು, ಕುಣಿಯುವರು ನಲಿಯುವರು ಜೋಡಿ ಜೋಡಿ

ಹೊರಗಡೆಯೊ, ಎರಡು ಸವಿಹೃದಯಗಳು ಆಡುವವು ಹಿಮದಿಂದ
ಬಾಲಕರು ಆಡುವ ಹೊಡೆತದ ಚಂಡುವಿನಂತೆ

ಕೂಗುತಿಹರು, ಓಡುತಿಹರು, ಬೆನ್ನಟ್ಟುತ್ತಿಹರು
ಹಿಮದ ಚಂಡುಗಳನು ಮಾಡುತಿಹರು

ಕಳ್ಳಕರಿಬೆಕ್ಕಿನಂತೆ ಹಿಂಬದಿಯಿಂದ ಬಂದು
ರೊಯ್ ಎಂದು ಹಿಮಚಂಡನ್ನು ಬಿಗಿಯುವರು

ಮನೆಕಾಲೇಜುಗಳ ನಡುವೆ ಇಹುದೊಂದು ದೊಡ್ಡ ಮರ
ಇರಳಲ್ಲಿ ಇದೊಂದು ಕಾಮಕೂಟಕ್ಕೆ ತಾಣ

ಕಾರುಗಳು ನಿಲ್ಲುವವು ಚುಂಬಿಸುತಿಹರು
ಒಬ್ಬರನ್ನೊಬ್ಬರು ಬಿಗಿದಪ್ಪುತಿಹರು......

ಹೋಗುತಿರೆ ನಡುರಾತ್ರಿಯಲಿ ನಾನೊಮ್ಮೆ ಮನೆಗೆ
ರೊಯ್ ಎಂದು ಬಡೆಯಿತು ಹಿಮದ ಚೆಂಡೊಂದು

ಆದಾರ ಗುರಿಯಿಂದಲೊ ಬಂದು ಎನ್ನ ಬೆನ್ನಿಗೆ
ಆದರೂ ಹಿಂತಿರುಗಿ ನೊಡುವ ಎದೆಯಾಗಲಿಲ್ಲ ನನಗೆ।

ಮರುದಿನವೂ ಅದೇ ಹೊತ್ತಿಗೆ ಮನೆಗೆ ಹೊರಟರೆ
ತಿರುಗಿ ಬಿದ್ದಿತು ಬೆನ್ನಿಗೆ ಹಿಮದ ಏಟು

*Dating +Night Club

ಎದೆಗುಂದದೇ ಹಿಂತಿರುಗಿ ನೋಡಿದೆ ಈ ಬಾರಿ
    ದೂರದ ಕಾರಿನಲ್ಲಿ ಹಕ್ಕಿ ಜೋಡಿಯ ಬಿಟ್ಟು ಇನ್ನಾರಿರಲಿಲ್ಲ

ಹಿಮದ ಆಟಗಳ ನೆವದಲಿ ಒಬ್ಬರನು ಒಬ್ಬರು
    ಹೊಡೆದರೂ ತಪ್ಪು ಭಾವಿಸದಿರುವುದು ಇಲ್ಲಿ ರೂಢಿ

ಯಾರೊ ಎನ್ನ ನಲ್ಲನೆಂದು ಗ್ರಹಿಸಿ ಹಿಮಚೆಂಡು ಹಾರಿಸಿ
    ಅಲ್ಲವೆಂದು ತಿಳಿಯಲು ಅಡಗಿಹರೆಂದುಕೊಂಡೆ

ಮತ್ತೆ ಮೂರು ನಾಲ್ಕು ದಿನ ಕಳೆದವು
    ಅದೇ ಸಮಯಕ್ಕೆ ತಿರುಗೊಂದು ಏಟುಬಿದ್ದು

ಎನ್ನ ಮನ ಬಹಳ ರೇಗಿತು
    ಶಿಕ್ಷಿಸಲೇಬೇಕು ಈ ತುಂಟಳನು ಎಂದುಕೊಂಡೆ

ಸುತ್ತ ಯಾರೂ ಕಾಣದಿರಲು ಹುಡುಕ ಹೊರಟೆ
    ಮೂರು ನಾಲ್ಕು ಅಡಿ ಮುಂದಿಡೆ ಮತ್ತೆ ಬಿದ್ದಿತು ಏಟು

ತಲೆಯ ಮೇಲಿರುವ ಮರದ ಟೊಂಗೆಯಿಂದ
    ಕಣ್ಣರಳಿಸಿ ಮೇಲೆ ನೋಡಿದೆ

ಟೊಂಗೆ ತುಂಬ ಹರಡಿದೆ ಹಿಮರಾಶಿ
    ಮಂದ ಮಾರುತನು ಬೀಸಲು

ಜಾರುತಿಹದು, ಒಂದೊಂದು ಹಿಮಚಂಡು
    ನಗು ಬಂದಿತೆನ್ನ ಮಂಕುತನಕೆ

ಒಲಿದವರಿಲ್ಲದ ಈ ನಾಡಿನಲಿ
    ಮರವೇ ನನ್ನ ನಲ್ಲೆಯಾಯಿತು।

(ಫೆಬ್ರವರಿ, 17, 1962)







## ಕೃಷ್ಣಾನಂದ ಕಾಮತರ ಒಂದು ಬಾನುಲಿ ರೂಪಕ

# ಇರುವೆಯ ಮದುವೆ

ಧ್ವನಿ : ನವವಿವಾಹಿತ ಪ್ರಾಣ್ ಮತ್ತು ಪ್ರಿಯಾರು ಕೆಮ್ಮಣ್ಣುಗುಂಡಿಗೆ ಮಧುಚಂದ್ರಕ್ಕೆ ಹೋದರು. ಪ್ರಾಣ್ ಕೀಟಶಾಸ್ತ್ರಜ್ಞ. ಕೀಟ ಸಂಗ್ರಹಕ್ಕೆ ಸದಾ ಕಾಡು-ಮೇಡುಗಳಲ್ಲಿ ಸಂಚರಿಸುವಾತ. ಪ್ರಿಯಾ. ಮಹಾನಗರದಲ್ಲಿ ಹುಟ್ಟಿ ಬೆಳೆದಾಕೆ. ಕೀಟ ಪ್ರಪಂಚಕ್ಕಿನ್ನೂ ಅಪರಿಚಿತಳು. ಗೃಹವಿಜ್ಞಾನ ಪದವೀಧರೆ. (ನವವಿವಾಹಿತರ ನಗು) ಮದುವೆಯಾದ ಹೊಸ ದಿನಗಳ ಕನಸಿನ ಲೋಕದಲ್ಲಿ ಸಂಚರಿಸುತ್ತಿದ್ದ ಈ ಜೋಡಿ ಹಕ್ಕಿಗಳನ್ನು ಆಕರ್ಷಿಸಿದ್ದು.... ಸಂಗೀತ

ಪ್ರಾಣ್ : (ಪ್ರೇಮಭರಿತ ಮೆಲು ದನಿ) ನಿನ್ನಂಥ ಕುಸುಮ ಕೋಮಲೆ, ಈ ಜೊಂಡಿಗ ಮೀಸೆಯವನನ್ನು ಹೇಗೆ ಒಪ್ಪಿಕೊಂಡೆ?

ಪ್ರಿಯಾ : ಹೇಗೆಂದರೆ ಹೀss ಗೇ- ಈss ಈs (ಕಿಟಾರನೆ ಕಿರುಚಿಕೊಳ್ಳುತ್ತಾಳೆ.)

ಪ್ರಾಣ್ : (ಬೆಚ್ಚಿ) ಇದೇನು! ಜಗತ್ ಪ್ರಳಯವಾಯಿತೇ? ಆಕಾಶ ಕುಸಿಯಿತೇ? ಅದೇಕೆ ಹೀಗೆ ಕಿರುಚುತ್ತೀ?

ಪ್ರಿಯಾ : ಆಂ... ಹಾಂ ಹತ್ತಿರ ಬರಬೇಡಿ (ಬೆದರಿ) ನಿಮ್ಮ ಬನಿಯನ್ ಮೇಲೆ.... ಮೇಲೆ ಜಿರಳೆ... ಜೊಂಡಿಗ್ಯಾ...ಈss ಈss !

ಪ್ರಾಣ್ : ಈ ನಿರುಪದ್ರವಿ ಜೀವಿಗೆ ಇಷ್ಟೊಂದು ಬೆದರಬೇಕೇ? ಇದನ್ನು ಹೀಗೆssಗೆ- ಕೈಗೆತ್ತಿಕೊಂಡರೂ ಏನೂ ಮಾಡುವುದಿಲ್ಲ ನೋಡು.

ಪ್ರಿಯಾ : (ಇನ್ನೊಮ್ಮೆ ಕಿರುಚಿ)... ಅಬ್ಬಬ್ಬಾ !... ಯಾವುದೇ ಹುಳ ಹುಪ್ಪಡಿ ಕಂಡರೆ ನನಗೆ ತುಂಬಾ ಭಯ!

ಪ್ರಾಣ್ : ಭಯ ಬಿಟ್ಟು ಸುತ್ತ ಇರೋ ಜೀವಿಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದರೆ ಅದೆಷ್ಟೋ ಸಂಗತಿಗಳನ್ನು ಅರಿತುಕೊಳ್ಳಬಹುದು.

ಪ್ರಿಯಾ : ಏನೋಪ್ಪಾ! (ತಿರಸ್ಕಾರ) ಈ ಜಿರಳೆ, ಇರುವೆಗಳಿಂದ ಏನು ಕಲಿಯೋ ಹಾಗಿದೆ?

ಪ್ರಾಣ್ : ಯಾಕೆ ಕಲಿಯಲಿಕ್ಕಾಗೋದಿಲ್ಲವಾ? ಈ ಇರುವೆಯ ಇರುವಿನ ಬಗ್ಗೆ ಒಂದು ಬೃಹತ್ ಗ್ರಂಥವನ್ನೇ ಬರೆಯಬಹುದು. ಅವುಗಳ ವಿವಾಹ ಪದ್ಧತಿ, ಎಷ್ಟೊಂದು ಕುತೂಹಲಕಾರಿ ಗೊತ್ತಾ?

ಪ್ರಿಯಾ : ಇರುವೆ ಮದ್ವೇನಾ? ನಮ್ಮದಕ್ಕಿಂತ ಎಷ್ಟು, ಬೇರೆ ಆಗಿರತ್ತೆ? ಹೇಳ್ರಿ ನೋಡೋಣ?

ಪ್ರಾಣ್ : ನಾವು ಸಾಲ-ಸುಲಿಗೆಗಳಿಂದ ತಪ್ಪಿಸಿಕೊಳ್ಳಬೇಕಾದರೆ ಇರುವೆಯ ವಿವಾಹ ಪದ್ಧತಿಯನ್ನು ನಮ್ಮದನ್ನಾಗಿ ಮಾಡಿಕೊಳ್ಳಬೇಕು. ಲಗ್ನಪತ್ರಿಕೆಯಿಲ್ಲ, ವಧು ಪರೀಕ್ಷೆಯಿಲ್ಲ ವರದಕ್ಷಿಣೆ ಇಲ್ಲ, ವಾದ್ಯ-ವಾಜಂತ್ರಿಗಳಿಲ್ಲ, ಮಂತ್ರ ಘೋಷಣೆ ಇಲ್ಲವೇ ಇಲ್ಲ. ವರೋಪಚಾರ, ಆತಿಥ್ಯ? ಊಹುಂ ಒಂದು ಪೈಸಾ ಖರ್ಚಿಲ್ಲ.

ಪ್ರಾಣ್ : (ಧೇನಿಸುವಳು) ನಮ್ಮ ಮದುವೆಯಲ್ಲಿ... ಬೇಕಿದ್ದರೆ (ನಾಗಸ್ವರ : ಮಂತ್ರಘೋಷ) ಅಲ್ಲಾ. ಬಟ್ಟೆಬರೆ ಆಭರಣ ಏನೂ ಇಲ್ಲಾಂದ್ರೆ ಎಂಥಾ ಮದುವೇರೀ?

ಪ್ರಾಣ್ : ಇಲ್ಲಿ ಸರಳತೆಯೇ ಆಭರಣ. ಇರುವೆ ಮದುವೆ ಬಗ್ಗೆ ತಿಳಿಕೊಳೋಕೆ ಮುಂಚೆ ಅದರ ಸಮಾಜಾನ

ಅರಿತುಕೋಬೇಕು. ಇರುವೆಗಳದು ಸ್ತ್ರೀ ಪ್ರಧಾನ ಸಮಾಜ. ಪ್ರತಿ ಗೂಡಿನಲ್ಲಿಯೂ ಒಬ್ಬ ರಾಣಿ ಮತ್ತು ಸ್ತ್ರೀ ಕಾರ್ಮಿಕರು ವಾಸವಾಗಿರುತ್ತಾರೆ. ಬೇಸಿಗೆ ಕಾಲಮುಗಿಯುತ್ತ ಬಂದಾಗ ಪುಷ್ಪವತಿಯರಾದ ಹೆಣ್ಣು-ಪ್ರೌಢರಾದ ಗಂಡು ಹುಟ್ಟಿಕೊಳ್ಳುತ್ತಾರೆ.

ಪ್ರಿಯಾ : ಇವನ್ನು ಉಳಿದ ಇರುವೆಗಳಿಂದ ಹೇಗೆ ಪ್ರತ್ಯೇಕಿಸುವುದು?

ಪ್ರಾಣ್ : (ಹೆಲಿಕ್ಯಾಪ್ಟರ್ ಶಬ್ದ) ಇವು ನಿಸರ್ಗದ ಹೆಲಿಕ್ಯಾಪ್ಟರ್‌ಗಳು. ಹಾರುವುದಕ್ಕೆ ಇವಕ್ಕೆ ಪಾರದರ್ಶಕ ಜೋಡಿ ರೆಕ್ಕೆಗಳಿರುತ್ತವೆ. ಹೆಣ್ಣಿನ ಗರ್ಭಕೋಶಕ್ಕೆ ತುಂಬ ಮೊಟ್ಟೆಗಳಿರುತ್ತವೆ. ಅದಕ್ಕೆ ಅದು ಗಂಡಿರುವೆಗಿಂತ ತುಂಬಾ ಬಹುಪಾಲು ದೊಡ್ಡದಿರುತ್ತದೆ. ಕೆಲಸಗಾರ್ತಿಯರು ಇರುವೆಯ ಯುವಪೀಳಿಗೆಯನ್ನು ತುಂಬಾ ಆತ್ಮೀಯವಾಗಿ ದಕ್ಷ ರೀತಿಯಿಂದ ಸಾಕುತ್ತಾರೆ. ತಿಂದುಂಡು ಸುಖವಾಗಿ ಕಾಲಹರಣ ಮಾಡೋ ಇವಕ್ಕೆ ಬೊಜ್ಜು ಬೆಳೆಯಬಾರದೆಂದು ಪ್ರತಿ ದಿನ ಮರಿಗಳಿಗೆ ವ್ಯಾಯಾಮ ಮಾಡಿಸುತ್ತವೆ. ಹುಲ್ಲಿನ ಪಕಳೆಗೆ ಜೋತು ಬಿದ್ದು ಜೋಕಾಲಿಯಂತೆ ತೂಗಿಕೊಳ್ಳಬೇಕು. ಕಿರಿಯ ಬಂಡೆಯನ್ನು ಹತ್ತಿ ಇಳಿಯಬೇಕು. ಕುಸ್ತಿ ಆಡಬೇಕು. ಓಟದಲ್ಲಿ ಪಾಲುಗೊಳ್ಳಬೇಕು. ಇಂತಹ ವ್ಯಾಯಾಮಗಳನ್ನು ಯುವ ಇರುವೆಗಳು ಮಾಡಬೇಕು.

ಪ್ರಿಯಾ : ವ್ಯಾಯಾಮ? ಇರುವೆಗಳು ಏನು ವ್ಯಾಯಾಮ ಮಾಡಬಲ್ಲವು. ನಾನಾಗಿದ್ದರೆ ತಲೆ ನೋವೆಂದು ಬೆಚ್ಚಗೆ ಮಲಗಿ ಬಿಡುತ್ತಿದ್ದೆ! (ನಗು)

ಪ್ರಾಣ್ : ಕಾರ್ಮಿಕ ಇರುವೆಗಳು ಈ ಕುಂಟು ನೆಪ ನಂಬಲ್ಲ. (ಧ್ವನಿ ವಿಶೇಷ) ಆಲಸಿಗಳನ್ನು ಕಾಲು, ಮೀಸೆಗಳನ್ನು ಹಿಡಿದು ಎಳೆಯುತ್ತವೆ. ಬೆನ್ನಿಗೆ ಮೃದುವಾಗಿ ಕಚ್ಚುತ್ತವೆ. ಅನ್ನ-ನೀರು ಕೊಡೋದು ನಿರಾಕರಿಸುವದರಿಂದ ಶಿಸ್ತು-ಪಾಲನೆಗೆ ಕುಂದುಕೊರತೆ ಬರಲ್ಲ.

ಪ್ರಿಯಾ : ಅವುಗಳದು ನಮ್ಮ ತರವೇ ಪ್ರೇಮವಿವಾಹವೇ?

ಪ್ರಾಣ್ : ಸ್ವಯಂವರವೆಂದರೆ ಸರಿಹೋದಿತು. (ಗುಡುಗು ಸಹಿತ ಮಳೆ) ಒಂದೆರಡು ಜಡಿಮಳೆ ಜಡಿದು, ಪ್ರಕೃತಿ ಹಚ್ಚ ಹಸಿರಾದಾಗ, ಇರುವೆಗಳಿಗೆ ವಸಂತಋತು ಬಂದಂತೆ (ಮೃದುವಾದ ಸಂಗೀತ). ಅಂದಿನ ದಿನಗಳಲ್ಲಿ ಗೂಡಿನ ಚಟುವಟಿಕೆಗಳು ಹೆಚ್ಚಾಗುತ್ತವೆ. (ಧ್ವನಿ ವಿಶೇಷ) ಯುವಕ-ಯುವತಿಯರಿಗೆ ಅಧಿಕ ಪ್ರಮಾಣದಲ್ಲಿ ಆಹಾರ ಪೂರೈಕೆ ಆಗುತ್ತದೆ, ಗೂಡಿಗೆ 4-5 ಮಹಾದ್ವಾರಗಳನ್ನು ರಚಿಸಲಾಗುತ್ತದೆ, (ಧ್ವನಿ ವಿಶೇಷ) ಮುಸ್ಸಂಜೆಯಾಗುತ್ತಿದ್ದಂತೆ ರೆಕ್ಕೆ ಇರುವೆಗಳು ಗೂಡಿನಿಂದ ಹೊರಬೀಳಲಾರಂಭಿಸುವವು. ಗೂಡಿನ ಸುಖ ಜೀವನ ಬಿಟ್ಟು, ಅರಿಗಳ ವಿಶ್ವಕ್ಕೆ ಧುಮುಕಲು ಹಿಂದೇಟು ಹಾಕುವವರಿಗೆ ಕೆಲಸಗಾತಿಯರು ಪುಸಲಾಯಿಸಿ ಗೂಡಿನಿಂದ ಹೊರಗೆ ಅಟ್ಟುವವು.

ಪ್ರಿಯಾ : ಗೂಡಿನಲ್ಲಿಯೇ ವಿವಾಹ ಮಾಡಿಕೊಳ್ಳಬಹುದಲ್ಲ?

ಪ್ರಾಣ್ : ಉಹುಂ ಹತ್ತಿರ ಸಂಬಂಧಿಗಳು ಸಹೋದರ ಸಹೋದರಿಯರಲ್ಲಿ ಮದುವೆಯಾದರೆ, ಭಾವೀ ಪೀಳಿಗೆ ದುರ್ಬಲವಾಗುತ್ತದೆ. ಪ್ರಿಯೆ! ಆದರೆ...ಅಂತೆಯೇ ಬೇರೆ ಬೇರೆ ಗೂಡುಗಳಿಂದ ವಧು ವರ ಇರುವೆಗಳು (ಧ್ವನಿ ವಿಶೇಷ) ಏಕಕಾಲಕ್ಕೆ ಗಗನ ಮಂಡಲ ಸೇರುತ್ತವೆ. ಮೊದಲು ಒಂಟಿಯಾಗಿ (ಧ್ವನಿ ವಿಶೇಷ) ಜೋಡಿಯಾಗಿ (ಧ್ವನಿ ವಿಶೇಷ) ನಂತರ ಹಿಂಡುಹಿಂಡಾಗಿ ಅವು ಹಾರಲಾರಂಭಿಸುವವು. ಕೆಲವೊಮ್ಮೆ ತೇಲುವ ಕರಿಮೋಡಗಳಂತೆ ಆಕಾಶದಲ್ಲಿ ಹಾರಾಡುವಾಗ ಇಷ್ಟೊಂದು ಇರುವೆಗಳು ಎಲ್ಲಿಂದ ಬಂದವು? ಎಂದು ವಿಸ್ಮಯಪಡುವಂತಾಗುತ್ತದೆ.

ಪ್ರಿಯಾ : ಸ್ವಯಂವರ ಎಂದಿರಲ್ಲಾ? ಅತ್ಯಂತ ಬಲಶಾಲಿ ಅಥವಾ ಚತುರನನ್ನು ಇರುವೆ ರಾಣಿ ವರಿಸುತ್ತಾಳೆಯೇ? ಸೀತಾ-ಸ್ವಯಂವರದಂತೆ?

ಪ್ರಾಕ್ : ಸೀತಾ ಸ್ವಯಂವರ ಅಂತ ಯಾಕೇಳ್ತಿ? ಪ್ರಿಯಾ ಸ್ವಯಂವರ ಅನ್ನು... ವಧೂ-ವರರು ಸಮಸಂಖ್ಯೆಯಲ್ಲಿ ಹಾರಾಡುತ್ತ ಒಬ್ಬರನ್ನೊಬ್ಬರು ಸಂದರ್ಶಿಸಿ ಗಗನ ಮಂಡಲದಲ್ಲಿಯೇ ಕೂಡಿಕೊಳ್ಳುತ್ತಾರೆ. ಆನೆಯಾಕಾರವ ಪತ್ನಿಯನ್ನು ಆಡಿನ ಅಳತೆಯ ಪತಿ ಬಿಗಿದಪ್ಪಿದರೆ ಹೇಗೆ ಇರುತ್ತೆ ಹೇಳು. ಈ ಜೋಡಿಗಳನ್ನು ನೋಡುವುದೇ ಒಂದು ತಮಾಷೆ (ಧ್ವ. ವಿ.) ಹವೆಯಲ್ಲಿ ತೇಲುತ್ತ, ಮೇಲೇರುತ್ತ, ಕೆಳಗೆ ಬೀಳುತ್ತಿದ್ದೂ ಸ್ವರ್ಗೀಯ ಆನಂದದಲ್ಲೇ ಅವು ಮೈ ಮರೆತಿರುತ್ತವೆ. ಹಾಗೇ ಹಸಿದು ಕಾದು ಕುಳಿತಿರುವ ಹಲ್ಲಿ, ಹಾವು, ಹಕ್ಕಿ, ಓತಿಕೇತಗಳಿಗೆ ಆಹುತಿಯಾಗುತ್ತವೆ.

ಪ್ರಿಯಾ : ಅಯ್ಯೋ ಪಾಪವೇ! ಮದುಮಗ-ಮದುಮಗಳೇ ಇಲ್ಲವಾದರೆ ಮುಂದಿನ ಪೀಳಿಗೆ ಹೇಗೆ ನಿರ್ಮಾಣವಾಗಬೇಕು?

ಪ್ರಾಕ್ : ಅಪಾರ ಸಂಖ್ಯೆಯಲ್ಲೇ ಅವುಗಳು ಇರುತ್ತವೆ. ಲಕ್ಷಗಟ್ಲೆ ದಂಪತಿಗಳಲ್ಲಿ ಸಾವಿರಗಟ್ಲೆ ಜೋಡಿಗಳು ವೈರಿಗಳ ಉದರವನ್ನು ಸೇರಿದರೆ ಹೆಚ್ಚಿನ ಹಾನಿಯಿಲ್ಲ.

ಪ್ರಿಯಾ : ಆಮೇಲೆ ನವವಿವಾಹಿತರು ಅತ್ತೆಮನೆ ಸೇರಿಕೊಳ್ಳುವರೇ?

ಪ್ರಾಕ್ : ಊಹೂಂ... ನಮ್ಮ ಹಾಗೆ ಮತ್ತ ಅತ್ತೆ ಮನೆಗೆ ಹೋಗೋ ಹಾಗಿಲ್ಲ. ಪತಿ ಪತ್ನಿಯರಿಗೆ ತಿರುಗಿ ಯಾವಗೂಡಿನಲ್ಲಿಯೂ ಪ್ರವೇಶವಿಲ್ಲ. ಅವು ಕಟ್ಟುನಿಟ್ಟಾಗಿ ಏಕಪತ್ನಿ-ಪತಿವ್ರತವನ್ನು ಪಾಲಿಸುತ್ತವೆ. ಹಾಗೇನೇ ಪತಿಯಿಂದ ಬೇರ್ಪಟ್ಟ ಹೆಣ್ಣು ತನ್ನ ಜೋಡಿರೆಕ್ಕೆಗಳನ್ನು ಕಿತ್ತೊಗೆದು ಸೂಸುಮಣ್ಣಿನಲ್ಲಿ ಕಣ್ಮರೆಯಾಗಿ ಬಿಡುತ್ತವೆ.

ಪ್ರಿಯಾ : ಗಂಡು ಅವಳನ್ನು ಹಿಂಬಾಲಿಸುವದಿಲ್ಲವೇ ?

ಪ್ರಾಕ್ : (ನಕ್ಕು) ಇಲ್ಲ ಪ್ರಿಯಾ, ಅವರ ದಾಂಪತ್ಯ ಅಲ್ಲಿಗೇ ಮುಗಿಯಿತು. ಕೆಲಸಗಾರ್ತಿಯರಿಂದ ಸೇವೆ ಪಡೆದು ಸುಖವಾಗಿದ್ದ ಗಂಡಿಗೆ, ತನ್ನ ಉದರ ನಿರ್ವಹಣೆ ಗೊತ್ತಿರಲ್ಲ. ಹಸಿದು ಬಳಲಿ ಬೆಂಡಾಗಿ ವೀರಸ್ವರ್ಗಸೇರುವದೊಂದೇ ಮಾರ್ಗ. ನಮ್ಮಲ್ಲಿ ಅಯೋಗ್ಯರಿಗೆ ಈ ಶಿಕ್ಷೆ ಇದ್ದಿದ್ದರೆ ಜನ ಸಂಖ್ಯೆಯಾದರೂ ನಿಯಂತ್ರಣದಲ್ಲಿ ಇರುತ್ತಿತ್ತು.

ಪ್ರಿಯಾ : ಭೂಗರ್ಭದಲ್ಲಿ ಸೇರಿದ ಇರುವೆಯ ಗತಿ ಏನು ?

ಪ್ರಾಕ್ : ಈಗ ಅವಳು ಹೊಸದೊಂದು ಸಮಾಜವನ್ನೇ ನಿಲ್ಲಿಸಲು ಅಡಿಗಲ್ಲು ಹಾಕುತ್ತಾಳೆ. ದವಡೆಯಿಂದ ಮಣ್ಣನ್ನು ಅಗೆದು , ಕಿರಿದಾದ ಬಿಲವನ್ನು ನಿರ್ಮಿಸಿ, ಮೊಟ್ಟೆಗಳನ್ನಿಡಲು ಪ್ರಾರಂಭಿಸುವಳು. ಸೂಲಗಿತ್ತಿ, ನರ್ಸ್, ತಾಯಿ ಅತ್ತೆ, ನಾದಿನಿ, ಯಾರ ನೆರವಿಲ್ಲದೇ ಮೊಟ್ಟೆಗಳ ಹೆರಿಗೆ ಶುರುವಾಗಿಬಿಡುವದು. ಆರ್ದ್ರತೆಯಿಂದ ಅವು ಒಂದನ್ನೊಂದು ಅಂಟಿಕೊಳ್ಳುವಂತಾದರೆ, ನಾಲಿಗೆಯಿಂದ ನೆಕ್ಕಿ ಸ್ವಚ್ಛಗೊಳಿಸಿ ಬಿಸಿಲಿಗೆ ಒಣ ಹಾಕುವದು, ತಾಯಿ ಇರುವೆ.

ಪ್ರಿಯಾ : ನಮ್ಮಂಥವರಿಗೆ ಇಂಥ ಹೆರಿಗೆ ಬಂದರೆ ಬದುಕುತ್ತಿದ್ದೇವೋ ಇಲ್ಲವೋ! (ಧ್ವನಿಯಲ್ಲಿ ಕಾತರತೆ)

ಪ್ರಾಕ್ : ಇಂಥ ದುರ್ಭಾಗ್ಯದ ತಾಯಿಯ ಬವಣೆ ಅರಿತು ನಾವೆಷ್ಟೋ-ಭಾಗ್ಯವಂತರೆಂದು ಸಮಾಧಾನವಾಗಿರಬೇಕು. ಬಾಣಂತಿಯೇ ಆಹಾರ ಸಂಗ್ರಹಕ್ಕೆ ಹೋಗಬೇಕು, ಆಕ್ರಮಣ ನಡೆಸಿದ ವೈರಿಯೊಡನೆ ಕಾದಾಡಬೇಕು... ಭವಿಷ್ಯದ ಪೀಳಿಗೆಗಾಗಿ ಇವನ್ನೆಲ್ಲ ಸಹಿಸಲು ಸಿದ್ಧಳು, ಸಹಿಸುತ್ತಾಳೆ.

ಪ್ರಿಯಾ : ಮನುಷ್ಯರಾದ ನಮ್ಮಲ್ಲೇ ಇಂಥ ಹೃದಯವಂತಿಕೆ ಇಲ್ಲವಲ್ಲ?

ಪ್ರಾಕ್ : ನಮ್ಮಲ್ಲೂ ಧಾರ್ಮಿಕ ಪೂರ್ವಜರು ಹೆಚ್ಚು ಕಡಿಮೆ ಹೀಗೆ ಬದುಕುತ್ತಿದ್ದರು. ಒಬ್ಬರ ಕಷ್ಟಕಾಲದಲ್ಲಿ ಉಳಿದವರು ನೆರವಾಗುತ್ತಿದ್ದರು. ಈಗೆಲ್ಲ ಸಂಪತ್ತಿಗೆ, ಅಧಿಕಾರಕ್ಕೆ, ಆದ್ಯತೆ ಸಿಗಲಾರಂಭಿಸಿದ್ದರಿಂದ ಹೆಚ್ಚೆಚ್ಚು ಸ್ವಾರ್ಥಿಗಳಾಗುತ್ತಲಿದ್ದೇವೆ.

ಪ್ರಿಯಾ : ಮೊಟ್ಟೆಗಳಿಂದ ಮರಿಮಾಡಲು -ಕುಕ್ಕುಟದಂತೆ ಇರುವೆಗಳೂ ಕಾವು ಕೊಡಬೇಕಾಗುತ್ತದೆಯೇ?

ಪ್ರಾಣ್ : ಪ್ರಾಣಿಗಳು ಮಾತ್ರ ಕಾವು ಕೊಡುತ್ತವೆ. ಮೊಟ್ಟೆಗಳಿಂದ ತಾವಾಗಿ ಹೊರಬಂದ ಮರಿಗಳು ತಾಯಿ ಪೂರೈಸಿದ ಆಹಾರ ಸೇವಿಸಿ ಬೆಳೆಯುತ್ತವೆ. ಅನಂತರ ಅವು ತಾವೇ ನಿರ್ಮಿಸಿದ ರೇಶಿಮೆ ಕವಚದಲ್ಲಿ ನಿದ್ರಾವಸ್ಥೆ ತಾಳುತ್ತವೆ. ಆಗ ಪ್ರೌಢ ಇರುವೆಯ ಅಂಗಾಂಗಗಳು ರೂಪಗೊಳ್ಳುತ್ತವೆ. ಮೊದಲ ತಲೆಮಾರಿನ ಇರುವೆಗಳೆಲ್ಲ ಸಂತಾನೋತ್ಪತ್ತಿ ಮಾಡಲಾಗದ ಹೆಣ್ಣುಗಳಾಗುತ್ತವೆ. ಅಂತೆಯೇ ಅವು ಗೂಡಿನ ಹೆಚ್ಚಿನ ಜವಾಬ್ದಾರಿಯನ್ನು ತಾವೇ ವಹಿಸಿಕೊಳ್ಳುತ್ತವೆ.

ಪ್ರಿಯಾ : ನಮ್ಮಲ್ಲೂ ಹುಟ್ಟಿದ ಮಗು ತನ್ನ ಎಲ್ಲಾ ಕೆಲಸಗಳನ್ನು ನಿರ್ವಹಿಸುವಂತಿದ್ದರೆ...(ಹಂಬಲಿಸುವ ದನಿ)

ಪ್ರಾಣ್ : ನಮ್ಮಲ್ಲಿ ಹುಟ್ಟಿದ ಮಕ್ಕಳು ಶ್ರಮ ಜೀವಿಯಾಗುವುದಿರಲಿ, ಪ್ರಾಯಕ್ಕೆ ಬಂದರೂ ಅಪ್ಪ-ಅಮ್ಮಂದಿರನ್ನು ಕಾರ್ಮಿಕರಂತೆ ದುಡಿಸುತ್ತಾರೆ. ಆದೇ ಇರುವೆಗಳಲ್ಲಿ ಯಾವತರದ ತರಬೇತಿ ಇಲ್ಲದಿದ್ದರೂ ಅವು ಅಮ್ಮನ ಬಾಣಂತನ ಮಾಡುತ್ತವೆ. ಮೊಟ್ಟೆಗಳನ್ನು ದವಡೆಗಳಲ್ಲಿ ಹಿಡಿದು ಸ್ಥಳಾಂತರಿಸುತ್ತವೆ. ಗೂಡು ಚಿಕ್ಕದಾಗಿರುವುದರಿಂದ ಹೊಸಕೋಣೆಗಳನ್ನು ಜೋಡಿಸುತ್ತವೆ. ಆಹಾರ ಸಂಗ್ರಹಿಸಿಡುತ್ತವೆ. ತಾಯಿ ಇರುವೆಗೆ ಸತತ ಊಟೋಪಚಾರ ಸಲ್ಲುವದರಿಂದ ಅದು ದಷ್ಟಪುಷ್ಟವಾಗಿ ಬೆಳೆದು 'ರಾಣಿ' ಅನಿಸಿಕೊಳ್ಳುವುದು.

ಪ್ರಿಯಾ : ಅಂದರೆ ಅರಸನಿಲ್ಲದ ನಾಡಿನಲ್ಲಿ ಅರಸಿಯೇ ರಾಜ್ಯಭಾರ ನಡೆಸುವದೇ?

ಪ್ರಾಣ್ : ಅವರದು ಎಲ್ಲಾ ದೃಷ್ಟಿಯಿಂದಲೂ ಪ್ರಜಾಪ್ರಭುತ್ವ. ಮಾನವ ಸಮಾಜ, ರಾಜ, ಮಹಾರಾಜರ ದಬ್ಬಾಳಿಕೆಗೆ ಒಳಪಟ್ಟಾಗಲೂ ಸಾಮಾನ್ಯ ಇರುವೆಗಳು ತಮ್ಮ ರಾಜ್ಯದ ಸಕಲ ಚಟುವಟಿಕೆಗಳನ್ನು ನಿಯಂತ್ರಿಸುತ್ತ ಬಂದಿವೆ. ಕೆಲಸಗಾತಿಯರ ಸರ್ವಸಮ್ಮತಿ ಇಲ್ಲದೇ ರಾಣಿ ಯಾವ ಕೆಲಸವನ್ನೂ ಮಾಡುವಂತಿಲ್ಲ.

ಪ್ರಿಯಾ : ಕಾರ್ಮಿಕರು, ಕಾರ್ಮಿಕರು ಅಂತಿದ್ದೀರಲ್ಲ? ಅವು ನಮ್ಮ ಹಾಗೆ ಮುಷ್ಕರ ಹೂಡಿ ಕಾರಖಾನೆ ಮಾಲೀಕರಿಗೆಲ್ಲ ಮಣಿಯುವಂತೆ ಮಾಡುವ ವಿಧಾನಗಳನ್ನೂ ರೂಢಿಸಿಕೊಂಡಿವೆಯೇ?

ಪ್ರಾಣ್ : ಹಾಗಲ್ಲ 'ಸರ್ವೇಜನಾಃ ಸುಖಿನೋ ಭವಂತು' ಎಂಬ ಸೂತ್ರವನ್ನು ಬಳಸುತ್ತವೆ. ಅರಸಿಯೂ ಸುತ್ತಲೂ ಅಂಗರಕ್ಷಕಿಯರ ಪಡೆ ವರ್ತುಲಾಕಾರದಲ್ಲಿ ಸದಾಕಾಲ ಉಪಸ್ಥಿತವಿರುತ್ತದೆ. ಸುರಕ್ಷಿತವಲ್ಲದ ತಾಣಕ್ಕೆ ರಾಣಿಯು ಹೋಗಬಯಸಿದರೆ, ಅವು ಪ್ರತಿಭಟಿಸುತ್ತವೆ. ಮುಂದುವರಿಯದಂತೆ ಎಚ್ಚರಿಸುತ್ತವೆ. ಇದನ್ನೂ ಅಲಕ್ಷಿಸಿದರೆ, ಕೆಲವು ಮೀಸೆ ಹಿಡಿದು ಎಳೆಯುತ್ತವೆ. ಕೆಲವು ಕಾಲುಗಳನ್ನು ಎಳೆಯುತ್ತವೆ, ಅಂಗಾಂಗಗಳನ್ನು ಕಚ್ಚುವುದನ್ನೂ ಮಾಡುವವು. ಇಷ್ಟಕ್ಕೂ ಅವಳು ಮಣಿಯದಿದ್ದರೆ ಎಲ್ಲವೂ ಸೇರಿ ತೇರಿನಂತೆ ಎಳೆದುಕೊಂಡು ಸುರಕ್ಷಿತ ಸ್ಥಳವನ್ನು ಸೇರುವವು.

ಪ್ರಿಯಾ : ಇವಿಷ್ಟರಿಂದಲೇ ಅವು ಪ್ರಜಾಪ್ರಭುತ್ವದಲ್ಲಿ ವಿಶ್ವಾಸವಿಟ್ಟವರು ಎಂದು ಹೇಗೆ ಹೇಳುತ್ತೀರಾ?

ಪ್ರಾಣ್ : ಅರಸಿಯ ಅಲಂಕಾರ, ಊಟ-ಉಪಚಾರ, ಗೂಡಿನ ಉದ್ದಳತೆ, ಆಹಾರ ಸಂಗ್ರಹ-ವಿತರಣೆ, ಮೊಟ್ಟೆ, ಮಕ್ಕಳು-ಮರಿಗಳ, ಲಾಲನೆ-ಪಾಲನೆ, ಸ್ಥಳಾಂತರ, ವಲಸೆಗಳ ವ್ಯವಸ್ಥೆ, ಅಕಸ್ಮಾತ್ ಗಂಡಾಂತರ ಒದಗಿಸಿದಾಗ ಸಕಲರನ್ನೂ ಸುರಕ್ಷಿತ ಸ್ಥಳಕ್ಕೆ ಸಾಗಿಸುವ ಸಕಲ ನಿರ್ಣಯಗಳನ್ನು ತೆಗೆದುಕೊಳ್ಳುವ ಸಮಾಜ ಪ್ರಜಾಪ್ರಭುತ್ವವಲ್ಲದೆ ಇನ್ನೇನು? (ಧ್ವನಿಯೇರಿಕೆ)

ಪ್ರಿಯಾ : ಹಾ ! ಹಾ! ಕೋಪಮಾಡ್ಕೋಬೇಡಿ... ಅವಿಭಾಜ್ಯ ಕುಟುಂಬದ ಪ್ರಜಾಪ್ರಭುತ್ವಕ್ಕೆ ಅವು ಯಾವ ತಂತ್ರ ಬಳಸುತ್ತವೆ?

ಪ್ರಾಣ್ : ಅವೇ ಬಹಳ ಕುತೂಹಲಕರವಾದ ವಿಷಯ. ಅರಸಿಯ ಬೃಹತ್ ಭಾರ ಗೂಡಿಗೊಂದು ಅಭಿಮಾನದ ವಿಷಯ. ಇದು ಅವಳು ಹೆಚ್ಚೆಚ್ಚು ಮೊಟ್ಟೆಗಳನ್ನು ಹೊರಹಾಕುವ ಸಂಕೇತ; ಪ್ರಜೆಗಳ ಸಂಖ್ಯೆಯೇ ಅವುಗಳ ಸಾಮರ್ಥ್ಯವೆಂದೆನಲ್ಲ? ಗೂಡು ಕೇರಿಯಂತೆ, ಹಳ್ಳಿಯಾಗಿ, ನಗರವಾಗಿ, ಮಹಾನಗರದಷ್ಟು ಬೆಳೆದಾಗ, ಹೊಸ ಹೊಸ ಕೊಠಡಿಗಳನ್ನು ರಚಿಸಬೇಕಾಗುತ್ತವೆ. ಹೆಚ್ಚೆಚ್ಚು ಆಹಾರ ಸಂಗ್ರಹಿಸಬೇಕಾಗುತ್ತವೆ. ವೈರಿಗಳಿಂದ ಸಂರಕ್ಷಣೆಗೆ ಹೆಚ್ಚಿನ ಲಕ್ಷ್ಯ ಪೂರೈಸಬೇಕಾಗುತ್ತವೆ. ಗೂಡಿನ ಚಟುವಟಿಕೆ ನಿಯಂತ್ರಿಸುವದು ಕಷ್ಟಕರ ಎನಿಸಿದಾಗ ನವಯುವಕ, ಯುವತಿಯನ್ನು ಗೂಡಿನಿಂದ ಹೊರಗೆ ಹಾಕಲಾಗುತ್ತವೆ.

ಪ್ರಿಯಾ : ಅರಸಿ, ವರ್ಷವೊಂದಕ್ಕೆ ಎಷ್ಟು ಸಂತಾನೋತ್ಪತ್ತಿ ಮಾಡಬಲ್ಲದು?

ಪ್ರಾಣ್ : ಗಂಡು ಕೂಡಿಕೊಂಡ ಅಲ್ಪ ಸಮಯದಲ್ಲಿ ಮೃತಪಟ್ಟರೂ, ರಾಣಿ ಹದಿನಾಲ್ಕು ವರ್ಷ ದೀರ್ಘಕಾಲ ಬದುಕಿದ ದಾಖಲೆಗಳಿವೆ. ಇಳಿ ಪ್ರಾಯದಲ್ಲಿ ಮೊಟ್ಟೆ ಇಡುವ ಶಕ್ತಿ. ಕುಂದುತ್ತ ಹೋಗುತ್ತವೆ. ಅವಾಗ ಅಂತಹ ಪ್ರಸಂಗಗಳಲ್ಲಿ ಕೆಲಸಗಾರ್ತಿಯರು ಹೊಸದಾಗಿ ಕೂಡಿದ ಯುವತಿಯನ್ನು ಗೂಡಿಗೆ ಎಳೆದು ತಂದು ಪಟ್ಟಕಟ್ಟುವವು. (ಧ್ವ.ವಿ.)

ಪ್ರಿಯಾ : ಅಂದರೆ ಗೂಡಿನಲ್ಲಿ ಇಬ್ಬರು ರಾಣಿಯರಾದರು? ಇದರಿಂದ ಹಿರಿರಾಣಿ-ಕಿರಿರಾಣಿಯರಲ್ಲಿ ಯಾವ ಘರ್ಷಣೆಯೂ ಆಗದೇ? ಅರಸಿಯು ಅನಾರೋಗ್ಯದಿಂದ ಮೃತಪಟ್ಟರೆ ಏನು ಮಾಡುತ್ತಾರೆ?

ಪ್ರಾಣ್ : ಘರ್ಷಣೆಯಂತೂ ಆಗದು... ಅರಸಿಯ ಸಾವು...... ಹಾಗೆ ಆಗುವದು ತೀರ ಅಪರೂಪ. ಅಂಥ ಪ್ರಸಂಗದಲ್ಲಿ ಇಡೀ ಗೂಡೇ ಶೋಕಗ್ರಸ್ತವಾಗುತ್ತವೆ. ಕೆಲಸಗಾರ್ತಿಯರು, ಅವಳು ನಿದ್ರೆ ಹೋಗಿದ್ದಾಳೆ ಎಂಬಂತೆ, ಎಚ್ಚರಿಸುವ ಸರ್ವಯತ್ನ ಮಾಡುತ್ತಿರುತ್ತವೆ. ಪಾಪ ಯಶಸ್ಸು ಸಿಗದಿದ್ದಾಗ, ಅವಳ ಕಳೇಬರವನ್ನು ಹೊತ್ತು, ಗೊತ್ತುಗುರಿ ಇಲ್ಲದೇ ಗೂಡಿನ ಒಳ-ಹೊರಗೆ ಸುತ್ತಾಡುತ್ತವೆ. ಶರೀರ ಒಣಗಿ ಅಂಗಾಂಗಗಳು ಬೇರ್ಪಡಲು ಪ್ರಾರಂಭವಾದಾಗ, ರಾಣಿ ಇನ್ನಿಲ್ಲ! ಅನ್ನೋ ಸತ್ಯ ಅರಿವಾದಾಗ ಮೃತದೇಹವನ್ನು ಗೂಡಿನ ಹೊರಕ್ಕೆ ತಳ್ಳಿಬಿಡುವವು.

ಪ್ರಿಯಾ : ಅಂಥ ಹೊತ್ತಿನಲ್ಲಿ ಗೂಡಿನ ಜನಸಂಖ್ಯೆ ಬೆಳೆಯುವುದು ಹೇಗೆ?

ಪ್ರಾಣ್ : ಕೆಲಸಗಾರ್ತಿಯರು ಬೇರೊಂದು ಗೂಡಿನ ಮೇಲೆ ಆಕ್ರಮಣ ನಡೆಸಿ (ಯುದ್ಧ ಪರಿಣಾಮ) ಅಲ್ಲಿಯ ರಾಣಿಯನ್ನು ಅಪಹರಿಸಿಕೊಂಡು ಬರುವದು ತೀರ ಸಾಮಾನ್ಯ, ಆದರೆ ನೋಡು ಸವತಿಮಕ್ಕಳಲ್ಲಿ ಮತ್ಸರ ಭಾವನೆ ಬೆಳೆಯದಿರುವದು ಇರುವೆಗಳ ವೈಶಿಷ್ಟ್ಯ

ಪ್ರಿಯಾ : ಇರುವೆಗಳ ಸಮಾಜ, ಇಷ್ಟೊಂದು ಕುತೂಹಲಕಾರಿಯಾಗಿರುತ್ತದೆಯೇ? ಅವುಗಳು ಶಿಸ್ತಿನ ಜೀವನ ನಡೆಸುತ್ತವೆ ಎಂದ್ರಲ್ಲ ಅವುಗಳ ಬಗ್ಗೆಯೂ ಹೇಳ್ರಲ್ಲ?

ಪ್ರಾಣ್ : ಗಡಿಯಾರದತ್ತ ನೋಡು! ಮಧ್ಯರಾತ್ರಿ ಕಳೆದುಹೋಗಿದೆ. ನಮ್ಮದು ಇರುವೆಯ ಮದುವೆಯಲ್ಲ ನೋಡು.

(ಅರ್ಥಪೂರ್ಣ ಗಹಗಹಿಸಿದ ನಗೆ)

❑

# ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಲ್ಲಿ ನಡೆದ ಉತ್ತರ ಕನ್ನಡ ಜಿಲ್ಲೆಯ ೯ನೆಯ ಸಾಹಿತ್ಯ ಸಮ್ಮೇಳನಕ್ಕೆ ಕಾಮತರು ಸಿದ್ಧಪಡಿಸಿದ ಅಧ್ಯಕ್ಷ ಭಾಷಣ

ಸನ್ಮಾನ್ಯ ಹಿರಿಯರೇ ಸಾಹಿತ್ಯಾಭಿಮಾನಿಗಳೇ ಹಾಗೂ ಕಿರಿಯ ಮಿತ್ರರೇ, ಹೊನ್ನಾವರದ ಆತ್ಮೀಯರೇ,

ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನಕ್ಕೆ ಅನೇಕರು ಆಸೆಪಡುವಾಗ ಆ ಕುರಿತು ಎಂದೂ ಯೋಚಿಸದೇ ತೆಪ್ಪಗಿದ್ದ ನನ್ನನ್ನು ಸರ್ವಾನುಮತದಿಂದ ಆರಿಸಿದ್ದೇಕೆ? ಎಂಬುದು ಈ ವಿಚಾರ ತಿಳಿದಾಗಿನಿಂದಲೂ, ಸಮಸ್ಯೆಯಾಗಿಯೇ ಉಳಿದಿದೆ! ಆದರೆ ಇದೊಂದು ಸದವಕಾಶ. ಈ ಅವಕಾಶವನ್ನು, ಹುಟ್ಟಿನಿಂದ ಲಕ್ಷ್ಮೀಪುತ್ರನೆನಿಸಿಕೊಂಡು, ನಂತರ ಸರಸ್ವತಿಯ ದತ್ತಕ ಪುತ್ರನಾಗಲು ಕಳೆದ ಅರ್ಧಶತಮಾನ ನಡೆಸಿದ ಹೋರಾಟದ ಬಗೆಯ ಅಲ್ಪ ಪರಿಚಯವನ್ನು ತಮಗೆಲ್ಲ ಮಾಡಿಕೊಡಲು ಬಳಸಬೇಕೆಂದಿದ್ದೇನೆ.

ಆ ಕಾಲದಲ್ಲಿ, ಏಳು ವರ್ಷ ತುಂಬಿದ ಬಳಿಕವೇ ಶಾಲೆಗೆ ಪ್ರವೇಶವಿತ್ತು. ಬಡವರ ಮಕ್ಕಳು, ಸಾಹುಕಾರರ ಮಕ್ಕಳು, ಯಾರಿಗೂ ಚಡ್ಡಿ ಹೊಲಿಸುವ ಪರಿಪಾಠವಿರಲಿಲ್ಲ! ಉದ್ದನೆಯ ಮೊಳಕಾಲಿನ ತನಕ ಬರುವ ಅಂಗಿಯೇ ಎಲ್ಲ ಮಕ್ಕಳ ಒಂದೇ ಉಡುಪು. ಅದರಲ್ಲಿ ಊರೆಲ್ಲ ಸುತ್ತಲು ಯಾರ ಆಕ್ಷೇಪವೂ ಇರಲಿಲ್ಲ. ಆ ಎಳೆಪ್ರಾಯದಲ್ಲೇ ಕಾವಿಚಿತ್ರಗಳನ್ನು ರಚಿಸುವ ಗಾರೆಯವರು. ಶ್ರೀಗಂಧ ಕೊರೆಯುವ ಗುಡಿಗಾರರು, ಮಣ್ಣಿನಿಂದ ಗಣೇಶನನ್ನು ನಿರ್ಮಿಸುವ ಮಾಟಗಾರರು, ಪೂಜಾಸಾಮಗ್ರಿ ಮಾಡುವ ಕಂಚುಗಾರರು, ಹಗ್ಗ ಹೆಣೆಯುವ ಖಾರ್ವಿಗಳು, ಹಡಗು-ಕಟ್ಟುವ ಖಾಂಡೇ ಖಾರ್ವಿಗಳ ಬಗೆ ಬಗೆಯ ಕೈಚಳಕ ನೋಡುವುದರಲ್ಲಿ ತನ್ಮಯನಾಗಿ ಬಿಡುತ್ತಿದ್ದೆ. ದರ್ಜಿಗಳ ಹೊಲಿಗೆ ಯಂತ್ರ ತಿರುಗಿಸುವದು, ತಾಮಟ್‌ಕಾರ (ತಾಮ್ರದ ಪಾತ್ರೆ ಹಡಗ ಮಾಡುವವರು) ರ ಕುಲುಮೆ ಹೊತ್ತಿಸುವದು, ನನಗೆ ಎಲ್ಲಿಲ್ಲದ ಸಂತೋಷ ಕೊಡುತ್ತಿದ್ದವು. ಮನೆಯಲ್ಲೇ ಮೊಳೆ ಬಡಿಯುವದು, ಕಿತ್ತು ತೆಗೆಯುವದು, ಮತ್ತೆ ಬಡಿಯುವ ಸಪ್ಪಳ ಕೇಳಿಸಿಕೊಳ್ಳುತ್ತ "ಎಲ್ಲೋ ಆಚಾರಿಕುಟುಂಬದಲ್ಲಿ ಹುಟ್ಟುವವನಿದ್ದು, ಜವಳಿ ವ್ಯಾಪಾರಿಗಳಲ್ಲಿ ಬಂದಿದ್ದಾನೆ" ಎಂದು ತಾಯಿಯ ಕೌತುಕದ ಉದ್ಗಾರವನ್ನು ಕೇಳಬೇಕಾಗುತ್ತಿತ್ತು.

ಹೊನ್ನಾವರ ಕಸಬಾ ಗಂಡು ಮಕ್ಕಳ ಶಾಲೆಯಲ್ಲಿ ಥೂಳೆತ್ತ, ಬಿನ್, ಪ್ರಾಥಮಿಕ ಶಿಕ್ಷಣ ಮುಗಿಸಿ ಮಾಧ್ಯಮಿಕ ಶಿಕ್ಷಣಕ್ಕಾಗಿ ನ್ಯೂ ಇಂಗ್ಲಿಷ್ ಸ್ಕೂಲ್ ಸೇರಿದ್ದಾಯ್ತು. ಇದು ನಿಜಕ್ಕೂ ಅನ್ವರ್ಥಕ ನಾಮಕ್ಕೆ ಸರಿ ಹೋಗುವಂತೆ ಅಲ್ಲಿ ಪ್ರತಿ ತಿಂಗಳಿಗೊಬ್ಬರು ಹೊಸ ಶಿಕ್ಷಕರು ಬಂದು ಸೇರುತ್ತಿದ್ದಂತೆ, ರಾಜೀನಾಮೆ ಕೊಟ್ಟು ಹೋಗಿಬಿಡುತ್ತಿದ್ದರು! ಮುಂದೆ ಹಾಯ್ ಕೋರ್ಟ್ ನ್ಯಾಯಾಧಿಶರಾದ ಜಿ.ಎನ್. ಸಭಾಹಿತ, ವರಕವಿಗಳಾದ ವಿ.ಜಿ. ಭಟ್ಟರು ಖ್ಯಾತ, ಜಾನಪದ ಸಂಶೋಧಕ-ಲೇಖಕ ಡಾ। ಎಲ್. ಆರ್. ಹೆಗ್ಡೆ ಮುಂತಾದವರು, ಮೊದಲಲ್ಲಿ ಮೇಷ್ಟ್ರು ಆಗಿದ್ದು ನಮ್ಮ ಶಾಲೆಯಲ್ಲಿಯೇ! ಮುಂದೆ ಉಚ್ಚ ಶಿಕ್ಷಣಕ್ಕಾಗಿ ಕುಮಟೆಯ ಕ್ಯಾನರಾ ಕಾಲೇಜು ಸೇರಿದಾಗ, ಪ್ರೊ. ಗೋಪಾಲಕೃಷ್ಣ ಅಡಿಗರು ಡಾ. ಜಿ.ಎಸ್. ಆಮೂರರಂಥ ಮೇಧಾವಿ ಉಪನ್ಯಾಸಕರಿದ್ದರು. ಮುಂದಿನ ಶಿಕ್ಷಣಕ್ಕಾಗಿ ಧಾರವಾಡದ ಕರ್ನಾಟಕ ಕಾಲೇಜು ಸೇರಿ. ಪದವಿ ಹಾಗೂ ಅಲ್ಲಿಯೇ ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿ ಪಡೆದೆ. ಆ ಬಳಿಕ ಎರಡು ವರ್ಷ ಕರ್ನಾಟಕದ ಕಾಲೇಜಿನಲ್ಲಿ ಶಿಕ್ಷಕನಾಗಿ, ಶಿಷ್ಯವೇತನ ಪಡೆದು ನ್ಯೂಯಾರ್ಕ್ ವಿಶ್ವವಿದ್ಯಾಲಯ ಸೇರಿಕೊಂಡಾಗ, ಅದು ಅಂತರಾಷ್ಟ್ರೀಯ ಖ್ಯಾತಿಯ ಪರಿಸರ ವಿಜ್ಞಾನ ಮತ್ತು ಅರಣ್ಯಶಾಸ್ತ್ರಗಳ ಅಧ್ಯಯನ ಕೇಂದ್ರವೆಂಬ ಅರಿವು ಮೂಡಿತು! ಹೆಚ್ಚಿನ ಪರಿಶ್ರಮದಿಂದ ನಾಲ್ಕು ವರ್ಷ ದುಡಿದು ಡಾಕ್ಟರೇಟು ಪಡೆದೆ. ಅದೇ ಅವಧಿಯಲ್ಲಿ ಅಮೇರಿಕನ್ ಸರಕಾರದ ಕೃಷಿಖಾತೆಯು ಏರ್ಪಡಿಸಿದ ಅರಣ್ಯ ವೀಕ್ಷಣೆ-ತರಬೇತಿಯನ್ನೂ ಪಡೆದೆ. ಅಂದಿನ ದಿನಗಳಲ್ಲಿ ಈ ಕ್ಷೇತ್ರದ ಕಠಿಣ ಶ್ರಮದಿಂದಾಗಿ ಅಮೇರಿಕನ್ ವಿದ್ಯಾರ್ಥಿಗಳೇ ಹೆಚ್ಚಾಗಿ ಸೇರಿಕೊಳ್ಳುತ್ತಿರಲಿಲ್ಲ. ಕೈತುಂಬ ಸಂಬಳ ತರುವ ವೃತ್ತಿಯೊಂದನ್ನು ಸುಲಭದಲ್ಲಿ ಅಲ್ಲಿಯೇ ಕೈಕೊಳ್ಳಬಹುದಾಗಿತ್ತು. ಆದರೆ ನನ್ನ ಈ ನೆಲ-ಜಲ ಕೈಬೀಸಿ ಕರೆಯುತ್ತಿತ್ತು. ಬೇರೊಂದು ದೇಶದಲ್ಲಿ ಪರಕೀಯನಾಗಿ ಬಾಳಲು ಮನಸ್ಸುಬಾರದೇ ಸ್ವದೇಶಕ್ಕೆ ಮರಳಿದೆ. ಅರಣ್ಯಶಾಸ್ತ್ರದ ಡಾಕ್ಟರೇಟು, ವಿಶೇಷ ತರಬೇತಿಗಳ ಪ್ರಯೋಜನ ನನ್ನ ನಾಡಿಗೆ, ಜಿಲ್ಲೆಗೆ ಆಗಲಿ ಎಂಬುದು ಆಗಿನ ಕನಸಾಗಿತ್ತು.

ಶೇಕಡಾ ಎಂಬತ್ತರಷ್ಟು ಅರಣ್ಯವಿದ್ದ ಉತ್ತರ ಕನ್ನಡ ಜಿಲ್ಲೆಯಲ್ಲಿ ನನ್ನ ಪರಿಣತಿ ಬಳಸಲಾಗಲಿಲ್ಲವಾದ್ದರಿಂದ ಭಾರತ ಸರಕಾರ ನನ್ನ ಸೇವೆಯನ್ನು ಕಾಡೇ ಇಲ್ಲದ ಮರುಭೂಮಿಯ ರಾಜಸ್ಥಾನಕ್ಕೆ ಎರವಲುಕೊಟ್ಟಿತು. ಉದಯಪುರ ಕೃಷಿ ವಿಶ್ವವಿದ್ಯಾಲಯದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಮೂರುವರ್ಷ ಪಾಠ ಹೇಳಿದರೂ, ಸೇವೆಯ ಲಾಭವನ್ನು ಪಡೆದ ಸಂಸ್ಥೆಯು ನನ್ನನ್ನು ಸಿಬ್ಬಂದಿಯಲ್ಲಿ ಸೇರಿಸಿಕೊಳ್ಳಲು ಒಪ್ಪದಿದ್ದರಿಂದ ಕಬ್ಬಿನ ಕೀಟ ನಿಯಂತ್ರಣ ಕೈಕೊಂಡಿದ್ದ ಕಾಮನ್ ವೆಲ್ತ್ ಸಂಸ್ಥೆ ನಡೆಸುತ್ತಿದ್ದ ಪಶ್ಚಿಮಬಂಗಾಲದ ಇತಿಹಾಸ ಪ್ರಸಿದ್ಧ ಪ್ಲಾಸಿಗೆ ಧಾವಿಸಿದೆ. ಅಲ್ಲಿ ಆವಾಗಲೇ ರಕ್ತಪಾತದಲ್ಲಿ ತೊಡಗಿದ ನಕ್ಸಲೀಯರಿಂದ ಸಂರಕ್ಷಿಸಿಕೊಳ್ಳಲು ಎರಡೇ ವರ್ಷಗಳಲ್ಲಿ ಕಂಬಿ ಕಿತ್ತ ಬೇಕಾಯಿತು. ನೌಕರಿ ಸಿಗದಿದ್ದರೂ ಶಿಕ್ಷಣ ಸಂಶೋಧನೆಗಳ ಸಾಮೀಪ್ಯವಿರಲಿ ಎಂದು ಬೆಂಗಳೂರಿನ ಮಲ್ಲೇಶ್ವರಂದಲ್ಲಿ "ವೈಜ್ಞಾನಿಕ ಛಾಯಾಗ್ರಹಣ ಲ್ಯಾಬೋರೇಟರಿ"ಯನ್ನು ಪ್ರಾರಂಭಿಸಿದೆ. ಆದರೆ ಇದಕ್ಕೆ ಬೇಕಾಗಿದ್ದ ಪೂರ್ವ ತರಬೇತಿ ನನಗಿರಲಿಲ್ಲ. ಸ್ವಾಧ್ಯಾಯದಲ್ಲಿದ್ದ ಅಚಲ ವಿಶ್ವಾಸದಿಂದಾಗಿ ಸ್ವಯಂ ಪರಿಣತಿ ಪಡೆದೆ. ಕಳೆದ ಕಾಲುಶತಕದಲ್ಲಿ ರಾಷ್ಟ್ರೀಯ ಅಂತರ್ರಾಷ್ಟ್ರೀಯ ಸ್ನಾತಕೋತ್ತರ ಸಂಶೋಧನಾ ಸಂಸ್ಥೆಗಳ ಪ್ರಾಧ್ಯಾಪಕರಿಗೆ, ವಿದ್ಯಾರ್ಥಿಗಳಿಗೆ ವೈಜ್ಞಾನಿಕ ಛಾಯಾಗ್ರಹಣದ ನೆರವು ನೀಡುವಂತಾಗಿದೆ. ಬೆಂಗಳೂರಿನ ಆಸುಪಾಸಿನ ಇಂಡಿಯನ್ ಇನ್‌ಸ್ಟಿಟೂಟ್ ಆಫ್ ಸೈನ್ಸ್", "ನಿಮ ಹಾನ್ಸ್." ನ್ಯಾಶನಲ್ ಡೇರಿ ರಿಸರ್ಚ್ ಲ್ಯಾಬ್", "ಆಸ್ಟ್ರಾ" "ಹಾರ್ಟಿಕಲ್ಚರಲ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯಾ" "ಇಂಡಿಯನ್ ಇನ್‌ಸ್ಟಿಟ್ಯೂಟ್ ಮುಂತಾದ ಸಂಸ್ಥೆಗಳ ಬಗೆಬಗೆಯ ವೈಜ್ಞಾನಿಕ ಛಾಯಾಗ್ರಹಣ ಕೈಕೊಂಡು ಬೆನ್ನು ತಟ್ಟಿಸಿಕೊಂಡಿದ್ದೇನೆ. ಆಗೊಮ್ಮೆ ಈಗೊಮ್ಮೆ ಮೈಸೂರಿನ ಸಿ.ಎಫ್.ಟಿ.ಆರ್.ಆಯ್, ತಿರುಪತಿ, ಮುಂಬೈ ವಿಶ್ವವಿದ್ಯಾಲಯಗಳು, ಅಂಚೆಯಿಂದ ಸಾಮಗ್ರಿ ಕಳಿಸಿ, ಛಾಯಾಚಿತ್ರಗಳಿಗೆ ವಿನಂತಿಸಿಕೊಂಡಿದ್ದೂ ಇದೆ. ಈ ಎಲ್ಲ ಸಂಸ್ಥೆಗಳಿಗೆ ಅವರದೇ ಪ್ರಯೋಗಶಾಲೆಗಳಿದ್ದು ಛಾಯಾಗ್ರಹಣದ ವ್ಯವಸ್ಥೆ ಇದೆಯೆಂದು ಬೇರೆ ಹೇಳಬೇಕಾಗಿಲ್ಲ. ಆದರೂ ಕೇಳಿಕೊಂಡು ಬರುವರು. ಈ ಕ್ಷೇತ್ರದಲ್ಲಿ ಈವರೆಗೆ ಪ್ರತಿಸ್ಪರ್ಧಿಗಳೇ ಇಲ್ಲದಿರುವದು ವಿಸ್ಮಯದ ಮಾತು.

ಬಾಲ್ಯದಲ್ಲಿಯೇ ಶರಾವತಿ ನದಿ, ತೆಂಗಿನ ತೋಪುಗಳು ನಿತ್ಯಹರಿತ್ ಪರಿಸರ, ನನ್ನಲ್ಲಿ ಹುದುಗಿಕೊಂಡಿದ್ದ ಚಿತ್ರಕಲೆಯನ್ನು ಅರಳುವಂತೆ ಮಾಡಿದ್ದವು. ಪ್ರೌಢಶಾಲೆಯಲ್ಲಿದ್ದಾಗ ದೊರೆತ ಅಲ್ಪ ತರಬೇತಿಯಿಂದಾಗಿ ಅದು ಹೆಮ್ಮರವಾಗಿ ಬೆಳೆಯಲು ಅನುಕೂಲವಾಯಿತು. ಸಾಹಿತ್ಯ ಅಕಾಡೆಮಿಯ ಫೆಲೋ ಆಗಿ, ಒಂದು ವರ್ಷ ಕಾಲ ಮಧ್ಯಪ್ರದೇಶದ ಆದಿವಾಸಿಗಳನ್ನು ಅಭ್ಯಸಿಸುವ ಅವಕಾಶ ದೊರೆತಾಗ ಅಸಂಖ್ಯಾತ ರೇಖಾಚಿತ್ರಗಳನ್ನು ಮಾಡಿ ಇಟ್ಟಿದ್ದೇನೆ. ಪತ್ನಿಯ ಹಾಸ್ಯಲೇಖ ಸಂಗ್ರಹಗಳಿಗೆ ವ್ಯಂಗ್ಯ ಚಿತ್ರಗಳನ್ನು ಸಿದ್ಧಪಡಿಸಿದೆ. ಅವಳ ಮಧ್ಯಯುಗದ ಕನ್ನಡಿಗರ ಜನಜೀವನದ ಸಂಪ್ರಬಂಧಕ್ಕೆ ಗ್ರಂಥಕ್ಕೆ ಬಹಳಷ್ಟು ರೇಖಾಚಿತ್ರಗಳನ್ನು ಮಾಡಿಕೊಟ್ಟೆ. ಇಂದು, ನನ್ನ ಕನ್ನಡ ಬರವಣಿಗೆ, ಛಾಯಾಚಿತ್ರ, ರೇಖಾಚಿತ್ರಗಳು ವಿದೇಶಕ್ಕೆ ಹೊರಟಿವೆ. ಅಮೇರಿಕೆಯಲ್ಲಿ ಕಂಪ್ಯೂಟರ್ ಇಂಜಿನಿಯರ್ ಆಗಿರುವ ಏಕಮಾತ್ರ ಪುತ್ರ ವಿಕಾಸನು, 'ಮಲ್ಟಿಮೀಡಿಯ' ಕಾರ್ಯಕ್ರಮಕ್ಕೆ ಈ ರೂಪಾಂತರವನ್ನು ಬಳಸಿಕೊಳ್ಳಲಾರಂಭಿಸಿದ್ದಾನೆ. ಅದಕ್ಕೆ ಚಿತ್ರಸಂಪತ್ತು ಪೂರೈಸಿದ್ದೇನೆ. ಈಗ ಮಡದಿಯು "ಕನ್ನಡಿಗರ ರಸಿಕ ಪರಂಪರೆ' ಕುರಿತು ಗ್ರಂಥರಚನೆಯಲ್ಲಿ ತೊಡಗಿದ್ದಾಳೆ. ಅದನ್ನು ಪ್ರಕಟಿಸಲು ಪ್ರಕಾಶಕರೂ ಮುಂದೆ ಬಂದಿದ್ದಾರೆ. ಕಳೆದ ಮೂರು ದಶಕಗಳಲ್ಲಿ ಕರ್ನಾಟಕದ ಉದ್ದಗಲದ ಕಾಡು ಮೇಡುಗಳಲ್ಲಿ ಅಲೆದಾಡಿ ಸಂಗ್ರಹಿಸಿದ ಶಿಲ್ಪಗಳ, ಭಿತ್ತಿಚಿತ್ರಗಳ, ವೀರಗಲ್ಲು, ಮಾಸ್ತಿಕಲ್ಲು, ನಿಸಿದಿ, ತಾಳೆಗರಿ ಗ್ರಂಥಗಳ, ಪುರಾತನ ಹಸ್ತಪ್ರತಿಗಳ ಸಾವಿರಾರು ಚಿತ್ರಗಳ ಭಂಡಾರವೇ ಇದ್ದು ಮುಂಬರುವ ಗ್ರಂಥಕ್ಕಾಗಿ ಸುಮಾರು ಒಂದು ಸಹಸ್ರ ರೇಖಾಚಿತ್ರಗಳನ್ನು ರಚಿಸುವ ಕೆಲಸ ಪ್ರಾರಂಭವಾಗಿಬಿಟ್ಟಿದೆ.

ಉತ್ತರ ಕನ್ನಡಜಿಲ್ಲೆಯಲ್ಲಿ, ಅದೂ ಹೊನ್ನಾವರದಲ್ಲಿ ಹುಟ್ಟಿ, ಬೆಳೆದು ರಮ್ಯವಾದ ನಿಸರ್ಗದ ಆಕರ್ಷಣೆಯಲ್ಲಿ ಒಳಗಾಗದೇ ಇರುವದು ಹೇಗೆ ಸಾಧ್ಯ? ಎಳೆತನದಲ್ಲಿ ನೀಲಕೋಡಕ್ಕೆ ಎತ್ತಿನಗಾಡಿಯಲ್ಲಿ ಹೊರಟಾಗ ದಾರಿಯುದ್ದಕ್ಕೂ ಸವಿದ ಸೃಷ್ಟಿಸೌಂದರ್ಯ ಇಂದಿಗೂ ಕಣ್ಣಿಗೆ ಕಟ್ಟಿದಂತಿದೆ. ಗಾಳಿಗೋಡುವ ನಾವೆಯಲ್ಲಿ 'ಕುರ್ವೆಗೆ' ಕೊಟ್ಟ ಬೆಳದಿಂಗಳ ಭೇಟಿ ಒಂದು ಅಪೂರ್ವದ ಅನುಭವ. ವಾಹನ ಸೌಕರ್ಯವಿಲ್ಲದ ದಿನಗಳಲ್ಲಿ ಕಾಲುನಡಿಗೆಯಲ್ಲಿ ಜೋಗ ಜಲಪಾತದ ದರ್ಶನ ಪಡೆದದ್ದುಂಟು. ಕುಮಟೆಯಿಂದ ಹೊನ್ನಾವರಕ್ಕೆ ಮಳೆಗಾಲದ ಕಗ್ಗತ್ತಲಿನ ರಾತ್ರಿಯಲ್ಲಿ ಗಾಡಿ ಪ್ರಯಾಣಮಾಡಿದ್ದು ಒಂದು ಅಪರೂಪದ ಅನುಭವವಾಗಿ ಉಳಿದಿದೆ. ಉಳುವರೆ ತಾರಿಯಿಂದ ಅತಿ ಹಗುರಾಗಿ ತೇಲುತ್ತಿದ್ದ ಪಾತಿ ದೋಣಿಯಲ್ಲಿ ವಾಸರ ಕುದ್ರಿಗೆ ಗ್ರಾಮಕ್ಕೆ ಸೇರಲು ಹೆಚ್ಚಿನ ಎದೆಗಾರಿಕೆ ಬೇಕಿತ್ತು. ಗೇರಸೊಪ್ಪಾ ನಗರ ಬಸದಿಗೆ ಹೊರಟಾಗ ನಾವೆಯ ಜಲಸಮಾಧಿ ಆಗುವದರಲ್ಲಿತ್ತು. ಕಾಲು ನಡಿಗೆಯಿಂದಾಗಿ ನಮ್ಮ ಗಿರಿಕಂದರ ಹಳ್ಳ-ಕೊಳ್ಳಗಳ ನಿಕಟವಾದ ಪರಿಚಯ ಮಾಡಿಕೊಳ್ಳುವಂತಾಯಿತು. ನಮ್ಮ ಊರು ವಿಶಿಷ್ಟವಾದದ್ದು. ಅಪೂರ್ವವಾದದ್ದು. ಅದಕ್ಕೆ ಸುದೀರ್ಘವಾದ ಇತಿಹಾಸವೂ ಇದೆ. ಹದಿನಾಲ್ಕನೆಯ ಶತಮಾನದಲ್ಲಿ ನಮ್ಮೂರಿಗೆ ಭೇಟಿ ಇತ್ತ ಮೊರಾಕ್ಕೊದ ಪ್ರವಾಸಿ ಇಬ್ನ್-ಎ-ಬತೂತನು (ಕ್ರಿ.ಶ. ೧೩೦೪-೬೯) ತನ್ನ ಬರವಣಿಗೆಯಲ್ಲಿ ಇದಕ್ಕೆ 'ಹೊನಾವರ್' ಎಂಬ ಶಬ್ದ ಬಳಸಿದ್ದಾನೆ. ಹದಿನೈದನೆಯ ಶತಮಾನದಲ್ಲಿ ಬಂದ ಪರ್ಶಿಯದ ಪ್ರವಾಸಿ ಅಬ್ದುಲ್ ರಝೂಕ್‌ನು (ಕ್ರಿ.ಶ. ೧೪೧೩-೮೨) 'ಮನೋರ್' ಎಂದು ಕರೆದಿದ್ದಾನೆ. ಕ್ರಿ.ಶ. ೧೫೨೦ರಲ್ಲಿ ಭೇಟಿಕೊಟ್ಟ

ಪೋರ್ಚುಗೀಸ್ ಪ್ರವಾಸಿ ಡೊಮಿಂಗ್ ಪೈಸ್ ನು 'ಹೊನ್ನೊರ್' ಎಂದು ನಾಮಕರಣ ಮಾಡಿದ. ಪೋರ್ಚುಗೀಸ್ ಗೋವಾದ ವ್ಯಾಸ್ ರಾಯ್ ಆಗಿದ್ದ ತೊಮ್-ಡು-ಅರ್ತ ಮೆನೆಝಸ್‌ನು ಕ್ರಿ.ಶ. ೧೫೪೪ ರಲ್ಲಿ 'ಒನೋರ್' ಎಂದು ಗುರುತಿಸಿದ.

ವಿಶ್ವದ ಅನೇಕ ದೇಶಗಳಲ್ಲಿ ಸಂಚರಿಸಿದ ಇಟಾಲಿಯನ್ ಪ್ರವಾಸಿ, ಪಿಯೆತ್ರೊ ಡೆಲಾ ವಾಲೆ, ೪-೧೦-೧೬೨೨ರಂದು ಹೊನ್ನಾವರಕ್ಕೆ ಬಂದು ಇಳಿದ. ಹೊನ್ನಾವರದಿಂದ ಗೇರಸೊಪ್ಪೆಗೆ ಅವನು ದೋಣಿಯಲ್ಲಿ ಮಾಡಿದ ಪಯಣದ ವರ್ಣನೆ ಅತಿರಮ್ಯವಾಗಿದೆ. "ಒನೋರ್' (ಹೊನ್ನಾವರ) ದಿಂದ ಇಲ್ಲಿಗೆ (ಗೇರಸೊಪ್ಪೆ) ಮಾಡಿದ ಮೂರು ಹರದಾರಿಯ ಪ್ರವಾಸದಂತಹ ಆನಂದದಾಯಕ ಪ್ರಯಾಣವನ್ನು ನಾನು ನನ್ನ ಇಡೀ ಜೀವಮಾನದಲ್ಲಿ ಮಾಡಿಲ್ಲ. ನದಿಯ ಇಕ್ಕೆಲ ಬಲು ರಮಣೀಯವಾಗಿದೆ. ಎತ್ತರದ ಬೆಟ್ಟಗಳಲ್ಲಿ, ಕತ್ತಲೆಯ ಕಣಿವೆಗಳಲ್ಲಿ ಎಲ್ಲೆಲ್ಲೂ ಹಚ್ಚ ಹಸಿರು, ಕಣ್ಣಿಗೆ ಹಬ್ಬ. ಒತ್ತಾಗಿ ಮತ್ತು ಎತ್ತರವಾಗಿ ಬೆಳೆದ ಗಿಡಮರಗಳು. ಅನೇಕ ಕಡೆ ತೆಂಗಿನ ತೋಪುಗಳು, ಮಾವಿನ ಮರಗಳು, ಜುಳುಜುಳು ನಾದ ಮಾಡುವ, ಫಳಫಳ ಹೊಳೆಯುವ ತಿಳಿನೀರಿನ ಝರಿಗಳು. ನದಿಯ ಆಕಡೆ, ಈಕಡೆ, ಮರಗಳ ಪಡಿನೆರಳು. ಗೊಂಚಲು ಗೊಂಚಲು ಹೂಗಳ ದಿಬ್ಬಣ. ವಿವಿಧ ನಾರು-ಬೇರುಗಳು. ಎತ್ತರಕ್ಕೆ ಬೆಳೆದ ಮರ ಮತ್ತು ಕೊಂಬೆಗಳ ಮೇಲೆ ಹಬ್ಬಿದ ತರುಗುಲ್ಮಲತೆಗಳು, ಕಾಡಿಗೆ ಶೋಭೆಯನ್ನುಂಟುಮಾಡುತ್ತಿದ್ದವು. ಇಷ್ಟೆಲ್ಲಾ ಸೌಂದರ್ಯದ ಮಧ್ಯೆ (ಶರಾವತಿ) ನದಿಯೊಂದು ಡೊಂಕು ಡೊಂಕಾಗಿ ಹರಿಯುತ್ತಿತ್ತು. ನಾನು ಕಂಡ ನದಿಗಳಲ್ಲೆಲ್ಲ 'ಗರ್ಸೊಪ' (ಗೇರಸೊಪ್ಪಾ) ನದಿಯು ಕಟ್ಟಡಗಳ ಕೃತಕ ಸೌಂದರ್ಯವಿಲ್ಲದೇ, ಬೇರಾವ ಕೃತಕತೆಯೂ ಇಲ್ಲದೇ ಪ್ರಾಕೃತಿಕ ಸೌಂದರ್ಯದಿಂದ ಮೆರೆಯುವ ಅತ್ಯಂತ ರಮಣೀಯವಾದ ನದಿಯೆಂದು ಹೇಳಬಹುದು. ಆ ನದಿಯ ಅಕ್ಕ ಪಕ್ಕದ ಗುಡ್ಡಗಳಿಂದ ನೂರಾರು ಝರಿಗಳು ಹರಿದು ಬಂದು, ಕೆಳಗೆ ಧುಮುಕಿ ಮುಂದೆ ಸಾಗಿ ಸಮುದ್ರ ಸೇರುವಾಗ ಒಂದಾಗಿ ಕೂಡುತ್ತವೆ".

ಅಂದಿನ ಹೊನ್ನಾವರದ ಬಗ್ಗೆ ಪಿಯೆತ್ರೊಡೆಲ್ಲಾ ವಾಲೆ ಹೇಳಿದ್ದು ಹೀಗೆ: "ಹಿಂದೆಯೇ ಕಟ್ಟಿದ ಕೋಟೆಯೊಳಗೆ ಪೋರ್ಚುಗೀಸ್ ಅಧಿಕಾರಿಗಳು ಗೃಹನಿರ್ಮಾಣ ಮಾಡಿಕೊಂಡು ವಾಸವಾಗಿದ್ದಾರೆ. ಬಾವಿತೋಡಿ ತೋಟಗಳನ್ನು ಬೆಳೆಸಿದ್ದಾರೆ. ಬೀದಿಗಳು ದೊಡ್ಡದಾಗಿ ಸುವ್ಯವಸ್ಥೆಯಲ್ಲಿವೆ. ಸೇಂಟ್ ಕ್ಯಾಥರೀನ್ ಮತ್ತು ಸೇಟ್ ಅಂತೋನಿ ಹೆಸರಿನ ಎರಡು ಇಗರ್ಜಿಗಳಿವೆ. ಒತ್ತಾಗಿ ಬೆಳೆದ ತೆಂಗಿನ ತೋಪುಗಳಲ್ಲಿ ಗುಡಿಸಲುಗಳನ್ನು ಕಟ್ಟಿಕೊಂಡಿದ್ದಾರೆ. ಊರಿನಿಂದ ಒಂದು ಮೈಲಿ ದೂರದಲ್ಲಿ ಬಿಸಿನೀರಿನ ಬುಗ್ಗೆಯೊಂದಿದೆ. ಸ್ಥಾನೀಯರು ಅದನ್ನು 'ರಾಮತೀರ್ಥ' ಎಂದು ಗುರುತಿಸಿದರೂ ಪೋರ್ಚುಗೀಸರು 'ಓ-ಟ್ಯಾಂಕ್ ದೇ ಪಾದ್ರೆ (O-Tank de Padre) ಅಂದರೆ 'ಪಾದ್ರಿಯ ಕೆರೆ' ಎಂದು ನಾಮಕರಣ ಮಾಡಿದ್ದಾರೆ. ಗಿಡ ಮರಗಳ ಮಧ್ಯೆ ಇರುವ ಈ ಸ್ಥಳ ತಂಪು ಸೊಂಪಾಗಿ ವಿಹಾರಕ್ಕೆ ಯೋಗ್ಯವಾಗಿದೆ. ನೀರು ಬಂದು ತೊಟ್ಟಿಯೊಳಗೆ ಬೀಳುವದರಿಂದ ಊರವರು ಅಲ್ಲಿಗೆ ಹೋಗಿ ಸ್ನಾನ ಮಾಡುತ್ತಾರೆ. ಇಲ್ಲಿ ಹರಿಯುವ ನದಿಗೆ ಎರಡು ಮುಖ್ಯ ಶಾಖೆಗಳು ಇದ್ದು ಒಂದಕ್ಕೆ 'ಅಂಬುನದಿ ಎಂದೂ ಇನ್ನೊಂದಕ್ಕೆ 'ಶರಾ ನದಿ' ಎಂದೂ ಊರವರು ಕರೆಯುತ್ತಾರೆ. ಈ ನದಿ ಸಮುದ್ರಕ್ಕೆ ಸೇರುವಲ್ಲಿ ಬಹುದೊಡ್ಡ 'ಒನೋರ್ ಬಂಡೆ (Rock of Onore) ಇದೆ'

ಪಿಯೆತ್ರೊ ಡೆಲ್ಲಾವಾಲೆ ವರ್ಣಿಸಿದ ಹೊನ್ನಾವರ ಮುಂದಿನ ಮೂರು ದಶಕದವರೆಗೂ ಹಾಗೆಯೇ ಮುಂದುವರಿದು ಬಂದಿತ್ತು. ನನ್ನ ಬಾಲ್ಯದಲ್ಲಿ ಅಂದರೆ ಐವತ್ತು ವರ್ಷದ ಹಿಂದೆ ಕೂಡ ನಮ್ಮೂರು ಎಷ್ಟು ಸುಂದರವಾಗಿತ್ತು ಎಂದು ವರ್ಣಿಸುವದೇ ಕಷ್ಟದ್ದು! ಸೂರ್ಯೋದಯಕ್ಕೆ ಮೊದಲೇ ಶರಾವತಿಯ ತೀರ ತಲುಪಿದರೆ ನಮ್ಮ ಕಣ್ಣೆದುರು ನಿಸರ್ಗ ಮಾತೆಯ ಒಂದೊಂದೇ ರಹಸ್ಯ ಬಯಲಾಗಲಾರಂಭಿಸುತ್ತದೆ. ಗಗನವನ್ನು ಅಳೆಯಲು ಹೊರಟ ಸಹ್ಯಾದ್ರಿ ಶಿಖರಗಳು ನಯನ ಮನೋಹರವಾಗಿ ಮೆರೆಯುತ್ತವೆ. ಗಗನ ಮಂಡಲವೆಲ್ಲ ಹೊಂಬಣ್ಣದಿಂದ ಹೊಳೆಯುತ್ತದೆ. ನದಿಯ ದಡದಲ್ಲಿ ಬೆಳೆದುನಿಂತ ತೆಂಗಿನ ಮರಗಳು ನಾಚುತ್ತ ಸೂರ್ಯದೇವನನ್ನು ಬರಮಾಡಿಕೊಳ್ಳಲು ಚಾಮರ ಬೀಸುವ ಸಿದ್ಧತೆಯಲ್ಲಿರುತ್ತವೆ. ಸಣ್ಣ ದೊಡ್ಡ ನಾವೆಗಳು ನೀರಿನಲ್ಲಿ ತೇಲುತ್ತ. ಗಾಳಿಗೆ ಓಡುತ್ತ ತರಂಗ ಮಾಲೆಯೆಬ್ಬಿಸುತ್ತ ನದಿಯ ಸೊಬಗನ್ನು ಹೆಚ್ಚಿಸುತ್ತವೆ. ಕ್ಷಣ ಕ್ಷಣಕ್ಕೆ ಬಣ್ಣ ಬದಲಿಸುತ್ತಿರುವ ಆಕಾಶದಲ್ಲಿ ಮಂದಹಾಸ ಬೀರುತ್ತ, ಗುಡ್ಡಬೆಟ್ಟಗಳನ್ನು ಏರುತ್ತ, ಉದಯಿಸುವ ಸೂರ್ಯದೇವನ ವೈಭವ ಅತ್ಯಾಕರ್ಷಕ. ಬೆಳಕು ಹರಿಯುವದನ್ನೇ ಕಾಯುತ್ತಾ, ಹಸಿದೇ ರಾತ್ರಿಯಿಡೀ ಕಳೆದ ಹಕ್ಕಿಗಳು, ಚಿಲಿಪಿಲಿಗುಟ್ಟುತ್ತ, ಬಂಧು ಬಾಂಧವರನ್ನೆಲ್ಲ ಬಡಿದೆಬ್ಬಿಸುತ್ತ, ಹಾಡುತ್ತ ಹದೆಯಲ್ಲಿ ಹಾರಲಾರಂಭಿಸಿದವು. ನೋಡ ನೋಡುತ್ತಿದ್ದಂತೆ ಕತ್ತಲು ಮಾಯವಾಗಿ ಬಣ್ಣಗಳು ಕಣ್ಮರೆಯಾಗಿ, ಬಿಸಿಲು ತನ್ನ ಪ್ರತಾಪದ ಪ್ರದರ್ಶನ ಮಾಡಲಾರಂಭಿಸಿತು.

ಹೊನ್ನಾವರದ ಬಂದರನ್ನು ಬಂದು ಸೇರುತ್ತಿದ್ದಂತೆ ಹಳ್ಳಿಗಾಡಿನಲ್ಲಿ ಬೆಳೆದ ಸರಕುಗಳನ್ನು ಹೊತ್ತು ತಂದ ನಾವೆಗಳು ಹಾಯಿಗಳನ್ನು ಮಡಚಿ ಲಂಗರ ಹಾಕಿದವು. ಸಾಮಾನು ಕೊಳ್ಳಲು ಊರವ್ಯಾಪಾರಿಗಳು ಕಿಕ್ಕಿರಿದು ತುಂಬಿದರು. ಕೃಷಿ ಉತ್ಪಾದನೆಗಳು ರಾಶಿ ಬಿದ್ದಿವೆ, ಶಿಯಾಳ (ಎಳನೀರು) ತೆಂಗಿನಕಾಯಿ, ಬಾಳೆಕಾಯಿ, ಬಾಳೆಹಣ್ಣಿನ ಗೊನೆಗಳು, ಕರಿಕಬ್ಬು ಮೊಗ್ಗೆಕಾಯಿ, ಸೋರೆಕಾಯಿ ಹಲಸಿನ ಹಣ್ಣು, ಕಲ್ಲಂಗಡಿ ಹಣ್ಣು, ಇಬ್ಬಳ್ಳಿ ಹಣ್ಣು, ಸುವರ್ಣಗಡ್ಡೆ, ಕೆಸುವಿನ ಗಡ್ಡೆ, ತಿಳಿಬೆಲ್ಲದ ಮಡಕೆಗಳು, ತೆಂಗಿನ ಕತ್ತದಿಂದ ಮಾಡಿದ ದಿನಬಳಕೆಯ ಗೃಹೋಪಯೋಗಿ ಸಾಮಗ್ರಿಗಳು, ದನಕರುಗಳನ್ನು ಕಟ್ಟಿಹಾಕುವ 'ದಾವೇ', ನೀರು ಸೇದುವ ಹುರಿ ಹಾಡಿದ ಹಪ್ಪ ಹಗ್ಗ, ಮೊಸರು,

ಬೆಣ್ಣೆ, ಖಾದ್ಯಪದಾರ್ಥಗಳು ಬೆಕ್ಕಿಗೆ ಸಿಗದಂತೆ ತೂಗಹಾಕುವ ನೆಲುವುಗಳು, ಗಡಿಗೆ, ಮಡಕೆಗಳನ್ನು ಇಡುವ ಕತ್ತದ ದಿಂಬು, ಚಿಕ್ಕ ದೊಡ್ಡ ಹರಿಗಳು, ಬಗೆ ಬಗೆಯ ಸುತ್ತುಗಳಲ್ಲಿ ಕಾದುಕೊಂಡಿದ್ದವು. ಅನತಿ ದೂರದಲ್ಲಿ ರಾತ್ರಿಯೆಲ್ಲ ಕಷ್ಟಪಟ್ಟು ಹಿಡಿದ ಮೀನುಗಳನ್ನು ಮಾರಲು ತುರುಸಿನ ಸ್ಪರ್ಧೆ ನಡೆಯುತ್ತಿತ್ತು. ಪ್ರೋಟೀನು ಭರಿತ ಪೌಷ್ಟಿಕ ಆಹಾರ ಅತ್ಯಲ್ಪ ಬೆಲೆಗೆ ಮೀನಿನ ರೂಪದಲ್ಲಿ ಲಭ್ಯವಿದ್ದರೂ ಗಿರಾಕಿಗಳು ದುಡ್ಡಿಗೆ ಪಂಚೇರು ಬೇಕೆನ್ನುತ್ತಿದ್ದರು.

ಊರ ದಕ್ಷಿಣಕ್ಕೆ ಹರಿಯುವ ಶರಾವತಿ ಪಶ್ಚಿಮಕ್ಕೆ ಇದ್ದ ಅರಬೀ ಸಮುದ್ರಕ್ಕೆ ಸೇರಿಕೊಳ್ಳುತ್ತದೆ. ಉತ್ತರಕ್ಕೆ ವಿಸ್ತಾರವಾಗಿ ಚಾಚಿಕೊಂಡ 'ಪಡಗೇರಿ' ಎಂದು ಹೆಸರು ಪಡೆದ ಉಪವನ. ಅಲ್ಲಿ ಬೆಳೆದ ನೇರಳೆ, ಗೇರು ಹಣ್ಣು, ಮಾವು, ಮುರುಗಲ, ಕವಳಿ ಹಣ್ಣು, ಕುಂಟೆಹಣ್ಣು, ಚಾಂಪೇಡ, ಮುಳ್ಳುಹಣ್ಣುಗಳನ್ನು ಯಾರ ಹಂಗೂ ಇಲ್ಲದೇ ತಿಂದು ತೇಗಬಹುದಿತ್ತು. ಅದೊಂದು ಪಕ್ಷಿಧಾಮವೂ ಆಗಿತ್ತು. ಕಾಡು ಪಾರಿವಾಳಗಳು ಪ್ರಿಯತಮನನ್ನು ಆಮಂತ್ರಿಸುವ 'ಗುಟುರ್ ಗುಟುರ್ss' ಕರೆ ನೀಡಿದರೆ ಗುಟ್ರಗುಮ್ಮ (barbet) ಟೊಂಗೆಯ ತುತ್ತ ತುದಿಯಲ್ಲಿ ಕುಟುಕ್! ಕುಟ್ರುಕ್! ಕರೆ ನೀಡುತ್ತಿತ್ತು ಕಾದಲಳಿಗೆ. ಕಪ್ಪು ಬಿಳಿ ರೆಕ್ಕೆಗಳ ಸೆಪಿಲೆಯ ತೀವ್ರ ಸಿಳ್ಳನ್ನು ಅನುಕರಿಸುವದು ಎಷ್ಟು ಕಷ್ಟದ್ದೆಂದು ಯತ್ನಿಸಿದಾಗಲೇ ತಿಳಿಯಬೇಕು. ಜೇನ್ನೊಣ – ಹಿಡುಕ ಕ್ಷಣಾರ್ಧದಲ್ಲಿ ಗಗನ ವಿಹಾರಿಯಾಗಿ, ಹುಳ, ಹುಪ್ಪಡಿಗಳನ್ನು ಕೊಕ್ಕಿನಲ್ಲಿ ಬಂಧಿಸಿ ಸ್ವಸ್ಥಾನಕ್ಕೆ ಮರಳುವ ನೋಟ ರಮ್ಯವಾದದ್ದು, ಬುಲ್‌ಬುಲ್‌ಹಕ್ಕಿ. ಗಿಡಗಳ ಪೊದೆಗಳಲ್ಲಿ, ಹಗುರಾದ ಗೂಡುಮಾಡಿ, ಮರಿಮಾಡುವಲ್ಲಿ ಮೈಮಾಡುವಲ್ಲಿ ಮೈಮರೆತಿರುತ್ತದೆ. ತನ್ನ ಶಕ್ತಿ ಸಾಮರ್ಥ್ಯದಲ್ಲಿ ಅಪಾರ ನಂಬಿಕೆಯಿದ್ದ ಮರಕುಟಿಗ ಎತ್ತರ ಮರವನ್ನೇರಿ ತನ್ನ ಸಂತಾನೋತ್ಪತ್ತಿಗೆ ಸಕಲ ಏರ್ಪಾಡು ಮಾಡಲಾರಂಭಿಸುತ್ತದೆ. ಗೊರವಂಕ, ವಿಶ್ರಮಿಸುವಾಗ ನಾಶಿಪುಡಿ ವರ್ಣದ್ದಾಗಿ ಕಂಡರೆ, ರೆಕ್ಕೆ ಬಿಚ್ಚಿ ಹಾರಾಡುವಾಗ ಬಿಳಿಬಣ್ಣ ತಾಳಿ, ಇದೊಂದು ಬೇರೇ ಹಕ್ಕಿಯೇ? ಎಂದು ಭ್ರಮೆ ಹುಟ್ಟಿಸುತ್ತದೆ. ಪಿಕಳಾರ ಹಕ್ಕಿಯು, ಪತ್ನಿಯೊಂದಿಗೆ ಟೊಂಗೆಯಿಂದ ಟೊಂಗೆಗೆ ಹಾರಿದರೂ ಹೆಚ್ಚಿನ ವೇಳೆಯನ್ನು ಕಾಮಚೇಷ್ಟೆಯಲ್ಲಿ ಕಳೆಯುತ್ತದೆ.

ಮುಳ್ಳು ಗಿಡಗಂಟಿಗಳ ಪೊದೆಯಲ್ಲಿ ತಾಯಿ ಮೊಲ ಮರಿಗಳೊಂದಿಗೆ ಅವಿತಿದ್ದು, ವೈರಿಗಳಿಂದ ಸಂರಕ್ಷಿಸಿಕೊಳ್ಳುತ್ತದೆ. ಕಪ್ಪು ಮೂತಿಯ ಕೋತಿಗಳು, ಇಂದಿಗೆ ಇಷ್ಟು ಚೇಷ್ಟೆ ಸಾಕು! ಎಂದು ಎತ್ತರದ ಮರವೇರಿ ರಾತ್ರಿಯ ವ್ಯವಸ್ಥೆ ಮಾಡಿಕೊಂಡವು. ಕತ್ತಲನ್ನು ಸ್ವಾಗತಿಸುವ ಹಸಿದ ನರಿಗಳು ತಾವು ಅವಿತುಕೊಂಡ ಸ್ಥಳದಿಂದ ಹೊರಹೊರಟು 'ಹುಯ್ಯೋ! ಹುಯ್ಯೋ!' ಎಂದು ಕೂಗಿ ತನ್ನವರನ್ನು ಕರೆದು ಆಹಾರದ ಅನ್ವೇಷಣೆಗೆ ಹೊರಟವು. ಕಳ್ಳ ಬೇಟೆಗೆ ಹೆಸರಾದ ಕತ್ತೆ ಕಿರುಬ ಹೊರಬಿದ್ದು ಅಲೆಯಲಾರಂಭಿಸುವದು. ಅದೃಷ್ಟ ಚೆನ್ನಾಗಿದ್ದರೆ ಹಸಿದ ಹುಲಿರಾಯನೂ, ಕತ್ತಲಲ್ಲಿ ಕಣ್ಣಿನ ಟಾರ್ಚ್ ಬಿಡುತ್ತ, ಹೆಜ್ಜೆಯ ಸಪ್ಪಳವಾಗದಂತೆ ಅಲೆಯುವದು ಕಂಡೀತು.! ಇಷ್ಟೆಲ್ಲ ವನಸಿರಿ, ಖಗಸಿರಿ ಇದ್ದರೂ ಅದನ್ನು ಹಾಳುಗೆಡವಲು ಯಾರೊಬ್ಬರೂ ಯತ್ನಿಸುತ್ತಿರಲಿಲ್ಲ. ಈ ಪಡಗೇರಿಯ ಒಂದು ಅಂಚಿಗೆ ಊರವರ ಸ್ನಾನದ ಹೊಂಡ 'ರಾಮತೀರ್ಥ' ಇದ್ದರೆ ಇನ್ನೊಂದು ಅಂಚಿಗೆ ಆಕಾಶವನ್ನೇ ಮಾರು ಹಾಕಿ ಅಳೆಯಲು ಹೊರಟ ಹಾಗೆ ತೋರುವ "ಕರ್ನಲ್ ಹಿಲ್‌ನ ಸ್ಮಾರಕ ಸ್ತಂಭ ನಿಂತಿದೆ. ಅಲ್ಲಿ ನಿಂತು ಊರನ್ನು ವೀಕ್ಷಿಸಿದರೆ, ತೆಂಗಿನ ತೋಪಿನಡಿ ಕಂಡೂ ಕಾಣದಂತಿದ್ದ ಹೊನ್ನಾವರ ನಗರವು 'ಹಿರೇಹಳ್ಳಿ' ಯಂತೇ ಭಾಸವಾಗುತ್ತಿತ್ತು.!

ಭಾರವಾದ ವಾಹನಗಳಿಗೆ ಶರಾವತಿ ನದಿಯನ್ನು ದಾಟಿಸುವ ಸೌಕರ್ಯ ಇರಲಿಲ್ಲವಾದ್ದರಿಂದ ಉತ್ತರದಿಂದ ಆಗಮಿಸಿದ ಬಸ್-ಲಾರಿಗಳಿಗೆ ಹೊನ್ನಾವರದ ನದಿ ದಡ ಕೊನೆಯ ನಿಲ್ದಾಣವಾಗಿತ್ತು. ಹುಬ್ಬಳ್ಳಿಯಿಂದ ನಸುಕಿನಲ್ಲಿ ಹೊರಟ ಮೋಟಾರುಗಾಡಿ ಕತ್ತಲಾಗುವ ಹೊತ್ತಿಗೆ ಹೊನ್ನಾವರ ಸೇರಿಕೊಂಡಿತೆಂದರೆ ಆದಿನ ಹೆಚ್ಚಿನ ಚಟುವಟಿಕೆಗಳೆಲ್ಲ ಮುಗಿದಂತೆಯೇ! ಮುಂಜಾನೆ ಕೋಳಿ ಕೂಗಿದಾಗಲೋ ಬ್ರದರ್ ಶಾಲೆಯ ಮೊದಲ ಕರೆ ಗಂಟೆ ಬಾರಿಸಿದಾಗಲೋ ಜನ ಎಚ್ಚತ್ತು ಪ್ರಾತರ್ವಿಧಿ, ಅಲ್ಪೋಪಹಾರಗಳನ್ನು ತೀರಿಸಿ ದೈನಂದಿನ ಚಟುವಟಿಕೆಗಳಲ್ಲಿ ಮೈಮರೆಯುತ್ತಿದ್ದರು. ಸೂರ್ಯಾಸ್ತದೊಂದಿಗೆ ಊರವರ ಚಟುವಟಿಕೆಗಳೆಲ್ಲ ಮುಗಿದಂತೆ! ಹೊನ್ನೆಣ್ಣೆಯ ದೀಪದ ಮಂದ ಬೆಳಕಿನಲ್ಲಿ ಓದು, ಪಠನ, ಪಾರಾಯಣ, ಭಜನೆಗಳು ನಡೆದು, ಊಟಮುಗಿಸಿ ಮಲಗಿದೊಡನೆ ಇನ್ನೊಂದು ನೆಮ್ಮದಿಯ ದಿನ ಕಳೆದಂತೆ. ಜನವಸತಿ ಕಡಿಮೆ ಇದ್ದುದರಿಂದ ಊರಲ್ಲಿ ಪ್ರತಿಯೊಬ್ಬರ ಪರಿಚಯ ಇನ್ನೊಬ್ಬರಿಗೆ ಇರುತ್ತಿತ್ತು.

ಲಿಂಗನಮಕ್ಕಿ ವಿದ್ಯುತ್ ಉತ್ಪಾದನೆಯ ಕೇಂದ್ರದ ಸ್ಥಾಪನೆಯಾಗಿ ಶರಾವತಿಯ ಹರಿಯುವ ನೀರಿನ ರಭಸಕಡಿಮೆಯಾಗಿ ಸ್ವಚ್ಛವಾಗಿದ್ದ ಜಲಪರಿಸರದಲ್ಲಿ ಹೂಳು, ತುಂಬಲಾರಂಭಿಸಿತು. ಹಂಚಿನ ಕಾರಖಾನೆಗಳು ಕಾಣಿಸಿಕೊಂಡು ಒಂದೇ ಸಮನೆ ಸೂಸುಮಣ್ಣು, ಉರವಲು ನುಂಗಲಾರಂಭಿಸಿದವು, ಕಟ್ಟಿಗೆ ಕೊರೆಯುವ ವಿದ್ಯುತ್ ಚಾಲಿತ ಯಂತ್ರಗಳು ಭರದಿಂದ ಕಾಡನ್ನು ಬರಿದುಮಾಡಲಾರಂಭಿಸಿದವು. ಶರಾವತಿ ಸೇತುವೆ ವೇಗದ ವಾಹನಗಳಿಗೆ ಅನುವು ಮಾಡಿಕೊಟ್ಟಿತು. ಸಾರಿಗೆ, ದಿನ-ರಾತ್ರಿ ನಡೆಯಲಾರಂಭಿಸಿತು. ವಿದೇಶೀ ವಿನಿಮಯಗಳಿಕೆಯ ನೆಪದಲ್ಲಿ ಮತ್ಸ್ಯ ಗ್ರಹಣ, ಸಂಗ್ರಹ, ಶೀತ ಭಂಡಾರಗಳು ಕಾಣಿಸಿಕೊಂಡವು. ಇವುಗಳಿಂದಾಗಿ ಆವರೆಗೆ ಅಲ್ಪತೃಪ್ತರಾಗಿದ್ದ ಜನರ ಜೀವನಾವಶ್ಯಕತೆಗಳೂ ಬೆಳೆಯಲಾರಂಭಿಸಿದವು. ಅಪಘಾತ, ಅಪಹರಣಗಳು ಹೆಚ್ಚಾಗಿ, ಕಳ್ಳತನ, ಕೊಲೆ, ಸುಲಿಗೆಗಳು ದೈನಂದಿನ ಘಟನೆಗಳಾದವು; ಊರು ಬೆಳೆದಂತೆ ಕೊಳಚೆ ಎಲ್ಲೆಡೆ ತಾಂಡವವಾಡಲಾರಂಭಿಸಿತು. 'ಕೊಂಕಣ ರೇಲ್ವೆ' ಓಡಲಾರಂಭಿಸಿತು. 'ಶರಾವತಿ

ಟೇಲ್ ರೇಸ್' ವಿದ್ಯುದಾಗರ ಪೂರ್ತಿಗೊಂಡಾಗ ಈ 'ಮೊನ್ನಿನೂರಿನ' ರೂಪ ಹೇಗಾಗಬಹುದು? ಎಂದು ಊಹಿಸುವದು ಕಷ್ಟ! ನಮ್ಮ ಜಿಲ್ಲೆಯ ಇನ್ನಿತರ ಎಡೆಗಳ ಸ್ಥಿತಿಗತಿ ಇದಕ್ಕಿಂತ ತೀರ ಭಿನ್ನವಾಗಿಲ್ಲ. ಬ್ರಿಟಿಶ್ ಸರಕಾರ, ತನ್ನ ಆಡಳಿತವನ್ನು ಸುಭದ್ರವಾಗಿಸುವ ಉದ್ದೇಶದಿಂದ ಜನಜೀವನವನ್ನು ಆಳವಾಗಿ ಅಭ್ಯಸಿಸಿ ವರದಿ ಒಪ್ಪಿಸಲು ಫ್ರಾನ್ಸಿಸ್ ಬುಕ್ಯಾನನ್ ಎಂಬಾತನನ್ನು ನೇಮಿಸಿತ್ತು (ಕ್ರಿ.ಶ. ೧೮೦೦). ಆತನು ಆ ಪ್ರಕಾರ ಅಧಿಕೃತ ವರದಿ ಒಪ್ಪಿಸಿದ. ೧೮೮೩ರಲ್ಲಿ ಬಂದ ಉತ್ತರ ಕನ್ನಡ ಜಿಲ್ಲಾ ಗ್ಯಾಝೆಟೀಯರ್‌ದಲ್ಲಿ ಅಂದಿನವರ ಜೀವನದ ಕೂಲಂಕಷ ವಿವರಗಳಿವೆ. ನನ್ನ ವಿದ್ಯಾರ್ಥಿಜೀವನದ ಉತ್ತರ ಕನ್ನಡ (೧೯೫೩-೫೭) ಈ ಎರಡು ವರದಿಗಳ ಹಿನ್ನೆಲೆಯಲ್ಲಿ ಗಮನಿಸಿದಾಗ, ತೀರ ಭಿನ್ನವಾಗಿರಲಿಲ್ಲ. ಮೊದಲ ಗ್ಯಾಝೆಟಿಯರ್ ಬಂದ ಒಂದು ಶತಮಾನದ ನಂತರ (ಕ್ರಿ.ಶ. ೧೯೮೫) ಹವ್ಯಾಸಿ ಛಾಯಾಚಿತ್ರಕಾರನಾಗಿ ಜಿಲ್ಲೆಯ ಮೂಲೆ ಮೂಲೆ ಅಲೆದಾಡಿದಾಗ ಆದ, ಆಗುತ್ತಿರುವ, ಬದಲಾವಣೆಗಳಿಂದ ಹೌಹಾರಿಹೋಗುವಂತಾಯ್ತು!

ದಾಂಡೇಲಿಯ ಹತ್ತಿರದ 'ಸ್ಯಾಕ್ ಪ್ಯಾಂಟ್' ನಲ್ಲಿ ನಿಂತು ಕೆಳಗೆ ನೋಡಿದರೆ ಕಣಿವೆಯಲ್ಲಿ ಹರಿಯುವ ಕಾಳಿ ನದಿಯಲ್ಲಿ ಬಾಯಾರಿಕೆ ನೀಗಿಸಲು ಬರುವ ಹುಲಿರಾಯನ ದರ್ಶನ ಪಡೆಯಬಹುದಾದ ಕಾಲವೊಂದಿತ್ತು. ಇಂದು ಅಲ್ಲಿ ಗೋಚರಿಸುವದು, ನಾಗಝರಿ ವಿದ್ಯುದಾಗರದ ಭವ್ಯ ಕಟ್ಟಡದ ನೋಟ ಮಾತ್ರ! ಸುಪಾ, ಒಮ್ಮೆ ಸುಂದರ ಊರಾಗಿತ್ತು. ಇಂದು ಅದರ ಜಲಸಮಾಧಿಯಾಗಿದೆ. ಅಲ್ಲಿಯ ಜನವಸತಿಯನ್ನು ರಾಮನಗರಕ್ಕೆ ಹೊಡೆದೋಡಿಸಲಾಗಿದೆ. ಅಲ್ಲಿಯ ಹೊಸಭೂಮಿಯ ಸರಿಯಾದ ಪರಿಶೀಲನೆಯಾಗದೇ ಮಾಡಿದ ಕೃಷಿಯ ಹೆಚ್ಚಿನ ಪಾಲನ್ನು ಗೆದ್ದಲು ನುಂಗಿ ನಾಶಮಾಡುತ್ತವಂತೆ! ಜೊಯ್ಡಾ ತಾಲೂಕನ್ನು ಹೊಸದಾಗಿ ಅಸ್ತಿತ್ವಕ್ಕೆ ತರಲಾಗಿದೆ ಎಂದು ಅರಿತವರು ತೀರ ಕೆಲವರು. ಇಂದಿನ ದಿನಗಳಲ್ಲಿ ಕೈಗಾ ಅಣುಶಕ್ತಿ ವಿದ್ಯುದಾಗರ, ಸುತ್ತ ಮುತ್ತಲ ಅತ್ಯಮೂಲ್ಯ ಪರಿಸರವನ್ನು ಕಬಳಿಸುತ್ತಿದ್ದರೆ, ಕಾರವಾರದ 'ಸೀಬರ್ಡ್', ನೌಕಾಪಡೆ ಯೋಜನೆ, ಬಿಣಗಾದಿಂದ ಅಂಕೋಲೆಯವರೆಗೆ, ಕರಾವಳಿ ಗುಂಟ ಹಬ್ಬಿದ ಫಲವತ್ತಾದ ಕೃಷಿಭೂಮಿಯನ್ನು ಪೂರ್ತಿಯಾಗಿ ನುಂಗಲಿದೆ. ಹೀಗೆ ಔದ್ಯೋಗೀಕರಣ, ಸುಧಾರಣೆ, ಆದಾಯದಲ್ಲಿ ಹೆಚ್ಚಳ ಮುಂತಾದವುಗಳ ಹೆಸರಿನಲ್ಲಿ ಪರಿಸರವನ್ನೆಲ್ಲ ಹಾಳುಗೆಡವಲು ನಾವೆಲ್ಲ ಟೊಂಕಕಟ್ಟಿ ನಿಂತಂತೆ ಭಾಸವಾಗುತ್ತದೆ! ನಮ್ಮ ಆಸೆ-ಆಕಾಂಕ್ಷೆಗಳಿಗೆ ಮಿತಿಯೆಂಬುದಿಲ್ಲ. ಒಂದೆಡೆ ಜನಸಂಖ್ಯೆಯ ಭರದಿಂದ ಏರಿಕೆ, ಇನ್ನೊಂದೆಡೆ, ಸಂಪನ್ಮೂಲಗಳಿಲ್ಲದೇ ಸುಖಸಮೃದ್ಧಿಗಳ ಬೇಡಿಕೆ. ಇವು ಬೆಳೆಯುತ್ತಲೇ ಇರುವಾಗ, ಪೂರೈಕೆಯು ಎಲ್ಲಿಂದ ಆಗಬೇಕೆಂದು ನಾವಾರೂ ಯೋಚಿಸಿದಂತೆ ಕಾಣುವದಿಲ್ಲ.

ನಮಗೆ ತಾಂತ್ರಿಕ ಪ್ರಗತಿ ಬೇಕಾಗಿಯೇ ಇಲ್ಲ! ಎನ್ನುವ ಸಾಹಸ ಯಾರೂ ಮಾಡಲಾರರು! ಆದರೆ ಜೀವನದ ಸೌಲಭ್ಯಗಳನ್ನು ನಿರ್ಮಿಸಿಕೊಳ್ಳುವಾಗ, ಪರಿಸರವೂ ಸುರಕ್ಷಿತವಾಗಿರುವಂತೆ ಹೆಚ್ಚಿನ ಕಾಳಜಿ ವಹಿಸುವದು ಅತ್ಯವಶ್ಯ. ಸೀಮೆಯೆಣ್ಣೆ, ಪೆಟ್ರೋಲಗಳ ಮೇಲೆ ಶಾಶ್ವತವಾಗಿ ಪರಾವಲಂಬಿಗಳಾದ ನಾವು ಯಾಕೆ ಗಂಭೀರವಾಗಿ ಯೋಚಿಸುತ್ತಿಲ್ಲ? ಪರಿಸರ ಕಲುಷಿತಗೊಳಿಸದೇ ಗಾಳಿಗೆ ಓಡಾಡುವ ನಾವೆ-ಮಚ್ವೆಗಳು ಮುಂದುವರಿಯುವಂತೆ ಏಕೆ ಪ್ರೋತ್ಸಾಹ ದೊರೆಯಲಿಲ್ಲ? ಅದರಿಂದ ಸ್ವಾವಲಂಬಿ ಗ್ರಾಮ-ಜೀವನಕ್ಕೆ ಎಷ್ಟೋ ಅನುಕೂಲವಾಗುತ್ತಿತ್ತು. ಪ್ರಚಲಿತವಿದ್ದ ಗೃಹೋದ್ಯೋಗ ಕೈಗಾರಿಕೆಗಳಿಗೇ ಪ್ರಚೋದನೆ ಸಿಗುತ್ತಿದ್ದರೆ ಇಂದಿನ ನಿರುದ್ಯೋಗ ಸಮಸ್ಯೆ ಪೆಡಂಭೂತವಾಗಿ ಕಾಡಲು ಅವಕಾಶವಾಗುತ್ತಿರಲಿಲ್ಲ. ಮುಂದುವರಿದ ಜಪಾನೀಯರು, ತಮ್ಮ ಪೂರ್ವಕಾಲೀನ ಕೈಗಾರಿಕೆಗಳನ್ನು ಸುರಕ್ಷಿತವಾಗಿ ಕಾಯ್ದುಕೊಂಡೇ ಕ್ರಮವಾಗಿ ಬೃಹದ್ ಔದ್ಯೋಗಿಕರಣಕ್ಕೆ ದಾರಿ ಮಾಡಿಕೊಂಡರು, ಎಂದು ಇಲ್ಲಿ ಸ್ಮರಿಸಿಕೊಳ್ಳಬಹುದು. ಅಮೇರಿಕೆಯಂಥ ಧನಾಢ್ಯ ರಾಷ್ಟ್ರವೂ ತನ್ನ ಪೂರ್ವಜರು ಪರಿಸರಕ್ಕೆ ಮಾಡಿದ ಅಪಚಾರಕ್ಕೆ ಮರುಗಿ, ಆದ ಅನ್ಯಾಯವನ್ನು ಈಗಾದರೂ ಸರಿಪಡಿಸಿಕೊಳ್ಳಲು ಯತ್ನಿಸುತ್ತಿರುವಾಗ, ನಾವು ಪಾಠ ಕಲಿಯಬಾರದೇ?

'ನಮ್ಮ ಸಕಲ ಆವಶ್ಯಕತೆಗಳಿಗಾಗಿ ಭೂ ಮಾತೆಯನ್ನೇ ಅವಲಂಬಿಸಿದ್ದೇವೆ' ಎಂಬ ಸಾರ್ವಕಾಲಿಕ ಸತ್ಯವನ್ನು ಮರೆಯುವಂತಿಲ್ಲ. ಈ ದಿಕ್ಕಿನಲ್ಲಿ ಪರಿಸರದ ಸ್ಪಂದನವನ್ನು ನಾವು ಗಿಡಮರಗಳಿಂದ ಪಶು-ಪಕ್ಷಿಗಳಿಂದ ಕಲಿಯುವದು ಅಪಾರವಾಗಿದೆ.

ಶತಶತಕಗಳಿಂದ ವೃಕ್ಷಗಳು ನೀರು, ಪೌಷ್ಟಿಕತೆಗಳನ್ನು ನೆಲದಿಂದ ಹೀರಿಕೊಳ್ಳುತ್ತ ಸುತ್ತಲ ಪರಿಸರಕ್ಕೆ ನೆರಳು, ಪ್ರಾಣವಾಯು ಆರ್ದ್ರತೆಗಳನ್ನು ನೀಡುತ್ತ ಬಂದಿವೆ. ಶತಕಗಳಿಂದ ಗೇರಸೊಪ್ಪಾ ಕಾಡುಗಳಲ್ಲಿ ಕಂಡುಬರುವ ಕಾಡಾನೆಗಳು, ಶಕ್ತಿ-ಸಾಮರ್ಥ್ಯ, ಬುದ್ಧಿವಂತಿಕೆಗಳಿಗೆ ಹೆಸರಾದರೂ, ತಮ್ಮ ಪಾಡಿಗೆ ತಾವು ಪ್ರಕೃತಿಯೊಂದಿಗೆ ಹಾಸುಹೊಕ್ಕಾಗಿ ಜೀವಿಸುತ್ತಿವೆ. ಕಾಡಿನಲ್ಲಿ ಹೇರಳವಾಗಿ ಲಭ್ಯವಿರುವ ಸೊಪ್ಪು ದಂಟುಗಳೇ ಅವಕ್ಕೆ ಮೃಷ್ಟಾನ್ನ. ಮಾಂಸಾಹಾರಕ್ಕೆ ಆಸೆಪಡದ ಕಾಡಾನೆ, ವರ್ಷಮುದ್ದಕ್ಕೂ ತನ್ನ ಬಳಗಕ್ಕೆ ಆಹಾರ ಒದಗುವಂತೆ ಮುನ್ನೆಚ್ಚರಿಕೆ ವಹಿಸುತ್ತದೆ. ಒಂದೆಡೆ ಸ್ಥಾಯಿಯಾಗಿ ನೆಲೆಸಿ ಅಲ್ಲಿಯ ಕಾಡನ್ನು ಮೆದ್ದು ಬರಿದು ಮಾಡುವ ಬದಲು, ಆಗಾಗ

ನೂರಾರು ಕಿಲೋ ಮೀಟರ ದೂರದ ಕಾಡುಗಳಲ್ಲಿ ಸಂಚರಿಸುತ್ತ ಉದರ ನಿರ್ವಹಣೆ ಮಾಡುವ ಜಾಣತನ ತೋರುತ್ತದೆ. ಇದರಿಂದಾಗಿ ಮೊದಲು ಮೇವು ಪೂರೈಸಿ ಬರಿದಾದ ವನರಾಜಿ ತಿರುಗಿ ಚಿಗಿತು ಆಹಾರ ಪೂರೈಸುತ್ತದೆ. ಆನೆ ಮಿತಸಂತಾನಿ ಬೇರೆ! ಇಷ್ಟಾದರೂ ಹುಟ್ಟಿದ ಮರಿಗಳೆಲ್ಲ ಬದುಕಿ ಬಾಳುವಂತಾಗಿದ್ದರೆ, ಅವೆಲ್ಲವುಗಳ ಆಹಾರ ಪೂರೈಕೆಗೆ ಅಸ್ತಿತ್ವದಲ್ಲಿರುವ ಸಕಲ ಕಾಡೂ, ವಾಸಕ್ಕಾಗಿ ಇಡೀ ಭೂಮಂಡಲವೂ ಸಾಲುತ್ತಿರಲಿಲ್ಲ! ಆನೆಯ ಬಳಗ ಹುಟ್ಟು-ಸಾವುಗಳನ್ನು ಸಮತೋಲ ದೃಷ್ಟಿಯಿಂದ ಸ್ವಾಗತಿಸುತ್ತದೆ. ಗಂಡು ಹೆಣ್ಣು ಮರಿಗಳಲ್ಲಿ ತಾರತಮ್ಯ ಮಾಡದೇ ಪ್ರೀತಿಯಿಂದ ರಕ್ಷಿಸಿ ಬೆಳೆಸುತ್ತದೆ. ಆದರೆ ಅದರ ಕೋರೆಗಳಿಗಾಗಿ ನಡೆದ ಹತ್ಯಾಕಾಂಡದಿಂದಾಗಿ ಸದ್ಯಕ್ಕೆ ಬದುಕುಳಿದ ಹೆಣ್ಣಾನೆಗಳಿಗೆ ಗಂಡಾನೆಯ ಸಹವಾಸ ದೊರೆಯದೇ ಉಂಟಾದ ದಾರುಣಸ್ಥಿತಿಯ ನಿರ್ಮಾಣದ ಯಶಸ್ಸು ದಂತಚೋರ ಮಾನವನಿಗೆ ಸಲ್ಲುತ್ತದೆ.

ದಟ್ಟಕಾಡು, ಸತತವಾದ ನೀರಿನ ಪೂರೈಕೆ, ವಿಪುಲವಷ್ಟಆಹಾರವಿರುವಲ್ಲಿ ಹುಲಿಗಳು, ಬೀಡು ಬಿಟ್ಟಿರುತ್ತಿದ್ದವು. ಕ್ರೌರ್ಯಕ್ಕೆ ಹೆಸರಾದ ಹೆಬ್ಬುಲಿಯೂ ಮಾನವನಿಗೆ ಹೋಲಿಸಿದರೆ-ಅತಿ ಸೌಮ್ಯ ಜೀವಿ, ಎನಿಸದೇ ಇರದು. ಕೇವಲ ಉದರ ನಿಮಿತ್ತವಾಗಿ ಅದು ಇತರ ಜೀವಿಗಳ ಬೇಟೆ ಆಡುತ್ತದೆ. ತನ್ನ ಶಕ್ತಿಸಾಮರ್ಥ್ಯ ಪ್ರದರ್ಶನಕ್ಕಾಗಿ, ಇಲ್ಲವೇ ವಿನೋದಕ್ಕಾಗಿ ಎಂದೂ ಶಿಕಾರಿಮಾಡುವದಿಲ್ಲ. ತನ್ನ ವಾಸಸ್ಥಳವನ್ನು ಕೊಂದ ಚಿಗರೆಯ ಕೊಂಬು, ಕಾಡೆಮ್ಮೆಗಳ ಶಿರಗಳಿಂದ ಅಲಂಕರಿಸಿ ಬೀಗುವದಿಲ್ಲ. ಹಸಿದಾಗೊಮ್ಮೆ ಮನಸ್ವೀ ಭೋಜನ ಮುಗಿಯಿತೆಂದರೆ, ಎದುರಿನಲ್ಲೇ ಹುಲ್ಲೆ ಮೇಯುತ್ತಿದ್ದರೂ, ಅದರ ಗೋಜಿಗೆ ಹೋಗುವದಿಲ್ಲ. ಅಷ್ಟೇ ಅಲ್ಲ. ತಾನಾಡಿದ ಬೇಟೆಯ ಮೇಲೆ ನರಿ, ಕಾಡುನಾಯಿ, ತೋಳ, ಹದ್ದುಗಳು ಯಥೇಷ್ಟ ಭೋಜನ ನಡೆಸಿದರೂ ಆಕ್ಷೇಪವೆತ್ತುವದಿಲ್ಲ ! ಮಾನವನಿಗೆ ಇಂಥ ಹೃದಯವಂತಿಕೆ ಎಂದಿದ್ದರೂ ಸಾಧ್ಯವೇ?

ಆಗೊಮ್ಮೆ ಈಗೊಮ್ಮೆ ತಿಮಿಂಗಿಲವೊಂದು ಜಿಲ್ಲೆಯ ಕಡಲ ದಂಡೆಗೆ ಬಂದು ಸಾವನ್ನಪ್ಪುವದು ಸಾಮಾನ್ಯ. ಇದು ಬಲು ಭಾರದ ಕಡಲ ಜೀವಿಯಾಗಿದ್ದರೂ ನೀರಿನಲ್ಲಿ ತೇಲುವ ಅತಿ ಸೂಕ್ಷ್ಮವಾದ ಸಸ್ಯಗಳನ್ನು ಪ್ರಾಣಿಗಳನ್ನು ಬೇರ್ಪಡಿಸಿ ಅವುಗಳನ್ನೆ ಆಹಾರವಾಗಿ ಬಳಸುತ್ತದೆ. ಇದರಿಂದಾಗಿ ಅದು ತನ್ನ ಹೊಟ್ಟೆಯನ್ನು ಹೊರಕೊಳ್ಳುವ ಜೊತೆಗೆ ಪರಿಸರ ನೈರ್ಮಲ್ಯವನ್ನು ಕಾಪಾಡಿಕೊಳ್ಳುತ್ತದೆ. ಇದರಿಂದಾಗಿ ತಿಮಿಂಗಿಲಗಳ ಸಮಾಜದಲ್ಲಿ ಕಸಕಡ್ಡಿಗಳ ತೊಟ್ಟಿಗಳು ಪೌರಕಾರ್ಮಿಕರ ಅವಶ್ಯಕತೆಯೇ ಇಲ್ಲ! ಇವು ತುಂಬ ಸಾಧು ಪ್ರಾಣಿಗಳಾಗಿದ್ದರಿಂದ, ವಿವಿಧ ಪ್ರಭೇದಗಳಿಗೆ ಸೇರಿದ ಅಸಂಖ್ಯ ಮೀನುಗಳು ಅವುಗಳನ್ನು ಹಿಂಬಾಲಿಸುತ್ತ ಸಹ ಭೋಜನ ನಡೆಸುತ್ತವೆ. ತನ್ನೊಂದಿಗೆ ಇನ್ನಿತರ ಜಲಜೀವಿಗಳಿಗೂ ಬದುಕುವ ಅನುಕೂಲತೆ ಕಲ್ಪಿಸಿಕೊಡುವ ಶ್ರೇಯಸ್ಸು ತಿಮಿಂಗಿಲ ವರ್ಗಕ್ಕೆ ಸಲ್ಲುತ್ತದೆ.

ಕರ್ಣಕರ್ಕಶವೆಂದು ಅಪಖ್ಯಾತಿ ಪಡೆದರೂ ಕಾಕ-ಸಮಾಜಕ್ಕೆ, ಮೊಟ್ಟ ಮೊದಲ 'ಪಂಚಾಯತ್ ರಾಜ್ಯ' ಆಚರಣೆಗಳಿಗೆ ತಂದ ಕೀರ್ತಿ ಸೇರಬೇಕು. ಸ್ಥಳೀಯವಾಗಿ ಏನಾದರೂ ಅಕ್ರಮ, ಅತ್ಯಾಚಾರ ನಡೆದರೆ, ಕಾಕ ತಂಡದ ಮುಖ್ಯಸ್ಥನು ಕಹಳೆಯೂದಿ, ಪಂಚರನ್ನು ಆಮಂತ್ರಿಸಿ, ಬೃಹತ್ ಕಾಕ ಸಭೆಯನ್ನು ಸೇರಿಸಿಯೇ ಬಿಡುತ್ತಾನೆ. ಅತಿಕ್ರಮಮಾಡಿದವರು, ವಂಚನೆ ಮೋಸ ಕೈಕೊಂಡವರು, ತಮ್ಮ ತಪ್ಪನ್ನು ಒಪ್ಪಿಕೊಂಡಾಗ, ಮುಂದಾಳುಗಳು ಅವನ್ನು ಕುಕ್ಕಿ, ಒಂದೆರಡು ಗರಿ ಕಿತ್ತು ಹಾಕಿ ಶಿಕ್ಷಿಸುತ್ತವೆ. ಕಾಕ ಸಮಾಜದಲ್ಲಿ ಸುಳ್ಳನ್ನು ಸತ್ಯವೆಂದು ವಾದಿಸುವ ವಕೀಲರ ಪಡೆ ಇಲ್ಲ. ತಪ್ಪಿತಸ್ಥರು ಜೈಲು ಸೇರಿ ಕೊಳೆಯಬೇಕಾಗಿಲ್ಲ. ಕೊಲೆ, ಸುಲಿಗೆಯಂಥ ಮಹಾಪರಾಧಗಳೇ ಇಲ್ಲದ್ದರಿಂದ ಮರಣದಂಡನೆಯಂಥ ಶಿಕ್ಷೆಯ ಆವಶ್ಯಕತೆಯಿಲ್ಲ. ಮಾನವನು ಕಾಗೆಯಷ್ಟಾದರೂ ಸತ್ಯವಂತನಾಗಿ ಬದುಕುವಂತೆ ಆಗಿದ್ದರೆ ತನ್ನ ಜೀವನಕ್ಕೊಂದು ಅರ್ಥ ಕಲ್ಪಿಸಬಹುದಿತ್ತು!

ಅತಿಮಂದಮತಿಯಾದ ಮಂಡೂಕರಾಯನಿಗೂ, ನಿಂತ ಮಳೆಯ ನೀರಿನಲ್ಲಿ ಎಷ್ಟು ಮೊಟ್ಟೆಗಳನ್ನಿಟ್ಟು ಮರಿಮಾಡಬೇಕೆಂಬುದು ಗೊತ್ತು. ಸಂತತಿ ಮಿತಿಮೀರಿದರೆ ತಮ್ಮ ಇಡೀವರ್ಗವೇ ಹಸಿವಿನಿಂದ ಸಾಯುವದು ಖಚಿತವೆಂದರಿತ ಪಶು ಪಕ್ಷಿಗಳೂ ಮಿತಸಂತಾನದ ಸೂತ್ರಗಳನ್ನು ಚಾಚೂ ತಪ್ಪದೇ ಪಾಲಿಸುತ್ತವೆ. ಕಷ್ಟಪಟ್ಟು ಗಿಡ ಗಂಟೆಗಳಲ್ಲಿ ಗೂಡು ಕಟ್ಟುವ ಪುಟ್ಟ ಸೂರಕ್ಕಿ, ನಾಲ್ಕು ಮೊಟ್ಟೆಯಿಟ್ಟು, ಕಾವು ಕೊಡುವಾಗ, ಮರಿಬೆಳೆಯುವಾಗ, ಬೀಸುಗಾಳಿಯಿಂದಾಗಿ, ಕಾಗೆ- ಹಾವುಗಳಂಥ ಕಡುವೈರಿಗಳಿಂದಾಗಿ, ಒಂದೆರಡು ಮರಿಗಳು ಮೃತಪಟ್ಟರೂ, ತಿರುಗಿ ಮರಿಮಾಡುವದರಲ್ಲಿ ಮನಸ್ಸು ಹಾಕುವದಿಲ್ಲ. ಸರ್ವ, ಸಂತಾನದ ನಾಶವಾದಾಗ ಮಾತ್ರ ತಿರುಗಿ ಗೂಡುಕಟ್ಟಿ, ಮೊಟ್ಟೆಗಳನ್ನಿಟ್ಟು ಮರಿಮಾಡುತ್ತದೆ. ಸಂತತಿ ನಿಯಂತ್ರಣದ ಯಾವತ್ತೂ ಸಾಧನಗಳು ಲಭ್ಯವಿದ್ದೂ ಜನಸಂಖ್ಯೆ ಏರಿಸುತ್ತಲೇ ಹೊರಟಿರುವ ಮೂರ್ಖ ಮಾನವನು ಈ ಪುಟ್ಟ ಹಕ್ಕಿಯಿಂದಲಾದರೂ ಮಿತ ಸಂತಾನದ ಪಾಠ ಕಲಿಯಬಾರದೇ?

ದೈಹಿಕ ಶ್ರಮದ ಆವಶ್ಯಕತೆಯ ಬಗ್ಗೆ ಜೇನ್ನೊಣಗಳಿಂದ ಪಾಠಕಲಿಯಬೇಕು. ಗಂಡು ನೊಣಗಳು ಪುಷ್ಪವತಿಯರಾದ ಹೆಣ್ಣು ನೊಣಗಳನ್ನು ಫಲವತಿಯನ್ನಾಗಿಸುವದು ಮಾತ್ರ ತಮ್ಮ ಕರ್ತವ್ಯವೆಂದು ನಂಬಿ ಕೆಲಸಗಾತಿ ನೊಣಗಳು ಬಲುಕಷ್ಟಪಟ್ಟು ಸಂಚಯಿಸಿದ

ಮಧುವನ್ನು ನೆಕ್ಕಿ ಮೋಜಾಗಿರಬಯಸುತ್ತವೆ. ಆದರೆ ಗೂಡಿನಲ್ಲಿ ಆಹಾರದ ಕೊರತೆಯಾದಾಗ ಇವೇ ಕೆಲಸಗಾತಿಯರು ಸೋಮಾರಿ ಗಂಡುಗಳನ್ನು ಗೂಡಿನಿಂದ ಹಚ್ಚಿ ಹೊರಹಾಕಿಬಿಡುವವು. ರಾಣಿಯ ಆಶ್ರಯತಪ್ಪಿದ ಈ ಅನಾಥ ಗಂಡುಗಳಿಗೆ ಮೃತ್ಯುವನ್ನು ಸ್ವಾಗತಿಸಿ ವೀರಸ್ವರ್ಗ ಸೇರುವದೊಂದೇ ಮಾರ್ಗ. ಇರುವೆಗಳೂ ಗಂಡುಗಳಿಗೆ ಪುಕ್ಕಟೆ ಉಣಬಡಿಸಲು ಒಪ್ಪದೇ ದುಡಿದು ದಣಿಯುವಂತೆ ಮಾಡುತ್ತವೆ. ಮಾನವನ ಸಮಾಜದಲ್ಲೂ ಈ ಕಾನೂನು ಕಡ್ಡಾಯವಾಗಿ ಜಾರಿಗೆ ಬಂದಿದ್ದರೆ. ಅದೆಷ್ಟು ಚೆನ್ನಾಗಿರುತ್ತಿತ್ತು.!

ವಲಸೆಹೋಗುವ ಮೀನು, ಪಾತರಗಿತ್ತಿ, ಪಶು-ಪಕ್ಷಿಗಳು ಅನ್ನ ನೀರು ಇಲ್ಲದೇ ಹಗಲೂ-ರಾತ್ರಿಗಳನ್ನು ಲೆಕ್ಕಿಸದೇ ಸಹಸ್ರಾರು ಕಿಲೋಮೀಟರ ದೂರದ ಪಯಣ ಕೈಕೊಳ್ಳುತ್ತವೆ. ಅದೇ ಮಾನವನು ಎರಡು ಮೂರು ಕಿ.ಲೋ. ಮೀಟರ ದೂರದ ದಾರಿ ಕ್ರಮಿಸಲು ದ್ವಿಚಕ್ರ ವಾಹನಗಳನ್ನು ಬಯಸುತ್ತಾನೆ. ಕಾರು-ಹೆಲಿಕಾಪ್ಟರ್‌ಗಳಲ್ಲಿ ಪಯಣಿಸುವವನು ಅದೃಷ್ಟವಂತನೆಂದು ಪರಿಗಣಿಸಲಾಗುತ್ತದೆ. ಕಾಲ ನಡಿಗೆಯಿಂದಲೇ ಯಾವ ಮೂಲೆಯನ್ನಾದರೂ ತಲುಪಬಹುದಾದ ಹೊನ್ನಾವರ ಒಂದರಲ್ಲೇ ಅದೆಷ್ಟು ಮೊಪೆಡ್, ಸ್ಕೂಟರ್, ಆಟೋ, ಟ್ರಾಕ್ಸ್‌ಗಳು! ಇವನ್ನು ಓಡಾಡಿಸಲು ಬೇಕಾಗುವ ಪೆಟ್ರೋಲ್ ಪಡೆಯಲು ನಮ್ಮ ಬಡದೇಶ ಅತ್ಯಮೂಲ್ಯ ವಿದೇಶಿ ವಿನಿಮಯ ಹೊತ್ತ ಸುರಿಯಬೇಕಾಗುವದೆಂದು ಈ ವಾಹನಗಳನ್ನು ಬಳಸುವವರು ಅರಿತುಕೊಳ್ಳುವ ಗೋಜಿಗೆ ಹೋದಂತಿಲ್ಲ. ಪರಿಸರ ಕಲುಷಿತಗೊಳಿಸುವ ಜೊತೆಗೆ ಭೂಮಾತೆಯು ಕೋಟಿಗಟ್ಲೆ ವರ್ಷಗಳಿಂದ ಕೂಡಿ ಹಾಕಿದ ಪೆಟ್ರೋಲನ್ನು ಮುಂಬರುವ ಮೂರು ದಶಕಗಳಲ್ಲೇ ಬರಿದು ಮಾಡಿ ಬಿಡುವ ಶ್ರೇಯಸ್ಸು ನಮ್ಮದಾಗುವದಲ್ಲಿ ಶಂಕೆಯೇ ಇಲ್ಲ.

ಕೀಟಬಾಧೆ ಮಾನವನಂತೆ ಇನ್ನಿತರ ಪ್ರಾಣಿಗಳಿಗೂ ತಪ್ಪಿದ್ದಲ್ಲ. ಆದರೆ ಅವು ನಮ್ಮಂತೆ ಅತ್ಯಂತ ವಿಷಕಾರಿ ರಸಾಯನಗಳನ್ನು ಸಿಂಪಡಿಸಿ ಪರಿಸರವನ್ನು ಕಲುಷಿತಗೊಳಿಸುವದಿಲ್ಲ. ಬದಲಿಗೆ ಕೆಲವು ನಿರುಪದ್ರವಿ ಕ್ರಮಗಳನ್ನು ತಮ್ಮದಾಗಿಸಿವೆ. ಗುಬ್ಬಿಗಳಿಗೆ ಮೈತುಂಬ ಹೇನುಗಳಾದರೆ ಧೂಳಿನಲ್ಲಿ ಹೊರಳಾಡಿ, ಅವುಗಳ ಬಾಧೆಯಿಂದ ಮುಕ್ತಿ ಪಡೆಯುತ್ತವೆ. ಕುಕ್ಕುಟಗಳು, ಕಾಲಿನ ಪಂಜುಗಳಿಂದ ಝಾಡಿಸಿಕೊಳ್ಳುತ್ತವೆ. ಕಾಗೆಗಳು ಕೊಕ್ಕಿನಿಂದ ಹೆಕ್ಕಿ ಉದರಕ್ಕಿಳಿಸುತ್ತವೆ. ಕೋತಿಗಳು ಪರಸ್ಪರ ಹೇನು ಹೆಕ್ಕಿ ನುಂಗುವದು ಸಾಮಾನ್ಯ. ದನಕರುಗಳು ಉಣ್ಣಿಯ ಬಾಧೆಯಿಂದ ರಕ್ಷಿಸಿಕೊಳ್ಳಲು ಬೆಳ್ಳಕ್ಕಿಗಳ ನೆರವು ಪಡೆಯುತ್ತವೆ. ಆನೆಗಳು ತಮ್ಮ ಚರ್ಮಕ್ಕಾದ ಗಾಯಕ್ಕೆ ಕೀಟ ಬಾಧೆಯಾದಾಗ ಹೋಗಲಾಡಿಸಲು ಇದೇ ತಂತ್ರ ಬಳಸುವದುಂಟು ಖಡ್ಗಮೃಗದ ಸುತ್ತ ಸಣ್ಣ ಸಣ್ಣ ಹಕ್ಕಿಗಳು ಸುತ್ತುವರಿದು ತಮ್ಮ ಬಲಾಢ್ಯ ಸ್ನೇಹಿತನ ಕೀಟಬಾಧೆ ಕಡಿಮೆ ಮಾಡುತ್ತವೆ. ಹುಲುಮನುಜನಿಗೆ ಇಂಥ ನೈಸರ್ಗಿಕ ತಂತ್ರಗಳಲ್ಲಿ ವಿಶ್ವಾಸವಿದ್ದಿದ್ದರೆ ಪರಿಸರದ ಪರಿಶುದ್ಧತೆಯನ್ನು ಸುಲಭವಾಗಿ ಕಾಯ್ದುಕೊಂಡು ಹೋಗಬಹುದಾಗಿತ್ತು. ಆದರೆ ದುರ್ದೈವದಿಂದ ಆತನಿಗೆ ತನಗಾಗದವರನ್ನು ಸದೆಬಡಿಯಲು ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ ಬಿಡುವದರಲ್ಲಿ ಹೆಚ್ಚಿನ ವಿಶ್ವಾಸ.

ಪ್ರಾಣಿಗಳಲ್ಲಿ ವಿವಿಧ ಕಾರಣಗಳಿಗಾಗಿ ಕಾದಾಡುವದು ತೀರ ಸಾಮಾನ್ಯ. ಹುಲಿಗಳು ಪರಚಿಕೊಂಡರೆ, ನಾಯಿಗಳು, ಕಚ್ಚಿಕೊಳ್ಳುವವು. ಗೋವುಗಳು ಕೋಡುಗಳಿಂದ ಹಣೆದುಕೊಂಡರೆ, ಆನೆಗಳು ಸೊಂಡಿಲಿನಿಂದ ಸದೆ ಬಡಿಯಲು ಯತ್ನಿಸುವವು. ಕೋಳಿಗಳು ಪ್ರತಿಸ್ಪರ್ಧಿಗಳ ಗೋಣು ಮುರಿಯಲು ಯತ್ನಿಸಿದರೆ ಹೆಬ್ಬಾವು ವೈರಿಯನ್ನು ನುಂಗಿಬಿಡಬಹುದು. ಆದರೆ ತನ್ನವರನ್ನೇ ಕೊಂದು ಗೆಲ್ಲಲು ಬಯಸುವ ಹಣಕ್ಕಾಗಿ ಕೊಲ್ಲುವ ಮಾನವನಷ್ಟು ಕ್ರೂರ ಪ್ರಾಣಿ ಇನ್ನಾವುದೂ ಇಲ್ಲ. ಇದೇ ಧೋರಣೆ ಮುಂದುವರಿದರೆ ತಾನೂ ಪೆಡಂಭೂತಗಳಂತೆ ನಶಿಸಿ ಹೋದರೆ ಏನೂ ಆಶ್ಚರ್ಯವಿಲ್ಲ! ಇನ್ನಿತರ ಪಶು-ಪಕ್ಷಿಗಳು ಪರಿಸರದೊಂದಿಗೆ ಒಂದಾಗಿ ತಮ್ಮ ಸಮಸ್ಯೆಗಳಿಗೆಲ್ಲ ತಾವೇ ಪರಿಹಾರ ಕಂಡುಕೊಂಡಿವೆ, ಎಂಬುದನ್ನು ಅರಿತು, ಅವಿವೇಕದ ದುಡುಕುತನವನ್ನು ಕೈಬಿಟ್ಟರೆ ಸಕಲ ಜೀವಿಗಳೊಂದಿಗೆ ಒಂದಾಗಿ ಬಾಳುವದು ಸಾಧ್ಯವಾಗಬಹುದು.

ಆರ್. ಎನ್. ನಾಯ್ಕ ಮಾಸ್ತರರು ಸಾಹಿತ್ಯದಲ್ಲಿ ಪದವೀಧರರಾಗಿ, ಸದಾಕಾಲ ನವನವೀನ ಶಿಕ್ಷಕರನ್ನು ಬರಮಾಡಿಕೊಳ್ಳುತ್ತಿದ್ದ ನ್ಯೂ ಇಂಗ್ಲಿಷ್ ಸ್ಕೂಲ್‌ನಲ್ಲಿ ಸೇರಿದ ಹೊಸದರಲ್ಲಿ ನಮ್ಮ ವರ್ಗಕ್ಕೆ 'ಸಾಹಿತ್ಯವೆಲ್ಲರಿಗಿಲ್ಲ'!' ಎಂಬ ಪ್ರಬಂಧವನ್ನು ಬರೆಯಲು ಕೊಟ್ಟಿದ್ದರು. ಆ ಕುರಿತು ಏನು ಬರೆಯಬೇಕು? ಎಂದು ಗೊತ್ತಾಗದೇ ನನಗೂ-ಸಾಹಿತ್ಯಕ್ಕೂ ಎಣ್ಣೆ, ಸೀಗೆಕಾಯಿ ನಂಟು, ಎಂದು ಮನವರಿಕೆಯಾಗಿಬಿಟ್ಟಿತ್ತು. ಅಂತೆಯೇ ವಿದ್ಯಾರ್ಥಿ ಜೀವನದ ಉದ್ದಕ್ಕೂ ಕತೆ, ಕವನ, ಪ್ರಬಂಧ ಇತ್ಯಾದಿ ಯಾವುದನ್ನು ಬರೆಯುವ ಸಾಹಸಕ್ಕೆ ಹೋಗಿರಲಿಲ್ಲ. ಆದರೆ ಸಾಹಿತ್ಯ ಓದಿದವರ ಬಗ್ಗೆ, ಸಾಹಿತಿಗಳ ಬಗ್ಗೆ ಅಪಾರ ಗೌರವವಿತ್ತು. ಶಾಲಾಕಾಲೇಜು ದಿನಗಳಲ್ಲಿ ಡಾ। ಎಲ್. ಆರ್. ಹೆಗ್ಡೆ, ಡಾ। ಜಿ. ಎಸ್. ಆಮೂರರ ಪ್ರಭಾವಕ್ಕೆ ಒಳಗಾಗಿದ್ದೆ. ೧೯೫೪ರಲ್ಲಿ ಕುಮಟಾದಲ್ಲಿ ನಡೆದ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಹೊತ್ತಿಗೆ, ಯಾರದೋ ಕ್ಯಾಮರಾವನ್ನು ಎರವಲು ಪಡೆದ, ಕೂಡಿಟ್ಟಿದ್ದ ಪುಡಿಗಾಸಿನಿಂದ ಫಿಲ್ಮ್ ತಂದು, ಬಂದ ಸಾಹಿತಿಗಳ ಛಾಯಾಗ್ರಹಣ ಮಾಡಿದ್ದೆ. ಆಗ ಸೆರೆಹಿಡಿದ ವಿ. ಸೀ. ಬೇಂದ್ರೆ, ಕಾರಂತ, ಎ.ಎನ್. ಮೂರ್ತಿರಾವ್, ತೀ.ನಂ.ಶ್ರೀ, ತರಾಸು, ಅಡಿಗರು, ರಾಮಚಂದ್ರ ಶರ್ಮ, ಬಿ.ಎಚ್. ಶ್ರೀಧರ್ ಮುಂತಾದವರ ಛಾಯಾಚಿತ್ರಗಳು ನನ್ನ ಭಂಡಾರದ ಅಪೂರ್ವನಿಧಿಯಾಗಿ ಉಳಿದಿವೆ!

ಅಮೇರಿಕೆಯ ಡಾಕ್ಟರೇಟು ಪಡೆದು, ಮರಳಿ ಬಂದು, ವಿವಾಹಿತನಾಗಿ, ಅಮೇರಿಕ ನೋಡದ ಪತ್ನಿಗೆ ಅಲ್ಲಿಯ ಅನುಭವಗಳನ್ನೆಲ್ಲ ರಂಗು ರಂಗಾಗಿ ವರ್ಣಿಸುತ್ತಿದ್ದೆ. ಅವನ್ನೆಲ್ಲ ಒಂದು ರೂಪದಲ್ಲಿ ತರಲು ಬರೆಯುವಂತೆ ಆಗ್ರಹ ಮಾಡಲಾರಂಭಿಸಿದಳು. "ಅ,ಆ ಬರೆಯಲು ಕಲಿತೊಡನೆ ಸಾಹಿತಿಗಳಾಗಲು ಸಾಧ್ಯವೇ?" ಎಂದೆಲ್ಲ ಶಾಲಾದಿನಗಳ ಅನುಭವ ಹೇಳಿದೆ. ಆಕೆ ಒಪ್ಪಲೇ ಇಲ್ಲ. "ನಿಮ್ಮ ಹತ್ತಿರ ಅಪೂರ್ವ ಅನುಭವಗಳಿವೆ. ಬರೆಯುವ ಶೈಲಿಯಿದೆ, ಬರೀರೀ!" ಎಂದು ಪಟ್ಟು ಹಿಡಿದಳು. ಉಪಾಯವಿಲ್ಲದೇ ವಿರಾಮದ ವೇಳೆಯಲ್ಲಿ ಕಂಡದ್ದನ್ನು ಕ್ರಮವಾಗಿ ಬರೆಯಲಾರಂಭಿಸಿದೆ. "ತೀರ ಸಂಕ್ಷಿಪ್ತ ಬರಹ! ತಂತಿಸಮಾಚಾರದ ಭಾಷೆಯ ಬರವಣಿಗೆ, ಸಾಹಿತ್ಯವಾಗಲಾರದು!" ಎಂದು ಆಕ್ಷೇಪಿಸಿದಳು. "ಸ್ವಲ್ಪದರಲ್ಲಿ ತಿಳಿಸುವದು ವಿಜ್ಞಾನದ ರೀತಿ," ಎಂದೆ. ಇದರಿಂದ ವಾದ ವಿವಾದ ಬೆಳೆದು ಬರವಣಿಗೆ, ಕೆಲ ಕಾಲ ಸ್ಥಗಿತವಾಯಿತು. ಆದರೆ ಕೊನೆಗೆ ಅರ್ಧಾಂಗಿನಿಯೇ ಸೋತು ಬರೆದದ್ದನ್ನು ಒಪ್ಪಿಕೊಂಡಾಗ ಬರವಣಿಗೆಯನ್ನು ಮುಂದುವರಿಸಿದ್ದಾಯಿತು. ಸಿದ್ಧವಾದ ಹಸ್ತಪ್ರತಿಯನ್ನು ಧಾರವಾಡದ ಮನೋಹರ ಗ್ರಂಥಮಾಲೆಯ ಸಂಪಾದಕರಾದ ಶ್ರಿ ಜಿ.ಬಿ. ಜೋಶಿ ಅವರಿಗೆ ಕಳಿಸಿದಾಗ ಅವರು ಅದನ್ನು ರಾತ್ರಿಯೆಲ್ಲ ಓದಿ ಮುಗಿಸಿ, ಮೆಚ್ಚಿಕೊಂಡು ಪ್ರಕಾಶನಕ್ಕೆ ಒಪ್ಪಿಕೊಂಡುಬಿಟ್ಟರು. ರಾತ್ರಿ ಬೆಳಗಾಗುವದರಲ್ಲಿ ನಾನೊಬ್ಬ ಬರಹಗಾರ, ಸಾಹಿತಿ ಆಗಿ ಬಿಟ್ಟಿದ್ದೆ!

ಆಗ ಹೊರನಾಡಿನಲ್ಲಿದ್ದ ಹೊಸಬನೊಬ್ಬನನ್ನು ಸಾಹಿತಿಗಳ ಬಳಗಕ್ಕೆ ಸೇರಿಸಲು ಮನಸ್ಸಿಲ್ಲದ ವಿಮರ್ಶಕರೊಬ್ಬರು ಇದು 'ನೇತಿ' ಸಾಹಿತ್ಯವೆಂದರು; ಇನ್ನೊಬ್ಬ ಲೇಖಕರು ಪ್ರವಾಸಕಥನ, ಸೃಜನಶೀಲ ಸಾಹಿತ್ಯವಲ್ಲವೆಂದರು. ಮಗುದೊಬ್ಬರು, ಇದು ಮಾಹಿತಿಯ ವರದಿಯೇ ಹೊರತು ಬರಹವಾಗದೆಂದರು. ಆದರೆ ಓದುಗರಿಂದ ಬಂದ ಪ್ರತಿಕ್ರಿಯೆ ಅತ್ಯಂತ ವಿಸ್ಮಯಕಾರಿ. ಮುಕ್ತ ಮನಸ್ಸಿನಿಂದ ಸಾಹಿತಿಯೆಂದೇ ಒಪ್ಪಿಕೊಂಡರು, ಮೆಚ್ಚಿಗೆಯನ್ನು ಬರೆದು ತಿಳಿಸುವ ಹೃದಯವಂತಿಕ ತೋರಿದರು. ತೀರ್ಥಹಳ್ಳಿಯ ಓರ್ವ ಓದುಗ "ಬಾಲ್ಯದಲ್ಲಿ ಚಂದಮಾಮ, ಯೌವನದಲ್ಲಿ ಎಸ್. ಎಲ್. ಭೈರಪ್ಪನವರ ಕಾದಂಬರಿಗಳನ್ನು ಓದುವಾಗ ಸಿಗುತ್ತಿದ್ದ ಸಂತೋಷ ನಿಮ್ಮ ಪ್ರವಾಸ ಕಥನ ಓದಿದಾಗ ನನ್ನದಾಯಿತು!" ಎಂದು ಬರೆದದ್ದು ನೆನಪಾಗುತ್ತದೆ. ಜಿ.ಬಿ ಜೋಶಿಯವರು, ತಾವು ಪ್ರಕಟಿಸಿದ ಕೃತಿಗಳಲ್ಲಿ ಎಂಟೇ ತಿಂಗಳಲ್ಲಿ ಪ್ರತಿಗಳೆಲ್ಲ ಮುಗಿದು ಎರಡನೇ ಮುದ್ರಣ ಹಾಕುವ ಯೋಗ ಬಂದದ್ದು ಎರಡೇ ಕೃತಿಗಳಿಗೆ, ಎಮ್.ಕೆ. ಇಂದಿರ. ಅವರ 'ತುಂಗ ಭದ್ರ' ಹಾಗೂ 'ನಾನೂ ಅಮೇರಿಕೆಗೆ ಹೋಗಿದ್ದೆ' ಎಂದಾಗ ಪಟ್ಟ ಶ್ರಮ ಸಾರ್ಥಕವೆನಿಸಿತು. ಕಾದಂಬರಿಯಷ್ಟೆ ಪ್ರವಾಸಗ್ರಂಥ ಜನಪ್ರಿಯವಾಯಿತೆಂದಾಗ ಸಂತೋಷವಾಗದೇ ಇದ್ದೀತೇ?

ಈ ಪುಸ್ತಕ, ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ೧೯೬೯ರ ಶ್ರೇಷ್ಠ ಪ್ರವಾಸ ಕಥನವೆಂದು ಪುರಸ್ಕರಿಸಲ್ಪಟ್ಟಿತು. ಬೆಂಗಳೂರು, ಕರ್ನಾಟಕ ವಿಶ್ವವಿದ್ಯಾಲಯಗಳು ಪದವೀ ವರ್ಗದ ಪ್ರಥಮ ವರ್ಷ ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕವಾಗಿ ಸ್ವೀಕರಿಸಿದವು. ಮಹಾರಾಷ್ಟ್ರ ಸರಕಾರವು ಉಚ್ಚ ಮಾಧ್ಯಮಿಕ ಶಾಲೆಯ ಪಠ್ಯ ಪುಸ್ತಕದಲ್ಲಿ ಒಂದು ಅಧ್ಯಾಯವನ್ನು ಸೇರ್ಪಡೆ ಮಾಡಿತು. ಕೆನಡಾ, ಉತ್ತರ ಅಮೇರಿಕೆಗಳಲ್ಲಿ ನೆಲೆಸಿದ ಕನ್ನಡಿಗರು ಹಲವರು, ತಮ್ಮಿಂದ ಹೇಳಲಾಗದ್ದನ್ನು ಬರೆದು ಪ್ರಕಟಿಸಿದ್ದಕ್ಕಾಗಿ ಅಭಿನಂದಿಸಿದರು. ಮನೋಹರ ಗ್ರಂಥಮಾಲೆಯು ಐವತ್ತು ವರ್ಷಗಳ ಸಾಹಿತ್ಯ-ಪ್ರಕಾಶನಸಾಹಸದ ಸಂದರ್ಭದಲ್ಲಿ, ತನ್ನ ಉತ್ತಮ ಕೃತಿಗಳ ಮರುಮುದ್ರಣ ತಂದಿತು. 'ಪುಟಬಂಗಾರ'ದ ನಾಲ್ಕನೆಯ ಸಂಪುಟದಲ್ಲಿ ಈ ಪುಸ್ತಕವನ್ನು ಪುನಃ ಸೇರಿಸಲಾಗಿದೆ. ಮಗ ವಿಕಾಸನು, ಅಮೇರಿಕೆಗೆ ಹೊರಟಾಗ, ಈ ಕೃತಿಯನ್ನು ಓದಿರಲಿಲ್ಲ. ಆದರೆ ಪ್ರತಿಯನ್ನು ಒಯ್ದಿದ್ದ. 'ಕಾಲು ಶತಮಾನದಲ್ಲಿ ಅಮೇರಿಕೆ ಹಾಗೇ ಇರುತ್ತದೆಯೇ? ಎಷ್ಟೊಂದು ಬದಲಾಗಿರುತ್ತದೆ!' ಎಂದು ಟೀಕೆ ಮಾಡಲು ಮರೆತಿರಲಿಲ್ಲ. ಅಲ್ಲಿ ಕೆಲ ಕಾಲವಾಸದ ನಂತರ" "ಅಮೇರಿಕನ್ನರ ಒಲವು ನಿಲವುಗಳು ಬದಲಾಗಿಲ್ಲ. ಬಾಪ್ಪಾರು ಬರೆದದ್ದೆಲ್ಲ ಅಕ್ಷರಶಃ ನಿಜವಾಗಿದೆ!" ಎಂದು ಒಪ್ಪಿಕೊಂಡ. ನಂತರ ಪತ್ನಿಯು ಅಮೇರಿಕೆಗೆ ಹೋದಾಗ 'ಲೇಖನಿಯ ಸ್ನೇಹಿತೆ' ಜೇನ್ ರೊಥ್‌ಳ ಕುಟುಂಬದೊಡನೆ ಒಂದು ವಾರ ಕಳೆದಳಲ್ಲದೇ ಅವರ ಕುರಿತಾಗಿ ಬರೆದ ಅಧ್ಯಾಯವನ್ನು ಇಂಗ್ಲಿಷಿಗೆ ಭಾಷಾಂತರಿಸಿ, ಒಪ್ಪಿಸಿದಳು. ಈ ಕೃತಿಯು ಆರು ಮುದ್ರಣಗಳನ್ನು ಕಂಡಿತು. ಲೇಖಕನ ಮೊದಲ ಕೃತಿಯೇ ಇಷ್ಟು ಜನಪ್ರಿಯವಾಗುವದು ಕನ್ನಡದಲ್ಲಿ ತೀರ ಅಪರೂಪವಿದ್ದಿರಬೇಕು. ನಂತರ ಸಂಪಾದಕರು, ಪ್ರಕಾಶಕರು ಹಸ್ತಪ್ರತಿಗಳಿಗೆ ವಿನಂತಿಸಿಕೊಳ್ಳಲಾರಂಭಿಸಿದರು. ವೈಜ್ಞಾನಿಕ ಬರವಣಿಗೆಗೂ ಬೇಡಿಕೆ ಬರಲಾರಂಭಿಸಿತು. ಪರಿಸರ ಕುರಿತಾದ ಎರಡು ಗ್ರಂಥಗಳನ್ನು ಬರೆದು ಕೊಡುವದಾಗಿ ಇದಾಗಲೇ ವಾಗ್ದಾನ ಮಾಡಿದ್ದೇನೆ.

ಕನ್ನಡದ ಎಲ್ಲ ಪತ್ರಿಕೆಗಳೂ, ನನ್ನ ಲೇಖನಗಳನ್ನು ಪ್ರಕಟಿಸಿವೆ. 'ಸಾಕ್ಷಿ' ವೈಚಾರಿಕ ಬರವಣಿಗೆಯನ್ನು, ಸುಧಾ, ವೈಜ್ಞಾನಿಕವಾದ, ಕರ್ಮವೀರವು ಜನಜೀವನ ಕುರಿತಾದ 'ತರಂಗವು' ಕಲೆಯ ಕುರಿತಾದ ಲೇಖಗಳನ್ನು ಪ್ರಕಟಿಸಿವೆ. 'ಕಸ್ತೂರಿ'ಯು ಪುಸ್ತಕ ವಿಭಾಗದಲ್ಲಿ ಮೂರು ಗ್ರಂಥಗಳ ಸಂಗ್ರಹ ರೂಪ ಹಾಕಿತು. 'ಪ್ರಜಾವಾಣಿ', 'ಸುಧಾ', 'ಕರ್ಮವೀರಗಳು ವಿಶೇಷಾಂಕಗಳಲ್ಲಿ ಆಹ್ವಾನಿತ ಲೇಖಗಳನ್ನು ಪ್ರಕಟಿಸಿವೆ. ಇವಗಳಲ್ಲಿ ಮೆಚ್ಚಿನವು ಸಚಿತ್ರ ಲೇಖಗಳು. ಖ್ಯಾತ ಸಾಹಿತಿಗಳ, ಛಾಯಾಚಿತ್ರಗಳ ಭಂಡಾರ ನನ್ನೊಂದಿಗಿದೆ. ಈಗಿನ ದಿನಗಳಲ್ಲಿ ಸಂಭಾವನಾ ಹಾಗೂ ಗೌರವಗ್ರಂಥ ಸಂಪುಟಗಳಿಗೆ ಲೇಖನಗಳಿಗೆ ಬೇಡಿಕೆ ಬರಲಾರಂಭಿಸಿದೆ. 'ಹರತಿ ಸಿರಿಗೆ' ಸೀಬಿಯ ಭಿತ್ತಿಚಿತ್ರಗಳು,

ಡಾ। ಚಿದಾನಂದ ಮೂರ್ತಿಗಳ ಸಂಶೋಧನೆಗೆ 'ಮೈಸೂರು ಅರಸರ ಕಾಲದ ಒಳಾಂಗಣ ಚಿತ್ರಗಳು", ಪ್ರೊ. ಎಚ್ಚೆಸ್ಕೆ ಅಭಿನಂದನಾ ಗ್ರಂಥ 'ಸಮದರ್ಶಿಗೆ 'ಸೌಗಂಧಿಕಾ ಪರಿಣಯದಲ್ಲಿ ಸಸ್ಯ ಶಾಸ್ತ್ರ', ಮುರುಘಾಶ್ರೀಗೆ "ಕರ್ನಾಟಕದ ಚಿಕಣಿ ಚಿತ್ರಗಳು" ಮುಂತಾದ ಲೇಖನಗಳು, ವೈವಿಧ್ಯದ ದೃಷ್ಟಿಯಿಂದ ಉಲ್ಲೇಖನೀಯ. ಕರ್ನಾಟಕದ ಲಲಿತಕಲಾ ಅಕಾಡೆಮಿಯ ವಿಶೇಷ ಸಂಪುಟಗಳಾದ "ಚಿತ್ರಕಲಾ ಪ್ರಪಂಚ" 'ಶಿಲ್ಪ ಕಲಾ ಪ್ರಪಂಚ ಗಳಲ್ಲೂ ವಿಶೇಷ ಆಮಂತ್ರಿತ ಲೇಖನಗಳು ಪ್ರಕಟವಾಗಿವೆ.

ಶಾಲಾಗುರುಗಳಾದ ಮುಗ್ವೆಯ ಶ್ರೀ ವಿ. ಎಮ್. ಕಾಮತರು, ಗಣಿತ ಜ್ಞಾನದ ಜೊತೆಗೆ ಸೈನಿಕ ಶಿಸ್ತಿನ ತರಬೇತಿ ನೀಡಿದ್ದಾರೆ. ಒಮ್ಮೆ ಅವರು ಭೇಟಿಯಾದಾಗ. "ನೀನು ಶ್ರಮಪಟ್ಟು ಕಲಿತು. ಅಮೇರಿಕೆಗೆ ಹೋಗಿ ಡಾಕ್ಟರೇಟು ಪದವಿ ಪಡೆದದ್ದು ಅಚ್ಚರಿಯ ಮಾತಲ್ಲ, ಆದರೆ ಸಾಹಿತಿ ಹೇಗಾದಿ?" ಎಂದು ಪ್ರಶ್ನಿಸಿದಾಗ ಸಮರ್ಪಕ ಉತ್ತರ ಕೊಡಲಾಗಲಿಲ್ಲ! ಕುಮಟಾದ ಕೆನರಾ ಕಾಲೇಜಿನಲ್ಲಿ ಇಂಗ್ಲಿಷ್ ಪಾಠ ಮಾಡಿದ ಡಾ। ಜಿ.ಎಸ್. ಅಮೂರರು, "ವಿದ್ಯಾರ್ಥಿಯಿದ್ದಾಗ ನಿನಗೆ ಸಾಹಿತ್ಯಿಕ ಒಲವೂ ಇದೆ ಎಂದು ಅನಿಸಿರಲೇ ಇಲ್ಲ! ಕೆಲವು ಕಲೆಗಳು ಮಾನವನಲ್ಲಿ ಆಳವಾಗಿ ಹುದುಗಿಕೊಂಡಿರುವಂತೆ ತೋರುತ್ತದೆ, ಕಾಲಕೂಡಿಬಂದಾಗ ಅವು ಪ್ರತ್ಯಕ್ಷವಾಗುತ್ತಿರಬೇಕು!" ಎಂದು ಮೆಚ್ಚಿಗೆ ಸೂಸಿದ್ದರು. ನಮ್ಮ ಜಿಲ್ಲೆಯ ಶ್ರೇಷ್ಠ ಕವಿಗಳಲ್ಲಿ ಒಬ್ಬರಾದ ವಿ.ಜಿ. ಭಟ್ಟರು, ನನಗೆ ತೀರ ಆತ್ಮೀಯರಾಗಿದ್ದು, ಅವರ ಜೀವನದ ಕೊನೆಯ ವರ್ಷಗಳಲ್ಲಿ, ನಿಕಟವಾಗಿದ್ದರು. ಮಧ್ಯಪ್ರದೇಶದ ಪ್ರವಾಸಕಥನಗಳನ್ನು ತುಂಬ ಮೆಚ್ಚಿಕೊಂಡು, "ನೀನು ಕರ್ನಾಟಕದ ವೆರಿಯರ್ ಎಲ್ವಿನ್. ಇಂಥ ಬರವಣಿಗೆ ಪ್ರಕಟಿಸಲು, ಪ್ರಕಾಶಕರು, ಮುಂದೆ ಬಾರದಿದ್ದರೆ. ನೀನೇ ಪ್ರಕಟಿಸಬೇಕು. ನನ್ನ ಅನೇಕ ಸಾಹಿತಿ-ಮಿತ್ರರು ಗೃಹಬಂಧಿತರು, ನಗರ ಬಂಧಿತರು! ಹೀಗಾಗಿ ಅವರ ಬರೆಹದಲ್ಲಿ 'ಕಿಡಿ' (ಸ್ಪಾರ್ಕ್) ಇರುವದೇ ಇಲ್ಲ!" ಎಂದು ಹೇಳಿ ಬೆನ್ನು ಚಪ್ಪರಿಸಿದ್ದರು. ಪ್ರೊ. ಎ.ಎನ್. ಮೂರ್ತಿರಾಯರು ಅಮೇರಿಕೆಯ ಪ್ರವಾಸಕಥನ ಓದಿ, ಮನಸಾ ಮೆಚ್ಚಿಕೊಂಡು ಪತ್ರ ಬರೆದಿದ್ದಾರೆ. ಗೊರೂರು ರಾಮಸ್ವಾಮಿ ಅಯ್ಯಂಗಾರರು, 'ಅಮೇರಿಕೆಯಲ್ಲಿ ಗೊರೂರು' ಗ್ರಂಥದ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕೃತರು. ಈ ಗ್ರಂಥಕ್ಕೆ ಡಾ। ಹಾ.ಮಾ.ನಾಯಕರು ಬರೆದ ಮುನ್ನುಡಿಯಲ್ಲಿ ನನ್ನ ಪುಸ್ತಕದ ಪ್ರಸ್ತಾಪ ಬಂದದ್ದರಿಂದ ಅದನ್ನು ತರಿಸಿ ಓದಿದರಂತೆ. "ಮೊದಲೇ ಓದಿದ್ದರೆ. ನನ್ನ ಬರವಣಿಗೆಯ ಮೇಲೆ ಖಂಡಿತ ಪ್ರಭಾವ ಬೀರುತ್ತಿತ್ತು ಅನಿಸುವಂಥ ಬರವಣಿಗೆ!" ಎಂದು ಭುಜ ತಟ್ಟಿದ್ದರು. ದಿ। ನಿರಂಜನರು ನನ್ನ ಪುಸ್ತಕಗಳನ್ನೆಲ್ಲ ಕೊಂಡು ಓದಿ, ಏ.ವನ್. ಬರವಣಿಗೆ ಎಂದು ಪತ್ರಮುಖೇನ ತಿಳಿಸಿದರು. ಈ ಹಿರಿಯ ಸಾಹಿತಿಗಳ ಮೆಚ್ಚಿಗೆ, ಪತ್ರಗಳು ನನ್ನ ಸಾಹಿತ್ಯ ಸಾಧನೆಗೆ ದೊರೆತ ದೊಡ್ಡ ಪ್ರಶಸ್ತಿಗಳು.

ವಿಜ್ಞಾನಿ, ಕಲಾಕಾರ, ಸಾಹಿತಿ, ಚಿತ್ರಕಾರನೆಂಬ ಹಣೆಪಟ್ಟಿ ಹಚ್ಚಿಕೊಂಡು ಮೆರೆದಾಡುವವರಲ್ಲಿ ವಿಶ್ವಾಸವಿಲ್ಲದ್ದರಿಂದ ಸಕಲ ಕೆಲಸಗಳನ್ನು ಶ್ರದ್ಧೆಯಿಂದ ಮಾಡುವದು ಬಾಲ್ಯದಿಂದ ಬೆಳೆಸಿಕೊಂಡು ಬಂದ ಪದ್ಧತಿ. ಪತ್ನಿಗೆ ಉಳ್ಳಾಗಡ್ಡಿ ಹೆಚ್ಚಿ ಕೊಡುವದರಿಂದ ಬರವಣಿಗೆಯವರೆಗಿನ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವದು ನನ್ನ ರೀತಿ. ಹೊಗಳಿಕೆಗಿಂತ ತೆಗಳಿಕೆ ಮಾಡುವವರು ಹತ್ತಿರದವರು. ಮುನ್ನೂರು ಪುಟದ ನನ್ನ ಗ್ರಂಥದ ಕೇವಲ ಮೂರುಪುಟಗಳನ್ನು ಓದಿ 'ಖ್ಯಾತ' ವಿಮರ್ಶಕರೊಬ್ಬರು ದೈನಿಕವೊಂದರಲ್ಲಿ ಬರೆದ ವಿಮರ್ಶೆ ನೋಡಿ ಪತ್ನಿಯು ಸಿಡಿಮಿಡಿಗೊಂಡಾಗ, "ನನಗೆ ಸರಿಕಂಡದ್ದನ್ನು ಬರೆಯುವ ಸಂಪೂರ್ಣ ಅಧಿಕಾರ ನನಗಿರುವಂತೆ ಅವರ ಅನಿಸಿಕೆ ಬರೆಯಲು ಸ್ವತಂತ್ರರಲ್ಲವೇ?" ಎಂದು ಸಮಾಧಾನ ಮಾಡಬೇಕಾಯಿತು ಆಸಕ್ತಿವಹಿಸಿದ ಕೆಲಸದಿಂದ ಇತರರು ಆಕರ್ಷಿತರಾಗದೇ ಇರರು. ಪ್ರತಿಷ್ಠೆ, ಪ್ರಸಿದ್ಧಿ, ಹಣಕ್ಕಾಗಿ ಸೃಜನಶೀಲಕಾರ್ಯ ಸಾಧಿಸದು. ನನಗಿರುವ ಹಲವು ಆಸಕ್ತಿಗಳನ್ನು ಸಾಹಿತ್ಯರಚನೆಯಲ್ಲಿ ಮಡಿಸಿಕೊಳ್ಳುವ ಪ್ರಯತ್ನ ನಡೆದೇ ಇದೆ! ರೇಖಾಚಿತ್ರಬಿಡಿಸುತ್ತೇನೆ, ಛಾಯಾಚಿತ್ರಗಳನ್ನು ಮುದ್ರಿಸುತ್ತೇನೆ. ಕನ್ನಡ-ಇಂಗ್ಲೀಷ್, ಜೊತೆಗೆ ಇಲೆಕ್ಟ್ರಾನಿಕ್ ಟೈಪ್ ರೈಟರ್ ಬಳಸುತ್ತೇನೆ. ನನ್ನ ಬಹುಶಃ ಎಲ್ಲ ಪುಸ್ತಕಗಳಿಗೆ ಮುಖಪುಟ ರಚನೆ ನನ್ನದೇ. ವರ್ಣಚಿತ್ರ, ಕಪ್ಪು ಬಿಳುಪು ಛಾಯಾಚಿತ್ರಗಳು, ವರ್ಣ ಪಾರದರ್ಶಕಗಳ ಪೂರೈಕೆ ಇದ್ದೇ ಇರುತ್ತದೆ. ಇವೆಲ್ಲ ಕೆಲಸಗಳನ್ನು ಮಾಡಿಮುಗಿಸಲಿಕ್ಕೆ ದಿನದ ಇಪ್ಪತ್ನಾಲ್ಕು ಗಂಟೆಗಳ ಅವಧಿ ಕಡಿಮೆ ಎಂದು ಒಮ್ಮೊಮ್ಮೆ ಅನಿಸುವದು ಸ್ವಾಭಾವಿಕ। ಕೆಲಸದ ಒತ್ತಡ ಇದ್ದಾಗ ಮುಂಜಾನೆಯ ಮೂರುಗಂಟೆಗೆ, ಒಮ್ಮೊಮ್ಮೆ ಅದಕ್ಕೂ ಮೊದಲೇ ಎದ್ದು ಕಾರ್ಯೋನ್ಮುಖಿಯಾಗಿಬಿಡುತ್ತೇನೆ. ಹರಟೆ ಸ್ನೇಹ ಕೂಟ, ಮನರಂಜನೆಗಳಿಗೆ ನನ್ನ ಬಳಿ ಸಮಯದ ಅಭಾವವಿದೆ. ತಿರುಗಿ ಹದಿಹರೆಯ ಬರುವಂತಾದರೆ ಇನ್ನಷ್ಟು ಪ್ರವಾಸಗಳನ್ನು ಕೈಕೊಂಡು, ಇನ್ನಷ್ಟು ಬರವಣಿಗೆ-ಛಾಯಾಚಿತ್ರಮಾಡಬಹುದಿತ್ತು. "ಒಂದೇ ಬಾಲ್ಯ. ಒಂದೇ ಹರೆಯ ನಮಗದಷ್ಟೇ ಏತಕೆ?" ಎಂದು ವರಕವಿಯ ಉದ್ಗಾರಕ್ಕೆ ನನ್ನ ಹಂಬಲದುಸಿರು ಸೇರುವದೂ ಉಂಟು!

ಕಲಾವಿದರಂತೆ, ಬರಹಗಾರರೂ ವಿಶ್ವ ಕುಟುಂಬಿಯಾಗಬೇಕು. 'ದಿಲ್ಲಿ ಕನ್ನಡಿಗ' 'ಹೊರನಾಡ ಕನ್ನಡಿಗ' 'ಅಮೇರಿಕನ್ನಡಿಗ' ಎಂಬ ವಿಭಜನೆ ಕೃತ್ರಿಮವಾದದ್ದು. ಕನ್ನಡಿಗನು ಎಲ್ಲೇ ಇರಲಿ. ಅವನಿಗೆ ಇನ್ನಿತರ ಭಾಷೆಗಳ ಕುರಿತಾಗಿ ಮತ್ಸರ-ತುಚ್ಛಭಾವನೆಗಳು ಇರಬಾರದು. ಅವಕಾಶ ದೊರೆತಾಗ, ಇತರ ಭಾಷೆಗಳನ್ನು ಏಕೆ ಕಲಿಯಬಾರದು? ಈ ಮನೋಭಾವ ಬೆಳೆಸಿಕೊಂಡಾಗ, ರಾಷ್ಟ್ರೀಯ, ಅಂತರ್ರಾಷ್ಟ್ರೀಯ ಭಾಷೆಗಳನ್ನು ನಮ್ಮವನ್ನಾಗಿ ಮಾಡಿಕೊಳ್ಳಲು ಸಾಧ್ಯ. ರಾಜಸ್ಥಾನದಲ್ಲಿರಲಿ, ಬಂಗಾಲದಲ್ಲಿ ಬೀಡು ಮಾಡಲಿ, ಮಧ್ಯಪ್ರದೇಶದಲ್ಲಿ ಅಲೆಯಲಿ,

ಭಾಷೆಯ ಅಡ್ಡಿ ಎಂದೂ ಕಾಡಲಿಲ್ಲ. ಇತರ ಭಾಷೆಗಳಲ್ಲೂ ಬರೆಯುವ ಪ್ರಯತ್ನ ಮಾಡಿದ್ದಾಗಿದೆ. ಕೊಂಕಣಿಯಂತೆ ಇಂಗ್ಲಿಷಿನಲ್ಲೂ ಕೆಲವು ಲೇಖಗಳು ಪ್ರಕಟವಾಗಿವೆ. ಇಂದಿನ ದಿನಗಳಲ್ಲಿ 'ಬಸ್ತರ್ ಪ್ರವಾಸ', ಅಮೇರಿಕೆಯ ಪ್ರೇಕ್ಷಕರಿಗಾಗಿ ಇಂಗ್ಲಿಷಿಗೆ ಪರಿವರ್ತಿತವಾಗುತ್ತಿದೆ.

ಉತ್ತರ ಕನ್ನಡ ಜಿಲ್ಲೆ, ಪ್ರಾಚೀನಕಾಲದಿಂದಲೂ ಉನ್ನತ ಸಾಹಿತ್ಯಕ್ಕೆ ಪ್ರಚೋದನೆ ನೀಡಿದ ನೆಲ. ಬನವಾಸಿ ದೇಶ, ಆದಿ ಕವಿ ಪಂಪನನ್ನೇ ಮರುಳುಮಾಡಿ, ಆತನ ಕಾವ್ಯದಲ್ಲಿ ಶಾಶ್ವತ ಸ್ಥಾನ ಗಿಟ್ಟಿಸಿತು. ನಂತರವೂ ಕಾವ್ಯ-ವ್ಯಾಕರಣ ಕ್ಷೇತ್ರದಲ್ಲಿ ಅಪೂರ್ವಕೊಡಿಗೆ ಇತ್ತಿತ್ತು. ಮೊದಲ ಆಧುನಿಕ ಕನ್ನಡ ನಾಟಕವಿತ್ತ ಕೀರ್ತಿಗೆ ಭಾಜನವಾಯಿತು. ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದವರು ಅಸಂಖ್ಯಾತರು; ಅವರಲ್ಲಿ ಇತ್ತೀಚಿನ ಕೆಲವು ಹಿರಿಯರನ್ನು ಹೆಸರಿಸಬಹುದು. ಸಮಾಜಸುಧಾರಕ, ಶಿಕ್ಷಣ ಪ್ರಸಾರಕ, ರಾಜಕಾರಣಿ, ದಿವಂಗತ ದಿನಕರ ದೇಸಾಯಿ ಚೌಪದಿಗಳ ಖಣಿಯನ್ನೆ ಬಿಟ್ಟುಹೋಗಿದ್ದಾರೆ. ಅವರ ಚರಿತ್ರೆಯ ಸಂಶೋಧನಾ ಗ್ರಂಥ ಮೌಲಿಕವಿದ್ದಂತೆ ಅವರ ಮೊದಲ ಕವಿತೆಗಳೂ, ಶಿಶುಗೀತೆಗಳೂ ನಿತ್ಯನೂತನವಾಗಿ ನಿಂತವು. ಅಡುಮುಟ್ಟದ ಗಿಡವಿಲ್ಲದಂತೆ, ಡಾ। ಗೌರೀಶ ಕಾಯ್ಕಿಣಿ ಅವರ ಲೇಖನಿ ಗುರುತಿಸದ ವಿಷಯವಿಲ್ಲ! ಬಹುಮುಖ ಸಾಹಿತ್ಯ ರಚನೆಯಂತೆ ಜಿಲ್ಲೆಯ ಸಾಹಿತ್ಯಕ್ಷೇತ್ರದಲ್ಲಿ ಹೊಸ ಮುಖಗಳು ಕಾಣಿಸಿಕೊಳ್ಳುತ್ತಲೇ ಇರಲು ಈ ಹಿರಿಯ ಸಾಹಿತಿಯ ಪ್ರೋತ್ಸಾಹ ಬಲುದೊಡ್ಡದು. ಗಂಗಾಧರ ಚಿತ್ತಾಲರು ಅಪರೂಪದ ಕವಿಯಾಗಿ, ಸ್ಥಿರವಾದ ಸ್ಥಾನವನ್ನು ಸ್ಥಾಪಿಸಿಯೇ ಕಣ್ಮರೆಯಾದರು. ವಿ.ಜಿ. ಭಟ್ಟರು ಉದ್ದಾಮ ಪಾಂಡಿತ್ಯದಿಂದಾಗಿ ಗದ್ಯ-ಪದ್ಯ ಪ್ರಕಾರಗಳಲ್ಲಿ ಪರಿಣಿತಿ ಪಡೆದವರು. ಮನಸ್ಸು ಮಾಡಿದ್ದರೆ, ಇನ್ನೂ ಹೆಚ್ಚಿನ ಸಾಹಿತ್ಯ ಸೃಷ್ಟಿಸುವ ದೈತ್ಯ ಪ್ರತಿಭೆ ಅವರದಾಗಿತ್ತು. ಯಶವಂತ ಚಿತ್ತಾಲರ ಸಾಹಿತ್ಯ ಸೃಷ್ಟಿ ಮಿಗಿಲಾದದ್ದು. ಹನೇ ಹಳ್ಳಿಯ ಹಿನ್ನೆಲೆಯನ್ನು ಮಾನವನ ಚಡಪಡಿಕೆಯ ಅಸಂಖ್ಯ ಆಯಾಮಗಳನ್ನು ಚಿತ್ರಿಸಲು ಸಮರ್ಥವಾಗಿ ಬಳಸಿಕೊಂಡವರು ಶಾಂತಿನಾಥ ದೇಸಾಯಿ. ಕಥೆಗಾರರಾಗಿ, ಕಾದಂಬರಿಕಾರರಾಗಿ ವಿಶಿಷ್ಟ ಕೃತಿಗಳನ್ನು, ಅರವಿಂದ ನಾಡಕರ್ಣಿ ಅವರು ಕವಿಗಳಾಗಿ ಕೊಡುಗೆ ಇತ್ತವರು. ಸು. ರಂ. ಎಕ್ಕುಂಡಿಯವರ ಉತ್ಕೃಷ್ಟ ಕಾವ್ಯ ರಚನೆಗೆ ಬಂಕಿ ಕೊಡ್ಲವು ಹಿನ್ನೆಲೆ ಒದಗಿಸಿದ್ದು ಮರೆಯುವಂತಿಲ್ಲ. ಗಣಪತಿ ಪಾಂಡೇಶ್ವರ ಆವರು ನಿರ್ಭೀತಿಯ ಗಟ್ಟಿ ಸಾಹಿತ್ಯರಚನೆಗೆ ನೆಲೆಗಟ್ಟು ಹಾಕಿದವರು. ಇಂದಿನ ದಿನಗಳಲ್ಲಿ ಸಾಹಿತ್ಯ-ಸೃಷ್ಟಿಯಲ್ಲಿ ನಮಪೀಳಿಗೆಯವರು ತೊಡಗಿಕೊಂಡು ಹುಲುಸಾದ ಸಾಹಿತ್ಯ ವಿವಿಧ ಪ್ರಕಾರಗಳಲ್ಲಿ ಹೊರಬರುತ್ತಿರುವದು ನೆಮ್ಮದಿಯ ವಿಚಾರ. ಅವರೆಲ್ಲರ ಹೆಸರುಗಳನ್ನು ಹೇಳುತ್ತ ಹೋದರೆ ಏನೂ ಸಾಧಿಸಿದಂತೆ ಆಗುವದಿಲ್ಲ. ಅವರಲ್ಲಿ ಕೆಲವಾದರೂ ಶಿವರಾಮ ಕಾರಂತರ, ಪ್ರಯೋಗ ಶೀಲತೆಯ ವೈವಿಧ್ಯಮಯ ಬರವಣಿಗೆಯ ಪ್ರಕಾರಗಳನ್ನು ರಚಿಸಲು ಕಾಯಾ, ವಾಚಾ, ಮನಸಾ ಯತ್ನಿಸಬೇಕೆಂದು ಕಳಕಳಿಯಿಂದ ಕೇಳಿಕೊಳ್ಳುತ್ತೇನೆ.

ವಿಜಯನಗರ ಸಾಮ್ರಾಜ್ಯದ ಕಾಲದಿಂದಲೂ ಭಟ್ಕಳ್ ಬಂದರವು ಅಂತರ್ರಾಷ್ಟ್ರೀಯ ವಾಣಿಜ್ಯ- ವ್ಯಾಪಾರಗಳ ಕೇಂದ್ರವಾಗಿ ಬೆಳೆದಿತ್ತು. ಕುದುರೆಗಳು, ತೋಪುಗಳು, ಮದ್ದುಗುಂಡು, ಗಾಜಿನ ಸಾಮಾನು, ರೇಷ್ಮೆ ಕೇಸರಿಗಳು ದೊಡ್ಡ ಪ್ರಮಾಣದಲ್ಲಿ ಆಯಾತವಾಗುತ್ತಿದ್ದರೆ, ಆ ಯುಗದಲ್ಲಿ ವಿಶೇಷ ಬೇಡಿಕೆ ಇದ್ದ ಕರಿಮೆಣಸು, ಇನ್ನಿತರ ಸಂಭಾರ ಪದಾರ್ಥಗಳು, ಅಕ್ಕಿ ಔಷಧಾದಿಗಳು ಇಲ್ಲಿಂದ ಪಾಶ್ಚಾತ್ಯ ದೇಶಗಳಿಗೆ ನಿರ್ಯಾತವಾಗುತ್ತಿದ್ದವು. ಕ್ರಿ.ಶ.೧೮೬೨ರ ತನಕ, ಬ್ರಿಟಿಷರು ಉತ್ತರ ದಕ್ಷಿಣ ಜಿಲ್ಲೆಗಳೆಂದು ವಿಭಾಗಿಸುವ ತನಕ, ಈ ಪ್ರದೇಶ ಭೌಗೋಲಿಕವಾಗಿ, ಸಾಂಸ್ಕೃತಿಕವಾಗಿ ಒಂದೇ ಕನ್ನಡ ಪ್ರದೇಶವಾಗಿ ಮೆರೆದಿದ್ದಿತು. ಆರ್ಥಿಕ, ಧಾರ್ಮಿಕ ಶೈಕ್ಷಣಿಕ ಸಾಮಾಜಿಕ ಕ್ಷೇತ್ರಗಳಲ್ಲಿ ಹೆಚ್ಚು ಕಡಿಮೆ, ಏಕರೂಪ ಪಡೆದಿತ್ತು. ಆದರೆ ವಿಭಜನೆಯಾಗಿ ದಕ್ಷಿಣ ಕನ್ನಡ ಜಿಲ್ಲೆ ಮದ್ರಾಸು ಮತ್ತು ಉತ್ತರ ಕನ್ನಡ ಜಿಲ್ಲೆ ಮುಂಬೈ ಪ್ರಾಂತಗಳಿಗೆ ಸೇರಿಹೋದ ಬಳಿಕ ಪ್ರಗತಿಯಲ್ಲಿ ಕಂಡುಬಂದ ಅಂತರ, ಬೃಹದಾಕಾರವಾದದ್ದು! ದೇಶದಲ್ಲಿ ಹೆಸರಾಂತ ರಾಷ್ಟ್ರೀಕೃತ ಬ್ಯಾಂಕುಗಳು, ಕ್ಯಾನರಾ, ಸಿಂಡಿಕೇಟ್, ಕಾರ್ಪೊರೇಷನ್ ಹಾಗೂ ವಿಜಯಾಬ್ಯಾಂಕುಗಳು ದಕ್ಷಿಣ ಕನ್ನಡದಲ್ಲಿ ಜನ್ಮ ತಾಳಿ, ಹೆಮ್ಮರವಾಗಿ ಬೆಳೆದರೂ ನಮ್ಮಲ್ಲಿ ಒಂದಾದರೂ ರೂಪಗೊಂಡಿತೇ? ಬಡವರದೇ ಬಂಡವಲಿನಲ್ಲಿ ದೊಡ್ಡ ಪಾಲುಹೊಂದಿದ್ದ ರೂರಲ್ ಬ್ಯಾಂಕ್ ಹುಟ್ಟಿಕೊಂಡಿತ್ತು. ಕೆಲವೇ ವರ್ಷಗಳಲ್ಲಿ ಅದು ಮಣ್ಣು ಮುಕ್ಕಿದಾಗ ತತ್ತರಿಸಿ ಇನ್ನಷ್ಟು ಬಡವಾದ ಕುಟುಂಬಗಳು ಅದೆಷ್ಟೊ! ದಕ್ಷಿಣ ಕನ್ನಡಜಿಲ್ಲೆಯಲ್ಲಿ ಸ್ಥಳೀಯರ ಪ್ರಯತ್ನದಿಂದಲೇ ವೈದ್ಯಕೀಯ ಎಂಜಿನಿಯರಿಂಗ್ ಸಂಸ್ಥೆಗಳು ಕಾಣಿಸಿಕೊಂಡವು. ಅಲ್ಲಿ ಆರ್ಥಿಕ, ಸಾಂಸ್ಕೃತಿಕ ಚಟುವಟಿಕೆಗಳು ನಡೆಯುತ್ತಲೇ ಇರುವದನ್ನು ಮರೆಯುವಂತಿಲ್ಲ, ಸಾಂಸ್ಕೃತಿಕ ಸಂಘಟನೆಗಳಲ್ಲಿ ದಕ್ಷಿಣ ಕನ್ನಡಿಗರು, ರಾಜಕೀಯ ಪಕ್ಷ ಪಂಗಡಗಳ ಭೇದ ಮರೆತು, ಒಂದಾಗಿ ಜಿಲ್ಲೆಯ ಏಳ್ಗೆಗಾಗಿ ದುಡಿಯುತ್ತಾರೆ. ನಮ್ಮಲ್ಲಿ ಸಂಘಟಿತ ಪ್ರಯತ್ನದ ಅಭಾವ ಎದ್ದು ಕಾಣಿಸುವಂತಹದು.

ಶ್ರೀಕ್ಷೇತ್ರ ಧರ್ಮಸ್ಥಳದ ಧರ್ಮದರ್ಶಿಗಳಾದ ವೀರೇಂದ್ರ ಹೆಗ್ಗಡೆ ಅವರು, ಉತ್ತರ-ದಕ್ಷಿಣವೆಂಬ ಭೇದ ಮಾಡದೇ ಜನ ಸೇವೆಗೆ ಟೊಂಕಕಟ್ಟಿ ನಿಂತವರು. ಹೊನ್ನಾವರದ ಎರಡು ಕಾಲೇಜುಗಳು ಅವರ ಮೇಲ್ವಿಚಾರಣೆಯಲ್ಲಿಯೇ ಮುನ್ನಡೆದಿವೆ . ಬಡವರ ಸಾಮೂಹಿಕ ವಿವಾಹಗಳು, ಬಡಗ್ರಾಮಗಳ ಉದ್ಧಾರ. ಗ್ರಾಮಾಭಿವೃದ್ಧಿಗಳತ್ತಲೂ ಲಕ್ಷ್ಯಪೂರೈಸಿ ತಮ್ಮ ಜಿಲ್ಲೆಯನ್ನು ಆದರ್ಶ ಪ್ರಾಯವಾಗಿಸಲು ಹೆಣಗಿದ್ದಾರೆ. ನಮ್ಮಲ್ಲೂ ಗೋಕರ್ಣದ ಮಹಾಬಲೇಶ್ವರ, ಇಡಗುಂಜಿಯ ಮಹಾಗಣಪತಿ, ಶಿರ್ಸಿಯ ಮಾರಿಕಾಂಬೆಯ ತಾಣಗಳು

ಪ್ರಸಿದ್ಧ ಕ್ಷೇತ್ರಗಳಾಗಿ ಮೆರೆದರೂ, ಸಮಾಜದ ಏಳ್ಗೆಯಲ್ಲಿ ಅವುಗಳ ಪಾತ್ರವನ್ನು ಅವಲೋಕಿಸಿದಾಗ ಅತ್ಯಂತ ಶೋಚನೀಯವೆಂದೇ ಹೇಳಬೇಕಾಗುತ್ತದೆ! ನಮ್ಮ ಜಿಲ್ಲೆ ಸೃಷ್ಟಿಸೌಂದರ್ಯದ ಬೀಡು, ಅಬ್ಬರಿಸುವ ತಡಸಲು, ಭೋರ್ಗರೆಯುವ ಕಡಲು, ಜುಳುಜುಳು ಹರಿಯುವ ನದಿಗಳು, ಸೈನಿಕ ಶಿಸ್ತಿನಿಂದ ನಿಂದ ಬೆಟ್ಟಗಳು, ಗಾಢವಾದ ಗಿರಿಕಂದರಗಳು, ಹಚ್ಚಹಸುರಾದ ಕಾಡುಗಳು, ಅಪರೂಪದ ಖಗ ಹಾಗೂ ಮೃಗ ಸಂಪತ್ತು ಏನುಂಟು? ಏನಿಲ್ಲ? ಕುವೆಂಪು. ಬೇಂದ್ರೆ ಅವರಂಥ ಮಹಾಕವಿಗಳು ನಮ್ಮಲ್ಲಿ ಹುಟ್ಟಲಿಲ್ಲ. ನಮ್ಮವರ ಜನಾಂಗೀಯ ವೈವಿಧ್ಯ ದಂಗುಪಡಿಸುವಂತಹುದು. ಆತಿಥ್ಯಕ್ಕೆ ಹೆಸರಾದ, ಯಕ್ಷಗಾನ ಸಂಗೀತಗಳಲ್ಲಿ ಮರೆಯುತ್ತಿರುವ ಹವ್ಯಕರು, ವ್ಯಾಪಾರ ಕುಶಲತೆಯ ಕೊಂಕಣಿಗರು, ಶೌರ್ಯದಲ್ಲಿ ಹೆಸರಾಂತ ಸೇರುಗಾರರು, ದೇಶಭಕ್ತಿಯಲ್ಲಿ ಮಿಗಿಲಾದ ನಾಡವರು, ಕಲಾತ್ಮಕತೆಗೆ ಪ್ರಸಿದ್ಧರಾದ ಗುಡಿಗಾರರು, ದೈವಜ್ಞರು, ಹಾಲಕ್ಕಿಗಳು, ಖ್ಯಾತನಾವಿಕರಾದ ಖಾರ್ವಿಗಳು, ದಾರ್ಜಿಗಳು ಶತಶತಕಗಳ ಕಾಲ ಅವಕಾಶಗಳಿಂದ ವಂಚಿತರಾದರೂ, ಸ್ವಂತಿಕೆಯ ಸಂಸ್ಕೃತಿ ಕಾಪಾಡಿಕೊಂಡು ಬಂದ ಸಿದ್ದಿ, ಕುಣಬಿ, ಗ್ರಾಮೊಕ್ಕಲ, ಆಗೇರರಂಥ ವಿಶಿಷ್ಟ ಜನಸಮೂಹಗಳನ್ನು ಈ ಜಿಲ್ಲೆ ಹೊಂದಿದೆ. ಆದರೆ ಅವರ ವರ್ಣಮಯವಾದ ಬಾಳುವಿಕೆಯ ನೋವು, ನಲಿವುಗಲನ್ನು ಮೂಡಿಸುವ ಸಾಹಿತ್ಯ ಬಂದಿಲ್ಲ. ಹೋಗಲಿ, ಇಂಥವರ, ಜನಾಂಗೀಯ ಸತ್ಯ ನಿಷ್ಠುರ ಅಧ್ಯಯನಗಳೂ ಕಾಣಿಸಿಕೊಂಡಿಲ್ಲ. ಇತರ ಕನ್ನಡಿಗರಿಗೆ, ನಮ್ಮವರ ವೈವಿಧ್ಯಮಯ ಜೀವನದ ಸಾಹಿತ್ಯರೂಪದ ಪರಿಚಯವೇ ಆಗಿಲ್ಲವೆಂದು ತುಂಬ ನೋವಿನಿಂದ ಈ ಪ್ರಸಂಗದಲ್ಲಿ ನೆನಪಿಸಿಕೊಳ್ಳುವಂತೆ ಆಗಿದೆ. ಕಾರಂತರಂಥ ಸಾಹಿತಿಗಳು ನಮ್ಮಲ್ಲೇಕೆ ಕಾಣಿಸಿಕೊಂಡಿಲ್ಲವೆಂದು ಆತ್ಮಶೋಧವನ್ನು ಮಾಡಿಕೊಳ್ಳಬೇಕಾಗಿದೆ.

ನಮ್ಮದು ಅರಣ್ಯಪ್ರಧಾನ ಜಿಲ್ಲೆಯಾಗಿದ್ದಿತು. ಅರಣ್ಯಸಂಪತ್ತನ್ನು ಕೃಷಿಯಂತೆಯೇ ಕೈಕೊಂಡು, ಸರ್ವರೀತಿಯಲ್ಲಿ ಸ್ಥಳೀಯರ ಹೆಚ್ಚಿನ ಅವಶ್ಯಕತೆಗಳನ್ನು ಪೂರೈಸಲು ಸಾಧ್ಯವಿದೆ ಎಂದು ಪ್ರಾಯೋಗಿಕವಾಗಿ ಕೈಕೊಂಡು ಯಶಸ್ವಿಯಾದ ಅಮೆರಿಕೆಯಲ್ಲಿ ಅಂಥ ಅಧ್ಯಯನವನ್ನು ಕೈಕೊಂಡು ಸಾಧನೆಯನ್ನೂ ಕಣ್ಣಾರೆ ಕಂಡು ಬಂದ ದಿನಗಳ ಮಾತಿದು. ನಮ್ಮ ಜಿಲ್ಲೆಯಲ್ಲೇ ಪರಿಸರ ವಿಜ್ಞಾನದ ನನ್ನ ತರಬೇತಿ ಉಪಯೋಗವಾಗುವ ಕಾರ್ಯಕ್ಷೇತ್ರ ರೂಪಗೊಳ್ಳಬೇಕೆಂದು ಕನಸು ಕಂಡ ದಿನಗಳಲ್ಲಿಯ ಘಟನೆ. ಆಗ ಪ್ರಸಿದ್ಧ ಸಮಾಜ ಸೇವಕರು, ಶಿಕ್ಷಣವೇತ್ತರು, ನಮಗೆಲ್ಲರಿಗೂ ಪ್ರಾತಃಸ್ಮರಣೀಯರಾದ ಕವಿ, ದಿನಕರ ದೇಸಾಯಿ ಅವರು ಪಾರ್ಲಿಮೆಂಟಿನ ಸದಸ್ಯರಾಗಿದ್ದರು. ಹಲವಾರು ಶೈಕ್ಷಣಿಕ ಕೇಂದ್ರಗಳನ್ನು ಸ್ಥಾಪಿಸಿದ ಅವರಿಗೆ ಅರಣ್ಯಶಾಸ್ತ್ರದಲ್ಲಿ ತರಬೇತಿ ನೀಡುವ ಕೇಂದ್ರವೊಂದನ್ನು ಪ್ರಾರಂಭಿಸುವ ಸಾಧ್ಯಾಸಾಧ್ಯತೆ ಬಗ್ಗೆ ಗಮನಕ್ಕೆ ತಂದಾಗ ಅವರು ಬರೆದು ತಿಳಿಸಿದ ತಮ್ಮ ಕಟು ಅನುಭವ ಓದಿದಾಗ ಹೌಹಾರುವಂತೆ ಆಗಿತ್ತು! ಅವರೂ ವೃತ್ತಿಮೂಲ ಶಿಕ್ಷಣ ಕೊಡುವದರಲ್ಲಿ ಹಂಬಲ ತಾಳಿದ್ದರು. ಪ್ರೌಢಶಾಲೆಯ ನಂತರದ ಹಂತದಲ್ಲಿ ಹೊಲಿಗೆ, ಮುದ್ರಣ, ಬಡಿಗತನ, ಬೆರಳಚ್ಚುಗಳಲ್ಲಿ ವ್ಯಾವಹಾರಿಕ ಶಿಕ್ಷಣಕೊಡಿಸಬೇಕೆಂದು ಯಂತ್ರೋಪಕರಣಗಳನ್ನೂ ಹೊಂದಿಸಿದ್ದರು. ಆದರೆ ಯಾವ ವಿದ್ಯಾರ್ಥಿಯೂ ಇವುಗಳಲ್ಲಿ ಆಸ್ಥೆ ತಾಳಲಿಲ್ಲವಂತೆ. ಬದಲಾಗಿ ಶ್ರಮವಿಲ್ಲದೇ ಸಂಬಳತರುವ, ಸುಭದ್ರವಾದ ಸರಕಾರಿ ನೌಕರಿಗೇ ಹಂಬಲಿಸುತ್ತ ಸ್ಪರ್ಧೆ ನಡೆಸಿದ್ದು ಕಂಡು ಬಂದಿತಂತೆ. ಇದೇ ಹೊನ್ನಾವರದಲ್ಲಿ ಹಿಂದೊಮ್ಮೆ ಕಲ್ಲಾಪುರ ವಕೀಲರು ಉದ್ಯೋಗಶಾಲೆಯೊಂದನ್ನು ಸ್ಥಾಪಿಸಿ ಸ್ಥಳೀಯ ಉತ್ಪನ್ನಗಳಾದ ಕತ್ತ, ಕೋಡು, ಕಾಷ್ಠ ಕೆಲಸದ ತರಬೇತಿಯನ್ನು ಎಳೆಯರಿಗೆ ಕೊಡಮಾಡಲು ಹೆಣಗಿ ಸೋತ ವಿಚಾರವನ್ನು ನೆನೆದು ವಿಷಾದಿಸುವಂತೆ ಆಯಿತು. ನಮ್ಮ ಜೀವನದ ಆದ್ಯತೆ – ದೃಷ್ಟಿಕೋನಗಳನ್ನು ಸರಿಯಾಗಿ ಗುರುತಿಸಿಕೊಳ್ಳಲು, ಜಿಲ್ಲೆಯವರು ಸಕ್ರಿಯವಾಗಿ ಯತ್ನಿಸದಿದ್ದರೆ, ಸಾಹಿತ್ಯವೂ ಸೇರಿದಂತೆ ಅಭಿವೃದ್ಧಿಯು ಸರ್ವತೋಮುಖವಾಗಲು ಸಾಧ್ಯವಿಲ್ಲ.

ನಮ್ಮಲ್ಲಿ ಧೀಮಂತರಿಗೂ ಕೊರತೆಯಿಲ್ಲ. ಮುಂಬಯಿ, ಬೆಂಗಳೂರು, ದಿಲ್ಲಿಗಳಲ್ಲಿ ಕೋರ್ಟು, ಕಚೇರಿ, ಬ್ಯಾಂಕ್ ಉದ್ದಿಮೆಗಳಲ್ಲಿ ಯಶಸ್ವಿಯಾದವರು ಅನೇಕರು. ಉಚ್ಚ ಅಧಿಕಾರಿಗಳಾದವರು ಹಲವರು. ಕಲಾವಿದರು, ಚಿತ್ರಕರು, ನಾಟಕ, ಯಕ್ಷಗಾನ ಸಂಗೀತ ಕ್ಷೇತ್ರದಲ್ಲಿ ಚಲನಚಿತ್ರ ಕ್ಷೇತ್ರದಲ್ಲಿ ಹೆಸರಾಂತವರು ಸಾಕಷ್ಟು ಜನ. ಆದರೆ ಈ ಬುದ್ಧಿವಂತಿಕೆಯ ಉಪಯೋಗ ಅವರ ಜನ್ಮಭೂಮಿಗೆ ಆಗಲಿಲ್ಲ. ತಾವಿರುವಲ್ಲಿ ಅವಕಾಶಗಳನ್ನು ಕಲ್ಪಿಸಿಕೊಳ್ಳದೇ ಹಸಿರು ಹುಲ್ಲು ಇರುವಲ್ಲಿ ಮೇಯುತ್ತ ಹೋಗುವದು ನಮ್ಮವರ ವೈಶಿಷ್ಟ್ಯ! ಹೀಗಾಗಿ ಅವರ ಧೀಮಂತಿಕೆಯ, ಬುದ್ಧಿಚಾತುರ್ಯದ ಧನ, ಸಂಪತ್ತುಗಳ ಲಾಭ ಹುಟ್ಟೂರಿಗೆ ಆಗುವದು ಅಪರೂಪ. ಬ್ರಿಟಿಷರ ಕಾಲದಲ್ಲಿ ಜಿಲ್ಲೆಯಲ್ಲಿ ಅವಕಾಶಗಳು ಅತ್ಯಲ್ಪವಾಗಿದ್ದು ವಲಸೆ ಹೋಗುವದು ಅನಿವಾರ್ಯವಾಗಿತ್ತು. ಆದರೆ ವಾತಾವರಣ ಬದಲಾದರೂ ಆ ಪ್ರವೃತ್ತಿ ಮುಂದುವರೆಯಿತು. ಈ ವಿಷಯದಲ್ಲೂ ದಕ್ಷಿಣ ಕನ್ನಡಿಗರ ಸಾಧನೆಯನ್ನು ನೆನಪಿಸಿಕೊಳ್ಳಬೇಕಾದ್ದೇ. ಸಾಹಿತ್ಯದಲ್ಲಿ ಡಾ। ಶಿವರಾಮ ಕಾರಂತರ ಸಾಧನೆ ರಾಷ್ಟ್ರಮಟ್ಟದ್ದೇ ಆದರೂ, ಅವರ ಸಾಧನಾಕ್ಷೇತ್ರ, ಹುಟ್ಟೂರಿಗೆ ಸಮೀಪವಾದ ಗ್ರಾಮವೇ! ಅವರ ಸಾಹಿತ್ಯ ಕೃಷಿಗೆ, ಧನಸಂಪಾದನೆಯಿಂದೂ ಸಹಾಯವಾಗಲಿಲ್ಲ. ಕಷ್ಟಕಾರ್ಪಣ್ಯಗಳನ್ನು ಎದುರಿಸುವ ದಿಟ್ಟತನ, ಅನುಭವಗಳ ಸಾಂದ್ರತೆ, ಬದುಕನ್ನು ಅರಿಯುವ, ಪ್ರೀತಿಸುವ ಸಾಮರ್ಥ್ಯ, ನಿರಂತರ ಜಿಜ್ಞಾಸೆ, ಇವುಗಳೇ ಬರಹಗಾರನಿಗೆ ಪರಿಕರಗಳು. ಕೇವಲ ಸಾಹಿತ್ಯದ ಪ್ರೀತಿ ಅಥವಾ ಓದುವ ಚಟವೊಂದೇ ಹೆಚ್ಚಿನ ಸಹಾಯ ಮಾಡಲಾರದು! ಬದುಕಿನ ವಿವಿಧ ಆಯಾಮಗಳನ್ನು ಅರಿಯುವ ರೀತಿಗಳನ್ನು ಆತ ಬೆಳೆಸಿಕೊಳ್ಳಬೇಕಾಗುತ್ತದೆ.

ಸಾಧನೆಯಲ್ಲಿ ವಿಶ್ವಾಸವಿಟ್ಟವನೇ ಹೊರತು ಅದರ ಪ್ರದರ್ಶನಕ್ಕೆ ಯತ್ನಿಸಿದವ ನಾನಲ್ಲ. ಕಳೆದ ಮೂರು ದಶಕಗಳಿಂದ ನನ್ನ ಹಲವು ಆಸಕ್ತಿಗಳತ್ತ ಮನಸ್ಸು ಹಾಕಿ, ಪ್ರಕಾಶಕರು ವೈಯಕ್ತಿಕವಾಗಿ ವಿನಂತಿಸಿಕೊಂಡಾಗ, ಅವರಿಗೆ ಬೇಕಾದ ಗ್ರಂಥ ಲೇಖನಗಳನ್ನು ಬರೆದು ಕೊಡುತ್ತಿದ್ದೆ. ಯಾವುದೇ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲಿಲ್ಲ. ಆದರೆ ೧೯೯೫ರಲ್ಲಿ ಶ್ರೀ ಗೌರೀಶ ಕಾಯಕಿಣಿ ಪ್ರತಿಷ್ಠಾನದವರು ಪ್ರಶಸ್ತಿ ನೀಡಿ ಗೌರವಿಸಿದಾಗ, ನಮ್ಮ ಜಿಲ್ಲೆಯ ಅನೇಕ ಸಾಹಿತಿಗಳ, ಸಾಹಿತ್ಯಾಸಕ್ತರ ಸಂಪರ್ಕ ಒದಗಿತು.ಅವರಲ್ಲಿ ಕೆಲವರು ನನ್ನ ಬರವಣಿಗೆಯಲ್ಲಿ ವಿಶೇಷ ಅಭಿಮಾನ ತಾಳಿದವರು. ಇದರಿಂದಾಗಿಯೇ ಈ ಉತ್ತರ ಕನ್ನಡ ಜಿಲ್ಲಾ ೯ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗುವ ಸುಯೋಗ ಒದಗಿರಬೇಕು. ಜೊತೆಗೆ ನನ್ನ ಇತರ ಹವ್ಯಾಸಗಳಾದ ಛಾಯಾಚಿತ್ರ, ಚಿತ್ರಕಲೆ, ವಿಜ್ಞಾನ, ರೇಖಾಚಿತ್ರಗಳಾದಿಗಳ ಪರಿಚಯವೂ ಜಿಲ್ಲೆಯ ಬಾಂಧವರಿಗೆ ಆಗಲಿ ಎಂದು ಆಗ್ರಹಪಡಿಸಿದವರಿದ್ದಾರೆ. ಹೀಗಾಗಿ ನನ್ನ ಗ್ರಂಥ, ಲೇಖನ, ಛಾಯಾಚಿತ್ರ, ರೇಖಾಚಿತ್ರಗಳ ಪ್ರದರ್ಶನಕ್ಕೆ ಒಪ್ಪಿಕೊಂಡೆ. ನಾನೂ, ನನ್ನ ಅರ್ಧಾಂಗಿನಿಯೂ ಜೊತೆಗೇ ಪಾಲುಗೊಂಡ ಕಾರ್ಯಕ್ರಮಗಳು ಅತಿ ವಿರಳ! ಆದರೆ ನಮ್ಮ ಹಿತಚಿಂತಕರು ನನ್ನವಳನ್ನು ಈಗ ಹಿಂಬಾಲಿಸುವಂತೆ ಹುರಿದುಂಬಿಸಿದರು. ಏಕೆ ಗೊತ್ತೇ? ಕಾಮತ್‌ರಿಗಷ್ಟೇ ಹೋಗಲು ಬಿಟ್ಟರೆ, ಅವರು ಅರ್ಧದಾರಿಯಲ್ಲೇ ಕ್ಯಾಮರಾದೊಂದಿಗೆ ಬಸ್ಸಿನಿಂದ ಇಳಿದು, ಕಾಡಾನೆಯನ್ನೋ, ಕರಡಿಯನ್ನೋ ಶೂಟ್ ಮಾಡಲು ಹೋಗಿ, ಸಮ್ಮೇಳನವನ್ನೇ ಮರೆತುಬಿಟ್ಟಾರು! ಆದ್ದರಿಂದ, ಸಮ್ಮೇಳನ ಮುಗಿಯುವವರೆಗೆ ಅವರಿಗೆ ಬೆಂಗಾವಲಾಗಿದ್ದು, ಎಲ್ಲವೂ ಸುಸೂತ್ರವಾಗಿ ಮುಗಿದ ನಂತರವೇ ಕ್ಯಾಮರಾವನ್ನು ಕೈಗಿಡು ಎಂದು ಎಚ್ಚರಿಸಿಯೇ ಕಳಿಸಿದ್ದಾರೆ! ಇಂಥ ವ್ಯಕ್ತಿ ನಿಮ್ಮೊಂದಿಗಿರುವ!

ಕಗ್ಗತ್ತಲಿನ ಕೋಣೆಯಲ್ಲಿ ಛಾಯಾಗ್ರಹಣ ಮಾಡುವವನನ್ನು ಎಳೆದು ಕರೆತಂದು ಸಾರ್ವಜನಿಕರೆದುರು ವೇದಿಕೆಯ ಮೇಲೆ ಹತ್ತಿಸಿದ ಶ್ರೇಯಸ್ಸು ಉತ್ತರ ಕನ್ನಡದ ಸಾಹಿತ್ಯ ಪ್ರೇಮಿಗಳಿಗೆ, ಅಭಿಮಾನಿಗಳಿಗೆ ಸಲ್ಲಬೇಕು. ನಾನೆಂದೂ ಇಂಥ ಸಮ್ಮೇಳನಗಳಲ್ಲಿ, ಪ್ರಬಂಧ ಮಂಡಿಸಿಲ್ಲ. ಗೋಷ್ಠಿಗಳಲ್ಲಿ ಪಾಲುಗೊಂಡಿಲ್ಲ. ಚರ್ಚೆಗಳಲ್ಲಿ ಭಾಗವಹಿಸಿಲ್ಲ. ಶಾಲಾಕಾಲೇಜು ವಾರ್ಷಿಕೋತ್ಸವಗಳಲ್ಲಿ ಪತಾಕೆ ಹಚ್ಚುವದು, ಅಲಂಕಾರ ಮಾಡುವದು, ಛಾಯಾಗ್ರಹಣ ಇವಿಷ್ಟೇ ನನ್ನ ಪಾಲಿಗೆ ಮೀಸಲಿಡುತ್ತಿದ್ದರು..... ಈಗಲೂ ಈ ಭಾಷಣದ ಬದಲು ಇಲ್ಲಿ ಬಂದ ಗೌರವಾನ್ವಿತರ ಸಾಹಿತ್ಯಾಸಕ್ತರ ಛಾಯಾಚಿತ್ರ ಗ್ರಹಣ ಮಾಡುವಂತೆ ಆಗಿದ್ದರೆ.......ರೆ.........! ಎಂದು ಅನಿಸದೇ ಇರಲಿಲ್ಲ. ಈ ಗೌರವದ ಸ್ಥಾನ ಕೊಡಮಾಡಿ ಕೆಲ ಅನಿಸಿಕೆಗಳನ್ನು ಅಧ್ಯಕ್ಷ ಪದದಿಂದ ನಿಮ್ಮೆಲ್ಲರೊಡನೆ ಹಂಚಿಕೊಳ್ಳುವಂತೆ ಏರ್ಪಾಡು ಮಾಡಿದ, ಶ್ರಮಿಸಿದ ಸಕಲರಿಗೂ ಅತ್ಯಂತ ಕೃತಜ್ಞನಾಗಿದ್ದೇನೆ.

❑



# ಡಾ|| ಕೃಷ್ಣಾನಂದ ಕಾಮತರ ಸ್ವ ವಿವರ (೧೯೩೪-೨೦೦೨)

**ಜೀವನ**

ಡಾ|| ಕೃಷ್ಣಾನಂದರು, ಲಕ್ಷ್ಮಣ ವಾಸುದೇವ ಕಾಮತ ಹಾಗೂ ಶ್ರೀಮತಿ ರಮಾಬಾಯಿ ಅವರ ಮೂರನೆಯ ಸಂತಾನ. ಜವಳಿ ವ್ಯಾಪಾರಿಗಳ ಕುಟುಂಬದಲ್ಲಿ ಇಬ್ಬರು ಹೆಣ್ಣುಮಕ್ಕಳ ತರುವಾಯ ೨೯-೯-೧೯೩೪ ರಲ್ಲಿ ಜನಿಸಿದರು. ಹೊನ್ನಾವರದಲ್ಲೇ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಶಿಕ್ಷಣ ಮುಗಿಸಿ ಕೃಷ್ಣಾನಂದರು ಕುಮಟಾದ ಕೆನರಾ ಕಾಲೇಜು ಸೇರಿಕೊಂಡರು. ಆಗ ಪ್ರಾರಂಭವಾಗಿದ್ದ ಎನ್‌ಸಿ.ಸಿ.ಗೆ ಸೇರಿಕೊಂಡರು. ಆ ದಿನಗಳ ತರಬೇತಿ ಬಲು ಕಠಿಣವಾಗಿತ್ತು. ಹಳೇ ಸೈನಿಕರ ಭಾರವಾದ ಯೂನೀಫಾರ್ಮು, ಬೂಟುಗಳ ಧಾರಣೆ, ಓಡಾಟ, ಶ್ರಮದಾನಗಳೇ ಹಣ್ಣು ಮಾಡಿಬಿಡುತ್ತಿದ್ದವು. ನಾಲ್ಕು ವರ್ಷಗಳ ತರಬೇತಿ ಅವರ ದೇಹದಾರ್ಢ್ಯ ಬೆಳೆಸಿದ್ದರ ಜೊತೆಗೆ ಎಂಥ ಆಹಾರ, ನೀರುಗಳನ್ನು ಸೇವಿಸಿ ಅರಗಿಸಬಲ್ಲ ಬಲ ನೀಡಿರಬೇಕು! ನಂತರ ಧಾರವಾಡದ ಕರ್ನಾಟಕ ಕಾಲೇಜಿಗೆ ಪ್ರಾಣಿಶಾಸ್ತ್ರ ಸಸ್ಯಶಾಸ್ತ್ರಗಳ ಪದವಿ ತರಗತಿ ಸೇರಿಕೊಂಡರು. ಅಂದಿನ ಮುಂಬಯಿ ಪ್ರಾಂತದ ಈ ಪ್ರತಿಷ್ಠಿತ ಕಾಲೇಜಿಗೆ ವರ್ಗವಾಗಿ ಬರುತ್ತಿದ್ದ ಉತ್ತಮ ಶಿಕ್ಷಕ ವೃಂದದ ಮಾರ್ಗದರ್ಶನ ಅವರಿಗೆ ಲಭಿಸಿತು.

ಬಳಿಕ ಕೀಟಶಾಸ್ತ್ರದಲ್ಲಿ ಅದೇ ವರ್ಷ ಪ್ರಾರಂಭವಾಗಲಿದ್ದ ಸ್ನಾತಕೋತ್ತರ ಪದವಿಗೆ ಸೇರಿಕೊಂಡರು. ಕರ್ನಾಟಕ ವಿಶ್ವ ವಿದ್ಯಾಲಯದಲ್ಲಿ ಆ ಪ್ರಾರಂಭದ ವರ್ಷಗಳಲ್ಲಿ ಅವರಿಗೆ ವಸತಿ ಸೌಕರ್ಯ ಇರಲಿಲ್ಲ. ಕಾಮತರು ಆ ಸೌಕರ್ಯ ಇದ್ದ ಪದವೀಧರರ ಜೀವನ ಶಿಕ್ಷಣ ಕೇಂದ್ರದ ವಿದ್ಯಾರ್ಥಿಯಾಗಿ ಈ ತೊಂದರೆ ನಿವಾರಿಸಿಕೊಂಡರು! ಒಂದು ವರ್ಷದ ಬಿ.ಎಡ್. ಹಾಗೂ ಜೀವನ ಶಿಕ್ಷಣ (Basic Education) ಗಳ ಈ ಸಮ್ಮಿಶ್ರ ತರಬೇತಿ, ಕಲಾಜೀವಿ ಆಗಿದ್ದ ಅವರಿಗೆ ವಿಶೇಷ ಆಕರ್ಷಣೆಯಾಗಿತ್ತು. ೧೯೫೮ ನೇ ವರ್ಷದ ಬ್ಯಾಚಿಗೇ ಅವರು ಪ್ರಥಮರಾಗಿ ಉತ್ತೀರ್ಣರಾದರು. ಜೊತೆಗೆ ಎಮ್. ಎಸ್ಸಿ.ಯ ಮೊದಲ ವರ್ಷದ ಓದನ್ನೂ ಕೈಕೊಂಡರು.

೧೯೫೯ ರಲ್ಲಿ ಎಮ್. ಎಸ್ಸಿ. ಯಲ್ಲಿ ಉತ್ತಮ ವರ್ಗದಲ್ಲಿ ತೇರ್ಗಡೆ ಹೊಂದಿ ಕರ್ನಾಟಕ ಕಾಲೇಜಿನಲ್ಲಿ ಶಿಕ್ಷಕರಾದರು; ಜೊತೆಗೆ ಪಿಹೆಚ್.ಡಿ.ಗೆ ನೋಂದಾಯಿಸಿದರು. ಎರಡು ವರ್ಷಗಳಲ್ಲಿ ಅಮೇರಿಕೆಯ ನ್ಯೂಯಾರ್ಕ್ ವಿಶ್ವವಿದ್ಯಾಲಯಕ್ಕೆ ಸೇರಿದ್ದ ಪ್ರಸಿದ್ಧ ಪರಿಸರ ವಿಜ್ಞಾನ ಹಾಗೂ ಅರಣ್ಯಶಾಸ್ತ್ರದ ಕಾಲೇಜು ಎಂದು ಹೆಸರು ಪಡೆದ ಸ್ಯಾರೆಕ್ಯೂಸ್ ವಿಶ್ವವಿದ್ಯಾಲಯದ ರಾಕ್‌ಫೆಲರ್ ವಿದ್ಯಾರ್ಥಿವೇತನ ಅವರಿಗೆ ಲಭಿಸಿತು.

೧೯೬೧ ರಲ್ಲಿ ಯುರೋಪ್ ಮಾರ್ಗವಾಗಿ ಹಡಗಿನಲ್ಲಿ ಅಮೇರಿಕೆಗೆ ಪ್ರಯಾಣ. ಸಸ್ಯದ ಕೀಟಾಣು ಬೆಳವಣಿಗೆ ಕುರಿತು ಅಧ್ಯಯನ ಹಾಗೂ ಡಾಕ್ಟರೇಟು ಪ್ರಾಪ್ತಿ. ಆ ಅವಧಿಯಲ್ಲೇ ಅಮೇರಿಕೆಯ ಅರಣ್ಯಖಾತೆಯ ಪ್ರಾಜೆಕ್ಟ್ ಅಡಿ ಅಲ್ಲಿಯ ೨೨ ರಾಜ್ಯಗಳ ಅರಣ್ಯರಕ್ಷಣೆಯ ವೀಕ್ಷಣೆ ಹಾಗೂ ಅಧ್ಯಯನ. ಅಮೇರಿಕೆಯ ೩೫ ರಾಜ್ಯಗಳಲ್ಲಿ ಬಸ್ ಪ್ರಯಾಣದಲ್ಲಿ ಸುತ್ತಾಟ.

೧೯೬೫ ರಲ್ಲಿ ಭಾರತಕ್ಕೆ ಮರಳಿದರು. 'Scientists' Pool' ಮೂಲಕ ಉದಯಪುರ ವಿಶ್ವವಿದ್ಯಾಲಯದ ಜೋಬನೇರ ಕೃಷಿ ಕಾಲೇಜಿನಲ್ಲಿ ಕೀಟಶಾಸ್ತ್ರದ ಸಂಶೋಧನಾ ಅಧಿಕಾರಿಯಾಗಿ ಶಿಕ್ಷಕರಾಗಿ ಕಾರ್ಯನಿರ್ವಹಣೆ (೧೯೬೫ ಅಕ್ಟೋಬರ್‌ನಿಂದ ೧೯೬೮ ಅಕ್ಟೋಬರ್ ತನಕ.)

೧೯೬೬ ರಲ್ಲಿ ವಿವಾಹ

೧೯೬೭ ರಲ್ಲಿ ಮಗ ವಿಕಾಸನ ಜನನ. ಈ ಅವಧಿಯಲ್ಲಿ 'ನಾನೂ ಅಮೇರಿಕೆಗೆ ಹೋಗಿದ್ದೆ' ಪುಸ್ತಕ ಬರೆದರು. ಅದು ಆ ಕೂಡಲೇ ಸ್ವೀಕೃತವಾದರೂ ಪ್ರಕಟಗೊಂಡದ್ದು ೧೯೬೯ರಲ್ಲಿ! ಅವರ ಮೊದಲ ಕೃತಿಯೇ ಅತ್ಯಂತ ಜನಪ್ರಿಯವಾಗಿ ಪ್ರಕಟವಾದ ವರ್ಷದೊಳಗೇ ಎಲ್ಲ ಪ್ರತಿಗಳು ಮಾರಾಟವಾದ ಕನ್ನಡದ ಪ್ರಥಮ ಪ್ರವಾಸ ಕಥನವೆಂದು ಹೆಗ್ಗಳಿಕೆಗೆ ಪಾತ್ರವಾಯಿತು.

೧೯೬೮-೧೯೭೦. ಪಶ್ಚಿಮ ಬಂಗಾಲದ ಪ್ಲಾಸಿಯಲ್ಲಿ 'ಕಾಮನ್ ವೆಲ್ತ್ ಇನ್‌ಸ್ಟಿಟ್ಯೂಟ್ ಆಫ್ ಬಯಲಾಜಿಕಲ್ ಕಂಟ್ರೋಲ್' ಸಂಸ್ಥೆಯ ಕೀಟ ಸಂಶೋಧನಾಕಾರಿಯಾಗಿ, ಅಲ್ಲಿಯ ಕೇಂದ್ರದ ಮುಖ್ಯಸ್ಥರಾಗಿ, ಕಾರ್ಯನಿರ್ವಹಣೆ. ೧೯೭೦ ರಲ್ಲಿ ರಾಜೀನಾಮೆ.

೧೯೭೧ರಿಂದ ಬೆಂಗಳೂರಿನಲ್ಲಿ ಮಲ್ಲೇಶ್ವರದ ಸಂಪಿಗೆ ರಸ್ತೆಯಲ್ಲಿ ಸ್ವಂತದ ವೈಜ್ಞಾನಿಕ ಛಾಯಾಗ್ರಹಣದ ಲ್ಯಾಬೊರೇಟರಿ ಪ್ರಾರಂಭಿಸಿದರು. ಖಾಸಗಿಯಾಗಿ ಈ ಕ್ಷೇತ್ರದಲ್ಲಿ ಸಾಹಸಮಾಡಿದ ಪ್ರಥಮರು. ೨೦೦೦ ನೆಯ ವರ್ಷದವರೆಗೆ ನಡೆಸಿದರು. ಬೆಂಗಳೂರಿನ ಮತ್ತಿತರ ಸಮೀಪದ ವಿಜ್ಞಾನ ಸಂಸ್ಥೆಗಳು ಅವರ ವೈಜ್ಞಾನಿಕ ಛಾಯಾಗ್ರಹಣ ಪರಿಣತಿಯ ಲಾಭ ಪಡೆದವು.

೧೯೭೬-೧೯೭೭ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯು ಒಂದು ವರ್ಷದ ನೆರೆ-ರಾಜ್ಯದ ಸಾಹಿತ್ಯ, ಸಂಸ್ಕೃತಿಯ ಅಧ್ಯಯನಕ್ಕೆ ಶಿಷ್ಯವೇತನ ಘೋಷಿಸಿತ್ತು. ಆ ಯೋಜನೆಯಡಿ ಮಧ್ಯಪ್ರದೇಶದಲ್ಲಿ ವ್ಯಾಪಕವಾಗಿ ಸುತ್ತಾಡಿದ್ದೇ ಅಲ್ಲದೇ ಗಿರಿನಿವಾಸಿಗಳ ಇತರ ಜನ-ಜನಾಂಗಗಳ, ರೀತಿ ರಿವಾಜುಗಳನ್ನು ಅಭ್ಯಸಿಸಿದರು. ಮೂರು ಗ್ರಂಥಗಳನ್ನು ಹೊರತಂದರು. ಅಸಂಖ್ಯ ಚಿತ್ರಗಳನ್ನು ಕ್ಲಿಕ್ಕಿಸಿದರು. ವಿದೇಶ-ದೇಶವನ್ನು ಸಂಚರಿಸಿದರೂ ಸ್ವಂತದ ಊರು ತಾಯ್ನಾಡುಗಳನ್ನು ಕ್ಲಿಕ್ಕಿಸಿದ ನೆಮ್ಮದಿಯಿಲ್ಲವೆಂದು ಕರ್ನಾಟಕದ ಊರುಗಳಲ್ಲಿ ಸಂಚರಿಸಿದರು. ಗುಡಿ-ಗುಂಡಾರ-ನಿಷಿದಿ- ಬಸದಿಗಳನ್ನೆಲ್ಲ ಚಿತ್ರಗಳಲ್ಲಿ ಸೆರೆಯಿಟ್ಟರು. ವೈಜ್ಞಾನಿಕ ಛಾಯಾಗ್ರಹಣದಲ್ಲಿಯೂ ಹೆಚ್ಚಿನ ಪರಿಣತಿ ಸಾಧಿಸಿದ್ದರಿಂದ ಸಂಶೋಧನ ವಿದ್ಯಾರ್ಥಿಗಳು, ಪ್ರಾಧ್ಯಾಪಕರು ಹುಡುಕಿಕೊಂಡು ಬರುತ್ತಿದ್ದರು. ತನ್ನ ವಿದೇಶದ ಅಧ್ಯಯನ-ತರಬೇತಿಗಳ ಪ್ರಯೋಜನವನ್ನು ಈ ದೇಶ-ರಾಜ್ಯಗಳು ಪಡೆಯದಿದ್ದರೂ ಕೊರಗದೇ, "ವೈಜ್ಞಾನಿಕ ಸೇವೆ" ವಿಜ್ಞಾನಿ ಬಳಗಕ್ಕೆ ಮೀಸಲು ಎಂಬ ಅಭಿಮಾನದಿಂದ ಅತ್ಯಲ್ಪ ಶುಲ್ಕವನ್ನು ಪಡೆದು ಸೇವೆಯನ್ನು ನೀಡುತ್ತಿದ್ದರು.

ಈ ಅವಧಿಯಲ್ಲಿ ಇನ್ನೂ ೧೦ ಪುಸ್ತಕಗಳನ್ನೂ ನೂರಾರು ಲೇಖನಗಳನ್ನೂ ಬರೆದರು. ಮುಖ್ಯವಾಗಿ ಕಣ್ಮರೆಯಾದ ಕಾವಿ ಕಲೆಯ ಕುರಿತು ಕನ್ನಡದಲ್ಲಿ ಒಂದು, ಕೊಂಕಣಿಯಲ್ಲಿ ಒಂದು ಗ್ರಂಥ ರಚಿಸಿ ಕಾವಿಕಲೆಯ ನೆನಪನ್ನು ಕಾಯಂ ಕಾದಿರಿಸಿದರು.

೧೯೯೭ ನೇ ವರ್ಷ ಭಾರತ ಸ್ವಾತಂತ್ರ್ಯ ಪ್ರಾಪ್ತಿಯ ೫೦ನೆಯ ವರ್ಷ, ಕಾಮತರ ಲೇಖನಿ ಕ್ಯಾಮರಾಗಳಿಗೆ ಹೊಸ ಆಯಾಮವನ್ನು ಒದಗಿಸಿತು. ಸಾಫ್ಟ್ ವೇರ್ ಇಂಜಿನಿಯರ್‌ನಾದ ಮಗ ವಿಕಾಸನು, ಇದೇ ಸಂದರ್ಭದಲ್ಲಿ www.kamat.com ಎಂಬ ವೆಬ್‌ಸೈಟ್ ಪ್ರಾರಂಭಿಸಿದ. ಕಾಮತರು ಐವತ್ತು ವರ್ಷಗಳಲ್ಲಿ ಕಾದಿರಿಸಿದ ನೆಗೆಟಿವ್ ಹಾಗೂ ಟಿಪ್ಪಣೆಗಳು ರೂಪ ತಾಳಿ ಪ್ರಪಂಚದ ಆಸಕ್ತರಿಗೆಲ್ಲ ಎಟುಕುವಂತಾದವು. ಪತ್ನಿ, ಮಗ, ಸೊಸೆಯರ ಸಹಕಾರದಿಂದ ಮುಂದುವರಿದ ವೆಬ್‌ಸೈಟ್ ಸದ್ಯಕ್ಕೆ ೩೦ ಲಕ್ಷ ವೀಕ್ಷಕರನ್ನು ಪ್ರತಿ ತಿಂಗಳು ಆಕರ್ಷಿಸುತ್ತದೆ.

೨೦-೨-೨೦೦೨ ರಂದು ಹೃದಯಸ್ತಂಭನದಿಂದ ಆಕಸ್ಮಿಕ ನಿಧನ : ಕೊನೆಗಳಿಗೆಯ ವರೆಗೂ ಕಾರ್ಯೋನ್ಮುಖರಾಗಿದ್ದರು.

## ಪ್ರಕಟಿತ ಪುಸ್ತಕಗಳು

| | ಶೀರ್ಷಿಕೆ | ಪ್ರಕಾರ | ಪ್ರಕಾಶಕರು | ವರ್ಷ |
|---|---|---|---|---|
| ೧. | ನಾನೂ ಅಮೇರಿಕೆಗೆ ಹೋಗಿದ್ದೆ | ಪ್ರವಾಸಕಥನ | ಮನೋಹರ ಗ್ರಂಥಮಾಲೆ, ಧಾರವಾಡ | ೧೯೬೯ |
| ೨. | ಭಗ್ನಸ್ವಪ್ನ | ಕಾದಂಬರಿ | ಸಮಾಜ ಪುಸ್ತಕಾಲಯ, ಧಾರವಾಡ | ೧೯೭೧ |
| ೩. | ವಂಗದರ್ಶನ | ಪ್ರವಾಸಾನುಭವ | ಮನೋಹರ ಗ್ರಂಥಮಾಲೆ, ಧಾರವಾಡ | ೧೯೭೨ |
| ೪. | ನಾ ರಾಜಸ್ಥಾನದಲ್ಲಿ | ಪ್ರದೇಶ ಪರಿಚಯ | ಅಕ್ಷರ ಪ್ರಕಾಶನ, ಸಾಗರ | ೧೯೭೪ |
| ೫. | ಪ್ರಾಣಿ ಪರಿಸರ | ಪರಿಸರ ಚಿತ್ರಣ | ಮನೋಹರ ಗ್ರಂಥಮಾಲೆ, ಧಾರವಾಡ | ೧೯೭೫ |
| ೬. | ಕಾಲರಂಗ | ಪ್ರವಾಸ ಕಥನ | ಮನೋಹರ ಗ್ರಂಥಮಾಲೆ, ಧಾರವಾಡ | ೧೯೮೨ |
| ೭. | ಪ್ರೇಯಸಿಗೆ ಪತ್ರಗಳು | ಪತ್ರಗಳು | ಮನೋಹರ ಗ್ರಂಥಮಾಲೆ, ಧಾರವಾಡ | ೧೯೯೦ |
| ೮. | ಪಶು-ಪಕ್ಷಿ ಪ್ರಪಂಚ | ಪ್ರಾಣಿ ವಿಜ್ಞಾನ | ಪುಸ್ತಕಾಲಯ, ಬೆಂಗಳೂರು | ೧೯೯೦ |
| ೯. | ಬಸ್ತರ ಪ್ರವಾಸ | ಗಿರಿಜನ ಪರಿಚಯ | ಪುಸ್ತಕಾಲಯ, ಬೆಂಗಳೂರು | ೧೯೯೧ |
| ೧೦. | ಕೀಟಜಗತ್ತು | ಕೀಟ ವಿಜ್ಞಾನ | ಸಮರ್ಥ ಪ್ರಕಾಶನ, ಬೆಂಗಳೂರು | ೧೯೯೨ |
| ೧೧. | ಸಸ್ಯ ಪ್ರಪಂಚ | ಸಸ್ಯ ಲೋಕ | ಪುಸ್ತಕಾಲಯ, ಬೆಂಗಳೂರು | ೧೯೯೨ |
| ೧೨. | ಕಾವಿಕಲೆ | ಕಲೆ | ಕರ್ನಾಟಕ ಲಲಿತಕಲಾ ಅಕಾಡೆಮಿ | ೧೯೯೩ |
| ೧೩. | ಮಧ್ಯ ಪ್ರದೇಶದ ಮಡಿಲಲ್ಲಿ | ಪ್ರವಾಸ ಕಥನ | ಪುಸ್ತಕಾಲಯ, ಬೆಂಗಳೂರು | ೧೯೯೩ |

| | | | | |
|---|---|---|---|---|
| ೧೪. | ಸಸ್ಯ ಪರಿಸರ | ಸಸ್ಯ ಲೋಕದ ಕೊಡುಗೆ | ಪುಸ್ತಕಾಲಯ, ಬೆಂಗಳೂರು | ೧೯೯೪ |
| ೧೫. | ಅಕ್ಷತ | ಜನಾಂಗೀಯ ಅಧ್ಯಯನ | ನವಕರ್ನಾಟಕ, ಬೆಂಗಳೂರು | ೧೯೯೯ |
| ೧೬. | ಇರುವೆಯ ಇರವು | ಕೀಟ ವಿಸ್ಮಯ | ಪ್ರಿಸಂ ಬುಕ್‌ಹೌಸ್, ಬೆಂಗಳೂರು | ೧೯೯೯ |
| ೧೭. | ಕಾಗೆಯ ಕಾಯಕ | ಕಾಕಲೋಕ ಪರಿಚಯ | ಪ್ರಿಸಂ ಬುಕ್‌ಹೌಸ್, ಬೆಂಗಳೂರು | ೨೦೦೦ |
| ೧೮. | ಕೊಂಕಣ್ಯಾಲಿ ಕಾವಿಕಲಾ (ಕೊಂಕಣಿ ಭಾಷೆ) | ಕಲೆ | ರಾಜ್ಯ ಕೊಂಕಣಿ ಸಾಹಿತ್ಯ ಅಕಾಡೆಮಿ ಮಂಗಳೂರು | ೨೦೦೦ |
| ೧೯. | ಪ್ರವಾಸಿಯ ಪ್ರಬಂಧಗಳು | ಪ್ರವಾಸಾನುಭವ | ಶ್ರೀ ವಾರಿ ಪ್ರಕಾಶನ, ಬೆಂಗಳೂರು | ೨೦೦೦ |
| ೨೦. | ಮರುಪಯಣ | ಪರಿಸರ ದುರಂತ | ಮನೋಹರ ಗ್ರಂಥಮಾಲೆ, ಧಾರವಾಡ | ೨೦೦೧ |
| ೨೧. | ಸರ್ಪ ಸಂಕುಲ | ಉರಗವರ್ಗ ಪರಿಚಯ | ಪ್ರಿಸಂ ಬುಕ್‌ಹೌಸ್, ಬೆಂಗಳೂರು | ೨೦೦೨ |

Timeless Theatre ಎಂಬ ಸೀಡಿಯು ಕಾಮತರ ೧೧೦೦ ಚಿತ್ರಗಳೊಂದಿಗೆ ಅವರ ಪ್ರವಾಸಾನುಭವಗಳನ್ನು ಪರಿಚಯಿಸುತ್ತದೆ.

## ಸಂದ ಗೌರವ ಹಾಗೂ ಬಹುಮಾನಗಳು

ಕೆಳಗಿನ ಪುಸ್ತಕಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಆಯಾ ಸಾಹಿತ್ಯ ಪ್ರಕಾರದಲ್ಲಿ ಉತ್ತಮ ಕೃತಿಯೆಂದು ಪ್ರಶಸ್ತಿ ಪ್ರಾಪ್ತವಾಗಿದೆ.

I.
| | | | |
|---|---|---|---|
| ೧. | ನಾನೂ ಅಮೇರಿಕೆಗೆ ಹೋಗಿದ್ದೆ | ಪ್ರವಾಸ ಸಾಹಿತ್ಯ | ೧೯೬೯ |
| ೨. | ಪ್ರಾಣಿ ಪರಿಸರ | ಜನಪ್ರಿಯ ವಿಜ್ಞಾನ | ೧೯೭೫ |
| ೩. | ಬಸ್ತರ ಪ್ರವಾಸ | ಪ್ರವಾಸ ಕಥನ | ೧೯೯೧ |

II. ಪಠ್ಯ : ಬೆಂಗಳೂರು ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳು "ನಾನೂ ಅಮೇರಿಕೆಗೆ ಹೋಗಿದ್ದೆ' ಮತ್ತು 'ಪ್ರಾಣಿ ಪರಿಸರ' ಗಳನ್ನು ಮೊದಲ ವರ್ಷದ ಪದವಿ ತರಗತಿಗಳಿಗೆ ಪಠ್ಯಗಳಾಗಿ ಆಯ್ಕೆ ಮಾಡಿವೆ. ಮಹಾರಾಷ್ಟ್ರ ಬೋರ್ಡ್ ಎಸ್.ಎಸ್.ಎಲ್.ಸಿಗೆ ಹಾಗೂ ಕರ್ನಾಟಕ ಸರಕಾರಿ ಟಿ.ಸಿ.ಎಚ್. ಪರೀಕ್ಷೆಗೆ ಬೇರೆ, ಬೇರೆ ಪ್ರಬಂಧಗಳನ್ನು ಆಯ್ಕೆ ಮಾಡಿವೆ. (೧೯೭೨ - ೨೦೦೦) ಕರಿಹಲಗೆ ಯೋಜನ' ಯ ಅಡಿಯಲ್ಲಿ ಕರ್ನಾಟಕ ಸರಕಾರ ಪ್ರಾಣಿ ಪರಿಸರದ ೫೦೦೦ ಪ್ರತಿಗಳನ್ನು ಮುದ್ರಿಸಿ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಅದೇ ಪುಸ್ತಕ, ಸಾಮಾನ್ಯರಿಗೆ ಎಟುಕುವಂತೆ ನೋಡಿಕೊಂಡಿತು.

## ಗೌರವ, ಪ್ರಶಸ್ತಿಗಳು

III. a) ಶ್ರೀ ಗೌರೀಶ ಕಾಯಕಿಣಿ ಪ್ರತಿಷ್ಠಾನ (ಕುಮಟಾ)ವು ವಿಜ್ಞಾನ- ಪ್ರವಾಸ ಸಾಹಿತ್ಯಗಳಲ್ಲಿ ಅನುಪಮ ಸೇವೆ ಗುರುತಿಸಿ ನೀಡಿದ ಪ್ರಶಸ್ತಿ

b) ಉತ್ತರ ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ೧೯೯೭ರಲ್ಲಿ ಅವಿರೋಧ ಆಯ್ಕೆ.

c) ಕೊಂಕಣಿ ಭಾಷೆಯಲ್ಲಿ ಕಾವಿಕಲೆ ಪುಸ್ತಕಕ್ಕೆ ಮಣಿಪಾಲದ ಟಿ.ಎಮ್.ಎ. ಪೈ ಅಧಿಷ್ಠಾನವು ನೀಡಿದ ವಿಶೇಷ ಬಹುಮಾನ (೨೦೦೩)

❑

## ಡಾ॥ ಕೃಷ್ಣಾನಂದ ಕಾಮತರು ರಚಿಸಿದ ಕೆಲವು ರೇಖಾಚಿತ್ರಗಳು


















# ನಮ್ಮ ಲೇಖಕರು

1. **ಡಾ॥ ಜಿ. ಎಸ್. ದೀಕ್ಷಿತ್**
ನಂ. 1, ಸ್ವಸ್ತಿ, 15ನೆಯ ತಿರುವು,
ನವೋದಯನಗರ, ಧಾರವಾಡ - 580 003

2. **ಡಾ॥ ಗೌರೀಶ ಕಾಯ್ಕಿಣಿ**
ಲೇಖಕ ಮತ್ತು ಪತ್ರಿಕೋದ್ಯಮಿ
ಗೋಕರ್ಣ, ಉತ್ತರ ಕನ್ನಡ - 581 326

3. **ಕೀರ್ತಿನಾಥ ಕುರ್ತಕೋಟಿ**
ನಂ. 1, ದೇಸಾಯಿ ಕಾಲೋನಿ
ಯೂನಿವರ್ಸಿಟಿ ಕ್ರಾಸ್, ಧಾರವಾಡ-580 003

4. **ಡಾ॥ ಜಿ. ಎಸ್. ಆಮೂರ**
ಜಾನಕಿ, ನವೋದಯನಗರ,
ಧಾರವಾಡ - 580 003

5. **ಶಾ. ಮಂ. ಕೃಷ್ಣರಾಯ**
ನಂ. 108, 7ನೇ ಕ್ರಾಸ್, 1ನೇ ಮುಖ್ಯರಸ್ತೆ
ವೈಯಾಲಿ ಕಾವಲ್, ಬೆಂಗಳೂರು-560 003

6. **ಶಿವಾನಂದ ಕಳವೆ**
ಅಂಚೆ : ಕಳವೆ, ಶಿರಸಿ ತಾಲ್ಲೂಕು
ಉತ್ತರ ಕನ್ನಡ ಜಿಲ್ಲೆ - 581 402

7. **ಡಾ॥ ಎಸ್. ಎಲ್. ಭೈರಪ್ಪ**
1007, ತೊಣಚಿಕೊಪ್ಪಲ್ ಬಡಾವಣೆ
ಮೈಸೂರು - 570 009

8. **ಹೂಗೊಪ್ಪಲು ಕೃಷ್ಣಮೂರ್ತಿ,**
ಎ-ವಿಂಗ್, ನೆಲಮಹಡಿ, ಕೇಂದ್ರಿಯ ಸದನ,
ಕೋರಮಂಗಲ, ಬೆಂಗಳೂರು - 560 034

9. **ಡಾ॥ ಬಸವರಾಜ ಸಾದರ**
ಸಹಾಯಕ ಕೇಂದ್ರ ನಿರ್ದೇಶಕ, ಆಕಾಶವಾಣಿ
ಧಾರವಾಡ - 580 008

10. **ಎಸ್. ಎಲ್. ಕುಲಕರ್ಣಿ**
ಪ್ಲಾಟ್ 20, 5ನೇ ಮಹಡಿ, ದೂರ್ವಾಂಕುರ 3,
ಪಂಚವಟಿ, ಪಾಶನ್ ರೋಡ್, ಪುಣೆ-411 008

11. **ನಾಗೇಶ್ ಶ್ಯಾನಭೋಗ್**
ಶ್ರೀಮಂಗಳ, 128, 1ನೇ ಮೇನ್, 1ನೇ ಕ್ರಾಸ್
ನಾರಾಯಣಪುರ, ಧಾರವಾಡ - 580 008

12. **ವಿ. ಎ. ಕುಲಕರ್ಣಿ**
1ನೇ ಮೇನ್, 5ನೇ ಕ್ರಾಸ್
ನಾರಾಯಣಪುರ, ಧಾರವಾಡ - 580 008

13. **ಡಾ॥ ಇಂದಿರಾ ಮೂರ್ತಿ,**
ಟೆರೇಸ್‌ಗಾರ್ಡನ್ ಅಪಾರ್ಟ್‌ಮೆಂಟ್, 2ನೇ ಮೇನ್,
ಬನಶಂಕರಿ 3ನೇ ಘಟ್ಟ, ಬೆಂಗಳೂರು-560 085

14. **ನೇಮಿಚಂದ್ರ**
401, ವಿಜಯಟವರ್, 2ನೇ ಮೇನ್,
ಆರ್.ಪಿ.ಸಿ. ಲೇಔಟ್, ಬೆಂಗಳೂರು-560 040

15. **ಕುಮಾರಿ ಎಸ್. ಸೌಮ್ಯ**
6.3. 950, 2ನೇ ಕ್ರಾಸ್, ಮಾರುತಿನಗರ
ಅನಂತಪುರ - 515 001

16. **ಕೆ. ಜಿ. ಶ್ರೀಕಂಠದಾನಿ**
ಕೈದಾಳ, ನಂ. 20/1, 4ನೇ ಅಡ್ಡರಸ್ತೆ,
ಮಾಗಡಿರಸ್ತೆ, ಬೆಂಗಳೂರು - 560 023

17. **ಡಿ. ಜಿ. ಮಲ್ಲಿಕಾರ್ಜುನ**
ಉಲ್ಲೂರು ಪೇಟೆ, ಶಿಡ್ಲಘಟ್ಟ, 562 105
ಕೋಲಾರ ಜಿಲ್ಲೆ

18. **ಡಾ॥ ಕೆ. ಸೋಮಶೇಖರ್**
ಪೂರ್ಣಿಮ ಕ್ಲಿನಿಕ್, 15ನೇ ಅಡ್ಡ ರಸ್ತೆ,
ವೈಯಾಲಿಕಾವಲ್, ಬೆಂಗಳೂರು - 560 003

19. **Vikas Kamat**
3849, Kinros Drive, Birmingham
ALBAMA 35242 U.S.A.

20. **Hiryoung Kim Kamat**
3849, Kinros Drive, Birmingham
ALBAMA 35242 U.S.A.

21. **ಸುಮಿತ್ರ ಶ್ಯಾನಭೋಗ್**
ಶ್ರೀರಾಮ ನಿವಾಸ, ಗ್ಯಾಸ್ ಸ್ಟೇಷನ್ ಸಮೀಪ
ನೆಲ್ಲಕೇರಿ, ಕುಮಟಾ (ಉ. ಕನ್ನಡ) 581 343

22. **ಗಜಾನನ ಕಾಮತ್**
ಗಜಾನನ ರೆಡಿಮೇಡ್ ಸೆಂಟರ್,
ಮಾರ್ಕೆಟ್, ಹೊನ್ನಾವರ, (ಉ. ಕನ್ನಡ) 581334

23. **ಪ್ರಕಾಶ್ ಬುರ್ಡೆ**
2/10, ಭಾಗೀರಥಿ ಬಿಲ್ಡಿಂಗ್,
ತುಕಾರಾಮ್ ಜಾವಜೀ ರಸ್ತೆ
ಮುಂಬಯಿ - 400 007

24. **ಡಾ|| ಸುಷ್ಮಾ ಆರೂರ**
ಅ 44, ಡೈಮಂಡ್ ಡಿಸ್ಟ್ರಿಕ್ಟ್
ಏರ್ ಪೋರ್ಟ್ ರಸ್ತೆ, ಬೆಂಗಳೂರು-560 008

25. **ಜಿ. ಬಾಲಸುಬ್ರಮಣ್ಯ**
ಸ್ವಸ್ತಿಶ್ರೀ ಸ್ಕಂದ, ಅರಿಸಿನ ಕುಂಟೆ, 562123,
ನೆಲಮಂಗಲ ತಾಲ್ಲೂಕು ಬೆಂಗಳೂರು ಗ್ರಾ. ಜಿಲ್ಲೆ

26. **ಡಾ|| ರಮಾಕಾಂತ ಜೋಷಿ**
ಮನೋಹರ ಗ್ರಂಥಮಾಲಾ, ಲಕ್ಷ್ಮೀಭವನ,
ಸುಭಾಸ ರಸ್ತೆ, ಧಾರವಾಡ - 580 001

27. **ಡಾ|| ಆರ್. ಶೇಷಶಾಸ್ತ್ರಿ**
6.3. 950, 2ನೇ ಕ್ರಾಸ್
ಮಾರುತಿನಗರ, ಅನಂತಪುರಂ - 515 001

28. **ಡಾ|| ಎಂ. ಆರುಗ್ಮಂ**
ಆಡಳಿತಾಧಿಕಾರಿಗಳು, ಮಂಗಳೂರು ವಿಶ್ವವಿದ್ಯಾಲಯ
ಮಂಗಳ ಗಂಗೋತ್ರಿ, ಮಂಗಳೂರು-574 199

29. **ಡಾ|| ಎಸ್. ವಿದ್ಯಾಶಂಕರ್**
138, 7ನೇ ಸಿ. ಮುಖ್ಯರಸ್ತೆ, ವಿಜಯನಗರ 2ನೇ
ಹಂತ, ಬೆಂಗಳೂರು - 560 040

30. **ಉದಯಾದ್ರಿ**
ಕಾರ್ಯಕ್ರಮ ನಿರ್ವಾಹಕರು, ಆಕಾಶವಾಣಿ
ರಾಜಭವನ ರಸ್ತೆ, ಬೆಂಗಳೂರು - 560 001

31. **ಜಿ. ಎನ್. ನರಸಿಂಹಮೂರ್ತಿ**
23/1, 5ನೇ ತಿರುವು, ಹೊಸಹಳ್ಳಿ
ವಿಜಯನಗರ, ಬೆಂಗಳೂರು - 560 040

32. **ಡಾ|| ಎನ್. ಎಸ್. ಲೀಲಾ**
105, ವೆಸ್ಟ್‌ಪಾರ್ಕ್ ಅಪಾರ್ಟ್‌ಮೆಂಟ್ಸ್, 14ಎ,
ಅಡ್ಡಬೀದಿ ಮಲ್ಲೇಶ್ವರಂ, ಬೆಂಗಳೂರು-560 003

33. **ಎಂ. ವಿ. ವಸಂತ ಕುಮಾರಿ**
ಸಹನಾ, ಡಿಸಿಲ್ವಾ ಲೇನ್, ಫಳನಾರ್ ರೋಡ್
ಕಂಕನಾಡಿ, ಮಂಗಳೂರು-575 002

34. **ಟಿ. ಆರ್. ಅನಂತರಾಮು**
ಧಾತ್ರಿ, 534, 70ನೇ ಅಡ್ಡ ರಸ್ತೆ 14ನೇ ಮುಖ್ಯರಸ್ತೆ
ಕುಮಾರಸ್ವಾಮಿ ಬಡಾವಣೆ, ಬೆಂಗಳೂರು-560 078

35. **ಜಯಂತ ಕಾಯ್ಕಿಣಿ**
ಇ-204, ಆದರ್ಶಹಿಲ್, ಕುಮಾರಸ್ವಾಮಿ ಲೇಔಟ್
ಬೆಂಗಳೂರು - 560 078

36. **ಡಾ|| ಅ. ಲ. ನರಸಿಂಹನ್**
13, 15ನೇ ಅಡ್ಡ ರಸ್ತೆ, 1ನೇ ದೇವಸ್ಥಾನದ ರಸ್ತೆ
ಮಲ್ಲೇಶ್ವರಂ, ಬೆಂಗಳೂರು - 560 003

37. **ಡಾ|| ಎಂ. ಬೈರೇಗೌಡ**
119, 3ನೇ ಅಡ್ಡ ರಸ್ತೆ, 8ನೇ ಮುಖ್ಯ ರಸ್ತೆ,
ಆರ್.ಪಿ.ಸಿ. ಲೇಔಟ್, ಬೆಂಗಳೂರು 560 040

38. **ಡಾ|| ಜಿ. ಎಂ. ಹೆಗಡೆ**
8ನೇ ತಿರುವು, ಕಲ್ಯಾಣ ನಗರ
ಧಾರವಾಡ- 580 007

39. **ಟಿ. ವಿ. ಶ್ರೀನಾಥ ಶಾಸ್ತ್ರೀ,** ಪ್ರಧಾನ ಕಾರ್ಯದರ್ಶಿ
ಕನ್ನಡ ಗಣಕ ಪರಿಷತ್ತು, ಗೋಖಲೆ ಸಾರ್ವಜನಿಕ
ವಿಚಾರ ಸಂಸ್ಥೆ, ಎನ್.ಆರ್. ಕಾಲೋನಿ, ಬೆಂ-19

40. **ಈಶ್ವರ ಚಂದ್ರ**
ಪಂಚವಟಿ, 133/2, 1ನೇ ಮಹಡಿ, 3ನೇ ಮುಖ್ಯ ರಸ್ತೆ
ಬಸವೇಶ್ವರ ನಗರ, ಬೆಂಗಳೂರು - 560 079

41. **ಎನ್ಕೆ (ಎನ್. ಕೆ. ಕುಲಕರ್ಣಿ)**
ಪರಿಮಳ, ರೈಲ್ವೆ ಗೂಡ್ಸ್ ಶೆಡ್ ಬಳಿ
ಧಾರವಾಡ - 580 007

42. **ನಾರಾಯಣ ಕುಲಕರ್ಣಿ**
62 ಬಿ ಬನಸಿರಿ, ತೇಜಸ್ವಿನಿ ನಗರ,
ಧಾರವಾಡ - 580 002

43. **ಪ್ರದೀಪ್ ಬೆಳ್ಳಾವೆ**
ಗಿರಿಧಾಮ, ಅರಿಶಿನಕುಂಟೆ, 562 123
ನೆಲಮಂಗಲ ತಾ|| ಬೆಂಗಳೂರು, ಗ್ರಾಮಾಂತರ ಜಿಲ್ಲೆ



ಡಾ || ಕೃಷ್ಣಾನಂದ ಕಾಮತರದು ವಿಶಿಷ್ಟ ವ್ಯಕ್ತಿತ್ವ. ತಮ್ಮ ಬದುಕಿನ ಪ್ರತಿಯೊಂದು ದಿನವನ್ನು ಸಾರ್ಥಕ ಮಾಡಿಕೊಂಡವರು. ಅಷ್ಟೇ ಅಲ್ಲ, ನಮ್ಮ ಜೀವನದ ಪ್ರತಿಯೊಂದು ಅಂಶವೂ ತಮ್ಮ ಸುತ್ತಲಿನ ಸಮಾಜಕ್ಕೂ ಉಪಯೋಗವಾಗುವಂತೆ ನಡೆದುಕೊಂಡವರು. ಸಾವಿನ ನಂತರ ನೇತ್ರದಾನ ಮಾಡಿ ಬೇರೆಯವರಿಗೆ ದೃಷ್ಟಿಯನ್ನು ನೀಡಿದವರು. ತಮ್ಮ ಬದುಕಿನ ಹತ್ತು ಹಲವಾರು ಅನುಭವಗಳನ್ನು ಸಮಾಜದೊಂದಿಗೆ ಹಂಚಿಕೊಳ್ಳಲು ಅವರು ಬಯಸಿದ್ದೂ ಆಶ್ರಯಿಸಿದ್ದೂ ಪ್ರವಾಸ ಸಾಹಿತ್ಯವನ್ನು. ಕನ್ನಡದಲ್ಲಿ ಪ್ರವಾಸ ಸಾಹಿತ್ಯಕ್ಕೂ ಹಲವಾರು ಆಯಾಮಗಳೊಂದಿಗೆ ಒಂದು ಘನತೆಯನ್ನು ತಂದವರು ಡಾ|| ಕಾಮತರು. ಭಾಷೆಯ ಮೂಲಕವಲ್ಲದೆ ಛಾಯಾಗ್ರಹಣದ ಮೂಲಕವೂ ಜನಜೀವನವನ್ನು ಜೀವಂತವಾಗಿ ಸೆರೆಹಿಡಿದವರು.

ಡಾ|| ಕೃಷ್ಣಾನಂದ ಕಾಮತರು ಮೂಲತಃ ಜೀವ ವಿಜ್ಞಾನಿ. ವಿಶೇಷವಾಗಿ ಕೀಟ ಶಾಸ್ತ್ರಜ್ಞರು. ಕೀಟಗಳನ್ನು ಅಧ್ಯಯನ ಮಾಡುವ ಕಲೆಯನ್ನು ಕರಗತ ಮಾಡಿಕೊಂಡ ಕಾಮತರಿಗೆ ಕೀಟಗಳನ್ನು ನರರ ಹಿನ್ನೆಲೆಯಲ್ಲಿ, ನರರನ್ನು ಕೀಟಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಆಸಕ್ತಿ ಬೆಳೆಯಿತು. ಮಾನವನ ಎಲ್ಲ ಚಟುವಟಿಕೆಗಳನ್ನು ಶ್ರದ್ಧೆಯಿಂದ ಅಭ್ಯಾಸ ಮಾಡಿದ ನಿತ್ಯ ವಿದ್ಯಾರ್ಥಿ, ಶ್ರೇಷ್ಠ ಸಂಶೋಧಕ ಡಾ|| ಕೃಷ್ಣಾನಂದ ಕಾಮತರು.

- ಪ್ರಕಾಶಕರು